# ಉಡುಪಿ ಜಿಲ್ಲೆಯ (20ನೇ) ಶತಮಾನದ ಕನ್ನಡ ಸಾಹಿತ್ಯ ಚಟುವಟಿಕೆಗಳ ಪ್ರಕ್ರಿಯೆ ಮತ್ತು ಪರಿಣಾಮಗಳು

ಹಂಪಿ ಕನ್ನಡ ವಿಶ್ವವಿದ್ಯಾಲಯಕ್ಕೆ ಪಿಹೆಚ್.ಡಿ ಪದವಿಗಾಗಿ
ಸಲ್ಲಿಸಿದ ಮಹಾಪ್ರಬಂಧ


ಸಂಶೋಧಕರು
ಶ್ರೀ ಅನಿಲ ಕುಮಾರ





ಮಾರ್ಗದರ್ಶಕರು
ಡಾ. ಪಾದೇಕಲ್ಲು ವಿಷ್ಣು ಭಟ್ಟ






ಭಾಷಾನಿಕಾಯ
ಕನ್ನಡ ಸಾಹಿತ್ಯ ಅಧ್ಯಯನ ವಿಭಾಗ,
ಕನ್ನಡ ವಿಶ್ವವಿದ್ಯಾಲಯ, ಹಂಪಿ.
ವಿದ್ಯಾರಣ್ಯ - 583 276.

ಮಾನ್ಯತಾ ಕೇಂದ್ರ
ರಾಷ್ಟ್ರಕವಿ ಗೋವಿಂದ ಪೈ ಸಂಶೋಧನ ಕೇಂದ್ರ
ಎಂ. ಜಿ. ಎಂ. ಕಾಲೇಜು ಆವರಣ, ಉಡುಪಿ


2017

# ಉಡುಪಿ ಜಿಲ್ಲೆಯ (20ನೇ) ಶತಮಾನದ ಕನ್ನಡ ಸಾಹಿತ್ಯಚಟುವಟಿಕೆಗಳ ಪ್ರಕ್ರಿಯೆ ಮತ್ತು ಪರಿಣಾಮಗಳು

ಹಂಪಿ ಕನ್ನಡ ವಿಶ್ವವಿದ್ಯಾಲಯಕ್ಕೆ ಪಿಹೆಚ್.ಡಿ ಪದವಿಗಾಗಿ
ಸಲ್ಲಿಸಿದ ಮಹಾಪ್ರಬಂಧ

ಸಂಶೋಧಕರು
ಶ್ರೀ ಅನಿಲ ಕುಮಾರ



ಮಾರ್ಗದರ್ಶಕರು
ಡಾ. ಪಾದೇಕಲ್ಲು ವಿಷ್ಣು ಭಟ್ಟ



ಭಾಷಾನಿಕಾಯ
ಕನ್ನಡ ಸಾಹಿತ್ಯಅಧ್ಯಯನ ವಿಭಾಗ,
ಕನ್ನಡ ವಿಶ್ವವಿದ್ಯಾಲಯ, ಹಂಪಿ.
ವಿದ್ಯಾರಣ್ಯ –583 276.

ಮಾನ್ಯತಾಕೇಂದ್ರ
ರಾಷ್ಟ್ರಕವಿ ಗೋವಿಂದ ಪೈ ಸಂಶೋಧನ ಕೇಂದ್ರ
ಎಂ.ಜಿ.ಎಂ.ಕಾಲೇಜು ವಠಾರ, ಉಡುಪಿ

2017

# ಘೋಷಣೆ

ನಾನು, ಅನಿಲ ಕುಮಾರ ಈ ರೀತಿಯಾಗಿ ಘೋಷಿಸುತ್ತಿದ್ದೇನೆ: "ಉಡುಪಿ ಜಿಲ್ಲೆಯ (20ನೇ) ಶತಮಾನದ ಸಾಹಿತ್ಯಚಟುವಟಿಕೆಗಳ ಪ್ರಕ್ರಿಯೆ ಮತ್ತು ಪರಿಣಾಮಗಳು" ಎಂಬ ಮಹಾಪ್ರಬಂಧವು ಡಾ. ಪಾದೇಕಲ್ಲು ವಿಷ್ಣು ಭಟ್ಟ ಇವರ ಮಾರ್ಗದರ್ಶನದಲ್ಲಿ ನನ್ನ ಸ್ವಂತ ಅಧ್ಯಯನದ ಆಧಾರದಿಂದ ರಚಿತವಾಗಿದೆ. ಈ ಮಹಾಪ್ರಬಂಧವು ಬೇರೆ ಯಾವುದೇ ಪದವಿ ಅಥವಾ ಡಿಪ್ಲೊಮಾ ಪದವಿಗಳಿಗೆ ಬಳಕೆಯಾಗಿರುವುದಿಲ್ಲ. ಬೇರೆ ಮೂಲಗಳಿಂದ ಪಡೆದ ಎಲ್ಲಾ ಮಾಹಿತಿಗಳ ಕುರಿತಾಗಿ ಈ ಪ್ರಬಂಧದಲ್ಲಿ ಉಲ್ಲೇಖ ಮಾಡಲಾಗಿದೆ.

ಅನಿಲ ಕುಮಾರ,
ಸಹ ಪ್ರಾಧ್ಯಾಪಕರು,
ಸರ್ಕಾರಿ ಪ್ರಥಮದರ್ಜೆ ಕಾಲೇಜು,
ಕಾಪು, ಉಡುಪಿ ಜಿಲ್ಲೆ.

ಸ್ಥಳ : ಉಡುಪಿ

ದಿನಾಂಕ: 30.08.2017

# ಮಾರ್ಗದರ್ಶಕರ ದೃಢೀಕರಣಪತ್ರ

ಶ್ರೀ ಅನಿಲ ಕುಮಾರ ಇವರು ನನ್ನ ಮಾರ್ಗದರ್ಶನದಲ್ಲಿ ಸಿದ್ಧಪಡಿಸಿದ ಈ ಮಹಾಪ್ರಬಂಧವು ಅವರ ಸ್ವಂತ ಸಂಶೋಧನೆಯಾಗಿದ್ದು ನನ್ನ ತಿಳುವಳಿಕೆಯ ಪ್ರಕಾರ ಇದರ ಪೂರ್ಣ ಅಥವಾ ಯಾವುದೇ ಭಾಗವನ್ನು ಬೇರೆ ಯಾವುದೇ ಪದವಿ ಅಥವಾ ಇನ್ನಾವುದೇ ಉದ್ದೇಶಕ್ಕೆ ಈ ಸಂಸ್ಥೆ ಅಥವಾ ಬೇರೆ ಯಾವುದೇ ಸಂಸ್ಥೆಗೆ ಸಲ್ಲಿಸಿಲ್ಲವೆಂದು ದೃಢೀಕರಿಸುತ್ತೇನೆ.

ಡಾ. ಪಾದೇಕಲ್ಲು ವಿಷ್ಣು ಭಟ್ಟ
ಮಾರ್ಗದರ್ಶಕರು
ರಾಷ್ಟ್ರಕವಿ ಗೋವಿಂದ ಪೈ ಸಂಶೋಧನ ಕೇಂದ್ರ
ಎಂ.ಜಿ.ಎಂ ಕಾಲೇಜು, ಉಡುಪಿ.

ಸ್ಥಳ : ಉಡುಪಿ

ದಿನಾಂಕ: 30.08.2017

ಮಾರ್ಗದರ್ಶಕರು
ರಾಷ್ಟ್ರಕವಿ ಗೋವಿಂದ ಪೈ ಸಂಶೋಧನ ಕೇಂದ್ರ
ಎಂ. ಜಿ. ಎಂ. ಕಾಲೇಜು
ಉಡುಪಿ – 576 102.

# ಪರಿವಿಡಿ

# ಅಧ್ಯಾಯ–1

# ಸಂಶೋಧನ ವಿಷಯ; ವಿಧಾನ; ಉದ್ದೇಶ ಮತ್ತು ಮಹತ್ವ

## ಅಧ್ಯಾಯ–1

## ಸಂಶೋಧನ ವಿಷಯ; ವಿಧಾನ; ಉದ್ದೇಶ ಮತ್ತು ಮಹತ್ವ

**ಉಡುಪಿ ಜಿಲ್ಲೆ–ಹಿನ್ನೆಲೆ:**

ಜಿಲ್ಲೆಯ ಸ್ಥಾನಮಾನ ಬರುವ ಮೊದಲು ಒಂದು ತಾಲೂಕು ಕೇಂದ್ರವಾಗಿದ್ದಾಗಲೇ ಉಡುಪಿಯು ಶೈಕ್ಷಣಿಕವಾಗಿ, ಧಾರ್ಮಿಕವಾಗಿ ಮತ್ತು ಸಾಂಸ್ಕೃತಿಕವಾಗಿ ಸಾಕಷ್ಟು ಮುನ್ನಡೆಯನ್ನು ಪಡೆದು, ರಾಜ್ಯಮಟ್ಟದಲ್ಲಿ ಗುರುತಿಸಿಕೊಂಡಿತ್ತು. ಇದೀಗ ಜಿಲ್ಲಾ ಕೇಂದ್ರವಾಗಿ ಅದೇ ಮುನ್ನಡೆಯನ್ನು ಉಳಿಸಿಕೊಂಡಿದೆ. 19ನೇ ಶತಮಾನದಿಂದ 20ನೇ ಶತಮಾನದ ಪೂರ್ವಾರ್ಧದವರೆಗೂ ಬ್ರಿಟೀಷ್ ಸರಕಾರದ ಆಳ್ವಿಕೆಗೆ ಒಳಪಟ್ಟಿದ್ದರೂ ಅದಕ್ಕೂ ಪೂರ್ವದಲ್ಲಿ ಟಿಪ್ಪು ಸುಲ್ತಾನನ ಅಧೀನಕ್ಕೊಳಪಟ್ಟಿದ್ದ ಸಮಗ್ರ ಪಶ್ಚಿಮ ಕರಾವಳಿಯು 1799ರ ನಾಲ್ಕನೇ ಮೈಸೂರು ಯುದ್ಧದಲ್ಲಿ ಟಿಪ್ಪು ಸುಲ್ತಾನನು ಮರಣಹೊಂದಿದ ಪ್ರಯುಕ್ತ ಬ್ರಿಟೀಷ್ ಈಸ್ಟ್ ಇಂಡಿಯಾ ಕಂಪೆನಿಯ ವಶವಾಯಿತು. “ಕ್ರಿ.ಶ. 1799ರಲ್ಲಿ ದಕ್ಷಿಣ ಹಿಂದೂಸ್ಥಾನದಲ್ಲಿ ಟಿಪ್ಪುವಿನ ರಾಜ್ಯವು ಅಳಿದುದರೊಡನೆ ಬ್ರಿಟೀಷ್ ಸಾಮ್ರಾಜ್ಯದ ಉದಯವು ಈ ವೇಗದಲ್ಲಿ ಆಯಿತು. ಬ್ರಿಟೀಷರೇ ಈ ಪ್ರದೇಶದ ಪ್ರಬಲ ಶಕ್ತಿವಂತರಾದರು.” (ಲೇ:ಮುತ್ತಣ್ಣ ಐ.ಮಾ.,1969, ಪು–6)

ಬ್ರಿಟೀಷರು ಅಂದು ಟಿಪ್ಪುವಿನೊಂದಿಗೆ ನಡೆಸಿದ ಹೋರಾಟದಲ್ಲಿ ಸಾಧಿಸಿದ ವಿಜಯವು ಅವಿಭಜಿತ ದ.ಕ. ಜಿಲ್ಲೆಯ ರಾಜಕೀಯ, ಸಾಂಸ್ಕೃತಿಕ, ಧಾರ್ಮಿಕ, ಶೈಕ್ಷಣಿಕ, ಹಾಗೂ ಸಾಹಿತ್ಯ ಕ್ಷೇತ್ರದ ಆಮೂಲಾಗ್ರ ಬದಲಾವಣೆಗೆ ಕಾರಣವಾಯಿತು. ಬ್ರಿಟೀಷರು ತಮ್ಮ ಅಧೀನಕ್ಕೊಳಪಟ್ಟ ಪಶ್ಚಿಮ ಕರಾವಳಿಯನ್ನು ‘ಕೆನರಾ ಜಿಲ್ಲೆ’ಎಂಬ ಹೆಸರಿನಲ್ಲಿ ಕರೆಯುವುದರೊಂದಿಗೆ ಇಂದು ನಾಲ್ಕು ಜಿಲ್ಲೆಗಳಾಗಿ ವಿಭಜನೆ ಹೊಂದಿದ (ಕಾಸರಗೋಡು, ದಕ್ಷಿಣ ಕನ್ನಡ, ಉಡುಪಿ ಮತ್ತು ಉತ್ತರ ಕನ್ನಡ) ಭೂ ಪ್ರದೇಶವನ್ನು ಅಂದು ಒಂದೇ ಜಿಲ್ಲೆಯಾಗಿ ಪರಿಗಣಿಸಿದ್ದರು. ಕ್ರಿ.ಶ. 1862ರಲ್ಲಿ ಕೆನರಾ ಜಿಲ್ಲೆಯನ್ನು ಉತ್ತರ ಕನ್ನಡ ಮತ್ತು ದಕ್ಷಿಣ ಕನ್ನಡ ಎಂಬ ಎರಡು ಜಿಲ್ಲೆಗಳನ್ನಾಗಿ ವಿಂಗಡಿಸಿ, ಉತ್ತರಕನ್ನಡವನ್ನು ಮುಂಬೈ ಪ್ರೆಸಿಡೆನ್ಸಿಯ ಅಧೀನಕ್ಕೂ, (ಈಗಿನ ಉಡುಪಿ ಹಾಗೂ ಕಾಸರಗೋಡು ಜಿಲ್ಲೆಗಳನ್ನೊಳಗೊಂಡ) ದಕ್ಷಿಣ ಕನ್ನಡವನ್ನು ಮದ್ರಾಸ್ ಪ್ರೆಸಿಡೆನ್ಸಿಯ ಅಧೀನಕ್ಕೂ ಒಳಪಡಿಸಿದರು. “ಬ್ರಿಟೀಷ್ ಆಳ್ವಿಕೆಯ ಅವಧಿಯಲ್ಲಾದ ‘ಕೆನರಾ’ದ ವಿಭಜನೆ ಕರಾವಳಿ ಕರ್ನಾಟಕಕ್ಕೆ ಒಂದು ಹೊಸ ಬಗೆಯ ಅನುಭವವಾಗಿ ಪರಿಣಮಿಸಿತು. ಈ ವಿಭಜನೆಯ ಹಿಂದೆ ಬ್ರಿಟೀಷ್ ಸರಕಾರದ ‘ಮರ್ಕಂಟೈಲ್’ ಹಾಗೂ ‘ಇಂಪೀರಿಯಲ್’ ಧೋರಣೆಗಳು ಅಡಕವಾಗಿದ್ದವು.”(ಲೇ: ಮೋಹನ ಕೃಷ್ಣ ರೈ ಕೆ. ಡಾ. 2010, ಪು–7)

ಸ್ವಾತಂತ್ರ್ಯಾನಂತರ ಭಾಷಾವಾರು ಪ್ರಾಂತದ ಹಿನ್ನೆಲೆಯಲ್ಲಿ ಕನ್ನಡ ಭಾಷಾ ಪ್ರದೇಶದ ವಿಶಾಲ ಭೌಗೋಳಿಕ ಭೂಭಾಗವು 1956ರಲ್ಲಿ ‘ಮೈಸೂರು ರಾಜ್ಯ’ವೆಂಬ ಹೆಸರಿನಲ್ಲಿ ಪುನಾರಚನೆಗೊಂಡಿತು. ಈ ಪುನಾರಚನೆಯ ಸಂದರ್ಭದಲ್ಲಿ ದ.ಕ. ಜಿಲ್ಲೆಯಲ್ಲಿ ಸೇರಿಕೊಂಡಿದ್ದ ಕಾಸರಗೋಡು ತಾಲೂಕು ಕೇರಳ ರಾಜ್ಯವನ್ನು ಸೇರಿಕೊಂಡಿತು. ಮುಂದೆ ಮೈಸೂರು ರಾಜ್ಯವೆಂಬ ಹಳೆಯ ಹೆಸರು 1973 ನವೆಂಬರ್ 1 ರಂದು ‘ಕರ್ನಾಟಕ’ವೆಂಬ ನೂತನ ಹೆಸರನ್ನು ಪಡೆಯಿತು. ಕ್ರಿ.ಶ. 1956ರಿಂದ 1996ರ ವರೆಗೆ ದ.ಕ. ಜಿಲ್ಲೆಯೆಂಬ 8 ತಾಲೂಕು, (ಮಂಗಳೂರು, ಬಂಟ್ವಾಳ, ಬೆಳ್ತಂಗಡಿ, ಪುತ್ತೂರು, ಸುಳ್ಯ, ಕಾರ್ಕಳ, ಉಡುಪಿ ಮತ್ತು ಕುಂದಾಪುರ) ಭೂಪ್ರದೇಶಗಳನ್ನೊಳಗೊಂಡ ಜಿಲ್ಲೆಯನ್ನು 1997 ಆಗಸ್ಟ್ ತಿಂಗಳಲ್ಲಿ ಮತ್ತೆ

ವಿಭಜಿಸಲಾಯಿತು. ಈ ವಿಭಜನೆಯಲ್ಲಿ ಉಡುಪಿ, ಕುಂದಾಪುರ ಮತ್ತು ಕಾರ್ಕಳ (ಮೂಡಬಿದಿರೆ ಹೋಬಳಿಯ 21 ಗ್ರಾಮಗಳನ್ನು ಹೊರತುಪಡಿಸಿ) ಎಂಬ ಮೂರು ತಾಲೂಕು ಪ್ರದೇಶಗಳನ್ನು 'ಉಡುಪಿ ಜಿಲ್ಲೆ' ಎಂಬ ವ್ಯಾಪ್ತಿಯೊಳಗೆ ತರಲಾಯಿತು.

ಈ ಸಂಶೋಧನ ಪ್ರಬಂಧದ ಶೀರ್ಷಿಕೆಯಲ್ಲಿ **'ಉಡುಪಿ ಜಿಲ್ಲೆ'** ಎಂಬ ಭೌಗೋಳಿಕ ಮಿತಿಯನ್ನು ಹಾಕಿಕೊಳ್ಳಲಾಗಿದೆ. ಈ ಭೌಗೋಳಿಕ ವ್ಯಾಪ್ತಿಯಲ್ಲಿ ಕಳೆದ ಒಂದು ಶತಮಾನದುದ್ದಕ್ಕೂ (ಕ್ರಿ. ಶ. 20ನೇ ಶತಮಾನ–ಸುಮಾರು 1900–2000) ನಡೆದು ಬಂದ ಸಾಹಿತ್ಯ ಚಟುವಟಿಕೆಗಳ ಸ್ವರೂಪವನ್ನು ಗುರುತಿಸುವ ಉದ್ದೇಶಕ್ಕಾಗಿ ಮತ್ತು ಇಲ್ಲಿಯ ಚಟುವಟಿಕೆಗಳ ಹಿಂದಿನ ಕಾರಣ, ಪ್ರೇರಣೆಗಳನ್ನು ಸಮಗ್ರವಾಗಿ ವಿಶ್ಲೇಷಿಸುವ ಕಾರಣ ಈ ಸೀಮಾರೇಖೆಯನ್ನು ಖಚಿತಪಡಿಸಿಕೊಳ್ಳಲಾಗಿದೆ.

**ಉಡುಪಿ ಜಿಲ್ಲೆಯ ತಾಲೂಕುಗಳೊಳಗಿನ ಸಾವಯವ ಸಂಬಂಧ:**

ಈಗಾಗಲೇ ಪ್ರಸ್ತಾಪಿಸಿದಂತೆ ಜಿಲ್ಲೆಯು ಕುಂದಾಪುರ, ಉಡುಪಿ, ಕಾರ್ಕಳ ಎಂಬ ಮೂರು ತಾಲೂಕುಗಳನ್ನೊಳಗೊಂಡಿದ್ದು, 3575 ಚ. ಕಿ. ಮೀ. ವಿಸ್ತೀರ್ಣವನ್ನು ಹೊಂದಿರುತ್ತದೆ. 2001ರ ಜನಗಣತಿಯಂತೆ 11,09,494 ಜನಸಂಖ್ಯೆಯನ್ನು ಹೊಂದಿತ್ತು. 146 ಗ್ರಾಮಪಂಚಾಯತಿಗಳನ್ನೊಳಗೊಂಡ ಈ ಜಿಲ್ಲೆಯ ಕರಾವಳಿ ತೀರದ ಉದ್ದ 105 ಕಿ. ಮೀ. ಎಂಬುದಾಗಿ ಜಿಲ್ಲಾಧಿಕಾರಿ ಕಛೇರಿಯ ಅಂಕೆ–ಸಂಖ್ಯೆ ವಿಭಾಗದಿಂದ ಲಭ್ಯವಾದ ಅಧಿಕೃತ ಮಾಹಿತಿಯಿಂದ ತಿಳಿದುಬರುತ್ತದೆ. (ಅಧಿಕೃತ ಮಾಹಿತಿದಾರರು ಬಿ.ಆರ್. ಅಡಿಗ, ಅಂಕೆ–ಸಂಖ್ಯೆ ವಿಭಾಗ, ಜಿಲ್ಲಾಧಿಕಾರಿ ಕಛೇರಿ, ಉಡುಪಿ) ಜಿಲ್ಲೆಯ ವ್ಯಾಪ್ತಿಯೊಳಗೆ ಸೇರಿರುವ ಮೂರು ತಾಲೂಕು ಪ್ರದೇಶಗಳು ಕೆಲವಾರು ವಿಶಿಷ್ಟ ಸಾಂಸ್ಕೃತಿಕ ಮತ್ತು ಧಾರ್ಮಿಕ ವೈಶಿಷ್ಟ್ಯಗಳನ್ನು ಒಳಗೊಂಡಿದ್ದು, ಈ ಕಾರಣದಿಂದ ಪರಸ್ಪರ ಸಂಬಂಧವನ್ನು ಉಳಿಸಿಕೊಂಡಿರುತ್ತವೆ. ಮೂರು ತಾಲೂಕುಗಳೊಳಗಿರುವ ಸಮಾನ ಸಾಂಸ್ಕೃತಿಕ ಅಂಶಗಳು ಮತ್ತು ಸಮಾನ ಧೋರಣೆಗಳು ಈ ಮೇಲಿನ ಶೀರ್ಷಿಕೆಯ ಅಧ್ಯಯನಕ್ಕೆ ಕಾರಣಗಳನ್ನೊದಗಿಸಿವೆ. ಈ ಸಾಂಸ್ಕೃತಿಕ ಸಾಮ್ಯಕ್ಕೆ ಕಾರಣಗಳನ್ನು ಶೋಧಿಸಿದಾಗ ಈ ಕೆಳಗಿನ ಅಂಶಗಳು ಹಿನ್ನೆಲೆಯನ್ನೊದಗಿಸಿರುವುದು ಸ್ಪಷ್ಟವಾಗುತ್ತದೆ.

1. ಉಡುಪಿಯಿಂದ ಕಾರ್ಕಳದ ನಡುವೆ ಯಾವುದೇ ನದಿಗಳಿಲ್ಲದ ಕಾರಣ ಈ ಎರಡೂ ತಾಲೂಕುಗಳು ಪರಂಪರೆಯಿಂದಲೂ ಪ್ರತ್ಯೇಕಗೊಳ್ಳುವ ಆಸ್ಪದವಿರದೆ ಸಾಂಸ್ಕೃತಿಕವಾಗಿ ಪರಸ್ಪರ ಹೊಂದಿಕೊಂಡೇ ಇದ್ದುವು. ಇಂದಿನ ರಾಷ್ಟ್ರೀಯ ಹೆದ್ದಾರಿ 66 (ಮೊದಲಿನ ಎನ್.ಎಚ್.17) ರಲ್ಲಿ ಸೇತುವೆಗಳು ನಿರ್ಮಾಣಗೊಳ್ಳುವುದಕ್ಕೆ ಮೊದಲು, ಉಡುಪಿ ಹಾಗೂ ಕುಂದಾಪುರದವರು ಮಂಗಳೂರಿಗೆ ತೆರಳಲು ಬಸ್ಸು ಅಥವಾ ಇತರ ವಾಹನ ದಾರಿಯು ಕಾರ್ಕಳದ ಮೂಲಕವೇ ಆದ ಕಾರಣ ಎರಡೂ ತಾಲೂಕಿಗೂ ಕಾರ್ಕಳದ ಸಂಬಂಧ ಅನಿವಾರ್ಯವಾಗಿತ್ತು. ಕಾರ್ಕಳ ತಾಲೂಕಿನಲ್ಲಿಯೇ ಹುಟ್ಟುವ ಸೀತಾನದಿಯು ಮುಂದೆ ಉಡುಪಿ ತಾಲೂಕಿನಲ್ಲಿ ಹರಿದು, ಸಮುದ್ರವನ್ನು ಸೇರುತ್ತದಾದರೂ, ಈ ನದಿಯು ಉಡುಪಿ ತಾಲೂಕಿನ ಆವರ್ಸೆಯ ತನಕವೂ ಯಾವುದೇ ಹೆದ್ದಾರಿಯನ್ನು ಸೀಳದ ಪ್ರಯುಕ್ತ ಎರಡು ತಾಲೂಕುಗಳ ನಡುವಿನ ಸಂಪರ್ಕಕ್ಕೆ ಬಾಧೆಯಾಗದೆ ಉಳಿಯಿತೆಸ್ನುವುದು ಗಮನಿಸಬೇಕಾದ ಅಂಶವಾಗಿದೆ.
2. ಕುಂದಾಪುರ ತಾಲೂಕಿನ ಪ್ರಮುಖ ದೈವಶಕ್ತಿ ಸ್ಥಾನವಾದ 'ಮಾರಣಕಟ್ಟೆ' ಮತ್ತು ನಾಗಸ್ಥಾನವಾದ 'ಸ್ಕಂದಾವರ' (ಕಂದಾವರ), ಕಾರ್ಕಳ ತಾಲೂಕಿನ ವಿವಿಧ ಜಾತಿ–ಜನಾಂಗಕ್ಕೆ ಸೇರಿದ ಮಂದಿಗೆ ಮುಖ್ಯ ಆರಾಧನಾ ಕೇಂದ್ರವಾದ ಕಾರಣ

ಕಾರ್ಕಳ ತಾಲೂಕಿನ ಆಸ್ತಿಕ ಮಂದಿ ಈ ತಾಲೂಕಿನ ಸಂಬಂಧವನ್ನು ಶತಮಾನಪೂರ್ವದಿಂದಲೂ ಉಳಿಸಿಕೊಂಡು ಬಂದವರಾಗಿದ್ದಾರೆ.

3. ಸ್ವಾತಂತ್ರ್ಯೋತ್ತರ ಮತ್ತು ಸ್ವಾತಂತ್ರ್ಯಪೂರ್ವದಿಂದಲೂ ಅರಣ್ಯ–ಕಂದಾಯ–ಗೃಹ ಇಲಾಖೆಗೆ ಸಂಬಂಧಿಸಿದಂತೆ ಉನ್ನತ ಅಧಿಕಾರಿಗಳು ಕಾರ್ಕಳ, ಉಡುಪಿ, ಕುಂದಾಪುರ ತಾಲೂಕುಗಳಿಗೆ ಒಬ್ಬರೇ ಆಗಿರುವ ಪ್ರಯುಕ್ತ ಈ ಮೂರೂ ತಾಲೂಕು ಪ್ರದೇಶಗಳ ನಡುವೆ ಪರಸ್ಪರ ಸಂಬಂಧವು ಅಭೇದ್ಯವಾಗಿತ್ತು.
4. ಸ್ವಾತಂತ್ರ್ಯೋತ್ತರ ಕಾಲದ ಎರಡು ಅವಧಿಗೆ ಕಾರ್ಕಳ ಕ್ಷೇತ್ರಕ್ಕೆ ಸಂಬಂಧಿಸಿದ ವ್ಯಕ್ತಿಯೋರ್ವರು (ದಿ. ಎಸ್. ಧರ್ಮಸಾಮ್ರಾಜ್ಯ) ಉಡುಪಿ ತಾಲೂಕಿನ ಬ್ರಹ್ಮಾವರ ಕ್ಷೇತ್ರಕ್ಕೆ ಶಾಸಕರಾಗಿದ್ದ ಪ್ರಯುಕ್ತ, ಉಡುಪಿ ಮತ್ತು ಕುಂದಾಪುರ ತಾಲೂಕಿನ ಸಂಬಂಧವು ಕಾರ್ಕಳದೊಂದಿಗೆ ಇನ್ನಷ್ಟು ಗಟ್ಟಿಯಾಯಿತೆನ್ನಬಹುದು.
5. ಕೋಟ ಮತ್ತು ಕುಂದಾಪುರದ ಬ್ರಾಹ್ಮಣರು ಶೃಂಗೇರಿಯ ಶಾರದಾಂಬೆಯ ಭಕ್ತರಾಗಿದ್ದು, ಶೃಂಗೇರಿಯಲ್ಲಿ ವರ್ಷಂಪ್ರತಿ ನಡೆಯುವ ನವರಾತ್ರಿ ಉತ್ಸವಕ್ಕೆ ನಡೆದುಕೊಂಡೇ ಹೋಗುತ್ತಿದ್ದ ಕಾಲದಲ್ಲಿ (ಈ ಕುರಿತು ವಿವರಗಳು 'ನೆನಪಿನಂಗಳದಲ್ಲಿ ಮುಸ್ಸಂಜೆ ಹೊತ್ತು' ಎಂಬ ವೈದೇಹಿಯವರು ಸಂಪಾದಿಸಿದ ಕೃತಿಯ ಪುಟ–1ರಲ್ಲಿ ಉಲ್ಲೇಖಗೊಂಡಿದೆ) ಕಾರ್ಕಳ ಅವರ ಮಾರ್ಗದ ಮುಖ್ಯ ನಿಲ್ದಾಣವೆನ್ನಿಸಿತ್ತು. ಈ ಯಾತ್ರಾ ವಿಷಯವು ಕುಂದಾಪುರ ಮತ್ತು ಉಡುಪಿ ತಾಲೂಕಿನ ಉತ್ತರ ಭಾಗದವರಿಗೆ ಕಾರ್ಕಳದ ಜೊತೆಗಿನ ಸಂಬಂಧವನ್ನು ಹೆಚ್ಚಿಸುತ್ತಾ ಬಂದಿತ್ತು.
6. ಉಡುಪಿ, ಕುಂದಾಪುರ ತಾಲೂಕು ಪ್ರದೇಶದ ಕ್ರೈಸ್ತ ಬಾಂಧವರಿಗೆ ಕಾರ್ಕಳದ ಅತ್ತೂರು ಸಂತ ಲಾರೆನ್ಸರ ಇಗರ್ಜಿಯು ಮುಖ್ಯ ಧಾರ್ಮಿಕ ಕೇಂದ್ರವಾದ ಕಾರಣಿಕ ಕ್ಷೇತ್ರವಾಗಿದ್ದು, ಜೈನಧರ್ಮೀಯರಿಗೆ ಕಾರ್ಕಳ ತಾಲೂಕಿನ ವರಂಗ ಹಾಗೂ ನೆಲ್ಲಿಕಾರು ಬಸದಿಯು ಪವಿತ್ರ ಕ್ಷೇತ್ರವಾಗಿರುವ ಪ್ರಯುಕ್ತ ಈ ಭಾಗದ ಮಂದಿಗೆ (ಉಡುಪಿ ಮತ್ತು ಕುಂದಾಪುರದ ಜೈನ ಬಾಂಧವರಿಗೆ) ಕಾರ್ಕಳ ತಾಲೂಕಿನ ಸಂಪರ್ಕ ಸಂಬಂಧವು ಲಾಗಾಯ್ತಿನಿಂದಲೂ ನಡೆದುಕೊಂಡು ಬಂದಿತ್ತು.

ಈ ಎಲ್ಲಾ ಕಾರಣಗಳಿಂದಾಗಿ ಉಡುಪಿ ಜಿಲ್ಲೆಯ ಮೂರು ತಾಲೂಕುಗಳು 1997ರಲ್ಲಿ ಒಂದೇ ಜಿಲ್ಲೆಯ ವ್ಯಾಪ್ತಿಯೊಳಗೆ ಸೇರಿಕೊಂಡಾಗ ಮೂರೂ ತಾಲೂಕಿನ ಯಾವುದೇ ಸಮುದಾಯ ಮತ್ತು ಜಾತಿ ಜನಾಂಗದವರಿಂದ ಆಕ್ಷೇಪಗಳು ಇಲ್ಲದೆ ಇಲ್ಲಿನ ನಾಗರಿಕರು ಪರಸ್ಪರ ತಮ್ಮ ಸಂಬಂಧವನ್ನು ಇನ್ನಷ್ಟು ಹೆಚ್ಚಿಸಿಕೊಂಡು ಪರಿಸ್ಪರ ಸಮೀಪವಾದರು.

**ಅಧ್ಯಯನದ ಸ್ವರೂಪ (ಸಂಶೋಧನಾ ಸಮಸ್ಯೆ):**

ಇಪ್ಪತ್ತನೇ ಶತಮಾನದ ಕಾಲಾವಧಿಯ ಸಂದರ್ಭದಲ್ಲಿ ಮನುಷ್ಯನ ಜೀವನ–ಧೋರಣೆಯನ್ನು ರೂಪಿಸುವಲ್ಲಿ ವಿಜ್ಞಾನ/ತಂತ್ರಜ್ಞಾನ ಕ್ಷೇತ್ರದ ಆವಿಷ್ಕಾರಗಳು, ರಾಜಕೀಯ ಸಿದ್ಧಾಂತಗಳು ಮಹತ್ತರವಾದ ಪ್ರಭಾವ ಮತ್ತು ಪರಿಣಾಮಗಳು ಬೀರಿವೆ. ಈ ಪ್ರಭಾವ ಹಾಗೂ ಪರಿಣಾಮಗಳನ್ನು ಸಾಹಿತ್ಯ ಕೃತಿಗಳಲ್ಲಿ ಭಿನ್ನಭಿನ್ನ ಲೇಖಕರು ವಿವಿಧ ಬಗೆಗಳಲ್ಲಿ ಅನಾವರಣಗೊಳಿಸಿರುವುದನ್ನು ಗಮನಿಸಬಹುದು.

ಪ್ರಸ್ತುತ ಅಧ್ಯಯನದಲ್ಲಿ ಸಾಹಿತ್ಯಪ್ರಕಾರಗಳು ಸಾಹಿತ್ಯ ಚಟುವಟಿಕೆಗಳ ಮೂಲಕ ಸಾಹಿತ್ಯಪ್ರಿಯರನ್ನು ಅಥವಾ ಸಹೃದಯ ವಲಯವನ್ನು ತಟ್ಟಿದ ಬಗೆ ಹೇಗೆ? ರಾಜಾಶ್ರಯದಿಂದ ಹೊರಬಂದ ಸಾಹಿತ್ಯವನ್ನು ಜನರ ಬಳಿಗೆ ಹರಿಯಿಸಿದ

ಸಾಹಿತ್ಯ ಸಂಘಟಕರು ಯಾರು? ಯಾವ ಸಂಘಟಕರು ಯಾವ ರೀತಿಯ ಚಟುವಟಿಕೆಗಳನ್ನು ಆಯ್ಕೆ ಮಾಡಿಕೊಂಡರು? ಯಾವ ಅಥವಾ ಯಾರ ಪ್ರಕಾರವನ್ನು ಸಹೃದಯರ ಸಾಮಾನ್ಯ ಜ್ಞಾನದಿಂದ ಮರೆಮಾಡಿದರು? ಇದರ ಹಿಂದಿನ ಉದ್ದೇಶವೇನು? ಈ ಚಟುವಟಿಕೆಗಳಿಗೆ ಆರ್ಥಿಕ ಸಂಪನ್ಮೂಲವನ್ನು ಯಾವ ಮೂಲದಿಂದ ಸಂಗ್ರಹಿಸಿದರು? ಪ್ರಜಾಪ್ರಭುತ್ವ ರಾಜಕೀಯ ಚಿಂತನೆ ಅಡಿಯಲ್ಲಿ ಅಸ್ತಿತ್ವಕ್ಕೆ ಬಂದ ಸಾಹಿತ್ಯ ಚಟುವಟಿಕೆಗಳ ಪ್ರಸರಣ ಸಂಸ್ಥೆಗಳು ಸಾಮಾಜಿಕ ನ್ಯಾಯದ ಪರಿಕಲ್ಪನೆಯಲ್ಲಿ ತಮ್ಮ ಉದ್ದೇಶಗಳನ್ನು ಈಡೇರಿಸಿಕೊಳ್ಳುವಲ್ಲಿ ಸಫಲವಾದುವೇ? ವಿಫಲವಾದಲ್ಲಿ ಅದಕ್ಕೆ ಕೂಡಿ ಬಂದ ಕಾರಣಗಳೇನು? ಎಂಬಿತ್ಯಾದಿ ಪ್ರಶ್ನೆಗಳಿಗೆ ಉತ್ತರವನ್ನು ಈ ಸಂಶೋಧನ ಅಧ್ಯಯನದಲ್ಲಿ ಶೋಧಿಸಬೇಕಾಗಿದೆ.

ಎರಡನೆಯದಾಗಿ, ಶತಮಾನದ ಆರಂಭದ ಹೊತ್ತಿನಲ್ಲಿ ಪ್ರಸಾರದಲ್ಲಿದ್ದ ವಿವಿಧ ಪತ್ರಿಕೆಗಳು ಸಾಹಿತ್ಯ ಚಟುವಟಿಕೆಗಳಿಗೆ ಅವಕಾಶ ನೀಡಿದ ಬಗೆ ಹೇಗೆ? ಇಂತಹ ಪತ್ರಿಕಾ ಚಟುವಟಿಕೆಗಳು ಯಾವ ಬಗೆಯ ಪರಿಣಾಮಗಳನ್ನುಂಟುಮಾಡಿದವು? ಶೈಕ್ಷಣಿಕ ಕೇಂದ್ರಗಳ ಸಂಸ್ಥಾಪಕರು ಸಾಹಿತ್ಯ ಚಟುವಟಿಕೆಗಳಿಗೆ ಪ್ರೇರಣೆ ನೀಡಿದರೇ? ಇಂತಹ ಪ್ರೇರಣೆಯ ಹಿಂದಿನ ಉದ್ದೇಶಗಳೇನು? ಧಾರ್ಮಿಕ ಸಂಸ್ಥೆಗಳು ಸಾಹಿತ್ಯ ಚರ್ಚೆಯ ವೇದಿಕೆಯಾಗಿದ್ದುವೇ? ಈ ವೇದಿಕೆಗಳನ್ನು ಬಳಸಿಕೊಂಡವರು ಯಾರು? ಸಾಹಿತ್ಯ ಚಟುವಟಿಕೆಗಳ ವಿಸ್ತೃತ ಅಧ್ಯಯನಕ್ಕಾಗಿ ಸಂಶೋಧನ ಸಂಸ್ಥೆಗಳ ಚಟುವಟಿಕೆಗಳ ಸ್ವರೂಪ ಮತ್ತು ಸಾಧನೆಗಳೇನು? ಸಾಹಿತ್ಯ ಚಟುವಟಿಕೆಗಳು 'ವೈಚಾರಿಕ ಜಾಗೃತಿ'ಗಾಗಿ ಎಂಬ ಧ್ಯೇಯದಿಂದ ಅಸ್ತಿತ್ವಕ್ಕೆ ಬಂದ ಸಾಹಿತ್ಯ ಸಂಘಟನೆಗಳು ಕಾಲಾಂತರದಲ್ಲಿ ತಮ್ಮ ಅಸ್ತಿತ್ವವನ್ನು ಕಳೆದುಕೊಂಡ ಪರಿ ಹೇಗೆ? ಎಂಬಿತ್ಯಾದಿ ಪ್ರಶ್ನೆಗಳಿಗೆ ಉತ್ತರವನ್ನು ಶೋಧಿಸುವ ಸಲುವಾಗಿ ಈ ಅಧ್ಯಯನವನ್ನು ಕೈಗೆತ್ತಿಕೊಳ್ಳಲಾಗಿದೆ. ಚಟುವಟಿಕೆಗಳ ಕುರಿತಂತೆ ನಡೆಯುವ ವಿಶ್ಲೇಷಣೆ ಒಂದರ್ಥದಲ್ಲಿ ಮೌಲ್ಯಮಾಪನ ಎನ್ನುವುದನ್ನು ಅಲ್ಲಗಳೆಯುವಂತಿಲ್ಲ. ಹಾಗಾಗಿ ಈ ಚಟುವಟಿಕೆಗಳ ಮೌಲ್ಯೀಕರಣ ಸಾಮಾಜಿಕ ಪ್ರಗತಿಯ ದೃಷ್ಟಿಯಿಂದ ಒಂದು ಅಗತ್ಯವಾದ ಪ್ರಕ್ರಿಯೆ. ಬರಗೂರು ಅವರ ಹೇಳಿಕೆಯಲ್ಲೇ ಉಲ್ಲೇಖಿಸುವುದಾದರೆ "ಪುನರ್‌ಮೌಲ್ಯೀಕರಣ ಪರಿಕಲ್ಪನೆಯು ನಿರಾಕರಣೆಯ ನೆಲೆಯಿಂದ ಹುಟ್ಟಿದ್ದಲ್ಲ. ಅದು ಕಟ್ಟ ಕಡೆಯ ತೀರ್ಮಾನವೂ ಅಲ್ಲ. ಮೌಲ್ಯೀಕರಣ ಎಂಬ ಮಾತೇ ನಿರಂತರತೆಯನ್ನು ಸೂಚಿಸುತ್ತದೆ, ನಿಲುಗಡೆಯನ್ನು ಸೂಚಿಸುವುದಿಲ್ಲ. ನಿರಂತರತೆ ಎನ್ನುವುದು ಕಾಲಘಟ್ಟಗಳು ಜಡಗಟ್ಟುವುದನ್ನು ತಪ್ಪಿಸುವ ಒಂದು ತೀವ್ರತೆ. ಇಂತಹ ತೀವ್ರತೆಯ ಹಿನ್ನಲೆಯಲ್ಲಿ ಕಾಲಘಟ್ಟವೊಂದು ದೊರಕಿಸಿಕೊಟ್ಟ ಅನುಭವ ಮತ್ತು ಅರಿವಿನ ಬೆಳಕಿನಲ್ಲಿ ನಡೆಸುವ ನಿರ್ದಿಷ್ಟ ಶೋಧವಾಗಿ ಪುನರ್‌ಮೌಲ್ಯೀಕರಣವನ್ನು ಪರಿಗಣಿಸಬೇಕು" (2006, ಪು–11) ಬರಗೂರರ ಈ ಹೇಳಿಕೆಯನ್ನು ಇಲ್ಲಿಯ ಸಂಶೋಧನಸ್ವರೂಪಕ್ಕೆ ನೇರವಾಗಿ ಅನ್ವಯಿಸಬಹುದಾಗಿದೆ.

ಸಂಶೋಧನಾಧ್ಯಯನದ ಸಮಸ್ಯೆಗಳ ಸ್ವರೂಪವನ್ನು ಅನುಸರಿಸಿ, ಅಧ್ಯಯನವಿಧಾನವನ್ನು ರೂಢಿಸಿಕೊಳ್ಳಲಾಗಿದೆ. ಈ ವಿಧಾನದ ಕುರಿತಂತೆ ಪ್ರತ್ಯೇಕ ಶೀರ್ಷಿಕೆಯಲ್ಲಿ ಮುಂದೆ ಚರ್ಚಿಸಲಾಗಿದೆ. ಸಂಶೋಧನ ಶೀರ್ಷಿಕೆಯಲ್ಲಿ ಉಲ್ಲೇಖಿಸಲಾದ 20ನೇ ಶತಮಾನದ ಒಟ್ಟಾರೆ ಸಾಹಿತ್ಯದ ಸ್ವರೂಪದ ಕುರಿತಂತೆ ಬರಗೂರು ಅವರ ಅಭಿಪ್ರಾಯವನ್ನು ಇಲ್ಲಿ ದಾಖಲಿಸುವುದು ಇಲ್ಲಿ ಸಮಂಜಸವೆನಿಸುತ್ತದೆ. "ಅನೇಕ ಶತಮಾನಗಳು ಒಂದೇ ಶತಮಾನದಲ್ಲಿ ಮೇಳೈಸಿರುವ ಶತಮಾನವೆಂದರೆ 20ನೇ ಶತಮಾನ. ಆದ್ದರಿಂದ ಈ ಶತಮಾನದ ಸಂಕಟ ಮತ್ತು ಸಂಭ್ರಮಗಳು ಮನುಷ್ಯನನ್ನು ರೂಪಿಸುತ್ತಿರುವ ಬಗೆಯೇ

ಬೇರೆಯಾಗಿದೆ. ಇದರಿಂದ ವೈರುಧ್ಯಗಳು ಹೆಚ್ಚಾಗುತ್ತಿವೆ. ವ್ಯಕ್ತಿಪ್ರಜ್ಞೆಯ ವೈಪರೀತ್ಯದ ಬಳಿಯೇ ಸಮೂಹಪ್ರಜ್ಞೆ ಬೆಳೆಯುತ್ತಿದೆ. ಮಾತು ಮಿತಿಮೀರುತ್ತಿರುವಾಗಲೇ ಮೌನ ಹೆಪ್ಪುಗಟ್ಟಿ, ಅದೇ ಒಂದು ವಿಭಿನ್ನ ವ್ಯಾಖ್ಯಾನವಾಗುತ್ತಿದೆ. ಭೂತ ಭವಿಷ್ಯಗಳ ನಡುವೆ ವರ್ತಮಾನ ಉಸಿರುಗಟ್ಟುತ್ತಿದೆ. ಅಂತರಂಗ ಬಹಿರಂಗಗಳು ಮೌನರಂಗಗಳಾಗುತ್ತಿವೆ. ಇಷ್ಟೆಲ್ಲಾ ವೈರುಧ್ಯಗಳ ನಡುವೆ ಕೊಂಡಿ ಕಳಚಿಕೊಳ್ಳುತ್ತಿರುವ ಕಾಲವನ್ನು ಕಾಣುತ್ತಿದ್ದೇವೆ."(ಪೂರ್ವೋಕ್ತ,ಪು–9) ಬರಗೂರು ಅವರ ಅಭಿಪ್ರಾಯದ ಹಿನ್ನೆಲೆಯಲ್ಲಿ ಸಾಹಿತ್ಯ ಚಟುವಟಿಕೆಗಳ ಕುರಿತಾಗಿ, ಅಧ್ಯಯನವನ್ನು ಕೈಗೆತ್ತಿಕೊಳ್ಳಲಾಗುತ್ತಿದ್ದು, ಈ ತೆರನಾದ ಅಧ್ಯಯನದ ಸ್ವರೂಪ ಮತ್ತು ಮಹತ್ವವನ್ನು ಬರಗೂರು ಅವರ ಮೇಲಿನ ಹೇಳಿಕೆಯು ಸ್ಪಷ್ಟವಾಗಿ ಸಮರ್ಥಿಸುತ್ತಿದೆ. ಅವರ ಈ ಹೇಳಿಕೆಯನ್ನು ಜಾಗತೀಕರಣದ ಪರಿಣಾಮಕ್ಕೊಳಗಾಗುತ್ತಿರುವ 20ನೇ ಶತಮಾನದ ಮೊದಲ ದಶಕಕ್ಕೂ ಅನ್ವಯಿಸಬಹುದಾಗಿದೆ.

**ಅಧ್ಯಯನದ ವ್ಯಾಪ್ತಿ:–** 'ಉಡುಪಿ ಜಿಲ್ಲೆ' ಎಂಬ ಭೌಗೋಳಿಕ ಮಿತಿಯಲ್ಲಿ ಅಧ್ಯಯನ ನಡೆಸಬೇಕಾದ ಅವಶ್ಯಕತೆಯ ಕುರಿತಂತೆ ಮೂರು ತಾಲೂಕುಗಳ ನಡುವಿನ ಸಾವಯವ ಸಂಬಂಧದ ಬಗೆಯನ್ನು ಈಗಾಗಲೇ ಚರ್ಚಿಸಲಾಗಿದೆ. ಈ ಅಧ್ಯಯನದ ಮೂಲಕ ಕಂಡುಕೊಳ್ಳಬೇಕಾದ ಅಧ್ಯಯನದ ಫಲಿತಗಳ ಖಚಿತ ತೀರ್ಮಾನಕ್ಕಾಗಿ ಒಂದು ನಿರ್ದಿಷ್ಟ ಚೌಕಟ್ಟನ್ನು ಹಾಕಿಕೊಳ್ಳುವುದು, ಸಂಶೋಧನಕ್ಷೇತ್ರದ ಶಿಸ್ತು ಮತ್ತು ಧರ್ಮವೂ ಹೌದು. ಅಧ್ಯಯನದ ಭೌಗೋಳಿಕ ಮಿತಿ ಉಡುಪಿ ಜಿಲ್ಲೆಯಾದರೆ ವಿಷಯವ್ಯಾಪ್ತಿಯು ಜಿಲ್ಲೆಯೊಳಗೆ ಸಾಹಿತ್ಯ ಚಟುವಟಿಕೆಯು ಪ್ರವೇಶ ಪಡೆದ ಬಗೆ ಮತ್ತು ಈ ಚಟುವಟಿಕೆಗಳು ಜಿಲ್ಲೆಯಾದ್ಯಂತ ವಿವಿಧಕ್ಷೇತ್ರಗಳಲ್ಲಿ ವಿವಿಧ ಆಯಾಮಗಳಲ್ಲಿ ವ್ಯಾಪಕವಾಗಿ ವಿಕಾಸವಾದ ಬಗೆಯನ್ನು ಶೋಧಿಸಬೇಕಾಗಿದೆ.

20ನೇ ಶತಮಾನದ ಆರಂಭದ ದಶಕದಿಂದಲೇ ಉಡುಪಿ ಜಿಲ್ಲೆಯು ಬ್ರಿಟೀಷ್ ವಸಾಹತುಶಾಹಿಯ ಆಳ್ವಿಕೆಗೊಳಪಟ್ಟು, ಹೊಸ ಸಾಮಾಜಿಕ ಸಂರಚನೆಯು ಎಲ್ಲಾ ಕ್ಷೇತ್ರಗಳಲ್ಲಿಯೂ ಕಾಣಿಸಿಕೊಳ್ಳತೊಡಗಿತು. ಈ ಹೊಸ ಸಂರಚನೆ ಎಂಬ ಆಧುನಿಕತೆಯ ಪ್ರಕ್ರಿಯೆಯ ಭಾಗವಾಗಿ ಚಾಲ್ತಿಗೆ ಬಂದ ಇಂಗ್ಲೀಷ್ ಶಿಕ್ಷಣವು ದೇಸೀಯ ಅಥವಾ ಸ್ಥಳೀಯ ನಾಯಕರಲ್ಲಿ ರಾಷ್ಟ್ರೀಯ ಮನೋಭಾವನೆಯನ್ನು ಗಟ್ಟಿಗೊಳಿಸಿತು. ಈ ರಾಷ್ಟ್ರೀಯ ಮನೋಭಾವನೆಯ ಪರಿಣಾಮವಾಗಿ ಹೊಸ ವಿದ್ಯಾವಂತ ವರ್ಗದಲ್ಲಿ ರಾಷ್ಟ್ರೀಯತೆ–ಸ್ವಾತಂತ್ರ್ಯಪ್ರಜ್ಞೆ–ಭಾಷಾಭಿಮಾನ ಶಿಕ್ಷಣದ ಅಗತ್ಯ, ಧರ್ಮದ ಕುರಿತಂತೆ ಹೊಸ ಜಾಗೃತಿಯು ಒಡಮೂಡತೊಡಗಿತು. ಇಂತಹ ಸಾಮಾಜಿಕ ಸನ್ನಿವೇಶದ ಒತ್ತಡಗಳನ್ನು ಭಿನ್ನಭಿನ್ನ ಸ್ವರೂಪದಲ್ಲಿ ಸ್ವೀಕರಿಸುವ ಮತ್ತು ನಿರಾಕರಿಸುವ ಸಾಹಿತ್ಯರಚನೆಗಳು ಈ ಕಾಲದಲ್ಲಿ ಕಂಡುಬಂದವು. ಈ ಸಾಹಿತ್ಯರಚನೆಗಳಿಗೆ ಪತ್ರಿಕೆಗಳು ಮೊದಲ ವೇದಿಕೆ/ಮಾಧ್ಯಮವಾದ ಕಾರಣ ಈ ಅಧ್ಯಯನಶೀರ್ಷಿಕೆಯಲ್ಲಿ ಪತ್ರಿಕೆಗಳ ಸಾಹಿತ್ಯ–ಕೊಡುಗೆಗಳ ಕುರಿತಂತೆ ಅಧ್ಯಯನ ಮಾಡುವುದು ಅವಶ್ಯವಾಗಿದೆ. ಪತ್ರಿಕೆಗಳು ಕೇವಲ ಸಾಹಿತ್ಯ ಚಟುವಟಿಕೆಗಳ ಅಭಿವ್ಯಕ್ತಿಯನ್ನು ಮಾತ್ರ ತಮ್ಮ ಉದ್ದೇಶವಾಗಿ ಇರಿಸಿಕೊಳ್ಳದೇ ಲೋಕದ ಅಥವಾ ರಾಷ್ಟ್ರದ ಪ್ರಚಲಿತ ವರ್ತಮಾನದ ರಾಜಕೀಯ–ಸುದ್ದಿಗಳನ್ನು ಬಿತ್ತರಿಸುವ ಮಾಧ್ಯಮವಾದ ಕಾರಣ, ರಾಷ್ಟ್ರೀಯ ಮನೋಭಾವನೆಯನ್ನು ಹುಟ್ಟುಹಾಕುವಲ್ಲಿ ಪತ್ರಿಕೆಗಳು ತಮ್ಮ ಪಾಲಿನ ಕೊಡುಗೆಗಳನ್ನು ನೀಡಿದವು. ಈ ಚಟುವಟಿಕೆಗಳ ಚರ್ಚೆಯನ್ನು, ಮೌಲ್ಯವನ್ನು, ಪರಿಣಾಮಗಳನ್ನು ಪರಿಶೀಲಿಸುವುದು ಈ ಅಧ್ಯಯನದ ವ್ಯಾಪ್ತಿಯೊಳಗೆ ಅಂತರ್ಗತಗೊಂಡ ವಿಚಾರಗಳಾಗಿವೆ.

ಬ್ರಿಟೀಷ್ ಸರಕಾರದ ಅಧೀನದಲ್ಲಿ ಬಂದ ಆಧುನಿಕ ಶಿಕ್ಷಣ ಸಂಸ್ಥೆಗಳು ಮತ್ತು ಕ್ರೈಸ್ತ ಮಿಷನರಿಗಳ ಆಡಳಿತದ ಶಿಕ್ಷಣ ಸಂಸ್ಥೆಗಳು ಹಾಗೆಯೇ ದೇಸೀಯ ರಾಷ್ಟ್ರನಾಯಕರ ವ್ಯವಸ್ಥಾಪನದ ಅಧೀನದಲ್ಲಿ ನಡೆಯುತ್ತಿದ್ದ ಶಿಕ್ಷಣ ಸಂಸ್ಥೆಗಳಲ್ಲಿ ಶಿಕ್ಷಣ ಇಲಾಖೆಯ ನಿಯಮಾನುಸಾರ ನಿರ್ದಿಷ್ಟವೇಳಾಪಟ್ಟಿಯಲ್ಲಿ ಸಾಹಿತ್ಯವಿಷಯಗಳ ಬೋಧನೆಗೆ ಅವಕಾಶ ಒದಗಿಸಲಾಗಿತ್ತು. ಶಾಲಾ ಶೈಕ್ಷಣಿಕ ಪಠ್ಯಕ್ಕೆ ಪೂರಕವಾಗಿ ಶಿಕ್ಷಣಸಂಸ್ಥೆಗಳಲ್ಲಿ ಅಧ್ಯಾಪಕರು ಸಾಹಿತ್ಯವಿಷಯಗಳನ್ನು ಹವ್ಯಾಸವೆಂಬಂತೆ ರೂಢಿಸಿಕೊಂಡು ತಮ್ಮತಮ್ಮ ಸಾಹಿತ್ಯ ಚಟುವಟಿಕೆಗಳಿಗೆ ಶಾಲಾ ಪರಿಸರದಲ್ಲಿ ಯಥಾನುಶಕ್ತಿ ಪೋಷಣೆ ನೀಡಿದರು. ಈ ಚಟುವಟಿಕೆಗಳ ಪ್ರೇರಣೆಯಿಂದಾಗಿ ಇಲ್ಲಿ ವಿದ್ಯಾಭ್ಯಾಸ ಮುಗಿಸಿದ ವಿದ್ಯಾರ್ಥಿಗಳು ತಮ್ಮ ಜೀವನದಲ್ಲೂ ಸಾಹಿತ್ಯಚಟುವಟಿಕೆಗಳನ್ನು ಹವ್ಯಾಸವೆಂಬಂತೆ ರೂಢಿಸಿಕೊಂಡರು.

ಸ್ವಾತಂತ್ರ್ಯಪೂರ್ವ ಮತ್ತು ಸ್ವಾತಂತ್ರ್ಯೋತ್ತರ ಕಾಲಘಟ್ಟದಲ್ಲಿ ಅರ್ಥಾತ್ 20ನೇ ಶತಮಾನದುದ್ದಕ್ಕೂ ಈ ತೆರನಾದ ಸಾಹಿತ್ಯ ಚಟುವಟಿಕೆಗಳಿಗೆ ಸಾರ್ವಜನಿಕ ಸಹೃದಯರು ತಮ್ಮ ಬೆಂಬಲ ನೀಡಿದರು. ಹಾಗಾಗಿಯೇ ಶಿಕ್ಷಣಸಂಸ್ಥೆಗಳಲ್ಲಿ ನಡೆದ ಸಾಹಿತ್ಯಸ್ವರೂಪವನ್ನು ಅಧ್ಯಯನಕ್ಕೊಳಪಡಿಸುವುದು ಈ ಸಂಶೋಧನವ್ಯಾಪ್ತಿಯ ವಿಷಯವಾಗಿದೆ. ಶಾಲಾಶಿಕ್ಷಣದಲ್ಲಿ ಸಾಹಿತ್ಯವಿಷಯಗಳನ್ನು ಅಭ್ಯಾಸಮಾಡಿದ ವಿದ್ಯಾರ್ಥಿಗಳು ತಮ್ಮ ವಿದ್ಯಾಭ್ಯಾಸದ ಅನಂತರದಲ್ಲೂ ತಮ್ಮ ತಮ್ಮ ವ್ಯಾಪ್ತಿಯಲ್ಲಿ ಅರ್ಥಾತ್ ಉದ್ಯೋಗದಲ್ಲಿದ್ದ ಊರು-ಕೇರಿಗಳಲ್ಲಿ ಸಮಾನಾಸಕ್ತಿಯ ಸಹೃದಯರೊಂದಿಗೆ ಸಂಘಟನೆಗಳನ್ನೋ ಅಥವಾ ಸಾಹಿತ್ಯ ಒಕ್ಕೂಟಗಳನ್ನೋ ರಚಿಸಿ, ಆ ಮುಖೇನ ಸಾಹಿತ್ಯ ಚಟುವಟಿಕೆಗಳಿಗೆ ವೇದಿಕೆ ನಿರ್ಮಿಸಿದರು. ಈ ಸಂಘಟನೆಗಳ ಸಾಹಿತ್ಯಚಟುವಟಿಕೆಗಳ ಮೌಲ್ಯ ಮತ್ತು ಸಂಘಟಕರ ಸಾಹಿತ್ಯಪರಿಶ್ರಮವನ್ನು-ಪರಿಣಾಮಗಳನ್ನು ಚರ್ಚಿಸುವುದು ಈ ಅಧ್ಯಯನ ವಿಷಯದ ವ್ಯಾಪ್ತಿಯೊಳಗೆ ಸೇರುತ್ತದೆ. ಊರಿನ ಆಸ್ತಿಕಜನರ ಶ್ರದ್ಧಾಕೇಂದ್ರವಾದ ಮಠ, ಮಂದಿರ, ದೇವಸ್ಥಾನಗಳು ಲಾಗಾಯ್ತಿನಿಂದಲೂ ನಡೆಯಿಸಿಕೊಂಡು ಬಂದ ವಿವಿಧ ಧಾರ್ಮಿಕ ಚಟುವಟಿಕೆಗಳು ರೂಢಿಯಂತೆ ನಡೆದುಕೊಂಡು ಬರುತ್ತಾ, ಕಾಲಾಂತರದಲ್ಲಿ ಧಾರ್ಮಿಕ ಚಟುವಟಿಕೆಗಳಿಗೆ ಪೂರಕವಾಗಿ ಸಾಂಸ್ಕೃತಿಕಚಟುವಟಿಕೆಗಳನ್ನೂ ಸಾಹಿತ್ಯಚಟುವಟಿಕೆಗಳನ್ನೂ ನಿರ್ವಹಿಸುವುದಕ್ಕೆ ಅವಕಾಶಗಳನ್ನು ನೀಡಿದವು. ಕೇವಲ ಧಾರ್ಮಿಕ ಚಟುವಟಿಕೆಗಳಿಗಷ್ಟೇ ಮೀಸಲಾಗಿದ್ದ, ದೇವಸ್ಥಾನದ ವಿವಿಧ ಪರಿಕರಗಳು ಸಾಹಿತ್ಯಚಟುವಟಿಕೆಗಳಿಗೂ ಬಳಕೆಯಾಗುವಂತಾಯಿತು. ಹೀಗೆ ದೇವಸ್ಥಾನದ ವಠಾರದಲ್ಲಿ ಸಾಹಿತ್ಯ ಚಟುವಟಿಕೆಗಳಿಗೆ ಪ್ರೋತ್ಸಾಹ ನೀಡಿದ ಧಾರ್ಮಿಕ ಮುಖಂಡರು, ಧಾರ್ಮಿಕ ಚಟುವಟಿಕೆಯ ಅರ್ಥವ್ಯಾಪ್ತಿಯನ್ನು ವಿಸ್ತರಿಸಿದರು. ಈ ದೇಗುಲಗಳ ಆಡಳಿತ ವ್ಯವಸ್ಥಾಪಕರ ಮೂಲ ಆಶಯ, ಈ ಸಾಹಿತ್ಯಚಟುವಟಿಕೆಗಳ ಸ್ವರೂಪ, ಇಂತಹ ವ್ಯವಸ್ಥಾಪಕರ ಧೋರಣೆ, ರೀತಿ-ನೀತಿ ನಿಲುವುಗಳನ್ನು ಚರ್ಚಿಸುವುದು ಈ ಸಂಶೋಧನವ್ಯಾಪ್ತಿಯ ವಿಷಯವಾಗಿದೆ. ಆದರೆ ಜಿಲ್ಲೆಯ ಕೆಲವು ದೇವಸ್ಥಾನಗಳು, ಆರ್ಥಿಕ ಅನುಕೂಲ ಇದ್ದಾಗ್ಯೂ ಸಾಹಿತ್ಯ ಚಟುವಟಿಕೆಗಳಿಗೆ ಸಂಪೂರ್ಣವಾಗಿ ವಿಮುಖರಾಗಿ ಕೇವಲ ಧಾರ್ಮಿಕ ಚಟುವಟಿಕೆಗಳಿಗಷ್ಟೇ ಅವಕಾಶವನ್ನು ನೀಡುತ್ತಿರುವ ಸಂದರ್ಭಗಳನ್ನೂ ಶತಮಾನದುದ್ದಕ್ಕೂ ಕಾಣಬಹುದಾಗಿದೆ. ಈ ದೇವಸ್ಥಾನದ ವ್ಯವಸ್ಥಾಪಕರ ಸಂಕುಚಿತ ಮನಸ್ಥಿತಿಯ ಹಿನ್ನೆಲೆಯನ್ನು ಈ ಸಂಶೋಧನವ್ಯಾಪ್ತಿಯಲ್ಲಿ ಚರ್ಚಿಸಬೇಕಾಗಿದೆ.

ಸಾಹಿತ್ಯಚಟುವಟಿಕೆಯನ್ನು ನಿರ್ವಹಿಸುವುದಕ್ಕಾಗಿ ಸಮಾನಾಸಕ್ತಿಯ ಸಹೃದಯರ ಸಂಘಟನೆ ಅಥವಾ ಒಕ್ಕೂಟವನ್ನು ನಿರ್ಮಿಸಿಕೊಂಡು ಸಾಹಿತ್ಯಚಟುವಟಿಕೆಯನ್ನು ಅರ್ಥವತ್ತಾಗಿಯೂ ವ್ಯವಸ್ಥಿತವಾಗಿಯೂ ನಡೆಸಿಕೊಂಡು ಬರುವ ಅನೇಕ ಸಂಘ

ಸಂಸ್ಥೆಗಳ ಒಟ್ಟಾರೆ ಉದ್ದೇಶ, ಪರಿಣಾಮಗಳನ್ನು ವಿಶ್ಲೇಷಿಸುವುದು ಈ ಅಧ್ಯಯನ ವ್ಯಾಪ್ತಿಯ ವಿಷಯವಾಗಿದೆ. ಸಾಹಿತ್ಯಚಟುವಕೆಗೆಳಿಗಷ್ಟೇ ಅಲ್ಲದೆ ಸಂಶೋಧನೆಗೂ ಅವಕಾಶ ಕಲ್ಪಿಸಿದ ಸಂಶೋಧನ ಕೇಂದ್ರಗಳ ಚಟುವಟಿಕೆಯ ಕುರಿತು ಅವುಗಳ ಸಾಧನೆಗಳ ಕುರಿತು, ಚರ್ಚಿಸುವುದಲ್ಲದೆ ಮುಂದೆ ಈ ಸಂಸ್ಥೆಗಳ ದಿಕ್ಕುದೆಸೆಗಳನ್ನು ಪರಿಶೀಲಿಸುವುದು ಈ ಸಂಶೋಧನವ್ಯಾಪ್ತಿಯ ವಿಷಯವಾಗಿದೆ. ಕೇವಲ ಪ್ರತಿಷ್ಠೆಗಾಗಿ ಸಾಹಿತ್ಯ ಚಟುವಟಿಕೆಗಳಲ್ಲಿ ತೊಡಗಿಕೊಂಡ ಅನೇಕ ವ್ಯಕ್ತಿಗತ ಪ್ರಯತ್ನಗಳೂ ಜಿಲ್ಲೆಯ ಶತಮಾನದ ಕಾಲಾವಧಿಯಲ್ಲಿ ಅಲ್ಲಲ್ಲಿ ಕಂಡುಬಂದರೂ ಇಂತಹ ಪ್ರಯತ್ನಗಳ ಹಿಂದೆ ಯಾವುದೇ ಆಶಯ ಅಥವಾ ಘನತರ ಉದ್ದೇಶಗಳಿಲ್ಲದ ಪ್ರಯುಕ್ತ ಇಂತಹ ವ್ಯಕ್ತಿಗತ ಪ್ರಯತ್ನಗಳನ್ನು ಕೈಬಿಡಬೇಕಾಗಿ ಬಂದಿದೆ. ಇವುಗಳ ಕುರಿತು ದೀರ್ಘ ವಿಶ್ಲೇಷಣೆಯನ್ನು **'ಅಧ್ಯಯನದ ಮೇರೆಗಳು'** ಎಂಬ ಶೀರ್ಷಿಕೆಯಲ್ಲಿ ವಿವರಿಸಲಾಗಿದೆ.

ಸಂಶೋಧನ ಚಟುವಟಿಕೆಯ ಆರನೇ ಅಧ್ಯಾಯವು ಒಟ್ಟು ನಾಲ್ಕು ಕ್ಷೇತ್ರಗಳಲ್ಲಿ ಶತಮಾನದುದ್ದಕ್ಕೂ ನಡೆದ ಸಾಹಿತ್ಯ ಚಟುವಟಿಕೆಗಳ ಅಧ್ಯಯನದ ಮೂಲಕ ಕಂಡುಕೊಂಡ ಫಲಶ್ರುತಿಯನ್ನು ಸಂಕ್ಷೇಪವಾಗಿ ದಾಖಲಿಸಲಾಗಿದೆ. ಭಿನ್ನಭಿನ್ನ ಕ್ಷೇತ್ರಗಳಲ್ಲಿ ನಡೆದ ಸಾಹಿತ್ಯಚಟುವಟಿಕೆಗಳ ಪರಿಣಾಮಗಳನ್ನು, 21ನೇ ಶತಮಾನಕ್ಕೆ ಈ ಸಾಹಿತ್ಯಚಟುವಟಿಕೆಗಳು ದಾಟಿಕೊಂಡು ಬಂದ ಬಗೆಯನ್ನು ಮತ್ತು 21ನೇ ಶತಮಾನದಲ್ಲಿ ಅವುಗಳು ವಿಸ್ತರಿಸಿಕೊಂಡ ಆಯಾಮವನ್ನು ಗುರುತಿಸುವುದು ಈ ಸಂಶೋಧನವ್ಯಾಪ್ತಿಯ ವಿಷಯವಾಗಿದೆ.

**ಸಂಶೋಧನೆಯ ಉದ್ದೇಶ:**

1) ಲಾಗಾಯ್ತಿನಿಂದಲೂ ಸಾಹಿತ್ಯ ಚಟುವಟಿಕೆಗಳಿಗೆ ಪ್ರಾಮುಖ್ಯವನ್ನು ನೀಡಿದ ಸಾಹಿತ್ಯಕ ಸಂಸ್ಥೆಗಳು, ಸಾಹಿತ್ಯ ಚಟುವಟಿಕೆಯ ಸ್ವರೂಪಗಳಲ್ಲಿ ಅನುಸರಿಸಿದ ಬಗೆಬಗೆಯ ಮಾರ್ಪಾಟುಗಳನ್ನು ಗುರುತಿಸುವುದು ಹಾಗೂ ಈ ಮಾರ್ಪಾಟುಗಳಿಗೆ ಕಾರಣವಾದ ಅಂಶಗಳನ್ನು ಚರ್ಚಿಸುವುದು.

2) ಖಾಸಗೀ ಸಂಘಟನೆಗಳು ಹಮ್ಮಿಕೊಂಡ ಸಾಹಿತ್ಯ ಚಟುವಟಿಕೆ ಜನಸಾಮಾನ್ಯರನ್ನು ತಲುಪಿದ ಬಗೆ ಹಾಗೂ ಅದರ ಫಲಿತಗಳನ್ನು ಚರ್ಚಿಸುವುದು.

3) ಪತ್ರಿಕಾ ಚಟುವಟಿಕೆ, ಓದುಗರ ಪ್ರತಿಕ್ರಿಯೆ–ಸಂಪಾದಕರ ಧ್ಯೇಯ–ಧೋರಣೆ, ಸಾಹಿತ್ಯ ಚಟುವಟಿಕೆಗಳ ವೇದಿಕೆಯಾಗಿ ಪತ್ರಿಕೆ ನಿರ್ವಹಿಸಿದ ಪಾತ್ರ ಮತ್ತು ಪರಿಣಾಮಗಳನ್ನು ಚರ್ಚಿಸುವುದು.

4) ಆಧುನಿಕ ತಂತ್ರಜ್ಞಾನದ ಕೊಡುಗೆಗಳಾದ ರೇಡಿಯೋ, ದೂರದರ್ಶನ, ಮೊಬೈಲ್, ಅಂತರ್ಜಾಲ, ವ್ಯಾಟ್ಸಪ್ ಇವುಗಳು ಸಾಹಿತ್ಯ ಚಟುವಟಿಕೆಗಳ ಮೇಲೆ ಉಂಟುಮಾಡಿದ ಸಾಧಕ–ಬಾಧಕಗಳನ್ನು ಚರ್ಚಿಸುವುದು.

5) ವಿವಿಧ ಸ್ವರೂಪದ ಪತ್ರಿಕೆಗಳು ಉಡುಪಿ ಜಿಲ್ಲೆಯಲ್ಲಿ ಉದಯಿಸಿದ ಬಗೆ ಹಾಗೂ ಆ ಪತ್ರಿಕೆಗಳು ಪ್ರಕಟನೆಯನ್ನು ನಿಲ್ಲಿಸಲು ಕಾರಣಗಳು ಏನು ಎನ್ನುವುದನ್ನು ಕಂಡುಕೊಳ್ಳುವುದು.

6) ಖಾಸಗೀ ಸಂಘಟನೆಗಳು ಹಮ್ಮಿಕೊಂಡ ಸಾಹಿತ್ಯ ಚಟುವಟಿಕೆಗಳು ಜನಸಮೂಹದ ಅಭಿರುಚಿಯನ್ನು ತಿದ್ದುವಲ್ಲಿ ನಿರ್ವಹಿಸಿದ ಪಾತ್ರವನ್ನು ಚರ್ಚಿಸುವುದು.

7) ಶಿಕ್ಷಣಸಂಸ್ಥೆಗಳ ಸಾಹಿತ್ಯಚಟುವಟಿಕೆಗಳ ಉದ್ದೇಶ, ಸ್ವರೂಪ ಹಾಗೂ ಈ ಚಟುವಟಿಕೆಗಳ ಹಿಂದೆ ದುಡಿದ ಅಧ್ಯಾಪಕ/ಉಪನ್ಯಾಸಕ /ಸಂಘಟಕರ ಉದ್ದೇಶಗಳನ್ನು ಚರ್ಚಿಸುವುದು.

8) ಧಾರ್ಮಿಕ ಸಂಸ್ಥೆಗಳು ತಮ್ಮ ಧಾರ್ಮಿಕ ಚೌಕಟ್ಟಿನ ಪರಿಧಿಯನ್ನು ಮೀರಿ, ಸಾಹಿತ್ಯ ಚಟುವಟಿಕೆಗಳನ್ನು ಪೋಷಿಸಿತೇ? ಹೀಗೆ ಪೋಷಿಸುವುದಕ್ಕೆ ಕಾರಣಗಳು ಏನು? ಎಂಬ ಪ್ರಶ್ನೆಗಳಿಗೆ ಉತ್ತರಗಳನ್ನು ಕಂಡುಕೊಳ್ಳುವುದು.

9) ಏಕೀಕರಣೋತ್ತರ ಕಾಲದ ಸರ್ಕಾರಿ ಶಿಕ್ಷಣ ಸಂಸ್ಥೆಗಳು ಸಾಹಿತ್ಯಚಟುವಟಿಕೆಗಳಲ್ಲಿ ಹಿಂದುಳಿಯಲು ಕಾರಣಗಳೇನು ಎನ್ನುವುದನ್ನು ಶೋಧಿಸುವುದು, ಶಿಕ್ಷಣಸಂಸ್ಥೆಗಳಲ್ಲಿ ನಡೆದ ಸಾಹಿತ್ಯಚಟುವಟಿಕೆಗಳ ಅಂತಿಮ ಪರಿಣಾಮಗಳನ್ನು ಚರ್ಚಿಸುವುದು ಈ ಸಂಶೋಧನೆಯ ಉದ್ದೇಶವಾಗಿರುತ್ತದೆ.

ಮೇಲಿನ ಎಲ್ಲ ಉದ್ದೇಶಗಳನ್ನು ಸಮಷ್ಟೀಕರಿಸಿ ಹೇಳುವುದಾದರೆ ಈ ತೆರನಾದ ಅಧ್ಯಯನವು "ನಿರ್ದಿಷ್ಟ ಕಾಲದಲ್ಲಿ ನಡೆದುಬಂದ ಹಾದಿಯಲ್ಲಿ ಮುಟ್ಟಿದ ಗುರಿಯೆಷ್ಟು? ತಪ್ಪಿದ್ದೆಷ್ಟು ಎಂಬುದರ ಅನ್ವೇಷಣೆಗೆ, ಶೋಧಕ್ಕೆ ಅವಕಾಶವೊದಗಿಸುತ್ತದೆ. ಇತಿಹಾಸವು ಇಂತಹ ಚಟುವಟಿಕೆಗಳನ್ನು ಕೈಗೆತ್ತಿಕೊಳ್ಳಲು ಒತ್ತಾಯಿಸುತ್ತದೆ. ಇತಿಹಾಸವನ್ನು ಒತ್ತಟ್ಟಿಗಿಟ್ಟು ವರ್ತಮಾನವನ್ನು ಅರಿಯಲು ಹೊರಡುವೆನೆಂಬ ದಾರಿ ಸಮರ್ಪಕದಾರಿಯಾಗಲಾರದು."(ಸಂ: ಮುಕುಂದ ಪ್ರಭು ಎಂ., ಸಂಪಾದಕೀಯ ಮಾತು, 2000)

**ಅಧ್ಯಯನ ವಿಧಾನ:**

ಪ್ರಸ್ತುತ ಸಂಶೋಧನ ವಿಷಯವು ಉಡುಪಿ ಜಿಲ್ಲೆಯ ನೂರು ವರ್ಷದ ಸಾಹಿತ್ಯ ಚಟುವಟಿಕೆಗಳ ಪ್ರಕ್ರಿಯೆ ಹಾಗೂ ಪರಿಣಾಮಗಳಿಗೆ ಸೀಮಿತವಾಗಿದ್ದು, ಈ ಸಾಹಿತ್ಯಚಟುವಟಿಕೆ ಎಂಬ ವಿಷಯ ವ್ಯಾಪ್ತಿಗೆ ಐದು ಘಟಕಗಳು ಮಾಧ್ಯಮವಾಗಿ ದುಡಿದಿವೆ ಎಂಬುದನ್ನು ಕಂಡುಕೊಳ್ಳಲಾಗಿದೆ. ಈ ಎಲ್ಲ ಘಟಕಗಳಿಗೂ ಭಿನ್ನಸ್ವರೂಪದ ಪ್ರಶ್ನಾವಳಿಗಳನ್ನು ರಚಿಸಿ, ಐದು ಘಟಕಗಳ ಸಂಪಾದಕರಿಂದ/ ಸಂಘಟಕರಿಂದ/ ವ್ಯವಸ್ಥಾಪಕರಿಂದ/ ಮುಖ್ಯೋಪಾಧ್ಯಾಯರಿಂದ ಮಾಹಿತಿಯನ್ನು ಪಡೆದು, ಆ ಮಾಹಿತಿಯನ್ನು ಲಭ್ಯ ಕೃತಿಗಳ ಹಿನ್ನೆಲೆಯಲ್ಲಿ ತುಲನಾತ್ಮಕವಾಗಿ ಪರಿಶೀಲಿಸಿ, ವಿಶ್ಲೇಷಣೆ ನಡೆಸಲಾಗಿ ಅಧ್ಯಯನದ ಫಲಿತಗಳನ್ನು ಪಡೆಯಲಾಗಿದೆ.

ಉಡುಪಿ ಜಿಲ್ಲಾ ಭೌಗೋಳಿಕ ಸೀಮೆಯೊಳಗೆ 20ನೇ ಶತಮಾನದಲ್ಲಿ ಪ್ರಕಟಗೊಂಡ (ಇಂದಿಗೂ ಪ್ರಕಟಣೆ ಮುಂದುವರಿಸಿರುವ) ವಿವಿಧ ದಿನಪತ್ರಿಕೆ ಹಾಗೂ ಮತ್ತಿತರ ಸ್ವರೂಪದ ಪತ್ರಿಕೆಗಳ ಲಿಖಿತ ಬರಹಗಳ ಅಧ್ಯಯನ ಮಾಡಲು ಪತ್ರಿಕೆಯನ್ನು ಸಂಪಾದಿಸಿ, ಪತ್ರಿಕೆಯ ಸಾಹಿತ್ಯ ಸ್ವರೂಪವನ್ನು ಅಭ್ಯಾಸ ಮಾಡಲಾಗಿದೆ. ಸಂಪಾದಕರ ಆಡಳಿತಾತ್ಮಕ ಅನುಭವಕ್ಕೆ ಸಂಬಂಧಿಸಿದ ಮಾಹಿತಿಗಾಗಿ ಹಾಗೂ ಓದುಗರ ಅಭಿಪ್ರಾಯಗಳಿಗಾಗಿ ಸಿದ್ಧ ಪ್ರಶ್ನಾವಳಿಗಳಿಂದ ಮಾಹಿತಿಯನ್ನು ಸಂಗ್ರಹಿಸಿ, ಆ ಮಾಹಿತಿಯನ್ನು ಪತ್ರಿಕಾ ಚಟುವಟಿಕೆಯೊಂದಿಗೆ ಪರಿಶೀಲಿಸಿ, ವಿಶ್ಲೇಷಿಸಿ, ನಿರ್ದಿಷ್ಟ ನಿಲುವುಗಳನ್ನು ಖಚಿತಪಡಿಸಿಕೊಳ್ಳಲಾಗಿದೆ. ಆ ಮೂಲಕ ಅಧ್ಯಯನದ ಫಲಿತಗಳನ್ನು ಕಂಡುಕೊಳ್ಳಲಾಗಿದೆ. ಪತ್ರಿಕಾ ಸಂಪಾದಕರ ಕಾಳಜಿಯನ್ನು ಅಧ್ಯಯನದ ಸಂದರ್ಭದಲ್ಲಿ ವಿಶೇಷವಾಗಿ ಗುರುತಿಸಲಾಗಿದೆ.

ವರ್ತಮಾನ ಪತ್ರಿಕೆಯು ತನ್ನ ಪ್ರಕಟನೆಯನ್ನು ನಿಲ್ಲಿಸಿದ್ದಲ್ಲಿ ಅದರ ಕಾರಣಗಳನ್ನು ತಿಳಿಯುವುದಕ್ಕಾಗಿ ಸಂಪಾದಕರನ್ನು ನೇರ ಭೇಟಿಯ ಮೂಲಕ ಸಂಪರ್ಕಿಸಿ, ವಿಷಯ ಸಂಗ್ರಹಿಸಲಾಗಿದೆ. ಸಂಪಾದಕರು ಕಾಲವಾಗಿದ್ದಲ್ಲಿ ಆ ಪತ್ರಿಕೆಯ ಓದುಗರ ಹಾಗೂ ಇತರ ಲಭ್ಯ ಕೃತಿಗಳ ಆಧಾರದ ಹಿನ್ನೆಲೆಯಿಂದ ಕಾರಣಗಳನ್ನು ಕಂಡುಕೊಳ್ಳಲಾಗಿದೆ.

ಶಿಕ್ಷಣಸಂಸ್ಥೆಯ ಸಾಹಿತ್ಯ ಚಟುವಟಿಕೆಗಳಿಗೆ ಸಂಬಂಧಿಸಿದಂತೆ ಉಡುಪಿ ಜಿಲ್ಲೆಯಲ್ಲಿ 20ನೇ ಶತಮಾನದಲ್ಲಿ ಅಸ್ತಿತ್ವಕ್ಕೆ ಬಂದ ಎಲ್ಲಾ ಸರಕಾರಿ ಹಾಗೂ ಖಾಸಗೀ ಪ್ರಥಮದರ್ಜೆ ಕಾಲೇಜುಗಳನ್ನು ಸಂದರ್ಶಿಸಿ ಆ ಕಾಲೇಜುಗಳು, 20ನೇ ಶತಮಾನದ ಕಾಲಾವಧಿಯಲ್ಲಿ ಪ್ರಕಟಿಸಿದ ವಾರ್ಷಿಕ ಸಂಚಿಕೆಗಳನ್ನು ಸಂಗ್ರಹಿಸಿ, ಆ ಸಂಚಿಕೆಗಳಲ್ಲಿ ದಾಖಲಾಗಿದ್ದ ವಾರ್ಷಿಕ ವರದಿ ಹಾಗೂ ಲಿಖಿತ ಸಾಹಿತ್ಯ ಚಟುವಟಿಕೆಗಳನ್ನು ವಿಶೇಷವಾಗಿ ಪರಾಮರ್ಶಿಸಿ, ಉನ್ನತ ಶಿಕ್ಷಣಸಂಸ್ಥೆಗಳು ಕಾಲೇಜು ಸಾಹಿತ್ಯಚಟುವಟಿಕೆಗಳಲ್ಲಿ ಸಕ್ರಿಯಗೊಂಡ ಬಗೆಯನ್ನು ಕಂಡುಕೊಳ್ಳಲಾಗಿದೆ. ಈ ಸಕ್ರಿಯತೆಯನ್ನು ವಿಶ್ಲೇಷಿಸುವ ಸಂದರ್ಭದಲ್ಲಿ ವಿವಿಧ ಕಾಲೇಜುಗಳ ಸಾಹಿತ್ಯಚಟುವಟಿಕೆಗಳ ಮೌಲ್ಯಮಾಪನವು ನಡೆಯುವುದರಿಂದ ಈ ಅಧ್ಯಯನದಲ್ಲಿ ಸಾಹಿತ್ಯಚಟುವಟಿಕೆಯಲ್ಲಿ ಗರಿಷ್ಠ ಮಟ್ಟದ ಸಾಹಿತ್ಯ ಚಟುವಟಿಕೆ ಹಾಗೂ ಉತ್ಕೃಷ್ಟ ಮಟ್ಟದ ಸತ್ವಪೂರ್ಣ ಚಟುವಟಿಕೆಯಿಂದಾಗಿ ಮುಂಚೂಣಿಯಲ್ಲಿರುವ ಕಾಲೇಜುಗಳನ್ನು ಗುರುತಿಸಲಾಗಿದೆ. ವಿವಿಧ ಕಾಲೇಜುಗಳ ನಡುವೆ ಹೋಲಿಕೆ ಮತ್ತು ಮೌಲ್ಯಮಾಪನವು ಈ ಅಧ್ಯಯನ ಸಂದರ್ಭದ ಉದ್ದೇಶವಲ್ಲವಾದರೂ ಗರಿಷ್ಠ ಸಂಖ್ಯೆಯ ಮತ್ತು ಉತ್ಕೃಷ್ಟ ಮಟ್ಟದ ಚಟುವಟಿಕೆಗಳೆಂಬ ಎರಡು ಫಲಿತಗಳು ಸಹಜವಾಗಿಯೇ ಈ ಅಧ್ಯಯನ ವಿಧಾನದಲ್ಲಿ ಪ್ರಕಟಗೊಂಡಿರುತ್ತದೆ. ಕಾಲೇಜಿನ ವಾರ್ಷಿಕ ಸಂಚಿಕೆಗಳ ಮೂಲಕವೇ ಸಾಹಿತ್ಯಚಟುವಟಿಕೆಯನ್ನಷ್ಟೇ ಗುರುತಿಸಿ, ಕಾಲೇಜಿನ ಸಾಹಿತ್ಯಚಟುವಟಿಕೆಗಳ ಮೌಲ್ಯಮಾಪನ ಮಾಡದೆ ಈ ಚಟುವಟಿಕೆಯ ಪರಿಣಾಮಗಳನ್ನು ಗುರುತಿಸಬೇಕಾದ ಕಾರಣಕ್ಕಾಗಿ ಕಾಲೇಜುಗಳಿಂದ ಪದವಿ ಪಡೆದು ತೆರಳಿದ ವಿದ್ಯಾರ್ಥಿಗಳು ಮುಂದೆ ತಮ್ಮ ಸಾರ್ವಜನಿಕ ಜೀವನದಲ್ಲಿ ಸಾಹಿತ್ಯಕ್ಷೇತ್ರದೊಂದಿಗೆ ಗುರುತಿಸಿಕೊಂಡ ಬಗೆಯನ್ನು ಸಂಶೋಧಿಸಲಾಗಿದೆ. ಹೀಗೆ ಕಂಡುಕೊಂಡ ವಿದ್ಯಾರ್ಥಿ ತರುಣರ ಸಾಹಿತ್ಯ ಕೊಡುಗೆಗಳನ್ನು ಈ ಅಧ್ಯಯನದ ಸಂದರ್ಭದಲ್ಲಿ 'ಸಾಹಿತ್ಯಕ ಪರಿಣಾಮ'ಗಳು ಎಂದು ಗುರುತಿಸಲಾಗಿದೆ.

ಪ್ರಾಥಮಿಕ ಶಾಲೆಗಳ ಸಾಹಿತ್ಯ ಚಟುವಟಿಕೆಗಳಿಗೆ ಸಂಬಂಧಿಸಿದಂತೆ ಉಡುಪಿ ಜಿಲ್ಲಾ ವ್ಯಾಪ್ತಿಯ ನೂರು (ಖಾಸಗಿ ಹಾಗೂ ಸರಕಾರಿ) ಹಿರಿಯ ಪ್ರಾಥಮಿಕ ಶಾಲೆಗಳ ಮುಖ್ಯಸ್ಥರಿಗೆ 'ಸಿದ್ಧಪ್ರಶ್ನಾವಳಿ'ಯನ್ನು ವಿತರಿಸಿ, ಉತ್ತರ ಪಡೆದುಕೊಂಡು ಉತ್ತರದಲ್ಲಿ ಕಂಡುಕೊಂಡ ದತ್ತ ಮಾಹಿತಿಗಳನ್ನು ಆ ಸಂಸ್ಥೆಯ ಲಿಖಿತ ಸಾಹಿತ್ಯಚಟುವಟಿಕೆಯೊಂದಿಗೆ ತುಲನಾತ್ಮಕವಾಗಿ ಪರಿಶೀಲಿಸಿ, ಆ ಸಂಸ್ಥೆಯು ಸಾಹಿತ್ಯಚಟುವಟಿಕೆಗಳಲ್ಲಿ ತೊಡಗಿಕೊಂಡ ಬಗೆಯನ್ನು ಗುರುತಿಸಲಾಗಿದೆ. ಪ್ರಶ್ನಾವಳಿಯಲ್ಲಿ ಪಡೆದುಕೊಂಡ ದತ್ತ ಮಾಹಿತಿಗಳನ್ನು ಆ ಸಂಸ್ಥೆಗಳಿಂದ ಪ್ರಕಟಗೊಂಡ 'ರಜತ ಮಹೋತ್ಸವ', 'ಅಮೃತ ಮಹೋತ್ಸವ, 'ಸುವರ್ಣ ಮಹೋತ್ಸವ'ದ ಸಂಚಿಕೆಗಳ ವರದಿಯ ವಿವರಗಳೊಂದಿಗೆ ತುಲನಾತ್ಮಕವಾಗಿ ಪರಿಶೀಲಿಸಿ, ಆ ಮೂಲಕ ಸಾಹಿತ್ಯ ಚಟುವಟಿಕೆಗಳ ಕುರಿತಂತೆ ನಿರ್ದಿಷ್ಟ ನಿಲುವನ್ನು ಕಂಡುಕೊಳ್ಳಲಾಗಿದೆ.

ಧಾರ್ಮಿಕ ಸಂಸ್ಥೆಗಳ ಸಾಹಿತ್ಯಚಟುವಟಿಕೆಗಳ ಅವಲೋಕನಕ್ಕಾಗಿ ಆ ಸಂಸ್ಥೆಗಳು ನಿರ್ವಹಿಸಿದ ಸಾಹಿತ್ಯಚಟುವಟಿಕೆಗಳಿಗೆ ಸಂಬಂಧಿಸಿದಂತೆ ಲಿಖಿತ ಪತ್ರಿಕಾ ಆಧಾರಗಳನ್ನು ಸಂಗ್ರಹಿಸಿ, ಆ ಸಾಹಿತ್ಯಚಟುವಟಿಕೆಯ ಸತ್ವವನ್ನು ಗಮನಿಸಲಾಗಿದೆ.

ಸಾಹಿತ್ಯಚಟುವಟಿಕೆಗಳ ನಿರ್ವಾಹಕರ ಅಭಿರುಚಿಯನ್ನು ಲಭ್ಯ ವರದಿಗಳ ಹಿನ್ನೆಲೆಯಿಂದ ಕಂಡುಕೊಳ್ಳಲಾಗಿದೆ. ಧಾರ್ಮಿಕಸಂಸ್ಥೆಗಳು ಧಾರ್ಮಿಕಚಟುವಟಿಕೆಗಳ ಜೊತೆಜೊತೆಗೆ ಸಾಹಿತ್ಯಕ ಚಟುವಟಿಕೆಗಳಿಗೂ ಅಲ್ಲಿಯ ವ್ಯವಸ್ಥಾಪಕರು ಪ್ರಾಮುಖ್ಯವನ್ನು ನೀಡಲು ಕಾರಣಗಳೇನು? ಅವರಿಗೆ ದೊರೆತ ಪ್ರೇರಣೆಗಳೇನು? ಕಾಲಾಂತರದಲ್ಲಿ ಈ ಸಾಹಿತ್ಯ ಚಟುವಟಿಕೆಗಳ ಪರಿಣಾಮಗಳು ಏನು ಎಂಬ ವಿಚಾರವನ್ನು ಧರ್ಮದರ್ಶಿಗಳೊಡನೆ ನಡೆಸಿದ ನೇರ ಮುಖಾಮುಖಿಯ ಚರ್ಚೆಯ ಮೂಲಕ ಸಂಗ್ರಹಿಸಲಾಗಿದೆ ಹೀಗೆ ಸಂಗ್ರಹಿಸಲಾದ ವಿಚಾರಗಳ ವಿಶ್ಲೇಷಣೆಯಿಂದ ನಿರ್ದಿಷ್ಟ ಫಲಿತಗಳನ್ನು ಈ ಅಧ್ಯಯನದಲ್ಲಿ ಕಂಡುಕೊಳ್ಳಲಾಗಿದೆ.

ಸಾಹಿತ್ಯ ಚಟುವಟಿಕೆಗಳನ್ನು ನಿರ್ವಹಿಸುವುದಕ್ಕಾಗಿಯೇ ಅಸ್ತಿತ್ವಕ್ಕೆ ಬಂದ ಸಾಹಿತ್ಯಕ ಸಂಸ್ಥೆಗಳ ಪದಾಧಿಕಾರಿಗಳ ಮೌಖಿಕ ಸಂದರ್ಶನ ಮತ್ತು ಲಿಖಿತ ಮಾಹಿತಿಗಳಿಂದ ಇಂತಹ ಸಂಸ್ಥೆಗಳ ಕೊಡುಗೆಗಳ ಕುರಿತು ಅವಲೋಕಿಸಲಾಗಿದೆ. ಪ್ರಸ್ತುತ ವರ್ತಮಾನದ ಜನಸಂವೇದನೆಗೆ ಇಂತಹ ಸಂಘಟನೆಗಳು ಪ್ರತಿಕ್ರಿಯಿಸುವ ಬಗೆಯನ್ನು ಇವುಗಳ ಚಟುವಟಿಕೆಯ ಹಿನ್ನೆಲೆಯಿಂದ ಕಂಡುಕೊಳ್ಳಲಾಗಿದೆ. ನಾಲ್ಕು ಮಾಧ್ಯಮಗಳಲ್ಲಿ ನಿರಂತರವಾಗಿ ಪ್ರವಹಿಸಿದ ಸಾಹಿತ್ಯಚಟುವಟಿಕೆಯ ಸತ್ವ ಮತ್ತು ಪರಿಣಾಮಗಳನ್ನು ವಿಶ್ಲೇಷಣಾತ್ಮಕವಾಗಿ ಚರ್ಚಿಸಿ, 21ನೇ ಶತಮಾನದಲ್ಲಿ ಕನ್ನಡ ಸಾಹಿತ್ಯಚಟುವಟಿಕೆಯ ದಾರಿ ಹೇಗಿದೆ? ಮತ್ತು ಆ ದಾರಿ ಏಕೆ ಹಾಗಿದೆ? ಅದರ ಮುಂದಿನ ಅಡೆತಡೆಗಳೇನು ಎನ್ನುವುದನ್ನು ಈ ಅಧ್ಯಯನ ಫಲಿತದಲ್ಲಿ ಗುರುತಿಸಲಾಗಿದೆ.

**ಸಂಶೋಧನ ಸಾಹಿತ್ಯ ಸಮೀಕ್ಷೆ:**

ಪ್ರಸ್ತುತ ಅಧ್ಯಯನಕ್ಕೆ ಆಯ್ಕೆ ಮಾಡಿಕೊಂಡ ವಿಷಯಕ್ಕೆ ಸಂಬಂಧಿಸಿದಂತೆ ಈ ವಿಷಯದಲ್ಲಿ ಈ ತನಕ ಯಾವ ಸಂಶೋಧನಾತ್ಮಕ ಅಧ್ಯಯನವೂ ನಡೆದಿಲ್ಲ. ಎರಡು ಶತಮಾನದ ನಡುವೆ (20 ಹಾಗೂ 21ನೇ ಶತಮಾನ) ಪರಸ್ಪರ ಸಂಬಂಧವು ಸಹಜವೇ ಆಗಿದ್ದು, ಹಿಂದಿನ ಶತಮಾನದ ಹೆಜ್ಜೆಗುರುತುಗಳನ್ನು ಅನುಸರಿಸಿಕೊಂಡೇ ಮುಂದಿನ ಶತಮಾನದತ್ತ ಹೆಜ್ಜೆ ಇರಿಸಬೇಕಾದದ್ದು ಕಾಲಧರ್ಮವಾಗಿದೆ ಎಂದು ಮನಗಂಡು, ಸಂಶೋಧನಾತ್ಮಕ ಅಧ್ಯಯನಕ್ಕಾಗಿ **'ಉಡುಪಿ ಜಿಲ್ಲೆಯ ಶತಮಾನದ ಸಾಹಿತ್ಯಚಟುವಟಿಕೆಗಳ ಪ್ರಕ್ರಿಯೆ ಮತ್ತು ಪರಿಣಾಮಗಳು'** ಎಂಬ ವಿಷಯವನ್ನು ಆಯ್ಕೆ ಮಾಡಿಕೊಳ್ಳಲಾಗಿದೆ. ಒಟ್ಟಾರೆಯಾಗಿ ಅವಿಭಜಿತ ದ.ಕ. ಜಿಲ್ಲೆಯ ಪತ್ರಿಕೋದ್ಯಮದ ಕುರಿತಂತೆ, ಸಣ್ಣಕಥೆಗಳ ಕುರಿತಂತೆ, ಜನಪದ ಅಧ್ಯಯನದ ಕುರಿತಂತೆ ಕೆಲವು ಸಂಶೋಧನಾತ್ಮಕ ಅಧ್ಯಯನಗಳು, ಬಿಡಿ ಬಿಡಿ ಸಮೀಕ್ಷಾ ಬರಹಗಳು, ಲೇಖನಗಳು ಪ್ರಕಟಗೊಂಡಿರುತ್ತವೆ. ಆದರೆ ಉಡುಪಿ ಜಿಲ್ಲೆಯ ವ್ಯಾಪ್ತಿಗೊಳಪಟ್ಟು ನೂರು ವರ್ಷ ಅವಧಿಯ **ಶತಮಾನದ ಸಮಗ್ರ ಸಾಹಿತ್ಯ ಚಟುವಟಿಕೆಗಳ** ಕುರಿತಂತೆಯಾಗಲೀ, ಚಟುವಟಿಕೆಗಳನ್ನು ನಿರ್ವಹಿಸುವ ಸಂಘ, ಸಂಸ್ಥೆಗಳ ಕುರಿತಂತೆ ಜಿಲ್ಲಾವ್ಯಾಪ್ತಿಯೊಳಗೆ ಪ್ರಕಟಗೊಂಡ ಪತ್ರಿಕೆಗಳ ಸಾಹಿತ್ಯ ಬರಹಗಳ ವಿಶ್ಲೇಷಣೆಯ ಹಿನ್ನೆಲೆಯಲ್ಲಿ ಸಂಶೋಧನಾತ್ಮಕ ಅಧ್ಯಯನಗಳು ಈ ತನಕ ನಡೆದಿರುವುದಿಲ್ಲ.

ಶತಮಾನದ ಆಗುಹೋಗುಗಳನ್ನು ಕಣ್ಣಾರೆ ಕಂಡು ಅನುಭವವನ್ನು ಪಡೆದ ವಯೋವೃದ್ಧರು ಕಾಲವಶರಾಗುತ್ತಿರುವ ಕಾರಣ, ಮೌಖಿಕವಾಗಿ ಪಡೆಯುವ ನೈಜ ಅನುಭವಗಳ ಮಾಹಿತಿಯಿಂದ ಸಂಶೋಧನಾತ್ಮಕ ಜಿಜ್ಞಾಸುಗಳು ವಂಚಿತರಾಗುತ್ತಿದ್ದಾರೆ. ಮೌಖಿಕ ಮಾಹಿತಿ ನೀಡಲು ಇನ್ನೂ ಶಕ್ತರಾದ ಸೀಮಿತ ಸಂಖ್ಯೆಯ ವಯೋವೃದ್ಧ ಅನುಭವಿಗಳ

ಬಾಯ್ದರೆ ಮಾಹಿತಿಗಳನ್ನು ಸಂಶೋಧನಾತ್ಮಕ ಜಿಜ್ಞಾಸುಗಳು ಸಂಶೋಧನಾ ಆಕರಗಳನ್ನಾಗಿ ಸಮರ್ಪಕವಾಗಿ ದುಡಿಸಿಕೊಳ್ಳಬೇಕಾಗಿದೆ.

ಅವಿಭಜಿತ ದಕ್ಷಿಣ ಕನ್ನಡ ಜಿಲ್ಲೆಯ ವ್ಯಾಪ್ತಿಯಲ್ಲಿ ನಡೆಸಿದ ಯಾವುದೇ ಬಿಡಿ ಲೇಖನ ಅಥವಾ ಸಂಶೋಧನಾತ್ಮಕ ಅಧ್ಯಯನದ ಸಂದರ್ಭದಲ್ಲಿ ಯಾರೊಬ್ಬರೂ ಈ ತನಕ ಉಡುಪಿ ಜಿಲ್ಲೆಯ ಕುಂದಾಪುರ ಮತ್ತು ಕಾರ್ಕಳ ಪರಿಸರದ 'ಸಾಹಿತ್ಯ ಚಟುವಟಿಕೆಗಳಿಗೆ' ಸಂಬಂಧಪಟ್ಟಂತೆ ಸಂಶೋಧನಾತ್ಮಕ ಅಧ್ಯಯನವನ್ನು ನಡೆಸಿರುವುದಿಲ್ಲ. ಉಡುಪಿ ಜಿಲ್ಲೆಯ ಕುಂದಾಪುರ ತಾಲೂಕಿನ ಎರಡು ಪ್ರಮುಖ ಕಾಲೇಜುಗಳಾದ ಭಂಡಾರ್‌ಕಾರ್ಸ್ ಕಾಲೇಜು ಮತ್ತು ಬಸ್ರೂರಿನ ಶ್ರೀ ಶಾರದಾ ಕಾಲೇಜಿನ ವಿದ್ಯಾರ್ಥಿಗಳು ಮತ್ತು ಉಪನ್ಯಾಸಕರಿಂದ ಕುಂದಾಪುರ ಪರಿಸರದ ಸಾಹಿತ್ಯ ಚಟುವಟಿಕೆಗಳಲ್ಲಿ ತೊಡಗಿಸಿಕೊಂಡ ವ್ಯಕ್ತಿ/ಸಂಸ್ಥೆ/ಸಂಘಟನೆಗಳ ಕುರಿತಂತೆ ಪಾರ್ಶ್ವಿಕವಾಗಿ 'ಮಾಹಿತಿಯ' ಸಂಗ್ರಹವು ನಡೆದಿರುವುದಾದರೂ ಇವುಗಳ ಕುರಿತಾಗಿ ಸಮಗ್ರ ಅಧ್ಯಯನವು ನಡೆದಿರುವುದು ಕಂಡುಬರುವುದಿಲ್ಲ. ಸಾಹಿತ್ಯ ಚಟುವಟಿಕೆಗಳನ್ನು ನಿರ್ವಹಿಸುವುದಕ್ಕಾಗಿಯೇ ಜಿಲ್ಲಾ ಕೇಂದ್ರವಾದ ಉಡುಪಿಗಿಂತ ಒಂಬತ್ತು ವರ್ಷ ಮೊದಲಾಗಿ ಕುಂದಾಪುರದಲ್ಲಿ ಸಾಹಿತ್ಯಾಸಕ್ತ ಸಹೃದಯರು ಸಾಹಿತ್ಯ ಸಂಘವನ್ನು ಅಸ್ತಿತ್ವಕ್ಕೆ ತಂದ ಬಗೆಗೆ, ದಾಖಲೆಗಳು ಲಭ್ಯವಿದೆಯಾದರೂ ಈ ಪರಿಸರ ಪ್ರದೇಶದ ಸಾಹಿತ್ಯ ಚಟುವಟಿಕೆಗಳ ಕುರಿತಾಗಿ ಸಂಶೋಧನಾತ್ಮಕ ಅಧ್ಯಯನಗಳು ಈ ತನಕ ನಡೆದಿರುವುದಿಲ್ಲ. ಆದರೆ ಈ ಅಧ್ಯಯನಕ್ಕೆ ಅವಶ್ಯವಾಗಿ ಬೇಕಾಗುವ ಕೆಲವು ಬಿಡಿ ಲೇಖನ ಮತ್ತು ಕೃತಿಗಳನ್ನು ಸ್ಥಳೀಯ ಕಾಲೇಜುಗಳು ಪ್ರಕಟಿಸಿವೆ ಎನ್ನುವುದಕ್ಕೆ ಎರಡೂ ಕಾಲೇಜಿನಿಂದ ಪ್ರಕಟಗೊಂಡ ರಜತ ಮಹೋತ್ಸವದ ಸಂಚಿಕೆಗಳು (ಭಂಡಾರ್ಕಾರ್ಸ್ ಕಾಲೇಜಿನ 'ಬೆಳ್ಳಿ ಮಿನುಗು' ಶಾರದಾ ಕಾಲೇಜಿನ –'ಬಸ್ರೂರು ಒಂದು ಅಧ್ಯಯನ') ಆಧಾರವನ್ನೊದಗಿಸುತ್ತವೆ.

ಕಾರ್ಕಳ ತಾಲೂಕಿನ ಸಮಗ್ರ ಇತಿಹಾಸ, ಸಂಸ್ಕೃತಿ–ಸಾಹಿತ್ಯದ ಕುರಿತಂತೆ ಅನೇಕ ಹೊಸ ವಿಚಾರಗಳನ್ನು ಅಭಿವ್ಯಂಜಿಸುವ ಕೃತಿಯೊಂದು ಅಲ್ಲಿಯ ಕಾಲೇಜಿನ ರಜತಮಹೋತ್ಸವದ ಸಂದರ್ಭದಲ್ಲಿ 'ಕಾರ್ಕಳ ಒಂದು ಪ್ರಾದೇಶಿಕ ಅಧ್ಯಯನ' ಎಂಬ ಹೆಸರಿನಲ್ಲಿ ಪ್ರಕಟಗೊಂಡಿದ್ದು, ಆ ಕೃತಿಯಲ್ಲಿ ಕಾಲೇಜಿನ ಕನ್ನಡ ಉಪನ್ಯಾಸಕರಾಗಿದ್ದ ಪ್ರೊ. ಎಂ. ರಾಮಚಂದ್ರರು ಕಾರ್ಕಳ ತಾಲೂಕಿನ ಸಾಹಿತ್ಯ ಚಟುವಟಿಕೆಗಳಲ್ಲಿ ಮುಂಚೂಣಿಯಲ್ಲಿರುವ ಕೆಲವು ವೇದಿಕೆಗಳನ್ನು ಉಲ್ಲೇಖಿಸಿರುವರೇ ಹೊರತು ಆ ವೇದಿಕೆಗಳ ಸ್ವರೂಪ, ಅವರ ಕಾರ್ಯಚಟುವಟಿಕೆಗಳ ವೈಶಿಷ್ಟ್ಯ, ಮೌಲ್ಯಮಾಪನದ ಕುರಿತು ಯಾವುದೇ ವಿವರಗಳು ಆ ಕೃತಿಯಲ್ಲೂ ಲಭ್ಯವಾಗಿಲ್ಲ.

ಜಿಲ್ಲಾ ಕೇಂದ್ರದಲ್ಲಿ ಕಾರ್ಯನಿರ್ವಹಿಸುತ್ತಿರುವ ಈಗಾಗಲೇ 65 ಶೈಕ್ಷಣಿಕ ವರ್ಷದ ಇತಿಹಾಸವುಳ್ಳ ಕಾಲೇಜಾಗಿ ಸಾಹಿತ್ಯ ಚಟುವಟಿಕೆಗಳಿಂದ ಗುರುತಿಸಿಕೊಂಡ ಎಂ.ಜಿ.ಎಂ. ಕಾಲೇಜು, ಸಂಶೋಧನ ಚಟುವಟಿಕೆಗಳಿಂದ ವಿಶ್ವವಿದ್ಯಾನಿಲಯ ಮಟ್ಟದಲ್ಲಿ ಮನ್ನಣೆಗೆ ಪಾತ್ರವಾಗಿರುವುದು ನಿಜವಾದರೂ ಉಡುಪಿ ಪರಿಸರ ವ್ಯಾಪ್ತಿಯಲ್ಲಿ ಸಾಹಿತ್ಯಚಟುವಟಿಕೆಗಳನ್ನು ನಿರ್ವಹಿಸುವ ಯಾವುದೇ ಸಂಘ/ಸಂಸ್ಥೆ/ವೇದಿಕೆಗಳ ಕುರಿತು ವಿಸ್ತೃತವಾಗಿ ಚರ್ಚಿಸಿದ ಯಾವುದೇ ದಾಖಲೆಗಳು ಅಲ್ಲಿಯ ಲಭ್ಯ ಕೃತಿಗಳಲ್ಲಿ ಕಂಡುಬರುವುದಿಲ್ಲ. ಉಡುಪಿ ಜಿಲ್ಲಾ ವ್ಯಾಪ್ತಿಯ ಪತ್ರಿಕೆಗಳ ಕುರಿತಂತೆ, ರಂಗಭೂಮಿಯ ಕುರಿತಂತೆ ಸಂಶೋಧನ

ಪ್ರಬಂಧಗಳು ಈಗಾಗಲೇ ಪ್ರಕಟಗೊಂಡಿವೆಯಾದರೂ ಈ ವ್ಯಾಪ್ತಿಯಲ್ಲಿ ಪ್ರಕಟಗೊಂಡ ಪತ್ರಿಕೆಗಳು 'ಸಾಹಿತ್ಯ ವೇದಿಕೆ'ಯಾಗಿ ದುಡಿದ ಬಗೆ ಹೇಗೆ ಎಂಬ ಅಧ್ಯಯನಗಳು ಈತನಕವೂ ನಡೆದಿರುವುದಿಲ್ಲ. ಆದರೆ ಈ ಕುರಿತಂತೆ ಕೇವಲ ಮೇಲ್ಮಟ್ಟದ ಮಾಹಿತಿಯನ್ನಷ್ಟೇ ಒದಗಿಸುವ ಲೇಖನಗಳು ಸಾಹಿತ್ಯ ಸಮ್ಮೇಳನದ ಸಂದರ್ಭದಲ್ಲಿ ಬಿಡುಗಡೆಗೊಂಡ ಸಂಚಿಕೆಗಳಲ್ಲಿ, ಕಾಲೇಜು ವಾರ್ಷಿಕ ಸಂಚಿಕೆಗಳಲ್ಲಿ ಪ್ರಕಟವಾಗಿರುವ ದಾಖಲೆಗಳು ಅಲ್ಲಲ್ಲಿ ಲಭ್ಯವಾಗುತ್ತಿವೆ.

ರಾಜಾಶ್ರಯದಿಂದ ದೂರವಾದ ಸಾಹಿತ್ಯ ಚಟುವಟಿಕೆಗಳಿಗೆ ಸಾಹಿತ್ಯ ಸಂಘಟನೆಗಳು ಆಶ್ರಯವೊದಗಿಸಿ, ಸಾಹಿತ್ಯಚಟುವಟಿಕೆಯನ್ನು ಜನರ ಬಳಿಗೊಯ್ದ ಸಂಘಟಕರ ಕುರಿತಂತೆ ಮಾಹಿತಿಗಳು ಕೆಲವೊಂದು ಬಿಡಿ ಬರಹಗಳಲ್ಲಿ ಲಭ್ಯವಾಗುತ್ತವೆಯೇ ಹೊರತು, ಈ ಚಟುವಟಿಕೆಗಳನ್ನು ಸಂಶೋಧನಾತ್ಮಕವಾಗಿ ವಿಶ್ಲೇಷಿಸುವ ಯಾವುದೇ ಪ್ರಬಂಧಗಳು ಈ ತನಕ ಸಿದ್ಧಗೊಂಡಿರುವುದಿಲ್ಲ.

ಒಟ್ಟಿನಲ್ಲಿ ಮಾಹಿತಿ ಪ್ರಧಾನವಾದ ಸಮೀಕ್ಷಾ ಮಾದರಿಯ ಬಿಡಿ ಲೇಖನ-ಕೃತಿಗಳು ಈ ಕ್ಷೇತ್ರದಲ್ಲಿ ಸಾಕಷ್ಟು ಬಂದಿವೆಯಾದರೂ ಸಂಶೋಧನಾತ್ಮಕ ಹಿನ್ನೆಲೆಯಲ್ಲಿ ಯಾವುದೇ ಅಧ್ಯಯನಗಳು ಈ ತನಕ ನಡೆದಿರುವುದಿಲ್ಲ. ಜಿಲ್ಲೆಯ ನೂರು ವರ್ಷದ ಸಾಂಸ್ಕೃತಿಕ ಇತಿಹಾಸದ ದಾಖಲೆ ಎಂಬ ನೆಲೆಯಲ್ಲಿ ಈ ಚಟುವಟಿಕೆಗಳ ಪ್ರಕ್ರಿಯೆಗಳ ಹಿಂದಿನ ಕಾರಣಗಳನ್ನು, ಪ್ರೇರಣೆಗಳನ್ನು ಶೋಧಿಸುವ ವಿಸ್ತೃತ, ವಿಶ್ಲೇಷಣಾತ್ಮಕ ಸಂಪ್ರಬಂಧವು ಚಾರಿತ್ರಿಕವಾಗಿ, ಸಾಂಸ್ಕೃತಿಕವಾಗಿ ಸಮಾಜಶಾಸ್ತ್ರೀಯ ದೃಷ್ಟಿಯಿಂದಲೂ ಮೌಲಿಕವಾಗುಳಿಯುತ್ತವೆ ಎನ್ನುವುದು ಅಧ್ಯಯನಕಾರನ ನಿಲುವು. ಈ ಸಂಶೋಧನಾ ವಿಷಯಕ್ಕೆ ಸಂಬಂಧಿಸಿದಂತೆ ಪ್ರಕಟಗೊಂಡ ಕೇವಲ ಮಾಹಿತಿ ಪ್ರಧಾನ ಮತ್ತು ಸಮೀಕ್ಷಾ ಪ್ರಧಾನವಾದ ಕೃತಿಗಳ ಸುದೀರ್ಘ ಪಟ್ಟಿಯನ್ನು ಹೀಗೆ ಉಲ್ಲೇಖಿಸಬಹುದಾಗಿದೆ.

**ಪತ್ರಿಕೋದ್ಯಮದ ಕುರಿತಂತೆ:**

| **ಮಾಹಿತಿ ಪ್ರಧಾನ** | **ಸಮೀಕ್ಷಾ ಪ್ರಧಾನ** |
|---|---|
| 1. ಉಡುಪಿ ಜಿಲ್ಲೆಯ ಪತ್ರಿಕೆಗಳು ಒಂದು ಸಮಗ್ರ ನೋಟ<br>ಲೇಖಕ: ಸಿದ್ಧಾಪುರ ವಾಸುದೇವ ಭಟ್ಟ<br>ಕೃತಿ: ಮೋಹನ ಮುರಳಿ ಸಂ: ಡಾ. ಡಿ.ಆರ್. ಪಾಂಡುರಂಗ, ಡಾ. ಪಾದೇಕಲ್ಲು ವಿಷ್ಣು ಭಟ್ಟ-2007<br>ಪ್ರಕಟಣೆ: ಸ್ವಾಗತ ಸಮಿತಿ, 74ನೇ ಅಖಿಲ ಭಾರತ ಕನ್ನಡ ಸಾಹಿತ್ಯ ಸಮ್ಮೇಳನ, ಉಡುಪಿ<br>2. ಕನ್ನಡ ಪತ್ರಿಕಾ ಸೂಚಿ:<br>ಸಂಪಾದಕರು: ಡಾ. ಶ್ರೀನಿವಾಸ ಹಾವನೂರ<br>ಸಂಕಲನಕಾರರು: ಮೋಹನ ಗ. ಹೆಗಡೆ.<br>ಪಂಡಾರಿ ಚೆಲ್ಲಪ್ಪನ್, ಮೊದಲ ಮುದ್ರಣ: 2004<br>ಪ್ರಕಟಣೆ: ಪ್ರಸಾರಾಂಗ ಮೈಸೂರು ವಿ.ವಿ. | 1. ಜಿಲ್ಲೆಯ ಪತ್ರಿಕೋದ್ಯಮ ವಿಕಾಸ-ಲೇಖನ<br>ಲೇಖಕ: ನಿರಂಜನ ವಾನಳ್ಳಿ.<br>ಕೃತಿ: ದ.ಕ. ಜಿಲ್ಲಾ ಆರನೆಯ ಕನ್ನಡ ಸಾಹಿತ್ಯ ಸಮ್ಮೇಳನ, ಕುಂದಾಪುರ ಇದರ ನೆನಪಿನ ಹೊತ್ತಗೆ-1993, ಸಂಪಾದಕರು: ಗಾಯತ್ರಿ ನಾವಡ.<br>2. ಪತ್ರಿಕೆಗಳಲ್ಲಿ ಸಮಕಾಲೀನತೆ:<br>ಸಂಪಾದಕರು: ಪ್ರೊ. ಕೆ. ಅಭಯ ಕುಮಾರ್.<br>ಪ್ರಕಟಣೆ: ಕನ್ನಡ ಅಧ್ಯಯನ ವಿಭಾಗ, ಮಂಗಳೂರು ವಿ.ವಿ. ಮೊ.ಮು. 2006 |

| | |
|---|---|
| 3. ಕರಾವಳಿಯ ಪತ್ರಿಕೋದ್ಯಮದ ನಡೆ:<br>ಸಂ: ಡಾ. ಮೋಹನ್ ಆಳ್ವ ಎಂ.,<br>ಲೇಖಕ: ಬಿ. ರವೀಂದ್ರ ಶೆಟ್ಟಿ.<br>ಕೃತಿ: ಕರಾವಳಿ ಕರ್ನಾಟಕ<br>ಆಳ್ವಾಸ್ ವಿಶ್ವ ನುಡಿಸಿರಿ ವಿರಾಸತ್–2013ರ ಸಂಪುಟ | 3. ಉಡುಪಿಯಲ್ಲಿ ಪತ್ರಿಕೋದ್ಯಮ–ಲೇಖನ.<br>ಕೃತಿ: ಶ್ರೀ ಪೂರ್ಣಪ್ರಜ್ಞ ಸಂಧ್ಯಾಕಾಲೇಜು, ಉಡುಪಿ, ಮ್ಯಾಗಸಿನ್– 1994–95<br>ಪ್ರ.ಸಂ: ಪ್ರೊ. ರಾಧಾಕೃಷ್ಣ ಆಚಾರ್ಯ.<br>4. ಅಷ್ಟಮ: ದ.ಕ. ಜಿಲ್ಲಾ ಎಂಟನೆಯ ಕನ್ನಡ ಸಹಿತ್ಯ ಸಮ್ಮೇಳನ, ಉಡುಪಿ– 1995, ಪ್ರಕಾಶಕರು: ಸ್ವಾಗತ ಸಮಿತಿ, ದ.ಕ. ಜಿಲ್ಲಾ 8ನೇ ಕನ್ನಡ ಸಾಹಿತ್ಯ ಸಮ್ಮೇಳನ, ಪ್ರ.ಸಂ. ಡಾ. ಉಪ್ಪಂಗಳ ರಾಮ ಭಟ್ಟ |
| **ಧಾರ್ಮಿಕ ಸಂಸ್ಥೆಗಳಿಗೆ ಸಂಬಂಧಿಸಿ:** | |
| 1. ದಕ್ಷಿಣದ ಸಿರಿನಾಡು:<br>ಅವಿಭಜಿತ ದ.ಕ. ಜಿಲ್ಲೆಯ ಪ್ರವಾಸ ಕಥನ<br>ಲೇ: ಡಾ. ಕೆ. ಅನಂತರಾಮು.<br>ಪ್ರ: ಅನಂತ ಪ್ರಕಾಶನ, ಮೈಸೂರು–1997<br>2. ನಮ್ಮ ದೇವಾಲಯಗಳು: ವಿವಿಧ ಲೇಖಕರಿಂದ<br>ಕೃತಿ: ಕುಂದದರ್ಶನ,<br>ಸಂಪಾದಕರು: ಆರ್. ರಾಮದೇವ ಶೆಣೈ.<br>ಪ್ರಕಟಣೆ: 1977<br>3. ದಕ್ಷಿಣ ಕನ್ನಡದ ದೇವಾಲಯಗಳು:<br>ಸಂ: ಡಾ. ಪಿ.ಎನ್. ನರಸಿಂಹಮೂರ್ತಿ, ಪ್ರೊ. ಮುರಳೀಧರ ಉಪಾಧ್ಯ, ಹಿರಿಯಡ್ಕ, ಪ್ರಕಾಶಕರು: ಶ್ರೀ ಜನಾರ್ದನ ಮಹಾಕಾಳಿ ದೇವಸ್ಥಾನ, ಅಂಬಲಪಾಡಿ, ಉಡುಪಿ. ಮೊ.ಮು. 2000 | 1. ಸಮಾಜ ಸೇವೆಯ ಮಾಧ್ಯಮಗಳಾಗಿ ದೇವಾಲಯಗಳು– ಲೇಖನ<br>ಲೇ: ಡಿ. ವೀರೇಂದ್ರ ಹೆಗ್ಗಡೆ.<br>ಕೃತಿ: 'ಪೊಲಿ' ಸಂ: ಮುಕುಂದ ಪ್ರಭು<br>ಮೊ.ಮು. 2000<br>2. ದಕ್ಷಿಣ ಕನ್ನಡದ ದೇವಾಲಯಗಳು:<br>ಲೇ: ಶ್ರೀ ವಿಶುಕುಮಾರ್.<br>ಕೃತಿ: ಸುದರ್ಶನ–1977<br>ಸಂಪಾದಕರು: ಅಡ್ಯನಡ್ಕ ಕೃಷ್ಣಭಟ್<br>3. ಕುಂದನಾಡಿನ ದೇವಾಲಯಗಳು:<br>ಲೇಖಕ: ಉಪ್ಪುಂದ ಚಂದ್ರಶೇಖರ ಹೊಳ್ಳ.<br>ಪ್ರಕಟನೆ: ಕುಂದ ಅಧ್ಯಯನ ಕೇಂದ್ರ, ಶಂಕರ ಕಲಾಮಂದಿರ ರಸ್ತೆ, ಉಪ್ಪುಂದ,<br>ಮೊ.ಮು. 2001. |
| **ಸಾಹಿತ್ಯ ಸಂಘಟನೆಗೆ ಸಂಬಂಧಿಸಿ:** | |
| 1. ನೆನಪಿನ ಶಿಲ್ಪಗಳು<br>ಲೇಖಕ: ಶ್ರೀ ವಿಜಯನಾಥ ಶೆಣೈ, ಉಡುಪಿ, ಪ್ರಕಾಶಕರು: ಸಾಧನಾ ಪ್ರಕಾಶನ ಬಳೆಪೇಟೆ, ಬೆಂಗಳೂರು.ಮೊ.ಮು. 2010<br>2. ಉಡುಪಿ ಜಿಲ್ಲೆಯ ಸಾಹಿತ್ಯ ಪರಿಚಾರಕರು–ಲೇಖನ<br>ಲೇಖಕ: ಅಂಬಾತನಯ ಮುದ್ರಾಡಿ<br>ಕೃತಿ: ಮೋಹನ ಮುರಳಿ–2007<br>3. ದರ್ಶನ: ಭಂಡಾರ್ಕಾರ್ಸ್ ಕಾಲೇಜು ವಾರ್ಷಿಕ ಸಂಚಿಕೆ. 1997–98, ಗೌ.ಸಂ. ಪ್ರೊ. ಎ.ಸಿ. ತುಂಗ, ಸಂಪಾದಕರು ಡಾ. ಎಚ್.ವಿ. ನರಸಿಂಹಮೂರ್ತಿ, | 1. ಉಡುಪಿಯ ಸಾಂಸ್ಕೃತಿಕ ಕಥನ.<br>ಲೇಖಕ: ನೀ. ಮುರಾರಿ ಬಲ್ಲಾಳ್<br>ಮೊ.ಮು: 1998<br>2. ಅಜಪುರ ಕರ್ನಾಟಕ ಸಂಘ<br>ಲೇ: ಬೈಕಾಡಿ ವೆಂಕಟಕೃಷ್ಣ ರಾವ್.<br>ಸಂ: ಹೆರಂಜೆ ಕೃಷ್ಣ ಭಟ್. ಮೊ.ಮು. 1998<br>3. ಕೋಟೇಶ್ವರ ಒಂದು ಅಧ್ಯಯನ, (ಪುರಾಣ ಇತಿಹಾಸ, ಸಾಹಿತ್ಯ ಸಂಸ್ಕೃತಿಗಳ ಅಧ್ಯಯನ, ಲೇ: ಡಾ. ಕೆ.ಎಸ್. ಎನ್. ಉಡುಪ, ಸುದರ್ಶನ ಪ್ರಕಾಶನ ಸುಬ್ರಹ್ಮಣ್ಯ, ದ.ಕ. ಮೊ.ಮು. 2001 |
| **ರಂಗ ಚಟುವಟಿಕೆಗಳಿಗೆ ಸಂಬಂಧಿಸಿ:** | |
| 1. ಎದ್ದ ಬಿದ್ದ ತೆರೆಗಳು:<br>ಲೇ: ಬಿ.ಆರ್. ನಾಗೇಶ್,<br>ಮೊ.ಮು. 1995 ಪ್ರ: ಕರ್ನಾಟಕ ಸಂಘ, ಪುತ್ತೂರು. | 1. ರಜತ ಕಲಾಂಜಲಿ<br>ಸಂಪಾದಕ: ಕೆ. ಆನಂದ ಗಾಣಿಗ.<br>ಪ್ರಕಟಣೆ: ರಜತ ಮಹೋತ್ಸವ ಸಮಿತಿ, ರಂಗಭೂಮಿ.<br>ಮೊ.ಮು. 1990 |

| | |
|---|---|
| 2. ಹುಚ್ಚು ಮನಸ್ಸಿನ ಹತ್ತು ಮುಖಗಳು, ಪರಿಷ್ಕರಿಸಿ, ವಿಸ್ತರಿಸಿದ ಆವೃತ್ತಿ, ಪ್ರಕಾಶಕರು ದೀಪಕ್ ಎಸ್. ಶಾ, ಎಸ್.ಬಿ.ಎಸ್. ಪಬ್ಲಿಷರ್ಸ್ ಮತ್ತು ಡಿಸ್ಟ್ರಿಬ್ಯೂಟರ್ಸ್ ಪರವಾಗಿ, 14ನೇ ಮುದ್ರಣ, 2011 | 2. ರಜತರಂಗ: ಸಾಂಸ್ಕೃತಿಕ ಸ್ಮೃತಿ ಸಂಚಿಕೆ, ಪ್ರಕಾಶನ ಮತ್ತು ವ್ಯವಸ್ಥಾಪನಾ ಸಂಪಾದಕತ್ವ ಜಯಂತಿ ಎಂ. ಆಚಾರ್ಯ, ವ್ಯಾಸ ಪ್ರಕಾಶನ, ಚಿಟ್ಪಾಡಿ, ಸಂಪುಟ–1, ಸಂಚಿಕೆ–1, 1987 |

## ಅಧ್ಯಯನದ ಮೇರೆಗಳು

ಜಿಲ್ಲಾ ವ್ಯಾಪ್ತಿಯ ಸಾಹಿತ್ಯ ಚಟುವಟಿಕೆಗಳನ್ನಷ್ಟೇ ಕೇಂದ್ರೀಕರಿಸಿ ನಡೆಸಿದ ಈ ಅಧ್ಯಯನವು ಈ ಕೆಳಗಿನ ಕೆಲವು ಮಿತಿಗಳಿಂದ ಕೂಡಿದೆ ಮತ್ತು ಮಿತಿಗಳಿಗೆ ಕಾರಣಗಳನ್ನು ಸಕಾರಣಗಳೊಂದಿಗೆ ವಿವರಿಸಲಾಗಿದೆ. ಮೊದಲನೆಯದಾಗಿ ಸಾಹಿತ್ಯ ಚಟುವಟಿಕೆಗಳ ಜೊತೆಜೊತೆಯಲ್ಲಿಯೇ ನಡೆದು ಬಂದ ರಂಗ(ನಾಟಕ)ಪ್ರಯೋಗ–ಪ್ರದರ್ಶನ ಚಟುವಟಿಕೆಗಳನ್ನು ಈ ಅಧ್ಯಯನವ್ಯಾಪ್ತಿಯಿಂದ ಹೊರಗಿರಿಸಲಾಗಿದೆ. ಇದಕ್ಕೆ ಕಾರಣವನ್ನು ವಿಶ್ಲೇಷಿಸುವ ಪೂರ್ವದಲ್ಲಿ ಸಾಹಿತ್ಯಚಟುವಟಿಕೆ ಮತ್ತು ಸಾಂಸ್ಕೃತಿಕಚಟುವಟಿಕೆಯ ವ್ಯತ್ಯಾಸಗಳನ್ನು ಖಚಿತಪಡಿಸಿಕೊಂಡು ತದನಂತರದಲ್ಲೇ 'ನಾಟಕ' ಚಟುವಟಿಕೆಯಂತಹ ಸಾಂಸ್ಕೃತಿಕ ಪ್ರದರ್ಶನ/ಚಟುವಟಿಕೆಗಳನ್ನು ಸಾಹಿತ್ಯ ಚಟುವಟಿಕೆಗಳ ಸಂದರ್ಭದಿಂದ ಪ್ರತ್ಯೇಕಿಸಲು ಕಾರಣಗಳನ್ನು ಕಂಡುಕೊಳ್ಳಬಹುದಾಗಿದೆ.

ರಂಗಚಟುವಟಿಕೆಯು "ಸಾಮೂಹಿಕ ಕಲೆಯಾದ ನಾಟಕವನ್ನು ಜನತೆಯ ಮುಂದಿಡುವ 'ಅಭಿನಯಕ್ಷೇತ್ರ'. ಇದು ರಂಗಭವನದ ಒಂದು ಮುಖ್ಯಾಂಗ. ರಂಗಭೂಮಿ ಎಂಬ ಮಾತಿಗೆ ವಿಶಾಲವಾದ ವ್ಯಾಪ್ತಿ ಇದೆ. ನಾಟಕ, ನಟ, ಪ್ರೇಕ್ಷಕರನ್ನೊಳಗೊಂಡ ಮಹಾಸಂಸ್ಥೆ ಅದು."(ಲೇ: ರಂಗನಾಥ ಎಚ್.ಕೆ., 2011, ಪು.ಸಂ.28) (ನಾಟಕ ಚಟುವಟಿಕೆಗಳ ಸ್ವರೂಪವನ್ನಾಧರಿಸಿ ಅದನ್ನು ಜನಪದ ರಂಗಭೂಮಿ, ವೃತ್ತಿರಂಗಭೂಮಿ, ವಿಲಾಸಿ ರಂಗಭೂಮಿ ಎಂದು ಮೂರು ಪ್ರಭೇದಗಳನ್ನು ಗುರುತಿಸಬಹುದಾಗಿದೆ. ಜಾನಪದ ರಂಗಭೂಮಿಯು ಧಾರ್ಮಿಕವಿಧಿ–ಆಚರಣೆಯ ಭಾಗವಾಗಿ ನಿರ್ದಿಷ್ಟ ಸಂದರ್ಭದಲ್ಲಿ ಪ್ರದರ್ಶನಗೊಳ್ಳುತ್ತದೆ. ಇನ್ನುಳಿದ ಎರಡು ಪ್ರಭೇದಗಳ ಮುಖ್ಯ ಉದ್ದೇಶ ಮನೋರಂಜನೆಯೇ ಆಗಿದೆ. ನಿರ್ದಿಷ್ಟ ಪಠ್ಯವನ್ನು ಆಕರವಾಗಿಸಿಕೊಂಡು ರಂಗದ ಮೇಲೆ ತರುವ ಪ್ರದರ್ಶನ ಅಥವಾ ಪ್ರಯೋಗದಲ್ಲಿ ಅಭಿನಯ ಅಥವಾ ನಟನೆಯೇ ರಂಗಕಲೆಯ ಜೀವಾಳವಾಗಿದೆ. ಶ್ರೇಷ್ಠ ಸಾಹಿತ್ಯಪಠ್ಯವು ರಂಗ ಪ್ರಯೋಗದಲ್ಲಿ ವಿಫಲವಾಗಿರುವ ಸಂದರ್ಭಗಳನ್ನು ಅಲ್ಲಗಳೆಯುವಂತಿಲ್ಲ. ಹಾಗೆಯೇ ಸಾಮಾನ್ಯ ಕಥಾಸಂವಿಧಾನವನ್ನು ಹೊಂದಿದ ಪಠ್ಯವು ಪರಿಣತ ನಟರ ನೈಪುಣ್ಯದಿಂದ ಯಶಸ್ವೀ ಕೃತಿ ಎಂಬ ಹೆಗ್ಗಳಿಕೆಗೂ ಪಾತ್ರವಾಗುವುದುಂಟು.

ಎಲ್ಲಾ ಸಂದರ್ಭದ ಸಾಹಿತ್ಯರಚನೆಯ ಮಾಧ್ಯಮವು ಭಾಷೆಯೇ ಆಗಿದ್ದು, ಭಾಷೆಯ ಮೂಲಕ ಅನಾವರಣಗೊಳ್ಳುವುದು 'ಸಂಸ್ಕೃತಿ' ಸಂಕಥನವಾಗಿದೆ. ಇಂತಹ ಸಂಸ್ಕೃತಿಸಂಕಥನಗಳಲ್ಲಿ ಪ್ರಚುರಪಡಿಸಿದ ಕೃತಿಕಾರನ ಸಂವೇದನೆ, ಮೌಲ್ಯಪ್ರತಿಪಾದನೆ, ಭಾಷೆಯ ಬಳಕೆ, ವರ್ತಮಾನ ವಿದ್ಯಮಾನಕ್ಕೆ ಪ್ರತಿಕ್ರಿಯಿಸಿದ ಬಗೆ ಇವುಗಳ ಕುರಿತಾಗಿ ನಡೆಸುವ ಚರ್ಚೆ, ಉಪನ್ಯಾಸ ಪತ್ರಿಕಾ ಬರಹಗಳು ಸಾಹಿತ್ಯ ಚಟುವಟಿಕೆಗಳು ಎಂದೆನಿಸಿಕೊಳ್ಳುತ್ತದೆ. ಇಂತಹ ಚಟುವಟಿಕೆಗಳ ಮುದ್ರಿತ ಕೃತಿಯು ಪಠ್ಯವಾಗಿ ಅಧ್ಯಯನಕಾರನಿಗೆ ಬಹುಮುಖ್ಯವೇ ಹೊರತು, ಪ್ರದರ್ಶನವಾಗಿ ಈ ಅಧ್ಯಯನಕ್ಕೆ ಪಠ್ಯವು ಅಪ್ರಸ್ತುತವಾಗಿದೆ. ಈ ಕಾರಣದಿಂದ ನಾಟಕ (ಪ್ರಯೋಗ) ಪ್ರದರ್ಶನಗಳನ್ನು ಈ ಅಧ್ಯಯನದಿಂದ ಪ್ರತ್ಯೇಕಿಸಲಾಗಿದೆ. ಅಥವಾ

ಎಲ್ಲಾ ವಿಧದ 'ಸಾಂಸ್ಕೃತಿಕ ಕಾರ್ಯಕ್ರಮ'ಗಳನ್ನು ಸಾಹಿತ್ಯ ಚಟುವಟಿಕೆಯ ವ್ಯಾಪ್ತಿಯಿಂದ ಹೊರಗಿರಿಸಲಾಗಿದೆ. ಹಾಗಾಗಿ ಯಕ್ಷಗಾನ/ಬಯಲಾಟ ಪ್ರದರ್ಶನ, ಭರತನಾಟ್ಯ, ಸಂಗೀತ–ಭಜನೆ, ಹರಿಕಥೆ (ಸಪ್ತಾಹ) ಮುಂತಾದ ಸಾಂಸ್ಕೃತಿಕ ಚಟುವಟಿಕೆಗಳನ್ನು ಈ ಸಾಹಿತ್ಯ ವ್ಯಾಪ್ತಿಯೊಳಗೆ ಸೇರಿಸಿಕೊಂಡಿರುವುದಿಲ್ಲ. ಆದರೆ ಈ ಪ್ರದರ್ಶನ ಕಲೆಯ ಕುರಿತಾಗಿ ನಡೆಸುವ ಸಂವಾದ–ಚರ್ಚೆ–ಗೋಷ್ಠಿಯು 'ಸಾಹಿತ್ಯಚಟುವಟಿಕೆ' ಎಂದು ಪರಿಗಣಿತವಾಗಿದೆ.

ಎರಡನೆಯದಾಗಿ ತುಳು ಭಾಷೆ ಮತ್ತು ಸಾಹಿತ್ಯಕ್ಕೆ ಸಂಬಂಧಿಸಿದ ಚಟುವಟಿಕೆಗಳನ್ನು ಈ ಅಧ್ಯಯನ ವ್ಯಾಪ್ತಿಗೆ ಸೇರಿಸಿಕೊಂಡಿರುವುದಿಲ್ಲ. ಪ್ರಾದೇಶಿಕ ಭಾಷೆಯಾಗಿ ವಸಾಹತುಶಾಹಿಯ ಸಂದರ್ಭದಲ್ಲಿ ರಾಷ್ಟ್ರೀಯ ಆಂದೋಲನದ ಒಂದು ಭಾಗವಾಗಿ ತುಳುಭಾಷೆ ಮತ್ತು ಸಾಹಿತ್ಯದ ಚಟುವಟಿಕೆಗಳು 20ನೇ ಶತಮಾನದ ಎರಡನೇ ದಶಕದ ಅನಂತರದಿಂದಲೇ ಆರಂಭವಾಗತೊಡಗಿತು. ಶತಮಾನದ ಮೊದಲ 20 ವರ್ಷಗಳು ಉಡುಪಿ ತಾಲೂಕು ವ್ಯಾಪ್ತಿಯಲ್ಲಾಗಲೀ ಕಾರ್ಕಳ ತಾಲೂಕು ವ್ಯಾಪ್ತಿಯಲ್ಲಾಗಲೀ ಆಗಿನ್ನೂ ಚಟುವಟಿಕೆಗಳು ಆರಂಭಗೊಂಡಿರಲಿಲ್ಲ. 20ನೇ ಶತಮಾನದ 2ನೇ ದಶಕದಲ್ಲಿ ಉಡುಪಿ ಜಿಲ್ಲೆಯಲ್ಲಿ ತುಳು ಚಟುವಟಿಕೆಯಲ್ಲಿ ಮುಂಚೂಣಿಯಲಿದ್ದವರು ಎಸ್. ಯು ಪಣಿಯಾಡಿಯವರು. ಶ್ರೀಯುತರ ಪತ್ರಿಕಾಕೊಡುಗೆಗಳ ಕುರಿತಾಗಿ ಚರ್ಚಿಸಲಾಗಿದೆಯೇ ಹೊರತು, ಅವರು ತುಳುಭಾಷೆಗೆ ಸಂಬಂಧಿಸಿ ನಡೆಸಿದ ಚಟುವಟಿಕೆಗಳನ್ನು ಈ ಅಧ್ಯಯನದಲ್ಲಿ ಸೇರಿಸಿಕೊಂಡಿರುವುದಿಲ್ಲ.

ಮೂರನೆಯದಾಗಿ ಉಡುಪಿ ಜಿಲ್ಲೆಯ ಉತ್ತರ ಭಾಗದ ಇಪ್ಪತ್ತಮೂರು ಗ್ರಾಮ ಪಂಚಾಯತ್ ವ್ಯಾಪ್ತಿಯಲ್ಲಿ ಮತ್ತು ಕುಂದಾಪುರ ತಾಲೂಕಿನಾದ್ಯಂತ ತುಳುಭಾಷೆಯು ಆಡುಭಾಷೆಯಾಗಿ ಪ್ರಯೋಗದಲ್ಲಿಲ್ಲದ ಕಾರಣದಿಂದ ತುಳುಭಾಷೆ ಚಟುವಟಿಕೆಗಳನ್ನು ಈ ಅಧ್ಯಯನದಲ್ಲಿ ಸೇರಿಸಿಕೊಂಡಿರುವುದಿಲ್ಲ.

ತುಳುಭಾಷೆ ಮತ್ತು ಸಾಹಿತ್ಯದ ಕುರಿತಾಗಿ ಮಂಗಳೂರು ವಿಶ್ವವಿದ್ಯಾನಿಲಯದ ಕನ್ನಡ ವಿಭಾಗವು ಸಾಕಷ್ಟು ಅಧ್ಯಯನ–ಸಂಶೋಧನೆ, ಕ್ಷೇತ್ರಕಾರ್ಯ ದಾಖಲಾತಿ ನಡೆಸಿದೆ. ಮತ್ತು ನಡೆಯುತ್ತಲೇ ಇದೆ ಎಂಬ ಕಾರಣಕ್ಕಾಗಿ ಈ ಅಧ್ಯಯನದಲ್ಲಿ ತುಳುಭಾಷೆ–ಸಾಹಿತ್ಯ ಚಟುವಟಿಕೆಯನ್ನು ಅಧ್ಯಯನ ವ್ಯಾಪ್ತಿಯಿಂದ ಹೊರಗಿರಿಸಲಾಗಿದೆ.

**ಆಕರಗಳು:–**

ಈ ಅಧ್ಯಯನವನ್ನು 21ನೇ ಶತಮಾನದ 2ನೇ ದಶಕದಲ್ಲಿ ಕೈಗೆತ್ತಿಕೊಳ್ಳಲಾಗಿದ್ದು, ಪ್ರಸ್ತುತ ಅಧ್ಯಯನಕ್ಕೆ ಅವಶ್ಯವಾಗಿ ಸಂಗ್ರಹಿಸಬೇಕಾದ ಬಾಯ್ದೆರೆ ವಿವರಗಳನ್ನು ಸಂಗ್ರಹಿಸುವ ಅವಕಾಶದಿಂದ ಸಂಶೋಧಕನು ವಂಚಿತನಾಗಿದ್ದಾನೆ. 20ನೇ ಶತಮಾನದ ಎರಡು–ಮೂರನೇ ದಶಕಗಳಲ್ಲಿ ಜನ್ಮತಾಳಿ ರಾಜಕೀಯ, ಸಾಮಾಜಿಕ, ಆಡಳಿತಾತ್ಮಕ ಅನುಭವಗಳಿಂದ ಶ್ರೀಮಂತರಾದ ಅನೇಕ ಸಂಪನ್ಮೂಲ ವ್ಯಕ್ತಿಗಳು ಈಗಾಗಲೇ ಕಾಲವಾಗಿದ್ದಾರೆ. ಅವರುಗಳೆಂದರೆ ಕೋ. ಲ. ಕಾರಂತ, (ಹಿರಿಯ ಶಿಕ್ಷಕರು) ಕೋಟ ಶಿವರಾಮ ಕಾರಂತ, (ಸಾಹಿತಿ ಮತ್ತು ಪತ್ರಿಕೋದ್ಯಮಿ, ಕಲಾತಜ್ಞರು) ಯಡ್ತರೆ ಮಂಜಯ್ಯಶೆಟ್ಟಿ, (ಹಿರಿಯ ರಾಜಕಾರಣಿ) ಎ. ಜೆ. ಅಲ್ಸೆ, ಪಾಂಡೇಶ್ವರ ಗಣಪತಿರಾಯರು, (ಪತ್ರಿಕೋದ್ಯಮಿಗಳು) ಕಂಬದಕೋಣೆ ಸಂಜೀವರಾಯರು. (ನಟರು), ರಾಜಗೋಪಾಲಕೃಷ್ಣರಾಯರು (ಪತ್ರಿಕಾ ಸಂಪಾದಕರು), ವಿ.ಎಸ್. ಕುಡ್ವರು (ಕೈಗಾರಿಕೋದ್ಯಮಿಗಳು), ಕೆ.

ಹೊನ್ನಯ್ಯ ಶೆಟ್ಟಿ (ಪತ್ರಿಕೋದ್ಯಮಿ, ಶಿಕ್ಷಕ), ಕೆ. ಬಿ. ಜಿನರಾಜ ಹೆಗ್ಡೆ (ಹಿರಿಯ ರಾಷ್ಟ್ರೀಯ ಮುಂದಾಳು), ಮಟ್ಟಾರು ವಿಠಲ ಹೆಗ್ಡೆ (ಪತ್ರಿಕೋದ್ಯಮಿ), ಕು. ಶಿ. ಹರಿದಾಸ ಭಟ್ಟ (ಸಾಹಿತ್ಯ ಸಂಘಟಕರು ಮತ್ತು ಪತ್ರಿಕೋಧ್ಯಮಿ) ಈ ಮೊದಲಾದವರು.

**ಸಾಮಗ್ರಿಗಳು:-** ಈ ಅಧ್ಯಯನದಲ್ಲಿ ಪತ್ರಿಕಾ ಚಟುವಟಿಕೆ ಮತ್ತು ಶೈಕ್ಷಣಿಕ ಸಂಸ್ಥೆಗಳಲ್ಲಿ ನಡೆದುಹೋದ ಸಾಹಿತ್ಯ ಚಟುವಟಿಕೆಯ ಕುರಿತಂತೆ ಅಧ್ಯಯನ ನಡೆಸುವುದು ಅವಶ್ಯವಾಗಿದೆ. ಈ ಅಧ್ಯಯನಕ್ಕೆ ಸಂಬಂಧಿಸಿ ಶತಮಾನದ ಮೊದಲ ದಶಕದ ಮತ್ತು ಎರಡು ಮೂರನೇ ದಶಕದ ಕಾಲಾವಧಿಯಲ್ಲಿ ಜಿಲ್ಲೆಯಲ್ಲಿ ಅಸ್ತಿತ್ವದಲ್ಲಿದ್ದ ಪತ್ರಿಕೆಗಳು ತೀರಾ ಜೀರ್ಣಾವಸ್ಥೆಯಲ್ಲಿದ್ದು, ಓದಲಾಗದ ಸ್ಥಿತಿಯಲ್ಲಿವೆ. ಇಂತಹ ಅಧ್ಯಯನಕ್ಕಾಗಿ ಕನಿಷ್ಠ ಒಂದು ದಶಕದ ಮೊದಲೇ ಮುಂದಾಗಿದ್ದಲ್ಲಿ ಹೆಚ್ಚಿನ ಸಂಚಿಕೆಗಳು ಮತ್ತು ಅದಕ್ಕೆ ಸಂಬಂಧಿಸಿದ ಪೂರಕ ಮಾಹಿತಿಗಳು ಲಭ್ಯವಾಗಿ ಅಧ್ಯಯನವು ಇನ್ನಷ್ಟು ನಿಖರವಾಗುತ್ತಿತ್ತೆನ್ನುವುದು ಸಂಶೋಧಕನ ನಿಲುವು. ಶತಮಾನದ ಹಿಂದಿನ ಪತ್ರಿಕೆ ಮತ್ತು 50 ವರ್ಷದ ಹಿಂದಿನ ವರ್ತಮಾನ ಪತ್ರಿಕೆಗಳು ಅಧ್ಯಯನ ಮೌಲ್ಯದ ದೃಷ್ಟಿಯಿಂದ ನಾಡಿನ ಶಾಸನಗಳಷ್ಟೇ ಮಹತ್ವದ್ದಾಗಿವೆ. ಸ್ಥಳೀಯ ಚರಿತ್ರೆಯನ್ನು, ಸ್ಥಳೀಯರ ಸಂವೇದನೆಯನ್ನು ಗ್ರಹಿಸಲು 'ಪತ್ರಿಕೆಗಳು' ಸಾಹಿತ್ಯಚಟುವಟಿಕೆಗಳ ಸ್ವರೂಪದ ಅಧ್ಯಯನಕ್ಕೆ ನೈಜ ಮಾಹಿತಿಯನ್ನು ನೀಡುತ್ತವೆ. ಆದರೆ ಪತ್ರಿಕೆಗಳ ಅಲಭ್ಯತೆಯು ಸಂಶೋಧಕನಿಗೆ ತನ್ನ ಅಧ್ಯಯನದ ದೃಷ್ಟಿಯಿಂದ ದೊಡ್ಡ ನಷ್ಟವೆನ್ನಬೇಕು.

ಈ ಅಧ್ಯಯನ ಶೀರ್ಷಿಕೆಗೆ ಸಂಬಂಧಿಸಿದಂತೆ ಈ ಮೇಲ್ಕಂಡ ಎರಡು ಮಿತಿಗಳನ್ನು ಹೊರತುಪಡಿಸಿದರೆ ಅಧ್ಯಯನ ಸಮಸ್ಯೆಯಲ್ಲಿ ಕಂಡುಕೊಂಡ ಸಂದೇಹ, ಜಿಜ್ಞಾಸೆ, ಪ್ರಶ್ನೆಗಳಿಗೆ ಸಂಬಂಧಿಸಿ ನಿಖರವಾದ ತೀರ್ಮಾನಕ್ಕೆ ಬರಲು ಯಾವ ಅಡ್ಡಿಯೂ ಇಲ್ಲವೆನ್ನಬಹುದಾಗಿದೆ.

**ಸಾಹಿತ್ಯ ಚಟುವಟಿಕೆಯ ಅರ್ಥ ಮತ್ತು ಪ್ರಕ್ರಿಯೆ ಹಾಗೂ ಪರಿಣಾಮದ ವ್ಯಾಪ್ತಿ:**

ಸಂಶೋಧನೆಯ ಶೀರ್ಷಿಕೆಯು ಸಾಹಿತ್ಯ ಚಟುವಟಿಕೆಯ ಕುರಿತಾಗಿದ್ದು, 'ಚಟುವಟಿಕೆಯೆಂದರೇನು'? ಎಂಬ ಪ್ರಶ್ನೆಗೆ ಸ್ಪಷ್ಟವಾದ ವ್ಯಾಖ್ಯಾನ ಅಥವಾ ವಿಶ್ಲೇಷಣೆಯನ್ನು ನೀಡಿಯೇ ತದನಂತರದಲ್ಲಿ ಪ್ರಕ್ರಿಯೆ ಮತ್ತು ಪರಿಣಾಮದ ಕುರಿತಂತೆ ವಿಸ್ತರಿಸುವುದು ಸಮಂಜಸವೆನಿಸುತ್ತದೆ. ಸಾಹಿತ್ಯ ಕೃತಿಯಾಗಿ ರೂಪುತಳೆದ ಒಂದು ಪಠ್ಯವು-ಪ್ರಕಾಶನ ಸಂಸ್ಥೆಯಿಂದಲೋ/ಖಾಸಗಿಯಾಗಿ ಸ್ವತಃ ಲೇಖಕನ ಸ್ವಂತ ಖರ್ಚಿನಿಂದಲೋ ಮುದ್ರಣಗೊಳ್ಳುತ್ತದೆ. ಹೀಗೆ ಮುದ್ರಿತಗೊಂಡ ಕೃತಿಯನ್ನು ಅನೇಕ ಸಹೃದಯರು ತಮ್ಮ ಓದಿನ ಮೂಲಕ ಕಂಡುಕೊಂಡ ಆ ಪಠ್ಯದ ಆಶಯ-ದರ್ಶನ, ನಿರೂಪಣೆ ಇತ್ಯಾದಿಗಳ ಕುರಿತಂತೆ ಸಾಮೂಹಿಕ ಚರ್ಚೆಗಾಗಿ ಒಂದು ವೇದಿಕೆ ನಿರ್ಮಾಣ ಮಾಡಿಕೊಂಡು ಚರ್ಚಿಸಿದಾಗ ಅದು 'ಸಂವಾದ' ಎಂದೋ, 'ವಿಚಾರಗೋಷ್ಠಿ' ಎಂದೋ ಕರೆಯಿಸಿಕೊಳ್ಳುತ್ತದೆ. ಇದನ್ನು ಸಾಹಿತ್ಯ ಚಟುವಟಿಕೆಗಳು ಎಂದು ಕರೆಯಲಾಗುತ್ತದೆ. ಇದನ್ನು ಇನ್ನಷ್ಟು ಸ್ಪಷ್ಟಪಡಿಸುವುದಾದರೆ ಲೇಖಕನೋರ್ವ ಕೃತಿಯೊಂದರ ಮೂಲಕ ಸಮೂಹದ ಆಲೋಚನಾ ಕ್ರಮವನ್ನು ಬದಲಾಯಿಸಲು ಇಲ್ಲವೇ ಪ್ರಜ್ಞೆಯನ್ನು ಜಾಗೃತಗೊಳಿಸಲು ಭಾಷೆಯಲ್ಲಿ ಕಟ್ಟಲಾದ ಕಲಾಕೃತಿಯನ್ನು ಅರ್ಥೈಸಿಕೊಳ್ಳಲು ಸಹೃದಯ ಸಮೂಹವು ಅನುಸರಿಸುವ ವಿವಿಧ ದಾರಿಗಳನ್ನು ಚಟುವಟಿಕೆಗಳು ಎಂಬ ಅರ್ಥದಲ್ಲಿ ಗ್ರಹಿಸಲಾಗಿದೆ. ಈ ಚಟುವಟಿಕೆಗಳ ನಿರ್ವಹಣೆಗಾಗಿ ಶ್ರಮಿಸುವ ಸಹೃದಯ ಸಮೂಹವೇ ಸಂಘಟಕರು ಎಂದು ಗುರುತಿಸಿಕೊಳ್ಳುತ್ತಾರೆ. ಸಾಹಿತ್ಯ

ಕೃತಿಯ ಆಶಯದ ಅನುಸಂಧಾನಕ್ಕಾಗಿ ಕೈಗೊಂಡ ಕ್ರಮಗಳೇ 'ಚಟುವಟಿಕೆಗಳು' ಎಂದು ಒಂದೇ ವಾಕ್ಯದಲ್ಲಿ ನಿರೂಪಿಸಬಹುದಾಗಿದೆ.

ಸಾಮಾನ್ಯವಾಗಿ ಶೈಕ್ಷಣಿಕ ಸಂಸ್ಥೆ, ಧಾರ್ಮಿಕ ಸಂಸ್ಥೆ, ಸಾಹಿತ್ಯ ಸಂಘಟನೆಗಳೆಂಬ ವಿವಿಧ ವೇದಿಕೆಗಳಲ್ಲಿ ಸಾಹಿತ್ಯ ಚಟುವಟಿಕೆಗಳು ನಿರ್ವಹಿಸಲ್ಪಡುತ್ತದೆ. ಸಾಹಿತ್ಯ ಚಟುವಟಿಕೆಗಾಗಿ ಯಾವುದೇ ಸಂಸ್ಥೆಯು ನಿರಂತರವಾಗಿ ತೊಡಗಿಸಿಕೊಳ್ಳುತ್ತಿರುವುದನ್ನೇ ಪ್ರಕ್ರಿಯೆ ಎಂದು ಗುರುತಿಸಬಹುದಾಗಿದೆ. ಸಾಹಿತ್ಯ ಚಟುವಟಿಕೆಯ ಪ್ರಕ್ರಿಯೆಯು ಸಹೃದಯರ ಮೇಲೆ ಉಂಟುಮಾಡಿದ ಪರಿಣಾಮಗಳು ತತ್‌ಕ್ಷಣಕ್ಕೆ ಅರಿವಿಗೆ ಬರಲಾರದು. ಸಾಹಿತ್ಯ ಚಟುವಟಿಕೆಯು ಜನಾಭಿಪ್ರಾಯವನ್ನು ರೂಪಿಸುವಲ್ಲಿ ಯಶಸ್ವಿಯಾಗುವ ಬಗೆಯನ್ನು 'ಪರಿಣಾಮಗಳು' ಎಂಬ ಶೀರ್ಷಿಕೆಯಲ್ಲಿ ವಿವರಿಸಲಾಗುವುದು. ಶಿಕ್ಷಣಸಂಸ್ಥೆಗಳಲ್ಲಿ ನಡೆಸಲಾಗುವ ಸಾಹಿತ್ಯ-ಚರ್ಚೆ, ಸಂವಾದಗಳು ಅಲ್ಲಲ್ಲಿಯ ಫಲಾನುಭವಿಗಳಾದ ವಿದ್ಯಾರ್ಥಿ-ವಿದ್ಯಾರ್ಥಿನಿಯರಲ್ಲಿ ಸಾಹಿತ್ಯಾಸಕ್ತಿಯನ್ನು ಉಂಟುಮಾಡುವುದಲ್ಲದೆ ಒಂದು ಕೃತಿಯನ್ನು ಓದುವ-ವಿಮರ್ಶಿಸುವ ಮತ್ತು ಆಶಯವನ್ನು ಗ್ರಹಿಸುವ ಬಗೆಯನ್ನೂ ತಿಳಿಸಿಕೊಡಬಲ್ಲುದು. ಇನ್ನು ಕೆಲವು ವಿದ್ಯಾರ್ಥಿಗಳಿಗೆ ಸಾಹಿತ್ಯಸೃಷ್ಟಿಗೆ ಪ್ರೇರಣೆ ನೀಡಬಹುದು; ಇದನ್ನು 'ಪರಿಣಾಮಗಳು' ಎಂಬ ಅರ್ಥದಲ್ಲಿ ಗ್ರಹಿಸಲಾಗಿದೆ. ಹಾಗೆಯೇ ಸಾಹಿತ್ಯಚರ್ಚೆಯಲ್ಲಿ ಪಾಲ್ಗೊಂಡ ಶ್ರೀಸಾಮಾನ್ಯ ಸಹೃದಯನಿಗೆ ತನ್ನ ಪರಿಸರವನ್ನು ಸಮರ್ಪಕವಾಗಿ ಅರ್ಥೈಸಿಕೊಳ್ಳಲು ಸಂವೇದನಾಶೀಲತೆಯನ್ನು ರೂಢಿಸಬಲ್ಲುದು. ಇವನ್ನೂ ಪರಿಣಾಮ ಎಂದು ಕರೆದಿರುವುದೇ ಹೊರತು, ಇತರ ಮಾನವಿಕ ಶಾಸ್ತ್ರಗಳಲ್ಲಿ ಪ್ರತಿಪಾದಿಸುವ ದತ್ತಾಂಶದ ಅಂಕೆ-ಸಂಖ್ಯೆಗಳಲ್ಲಿ ಸಾಹಿತ್ಯದ ಪರಿಣಾಮಗಳನ್ನು ನಿರೂಪಿಸುವುದು ಸಾಧ್ಯವಿಲ್ಲ. ಅದು ಈ ಅಧ್ಯಯನದ ಧ್ಯೇಯವೂ ಅಲ್ಲ.

## ಅಧ್ಯಾಯ-2
## ಕನ್ನಡ ಪತ್ರಿಕೋದ್ಯಮದಲ್ಲಿ ಆರಂಭಗೊಂಡ ಸಾಹಿತ್ಯಚಟುವಟಿಕೆಗಳು

ಅ) **ಭಾರತದಲ್ಲಿ ಪತ್ರಿಕೋದ್ಯಮ ಚಟುವಟಿಕೆ:** ಭಾರತೀಯ ಪತ್ರಿಕೋದ್ಯಮವು ಪಾಶ್ಚಾತ್ಯ ಪತ್ರಿಕೋದ್ಯಮದಂತೆ ಕೇವಲ ಒಂದು ಭಾಷೆಗೆ ಸೀಮಿತವಾದದ್ದಲ್ಲ. ಭಾರತವು ಬಹು ಭಾಷೆಯನ್ನಾಡುವ ಬಹುಭಾಷಾ ಸಾಹಿತ್ಯದ ನಾಡಾದುದರಿಂದ ಇಲ್ಲಿನ ಪತ್ರಿಕಾ ಚಟುವಟಿಕೆಗಳ ಕುರಿತಂತೆ ಭಿನ್ನಭಿನ್ನ ಇತಿಹಾಸಗಳಿವೆ. ಒಟ್ಟಿನಲ್ಲಿ ಬ್ರಿಟೀಷ್ ವಸಾಹತು ಸಂದರ್ಭದಲ್ಲಿ ಮೊದಲು ಆಧುನಿಕತೆಗೆ ತೆರೆದುಕೊಂಡ ಪ್ರಾಂತ್ಯದಲ್ಲಿ ಮೊದಲು ಪತ್ರಿಕಾ ಚಟುವಟಿಕೆಗಳು ಆರಂಭವಾಗತೊಡಗಿತು.

ಶಿಕ್ಷಣ ಸಂಸ್ಥೆಗಳಿಂದಾಗಿ ಸ್ಥಳೀಯ ಪ್ರಜೆಗಳು ಸಾಕ್ಷರರಾಗುತ್ತಿದ್ದಂತೆ 'ಮುದ್ರಣಉದ್ದಿಮೆ'ಯ ಮೂಲಕ ಲಾಭಗಳಿಸುವ ಹುನ್ನಾರದಿಂದ ಕಂಪೆನಿ ಸರಕಾರವೇ ಭಾರತದಲ್ಲಿ ಪತ್ರಿಕೆಗಳನ್ನು ಆರಂಭಿಸಲು ಯೋಚಿಸಿತು. ಈ ಪ್ರೇರಣೆಯಿಂದಲೇ ಭಾರತೀಯರೂ ಪತ್ರಿಕಾ ಉದ್ಯಮ ಕ್ಷೇತ್ರದಲ್ಲಿ ಸೇರಿಕೊಂಡರು. ಇವರುಗಳಲ್ಲಿ ಪ್ರಮುಖರೆನಿಸಿದವರೇ ರಾಜಾರಾಮ್ ಮೋಹನ್ ರಾಯ್, ಬಾಲಗಂಗಾಧರ ತಿಲಕ, ಮಹಾತ್ಮಾಗಾಂಧೀಜಿ–ಮುಖ್ಯರಾದವರು. ಇವರುಗಳಿಗೆ ಸ್ವಾತಂತ್ರ್ಯಹೋರಾಟದ ಹಂಬಲವೇ ಮುಖ್ಯವಾಗಿತ್ತು; ಮಾತ್ರವಲ್ಲದೆ ಜನಜಾಗೃತಿಗೆ ಪತ್ರಿಕಾ ಮಾಧ್ಯಮವು ಯಶಸ್ವೀ ಸಂವಹನವೆಂದು ತಿಳಿದುಕೊಂಡಿದ್ದರು. ಸ್ವಾತಂತ್ರ್ಯಾನಂತರದಲ್ಲಿ ಪತ್ರಿಕೋದ್ಯಮವು ಬಲಿಷ್ಠ ಉದ್ದಿಮೆಯಾಗಿ–ಚಟುವಟಿಕೆಯಾಗಿ ಬೇರೂರಿದ್ದು, ಬಲಿಷ್ಠ ಭಾರತ–ಪ್ರಜಾಪ್ರಭುತ್ವ ತಳಹದಿಯ ಸಾಮಾಜಿಕ ನ್ಯಾಯವು ಪತ್ರಿಕೆಗಳ ಗುರಿಯಾಯಿತು. ಕಾಲಾಂತರದಲ್ಲಿ ಒಕ್ಕೂಟದ ಪ್ರತಿಯೊಂದು ರಾಜ್ಯಭಾಷೆಯಲ್ಲಿಯೂ ವಿವಿಧ ಸ್ವರೂಪದ, ಉದ್ದೇಶದ ಪತ್ರಿಕೆಗಳು ಚಟುವಟಿಕೆಗಳಲ್ಲಿ ತೊಡಗಿಕೊಂಡವು.

ಆಧುನಿಕ ಪತ್ರಿಕೋದ್ಯಮ ಜಗತ್ತು ಸುದ್ದಿಯನ್ನು ಅವಲಂಬಿಸಿಕೊಂಡು ನಿಂತಿವೆ. "ಸುದ್ದಿಗಾಗಿ ಕಾತರಿಸದವರು, ಮಿಡಿಯದವರು, ಹಪಹಪಿಸದವರಾರು? ಮನಸ್ಸು, ಕ್ಷಣಕ್ಷಣಕ್ಕೂ ಹೊಸ ಹೊಸ ಸುದ್ದಿಗಾಗಿ ಕಾತರಿಸುತ್ತಲೇ ಇರುತ್ತದೆ. ಸುದ್ದಿ ಇಲ್ಲದೇ ನಾವಿಲ್ಲ; ನಾವಿಲ್ಲದೇ ಸುದ್ದಿಯಿಲ್ಲ. ನಿತ್ಯಜೀವನದಲ್ಲಿ ಸುದ್ದಿ ಅಷ್ಟೊಂದು ಮುಖ್ಯ ಸಂಗತಿ ಅಥವಾ ಸರಕು."(ಸಂ: ವಿಶ್ವೇಶ್ವರ ಭಟ್, 2010, ಪು–25) ಈ ಹೇಳಿಕೆಯು ಆಧುನಿಕ ಜಗತ್ತಿನಲ್ಲಿ ಪತ್ರಿಕೋದ್ಯಮ ಪಡೆದುಕೊಂಡ ಪ್ರಾಮುಖ್ಯತೆಯನ್ನೂ ಆ ಪ್ರಾಮುಖ್ಯತೆಗೆ ಕಾರಣವನ್ನು ತಿಳಿಸುತ್ತದೆ.

ಆ) **ಕನ್ನಡದಲ್ಲಿ ಪತ್ರಿಕಾ ಚಟುವಟಿಕೆ:**

ಮುಂಬೈ, ಮದರಾಸು, ಮೈಸೂರು ಪ್ರಾಂತ್ಯಗಳಲ್ಲಿ ಹಂಚಿಹೋದ ಕರ್ನಾಟಕ ಪ್ರಾಂತ್ಯದಲ್ಲಿ (1840–1956) ಅನೇಕ ಪತ್ರಿಕೆಗಳು ಪ್ರಚಲಿತದಲ್ಲಿದ್ದುವು. ಮಂಗಳೂರು ನಗರದಲ್ಲಿ 'ಮಂಗಳೂರು ಸಮಾಚಾರ'ವೆಂಬ ಬಾಸೆಲ್ ಮಿಷನ್ ಸಂಸ್ಥೆಯವರು ಪ್ರಕಟಿಸುತ್ತಿದ್ದ ಪತ್ರಿಕೆಯು ಪ್ರಸರಣದಲ್ಲಿರುವಾಗಲೇ ರಾಜ್ಯದ ಉತ್ತರ ಭಾಗದಲ್ಲಿರುವ ಜನರಿಗೆ ಅದು ಸುಲಭವಾಗಿ ಲಭ್ಯವಾಗಬೇಕೆಂಬ ದೃಷ್ಟಿಯಿಂದ ಅದನ್ನು ಬಳ್ಳಾರಿಗೆ ಸ್ಥಳಾಂತರಿಸುವ ನಿರ್ಣಯವನ್ನು ಹೀಗೆ ಪ್ರಸ್ತಾಪಿಸಲಾಗಿದೆ. "ಬಳ್ಳಾರಿಯಲ್ಲಿ ಇರುವ ಅಕ್ಷರ ಛಾಪಖಾನೆಯಲ್ಲಿ ಅಚ್ಚು ಪಡಿಮಾಡಲಿಕ್ಕೆ ನಿಶ್ಚಯಿಸಿದ್ದೇವೆ... ಹೆಚ್ಚು ವರ್ತಮಾನವಂನೂ ಚರಿತ್ರೆಗಳಂನೂ ವಿದ್ಯಾಪಾಠಗಳಂನೂ ಬುದ್ಧಿ ಮಾತುಗಳನ್ನೂ ಬರಿಯುವುದಕ್ಕೆ ಸ್ಥಳ ಶಿಕ್ಕುವುದು."(ಲೇ: ಶ್ರೀನಿವಾಸ ಹಾವನೂರ ಡಾ., 1974,

ಪು-487) ಹೀಗೆ ಮಂಗಳೂರಿನಿಂದ ಹೊರಡುತ್ತಿದ್ದ ಪತ್ರಿಕೆಯನ್ನು 'ಮಂಗಳೂರು ಸಮಾಚಾರ' ಎಂಬ ಹೆಸರನ್ನು ಬಿಟ್ಟು, ಕನ್ನಡ ಭಾಷೆಯನ್ನಾಡುವ ಸಕಲ ಜನರಿಗೂ ಸುಲಭ ಲಭ್ಯವಾಗಬೇಕೆಂಬ ಗುರಿಯೊಂದಿಗೆ 'ಕಂನಡ ಸಮಾಚಾರ' ಪತ್ರಿಕೆಯು 1844ರಿಂದ ಬಳ್ಳಾರಿಯಿಂದ ಹೊರಡತೊಡಗಿತು. ಆದರೆ ದೂರದ ಮಂಗಳೂರಿನಲ್ಲಿರುವ ಮೊಗ್ಲಿಂಗ್ ಅವರಿಗೆ ಪತ್ರಿಕೆಯ ಹೊಣೆಯನ್ನು ಸಮರ್ಪಕವಾಗಿ ನಿರ್ವಹಿಸುವುದಕ್ಕೆ ಅಸಾಧ್ಯವಾಗಿ ಒಂದು ವರ್ಷದೊಳಗಾಗಿಯೇ ಪತ್ರಿಕೆಯು ನಿಂತುಹೋಯಿತು. ಹೀಗೆ ನಿಂತ ಪತ್ರಿಕಾ ಚಟುವಟಿಕೆಗಳಿಗೆ ದ.ಕ. ಜಿಲ್ಲೆಯಲ್ಲಿಯೇ 'ಕನ್ನಡ ವಾರ್ತಿಕ' ಎಂಬ ಹೆಸರಿನೊಂದಿಗೆ ಮರುಜೀವ ನೀಡಿದವನು ಪುನಃ ಮೊಗ್ಲಿಂಗ್‌ನೇ. ಆದರೆ ಮೊಗ್ಲಿಂಗ್ ಅಷ್ಟರಲ್ಲೇ ಗ್ರಂಥಸಂಪಾದನೆ ಮತ್ತು ಇನ್ನಿತರ ಶೈಕ್ಷಣಿಕ ಚಟುವಟಿಕೆಗಳಲ್ಲಿ ತನ್ನನ್ನು ತಾನು ತೊಡಗಿಸಿಕೊಂಡ ಕಾರಣ ಪತ್ರಿಕಾ ಚಟುವಟಿಕೆಯ ಕರ್ತವ್ಯವನ್ನು ಸಮರ್ಪಕವಾಗಿ ನಿರ್ವಹಿಸುವುದಕ್ಕೆ ಅಸಾಧ್ಯವಾಗಿ ಪುನಃ ಒಂದು ವರ್ಷದೊಳಗಾಗಿ ಈ ಪತ್ರಿಕೆಯೂ ನಿಂತುಹೋಯಿತು.

ಹೊಸಗನ್ನಡದ ಆರಂಭಿಕ ಕಾಲಘಟ್ಟದ ಸಾಹಿತ್ಯದ ಉಗಮ-ವಿಕಾಸದ ಸ್ವರೂಪದ ಕುರಿತಂತೆ ಆಳವಾಗಿ ಅಭ್ಯಾಸ ಮಾಡಿದ ಡಾ. ಶ್ರೀನಿವಾಸ ಹಾವನೂರ ಅವರು ಪತ್ರಿಕೋದ್ಯಮದ ಇತಿಹಾಸವನ್ನು ಎರಡು ಘಟ್ಟಗಳಾಗಿ ವಿಂಗಡಿಸಿದ್ದಾರೆ. 1843 ರಿಂದ 1882ರ ವರೆಗಿನ ಅವಧಿಯನ್ನು ಪ್ರಥಮ ಘಟ್ಟವೆಂದೂ, 1883 ರಿಂದ 1900ರ ವರೆಗಿನ ಕಾಲಾವಧಿಯನ್ನು ಎರಡನೇ ಘಟ್ಟವೆಂದೂ ಗುರುತಿಸಿದ್ದಾರೆ. ಏಕೀಕರಣಪೂರ್ವದ ಕನ್ನಡ ಭಾಷಾಪ್ರದೇಶದ ವ್ಯಾಪ್ತಿಯಲ್ಲಿ ಹುಟ್ಟಿದ ಸುಮಾರು 25 ಪತ್ರಿಕೆಗಳ ಸರಾಸರಿ ಆಯುರ್ಮಾನ ಕೇವಲ 3 ರಿಂದ 4 ವರ್ಷವೇ ಆಗಿತ್ತು ಎನ್ನುವುದನ್ನು ಉಲ್ಲೇಖಿಸಿ, ಇದಕ್ಕೆ ಮುಖ್ಯ ಕಾರಣ "ಅವು ಕಡಿಮೆ ಬಂಡವಲವನ್ನು ಒಳಗೊಂಡ ವೈಯಕ್ತಿಕ ಪ್ರಯತ್ನಗಳಾಗಿದ್ದವು. ಅವುಗಳ ಸ್ಥಾಪಕರೂ, ಸಂಪಾದಕರೂ ಸಮರ್ಥರೇನೋ ಅಹುದು. ಆದರೆ ಲೇಖಕರ ಪಡೆಯೆಂಬುದು ನಿರ್ಮಾಣವಾಗಿರಲಿಲ್ಲವಾದ್ದರಿಂದ ಸಂಪಾದಕರೇ ಹೆಚ್ಚಿನ ಲೇಖನಗಳನ್ನು ಬರೆಯಬೇಕಾಗಿದ್ದಿತ್ತು. ಇನ್ನೊಂದೆಡೆ ಪತ್ರಿಕೆಯನ್ನು ವ್ಯಾವಹಾರಿಕ ಪ್ರಯೋಜನದ ದೃಷ್ಟಿಯಿಂದ ಹೊರಡಿಸುವ ಗೋಜಿಗೆ ಹೋಗದ ಕಾರಣ ಆದರ್ಶಪೂರಿತವಾದ ಸದುದ್ದೇಶದಿಂದ ಪತ್ರಿಕೆಯನ್ನು ಹೊರತಂದುದು ಪತ್ರಿಕೆಗಳ ಅಲ್ಪಾವಧಿಯ ಅಸ್ತಿತ್ವಕ್ಕೆ ಕಾರಣ ಎಂದಿದ್ದಾರೆ."(ಪೂರ್ವೋಕ್ತ, ಪು-517)ಆದರೆ ಮುಂದಿನ ಕೆಲವು ವರ್ಷಗಳಲ್ಲಿಯೇ ಈಸ್ಟ್ ಇಂಡಿಯಾ ಕಂಪೆನಿಯ ನೇರ ಆಡಳಿತ ಮತ್ತು ಅವರ ಬೆಂಬಲದೊಂದಿಗೆ ಬಂದ ಜರ್ಮನ್ ಮಿಷನರಿ ಸಂಸ್ಥೆಯ ವಿದ್ವಾಂಸರು ಪರಭಾಷೆಯಾದ ಕನ್ನಡವನ್ನು ಕಲಿತು, ಗ್ರಂಥಸಂಪಾದನೆ-ವಿನೂತನ ಮಾದರಿಯ ಮುದ್ರಣಯಂತ್ರದ ಮೂಲಕ ವ್ಯಾಕರಣ ಕೃತಿರಚನೆಯ ಮುದ್ರಣ, ತಮ್ಮ ಬೈಬಲ್ ಧರ್ಮಗ್ರಂಥದ ಅನುವಾದ ಮುಂತಾದ ಸಾಹಿತ್ಯ ಚಟುವಟಿಕೆಗಳಲ್ಲಿ ತೊಡಗಿಕೊಂಡರು.

ಮುದ್ರಣಯಂತ್ರವೆಂಬ ಹೊಸಯಂತ್ರವು ಪುಸ್ತಕಗಳನ್ನು ಬೃಹತ್ ಸಂಖ್ಯೆಯಲ್ಲಿ ಏಕಕಾಲಕ್ಕೆ ಉತ್ಪಾದಿಸಿದ್ದಲ್ಲದೇ ಸಾರ್ವಜನಿಕವಾಗಿ ಸರಕಾರದ ಮತ್ತು ಖಾಸಗೀ ಪ್ರಯತ್ನದ ಸಹಭಾಗಿತ್ವದಲ್ಲಿ ಹುಟ್ಟಿಕೊಂಡ ಶಿಕ್ಷಣ ಸಂಸ್ಥೆಗಳು ಅಸ್ತಿತ್ವಕ್ಕೆ ಬಂದು ಓದು-ಬರಹ ಎಂಬ ಖಾಸಗೀ ಚಟುವಟಿಕೆಗಳು ಸಾಮಾಜಿಕ ಸ್ವರೂಪವನ್ನು ತಳೆಯಿತು. ಒಟ್ಟಿನಲ್ಲಿ "ಆಧುನಿಕ ವಿದ್ಯಾಭ್ಯಾಸ ಮತ್ತು ಮುದ್ರಣದ ಸೌಲಭ್ಯಗಳು ಓದುವ ಕ್ರಮವನ್ನು ಬದಲಾಯಿಸಿದವು. ವಿದ್ಯಾಭ್ಯಾಸ ಅನ್ಯಾನ್ಯ ವರ್ಗಗಳ ಸದಸ್ಯರಿಗೆ ಓದುವ ಶಕ್ತಿಯನ್ನು ತಂದುಕೊಟ್ಟರೆ ಮುದ್ರಣದ ಸೌಲಭ್ಯದಿಂದಾಗಿ ಪುಸ್ತಕಗಳು ಎಲ್ಲರ ಕೈಗೂ ಎಟಕುವಂತಾದವು. ಇದರಿಂದಾಗಿ ಓದಿನ

ವಿಸ್ತಾರವೂ ಹೆಚ್ಚಿತು."(ಲೇ: ಶಿವರಾಮ ಪಡಿಕ್ಕಲ್ ಡಾ., 2001, ಪು-219) ಪ್ರಜಾಪ್ರಭುತ್ವ ವ್ಯವಸ್ಥೆಯ ಮಾದರಿಯನ್ನು ಹೋಲುವ ಸರಕಾರಿ ಆಡಳಿತ ಯಂತ್ರದ ಅಸ್ತಿತ್ವದ ಜತೆಜತೆಯಲ್ಲಿಯೇ ಮಾಸಿಕ ವೇತನದ ಸರಕಾರಿ ನೌಕರರೆಂಬ ವಿಶಿಷ್ಟ ಮಧ್ಯಮವರ್ಗವು ರೂಪುಗೊಂಡಿತು. ಜಾತಿವ್ಯವಸ್ಥೆಯ ಅಡಿಯಲ್ಲಿದ್ದ ವಂಶಪಾರಂಪರ್ಯದ ಉದ್ಯೋಗದ ಬದಲಾಗಿ, ಶೈಕ್ಷಣಿಕ ಅರ್ಹತೆಯ ಮಾನದಂಡದಲ್ಲಿ ಉದ್ಯೋಗದ ಹೊಸ-ಹೊಸ ನೌಕರಿಗಳು ಹುಟ್ಟಿಕೊಂಡವು. (ಅಧ್ಯಾಪಕರು, ವಕೀಲರು, ವೈದ್ಯರು, ದಾದಿಯರು, ಸರ್ಕಾರಿ ಗುಮಾಸ್ತರು, ಚಾಲಕರು... ಇತ್ಯಾದಿ ಇತ್ಯಾದಿ) ಈ ನವೀನ ಶ್ರೇಣೀಕೃತ ವ್ಯವಸ್ಥೆಯ ಪರಿಣಾಮಗಳಿಂದ ಸಾಮಾಜಿಕ ಸ್ಥಿತ್ಯಂತರಗಳು ಘಟಿಸುತ್ತಿದ್ದಂತೆಯೇ ಮಧ್ಯಮವರ್ಗದ ಲೋಕದೃಷ್ಟಿಯೂ ಬದಲಾಗತೊಡಗಿತು.

ಭಾರತೀಯ ವಿದ್ಯಾವಂತರಲ್ಲಿ ತಮ್ಮ ಭಾಷೆ-ದೇಶ-ಧರ್ಮ-ಆಚಾರ-ವಿಚಾರದ ಕುರಿತಂತೆ ಹೊಸಬಗೆಯ ದೃಷ್ಟಿಕೋನಗಳು ಒಡಮೂಡುವುದಕ್ಕೆ ತೊಡಗಿತು. ಇದೇ ಹೊತ್ತಿಗೆ ವರ್ತಮಾನಪತ್ರಿಕೆ (ದಿನಪತ್ರಿಕೆ), ವಾರಪತ್ರಿಕೆ, ಮಾಸಿಕ ಪತ್ರಿಕೆಗಳು, ತ್ರೈಮಾಸಿಕಗಳು, ಅರ್ಧವಾರ್ಷಿಕಗಳು ಹೀಗೆ ವಿವಿಧ ಸ್ವರೂಪದ ಪತ್ರಿಕೆಗಳು ಭಾರತದ ವಿವಿಧ ಪ್ರಾಂತ್ಯಗಳಲ್ಲಿ ಆಯಾಯಾ ಭಾಷೆಗಳಲ್ಲಿ ಪ್ರಕಟಗೊಳ್ಳುವುದಕ್ಕೆ ಮೊದಲಾಯಿತು. ಆಸಕ್ತ ವಿದ್ಯಾವಂತ ದೇಸೀಯರು ಸಾಹಿತ್ಯ ಮತ್ತು ರಾಜಕೀಯ ರಾಷ್ಟ್ರಪ್ರಜ್ಞೆಯ ಹೊಸ ಹೊಸ ಸಂವೇದನೆಯನ್ನು ಪತ್ರಿಕೆಯ ಒಡಲಲ್ಲಿರಿಸುವ ಪ್ರಯತ್ನಕ್ಕೆ ಚಾಲನೆ ನೀಡಿದರು.

ಉನ್ನತ ಉದ್ದೇಶದೊಂದಿಗೆ ಹುಟ್ಟಿಕೊಂಡ ಅವಿಭಜಿತ ದ.ಕ. ಜಿಲ್ಲೆಯ ಸ್ವಾತಂತ್ರ್ಯಪೂರ್ವಕಾಲದ ಪತ್ರಿಕೆಗಳು ನಿರ್ದಿಷ್ಟ ಕಾಲಘಟ್ಟದವರೆಗೆ ತಮ್ಮ ಪ್ರಸರಣವನ್ನು ಕಂಡುಕೊಂಡು ವಾಚಕರ ಮನದಲ್ಲಿ ನೆನಪನ್ನು ಉಳಿಸಿ, ಮರೆಯಾದವು. ಹೀಗೆ ಮರೆಯಾದ ಪತ್ರಿಕೆಗಳು ತಮ್ಮ ತಮ್ಮ ಪುಟಗಳಲ್ಲಿ ಇರಿಸಿಹೋದ ಸಾಹಿತ್ಯದ ಭಾಗಗಳಿಗಾಗಿ ಸಾಹಿತ್ಯ ವಿದ್ಯಾರ್ಥಿಗಳಿಗೆ ಅದು ಅಗತ್ಯದ ದಾಖಲೆಯಾಗುತ್ತದೆ. ಡಾ. ಶಿವರಾಮ ಪಡಿಕ್ಕಲ್ ಅವರ ಮಾತಿನಲ್ಲಿ ವಿವರಿಸುವುದಾದಲ್ಲಿ "ಗಂಭೀರ ಮತ್ತು ಜವಾಬ್ದಾರಿಯುತ ಪತ್ರಿಕೋದ್ಯಮದ ಮೂಲಕ ಓದುಗರನ್ನು ತಿದ್ದುವ ಅವರು ಒಂದು ಮೌಲ್ಯವ್ಯವಸ್ಥೆಯನ್ನು ಒಪ್ಪಿಕೊಳ್ಳುವಂತೆ ಮಾಡುವ, ಬದಲಾಗುತ್ತಿರುವ ಪರಿಸ್ಥಿಯನ್ನು ಅರಿತು, ಓದುಗರು ಅದನ್ನು ಅನುಸರಿಸುವಂತೆ ಮಾಡುವ ಯತ್ನಗಳನ್ನು ಈ ಪತ್ರಿಕೆಗಳಲ್ಲಿ ಕಾಣುತ್ತೇವೆ" (ಪೂರ್ವೋಕ್ತ, ಪು-235)

ಹೊಸಗನ್ನಡ ಸಾಹಿತ್ಯವು, ಹಳೆಗನ್ನಡದ ಸಾಹಿತ್ಯದಿಂದ ದೂರವಾದ ಬಗೆಯನ್ನು ಹೊಸ ಸಾಹಿತ್ಯ ಪಥ್ಯವು ಹೊಸ ಯುಗಧರ್ಮದ ಕಡೆಗೆ ಮುಖಮಾಡಿದ ಪರಿಯನ್ನು ಈ ಪತ್ರಿಕೆಗಳು ವಿವರವಾಗಿ ವಿವರಿಸುತ್ತವೆ. "19ನೇ ಶತಮಾನದ ವಸಾಹತುಶಾಹೀ ಆಡಳಿತದ ಫಲವಾಗಿ ರೂಪುಗೊಂಡ ವ್ಯಕ್ತಿಗಳು ತಮ್ಮ ಸಾಹಿತ್ಯಕ ಅಗತ್ಯಗಳಿಗಾಗಿ ಬಹುತೇಕ ಪತ್ರಿಕೆಗಳನ್ನು ಸ್ಥಾಪಿಸಿದ್ದು, ಪತ್ರಿಕಾ ಪ್ರಕಟಣೆಯು ಇನ್ನೂ ಉದ್ಯಮವಾಗಿ ಬೆಳೆದಿರಲಿಲ್ಲ"(ಪು-244) ಆದುದರಿಂದ (20ನೇ) ಶತಮಾನದ ಸಾಹಿತ್ಯ ಚಟುವಟಿಕೆಗಳನ್ನು ಅಭ್ಯಾಸ ಮಾಡುವ ಯಾರೇ ಆಗಲಿ, ಮೊದಲಿಗೆ ಈ ಪತ್ರಿಕಾ ಪುಟಗಳನ್ನು ಅವಲೋಕಿಸಬೇಕಾದುದು ಅನಿವಾರ್ಯವಾಗುತ್ತದೆ.

ಕೃತಿಕಾರನು ಹೇಳಬೇಕೆಂಬ (ಬರೆಯಬೇಕೆಂಬ) ತನ್ನ ಹಂಬಲವು ಪತ್ರಿಕೆಯ ಮೂಲಕ ಸಾಕಾರಗೊಂಡು ಮುಂದೆ ಆ ಬರವಣಿಗೆಯು ಪುಸ್ತಕ ರೂಪವನ್ನು ಧರಿಸಿ, ಓದುಗರ ಮುಂದೆ ಬಾರದಿರುವ ಸಂಭವವೇ ಅಧಿಕವಾದ ಕಾರಣ ಸಾಹಿತ್ಯ ಚಟುವಟಿಕೆಗಳ ಸ್ವರೂಪದ ಕುರಿತಾಗಿ ಅಭ್ಯಾಸ ಮಾಡುವ ಅಧ್ಯಯನಕಾರನು ಸಾಹಿತ್ಯ ಚಟುವಟಿಕೆಗಳ ಆರಂಭಿಕ ಆಕರಗಳಾದ

ಪತ್ರಿಕಾ ಬರಹಗಳಿಗಾಗಿ ಪತ್ರಿಕೆಗಳನ್ನು ತಡಕಾಡಬೇಕಾದುದು ಅನಿವಾರ್ಯವಾಗುತ್ತದೆ. ಪುಸ್ತಕ ಪ್ರಕಟಣೆ ಇಂದಿನಷ್ಟು ಅಗ್ಗವೂ, ಸುಲಭವೂ ಅಲ್ಲದ ಕಾರಣ, ಪತ್ರಿಕೆಗಳಲ್ಲೇ ಲೇಖಕರು ತಮ್ಮ ಬರಹದ ಅಭಿವ್ಯಕ್ತಿಯನ್ನು ಕಂಡುಕೊಳ್ಳಬೇಕಾಗಿತ್ತು.

**ಇ) ಉಡುಪಿ ಜಿಲ್ಲೆಯ ಪತ್ರಿಕೋದ್ಯಮ ಹಾಗೂ ಪತ್ರಿಕೆಯಲ್ಲಿ ಅಭಿವ್ಯಕ್ತವಾದ ಸಾಹಿತ್ಯಕ ಚಟುವಟಿಕೆಗಳು:**

ಉಡುಪಿ ಜಿಲ್ಲೆಯ ಶತಮಾನದ ಸಾಹಿತ್ಯ ಚಟುವಟಿಕೆಗಳು ಎಂಬ ಅಧ್ಯಯನ ವಿಷಯಕ್ಕೆ ಪೂರಕವಾಗಿ ಮುದ್ರಿತ ಪತ್ರಿಕೆಯಲ್ಲಿ ಒಡಮೂಡಿದ ಸಾಹಿತ್ಯ ಚಟುವಟಿಕೆಗಳ ಕುರಿತಾಗಿ ಅಧ್ಯಯನ ಮಾಡುವ ಮೂಲಕ ವಿಷಯಕ್ಕೆ ಪ್ರವೇಶಿಸಬೇಕಾಗಿದೆ. ಕನ್ನಡ ಪತ್ರಿಕೆಯ ಕುರಿತಂತೆ (ಉಡುಪಿಯನ್ನೊಳಗೊಂಡ) ಅವಿಭಜಿತ ದ.ಕ. ಜಿಲ್ಲೆಯ ಪತ್ರಿಕೋದ್ಯಮದ ಇತಿಹಾಸದ ಬಗೆಗೆ ಅಲ್ಲಲ್ಲಿ ಚದುರಿದಂತೆ ಅಲ್ಪಸ್ವಲ್ಪ ವಿವರಗಳು ಲಭ್ಯವಾಗುತ್ತವೆಯೇ ಹೊರತು, ಮೂರೂ ತಾಲೂಕು ಪ್ರದೇಶದ (ಉಡುಪಿ, ಕುಂದಾಪುರ, ಕಾರ್ಕಳ) ಭೌಗೋಳಿಕ ವ್ಯಾಪ್ತಿಯ ಒಳಗಡೆ, ಪತ್ರಿಕೋದ್ಯಮವು ನಡೆದ ದಾರಿಯ ಕುರಿತಾಗಿ ಮತ್ತು ಆ ದಾರಿಯಲ್ಲಿ ಸಾಗಿದ ಪತ್ರಕರ್ತರ ಹಾಗೂ ಆ ಪತ್ರಿಕೆಯ ವಾಚಕರ ಬಗೆಗೆ ಸಮಗ್ರವಾಗಿ ಯಾವುದೇ ಅಧ್ಯಯನಗಳು ಈ ತನಕ ನಡೆದಿರುವುದು ಕಂಡುಬರುವುದಿಲ್ಲ. (ಪ್ರಸ್ತುತ ಅಧ್ಯಯನದ ವಿಷಯಕ್ಕೆ ಈ ಚರ್ಚೆ ಅಪ್ರಸ್ತುತ) 1956ರಿಂದ 1997ರ ತನಕ ಉಡುಪಿ ಜಿಲ್ಲೆಯ ಭೌಗೋಳಿಕ ಪ್ರದೇಶದ ವ್ಯಾಪ್ತಿಯೊಳಗೆ ಅನೇಕ ಪತ್ರಿಕೆಗಳು ಅಸ್ತಿತ್ವಕ್ಕೆ ಬಂದಿವೆ.(1956 ರಿಂದ 1997ರ ತನಕ ಅಸ್ತಿತ್ವಕ್ಕೆ ಬಂದ ಪತ್ರಿಕೆಗಳ ಸಂಖ್ಯೆ–113) ಉಡುಪಿ ಜಿಲ್ಲೆಯ ಪತ್ರಿಕೆ ಎಂದಾಗ, ಔದ್ಯೋಗಿಕವಾಗಿ, ಆಡಳಿತಾತ್ಮಕವಾಗಿ, ಸಾಂಸ್ಕೃತಿಕವಾಗಿ ಉಡುಪಿಜಿಲ್ಲೆಯು ನೆರೆಯ ದ.ಕ. ಜಿಲ್ಲೆಯೊಂದಿಗೆ ನೇರವಾದ ಸಂಬಂಧವನ್ನು ಹೊಂದಿದ ಕಾರಣಕ್ಕಾಗಿ ಉಡುಪಿ ಜಿಲ್ಲೆಯ ಪತ್ರಿಕೆಗಳ ಕುರಿತು ವಿಶ್ಲೇಷಿಸುವ ಸಂದರ್ಭದಲ್ಲಿ ಪಕ್ಕದ ಜಿಲ್ಲಾ ಕೇಂದ್ರವಾದ ಮಂಗಳೂರಿನ ಜೊತೆಗೆ ನೇರವಾದ ಸಂಪರ್ಕ ಮತ್ತು ಸಂಬಂಧವನ್ನು ಹೊಂದಿರುವುದನ್ನು ಪತ್ರಿಕೋದ್ಯಮದ ಆರಂಭದಿಂದಲೇ ಗಮನಿಸಬಹುದಾಗಿದೆ. ಹೀಗೆ (ಶತಮಾನದ ಅವಧಿಯಲ್ಲಿ) ನೂರು ವರ್ಷ ಅವಧಿಯ ಉಡುಪಿ ಜಿಲ್ಲಾ ವ್ಯಾಪ್ತಿಯಲ್ಲಿ ಪತ್ರಿಕೋದ್ಯಮ ಭಾಗವಾದ ಸಾಹಿತ್ಯ ಚಟುವಟಿಕೆಗಳ ಕುರಿತಾಗಿ ಅಧ್ಯಯನ ಮಾಡುವ ಸಂದರ್ಭದಲ್ಲಿ ಪತ್ರಿಕೆಗಳನ್ನು ಎರಡು ಘಟ್ಟಗಳಾಗಿ ವಿಂಗಡಿಸಬಹುದಾಗಿದೆ.

1) ಏಕೀಕರಣಪೂರ್ವ ಪತ್ರಿಕೆಗಳು. 2) ಏಕೀಕರಣೋತ್ತರ ಕಾಲದ ಪತ್ರಿಕೆಗಳು.

**ಏಕೀಕರಣಪೂರ್ವ ಪತ್ರಿಕೆಗಳು:**

ಭಾಷಾವಾರು ಹಿನ್ನೆಲೆಯಲ್ಲಿ ಕನ್ನಡ ಆಡುನುಡಿಯ ಪ್ರದೇಶವು 'ಮೈಸೂರು ರಾಜ್ಯ' ಎಂಬ ಹೆಸರಿನಲ್ಲಿ ಅಸ್ತಿತ್ವಕ್ಕೆ ಬಂದ 1956ನೇ ಇಸವಿಯನ್ನು ವಿಭಜನೆಯ ಮಾನದಂಡದ ವರ್ಷವನ್ನಾಗಿ ನಿಗದಿ ಮಾಡಿಕೊಳ್ಳಲಾಗಿದೆ. ಹೀಗೆ ನಿಗದಿ ಮಾಡಿಕೊಳ್ಳಲು ಈ ಕೆಳಗಿನ ಅಂಶಗಳು ಮುಖ್ಯ ಕಾರಣಗಳಾಗಿವೆ. ನಾಲ್ಕು ವಿಚಾರಧಾರೆಗಳು, ಐದು (1900–1956) ದಶಕಗಳ ಪತ್ರಿಕಾ ಚಟುವಟಿಕೆಗಳ ವಿವಿಧ ಕಾಲಘಟ್ಟದ ಸಾಮಾನ್ಯ ವಿಚಾರಗಳಾಗಿರುವುದನ್ನು ಗಮನಿಸಬಹುದಾಗಿದೆ.

ಅ) ಪತ್ರಿಕೆಯಲ್ಲಿ ರಾಷ್ಟ್ರೀಯವಾದ ಮತ್ತು ಗಾಂಧೀವಾದ ಪರಿಕಲ್ಪನೆಯ ಹಿನ್ನೆಲೆಯಲ್ಲಿ ಬಂದ ಸುಧಾರಣಾವಾದಿ ಪ್ರಗತಿಪರ ಚಿಂತನೆಗಳು ಪತ್ರಿಕೆಯಲ್ಲಿ ನೇರವಾಗಿ ಇಲ್ಲವೆ ಸಾಹಿತ್ಯ ಬರಹಗಳ ಅಭಿವ್ಯಕ್ತಿಯ ಮುಖೇನ ಪರೋಕ್ಷವಾಗಿ ಪ್ರಕಟಗೊಂಡಿರುವುದನ್ನು ಗುರುತಿಸಬಹುದಾಗಿದೆ (ಸಣ್ಣಕಥೆ, ಪ್ರಬಂಧ, ಕವನ ಇತ್ಯಾದಿ).

ಆ) ಸ್ವಾತಂತ್ರ್ಯ ಚಳುವಳಿ ಮತ್ತು ಸ್ವರಾಜ್ಯಕ್ಕಾಗಿ ದೇಶವ್ಯಾಪಿ ನಡೆಯುತ್ತಿರುವ ರಾಷ್ಟ್ರೀಯ ಆಂದೋಲನದ ವೃತ್ತಾಂತವು ಪತ್ರಿಕೆಯ ಪುಟತುಂಬಿಕೊಂಡಿರುವುದಲ್ಲದೆ 1935ರಿಂದ ಭಾಷಾವಾರು ಹಿನ್ನೆಲೆಯಲ್ಲಿ ಕನ್ನಡ ರಾಜ್ಯದ ಅಸ್ತಿತ್ವಕ್ಕಾಗಿ ನಡೆಸಿದ ಹೋರಾಟ ಹಾಗೂ ಪೂರಕ ಚಟುವಟಿಕೆಯ ಮಾಹಿತಿಗಳು (ಕರ್ನಾಟಕ ಏಕೀಕರಣ ಮಾಹಿತಿ) ಪತ್ರಿಕೆಯಲ್ಲಿ ವಿವರವಾಗಿ ಪ್ರಕಟಗೊಳ್ಳುತ್ತಿರುವುದನ್ನು ಗಮನಿಸಬಹುದಾಗಿದೆ. ಭಾರತೀಯ ಪತ್ರಿಕೋದ್ಯಮದ ಕುರಿತು ಅಧ್ಯಯನ ನಡೆಸಿದ ನಾಡಿಗ ಕೃಷ್ಣಮೂರ್ತಿಯವರು ಇದನ್ನು ಹೀಗೆ ಉಲ್ಲೇಖಿಸಿದ್ದಾರೆ. "ಮದ್ರಾಸ್ ಪ್ರಾಂತ್ಯಕ್ಕೆ ಹೊಂದಿಕೊಂಡಿದ್ದ ಕನ್ನಡ ಜಿಲ್ಲೆಯಾದ ಮಂಗಳೂರಿನ ಪತ್ರಿಕೋದ್ಯಮವು ಸ್ಥಳೀಯ ಲಕ್ಷಣಗಳನ್ನೊಳಗೊಂಡ ಪತ್ರಿಕೋದ್ಯಮವಾಗಿದೆ..... ಆದರೆ ಭಾರತೀಯ ಸ್ವಾತಂತ್ರ್ಯ ಸಂಗ್ರಾಮದಲ್ಲಿ ಮತ್ತು ಮಂಗಳೂರು ಜಿಲ್ಲೆಯು ಕನ್ನಡ ನಾಡಿನಲ್ಲಿ ಐಕ್ಯವಾಗಲು ಈ ಜಿಲ್ಲೆಯ ಪತ್ರಿಕೆಗಳು ತಮ್ಮ ಕಾಣಿಕೆಯನ್ನು ಸಲ್ಲಿಸಿ, ಸೇವೆ ಮಾಡಿದುವು"(1969, ಪು-464) ಎಂದು ತನ್ನ ನಿಲುವನ್ನು ಪ್ರಕಟಿಸಿದ್ದಾರೆ.

ಇ) ವ್ಯಕ್ತಿಯ ಆಂತರಿಕ ವ್ಯಕ್ತಿತ್ವದ ಉನ್ನತೀಕರಣದ ಅವಶ್ಯಕತೆಯನ್ನು ಕಾರಂತ ಹಾಗೂ ನವಯುಗ ಪತ್ರಿಕೆಯಲ್ಲಿ ಎತ್ತಿಹಿಡಿಯುವುದಕ್ಕಾಗಿ ಸಂಪಾದಕರು ಸಾಹಿತ್ಯ ಅಂಕಣಗಳನ್ನು ಸಮರ್ಪಕವಾಗಿಯೇ ಬಳಸಿಕೊಂಡಿದ್ದಾರೆ. ಹೊನ್ನಯ್ಯ ಶೆಟ್ಟಿಯವರು ನವಯುಗ ಪತ್ರಿಕೆಯಲ್ಲಿ ಬರೆದ 'ಮತಗಳ ಸುಧಾರಣೆ' ಎಂಬ ಕಥೆಯನ್ನು ಇಲ್ಲಿ ನೆನಪಿಸಿಕೊಳ್ಳಬಹುದಾಗಿದೆ.

ಈ) ಸ್ಥಳೀಯ ಸುದ್ದಿಗಳಿಗೆ ಪ್ರಾಮುಖ್ಯತೆ ನೀಡುವ ಹೊಸ ವಿದ್ಯಮಾನವೊಂದು ನಿಧಾನಗತಿಯಲ್ಲಿ ಬೆಳೆದುಬರುತ್ತಿರುವುದು ಏಕೀಕರಣಪೂರ್ವದ ಪತ್ರಿಕೆಗಳಲ್ಲಿ ಕಂಡುಬರುವ ಅಂಶವಾಗಿದೆ. ಪ್ರಜಾಪ್ರಭುತ್ವ ವ್ಯವಸ್ಥೆಯ ತಳಹದಿಗೆ ಬೇಕಾದ ಅವಶ್ಯ ಅಂಶಗಳನ್ನು ಪತ್ರಿಕೆಗಳು ಗುರುತಿಸಿ, ಆ ನಿಟ್ಟಿನಲ್ಲಿ ಮುಂದುವರಿಯುತ್ತಿರುವುದನ್ನು ಈ ಪತ್ರಿಕೆಗಳ ಪ್ರಕಟಿತ ಬರಹಗಳಿಂದ ಮನಗಾಣಬಹುದಾಗಿದೆ. ಸಾಹಿತ್ಯಸಂಘದ ಉದ್ಘಾಟನೆಯ ವಿಷಯ, ಯಕ್ಷಗಾನ ಚಟುವಟಿಕೆಗಳ ಚುಟುಕಾದ ವರದಿ, ಶಾಲಾ ವಾರ್ಷಿಕೋತ್ಸವದ ವರದಿ, ಇತ್ಯಾದಿ ಇತ್ಯಾದಿ ಪ್ರಕಟಿತ ಸುದ್ದಿಗಳನ್ನು ಇಲ್ಲಿ ನೆನಪಿಸಿಕೊಳ್ಳಬಹುದಾಗಿದೆ.

ನಾಡಿಗರು ಗುರುತಿಸಿದ ಮೇಲಿನ ಅಂಶಗಳ ಸಹಿತ ಸಾಹಿತ್ಯಕ ಬರಹಗಳನ್ನು ಹೊಂದಿದ ಈ ಕೆಳಗಿನ ಪತ್ರಿಕೆಗಳನ್ನು ಒಂದೊಂದಾಗಿ ಹೀಗೆ ಉಲ್ಲೇಖಿಸಬಹುದಾಗಿದೆ. ಅವುಗಳು ಶ್ರೀಕೃಷ್ಣಸೂಕ್ತಿ, ವಸಂತ, ನವಯುಗ, ಅಂತರಂಗ, ಸುಪ್ರಭಾತ, ಪ್ರಕಾಶ, ರಾಯಭಾರಿ, ಈ ಪತ್ರಿಕೆಗಳನ್ನು ಸಾಹಿತ್ಯ ದೃಷ್ಟಿಯಿಂದ ಮುಖ್ಯವೆಂದು ಗಮನಿಸಬಹುದಾಗಿದೆ. ಈ ಎಲ್ಲ ಪತ್ರಿಕೆಗಳು ಸಾಹಿತ್ಯಕ ಬರಹ ಮತ್ತು ರಾಷ್ಟ್ರೀಯ ಹಿತಾಸಕ್ತಿಯನ್ನು ಎತ್ತಿಹಿಡಿದ ಪತ್ರಿಕೆಗಳಾಗಿದ್ದುವು ಎನ್ನುವುದನ್ನು ಅವುಗಳಲ್ಲಿರುವ ವಿವರಗಳಿಂದ ಅರ್ಥೈಸಬಹುದಾಗಿದೆ.

ಕೇವಲ ಊರ ಸುದ್ದಿಗಾಗಿಯೇ ಹುಟ್ಟಿ, ಒಂದೋ ಎರಡೋ ಸಂಚಿಕೆಯನ್ನು ಹೊರತಂದು, ಪತ್ರಿಕಾ ಪ್ರಪಂಚದ ಇತಿಹಾಸದಲ್ಲಿ ಕೇವಲ ಹಾಜರಿ ಮಾತ್ರ ಹಾಕಿ, ಮರೆಯಾದ ಪತ್ರಿಕೆಗಳ ಕುರಿತಾಗಿಯಾಗಲಿ, ಸಾಹಿತ್ಯೇತರ ವಿಷಯಗಳಿಗೆ ಪ್ರಧಾನ ಪ್ರಾಮುಖ್ಯವನ್ನು ನೀಡಿ, ವಿರಮಿಸಿದ ಪತ್ರಿಕೆಗಳ ಕುರಿತಾಗಿಯಾಗಲಿ ಚರ್ಚಿಸುವುದು ಈ ಪ್ರಬಂಧದ ವ್ಯಾಪ್ತಿಗೆ ಹೊರತಾದ ವಿಷಯವಾಗಿದೆ. ಸಾಹಿತ್ಯ ಚಟುವಟಿಕೆಗಳಿಗೆ ತಮ್ಮ ಪುಟಗಳನ್ನು ಮೀಸಲಾಗಿರಿಸಿದ ಸ್ವತಃ ಸಾಹಿತಿಗಳೇ ಅದರ ಸಂಪಾದಕರಾಗಿ, ಸಾಹಿತ್ಯದ ಓದಿನ ಮೂಲಕ ದೇಶದ ಜನರ ಅಭಿರುಚಿಯನ್ನು ತಿದ್ದುವ ಹಾಗೂ ಅವರನ್ನು ಸಂಸ್ಕೃತಿಶೀಲರನ್ನಾಗಿ ಮಾಡುವ ಘನ

ಉದ್ದೇಶದಿಂದ ಉಡುಪಿ ಜಿಲ್ಲಾ ಕನ್ನಡ ಪತ್ರಿಕೆಗಳು 20ನೇ ಶತಮಾನದ ಆರಂಭದಿಂದಲೇ ಕ್ರಿಯಾಶೀಲವಾಗಿರುವುದು ಕಂಡುಬರುತ್ತವೆ.

**ಕನ್ನಡಭಾಷಾ/ಸಾಹಿತ್ಯ ಚಟುವಟಿಕೆಗಳು ಶ್ರೀಕೃಷ್ಣಸೂಕ್ತಿಯಲ್ಲಿ ಅಭಿವ್ಯಕ್ತಿಗೊಂಡ ಬಗೆ:**

ಕಡೆಕಾರು ರಾಜಗೋಪಾಲಕೃಷ್ಣರಾಯರು ಸಂಪಾದಕರಾಗಿ ಉಡುಪಿಯಲ್ಲೇ ಮುದ್ರಣಗೊಂಡು ಪ್ರಕಾಶಿತವಾಗುತ್ತಿದ್ದ, 20ನೇ ಶತಮಾನದ ಆರಂಭದಲ್ಲೇ ಅಸ್ತಿತ್ವದಲ್ಲಿದ್ದ ಈ ಪತ್ರಿಕೆಯು ರಾಷ್ಟ್ರಪ್ರೇಮ, ಧಾರ್ಮಿಕಭಕ್ತಿ ಮತ್ತು ಜನಮನೋರಂಜನೆ ಮೂರನ್ನೂ ಮೇಳೈಸಿಕೊಂಡು ಸಾಗಿದೆ. ಉಡುಪಿಯ ಖ್ಯಾತ ಪತ್ರಕರ್ತರಾಗಿದ್ದ ಶ್ರೀ ಹುರುಳಿ ಭೀಮರಾಯರು ಈ ಪತ್ರಿಕೆಯನ್ನು ಕುರಿತು, "ಕ್ರಮಶಃ ಇಡಿಯ ಕರ್ನಾಟಕದಲ್ಲೇ ಇಷ್ಟು ಪುಟಸಂಖ್ಯೆಯ, ಇಷ್ಟು ಅಗ್ಗದ, ಇಷ್ಟು ಶುದ್ಧ ಕನ್ನಡದ, ಇಷ್ಟು ಸುಂದರಶೈಲಿ, ಮುದ್ರಣಗಳುಳ್ಳ ಪತ್ರಿಕೆ ಇನ್ನೊಂದಿಲ್ಲ" ಎಂಬ ಕೀರ್ತಿ ಉಡುಪಿಯ ಪತ್ರಿಕೋದ್ಯಮಕ್ಕೆ ಸಂಪಾದಿಸಿಕೊಟ್ಟವರೂ, ಅದನ್ನೊಂದು ಉನ್ನತ ಮಟ್ಟದ ನೆಲೆಗೆ ತಂದು ನಿಲ್ಲಿಸಿದವರೂ ಮುಂದೆ ಆ ಉದ್ಯಮದ ಪ್ರತಿಭೆ ಇನ್ನಷ್ಟು ಅರಳಿ ಪರಿಮಳಿಸುವಂತೆ ಸ್ಥಾನ-ಮಾನ, ವರ್ಧಿಸುವಂತೆ ದಾರಿ ತೋರಿಸಿ ಕೊಟ್ಟವರೂ ಶ್ರೀ ರಾಯರೇ"(ಸಂ: ಉಡುಪಿ ನಗರಸಭೆ ಸಿಲ್ವರ್ ಜ್ಯುಬಿಲಿ ಸಂಚಿಕೆ, 1960-61, ಪು-9) ಎಂದಿದ್ದಾರೆ.

ರಾಜಗೋಪಾಲಕೃಷ್ಣರಾಯರಿಗೆ ಸಮಕಾಲೀನರಾಗಿದ್ದ ಹಿರಿಯ ಸಾಹಿತಿ, ಪತ್ರಿಕೋದ್ಯಮಿ ಡಿ.ವಿ. ಗುಂಡಪ್ಪನವರು ಶ್ರೀಕೃಷ್ಣಸೂಕ್ತಿಗೆ ಸಂಬಂಧಿಸಿ ಬರೆದ ಈ ಕೆಳಗಿನ ಮಾತುಗಳನ್ನು ನೀ. ಶ್ರೀಶ ಬಲ್ಲಾಳರು ಹೀಗೆ ಉಲ್ಲೇಖಿಸಿದ್ದಾರೆ. "ಶ್ರೀಕೃಷ್ಣಸೂಕ್ತಿ ಪ್ರಕಟವಾಗುತ್ತಿದ್ದುದು 1906-07ರ ಸುಮಾರಿನಲ್ಲಿ. ಅದು ಈ ಹೊತ್ತು ಪ್ರಕಟವಾಗುತ್ತಿದ್ದರೂ ಮಾನ್ಯವಾಗುತ್ತಿತ್ತು... ನೋಟಕ್ಕೂ, ಮುಟ್ಟುವುದಕ್ಕೂ ಅದರಷ್ಟು ಸುಂದರವಾದ ಕನ್ನಡ ಮಾಸಪತ್ರಿಕೆ ಈ ಹೊತ್ತು ಯಾವುದಾದರೂ ಇದ್ದಲ್ಲಿ ಅದು ನನಗೆ ತಿಳಿದದ್ದಲ್ಲ. ವಿಷಯಗಳೂ ಹಾಗೆಯೇ ಅದರಲ್ಲಿ ಬರುತ್ತಿದ್ದ ಸಂಪಾದಕೀಯ ಪುಟಗಳು ಗಂಡು ಧ್ವನಿಯುಳ್ಳವುದಾಗಿರುತ್ತಿದ್ದವು... ಅದು ಸಮಸ್ತ ಕರ್ನಾಟಕಕ್ಕೆ ಪ್ರಿಯವಾಗಿ ಯಶಸ್ಕರವಾದ ಪತ್ರಿಕೆಯಾಗಿತ್ತು. ಅದನ್ನು ಉಳಿಸಿಕೊಳ್ಳುವ ಚೈತನ್ಯ ಕನ್ನಡ ಜನಕ್ಕೆ ಇಲ್ಲದೇ ಹೋಯಿತೆನ್ನುವ ವಿಷಾದ ನನ್ನ ಮನಸ್ಸಿನಿಂದ ಇಂದೂ ಅಳಿಸಿ ಹೋಗಿಲ್ಲ ಎಂಬ ಪತ್ರಿಕೋದ್ಯಮಿಯಾದ ಡಿ.ವಿ.ಜಿಯವರ ಈ ಹೇಳಿಕೆಯು ತೀರಾ ಪ್ರಸ್ತುತವಾಗಿದೆ"(ಸಂ: ನಾ. ಮೊಗಸಾಲೆ, 1998, ಪು-5).

ಏಕೀಕರಣಪೂರ್ವದ ಕನ್ನಡ ಭಾಷಾಪರಿಸರದಲ್ಲಿ ತನ್ನದೇ ಆದ ಛಾಪನ್ನು ಒತ್ತಿದ ಶ್ರೀಕೃಷ್ಣಸೂಕ್ತಿಯ ನಡೆಯು ಅನೇಕ ಪರಿಳಿತಗಳನ್ನು ಕಂಡಿವೆ. ಕೆರೋಡಿ ಸುಬ್ಬರಾಯರು ಸ್ಥಾಪಕರಾಗಿದ್ದ ಈ ಪತ್ರಿಕೆಯನ್ನು ಮುಂದೆ ಕಡೇಕಾರು ರಾಜಗೋಪಾಲಕೃಷ್ಣರಾಯರೇ ವಹಿಸಿಕೊಂಡು ಮುನ್ನಡೆಸುತ್ತಾ ಸುಮಾರು ಎಂಟು ವರ್ಷಗಳ ಕಾಲ ಯಶಸ್ವಿಯಾಗಿ ನಡೆಸಿ, ಮುಂದೆ ತನ್ನೆಲ್ಲಾ ಪ್ರಯತ್ನ, ಹೋರಾಟದಿಂದಲೂ ಪತ್ರಿಕೆಯನ್ನು ನಡೆಸುವುದಕ್ಕೆ ಸಾಧ್ಯವಾಗದೇ ಹಿಂದೆಸರಿದರು. ಪುನಃ ಮೂರು ವರ್ಷದ ಬಿಡುವಿನ ನಂತರ ಮತ್ತೊಮ್ಮೆ ಪುನರಾರಂಭಿಸಿ, ಒಂದೆರಡು ವರ್ಷವಷ್ಟೇ ನಡೆಸಿ, ಮತ್ತೆ ಪುನಃ ಪತ್ರಿಕೆಯನ್ನು ನಿಲ್ಲಿಸಿದರು. ಹೀಗೆ ನಿಲ್ಲಿಸಿದ ಪತ್ರಿಕೆಯನ್ನು 30 ವರ್ಷಗಳ ನಂತರ ಅಂದರೆ 1947 ಅಕ್ಟೋಬರ್ ಹೊತ್ತಿಗೆ ಮತ್ತೆ ಪುನರಾರಂಭಿಸಿ, ಕೇವಲ ಒಂದು ವರ್ಷ ಒಂದು ತಿಂಗಳಷ್ಟೇ ಮುಂದುವರಿಸಿ, ತಮ್ಮ ಪತ್ರಿಕೋದ್ಯಮ ವ್ಯವಸಾಯಕ್ಕೆ ಪೂರ್ಣವಿರಾಮವನ್ನಿತ್ತರು. ಪ್ರತಿಸಲವೂ ಪತ್ರಿಕೆಯನ್ನು ಪುನರಾರಂಭಿಸುವಾಗ ಸಮಾಜದ ಭಿನ್ನಆಸಕ್ತರನ್ನು ಪತ್ರಿಕೆಯ ಕಡೆಗೆ

ಆಕರ್ಷಿಸುವಂತೆ ಹೊಸಹೊಸ ತಂತ್ರಗಳನ್ನು ಕಂಡುಕೊಂಡರೂ ಅವರ ಯಾವ ತಂತ್ರವೂ ಫಲಿಸದೆ ಪತ್ರಿಕೆಯು ಇತಿಹಾಸದಲ್ಲಿ ತನ್ನ ನೆನಪನ್ನು ಉಳಿಸಿ, ಶಾಶ್ವತವಾಗಿ ಅಸ್ತಂಗತವಾಯಿತು.

ಶ್ರೀಕೃಷ್ಣಸೂಕ್ತಿ ಪತ್ರಿಕೆಯ ಸಂಪಾದಕರಾದ ಶ್ರೀ ರಾಜಗೋಪಾಲಕೃಷ್ಣರಾಯರ ಬದುಕು-ಬರಹದ ಕುರಿತಂತೆ ಅಧ್ಯಯನ ನಡೆಸಿದ ಹಾ.ತಿ. ಕೃಷ್ಣೇಗೌಡರು ತಮ್ಮ ಕೃತಿಯ ಪೀಠಿಕೆಯಲ್ಲಿ ಸೂಕ್ತಿಯಲ್ಲಿ ಪ್ರಕಟವಾಗಿರುವ ಬರಹಗಳಲ್ಲಿ "ಮೋಹಿನಿ (ವಿಶಿಷ್ಟ ಪ್ರಬಂಧ ಸಂಕಲನ-ಕೆ. ಯಜ್ಞನಾರಾಯಣ ಅಡಿಗ), ಸ್ತ್ರೀಪುನರ್ವಿವಾಹವಿಚಾರ, ವಿದ್ಯಾಭಿವೃದ್ಧಿ (ಕೆ. ಶಂಕರಪ್ಪ), ಬಾಲ್ಯವಿವಾಹವಿಚಾರ, ಭಾಷಾಭಿವೃದ್ಧಿಯ ಪ್ರಶ್ನೆ, ದೇಶಭಾಷೆಯ ಈಗಿನ ಸ್ಥಿತಿ (ಎಂ.ಡಿ. ಅಳಸಿಂಗಾಚಾರ್ಯ), ಪ್ರಭುಲಿಂಗಲೀಲೆ-ಕಾವ್ಯದ ವಿಮರ್ಶೆ (ಆರ್. ತಾತಾಚಾರ್ಯ)... ಲಿಪಿಸುಧಾರಣೆ (ದಾಮೋದರ ಬಾಳಿಗ), ಸಂಪಾದಕೀಯ ಬರಹಗಳೂ ಮೊದಲಾದವು ಉಲ್ಲೇಖನೀಯ"(ಕೃಷ್ಣೇ ಗೌಡ ಹಾ.ತಿ., 1978, ಪೀಠಿಕೆಯ ಮಾತು) ಎಂದು ಗುರುತಿಸಿದ್ದಾರೆ. ಭಾಷೆ, ಸಾಹಿತ್ಯ, ಸಂಸ್ಕೃತಿ-ನಾಡು ಈ ಕುರಿತಾಗಿ ವಿಶೇಷ ಕಾಳಜಿಯುಳ್ಳ ಸಂಪಾದಕರು ಹೊಸಗನ್ನಡ ಆರಂಭಕಾಲದ ಮುಂಬೆಳಗಿನಲ್ಲಿ ಪತ್ರಿಕೆಯ ಮುಖೇನ ಮಾಡಿದ ಕೆಲಸ ಹಾಗೂ ಕೆಲಸದ ಹಿಂದಿನ ಅವರ ಧೋರಣೆಯು ಅವರ ಪತ್ರಿಕೆಯ ಸಾಹಿತ್ಯ ಬರವಣಿಗೆಯ ಮೂಲಕ ವ್ಯಕ್ತವಾಗುತ್ತದೆ. ಮಹಾತ್ಮಾಗಾಂಧೀಜಿಯವರು ಸಕ್ರಿಯ ರಾಜಕಾರಣಕ್ಕೆ ಪ್ರವೇಶ ಪಡೆಯುವ ಪೂರ್ವದಲ್ಲಿಯೇ ನಾಡು-ನುಡಿ, ದೇಶೀಯ ಸಂಸ್ಕೃತಿಯ ಕುರಿತಂತೆ ತನ್ನದೇ ಆದ ರೀತಿಯಲ್ಲಿ ಪತ್ರಿಕೆಯ ಮುಖೇನ ತಮ್ಮ ಕೊಡುಗೆ ನೀಡಿದರು. ಶ್ರೀಕೃಷ್ಣಸೂಕ್ತಿಯ 1909ರ ಸಂಚಿಕೆಯ ಸಂಪಾದಕೀಯದಲ್ಲಿ ಉಲ್ಲೇಖಗೊಂಡ ವಿನಂತಿಯ ನುಡಿಗಳು ಹೀಗಿವೆ. "ನೀವುಗಳೆಲ್ಲರೂ ಶುದ್ಧವಾಗಿ ಸ್ವದೇಶಾಭಿಮಾನಿಗಳೆಂಬುದರಲ್ಲಿ ಸಂಶಯವಿಲ್ಲ. ಮಾತೃಭೂಮಿಯಾದೀ ಹಿಂದೂ ದೇಶದ ಸರ್ವಸಾಮಾನ್ಯವಾದ ಪುರೋಭಿವೃದ್ಧಿಯು ಸಹಜವಾಗಿಯೂ ಅಲ್ಲಲ್ಲಿನ ದೇಶಭಾಷೆಗಳ ಅಭಿವೃದ್ಧಿಯಿಂದಲೇ ಆಗತಕ್ಕದ್ದಲ್ಲದೇ ಅನ್ಯಥಾ ಅಲ್ಲ... ದೇಶಭಾಷೆಗಳನ್ನು ಧಿಕ್ಕರಿಸದೇ ಅದರಲ್ಲಿ ಇತೋಪ್ಯತಿಶಯವಾದ ವಿಶ್ವಾಸವನ್ನಿಟ್ಟು, ವಿಶ್ವವಿದ್ಯಾಲಯವು ನಿರ್ದಯವಾಗಿದ್ದರೂ, ನೀವುಗಳಾದರೂ ದಯಾಭರಿತರಾಗಿ, ದೇಶ-ಭಾಷೆಗಳು ಐಚ್ಛಿಕವಾಗಿದ್ದರೂ ಅವುಗಳನ್ನು ಅಭ್ಯಸಿಸಿ... ಮಿಕ್ಕುಳಿದ ಸಂಗತಿಗಳನ್ನು ಮುಂದೆಮುಂದೆ ಶ್ರುತಪಡಿಸುವೆವು. ಇಂತೀ ವಿನಂತಿಯೊಡನೆ ವಿರಮಿಸುವೆವು..."(ಪೂರ್ವೋಕ್ತ, ಪು-147) ಈ ಸಂಪಾದಕೀಯ ವಿನಂತಿಯಲ್ಲಿಯೂ ಸಂಪಾದಕರ ಭಾಷಾಭಿಮಾನ, ದೇಶಾಭಿಮಾನ, ದೇಶದ ಪ್ರಗತಿಯ ಕುರಿತಾದ ಕಾಳಜಿ, ವ್ಯಕ್ತವಾಗಿರುವುದನ್ನು ಕಾಣುತ್ತೇವೆ. ಹೊಸಗನ್ನಡದ ಮುಂಬೆಳಗಿನ ಕಾಲಮಾನದ ಪತ್ರಿಕೆಯೊಂದರಲ್ಲಿ ಗಾಂಧೀ ವಿಚಾರಧಾರೆ ಮತ್ತು ಸ್ವಾತಂತ್ರ್ಯಂದೋಲನಕ್ಕೆ ಪೂರ್ವಪೀಠಿಕೆಯಾಗಿ ಪತ್ರಕರ್ತರಾದ ಶ್ರೀ ರಾಜಗೋಪಾಲಕೃಷ್ಣರಾಯರ ನಡೆಯನ್ನು ಇಲ್ಲಿ ಸ್ಪಷ್ಟವಾಗಿ ಗಮನಿಸಬಹುದಾಗಿದೆ.

ಸಾರ್ವತ್ರಿಕ ಶಿಕ್ಷಣ ಎಂಬ ಅಭಿಯಾನ ಇನ್ನೂ ಜಾಗೃತಗೊಳ್ಳದೇ ಅನಕ್ಷರಸ್ಥರೇ ಬಹುಸಂಖ್ಯಾತರಾಗಿದ್ದ ಕೃಷಿಪ್ರಧಾನ ಸಮಾಜವ್ಯವಸ್ಥೆಯಲ್ಲಿ ಆಗಿನ್ನೂ ಗಣ್ಯ ಓದುಗ ವರ್ಗವೆಂಬ ಶಿಕ್ಷಿತಸಮಾಜದ ಗೈರಿನಲ್ಲಿ ಮುದ್ರಣ, ಪತ್ರಿಕೆ, ಪತ್ರಿಕೋದ್ಯಮವೆಂಬ ವ್ಯವಸಾಯವೂ, ಅಸಾಧ್ಯವಾದಕಾರಣ ಸೂಕ್ತಿಯು ಮುಂದೆ ತನ್ನ ಪ್ರಕಟನೆಯನ್ನು ನಿಲ್ಲಿಸಿತೇಕೆ ಎಂಬ ಪ್ರಶ್ನೆಗೆ ಕಾರಣಗಳನ್ನು ಮತ್ತೆ ಚರ್ಚಿಸಬೇಕಾಗಿಲ್ಲ.

**ಸತ್ಯಾಗ್ರಹೀ:**–ಏಕೀಕರಣ ಪೂರ್ವದ ಬಹುಮುಖ್ಯ ಪತ್ರಿಕೆಯೆಂದು ಗುರುತಿಸಬಹುದಾದ ಈ ಪತ್ರಿಕೆಯು ಹಿರಿಯಡ್ಕ ರಾಮರಾಯ ಮಲ್ಯರ ಸಂಪಾದಕತ್ವದಲ್ಲಿ 1923ರಲ್ಲಿ ಉಡುಪಿಯಿಂದ ಪ್ರಕಟಗೊಳ್ಳತೊಡಗಿ ಉಡುಪಿ ಸತ್ಯಾಗ್ರಹೀ ಮುದ್ರಣಾಲಯದಲ್ಲಿ ವಾಮನ ಕುಡ್ವರಿಂದ ಮುದ್ರಿಸಿ, ಪ್ರಕಟಿಸಲ್ಪಟ್ಟಿತು ಎಂಬ ಉಲ್ಲೇಖವು ಪತ್ರಿಕೆಯ ಕೊನೆಯ ಪುಟದಲ್ಲಿ ಮುದ್ರಿತಗೊಂಡಿದೆ. ಒಟ್ಟು ನಾಲ್ಕು ಪುಟಗಳಿದ್ದ ಪತ್ರಿಕೆಯ ಬಹುಭಾಗವನ್ನು ಮಹಾತ್ಮಾಗಾಂಧಿಯವರ ಸಂದೇಶಗಳು–ಕಾಂಗ್ರೆಸ್‌ಪಕ್ಷದ–ಪ್ರಾಂತೀಯ, ವಿವರಗಳು ತುಂಬಿಕೊಂಡಿದ್ದು, ರಾಷ್ಟ್ರಕಲ್ಪನೆಯ ಕುರಿತು ಸಹಮತವಿಲ್ಲದ ಗಾಂಧೀತತ್ವದ ಕುರಿತು ವಿಶ್ವಾಸವಿರದ ಯಾರಿಗೇ ಆದರೂ ಪತ್ರಿಕೆ ಇಷ್ಟವಾಗುವುದಕ್ಕೆ ಸಾಧ್ಯವಿಲ್ಲ. ಆದರೆ ಸಮಸ್ತ ದೇಶದ ಎಲ್ಲಾ ಅಕ್ಷರಸ್ಥರೂ ಗಾಂಧೀತತ್ವದ ಕುರಿತು ಅಂದು ವಿಶ್ವಾಸವಿಟ್ಟವರಾಗಿದ್ದು, ಕಾಂಗ್ರೆಸ್ಸಿನ ಸ್ವಾತಂತ್ರ್ಯ ಚಳವಳಿಯ ಸ್ವರಾಜ್ಯವು ಪ್ರತಿಯೊಬ್ಬರ ಕನಸಾಗಿದ್ದ ಕಾರಣ ಪತ್ರಿಕೆಯು ಜನರ ನಿರೀಕ್ಷೆಯಂತೆಯೇ ಮೇಲ್ಕಂಡ ವಿಷಯದ ಸುದ್ದಿಗಳಿಂದ ಭರ್ತಿಗೊಂಡಿರುತ್ತಿತ್ತು.

**ಸ್ವೀಕಾರ ಮತ್ತು ವಿಮರ್ಶೆ** ಎಂಬ ಶೀರ್ಷಿಕೆಯಡಿಯಲ್ಲಿ ಮಾರುಕಟ್ಟೆಗೆ ಹೊಸತಾಗಿ ಬಂದ ಪುಸ್ತಕ, ಪತ್ರಿಕೆಯ ಕುರಿತಾಗಿ 'ಸುದ್ದಿಪುಟ'ದಲ್ಲಿ ವರದಿಗಳನ್ನು ಪ್ರಕಟಿಸುತ್ತಿದ್ದರು. ದಿನಾಂಕ 30.01.1925ರ ಸಂಚಿಕೆಯಲ್ಲಿ ಶಿವರಾಮ ಕಾರಂತರು ಕುಂದಾಪುರದಿಂದ ಹೊರಡಿಸುತ್ತಿದ್ದ 'ವಸಂತ ಪತ್ರಿಕೆ'ಯ ಕುರಿತಾದ ಪ್ರಕಟಣೆ ಹೀಗಿದೆ. 'ಶ್ರೀ ಶಿವರಾಮ ಕಾರಂತರು ಕುಂದಾಪುರದಿಂದ ಹೊರಡಿಸುತ್ತಿರುವ ಈ ಮಾಸಪತ್ರಿಕೆಯು ಈ ವರ್ಷ ಮನೋಹರವಾದ ರೂಪವನ್ನು ತಾಳಿದೆ. ನಮ್ಮ ಮುಂದಿರುವ ಇದೇ ಸಂಪುಟದ ಮೊದಲನೆಯ ಸಂಚಿಕೆಯಲ್ಲಿ ಶ್ರೀ ಶಂಕರಭಗವತ್ಪಾದರೂ, ಮಂಡನಮಿಶ್ರರೂ ಎಂಬ ವಿಷಯದ ಕುರಿತು ಪಂಡಿತ ಶಿವರಾಮಯ್ಯನರ ಲೇಖನ, ಶ್ರೀ ವಾಮನ ಕುಡ್ವವರವರ ಪಂಕಜ ಎಂಬ ಚಿಕ್ಕ ಕಥೆ, ...... ಮೊದಲಾದ ವಿಷಯಗಳು ಇವೆ. ಈ ಪತ್ರಿಕೆಯು ಕನ್ನಡಿಗರ ಪ್ರೋತ್ಸಾಹಕ್ಕೆ ಯೋಗ್ಯವಾಗಿದೆಯೆಂದು ಖಂಡಿತವಾಗಿ ಹೇಳಬಲ್ಲೆವು' ಎಂದು ಒಂದು ರೀತಿಯ ಜಾಹೀರಾತು ರೂಪದ ಸುದ್ದಿಯನ್ನು ಕಾಣಬಹುದಾಗಿದೆ.

27.03.1924ರ ಸಂಚಿಕೆಯ 11ನೇ ಪುಟದಲ್ಲಿ ವಸಂತ ಪತ್ರಿಕೆಯ ಕುರಿತಾಗಿ ಜಾಹೀರಾತು ರೂಪದ ಪ್ರಕಟಣೆಯು ಒಳಗೊಂಡಿದೆ. ಇದೇ ಸಂಚಿಕೆಯಲ್ಲಿ ಪುಟ 2–3–4ರಲ್ಲಿ ಐರೋಡಿ ಶಿವರಾಮಯ್ಯ, ಕನ್ನಡ ಪಂಡಿತ್, ಕುಂದಾಪುರ ಬೋರ್ಡ್ ಹೈಸ್ಕೂಲ್ ಇವರ 'ಕಾವ್ಯ ವಿಚಾರ' ಎಂಬ ಶೀರ್ಷಿಕೆಯಲ್ಲಿ ಭಾರತೀಯ ಕಾವ್ಯಮೀಮಾಂಸೆಯ ಹಿನ್ನೆಲೆಯಲ್ಲಿ ಕಾವ್ಯದ ಸ್ವರೂಪ, ಉದ್ದೇಶ, ಲಕ್ಷಣದ ಕುರಿತಂತೆ ಸುದೀರ್ಘ ವಿವರಣೆಯ ವಿಮರ್ಶಪ್ರಬಂಧವು ಮುದ್ರಣಗೊಂಡಿರುತ್ತದೆ. ಸಾಹಿತ್ಯವಿಚಾರದ ಕುರಿತಂತೆ ಈ ಪತ್ರಿಕೆಯು ನೀಡಿದ ಪುಟಗಳು ತೀರಾ ಮಿತವಾದುದಾಗಿದ್ದು, ಜನತೆಯಲ್ಲಿ ಸ್ವಾತಂತ್ರ್ಯದ ಕುರಿತಾಗಿ ಹೋರಾಟದ ಮನಸ್ಥಿತಿಯನ್ನು ಉಂಟುಮಾಡುವುದೇ ಪತ್ರಕರ್ತರ ಕಾಳಜಿಯೆನ್ನುವುದು ವೇದ್ಯವಾಗುತ್ತದೆ. ಕೇವಲ 2 ವರ್ಷ ಮಾತ್ರ ಪ್ರಕಟಗೊಂಡು, ಈ ಪತ್ರಿಕೆಯ ಸಂಪಾದಕರಾದ ರಾಮರಾಯ ಮಲ್ಯರನ್ನು ಸರಕಾರವು ಸ್ವಾತಂತ್ರ್ಯ ಚಳವಳಿಯಲ್ಲಿ ನೇರ ಭಾಗಿಗಳೆಂಬ ಕಾರಣಕ್ಕಾಗಿ ಬಂಧಿಸಿದ ಪ್ರಯುಕ್ತ ಪತ್ರಿಕೆ ನಿಂತುಹೋಯಿತು. **ರಾಮರಾಯ ಮಲ್ಯರ ಪತ್ರಿಕಾ ಕಛೇರಿಗೆ ಮುಟ್ಟುಗೋಲು ಹಾಕಿ ಅವರನ್ನು ಬಂಧಿಸುವುದಕ್ಕೆ ಕಾರಣವಾದ ಕರಪತ್ರವನ್ನು ಈ ಪ್ರಬಂಧದ ಕೊನೆಯ ಅನುಬಂಧ ಸಂಖ್ಯೆ 1 ರಲ್ಲಿ ದಾಖಲಿಸಲಾಗಿದೆ.**

ಗಾಂಧೀಜಿಯವರ ಅಸಹಕಾರ ಚಳವಳಿಯ ಕರೆಗೆ ಓಗೊಟ್ಟು ಚಳವಳಿಯಲ್ಲಿ ಭಾಗವಹಿಸಿದ ಅನೇಕರು ಜೈಲು ಶಿಕ್ಷೆ ಅನುಭವಿಸುತ್ತಿದ್ದರು. ಸರಕಾರಿ ಅಧಿಕಾರಿಗಳು ತಮ್ಮ ಕೆಲಸವನ್ನು ಕಳೆದುಕೊಳ್ಳುವುದರೊಂದಿಗೆ ಜೈಲು ಶಿಕ್ಷೆ ಅನುಭವಿಸಬೇಕಾಗಿ ಬಂದು, ಅವರ ಕುಟುಂಬಿಕರು ಅಪಾರ ಕಷ್ಟನಷ್ಟಗಳನ್ನು ಅನುಭವಿಸುತ್ತಿದ್ದರು. ಆದ ಕಾರಣ ಎಷ್ಟೋ ಮಂದಿ ಹಿರಿಯರು ಗಾಂಧೀಜಿಯನ್ನು ಟೀಕಿಸಿ, ಅವಹೇಳನ ಮಾಡುತ್ತಿದ್ದರು. ಈ ವಾತಾವರಣ ಸ್ವಲ್ಪವಾದರೂ ಬದಲಾಗಲು ಕಾರಣವಾದದ್ದು ಉಡುಪಿಯಿಂದ ಹೊರಡುತ್ತಿದ್ದ 'ಸತ್ಯಾಗ್ರಹೀ' ಎಂಬ ವಾರಪತ್ರಿಕೆಯಿಂದಾಗಿ ಎಂದು ಹೇಳಬಹುದಾಗಿದೆ.

**ಉಡುಪಿ ಜಿಲ್ಲೆಯ ಸಾಹಿತ್ಯಕ ಮತ್ತು ಸಾಂಸ್ಕೃತಿಕ ಇತಿಹಾಸದಲ್ಲಿ 'ನವಯುಗ' ಪತ್ರಿಕೆಯ ಪಾತ್ರ:**

ನವಯುಗ ಎನ್ನುವ ಪ್ರಸಿದ್ಧ ಪತ್ರಿಕೆ 1921ರಲ್ಲಿ ಮಂಗಳೂರಿನಿಂದ ದಿವಂಗತ ಎ.ಬಿ. ಶೆಟ್ಟಿಯವರ ಸಂಪಾದಕತ್ವದಲ್ಲಿ ಪ್ರಕಟವಾಗುತ್ತಿತ್ತು. ಮುಂದೆ 1936ರ ಹೊತ್ತಿಗೆ ಪತ್ರಿಕೆಯು ಕೆ. ಹೊನ್ನಯ್ಯ ಶೆಟ್ಟಿಯವರ ಸಂಪಾದಕದತ್ವದಲ್ಲಿ ಉಡುಪಿಯಿಂದ ಪ್ರಕಟವಾಗತೊಡಗಿತು. ರಾಷ್ಟ್ರೀಯ ಸುದ್ದಿಯ ಜೊತೆಜೊತೆಗೆ ಸ್ಥಳೀಯ ಘಟನಾವಳಿಗೂ ಸಾಹಿತ್ಯದ ಅಂಕಣಕ್ಕೂ ಸಮಾನ ಪ್ರಾಧಾನ್ಯವನ್ನು ನೀಡಿ, ಸ್ಥಳೀಯ ಸುದ್ದಿಯೂ ರಾಷ್ಟ್ರೀಯ ಸುದ್ದಿಯಷ್ಟೇ ಪ್ರಾಮುಖ್ಯ ಉಳ್ಳದ್ದು ಎಂಬ ಸಮಾನತೆಯ ಪ್ರಜ್ಞೆಯನ್ನು ಜನಸಮೂಹಕ್ಕೆ ನೀಡಿ, ಪ್ರಜಾಪ್ರಭುತ್ವದಲ್ಲಿ ಎಲ್ಲರೂ ಸಮಾನರು ಎಂಬ ಚಿಂತನೆಗೆ ಪ್ರೇರಣೆಯನ್ನು ನೀಡಿತು.

**ವಿಶೇಷ ಸಂಚಿಕೆಗಳು:** ಉಡುಪಿ ಜಿಲ್ಲೆಯಾದ್ಯಂತ ವಿಶೇಷ ಪ್ರಸರಣವನ್ನು ಹೊಂದಿದ್ದ ಈ ಪತ್ರಿಕೆಯು ದಸರಾ ಸಂಚಿಕೆ, ದೀಪಾವಳಿ ಸಂಚಿಕೆ, ಪ್ರಜಾರಾಜ್ಯ ವಿಶೇಷಾಂಕ, ಪರ್ಯಾಯ ಸಂಚಿಕೆ ಎಂಬ ವಿಶೇಷ ಸಂಚಿಕೆಗಳನ್ನು ಪ್ರಕಟಿಸುತ್ತಾ ಬಂದಿರುವುದಲ್ಲದೇ ಔದ್ಯಮಿಕ, ವಾಣಿಜ್ಯ ಪುರವಣಿಯನ್ನೂ ಪ್ರಕಟಿಸುವ ನೂತನ ಪರಂಪರೆಗೆ ನಾಂದಿ ಹಾಡಿತ್ತು ಎನ್ನುವುದು ಪತ್ರಿಕೆಯ ವಿಶೇಷತೆಯಾಗಿದೆ. "ಅಭ್ಯಾಗತ ಸಂಪಾದಕ ಎಂಬ ವಿಶೇಷ ಹುದ್ದೆಯ ಹಿನ್ನೆಲೆಯಲ್ಲಿ ಎಂ.ಜಿ.ಎಂ.ಕಾಲೇಜಿನ ಅರ್ಥಶಾಸ್ತ್ರ ಉಪಾನ್ಯಾಸಕ ಮತ್ತು ಪ್ರಾಂಶುಪಾಲರಾಗಿದ್ದ ಕು. ಶಿ. ಹರಿದಾಸಭಟ್ಟರು ಸಂಪಾದಕೀಯ ಲೇಖನದಲ್ಲಿ ಪುರವಣಿಯ ವೈಶಿಷ್ಟ್ಯಗಳನ್ನು ದಾಖಲಿಸುತ್ತಿದ್ದರು. **1975ರ ಸಂಪುಟ 54 ಸಂಚಿಕೆ 21ರ ಪ್ರಜಾರಾಜ್ಯ ವಿಶೇಷಾಂಕದ** ಸಂಪಾದಕೀಯದಲ್ಲಿ ಆದರ್ಶ ಪತ್ರಕರ್ತನ ನಿಷ್ಠೆಯನ್ನು ಗುರುತಿಸಬಹುದಾಗಿದೆ. ಆ ಸಂದರ್ಭದಲ್ಲಿ ಪ್ರಸರಣದಲ್ಲಿದ್ದ ವಿವಿಧ ಪತ್ರಿಕೆಗಳು ಯಾವುದೋ ನಿರ್ದಿಷ್ಟ ರಾಜಕೀಯ ಪಕ್ಷದ ಕೈಗೊಂಬೆಗಳಾಗಿ ಪತ್ರಿಕಾಧರ್ಮವನ್ನು ಮೀರಿ ವರ್ತಿಸುತ್ತಿದ್ದಾಗ ನವಯುಗದ ಸಂಪಾದಕರು ತಮ್ಮ ಸಂಪಾದಕೀಯದಲ್ಲಿ "ಕಾಂಗ್ರೆಸು ಇರಲಿ, ಇತರ ರಾಜಕೀಯ ಪಕ್ಷಗಳೇ ಇರಲಿ, ಒಟ್ಟು ದೇಶದ ಹಿತ ತಮತಮಗೇ ಗುತ್ತಿಗೆಯೆಂಬ ಸಂಕುಚಿತತೆಯಿಂದ ದೂರವಾಗಬೇಕು.... ನಮ್ಮ ಸಾಧನೆಗಳ ಬಗ್ಗೆ ಹೆಮ್ಮೆ ಪಡೋಣ. ಭವಿಷ್ಯದ ಬಗ್ಗೆ ಭರವಸೆ ಇಡೋಣ. ಒಬ್ಬರು ಇನ್ನೊಬ್ಬರ ಮೇಲೆ ಗೌರವ ವಿಶ್ವಾಸದಿಂದಿರೋಣ, ಸದಾ ಸಂದೇಹದ ದೃಷ್ಟಿಯಿಂದ ನೋಡುವುದನ್ನೂ, ಇತರರನ್ನು ನಿಂದಿಸುವುದರಿಂದ, ಖಂಡಿಸುವುದರಿಂದಲೇ ನಮ್ಮ ಕೀರ್ತಿ ಪತಾಕೆ ಬಾನೆತ್ತರಕ್ಕೆ ಹಾರುವುದೆಂಬುದನ್ನು ತ್ಯಜಿಸೋಣ...." ಎಂದಿದ್ದಾರೆ. ಇದುವೇ 'ನವಯುಗ' ಪತ್ರಿಕೆಯ ಪತ್ರಿಕಾಧರ್ಮ.

ದಸರಾ ವಿಶೇಷಾಂಕದ ಸಂಪಾದಕೀಯದಲ್ಲಿ (1974, ಸಂಪುಟ 54, ಸಂಚಿಕೆ–6ರಲ್ಲಿ) ದುಷ್ಟ ರಾಕ್ಷಸೀ ಪ್ರವೃತ್ತಿಯ ವಿರುದ್ಧ ನ್ಯಾಯೋಚಿತವಾಗಿ ಹೋರಾಡುವುದೇ ದಸರಾ ನಾಡಹಬ್ಬದ ಆಶಯವೆಂದು ಸಾರುತ್ತಾ, ರಾಜ್ಯದ ಸಮಸ್ಯೆಗಳೆಂಬ ದುಷ್ಟಶಕ್ತಿಯ ವಿರುದ್ಧ ಹೋರಾಡಿ, ಕಲ್ಯಾಣದ ಜಯಸಾಧಿಸುವುದೇ ನಮ್ಮೆಲ್ಲರ ಗುರಿಯಾಗಿರಲಿ ಎಂದು ಆಶಿಸುತ್ತಾರೆ.

ದೀಪಾವಳಿ ಸಂಚಿಕೆಯ ಸಂಪಾದಕೀಯಕ್ಕೆ 'ಕರಿಯ ಮೋಡ ಚದುರಲಿ ದೀಪ ಜ್ಯೋತಿ ತೊಳಗಲಿ' ಎಂಬ ಶೀರ್ಷಿಕೆಯಲ್ಲಿಯೇ ದೀಪಾವಳಿಯ ಮಹತ್ವವನ್ನು ಎತ್ತಿ ಹಿಡಿದಿದ್ದಾರೆ. ವಾಣಿಜ್ಯ ಪುರವಣಿಯನ್ನು ಹೊರತುಪಡಿಸಿ, ಮಿಕ್ಕುಳಿದ ಎಲ್ಲ ಸಂಚಿಕೆಗಳಲ್ಲಿ ಸಾಹಿತ್ಯ–ಸಂಸ್ಕೃತಿ–ಸಂಶೋಧನಾ ಬರಹಗಳಿಗೇ ಆದ್ಯತೆ ನೀಡುತ್ತಿದ್ದರೆಂಬುದು ಗಮನಾರ್ಹ ಸಂಗತಿಯಾಗಿದೆ.

**ಉಡುಪಿ ಪರ್ಯಾಯ ಸಂಚಿಕೆ:** ಪ್ರತಿ ಎರಡು ವರ್ಷಗಳಿಗೊಮ್ಮೆ ಬರುವ ಉಡುಪಿ ಮಠದ ಪರ್ಯಾಯದ ಸಂದರ್ಭದಲ್ಲಿ ಪರ್ಯಾಯ ಸಂಚಿಕೆಯನ್ನು ಪ್ರಕಟಿಸುವುದು ನವಯುಗದ ಪರಂಪರೆಯಾಗಿದ್ದು, ಈ ಸಂಚಿಕೆಯಲ್ಲಿ ಲಲಿತ ಪ್ರಬಂಧ, ಕಥೆ, ಕಾವ್ಯ, ವಿಮರ್ಶೆ, ಸಂಶೋಧನ ಲೇಖನಗಳಿಗೆ ಆದ್ಯತೆ ನೀಡಲಾಗುತ್ತಿತ್ತು. 11.01.1940ರ ಪರ್ಯಾಯ ಸಂಚಿಕೆ ಪುಟ ಸಂಖ್ಯೆ–31–33ರಲ್ಲಿ 'ಬಡವರ ಬಂಧು' ಪತ್ರಿಕೆಯ ಸಂಪಾದಕರಾದ ಮಂಗಳೂರಿನ ಜಾರಪ್ಪ ಅವರ 'ಬದುಕುವುದು ಹೇಗೆ' ಎಂಬ ಪ್ರಬಂಧ ಮಾದರಿಯ ಲೇಖನವೊಂದು ಪ್ರಕಟವಾಗಿದೆ. ಈ ಪ್ರಬಂಧದಲ್ಲಿ 'ಅನಗತ್ಯ ಖರ್ಚುಗಳಿಗೆ ಕಡಿವಾಣ ಹಾಕಿದಲ್ಲಿ ಬದುಕು ಸುಲಭವಾಗುತ್ತದೆ ಮತ್ತು ಸುಗಮವಾಗುತ್ತದೆ' ಎಂದು ತಮ್ಮ ಪ್ರಬಂಧದಲ್ಲಿ ಆರ್ಥಿಕ ಸಂಕಷ್ಟಕ್ಕೆ ಪರಿಹಾರವನ್ನು ಸೂಚಿಸಿದ್ದಾರೆ.

**ಅನ್ಯ ಪತ್ರಿಕಾ ಸಂಪಾದಕರ ಬರಹಗಳಿಗೆ ವಿಶೇಷ ಆದ್ಯತೆ:**

'ನವಯುಗ' ಪತ್ರಿಕೆಯು ಆರಂಭದಿಂದಲೂ ಜಿಲ್ಲೆಯ ಇತರ ಪತ್ರಿಕಾ ಸಂಪಾದಕರ ಲೇಖನಗಳಿಗೆ ಅವಕಾಶ ನೀಡುತ್ತಾ ಬಂದಿರುವುದನ್ನು ಗುರುತಿಸಬಹುದಾಗಿದೆ. 'ಪ್ರಭಾತ' ಪತ್ರಿಕೆಯ ಸಂಪಾದಕರಾದ ಕುಡ್ಪಿ ವಾಸುದೇವ ಶೆಣೈಯವರು (1953, ಪ್ರಜಾರಾಜ್ಯ ವಿಶೇಷಾಂಕ ಪುಟ–54) 'ಸತ್ಯಾಗ್ರಹೀ' ಪತ್ರಿಕೆಯ ಸಂಪಾದಕರಾದ ಹಿರಿಯಡ್ಕ ರಾಮರಾಯ ಮಲ್ಯರು (ಪುಟ ಸಂಖ್ಯೆ 17–18) 'ಬಡವರ ಬಂಧು' ಪತ್ರಿಕೆಯ ಸಂಪಾದಕರಾದ ಮಂಗಳೂರಿನ ಜಾರಪ್ಪ ಅವರು, ಪರ್ಯಾಯ ಸಂಚಿಕೆ (11.01.1940, ಪುಟ ಸಂಖ್ಯೆ–31 ರಿಂದ 33) 'ಅಂತರಂಗ' ಪತ್ರಿಕೆಯ ಸಂಪಾದಕರಾದ ಎಸ್.ಯು. ಪಣಿಯಾಡಿಯವರ (ಮಕರ ಸಂಕ್ರಾಂತಿ ಸಂಚಿಕೆ 1939 ಪುಟ 59–60) ಲೇಖನಗಳು ಪ್ರಕಟವಾಗಿರುವುದನ್ನು ಗಮನಿಸಬಹುದಾಗಿದೆ. ಅಂತರಂಗ ಪತ್ರಿಕೆಯ ಸಹಸಂಪಾದಕ ಮಟ್ಟಾರು ವಿಠಲ ಹೆಗ್ಡೆಯವರ ಲೇಖನ 'ಶ್ರೀಕೃಷ್ಣ ಈಗ ಬಂದರೆ' (1939, 7ನೇ ಸೆಪ್ಟೆಂಬರ್ ಸಂಚಿಕೆ), ಇದೇ ಸಂಚಿಕೆಯಲ್ಲಿ ಕವಿ ಎಸ್. ವೆಂಕಟರಾಜರ (ವೀರಭೂಮಿ ಪತ್ರಿಕೆಯ ಸಂಪಾದಕರು) 'ಮಾದಿಗ' ಕವನ ಪ್ರಕಟವಾಗಿರುವುದನ್ನು ಇಲ್ಲಿ ಉಲ್ಲೇಖಿಸಬಹುದಾಗಿದೆ.

ಸ್ವತಃ ಲೇಖಕರೂ ಪತ್ರಿಕೆಯ ಸಂಪಾದಕರೂ, ಪುಸ್ತಕ ಭಂಡಾರದ ಸ್ಥಾಪಕರೂ ಆಗಿದ್ದ ಕೆ. ಹೊನ್ನಯ್ಯ ಶೆಟ್ಟಿಯವರು 1939ರಿಂದ 1974ರ ಜೂನ್ 1 ರ ತನಕ ನವಯುಗ ಪತ್ರಿಕೆಯನ್ನು ನಡೆಯಿಸಿಕೊಂಡುಬಂದರು. ಅವರ ನಿಧನಾನಂತರ ನವಯುಗದ ಪ್ರಕಟಣೆಯು ನಿಂತು ಹೋಯಿತು. ಆದರೆ ನವಯುಗ ಏಕೆ ಪ್ರಕಟಣೆಯನ್ನು ನಿಲ್ಲಿಸಿತು? ಈ ಪ್ರಶ್ನೆಗೆ ಉತ್ತರವನ್ನು ಕಂಡುಕೊಳ್ಳಲು ನವಯುಗದ ಸಂಪಾದಕರಾಗಿದ್ದ ದಿ। ಹೊನ್ನಯ್ಯ ಶೆಟ್ಟಿಯವರ ಸುಪುತ್ರಿ ಕೆ. ಉಷಾ ಪಿ. ರೈ ಅವರ 'ನನ್ನ ಪಪ್ಪ–ತ್ರಿವಿಕ್ರಮ ಛಲದ ಹೋರಾಟಗಾರ', ಎಂಬ ಲೇಖನವು ಉತ್ತರವನ್ನು ನೀಡುತ್ತದೆ. ಪಪ್ಪನ ಮರಣದೊಂದಿಗೆ ನವಯುಗದ ಪ್ರಕಟಣೆ ನಿಂತು ಹೋಯಿತು. ಆಗ ಅದನ್ನು ಹಿಡಿದೆತ್ತಿ ನಿಲ್ಲಿಸುವವರು ಯಾರೂ ಇರಲಿಲ್ಲ... ಪಪ್ಪನ ಏಳು ಮಕ್ಕಳಲ್ಲಿ ಯಾರೂ

ನವಯುಗಕ್ಕೆ ಪುನಃ ಉಸಿರುತುಂಬುವ ಸಾಹಸ ಮಾಡಲಿಲ್ಲ... 53 ವರ್ಷ ಬಾಳಿದ ನವಯುಗವನ್ನು ಉಳಿಸಬಹುದಿತ್ತೋ ಏನೋ ಎಂದು ಅನ್ನಿಸುತ್ತಿದೆ. ಆದರೆ ಕಾಲ ಮಿಂಚಿ ಹೋಗಿದೆ."(1995, ಪು–99–100) ಉಷಾ ಪಿ. ರೈಯವರ ಈ ಮೇಲಿನ ಹೇಳಿಕೆಯಲ್ಲಿ ನವಯುಗ ಪತ್ರಿಕೆಯು ನಿಂತುಹೋದ ಕುರಿತು ವಿಷಾದವಿರುವುದನ್ನು ಗಮನಿಸಬಹುದು. ಕೇವಲ ವಿಷಾದ ಮಾತ್ರವಲ್ಲದೆ ನಿಂತುಹೋಗುವುದಕ್ಕೆ ಕಾರಣ ಪತ್ರಿಕೆಯನ್ನು ಮುಂದುವರಿಸಿಕೊಂಡು ಬರಲು ಬೇಕಾದ ವ್ಯೂಹಕ್ಕೆ ಯಾರೊಬ್ಬರೂ ಸಹಕರಿಸಲಿಲ್ಲ ಎಂಬ ಅಭಿಪ್ರಾಯವು "ಅದನ್ನು ಹಿಡಿದೆತ್ತಿ ನಿಲ್ಲಿಸುವವರು ಯಾರೂ ಇಲ್ಲ" ಎಂಬ ಹೇಳಿಕೆಯು ಧ್ವನಿಸುತ್ತಿದೆ.

ಪತ್ರಿಕೆಯು ಒಂದು ಉದ್ಯಮ ಅಥವಾ ವೃತ್ತಿಯಾಗಿ ವೃತ್ತಿಧರ್ಮದಲ್ಲಿ ಎದುರಿಸಬೇಕಾದ ಸವಾಲುಗಳನ್ನು ಎದುರಿಸಿ, ಕಾಲಕಾಲಕ್ಕೆ ಬೇಕಾದ ವ್ಯೂಹಗಳನ್ನು ರಚಿಸಿಕೊಂಡು, ಮುಂದುವರಿದಿದ್ದಲ್ಲಿ ನವಯುಗ 20ನೇ ಶತಮಾನದ ಕೊನೆಯವರೆಗೆ ಮತ್ತು ಇಂದಿಗೂ ಮುಂದುವರಿಯುತ್ತಿತ್ತು ಎನ್ನುವುದರಲ್ಲಿ ಯಾವ ಸಂದೇಹವೂ ಇಲ್ಲ. ಈ ಸತ್ಯವು ಅವರ ಸುಪುತ್ರಿ ಉಷಾ ಪಿ. ರೈಯವರಿಗೆ ಅರ್ಥವಾಗುತ್ತಿರುವುದರಿಂದಲೇ ಅವರ ಹೇಳಿಕೆಯಲ್ಲಿ ಪಶ್ಚಾತ್ತಾಪದ ಭಾವ ತುಂಬಿರುವುದನ್ನು ಗಮನಿಸಬಹುದು. ಪರಿಣಾಮಕಾರಿಯಾದ ವ್ಯೂಹವೊಂದನ್ನು ರಚಿಸಿಕೊಂಡಲ್ಲಿ ಹೆಸರಿನ ಬಲದಿಂದ ಜನಸಾಮಾನ್ಯ ಓದುಗ ವರ್ಗದಲ್ಲಿ ಸದಭಿಪ್ರಾಯವನ್ನು ಗಟ್ಟಿಗೊಳಿಸುವಲ್ಲಿ ಸಫಲರಾಗಿ ಯಶಸ್ಸಿನೆಡೆಗೆ ಮುಂದುವರಿಯಬಹುದಾಗಿತ್ತು.

**ಶಿವರಾಮ ಕಾರಂತರ ಮಾಸಪತ್ರಿಕೆ–'ವಸಂತ'–ಆರಂಭ:** ಕಾಲೇಜು ಶಿಕ್ಷಣಕ್ಕೆ ವಿದಾಯ ಹೇಳಿದ ಶಿವರಾಮ ಕಾರಂತರು ಸುಮಾರು ನಾಲ್ಕು ವರ್ಷಗಳ ಕಾಲ ಗಾಂಧೀಜಿಯವರ ತತ್ವಾದರ್ಶಗಳಲ್ಲಿ ನಂಬಿಕೆಯನ್ನು ಇಟ್ಟು ಊರೂರು ಸುತ್ತುತ್ತಾ ಲೋಕಾನುಭವವನ್ನು ಪಡೆಯುತ್ತಾ ಹೋದರು. ಆ ಕಾಲಕ್ಕೆ ಕುಂದಾಪುರದ ದೇವಣ್ಣ ಪೈ ಎನ್ನುವವರು ಆಗಲೇ ಬಂಗಾಳಿ ಮತ್ತು ಮರಾಠಿ ಪತ್ರಿಕೆಗಳಿಗೆ ವರ್ಗಣಿದಾರರಾಗಿ ಆ ಪತ್ರಿಕೆಗಳ ಒಳಗಿನ ಮತ್ತು ಹೊರಗಿನ ತತ್ವಗಳಿಗಾಗಿ ಅವನ್ನು ನೆಚ್ಚಿಕೊಂಡಿದ್ದರು. ಇದೇ ತೆರನಾದ ಪತ್ರಿಕೆಯನ್ನು ಕನ್ನಡದಲ್ಲೇಕೆ ಮಾಡಬಾರದು? ಎಂಬ ಪ್ರಶ್ನೆಯು ಮನಸ್ಸಲ್ಲಿ ಪ್ರಜ್ವಲಿಸಿ, ಈ ಪ್ರಶ್ನೆಗೆ ಉತ್ತರ ಎಂಬಂತೆ "1924ರಲ್ಲಿ ನನ್ನ ಸಂಪಾದಕತ್ವದಲ್ಲಿ 'ವಸಂತ' ಎಂಬ ಮಾಸ ಪತ್ರಿಕೆಯನ್ನು ಹೊರಡಿಸುವ ನಿರ್ಧಾರವಾಯಿತು"(2011, ಪು–77) ಇದು ಮಾಸ ಪತ್ರಿಕೆಯು ಹುಟ್ಟಿದ ಹಿನ್ನಲೆ.

**ಪತ್ರಿಕೆಯು ಕನ್ನಡ ಸಾಹಿತ್ಯಕ್ಕೆ ಸಲ್ಲಿಸಿದ ಕೊಡುಗೆ:**

ಪತ್ರಿಕೆಯ ಮೂಲಕ ಕನ್ನಡಿಗರನ್ನು ಬೌದ್ಧಿಕವಾಗಿ ಬೆಳೆಸುವ ಕನಸುಕಂಡು ಆರಂಭಿಸಿದ್ದೇನೋ ನಿಜ, ಆದರೆ ಕನ್ನಡಿಗರು ಸಾಹಿತ್ಯಕವಾಗಿ ಬೆಳೆದವರು ಎನ್ನುವುದಕ್ಕಿಂತ ಪತ್ರಿಕೆಯು ಕಾರಂತರಿಗೆ ಸಾಕಷ್ಟು 'ಅನುಭವ'ವನ್ನು ಕೊಟ್ಟಿತು. ಕಾರಂತರು ಬೌದ್ಧಿಕವಾಗಿ ಬೆಳೆದರು. ಹೇಗೆಂದರೆ ಪತ್ರಿಕೆಯ ಪುಟಗಳನ್ನು ತುಂಬಿಸಲು ಸ್ಥಳೀಯ ಮತ್ತು ಪರವೂರ ಮಿತ್ರರನ್ನು ಒತ್ತಾಯಸಿದರೂ ಮಿತ್ರರಿಂದ ಪೂರಕ ಪ್ರತಿಕ್ರಿಯೆ ಇಲ್ಲದೇ ಹೋದಾಗ ತಾವೇ ಸ್ವತಃ ಹೊಸಹೊಸ ಗ್ರಂಥಗಳನ್ನು ಓದಿ ವಿಷಯ ತಿಳಿದು, ತಮ್ಮ ಜ್ಞಾನವನ್ನು ಪತ್ರಿಕೆಯ ಮೂಲಕ ಅಭಿವ್ಯಂಜಿಸಿದರು. ವಿಚಿತ್ರಕೂಟ, ಭೂತ, ನಿರ್ಭಾಗ್ಯ ಜನ್ಮ ಈ ಮುಂತಾದ ಕೃತಿಗಳು ತಮ್ಮ ಪತ್ರಿಕೆಯ ಪುಟ ಭರ್ತಿಗೊಳಿಸುವ ಸಲುವಾಗಿಯೇ ಹುಟ್ಟಿಕೊಂಡ ಕಾದಂಬರಿಗಳಾಗಿವೆ. ಪತ್ರಿಕೆಯ ಚಂದಾದಾರರನ್ನು ಹುಡುಕಿಕೊಂಡೇ ಕರ್ನಾಟಕವನ್ನು ಸುತ್ತಿ ಸಾಕಷ್ಟು ಬವಣೆ ಪಟ್ಟದ್ದಲ್ಲದೆ ಸಮಾಜದ ನೈಜ ಸ್ವರೂಪವನ್ನು

ಅರಿಯಲು ಅವರ ಈ ಪ್ರಯತ್ನವೂ ಒಂದು ಆವರಣವಾಯಿತು. ಇಷ್ಟಾಗಿಯೂ ಮಂಜೇಶ್ವರ ಗೋವಿಂದ ಪೈ, ಗುರುಗಳಾದ ಶಿವರಾಮಯ್ಯ ಮುಂತಾದ ಅಗ್ರಗಣ್ಯ ಲೇಖಕರ ಬರಹಗಳನ್ನು ತಮ್ಮ ಪತ್ರಿಕೆಯಲ್ಲಿ ಪ್ರಕಟಿಸಿ, ಪತ್ರಿಕೆಯ ಅಂತಃಸತ್ವವನ್ನು ಹೆಚ್ಚಿಸಿದ್ದರು.

ಬ್ರಹ್ಮಚರ್ಯ-ಸಮಾಲೋಚನೆಯ ಶೀರ್ಷಿಕೆಯಡಿಯಲ್ಲಿ ಬಂದ ವೈಚಾರಿಕ ಲೇಖನ 20ನೇ ಶತಮಾನದ ಪೂರ್ವಾರ್ಧದಲ್ಲಿ ಒಂದು ಮೌಲ್ಯ ಎಂಬಂತೆ ಪ್ರತಿಪಾದಿತವಾದ ಲೇಖನವಾಗಿತ್ತು. "ಬ್ರಹ್ಮಚರ್ಯದ ಕುರಿತು ಗಮನ ಕೊಡದೇ ಹೋದಲ್ಲಿ ನಮ್ಮ ದೇಶವು ಭರಿಸಲಾಗದ ಅಧೋಗತಿಯನ್ನು ಹೊಂದುವುದು. ಈ ಮಹದ್ವಿಷಯದ ಕುರಿತು ಹೆಚ್ಚು ಬರೆಯಲು ನಮ್ಮ ಜ್ಞಾನವು ಸಾಲದು"(ಸಂ: ಮಾಲಿನಿ ಮಲ್ಯ, 1995ಬಿ, ಪು-80) ಎಂದು ಕಾರಂತರು ತಮ್ಮ ಪ್ರಾಮಾಣಿಕತೆಯನ್ನು ತೋಡಿಕೊಂಡಿದ್ದಾರೆ. ಲೇಖಕರ ಈ ಆರಂಭಿಕ ಬರವಣಿಗೆ ಕುರಿತಂತೆ, ಮಹಾತ್ಮಾ ಗಾಂಧಿಯವರ ಪ್ರಭಾವವನ್ನು ಗುರುತಿಸಬಹುದು. ಲೇಖನದ ಕೊನೆಯಲ್ಲಿ ಮಹಾತ್ಮಾ ಗಾಂಧಿಯವರ 'ಆರೋಗ್ಯ ಸಾಧನ' (Guide to health) ಎಂಬ ಗ್ರಂಥದ ಬ್ರಹ್ಮಚರ್ಯ ಎಂಬ ಅಧ್ಯಾಯವನ್ನು ಓದಿರಿ ಎನ್ನುವ ಮಾರ್ಗದರ್ಶನದೊಂದಿಗೆ ಲೇಖನ ಮುಕ್ತಾಯಗೊಳ್ಳುತ್ತದೆ. ಜೂನ್ 1925ರ 'ವಸಂತ'ದ ಸಂಚಿಕೆಯಲ್ಲಿ ಕಾರಂತರು ಪ್ರತಿಪಾದಿಸುವ ಈ ವಿಚಾರಗಳು ಆಧುನಿಕ ವೈಜ್ಞಾನಿಕ ಹಿನ್ನಲೆಯಿಂದ ಓದಿದಾಗ ಕಾರಂತರ ವಿವರಣೆ ಅತಿಯಾಯಿತು ಅನ್ನಿಸುವುದಲ್ಲದೆ ಕಾರಂತರ ಅಭಿಪ್ರಾಯ ಸಮಕಾಲೀನವಾಗಿಲ್ಲ ಎಂದೆನಿಸುತ್ತದೆ. 1924ರ ತಮ್ಮ ಮೊದಲ ಸಂಪುಟದಲ್ಲಿ ಬಾಲ್ಯವಿವಾಹದ ವಿರುದ್ಧ ದನಿಯೆತ್ತುವುದಲ್ಲದೇ, ವಿಧವಾವಿವಾಹವೆಂಬ ಪ್ರಗತಿಪರ ವಿಚಾರವನ್ನು ಪ್ರತಿಪಾದಿಸುತ್ತಾರೆ. 'ವಸಂತ' ಪತ್ರಿಕೆಯು ಒಂದು ವರ್ಷ ಪೂರ್ಣಗೊಳಿಸಿ, ಎರಡನೇ ವರ್ಷಕ್ಕೆ ಕಾಲಿಡುವ ಸಂದರ್ಭದಲ್ಲಿ ತಮ್ಮ ಒಂದು ವರ್ಷದ ಪತ್ರಿಕೋದ್ಯಮದ ಅನುಭವವನ್ನು ಹೀಗೆ ವಿವರಿಸುತ್ತಾರೆ. "ಒಂದು ವರ್ಷದ ಕಾಲವು ವಸಂತನಿಗೆ ವನವಾಸದಂತೆ ಕಳೆದು ಹೋಯಿತು. ವನವಾಸವೆಂದು ಬೆದರುವುದಿಲ್ಲ. ಜನ್ಮವೆತ್ತಿದವನಿಗೆ ಕಷ್ಟವು ತಪ್ಪದೆಂಬುದು ನಮಗೆ ತಿಳಿಯದೇ ಇಲ್ಲ..... ನಮಗೆ ಈ ಸಾಹಸದಿಂದ ಯಾವುದೊಂದು ಮಹತ್ ಸುಖ ಪ್ರಾಪ್ತಿಯಾಗಬೇಂಬ ಇಷ್ಟವೂ ಇರುವುದಿಲ್ಲ. ಆದರೆ ಪ್ರಾಣವಾಯುಗಳನ್ನು ಧರಿಸಿ, ತಮ್ಮೆಲ್ಲರ ಸೇವೆಯನ್ನು ಮಾಡಲು, ಬದುಕಲು ಬೇಕಾದ ಸಂಪತ್ತಿಯನ್ನು ಒದಗಿಸಿ ಕೊಡದಿದ್ದರೆ ಮುಂದೆ ನಾವೇನು ಮಾಡಬಹುದು....ದೈವೇಚ್ಛೆಯಿಂದಲೂ ನಿಮ್ಮಗಳ ಸಹಾನುಭೂತಿಯಿಂದಲೂ ಇನ್ನೂ ಹೆಚ್ಚಿನ ಚಂದಾದಾರರನ್ನೊದಗಿಸಿಕೊಟ್ಟು, ತಮ್ಮ ಪ್ರೋತ್ಸಾಹವನ್ನು ತೋರಿಸುವಿರೆಂಬುದೇ ನಮ್ಮ ನಂಬುಗೆ.... ತಮ್ಮಗಳ ಆಶೀರ್ವಾದ ಕೋರುವೆವು."(1925, ಪು-45)

ಎರಡನೇ ವರ್ಷವೂ ಕಾರಂತರಿಗೆ ಪತ್ರಿಕೋದ್ಯಮದಿಂದ ಇನ್ನಷ್ಟು ಆರ್ಥಿಕ ನಷ್ಟ ಉಂಟಾಯಿತೇ ಹೊರತು, ಬೇರೇನೂ ಸಾಧಿತವಾಗಲಿಲ್ಲ. ವರ್ಗಣಿದಾರರ ಚಂದಾ ಹಣ, ತಮ್ಮ ಬಳಿಯಲ್ಲಿದೆ ಎಂಬ ಕಾರಣಕ್ಕಾಗಿ ಎರಡನೇ ವರ್ಷದ ಸಂಚಿಕೆಗಳನ್ನು ಹೊರತಂದು, ತಮ್ಮ ಪತ್ರಿಕೋದ್ಯಮ ಕ್ಷೇತ್ರದಿಂದ ಹಿಂದೆ ಸರಿದರು. "ನಾನು ಸಾಲ ಮಾಡಿಕೊಂಡೆ. ಮಿತ್ರ ಭಂಡಾರಿಗಳು ನಮಗೋಸ್ಕರ ದುಡಿದದ್ದು ವ್ಯರ್ಥವಾಯಿತು... ಪತ್ರಿಕೆಯನ್ನು ನಿಲ್ಲಿಸಬೇಕಾಯಿತು." (ಲೇ: ಶಿವರಾಮ ಕಾರಂತ ಕೆ. ಡಾ., 2011, ಪು-79).

ಕುಂದಾಪುರದಿಂದ ಹೊರಡುತ್ತಿದ್ದ ಪತ್ರಿಕೆಯನ್ನು ನಿಲ್ಲಿಸಿದ್ದ ಸುಮಾರು 3 ವರ್ಷಗಳ ಕಾಲ ಅಜ್ಞಾತವಾಸವನ್ನು ಅನುಭವಿಸಿ, ತಮ್ಮ ಪತ್ರಿಕೋದ್ಯಮದ ಕಹಿ ಅನುಭವಗಳು ಮರೆಯಾಗುತ್ತಿದ್ದಂತೆ ಅಣ್ಣ ರಾಮಕೃಷ್ಣ ಕಾರಂತರ ಪ್ರೇರಣೆಯಿಂದ ಪುನಃ ಅದೇ ಹೆಸರಿನಲ್ಲಿ ವಸಂತವನ್ನು ಮತ್ತೊಮ್ಮೆ ಮಂಗಳೂರಿನಿಂದಲೇ ಪುನರಾರಂಭಿಸುವ ಯೋಜನೆ ಹಾಕಿಕೊಂಡರು. ಮಂಗಳೂರಿನ ಕೊಡಿಯಾಲಬೈಲಿನಲ್ಲಿ ಪತ್ರಿಕೆಯ ಕಛೇರಿಯನ್ನು ತೆರೆದು, 1928ರಿಂದ ಮೂರನೆಯ ಸಂಪುಟವನ್ನು ಆರಂಭಿಸಿದರು. (ಎರಡು ಸಂಪುಟಗಳು ಕುಂದಾಪುರದಿಂದ ಹೊರಬಂದು ಪತ್ರಿಕೆ ನಿಂತು ಹೋಗಿತ್ತು)

ತಮ್ಮ ಎರಡನೇ ಸುತ್ತಿನ ಪತ್ರಿಕೋದ್ಯಮದಲ್ಲಿ ಸಂಪಾದಕರಾಗಿ ಸಾಹಿತ್ಯ-ಸಂಸ್ಕೃತಿ ಮತ್ತು ಪ್ರಚಲಿತ ವಿದ್ಯಮಾನಗಳಿಗೆ ಗರಿಷ್ಠ ಪ್ರಾಮುಖ್ಯವನ್ನು ನೀಡಿದರು. "ಪತ್ರಿಕೆ ಎಂದರೆ ಕೇವಲ ಕಾಲ್ಪನಿಕ ಕಥೆಗಳನ್ನು ಮುದ್ರಿಸಿ, ಪ್ರಕಟಿಸುವ ಸಂಕಲನವಾಗಿರದೆ, ವಿಜ್ಞಾನ, ಕಲೆ, ಇತಿಹಾಸ, ಸಾಮಾಜಿಕ ವ್ಯವಸ್ಥೆ ಮುಂತಾದ ವಿಷಯ ವೈವಿಧ್ಯಗಳ ಮೇಲೆ ಸಾಮಾನ್ಯ ಹಾಗೂ ಅಧಿಕಾರಯುತವಾದ ವಿಶಿಷ್ಟಜ್ಞಾನವನ್ನು ಪ್ರಸಾರ ಮಾಡುವುದು ಪತ್ರಿಕೆಗಳ ಕರ್ತವ್ಯವೆಂಬುದನ್ನು ಕಾರಂತರು ಆರಂಭದಿಂದಲೇ ಕಂಡುಕೊಂಡಿದ್ದರೆಂಬುದರಲ್ಲಿ ಸಂದೇಹವಿಲ್ಲ"(ಸಂ: ಹರಿದಾಸ ಭಟ್ಟ ಕು.ಶಿ., 1969, ಪು-215) ಎಂಬ ಸೇವ ನಮಿರಾಜ ಮಲ್ಲ ಅವರು ಕಾರಂತರ ಪತ್ರಿಕೆಯ ಕುರಿತಾಗಿ ನೀಡುವ ಹೇಳಿಕೆಯಲ್ಲಿ ಯಾವುದೇ ಅತಿಶಯೋಕ್ತಿಯಿಲ್ಲ. ಕೇವಲ ಕಥೆಗಳನ್ನೇ ಹೆಚ್ಚು ಹೆಚ್ಚಾಗಿ ಪ್ರಕಟಿಸಬೇಕೆಂದು, ಸಂಪಾದಕರನ್ನುದ್ದೇಶಿಸಿ ಬರೆದ ಪತ್ರಗಳಿಗೆ ಸಂಪಾದಕ ಕಾರಂತರು ವಾಚಕರಿಗೆ ನೀಡಿದ ಉತ್ತರ ಹೀಗಿದೆ-"ವಸಂತನಲ್ಲಿ ಕಥೆಗಳನ್ನು ಬೇಡುವವರು ಬಹಳ. ಆದರೆ ಪತ್ರಿಕೆಯನ್ನು ಕಥೆಗಾಗಿ ಇರಿಸುವುದೂ, ಗ್ರಾಹಕರ ಮನೋಲಹರಿಗಳಿಗೆ ಸರಿಯಾಗಿ ಪತ್ರಿಕೆಗಳ ಸ್ವರೂಪವನ್ನು ಬದಲಾಯಿಸುವುದೂ ಧ್ಯೇಯಾತ್ಮಕ ದೃಷ್ಟಿಯಿಂದ ಸರಿಯಾಗಲಾರದು. ವಸಂತನು ತನ್ನದೇ ಆದ ಒಂದು ನಿಶ್ಚಿತ ಧೋರಣೆಯಿಂದ ಮುಂದುವರಿಯುವುದು. ಆ ಧೋರಣೆಯು ಪ್ರಪಂಚಕ್ಕೆ ಸರಿ ತೋರದಿದ್ದರೆ ಪತ್ರಿಕೆಯು ಸಾಯುವುದು. ಧೋರಣೆ ಇಲ್ಲದ ಜೀವನಕ್ಕಿಂತ ಮರಣವೇ ಮಾನ್ಯವೆಂದು ನಮ್ಮ ನಂಬಿಕೆ. ವಸಂತನಂತಹ ಪತ್ರಿಕೆಯೊಂದು ಕರ್ನಾಟಕಕ್ಕೆ ಅವಶ್ಯವಿರುವುದಾದರೆ ನಾಡಿನವರು ಅದನ್ನು ಉಳಿಸಲಿ. ಇಷ್ಟೇ ನಮ್ಮ ಕೋರಿಕೆ." (ಪೂರ್ವೋಕ್ತ, ಪು-214)

ಸಂಪಾದಕರು (ಕಾರಂತರು) ನೀಡುವ ಉತ್ತರವು ಅವರ ಪತ್ರಿಕಾಧೋರಣೆಯನ್ನು ಮಾತ್ರ ಅಭಿವ್ಯಂಜಿಸದೇ ಅವರ ಜೀವನ ಧೋರಣೆಯನ್ನು ಸಮಗ್ರವಾಗಿ ಬಿಂಬಿಸುತ್ತದೆ. ಕೇವಲ ಹಣಗಳಿಕೆಯ ವ್ಯಾಪಾರೀದೃಷ್ಟಿಯೊಂದೇ ಸಂಪಾದಕರ ಉದ್ದೇಶವಾಗಿದ್ದಲ್ಲಿ ಬಹುಸಂಖ್ಯಾತ ಕಥಾಪ್ರಿಯರ ಆಸಕ್ತಿಗಳಿಗನುಸರಿಸಿ ತಮ್ಮ ಪುಟಗಳನ್ನು ರಂಜನೀಯ ಕಥೆಗಳಿಗಾಗಿ ಮೀಸಲಿರಿಸಿ, ಪತ್ರಿಕೆಯನ್ನು ಲಾಭದ ಉದ್ದಿಮೆಯಾಗಿ ಪರಿವರ್ತಿಸುವ ಎಲ್ಲ ಅವಕಾಶಗಳೂ ಕಾರಂತರಿಗಿತ್ತು. ಆದರೆ ನಾಲ್ಕನೇ ಸಂಪುಟದ ಸಂಚಿಕೆಗಳು ಪ್ರಕಟವಾಗುತ್ತಿದ್ದಂತೆ ಕಾರಂತರ ನಷ್ಟವು ವೃದ್ಧಿಸಿತೇ ಹೊರತು, ಚಂದಾದಾರರ ಸಂಖ್ಯೆಯಲ್ಲಿ ಯಾವುದೇ ಪ್ರಗತಿ ಕಾಣಲಿಲ್ಲ. ತಮ್ಮ ನಾಲ್ಕನೇ ಸಂಪುಟದ ಕೊನೆಯ ಸಂಚಿಕೆಯಲ್ಲಿ (ಮಂಗಳೂರಿನಿಂದ ಪ್ರಕಟಿಸಿದ ಎರಡನೇ ಸಂಪುಟದ ಕೊನೆಯ ಸಂಚಿಕೆ) ಪತ್ರಿಕೋದ್ಯಮವನ್ನು ನಿಲ್ಲಿಸಲು ಮಾನಸಿಕವಾಗಿ ಸಿದ್ಧರಾಗಿ ತಮ್ಮ ಅಂತಿಮ ಅಭಿಪ್ರಾಯವನ್ನು ಹೀಗೆ ಉಲ್ಲೇಖಿಸಿದರು... "ಪ್ರಾಯಶಃ ವಸಂತನಂತಹ ಪತ್ರಿಕೆಯು ಕನ್ನಡಿಗರಿಗೆ ಅವಶ್ಯವಿಲ್ಲವೆಂದೇ ತೋರುವುದು. ಅದರಲ್ಲಿನ ವಿಷಯಗಳು ಓದುಗರಿಗೆ ತೀರಾ ನೀರಸವಾಗಿ ತೋರುತ್ತಿರಬೇಕು. ಆದರೆ ನಮ್ಮ ದೃಷ್ಟಿಯಿಂದ ನಾವು ಕೈಲಾದ ಸೇವೆ

**ಮಾಡಿರುವೆವೆಂದೇ ತಿಳಿಯುವೆವು. ಸಾಂಪತ್ತಿಕ ಭಾರವನ್ನು ಹೊತ್ತುದಲ್ಲದೇ ಕನ್ನಡ ನುಡಿಗೆ ಚಿರೋಪಯೋಗಿ ಕೆಲವು ಲೇಖನಗಳನ್ನು ಕೊಟ್ಟಿರುವೆ... ಕೇವಲ ವ್ಯಾಪಾರೀದೃಷ್ಟಿಯಿಂದ ವಸಂತನನ್ನು ನಡೆಸುವುದಕ್ಕಿಂತ ಪತ್ರಿಕೆಯು ನಿಂತರೂ ನಾವು ಬೇಸರಪಡುವುದಿಲ್ಲ."**(ಪೂರ್ವೋಕ್ತ, ಪು–216)

ಸ್ವಾತಂತ್ರ್ಯಪೂರ್ವದಲ್ಲಿ ಅಸ್ತಿತ್ವಕ್ಕೆ ಬಂದ ಕನ್ನಡ ಪತ್ರಿಕೆಗಳು ಕೆಲವೇ ವರ್ಷಗಳಲ್ಲಿ ಕಣ್ಮರೆಯಾಗಲು ಕಾರಣವೇನೆಂಬ ಪ್ರಶ್ನೆಗೆ ಸಂಪಾದಕರ ಮೇಲಿನ ಹೇಳಿಕೆಯೇ ಉತ್ತರವಾದಂತಿದೆ.

ಕಾರಂತರ ಸಂಪಾದಕೀಯ ಅನುಭವವು ವ್ಯವಹಾರದ ದೃಷ್ಟಿಯಿಂದ ವಿಫಲವಾಗಿ ಕೊನೆಗೊಂಡರೂ ವಿವಿಧ ವಿಷಯದ ಜ್ಞಾನಸಂಗ್ರಹವು ಅವರ ಆಸಕ್ತಿ–ಅಭಿರುಚಿಗಳನ್ನು ಇನ್ನಷ್ಟು ಪ್ರೇರೇಪಿಸಿದ್ದಲ್ಲದೇ ಈ ಪ್ರೇರೇಪಣೆಯ ಫಲವಾಗಿ ಚಿತ್ರಕಲೆ, ವಾಸ್ತುಶಿಲ್ಪ, ಛಾಯಾಚಿತ್ರ, ಮುದ್ರಣಕಲೆಗೆ ಸಂಬಂಧಿಸಿ ಅನೇಕ ವಿಷಯಗಳ ಕುರಿತಂತೆ, ಹೊಸ ಸಂಶೋಧನೆಗೆ ಅವಕಾಶವನ್ನು ತಂದೊದಗಿಸಿತು.

**'ಅಂತರಂಗ' ವಾರಪತ್ರಿಕೆ: (1938/49)**

ಸ್ವಾತಂತ್ರ್ಯ ಹೋರಾಟಗಾರ ಶ್ರೀನಿವಾಸ ಉಪಧ್ಯಾಯ ಅವರು ಹೊರತಂದ ಈ ಪತ್ರಿಕೆ ಉಡುಪಿ ಪರಿಸರದ ಅನೇಕ ಚಿಂತನಶೀಲ ಯುವ ಬರಹಗಾರರನ್ನು ಲೇಖನಕಲೆಗೆ ತೊಡಗಿಕೊಳ್ಳಲು ಪ್ರೇರೇಪಿಸಿತು. ತಮ್ಮ ಪತ್ರಿಕಾ ಬರವಣಿಗೆಯ ಮೂಲಕ ಪರಿಸರದ ವಾಚಕವೃಂದದಲ್ಲಿ ರಾಷ್ಟ್ರೀಯತೆಯ ಭಾವವನ್ನು ಹುಟ್ಟುಹಾಕಲು ಶ್ರಮವಹಿಸಿದ ಪತ್ರಿಕೆ ಎನ್ನುವುದಕ್ಕೆ ಅವರ ಪತ್ರಿಕಾ ಬರಹಗಳು ಆಧಾರವನ್ನೊದಗಿಸುತ್ತವೆ. ಅಂದು ಪ್ರಕಟವಾದ ಕಥೆಗಳು ಸಂಕಲನವಾಗಿ ಹಿಂದಿನ ಗ್ರಂಥಾಲಯಗಳಲ್ಲಿ ಸ್ಥಾನಪಡೆದುಕೊಂಡಿದ್ದು, ಆ ಕಥೆಗಳು ಸ್ವಾತಂತ್ರ್ಯಪೂರ್ವ ಕಾಲದ ಜಿಲ್ಲೆಯ ಜನಜೀವನದ ಕುರಿತಂತೆ ವಿವರಗಳನ್ನೊದಗಿಸುತ್ತವೆ. ಅಂತರಂಗ ಪತ್ರಿಕೆಯ ಮೂಲಕ ಪತ್ರಿಕಾರಂಗಕ್ಕೆ ಬಂದ ಖ್ಯಾತ ಪತ್ರಕರ್ತ ಪಾ.ವೆಂ. ಆಚಾರ್ಯರು ಪತ್ರಿಕೆಯ ಕುರಿತಂತೆ ಹೀಗೆ ಬರೆಯುತ್ತಾರೆ– "ಅದು ಕನ್ನಡದ ಬಹುಶಃ ಏಕಮಾತ್ರ ಮ್ಯಾಗಸೀನ್ ವಾರಪತ್ರಿಕೆಯಾಗಿತ್ತು. ಬಹುವರ್ಣದ ಮುಖಪತ್ರ, ಸುಂದರವಾದ ಲೇಖನವಿನ್ಯಾಸ, ಜನಪ್ರಿಯವಾದ ಬರಹಗಳು, ಕಥೆಗಳು ಇವೆಲ್ಲದರಿಂದ ವೈವಿಧ್ಯಪೂರ್ಣವಾಗಿ ಹೊರಬರುತ್ತಿದ್ದ ಅಂತರಂಗ ಬಹುಬೇಗ ಕರ್ನಾಟಕದ ಎಲ್ಲ ಭಾಗಗಳಲ್ಲಿ ಪ್ರಾಚುರ್ಯಪಡೆಯಿತು."(ಜನಾರ್ದನ ಭಟ್ ಬಿ. ಡಾ., 2006, ಪು–15)

ಕರ್ನಾಟಕದ ಏಕೀಕರಣ ಚಳುವಳಿಗೆ ಇತರ ಪತ್ರಿಕೆಗಳು ತಮ್ಮ ಬರವಣಿಗೆ ಮೂಲಕ ಜನರಲ್ಲಿ ಎಚ್ಚರವನ್ನುಂಟುಮಾಡಿದಂತೆ, ಅಂತರಂಗವೂ ಏಕೀಕರಣ ಚಳುವಳಿಯಲ್ಲಿ ಗುರುತಿಸಿಕೊಂಡದ್ದಲ್ಲದೇ ತುಳುನಾಡು ಪ್ರತ್ಯೇಕ ಪ್ರಾಂತ್ಯವಾಗಬೇಕೆಂದು ಪ್ರತಿಪಾದಿಸಿತ್ತು. ಪತ್ರಿಕೆಯ ವ್ಯವಸ್ಥಾಪಕರಾದ ಶ್ರೀನಿವಾಸ ಉಪಾಧ್ಯಾಯರ ಸಹಿತ ಪತ್ರಿಕೆಯ ಸಂಪಾದಕರಾಗಿ ಕೆ. ಹೈದರ್ ಎಂಬುವವರು ಸಹ ಸಂಪಾದಕರಾಗಿ ಪಿ. ಎಲ್. ಅಡಿಗ ಮತ್ತು ಪಾ. ವೆಂ. (ಪಾಡಿಗಾರು ವೆಂಕಟರಮಣ ಆಚಾರ್ಯ), ಸಲಹೆಗಾರರಾಗಿ ಲೇಖಕರಾಗಿದ್ದ ಕೊರಡ್ಕಲ್ ಶ್ರೀನಿವಾಸ ರಾವ್, ಪ್ರಕಾಶಕರಾಗಿ ಶಿಕ್ಷಕ ಪತ್ರಕರ್ತ ಹೊನ್ನಯ್ಯ ಶೆಟ್ಟಿ, ಪತ್ರಕರ್ತ ಬನ್ನಂಜೆ ರಾಮಾಚಾರ್ಯ, ಭಾರತಿ ಬಾಯಿ ಪಣಿಯಾಡಿಯವರಿದ್ದರು. 1938ರಲ್ಲಿ ಆರಂಭಗೊಂಡ ಪತ್ರಿಕೆಯು 1950ರ ಅಕ್ಟೋಬರ್ ತಿಂಗಳಲ್ಲಿ ನಿಂತುಹೋಯಿತು.

**ಕನ್ನಡ ಸಾಹಿತ್ಯಕ್ಕೆ ಅಂತರಂಗ ಪತ್ರಿಕೆಯ ಕೊಡುಗೆ:–** ತಾಳಮೇಳ, ತುಂತುರು, ಕೈಗನ್ನಡಿ, ನವನಾಣ್ಣುಡಿಗಳು, ವಿಚಾರವೇದಿಕೆ, ನಿಮ್ಮೊಳಗೇ ಇರುವ ನೀತಿದೇವ ಮುಂತಾದ ಶೀರ್ಷಿಕೆಗಳಲ್ಲಿ ಹನಿಗವನಗಳ ರೀತಿಯಲ್ಲಿರುವ ಸಾಹಿತ್ಯ ರಚನೆಗಳಿಂದ ಪತ್ರಿಕೆಯನ್ನು ಆಕರ್ಷಕಗೊಳಿಸಿದ್ದರು.

**ಸಣ್ಣಕಥೆ:–** 30ರ ದಶಕದಲ್ಲಿ ಅನೇಕ ಸಣ್ಣಕಥೆಗಳನ್ನು (ವಿವಿಧ ಲೇಖಕರಿಂದ) ಪತ್ರಿಕೆಯ ಪ್ರತಿವಾರದ ಸಂಚಿಕೆಯಲ್ಲಿ ಪ್ರಕಟಿಸುತ್ತಿದ್ದು, ಈ ಕಥೆಗಳು ಅಂದಿನ ಸಾಮಾಜಿಕ–ರಾಜಕೀಯ, ವಾಸ್ತವ ಸ್ಥಿತಿಯನ್ನು ಪ್ರತಿನಿಧಿಸುವಂತಿದ್ದುವು. ಸರಳ ನಿರೂಪಣೆಯ ಸಣ್ಣ ಸಣ್ಣ ಕೌಟುಂಬಿಕ ಘಟನೆಗಳೇ ಕಥೆಯ ವಸ್ತುವಾಗಿದ್ದರೂ ಪಾತ್ರಗಳ ಚಿತ್ರಣದಲ್ಲಿ ಸಹಜತೆಯಿದ್ದು, ಓದುಗರಲ್ಲಿ ಕುತೂಹಲವನ್ನು ಕೆರಳಿಸುವಂತಿರುತ್ತಿದ್ದುವು. ಪಿ. ವೆಂಕಟರಮಣ ಆಚಾರ್ಯರು 'ಅಪರಜೀವನ' ಎಂಬ ಕಥೆಯಲ್ಲಿ ಅದರ ಆರಂಭವೇ ಓದುಗರಲ್ಲಿ ಕುತೂಹಲವನ್ನು ಹುಟ್ಟಿಸುವಂತಿತ್ತು. ಅದರ ಆರಂಭ ಹೀಗಿತ್ತು..... "ನಾನು ಸತ್ತದ್ದು 13ನೇ ಅಗಸ್ಟ್ 1931ರಲ್ಲಿ, ನನ್ನ ಜೀವನದಲ್ಲಿ 13ನೆಯ ತಾರೀಖು ಎಂದರೆ ಬಹಳ ಮಹತ್ವದ್ದಾಗಿತ್ತು."(ಸಂ: ಅಂತರಂಗ ಕಾರ್ಯಾಲಯ, 1953, ಪು–1) ಇಲ್ಲಿ ಸಂಕಪ್ಪ ಶೆಟ್ಟಿ ಎಂಬವನ ಮೈಮೇಲೆ ಆತ್ಮಾರಾಮ ಶಾಸ್ತ್ರಿ ಎಂಬ ಮೃತ ವ್ಯಕ್ತಿಯ ಆತ್ಮವು ಆವಾಹಿತವಾಗಿ ಆತನು ತನ್ನ ದಾಯಾದಿಯಾದ ಶ್ರೀನಿವಾಸ ಶಾಸ್ತ್ರಿ ಎಂಬುವವನನ್ನು ತನ್ನ ಜೀವಿತಾವಧಿಯಲ್ಲಿ ಮಾಡಿದ ಅನಾದರ ಮತ್ತು ಅನ್ಯಾಯಕ್ಕಾಗಿ ಸೇಡುತೀರಿಸಿಕೊಳ್ಳಲೋಸುಗ ಕೊಲ್ಲುತ್ತಾನೆ. ಅಷ್ಟು ಮಾತ್ರವಲ್ಲದೆ ಸಂಕಪ್ಪ ಶೆಟ್ಟಿಯು ತಾನು ಆತ್ಮಾರಾಮ ಶಾಸ್ತ್ರಿಯೇ ಎಂದು ನ್ಯಾಯಾಲಯದಲ್ಲಿಯೂ ಸ್ವತಃ ಹೇಳಿಕೊಳ್ಳುತ್ತಾನೆ. ಶ್ರೀನಿವಾಸ ಶಾಸ್ತ್ರಿಯ ಕಡೆಯಿಂದ ಬಂದ ವೈದ್ಯರು ಈತ (ಸಂಕಪ್ಪ ಶೆಟ್ಟಿ) ಹುಚ್ಚನೆನ್ನುವುದನ್ನು ಒಪ್ಪಿಕೊಳ್ಳದಿದ್ದಾಗ ನ್ಯಾಯಾಲಯದ ಅನುಮತಿಯ ಮೇರೆಗೆ ಸಂಕಪ್ಪನ ಹೆಂಡತಿಯು ಕಲ್ಕತ್ತೆಯಿಂದ ಒಬ್ಬ ಯುರೋಪಿಯನ್ ಡಾಕ್ಟರನ್ನು ನ್ಯಾಯಾಲಯಕ್ಕೆ ಕರೆಸಿಕೊಳ್ಳುತ್ತಾಳೆ. ಅವರು ಪರೀಕ್ಷಿಸಿ, ತುಂಬಾ ವಿಚಾರಿಸಿ, ಕೋರ್ಟಿನ ಮುಂದೆ ಸಾಕ್ಷ್ಯಕೊಟ್ಟರು. 'ಈ ಮನುಷ್ಯ ಹುಚ್ಚನಲ್ಲ. ಇದು ಸತ್ತವನ ಮನಸ್ಸು ಹೊಸ ಮನುಷ್ಯನಲ್ಲಿ ಸಮಾವೇಶಹೊಂದಿದ ಒಂದು ಸಂದರ್ಭವಾಗಿರಬೇಕು. ಇಂತಹ ಕೇಸುಗಳು ಕೆಲವು ವೇಳೆ ಸಂಭವಿಸಿದ್ದನ್ನು ನಾನು ಕೇಳಿದ್ದೇನೆ... ಬುದ್ಧಿಯ ಎಲ್ಲ ವಿಚಾರಗಳನ್ನು ಪರಿಶೀಲಿಸಿದಲ್ಲಿ ಈತನು ಆತ್ಮಾರಾಮ ಶಾಸ್ತ್ರಿಯೇ ಎಂದು ಯಾರೂ ಒಪ್ಪಬೇಕು. ಆದರೆ ಸಾಕ್ಷ್ಯಗಳ ವಿಚಾರಣೆ ನಡೆಸಿದರೆ ಈತನು ಸಂಕಪ್ಪ ಶೆಟ್ಟಿಯೇ ಸರಿ. ಹೀಗಿರುತ್ತಾ ಸಂಕಪ್ಪ ಶೆಟ್ಟಿಯ ಕಾಯವನ್ನು ಆತ್ಮಾರಾಮ ಶಾಸ್ತ್ರಿಯ ಆತ್ಮವು ಹೊಕ್ಕಿರಬೇಕು. ಇನ್ನೆಂದಾದರೂ ಒಂದು ದಿನ ಸಂಕಪ್ಪ ಶೆಟ್ಟಿಯ ಆತ್ಮವೇ ಈತನ ಶರೀರದೊಳಗೆ ಬರುವ ಸಂಭವವೂ ಇದೆ.'(ಪೂರ್ವೋಕ್ತ, ಪು–7) ಎಂದು ವೈದ್ಯರು ನ್ಯಾಯಾಲಯದಲ್ಲಿ ಮನಶ್ಶಾಸ್ತ್ರೀಯ ಲೋಕದ ಸಾಧ್ಯತೆಯ ವಿಸ್ಮಯವನ್ನು ವಿವರಿಸಿದ ಕಾರಣ ನ್ಯಾಯಾಲಯವು ಅನುಮಾನಕರಪ್ರಸಂಗವೆಂದು ಬಗೆದು, ಸಂಕಪ್ಪ ಶೆಟ್ಟಿಯನ್ನು ಕೊಲೆ ಆಪಾದನೆಯಿಂದ ಮುಕ್ತಗೊಳಿಸಿತು. ನ್ಯಾಯಾಲಯ ಆಪಾದನೆಯಿಂದ ಮುಕ್ತಗೊಳಿಸಿ, ಶಿಕ್ಷೆ ನೀಡಿಲ್ಲವಾದರೂ ತನ್ನ ಮತಿಭ್ರಮಣಸ್ಥಿತಿಯಿಂದಾಗಿ ಸಂಕಪ್ಪ ಶೆಟ್ಟಿ ಪ್ರತಿನಿತ್ಯವೂ ತನ್ನ ಹೆಂಡತಿಯೊಂದಿಗೆ ತೀರಾ ಅಸ್ವಸ್ಥನಂತೆ ವರ್ತಿಸುತ್ತಿದ್ದ. ಕೊನೆಗೆ ಈ ರೀತಿ ಅಸ್ವಸ್ಥಮನಸ್ಸಿನಿಂದ ಬದುಕುವುದಕ್ಕೆ ಮನಸ್ಸಿಲ್ಲದೆ ಮನೆಯಿಂದ ಓಡಿಹೋಗಿ ರೈಲಿನ ಅಡಿಗೆ ಬಿದ್ದು, ಆತ್ಮಹತ್ಯೆ ಮಾಡಿಕೊಳ್ಳುತ್ತಾನೆ. ಶವದ ಕೈಚೀಲದಲ್ಲಿದ್ದ ಪತ್ರದಲ್ಲಿ..... "ನಾನು ನಾನಲ್ಲ. ಈ ಜನರ ವರ್ತನೆಗಳು, ಆಹಾರಗಳು

ನನಗೆ ಒಗ್ಗುವುದಿಲ್ಲ. ನನ್ನ ಮನಸ್ಸಿನಲ್ಲಿ ಭೀತಿ, ಅನುಮಾನ ಅಸಹ್ಯಗಳು ತುಮುಲವೆನ್ನೆಬ್ಬಿಸುತ್ತಿವೆ. ಈ ರೀತಿ ಬದುಕುವುದಕ್ಕೆ ನನಗೆ ಇಚ್ಛೆಯಿಲ್ಲ. ಆದಕ್ಕಾಗಿ ನಾನು ಸಾಯುವ ನಿರ್ಧಾರ ಮಾಡಿದ್ದೇನೆ"(ಪೂರ್ವೋಕ್ತ, ಪು-8) ಎಂಬ ಉಲ್ಲೇಖಗಳಿದ್ದವು.

'ಸಣ್ಣಕಥೆ' ಎಂಬ ಸಾಹಿತ್ಯ ಪ್ರಪಂಚಕ್ಕೆ ಆಗ ಕೇವಲ ಮೂವತ್ತು ನಲವತ್ತು ವರ್ಷದ ಚರಿತ್ರೆಯಷ್ಟೇ ಇದ್ದು, ಕನ್ನಡದ ವಾರಪತ್ರಿಕೆಯೊಂದು ಗಂಭೀರ ಆಶಯವುಳ್ಳ ಕಥೆಗಳನ್ನು ಪತ್ರಿಕೆಯಲ್ಲಿ ಪ್ರಕಟಿಸುತ್ತಿದ್ದುದಕ್ಕೆ ಲಭ್ಯ ಸಂಚಿಕೆಗಳಲ್ಲಿ ಸಾಕಷ್ಟು ಆಧಾರಗಳು ಸಿಗುತ್ತವೆ. ಸುಮಾರು 70 ವರ್ಷಗಳಷ್ಟು ಹಿಂದೆಯೇ ಪುರುಷಪ್ರಧಾನ ಸಮಾಜದಲ್ಲಿ ಹೆಣ್ಣಿನ ಮೇಲೆ ನಿರಂತರ ದಬ್ಬಾಳಿಕೆ ನಡೆಯುತ್ತಿದ್ದಾಗಲೇ ಹೆಣ್ಣಿನ ಕುರಿತು, ಪ್ರಗತಿಪರ ಧೋರಣೆಯಿಂದ ಚಿಂತಿಸಿ, ಪುರುಷನ ದೃಷ್ಟಿಧೋರಣೆಗಳು ಬದಲಾಗಬೇಕೆಂಬ ಆಶಯವನ್ನು ಕಥೆಯ ಮೂಲಕ ಅಭಿವ್ಯಂಜಿಸಿದ್ದಾರೆ. ಇದಕ್ಕೆ ಸಮರ್ಥನೆಯಾಗಿ ಇದೇ 'ಅಂತರಗಂಗದ ಕಥೆಗಳು' ಎಂಬ ಸಂಚಿಕೆಯಲ್ಲಿ ಪ್ರಕಟವಾದ ಎಂ.ವಿ. ಹೆಗ್ಡೆಯವರ 'ಮಗುವಿನ ತಂದೆ' ಎಂಬ ಕಥೆಯನ್ನು ಉಲ್ಲೇಖಿಸಬಹುದಾಗಿದೆ.(ಪೂರ್ವೋಕ್ತ, ಪು-24)

**ತಾಳಮೇಳ, ತುಂತುರು, ನಿಮ್ಮೊಳಗೇ ಇರುವ ನೀತಿದೇವ** ಎಂಬೀ ಸ್ಥಿರಶೀರ್ಷಿಕೆಯಲ್ಲಿ ಓದುಗನ ಅಂತರಂಗವನ್ನು ಮುಟ್ಟುವ ಹಾಗೂ ಆತನಲ್ಲಿ ವಿಚಾರವನ್ನು ಪ್ರಚೋದಿಸುವ ಚಿಕ್ಕ ಚಿಕ್ಕ ವಾಕ್ಯಸರಣಿಯ ಹೃದ್ಯಸನ್ನಿವೇಶಗಳನ್ನು ಪತ್ರಿಕೆಯಲ್ಲಿ ಪ್ರಕಟಿಸುವ ಪರಿಪಾಠವನ್ನು ಕಾಣುತ್ತೇವೆ. "ಅನ್ಯರ ಅಪಮಾನವನ್ನು ನಾಟಕದಂತೆ ನೋಡಲು ನಿಲ್ಲುವಾಗ ತಮ್ಮಗಳ ತೇಜೋವಧೆಯ ಮೇಲೆ ಊರವರು ಪ್ರೇಕ್ಷಕರಾಗಿ ಬಂದರೆ ಹೇಗೆ? ಎಂಬುದನ್ನು ಕಲ್ಪಿಸಿಕೊಳ್ಳಿ"(ಸಂ: ಹೊನ್ನಯ್ಯ ಶೆಟ್ಟಿ ಕೆ., 1945, ಸಂಪುಟ-13) ಎಂದು ಸೂಚ್ಯವಾಗಿ ಉಲ್ಲೇಖಿಸಿ, ಸಂದರ್ಭದ ಪರಿಣಾಮದ ತೀವ್ರತೆಯನ್ನು ಓದುಗರಿಗೆ ಮನವರಿಕೆ ಮಾಡಿಕೊಡುತ್ತಾರೆ.

ಬೈಕಾಡಿ ವೆಂಕಟಕೃಷ್ಣರಾಯರು ಅಂತರಂಗ ಪತ್ರಿಕೆಯ ಕುರಿತಂತೆ ಹೇಳುವ ಅಭಿಪ್ರಾಯವು ಆ ಪತ್ರಿಕೆಯ ಮತ್ತು ಅದರ ಸಂಸ್ಥಾಪಕ ಎಸ್.ಯು. ಪಣಿಯಾಡಿಯವರ ಕುರಿತಂತೆ ನೀಡಿದ ಪ್ರಮಾಣಪತ್ರದಂತಿದೆ. ಆ ಉಲ್ಲೇಖ ಹೀಗಿದೆ. "ಉಡುಪಿಯ ಜನ ಮರೆಯಲಾರದ ಇನ್ನೋರ್ವ ವ್ಯಕ್ತಿ ಅಥವಾ ಶಕ್ತಿಯೆಂದರೆ ಎಸ್.ಯು. ಪಣಿಯಾಡಿಯವರು. ಅವರ ನೇತೃತ್ವದಲ್ಲಿ ಪ್ರಕಟವಾಗುತ್ತಿದ್ದ 'ಅಂತರಂಗ'ವೆಂಬ ಕನ್ನಡ ಮಾಸಪತ್ರಿಕೆಗೆ ಎಣೆಯಾದ ಇನ್ನೊಂದು ಪತ್ರಿಕೆ ಕನ್ನಡ ನಾಡಿನಲ್ಲಿಲ್ಲ. ಈಗಲೂ ಇಲ್ಲ ಎಂದರೆ ಉತ್ಪ್ರೇಕ್ಷೆಯಾಗಲಾರದು."(ಸಂ: ಕೃಷ್ಣ ಭಟ್ ಎಚ್., 1998, ಪು-536)

**'ನವಶಕ್ತಿ' ವಾರಪತ್ರಿಕೆ:** (1938...) ಉಡುಪಿಯಿಂದ 'ನವಶಕ್ತಿ' ಪತ್ರಿಕೆ 1938ರಲ್ಲಿ ಹೊರಬಂದಿತು. ಬನ್ನಂಜೆ ರಾಮಾಚಾರ್ಯ ಅವರು ಈ ಪತ್ರಿಕೆಯ ಸಂಪಾದಕರಾಗಿದ್ದರು. 'ದಕ್ಷಿಣ ಕರ್ನಾಟಕದಿಂದ ಸಾರಸ್ವತಸಮಾರಾಧನೆಯ ಮಹೋದ್ದೇಶದಿಂದ ಹೊರಟ ಮಾಸಪತ್ರಿಕೆ ಎಂದು ನವಶಕ್ತಿ ಕರೆಸಿಕೊಂಡಿತ್ತು.'(ಲೇ: ನಿರಂಜನ ವಾನಳ್ಳಿ, 2001, ಪು-106) ಕೇವಲ 750 ಪ್ರತಿಗಳು ಮಾಸಿಕವಾಗಿ ಪ್ರಕಟಗೊಳ್ಳುತ್ತಿದ್ದ ಕುರಿತು ಸಂಪಾದಕ ಬನ್ನಂಜೆ ರಾಮಾಚಾರ್ಯರು ಸಂಶೋಧನಾ ವಿದ್ಯಾರ್ಥಿನಿ, ಡಾ. ಸಬಿಹಾ ಅವರಲ್ಲಿ ಮೌಖಿಕ ಸಂದರ್ಶನದ ಸಂದರ್ಭದಲ್ಲಿ ಹೇಳಿಕೊಂಡ ಉಲ್ಲೇಖವು ಸಬೀಹಾ ಅವರ ಸಂಶೋಧನ ಪ್ರಬಂಧದಲ್ಲಿ ದಾಖಲಾಗಿದೆ. (ಪುಟ ಸಂಖ್ಯೆ: 437ರಲ್ಲಿ ದ.ಕ. ಜಿಲ್ಲೆಯ ಸ್ವಾತಂತ್ರ್ಯಪೂರ್ವ ಸಣ್ಣಕಥೆಗಳ ಹುಟ್ಟು ಮತ್ತು ಬೆಳವಣಿಗೆ-

ಅಪ್ರಕಟಿತ ಸಂಶೋಧನ ಪ್ರಬಂಧ.) ಸುಮಾರು 3 ತಿಂಗಳಷ್ಟೇ ಪ್ರಕಟವಾದ ಆ ಪತ್ರಿಕೆಯಲ್ಲಿ "ಪಂಡಿತ ತಾರಾನಾಥ, ಕಡೆಂಗೋಡ್ಲು ಶಂಕರ ಭಟ್ಟ, ಅನಕೃ, ಕೃಷ್ಣಕುಮಾರ ಕಲ್ಲೂರ, ಹಾಗೂ ಶಿವರಾಮ ಕಾರಂತರ ಲೇಖನಗಳು ಪ್ರಕಟವಾಗಿದ್ದುವು."(ಮುರಳೀಧರ ಉಪಾಧ್ಯ ಹಿರಿಯಡಕ, 2010, ಪು-5)

**'ಯುಗಪುರುಷ' ಮಾಸಪತ್ರಿಕೆ:** (1942) 1942ರಲ್ಲಿ ಉಡುಪಿಯಲ್ಲಿ ಆರಂಭವಾದ ಈ ಪತ್ರಿಕೆಯ ಸ್ಥಾಪಕ ಸಂಪಾದಕರಾಗಿದ್ದವರು ಕೊಡತ್ತೂರು ಅನಂತಪದ್ಮನಾಭ ಉಡುಪರು. ಸಂಪಾದಕ ಮಂಡಳಿಯಲ್ಲಿ ಬನ್ನಂಜೆ ರಾಮಾಚಾರ್ಯ, ಎಸ್.ಎಲ್. ನಾರಾಯಣ ಭಟ್ಟ ಇವರು ಇದ್ದರು. ಬನ್ನಂಜೆ ರಾಮಾಚಾರ್ಯ ಮುಂದೆ ನವಭಾರತ ಪತ್ರಿಕೆಯನ್ನು ಸೇರಿದ ಪ್ರಯುಕ್ತ, ತಮ್ಮ ಪತ್ರಿಕಾ ಕಚೇರಿಯನ್ನು ಉಡುಪರು ಉಡುಪಿಯಿಂದ ಕಿನ್ನಿಗೋಳಿಗೆ ವರ್ಗಾಯಿಸಿದರು. ಪೂರ್ಣ ಸಾಹಿತ್ಯಕೃತಿಗಳಿಗಾಗಿ ಮೀಸಲಾದ ಸಂಚಿಕೆ ಇದಾಗಿರುತ್ತದೆನ್ನುವುದೇ ಈ ಸಂಚಿಕೆಯ ಹೆಗ್ಗಳಿಕೆ. 1994ರ ನಲವತ್ತೇಳನೇ ಸಂಪುಟದ ಒಂಬತ್ತನೇ ಸಂಚಿಕೆಯಲ್ಲಿ ಡಾ. ಸೀ. ಹೊಸಬೆಟ್ಟು ಅವರೊಂದಿಗೆ ಮಂಗಲ್ಪಾಡಿಯ ಕೆ. ಸತ್ಯಮೂರ್ತಿಯವರು ನಡೆಸಿದ ಸಂದರ್ಶನದ ಸಂದರ್ಭದಲ್ಲಿ ಶಿಕ್ಷಣಕ್ಕೆ ಸಂಬಂಧಿಸಿದಂತೆ "ಶಿಕ್ಷಣಕ್ರಮದಲ್ಲಿ ಬದಲಾವಣೆಯಾಗಬೇಕು... ಈ ಬಗ್ಗೆ ನಿಮ್ಮ ಆಲೋಚನೆಗಳನ್ನು ತಿಳಿಸುವಿರಾ?" ಎಂಬ ಪ್ರಶ್ನೆಗೆ ಡಾ. ಸೀ. ಹೊಸಬೆಟ್ಟು ಅವರ ಉತ್ತರ ಹೀಗಿದೆ. "ಬದಲಾವಣೆ ಆಗಬೇಂಬ ಸವಕಲಾದ ಹೇಳಿಕೆಯಲ್ಲಿ ನನಗೆ ವಿಶ್ವಾಸವಿಲ್ಲ. ಇದ್ದ ವ್ಯವಸ್ಥೆಯಲ್ಲಿ ಪ್ರಾಮಾಣಿಕತೆಯಿಂದ ಕರ್ತವ್ಯ ನಿರ್ವಹಿಸಿದರೆ ಶಿಕ್ಷಣದ ಸ್ಥಿತಿ ಸುಧಾರಣೆಗೊಳ್ಳುತ್ತದೆ ಎಂದು ನನ್ನ ಅನಿಸಿಕೆ. ಯಾವುದೇ ಬದಲಾವಣೆಗಳ ಯಶಸ್ಸು ಶಿಕ್ಷಕರ ಪ್ರಾಮಾಣಿಕ ಕರ್ತವ್ಯವನ್ನು ಅವಲಂಬಿಸಿರುತ್ತದೆ. ತರಗತಿಗೆ ಒಬ್ಬ ಅಧ್ಯಾಪಕರಿದ್ದು, ಅವರೆಲ್ಲರೂ ನಿಷ್ಠೆ ಮತ್ತು ವಿದ್ಯಾರ್ಥಿಗಳ ಕುರಿತಾಗಿ ವಾತ್ಸಲ್ಯಗಳಿಂದ ವರ್ತಿಸಿದರೆ ಈಗಿನ ವ್ಯವಸ್ಥೆಯಲ್ಲೇ ಉತ್ತಮ ಫಲಿತಾಂಶ ಸಾಧ್ಯ"(ಸಂ: ಭುವನಾಭಿರಾಮ ಉಡುಪ, 1994, ಸಂಪುಟ-47, ಸಂಚಿಕೆ-9) ಎಂದು ತಮ್ಮ ಪ್ರತಿಕ್ರಿಯೆಯನ್ನು ನೀಡಿದ್ದಾರೆ. ಇಲ್ಲಿ ಫಲಿಂತಾಂಶ ಎಂದರೆ ಕೇವಲ ಪರೀಕ್ಷಾ ಫಲಿತಾಂಶ ಮಾತ್ರ ಎಂದು ಸೀ. ಹೊಸಬೆಟ್ಟು ಅವರ ಹೇಳಿಕೆಯನ್ನು ಅರ್ಥೈಸಬೇಕಾಗಿಲ್ಲ. 1955ರಿಂದ 1985ರ ತನಕ ಶಿಕ್ಷಣ ಕ್ಷೇತ್ರದ ಬೇರೆ ಬೇರೆ ಹಂತದ ಜವಾಬ್ದಾರಿಯನ್ನು ನಿರ್ವಹಿಸಿದ ಹೊಸಬೆಟ್ಟು ಅವರ ಈ ಹೇಳಿಕೆ ಸ್ವ ಅನುಭವದ ಹೇಳಿಕೆಯಾಗಿದೆ.

ಅಖಿಲ ಕರ್ನಾಟಕ ವ್ಯಾಪ್ತಿಯಲ್ಲಿ ಗುರುತಿಸಿಕೊಂಡ ಮೇಲ್ಮಟ್ಟದ ಬರಹಗಾರರ ಕಥೆ, ಕವನ, ವಿಮರ್ಶೆ ಮುಂತಾದ ಪ್ರಕಟಣೆಗಳಿಗೆ ಅವಕಾಶವನ್ನು ನೀಡಿದ ಪತ್ರಿಕೆ ಇಂದಿಗೂ ಕಿನ್ನಿಗೋಳಿಯಿಂದ ಪ್ರಕಟವಾಗುತ್ತಿದ್ದು, ಸ್ಥಾಪಕ ಸಂಪಾದಕರ ಸುಪುತ್ರ ಭುವನಾಭಿರಾಮ ಉಡುಪ ಇವರು ಸಂಚಿಕೆಯ ಪ್ರಕಟಣೆಯನ್ನು ಮುಂದುವರಿಸಿಕೊಂಡು ಬರುತ್ತಿದ್ದಾರೆ. ಆದರೆ 1970-80ರ ಸಂಚಿಕೆಗಳಲ್ಲಿರುವ ಸಾಹಿತ್ಯದ ಸತ್ವ ಇಂದಿನ ಸಂಚಿಕೆಗಳಲ್ಲಿ ಕಂಡುಬರುವುದಿಲ್ಲವೆನ್ನುವುದು ವಾಸ್ತವ ವಿಚಾರ.

**'ಪ್ರಕಾಶ' ವಾರಪತ್ರಿಕೆ: (1944-69)** ಪ್ರಕಟನೆ ಆರಂಭ 1944, ಸಂಪಾದಕರು ಎ.ಜೆ. ಅಲ್ಸೆ.

ಐರೋಡಿ ಗಣಪತಿ ಅಲ್ಸೆಯವರ ಸಂಪಾದಕತ್ವದಲ್ಲಿ ಉಡುಪಿಯಿಂದ ಪ್ರಕಟಗೊಳ್ಳುತ್ತಿದ್ದ ಈ ಪತ್ರಿಕೆಯ ಕುರಿತು 20ನೇ ಶತಮಾನದ ಮೊದಲಘಟ್ಟದ ಪತ್ರಿಕೋದ್ಯಮಿಗಳಾದ ಹುರುಳಿ ಭೀಮರಾಯರು ಹೀಗೆ ಉಲ್ಲೇಖಿಸಿದ್ದಾರೆ. "ಕನ್ನಡ ನಾಡು

ನುಡಿಗಳ ಮೇಲ್ಮೆಯನ್ನು ಬಯಸಿ, ವಿಷಯವೈವಿಧ್ಯ, ಲೇಖಗಳ ಸುವ್ಯವಸ್ಥೆಯ ಸಾಧನಪ್ರಪಂಚವಾಗಿ ರಾಜ್ಯದ ಉತ್ತಮ ಆಡಳಿತಕ್ಕೆ ರಾಷ್ಟ್ರದ ಅಭಿವೃದ್ಧಿಕಾರ್ಯಕ್ಕೆ ಯಾವ ಶಾಸನಬದ್ಧ ಪ್ರಭುತ್ವ, ಯಾವ ರಾಷ್ಟ್ರನಾಯಕರ ಸೂತ್ರಕ್ಕೊಳಗಾದರೆ ದೇಶಕ್ಕೆ ಮಂಗಲವೋ ಅದನ್ನು ಬೆರಳಿಟ್ಟು ತೋರಿಸುತ್ತಾ..... ಟಿ.ಎ. ಪೈಗಳಂಥ ದಕ್ಷ ಮುಂದಾಳುಗಳ ಹಿನ್ನೆಲೆ, ಜನಾರ್ದನ ಅಲ್ಸೆಯವರಂಥ ವಿಚಕ್ಷಣ ಪ್ರಭೃತಿಗಳ ಮುನ್ನೆಲೆಗಳೊಡನೆ ಉಡುಪಿ ಪತ್ರಿಕೋದ್ಯಮಕ್ಷೇತ್ರದಲ್ಲಿ ಶಾಂತಿ, ಪುಷ್ಟಿ, ತುಷ್ಟಿ, ಧೃತಿ, ಶಕ್ತಿ ಹಾಗೂ ಸಂಪದಭ್ಯುದಯದ ಕಾಂತಿಕಿರಣಗಳಿಂದ ಶುಭ್ರವಾಗಿ ಪ್ರಕಾಶಮಾನವಾಗಿ ಬೆಳಗುತ್ತಿದೆ."(ಉಡುಪಿ ನಗರಸಭೆ ಬೆಳ್ಳಿ ಹಬ್ಬ ಸ್ಮರಣ ಸಂಚಿಕೆ, 1961, ಪು–7) ತನ್ನ ಸಮಕಾಲೀನ ಸಂದರ್ಭದ ಪತ್ರಿಕೆಯ ವೈಚಾರಿಕ ದೃಷ್ಟಿಕೋನ ಆಶಯವನ್ನು ತಮ್ಮ ಈ ಹೇಳಿಕೆಯಲ್ಲಿ ಹುರುಳಿಯವರು ನಿರೂಪಿಸಿದ್ದಾರೆ.

**'ರಾಯಭಾರಿ' ವಾರಪತ್ರಿಕೆ:** (1950–1977... 1983) (ಎಸ್. ಎಲ್. ನಾರಾಯಣ ಭಟ್ಟರು ಈ ವಾರಪತ್ರಿಕೆಯನ್ನು 1952ರಲ್ಲಿ ಸ್ಥಾಪಿಸಿದರು. ಸುಮಾರು 25 ವರ್ಷಗಳ ಕಾಲ ಉಡುಪಿ ಪರಿಸರದ ಯುವ ಕವಿ–ಬರಹಗಾರರಿಗೆ ತಮ್ಮ ಸೃಜನಶೀಲ ಹಾಗೂ ಚಿಂತನಶೀಲ ಚಟುವಟಿಕೆಗಳಿಗೆ ವೇದಿಕೆಯನ್ನು ಒದಗಿಸುತ್ತಾ ಕರ್ನಾಟಕದಲ್ಲಿ ಖ್ಯಾತರಾಗಿ ಗುರುತಿಸಿಕೊಂಡ ಹಿರಿಯ ಲೇಖಕರ ಕೃತಿಗಳ ಪ್ರಕಟನೆಗೂ ಅವಕಾಶವನ್ನು ನೀಡುತ್ತಾ ಬಂದ ಪತ್ರಿಕೆ ಇದಾಗಿತ್ತು. ಈ ಪತ್ರಿಕೆಯ ಪ್ರಕಟನೆಯ ಕಾಲದಲ್ಲಿಯೇ ಉಡುಪಿಯಲ್ಲಿಯೇ ಪ್ರಕಟವಾಗುತ್ತಿದ್ದ ಇನ್ನೊಂದು ವಾರಪತ್ರಿಕೆಯೇ 'ಪ್ರಕಾಶ' ಎಂಬ ಪತ್ರಿಕೆಯಾಗಿತ್ತು. ವ್ಯಾವಹಾರಿಕವಾಗಿ ಈ ಎರಡು ಪತ್ರಿಕೆಗಳ ನಡುವೆ ಪರಸ್ಪರ ಸ್ಪರ್ಧೆಗಳಿಲ್ಲದಿದ್ದರೂ ವೈಚಾರಿಕವಾಗಿ ಈ ಎರಡು ಪತ್ರಿಕೆಗಳ ನಡುವೆ ಪರಸ್ಪರ ಸ್ಪರ್ಧೆ ಮತ್ತು ಭಿನ್ನ ನಿಲುವುಗಳಿದ್ದು, ಇದನ್ನು ಓದುಗರು ಸ್ಪಷ್ಟವಾಗಿ ಗುರುತಿಸಬಹುದಾಗಿತ್ತು.

**ಸಾಹಿತ್ಯಕ ಕೊಡುಗೆಗಳು:** ಸಾರ್ವಜನಿಕರಿಗೆ ವಿಚಾರ–ವಿಮರ್ಶೆಗೆ ಯೋಗ್ಯವಾದ ಹಾಗೂ ಜ್ಞಾನಾಭಿವೃದ್ಧಿಗೆ ಪೂರಕವಾಗುವ ರಾಜಕೀಯ ವಿಷಯಗಳನ್ನು ನಿರ್ಭೀತಿಯಿಂದ ಪ್ರತಿಪಾದಿಸುತ್ತಿರುವ ರಾಯಭಾರಿ ವಾರಪತ್ರಿಕೆ ಶ್ರೀ ಎಸ್.ಎಲ್. ನಾರಾಯಣ ಭಟ್ಟರ ಸಂಪಾದಕತ್ವದಿಂದ ಉಡುಪಿ ಪತ್ರಿಕೋದ್ಯಮದ ಒಂದು ಪ್ರಮುಖ ಮೈಲಿಗಲ್ಲಾಗಿದೆ. ಪತ್ರಿಕೆಯ ಪ್ರತಿಯೊಂದು ಬಿಡಿ ಸಂಚಿಕೆಯಲ್ಲೂ ಸಂಪಾದಕೀಯ ಲೇಖನ ಒಂದು ಕಥೆ ಹಾಗೂ ಪ್ರಚಲಿತ ರಾಜಕೀಯ ವಿಶ್ಲೇಷಣಾತ್ಮಕ ಪ್ರಬಂಧ ಹಾಗೂ ಇನ್ನಿತರ ಯಾವುದಾದರೊಂದು ಸಾಹಿತ್ಯ ಸಂಸ್ಕೃತಿಗೆ ಸಂಬಂಧಿಸಿದ ಪ್ರಬಂಧಗಳನ್ನು ಒಳಗೊಂಡಿರುತ್ತಿತ್ತು. ಪತ್ರಿಕೆಯ ಧೋರಣೆಯ ಕುರಿತು ಡಾ. ಮೊಗಸಾಲೆಯವರು ನೀಡುವ ಹೇಳಿಕೆಯನ್ನು ಹೀಗೆ ದಾಖಲಿಸಬಹುದಾಗಿದೆ. "ರಾಯಭಾರಿ ಸಾಪ್ತಾಹಿಕವು ಪ್ರಜಾ ಸೋಶಲಿಸ್ಟ್ ಪಕ್ಷದ ಬೆಂಬಲದಿಂದ ರೂಪುಗೊಂಡ ಪತ್ರಿಕೆ. ಇದರ ಸಂಪಾದಕರು ಯು.ಎಲ್. ನಾಯಕ್ ಎಂಬ ಸೋಶಲಿಸ್ಟ್ ಧೋರಣೆಯ ಉದ್ಯಮಿ. ನಾಯಕರು ಆಗ ಜಿಲ್ಲೆಯಲ್ಲೇ ಅಗ್ರಗಣ್ಯವೆನ್ನಬಹುದಾದ ಸಾರಿಗೆ ಸಂಸ್ಥೆಯನ್ನು ಹುಟ್ಟುಹಾಕಿ ನಡೆಸುತ್ತಿದ್ದ ವ್ಯಕ್ತಿ... 'ರಾಯಭಾರಿ'ಯ ಸಂಪಾದಕ ಎಸ್ಸೆಲ್ ನಾರಾಯಣ ಭಟ್ಟರ ಸಂಪಾದಕೀಯ ಮತ್ತು ಸಮಾಜವಾದಿ ಧೋರಣೆಯ ಲೇಖನಗಳು ನನಗೆ ಪ್ರಕಾಶ ಪತ್ರಿಕೆಗಿಂತ ಹೆಚ್ಚು ಆಪ್ತವಾಗಿದ್ದವು."(ಸಂ: ನಾ. ಮೊಗಸಾಲೆ, 2005, ಪು–275–276)

**'ಸುದರ್ಶನ' ವಾರಪತ್ರಿಕೆ: (1941–56... 1960)** ಸುದರ್ಶನ ಎಂಬ ಹೆಸರಿನ ಮಾಸ ಪತ್ರಿಕೆಯು 19ನೇ ಶತಮಾನದ ಕೊನೆಯ ದಶಕದ ಸುಮಾರಿಗೆ ಎಂದರೆ 1894 ರಿಂದ 1896ರ ವರೆಗೆ ಪ್ರಕಟವಾಗಿದ್ದು, ಇದರಲ್ಲಿ ರಾಷ್ಟ್ರೀಯ ಸುದ್ದಿಗಳು ಪ್ರಕಟವಾಗುತ್ತಿದ್ದವು (ಶ್ರೀನಿವಾಸ ಹಾವನೂರ ಡಾ., 2004, ಪು- 142) ಎಂಬ ಉಲ್ಲೇಖವು ಕನ್ನಡ ಪತ್ರಿಕಾ ಸೂಚಿಯಲ್ಲಿ ಉಲ್ಲೇಖಗೊಂಡಿದೆ. ಪುನಃ ಇದೇ ಹೆಸರಿನ ಪತ್ರಿಕೆಯೊಂದನ್ನು 1951ರಲ್ಲಿ ಉಡುಪಿಯಿಂದ ಬನ್ನಂಜೆ ಸಹೋದರರು ವಾರಪತ್ರಿಕೆಯಾಗಿ ಹೊರತಂದಿರುತ್ತಾರೆ. 1964ರ ವರೆಗೂ ಈ ಪತ್ರಿಕೆಯನ್ನು ನಡೆಸಿ, ಉಡುಪಿ ಪರಿಸರದ ಜನತೆಗೆ ಸಾಹಿತ್ಯ ಲಲಿತಕಲೆಗಳ ಸಹಿತ, ಸಾಂಸ್ಕೃತಿಕ ವಿಷಯಗಳ ಕುರಿತಂತೆ ಸಂಕ್ಷಿಪ್ತವಾಗಿ ಸ್ಥಳೀಯ ಸುದ್ದಿಯನ್ನು, ಸುದೀರ್ಘ ಸಾಹಿತ್ಯ ಲೇಖನವನ್ನು ಪ್ರಕಟಿಸುತ್ತಿದ್ದರು.

ಬನ್ನಂಜೆ ಗೋವಿಂದಾಚಾರ್ಯರು ಈ ಪತ್ರಿಕೆಯಲ್ಲಿ ತಮ್ಮದೇ ಕವನಗಳ ಪ್ರಕಟನೆಗೆ ಹೆಚ್ಚು ಮಹತ್ವಕೊಟ್ಟಂತೆ ಕಾಣುತ್ತದೆ. ಆ ಕಾಲದ ವಿದ್ವಾಂಸರಾದ ಬಳ್ಳೂರು ಸುಬ್ರಾಯ ಅಡಿಗ, ಸುರತ್ಕಲ್ ವೆಂಕಟರಮಣ ಆಚಾರ್ಯ, ಶ್ರೀ ಎಂ. ವಾಸುದೇವ ರಾಯರು, ಉಪನ್ಯಾಸಕರಾದ ಬಿ.ಎಚ್. ಶ್ರೀಧರ, ಮುಂತಾದವರ ಧಾರ್ಮಿಕ ಲೇಖನಗಳೂ (ಆಧಾರ: ಸುದರ್ಶನ ಸಂಪುಟ-9, ಸಂಚಿಕೆ: 22-24-1960, ಪುಟ: 11, 13, 49, 53) ಪ್ರಕಟಗೊಂಡಿರುವುದನ್ನು ಕಾಣಬಹುದಾಗಿದೆ. ಸಂಸ್ಕೃತ ಕಾಲೇಜಿನ ಉಪನ್ಯಾಸಕರಾಗಿದ್ದ ಎಂ. ರಾಜಗೋಪಾಲಾಚಾರ್ಯ ಹಳೆಗನ್ನಡ ಕಾವ್ಯ ವಿಚಾರಕ್ಕೆ ಸಂಬಂಧಿಸಿದ ವಿಮರ್ಶಾ ಪ್ರಬಂಧಗಳನ್ನೂ ಎಂ.ಜಿ.ಎಂ. ಕಾಲೇಜಿನ ಪ್ರಾಧ್ಯಾಪಕರಾಗಿದ್ದ ಯು.ಎಲ್. ಆಚಾರ್ಯರು ವೈಜ್ಞಾನಿಕ ಲೇಖನಗಳನ್ನೂ ಬರೆಯುತ್ತಿದ್ದರು. (ಆಧಾರಕ್ಕಾಗಿ ಸುದರ್ಶನ ಸಪ್ತೋತ್ಸವ ಸಂಚಿಕೆ: 1957, ಪುಟ-23, 27, 54 ನೇ ಪುಟಗಳನ್ನು ನೋಡಬಹುದಾಗಿದೆ.)

ಪ್ರಕಾಶ ಪತ್ರಿಕೆಯ ಸಂಪಾದಕ ಮಂಡಳಿಯಲ್ಲಿದ್ದ ಬನ್ನಂಜೆ ರಾಮಾಚಾರ್ಯರು ತನ್ನದೇ ಆದ ಸ್ವತಂತ್ರ ವಿಚಾರಗಳನ್ನು ಪ್ರಕಟಿಸಲು ಸ್ವಂತ ಪತ್ರಿಕೆಯೊಂದರ ಅವಶ್ಯಕತೆಯನ್ನು ಮನಗಂಡು ಈ ಪತ್ರಿಕೆಯನ್ನು ಆರಂಭಗೊಳಿಸಿರುವುದಾಗಿ ಹೇಳಿಕೊಂಡಿದ್ದಾರೆ(ಸಂ: ರಾಧಾಕೃಷ್ಣ ಆಚಾರ್ಯ, 1994-95, ಪು-51)

ಅವರೇ ಹೇಳಿಕೊಂಡಂತೆ ಕರ್ನಾಟಕ ಏಕೀಕರಣವು ಅವರ ಪ್ರಧಾನ ಉದ್ದೇಶವಾಗಿತ್ತು. ಅವರ ತಮ್ಮ ಬನ್ನಂಜೆ ಗೋವಿಂದಾಚಾರ್ಯರ ಸಾಹಿತ್ಯಕ ಬರಹಗಳಿಂದ ಪತ್ರಿಕೆಯ ತೇಜಸ್ಸು ವರ್ಧಿಸಿದ್ದು, ಅವರು ನವಭಾರತ ದೈನಿಕಕ್ಕೆ ಸೇರಿದ ಬಳಿಕ ಸುದರ್ಶನ ಪತ್ರಿಕೆಯ ಪ್ರಕಟಣೆಯು ನಿಂತಿತು.

**'ಸುಪ್ರಭಾತ' ಮಾಸಪತ್ರಿಕೆ: (1952–53)** 'ಓಲೆಗುಪ್ತ' ಎನ್ನುವವರು ಬೆಂಗಳೂರಿನಿಂದ ಹೊರಡಿಸುತ್ತಿದ್ದ, 'ಕಥಾವಳಿ' ನಿಯತಕಾಲಿಕದಲ್ಲಿ 'ಗಿರಿಬಾಲೆ'ಯವರು (ಸರಸ್ವತಿ ಬಾಯಿ ರಾಜವಾಡೆಯವರು) ವನಿತಾವಿಭಾಗದ ಸಂಪಾದಕಿಯಾಗಿ ಸುಮಾರು ಏಳು ವರ್ಷ ಕಾರ್ಯನಿರ್ವಹಿಸಿದ್ದರು. ಆ ಪತ್ರಿಕೆಯ ಸಂಪಾದಕೀಯ ಶೀರ್ಷಿಕೆಯೇ 'ಅಕ್ಕನ ಓಲೆಗಳು'. ಈ ಸಂಪಾದಕೀಯ ಬರಹಗಳಿಗಾಗಿ ರಾಜವಾಡೆಯವರು ನಡೆಸಿದ ನಿರಂತರ ಅಧ್ಯಯನ ಹಾಗೂ ಈ ಪತ್ರಿಕೆಯ ಓದುಗರಿಂದ ಬರುತ್ತಿದ್ದ ಅಸಂಖ್ಯಾತ ಪ್ರಶ್ನರೂಪದ ಕಾಗದಗಳನ್ನು ಓದಿ ಉತ್ತರ ಕಂಡುಕೊಂಡ ಪರಿಣಾಮವಾಗಿ "ನಾನೇ ಮಹಿಳೆಯರಿಗಾಗಿ ಮೀಸಲಾದ ಒಂದು

ಸ್ವಂತ ಪತ್ರಿಕೆಯನ್ನು ಆರಂಭಿಸಿದರೆ ಹೇಗೆ? ಎಂಬ ಯೋಚನೆ ಬಂತು.... ಮಹಿಳೆಯರಿಗಾಗಿ ಪ್ರತ್ಯೇಕ ಪತ್ರಿಕೆಯನ್ನು ಹೊರತರುವುದು ಅಗತ್ಯವೆಂತಲೂ ಕಂಡಿತು" (ಸಂ: ವೈದೇಹಿ, 2008, ಪುಟ-53) ಎಂದು ಸುಪ್ರಭಾತ ಪತ್ರಿಕೆಯ ಹುಟ್ಟಿನ ಹಿನ್ನೆಲೆಯನ್ನು ವಿವರಿಸಿದ್ದಾರೆ. ರಾಜವಾಡೆಯವರು ಇದೇ ಕೃತಿಯಲ್ಲಿ ಮತ್ತೆ ಮುಂದುವರಿಯುತ್ತಾ "ನಾನು ಪತ್ರಿಕೆ ಶುರುಮಾಡುವ ಕಾಲದಲ್ಲಿ ಸ್ತ್ರೀಯರೆಂದರೆ ಬಹಳ ಸಸಾರವಿತ್ತು. ಆದರೆ ಇವತ್ತಿನ ಪತ್ರಿಕೆಗಳ ಬಗ್ಗೆ ನನಗೆ ಒಂದು ಸಿಟ್ಟಿದೆ. ಇಲ್ಲಿನ ಅಡುಗೆಯ ಪುಟಗಳಲ್ಲಿ ಬರಿ ಅಡುಗೆ ಮಾಡುವುದು ಹೇಗೆ? ಅಂತ ಮಾತ್ರ ಕೊಡುತ್ತಾರೆ. ಅಷ್ಟು ಸಾಲದು. ನಾನು ಬರೆಯುವಾಗ ಅಡುಗೆ ಮನೆಯ ಬಗ್ಗೆ ಕಿರುಜ್ಞಾನವನ್ನು ನೀಡುತ್ತಿದ್ದೆ... ಒಟ್ಟು ನನ್ನ ದೃಷ್ಟಿಯೇ ಹೆಂಗಸರು ಜ್ಞಾನವಂತರಾಗಬೇಕು. ಬರೀ ಪುಸ್ತಕಜ್ಞಾನವಲ್ಲ. ಅವರಿಗೆ ಲೌಕಿಕಜ್ಞಾನವೂ ಇರಬೇಕು ಅಂತ ಇತ್ತು. ಮೊದಲ ಸಂಚಿಕೆಯಲ್ಲಿ 'ವಿಶಾಖಾ' ಎನ್ನುವ ಕಾವ್ಯನಾಮದಲ್ಲಿ ನನ್ನದೊಂದು ಕವನ ಇದೆ, 'ಸಿದ್ಧಾಂತ' ಅಂತ. ಅದರಲ್ಲಿ ಹೆಣ್ಣು ಗಂಡಿನ ಸರಿಸಮಾನತೆ ಜಗದ ಪ್ರಗತಿಗೆ ಕಾರಣ ಅಂತ ಬರೆದಿದ್ದೆ. ಸಮಾನತೆಯ ಬಗ್ಗೆ ಜನ ಮಾತನಾಡಿಕೊಳ್ಳುತ್ತಿದ್ದ ಕಾಲವೇ ಅಲ್ಲ ಅದು" (ಪೂರ್ವೋಕ್ತ, ಪು-53) ಎಂದು ಉಲ್ಲೇಖಿಸುತ್ತಾರೆ.

ವಿಧವಾಶ್ರಮದ ಹೆಸರಿನಲ್ಲಿ ಸ್ತ್ರೀನಿಲಯವೊಂದನ್ನು ಕಟ್ಟಿಸಿಕೊಂಡು ಪತ್ರಿಕೆಗಳಲ್ಲಿ ಜಾಹೀರಾತು ನೀಡಿ, ನಿರ್ಗತಿಕ ಹೆಣ್ಣುಮಕ್ಕಳನ್ನು ಸುಲಿಯುವ ರಾಕ್ಷಸರು, ತಮ್ಮ ಶೋಷಣೆಗೆ ವ್ಯವಸ್ಥಿತ ಸಾಂಸ್ಥಿಕ ರಚನೆಯಿಂದ ಮುಂದಾಗುತ್ತಿರುವುದು 'ಅವಳ ಉದ್ಧಾರ' ಎಂಬ ರಾಜವಾಡೆಯವರ ಕಥೆಯಲ್ಲಿ ನಿರೂಪಿತವಾಗಿದೆ. ಕಥೆಯು ವ್ಯವಸ್ಥೆಯ ಕ್ರೂರಮುಖವನ್ನು ಅನಾವರಣಗೊಳಿಸುತ್ತಲೇ ಹೋಗುತ್ತದೆ. ವಿಧವಾ ಪುನರ್ವಿವಾಹದ ಉದಾತ್ತ ಕಲ್ಪನೆಯಡಿಯಲ್ಲಿಯೇ ಹುಟ್ಟಿದ ಸಾಮಾಜಿಕ ಸಂಸ್ಥೆಗಳು ವಾಣಿಜ್ಯ ಉದ್ದೇಶದಿಂದ ಪುರುಷನೊಬ್ಬನ ಕಾಮದ/ಹಣದ ಕ್ರೌರ್ಯ ಮತ್ತು ದಾಹಕ್ಕೆ ಬಲಿಯಾದ ನಿರ್ಗತಿಕ ಹೆಣ್ಣುಮಗಳೊಬ್ಬಳ ಅಸಹಾಯಕ ಸ್ಥಿತಿ 'ತಾಯೇಃ ಶಾಂತಿ' ಎಂಬ ಕಥೆಯಲ್ಲಿ ನಿರೂಪಿತವಾಗಿದೆ. ತಮ್ಮ ಅಜ್ಞಾನದಿಂದ ಭವಿಷ್ಯದ ಕ್ರೂರ-ಕರಾಳ ದಿನಗಳ ಬಗೆಗೆ ಯೋಚಿಸದೆ ತತ್‌ಕ್ಷಣದ ಸುಖದಿಂದ ದುರಂತ ಕಾಣಬೇಕಾದ ಹೆಣ್ಣುಮಕ್ಕಳ ಬವಣೆಯ ಭಿನ್ನ ಭಿನ್ನ ಚಿತ್ರಗಳೇ ಸುಪ್ರಭಾತ ಪತ್ರಿಕೆಯ ಕಥೆಗಳ ವಸ್ತು ಮತ್ತು ಆಶಯವಾಗಿರುತ್ತದೆ. ಆರ್ಥಿಕ ಬಡತನವು ಸಂಸಾರವೆಂಬ ಸಾಮಾಜಿಕ ಘಟಕದ ನಂಟನ್ನು ಶಿಥಿಲಗೊಳಿಸಬಲ್ಲುದೇ ಎಂಬ ಪ್ರಶ್ನೆಯು 'ತಾಯೇಃ ಶಾಂತಿ' ಎಂಬ ಕಥೆಯಿಂದ ಒಡಮೂಡುತ್ತದೆ.

ನಾಗಿ, ಸುಬ್ಬ ಎಂಬ ಬಡ ದಂಪತಿಗಳು ವಿವಾಹವೆಂಬ ಸಂಸ್ಕಾರದೊಂದಿಗೆ ಗಂಡ ಹೆಂಡಿರಾಗಿ ಸಂಸಾರ ಮಾಡಿಕೊಂಡಿರುತ್ತಾರೆ. ಸುಬ್ಬನ ದೇಹಸಂಬಂಧದಿಂದಲೇ ಹುಟ್ಟಿದ ಮಗು ಹೊಟ್ಟೆಯ ಹಸುವಿನಿಂದ ಕಿರಿಚುತ್ತದೆ. ತಿನ್ನುವುದಕ್ಕೇ ಏನೂ ಇಲ್ಲದ ನಾಗಿ ಮಗುವಿನ ಹೊಟ್ಟೆಯ ಹಾಲಿಗಾಗಿ ಚಡಪಡಿಸುತ್ತಾಳೆ. ಎದೆಯ ಹಾಲನ್ನೂಡುವುದಕ್ಕೂ ಅಲ್ಲಿಯೂ ಹಾಲಿಲ್ಲ. ಆದರೆ ಸ್ವತಃ ತನ್ನ ಮಗುವಿನ ಹಸಿವೆಯ ಬಗೆಗೆ ಮತ್ತು ಅದರ ಹೀನಾಯ ಪಾಡಿನ ಬಗೆಗೆ ಯಾವ ಯೋಚನೆಯೂ ತಂದೆಯಾದ ಸುಬ್ಬನೆಂಬುವವನಿಗಿಲ್ಲ. ಮಗುವಿನ ಇಂತಹ ಬವಣೆಯ ಸಂದರ್ಭದಲ್ಲೂ ಆತನಿಗೆ ಊರಿನ ಜಾತ್ರೆಯ ಬಗೆಗೇ ಯೋಚನೆ! ನಾಗಿ ತನ್ನ ಗಂಡನಲ್ಲಿ "ಒಂದು ಚಮಚ ಹಾಲನ್ನಾದರೂ ತಂದುಕೊಡಲಾರೆಯಾ? ದಮ್ಮಯ್ಯ!"(ಸಂ: ಜನಾರ್ದನ ಭಟ್ಟ ಬಿ., 2007,

ಪು-66) ಎಂದು ಗಂಡನಲ್ಲಿ ಮೊರೆಯಿಡುತ್ತಾಳೆ. ಇದಕ್ಕೆ ಸುಬ್ಬ "ನಾನೀಗ ಎಲ್ಲಿಂದ ಹಾಲು ತರಲಿ? ನನ್ನ ಕೈಯಲ್ಲಿ ಒಂದು ಚಿಕ್ಕಾಸೂ ಇಲ್ಲ. ಒಂದಿಷ್ಟು ಗಂಜಿ ನೀರು ಕುಡಿಸು ಬೇಕಾದರೆ. ನಿನ್ನ ಮಗುವೇನು ಹಾಲಲ್ಲೇ ಈಜುತ್ತಿತ್ತೇ? ಇದೆಂಥ ಹಾಲಿನ ರೋಗ? ಎಂದು ತಲೆ ಕೆರೆದುಕೊಳ್ಳತೊಡಗಿದ" (ಪೂರ್ವೋಕ್ತ, ಪುಟ-66) ಸುಬ್ಬನ ನಡವಳಿಕೆ ಆತ ನಿಷ್ಕರುಣಿ ಎನ್ನುವುದನ್ನು ಸಾಬೀತುಗೊಳಿಸುತ್ತದೆ. ಆದರೆ ಸುಬ್ಬ ಕೇವಲ ನಿಷ್ಕರುಣಿ ಮಾತ್ರವೇ ಆಲ್ಲ ಆತನೊಬ್ಬ ಮನುಷ್ಯನೇ ಅಲ್ಲವೆಂಬ ತೀರ್ಮಾನಕ್ಕೆ ಬರಲು ಈ ಕೆಳಗಿನ ಮಾತುಗಳು ಆಧಾರವನ್ನೊದಗಿಸುತ್ತದೆ.

ಊರಿನ ತೇರಿಗಾಗಿ ಮತ್ತೆ ಮತ್ತೆ ಹೆಂಡತಿಯನ್ನು ಹಣಕ್ಕಾಗಿ ಪೀಡಿಸಿದಾಗ ಹೆಂಡತಿ ನಾಗಿ ತನ್ನಲ್ಲಿ ಹಣವಿಲ್ಲವೆಂದು ಪ್ರಾಮಾಣಿಕವಾಗಿ ಪ್ರತ್ಯುತ್ತರ ನೀಡುತ್ತಾಳೆ. ಇದಕ್ಕುತ್ತರವಾಗಿ ಸುಬ್ಬ ಕೇಳುವ ಪ್ರಶ್ನೆ "ಅಲ್ಲಾ ಇಷ್ಟು ದಿನ ಬೇರೆ ಬೇರೆ ರೀತಿಯಿಂದ ಸಂಪಾದಿಸಿದ್ದು...ಷಂಡನ ಪ್ರಶ್ನೆ"(ಪೂರ್ವೋಕ್ತ, ಪು-67) ಹೆಂಡತಿ ಗಂಡನಾದ ತನ್ನನ್ನು ಬಿಟ್ಟು ಹಣಕ್ಕಾಗಿ ಬೇರೆಯವರನ್ನು ಸಂಪರ್ಕಿಸಿ ಹಣ ಸಂಪಾದಿಸಿದರೂ ಸುಬ್ಬನ ಮನಸ್ಸಿಗೆ ಯಾವುದೇ ಆತಂಕ-ನೋವಿಲ್ಲ. ಅದರಿಂದ ತನ್ನ ಸ್ವಾಭಿಮಾನಕ್ಕೆ ಯಾವುದೇ ಧಕ್ಕೆ ಎಂದು ಆತ ತಿಳಿಯುವುದಿಲ್ಲ. ಆತನಿಗೆ ಹಣ ಸಿಕ್ಕಿದರೆ ಸಾಕು, ಅದಷ್ಟೇ ಆತನಿಗೆ ಬೇಕಾಗಿರುವುದು! ಮಾನಸಿಕವಾಗಿ ತನ್ನ ಹೆಂಡತಿಯೊಂದಿಗೆ ಎಂದೂ ಒಂದಾಗದೇ ಆಕೆ ಕೇವಲ ತನ್ನ ಕಾಮದ ಬಯಕೆಯನ್ನು ಈಡೇರಿಸುವ ಒಂದು ಯಂತ್ರ ಎಂದಷ್ಟೇ ತಿಳಿಯುವ ಗಂಡ ಈ ಮಾತನ್ನಾಡಬಹುದು. ಈ ಮಾತನ್ನಾಡಿದವನಿಗೆ ಆಕೆಯು ಹೆತ್ತ ಮಗುವಿನ ಬಗೆಗೆ ಯಾವ ಪ್ರೀತಿ ಇರುವುದಕ್ಕೂ ಸಾಧ್ಯವಿಲ್ಲ! ಹಾಗಾಗಿಯೇ ಅವನ ಮೇಲಿನ ಮಾತುಗಳಲ್ಲಿ ಅವನ ನಿಷ್ಕಾಳಜಿ ಪ್ರಕಟವಾಗುತ್ತದೆ ಎಂದು ಸಹೃದಯರು ಗುರುತಿಸಬಹುದಾಗಿದೆ. ಬಡತನವೆನ್ನುವುದು ದಾಂಪತ್ಯದ ಬದುಕನ್ನು ಇಂತಹ ಸ್ಥಿತಿಗೂ ಕೊಂಡೊಯ್ಯಬಲ್ಲುದೇ ಎಂಬ ಪ್ರಶ್ನೆಯು ಓದುಗರಲ್ಲಿ ಒಡಮೂಡುತ್ತದೆ.

ಪತ್ರಿಕೆಯಲ್ಲಿ ಪ್ರಕಟವಾಗುತ್ತಿದ್ದ ತಮ್ಮದೇ ಕವನವನ್ನು 'ವಿಶಾಖಾ' ಎನ್ನುವ ಕಾವ್ಯನಾಮದಲ್ಲಿ ಬರೆಯುತ್ತಿದ್ದರಲ್ಲದೆ ಪತ್ರಿಕೆಯಲ್ಲಿ ಪ್ರಕಟವಾಗುವ ಕಥೆಗೆ ವಿವರಣೆಯ ರೂಪದಲ್ಲಿ ಸಂಪಾದಕೀಯವಿರುತ್ತಿತ್ತು. ಓದುಗರ ಓಲೆಗೆ ಪತ್ರಿಕೆಯಲ್ಲಿ ಅವಕಾಶವಿದ್ದು, ಈ ಅಂಕಣವು ವಾಚಕರಲ್ಲಿ ಬರೆಯುವ ಹವ್ಯಾಸಕ್ಕೆ ಪ್ರೇರಣೆಯನ್ನೊದಗಿಸಬಲ್ಲದು ಎನ್ನುವುದನ್ನು ಕಂಡುಕೊಂಡಿದ್ದರು. "ಏನು ಅಡಿಗೆ"? ಎಂಬ ಅಂಕಣದಲ್ಲಿ ಅಡುಗೆಮನೆಯ ವಿವರಗಳಿದ್ದರೂ ಆ ಕಾಲಧರ್ಮಕ್ಕೆ ಅದು ಸಮಯೋಚಿತವೇ ಆಗಿತ್ತು. ಕಾರಣ ಶಾಲಾಶಿಕ್ಷಣದ ಮೂಲಕ ಜ್ಞಾನವೇ ಮಹಿಳಾ ಶಿಕ್ಷಣದ ಗುರಿ ಎಂಬ ಕಲ್ಪನೆಯು ಮೇಲು ಮಧ್ಯಮವರ್ಗ/ಶ್ರೀಮಂತ ಕುಟುಂಬದಲ್ಲಿ ಆವರಿಸಿಕೊಂಡಿದ್ದ ಸಂದರ್ಭದಲ್ಲಿ ಉದ್ಯೋಗಕ್ಷೇತ್ರಕ್ಕೆ ಮುನ್ನುಗ್ಗುವ ಸಾಮಾಜಿಕ ಸ್ಥಿತಿ ಅಂದಿನದಾಗಿರಲ್ಲಿಲ್ಲ. ಹಾಗಾಗಿ ಅಡುಗೆ ಮನೆಯ ಕುರಿತಂತೆ ವಿವರಣೆಯು ಅಂದಿಗೆ ಸಕಾಲಿಕವಾಗಿತ್ತೆನ್ನಬಹುದು. 'ಬಾಲಕಿಯರ ಬೊಕ್ಕಸ' ಎಂಬುದು ಸುಪ್ರಭಾತದ ವೈಶಿಷ್ಟ್ಯವೆಂದು ಸೂಚಿಸಬಹುದಾದ ವಿಶಿಷ್ಟ ಅಂಕಣವಾಗಿದ್ದು, ಹೆಣ್ಣಿನ ಕೀಳರಿಮೆಯನ್ನು ಹೋಗಲಾಡಿಸುವ, ತಾವೂ ಪುರುಷರಿಗೆ ಸಮಾನರೆಂಬ ಮನಸ್ಥಿತಿಯನ್ನು ಮೈಗೂಡಿಸಿಕೊಳ್ಳಬೇಕೆಂಬ ಆಶಯವೇ ಈ ಅಂಕಣದ ಧೋರಣೆಯಾಗಿತ್ತು.

**ಪತ್ರಿಕೆಯನ್ನು ನಿಲ್ಲಿಸಲು ಬಂದೊದಗಿದ ಕಾರಣಗಳು:** ಅವಿಭಜಿತ ದ.ಕ. ಜಿಲ್ಲೆ ಮತ್ತು ಏಕೀಕರಣಪೂರ್ವದ ವಿಶಾಲ ಕನ್ನಡ ಭಾಷೆಯ ಪ್ರದೇಶದ ಅದೆಷ್ಟೋ ಮಹಿಳೆಯರು ಬರಹದ ಮೂಲಕ ತಮ್ಮ ಅಸ್ತಿತ್ವವನ್ನು ತೋರಿಸಿಕೊಂಡ ಈ ಪತ್ರಿಕೆಯು ಕೇವಲ ಒಂದು ವರ್ಷವಷ್ಟೇ ಪ್ರಸರಣದಲ್ಲಿತ್ತು. ಒಂದು ವರ್ಷವು ಪೂರ್ಣವಾಗುತ್ತಿದ್ದಂತೆ (ಕಮಲದ ಹನ್ನೆರಡು ದಳಗಳು ಅರಳುವಷ್ಟರಲ್ಲಿ) ಪತ್ರಿಕೆಯು ನಿಂತುಹೋಯಿತು. ಕೊನೆಯ ಸಂಚಿಕೆಯಲ್ಲಿ ಸಂಪಾದಕರು ಉಲ್ಲೇಖಿಸಿದಂತೆ ಆರ್ಥಿಕ ಮುಗ್ಗಟ್ಟು, ಪತ್ರಿಕೆ ನಿಲ್ಲಿಸಲು ಕಾರಣವಲ್ಲ. ರಾಜವಾಡೆಯವರೇ ವೈದೇಹಿಯವರಲ್ಲಿ ಪತ್ರಿಕೆ ನಿಂತ ಕಾರಣವನ್ನು ಹೀಗೆ ಉಲ್ಲೇಖಿಸಿದ್ದಾರೆ. "ರಚನಾತ್ಮಕ ಶಕ್ತಿಯುಳ್ಳವರು ಪತ್ರಿಕೆ ನಡೆಸಬಾರದು, ನಿಲ್ಲಿಸು ಎಂದದ್ದರಿಂದ ಅವರ ಮಾತಿಗೆ ಗೌರವ ಕೊಟ್ಟು ಅದಾಗಲೇ ಚಂದಾ ವಸೂಲಿ ಆಗಿದ್ದರಿಂದಾಗಿ ಒಂದು ವರ್ಷವನ್ನು ಪೂರ್ತಿಗೊಳಿಸಿ, ಹನ್ನೆರಡು ಸಂಚಿಕೆ ಮುಗಿಯುತ್ತಲೇ ಸುಪ್ರಭಾತವನ್ನು ನಿಲ್ಲಿಸಿದೆ."(ಸಂ: ವೈದೇಹಿ, 2008, ಪು-14) ರಾಜವಾಡೆಯವರಲ್ಲಿ ಪತ್ರಿಕೆಯನ್ನು ನಿಲ್ಲಿಸಬೇಕೆಂದು ಗೋವಿಂದ ಪೈಯವರು ಹೇಳಲು ಈ ಕೆಳಗಿನ ಕಾರಣಗಳಿವೆ ಎನ್ನುವುದನ್ನು ವೈದೇಹಿಯವರಲ್ಲಿ ಸ್ವತಃ ರಾಜವಾಡೆಯವರು ನಿರೂಪಿಸಿಕೊಂಡ ಅನುಭವ ಕಥನದಿಂದ ತಿಳಿದುಕೊಳ್ಳಬಹುದಾಗಿದೆ. ಅಪಾರ ಸೃಜನಶಕ್ತಿಯುಳ್ಳ ಸರಸ್ವತಿಬಾಯಿಯವರು ಸಂಪಾದಕಿಯಾಗಿ ಪತ್ರಿಕಾ ಕೆಲಸಗಳಲ್ಲಿ ತೊಡಗಿಸಿಕೊಂಡಂತೆ ಭೌತಿಕ ಚಟುವಟಿಕೆಗಳ ಒತ್ತಡದಿಂದಾಗಿ ಸೃಜನಶಕ್ತಿ ಕಮರಿಹೋಗಿ ಕನ್ನಡ ಸಾಹಿತ್ಯಕ್ಕೆ ಅಪಾರ ನಷ್ಟ ಎನ್ನುವುದನ್ನು ತಿಳಿದು, ಈ ಪತ್ರಿಕಾ ಪ್ರಕಟನೆಯ ಸಂಪಾದಕ ಜವಾಬ್ದಾರಿಯಿಂದ ಹಿಂದೆ ಸರಿಯುವಂತೆ ಸಲಹೆಯನ್ನಿತ್ತರು. ಎರಡನೇ ಕಾರಣ ಸರಸ್ವತಿ ಬಾಯಿಯಂತಹ ಘನ ವ್ಯಕ್ತಿತ್ವವುಳ್ಳ ಮಹಿಳೆಯು ಪತ್ರಿಕೆಯ ಚಂದಾಕ್ಕಾಗಿ ಸಹೃದಯರನ್ನು ಯಾಚಿಸುವುದು ಅವರ ವ್ಯಕ್ತಿತ್ವವನ್ನು ಓದುಗ ಸಹೃದಯರು ತುಂಬಾ ಅಗೌರವದಿಂದ ನಡೆಸಿಕೊಳ್ಳುವ ಸಾಧ್ಯತೆಗಳಿವೆಯೆಂದು ಈ ಜವಾಬ್ದಾರಿ ತಮ್ಮಂಥವರಿಗೆ ಯುಕ್ತವಲ್ಲವೆಂದು ತಿಳಿಸಿ, ಪತ್ರಿಕೆಯ ಸಂಪಾದಕ ಹೊಣೆಯಿಂದ ವಿದಾಯಹೇಳುವಂತೆ ಸೂಚಿಸಿದರು. ಅವರ ನಿರ್ದೇಶನದಂತೆ ರಾಜವಾಡೆಯವರು ತಮ್ಮ ಪತ್ರಿಕೋದ್ಯಮಕ್ಕೆ ವಿದಾಯ ಹೇಳಿದರು.

**ಏಕೀಕರಣಪೂರ್ವದ ಧಾರ್ಮಿಕ ಪತ್ರಿಕೆಗಳು:** ಸ್ವಾತಂತ್ರ್ಯಪೂರ್ವ ಬರಹಗಾರರೆಲ್ಲರೂ ತಮ್ಮ ಸಾಹಿತ್ಯರಚನೆಗಳಲ್ಲಿ ಪರಂಪರೆಯಿಂದ ಬೆಳೆದು ಬಂದ ಕಂದಾಚಾರ, ಮೌಢ್ಯ, ಸಾಮಾಜಿಕ ಅಸಮಾನತೆ, ಅಸ್ಪೃಶ್ಯತೆ ಶೋಷಣೆ-ಇವುಗಳ ವಿರುದ್ಧ ಜಾಗೃತಿ ಮೂಡಿಸುವ ಉದ್ದೇಶಕ್ಕಾಗಿ ಸಾಹಿತ್ಯಕೃತಿಗಳನ್ನು ರಚಿಸಿ, ಪ್ರಕಟನೆಗಾಗಿ ಪತ್ರಿಕಾಮಾಧ್ಯಮವನ್ನು ಬಳಸಿಕೊಂಡರು.

ಶುದ್ಧ ಧಾರ್ಮಿಕರಚನೆಯ ಬರಹಗಳು ಈ ಕಾಲದ ಇನ್ನೊಂದು ವಿಭಿನ್ನ ಧೋರಣೆಯಾಗಿದ್ದು, ಇಂತಹ ಧೋರಣೆಯನ್ನು ಬಿಂಬಿಸುವ ಮುಖ್ಯಪತ್ರಿಕೆಯಾಗಿ ಈ ಕೆಳಗಿನ ಪ್ರಮುಖ ಪತ್ರಿಕೆಗಳನ್ನು ಹೆಸರಿಸಬಹುದು. 1) ಸದ್ಗುರು ಪಾದಸೇವೆ (ಸಂ: ವೆಂಕಟರಮಣ ಆಚಾರ್ಯ (1913-47...)) 2) 'ಶ್ರೀಕೃಷ್ಣಸಂದೇಶ' (ಸಂಪಾದಕ ಮುದ್ರಾಡಿ ಜನಾರ್ದನ ಆಚಾರ್ಯ- 1932-35...38) 'ಪರ್ಯಾಯ ಪ್ರಕಾಶಿನಿ' (ಸಂಪಾದಕ ಬಿ. ರಾಮಕೃಷ್ಣ ಆಚಾರ್, 1942...) 'ಪ್ರಕಾಶಿನೀ' (ಸಂಪಾದಕ: ಟಿ. ಶ್ರೀಪತಿ, ಕೃಷ್ಣಾಪುರಮಠ 1942-69), 'ಶ್ರೀಕೃಷ್ಣ ಪರ್ಯಾಯಪ್ರಕಾಶಿನೀ' (ಸಂಪಾದಕ: ಶ್ರೀ ರಾಜಗೋಪಾಲಾಚಾರ್ಯ, 1942... ಕೃಷ್ಣಾಪುರಮಠ) 'ಧರ್ಮಬೋಧ' (ಸಂಪಾದಕ: ಉ. ವೆಂಕಟರಮಣ ಆಚಾರ್ಯ, ಒಸ್ನಂಜೆ, ಕರಂಬಳ್ಳಿ-1948-54), ಶ್ರೀಕೃಷ್ಣಜಯಂತಿ (ಸಂಪಾದಕರು-ಹಂಡೆಗುರು ವೇದವ್ಯಾಸಾಚಾರ್ಯ... 1952) ಕೇವಲ

ದ್ವೈತಸಿದ್ಧಾಂತದ ಪ್ರತಿಪಾದನೆಯ ಹಿನ್ನೆಲೆಯಲ್ಲಿ ಭಾರತೀಯ ಪುರಾಣಕಾವ್ಯಗಳನ್ನು ವಿಶ್ಲೇಷಣೆ ಮಾಡುತ್ತಾ ರಸಾನುಭವದ ಮೂಲಕ ಭಾರತೀಯ ದಾರ್ಶನಿಕ ಪರಂಪರೆಯ ಮೌಲ್ಯಗಳನ್ನು ಮನಗಾಣಿಸುವುದೇ ಈ ಎಲ್ಲ ಧಾರ್ಮಿಕ ಬರಹಗಳ ಮುಖ್ಯ ಉದ್ದೇಶವಾಗಿತ್ತು.

**ಏಕೀಕರಣಪೂರ್ವದ ಪತ್ರಿಕೆಗಳ ಸಾಮಾನ್ಯ ಲಕ್ಷಣಗಳು:** ಏಕೀಕರಣಪೂರ್ವದ ಕಾಲಾವಧಿಯಲ್ಲಿ (1900–1956) ಪ್ರಕಟಗೊಂಡ ಪತ್ರಿಕೋದ್ಯಮದ ಸಾಹಿತ್ಯ ಚಟುವಟಿಕೆಗಳ ಕೆಲವು ಮುಖ್ಯ ಲಕ್ಷಣಗಳನ್ನು ಹೀಗೆ ದಾಖಲಿಸಬಹುದಾಗಿದೆ.

1) ಗುಪ್ತನಾಮ, ಅಂಕಿತನಾಮ, ಕಾವ್ಯನಾಮ ಎಂಬೀ ಬರಹಗಳಲ್ಲಿ ಸಾಹಿತ್ಯ ಬರಹಗಳು ಪ್ರಕಟವಾಗಿರುವುದು ಕಂಡುಬರುತ್ತದೆ.

2) ಪತ್ರಿಕಾ ಪ್ರಕಟಣೆಗೆ ಸಂಬಂಧಿಸಿದಂತೆ ಪತ್ರಿಕೆಯ ವ್ಯವಸ್ಥಾಪಕರು ಸಮರ್ಪಕ ವ್ಯೂಹ ರಚನೆಗೆ ಮುಂದಾಗದಿರುವುದು ಈ ಕಾಲದ ಪತ್ರಿಕಾ ಸಂಪಾದಕರ ಬಹುಮುಖ್ಯ ದೌರ್ಬಲ್ಯವೆಂದು ಗುರುತಿಸಬಹುದಾಗಿದೆ.

3) ಪತ್ರಿಕಾ ಬರಹಗಳು ರಾಷ್ಟ್ರೀಯ ಧೋರಣೆಗಳಿಗೆ ಸಮಾನ ಪ್ರಾಮುಖ್ಯತೆಯನ್ನು ನೀಡುವುದರೊಂದಿಗೆ ಸಾಮಾಜಿಕ ಮೌಢ್ಯಗಳ ವಿರುದ್ಧ ಎಚ್ಚರಿಸುವ ಪ್ರಯತ್ನಗಳನ್ನು ಕಾಣಬಹುದಾಗಿದೆ.

4) ವ್ಯಕ್ತಿಗತ ನೈತಿಕತೆಗೆ, ಆಧುನಿಕತೆಗೆ ಹೆಚ್ಚಿನ ಒತ್ತು ನೀಡಿದಂತೆ, ಧಾರ್ಮಿಕ ಪತ್ರಿಕಾ ಪ್ರಕಟಣೆಗಳು ಸಂಖ್ಯೆಯಲ್ಲಿ ಇಳಿಮುಖವಾಗಿರುವುದನ್ನು ಗಮನಿಸಬಹುದಾಗಿದೆ.

5) ಉಡುಪಿಯ ಕಲಾರಂಗ, ಕುಂದಾಪುರದ ಸಾಹಿತ್ಯ ಸಂಘ, ಉಡುಪಿಯ ಕನ್ನಡ ಸಂಘ ಇವು 30–40ರ ದಶಕದಲ್ಲಷ್ಟೇ ಆರಂಭಗೊಂಡ ಸಾಹಿತ್ಯ ಸಂಘಟನೆಗಳಾಗಿವೆ. (ಶ್ರೀಮನ್ಮಧ್ವಸಿದ್ಧಾಂತಗ್ರಂಥಾಲಯ–ಪಾವಂಜೆ ಗುರುರಾಯರಿಂದ ಉಡುಪಿಯಲ್ಲಿ ಸ್ಥಾಪಿತವಾಗಿದ್ದು, ಈ ಸಂಸ್ಥೆಯು ಧಾರ್ಮಿಕ ಕೃತಿಗಳ ಪ್ರಕಟಣೆಯನ್ನೇ ಮುಖ್ಯ ಉದ್ದೇಶವಾಗಿರಿಸಿಕೊಂಡು ಆರಂಭವಾದ ಸಂಸ್ಥೆಯಾಗಿದೆ. ಇದು ಯಕ್ಷಗಾನಪ್ರಸಂಗಪುಸ್ತಕಗಳು, ಧಾರ್ಮಿಕ ವಿಷಯಗಳ ಕುರಿತಾದ ಕೃತಿಗಳನ್ನು ಏಕೀಕರಣಪೂರ್ವದಲ್ಲೇ ಪ್ರಕಟಿಸುವ ಮೂಲಕ ಸಹೃದಯರಿಂದ ಮನ್ನಣೆಯನ್ನೂ, ವಿಶ್ವಾಸವನ್ನು ಗಳಿಸಿಕೊಂಡ ಸಂಸ್ಥೆಯಾಗಿತ್ತು.)

**ಬಿ) ಏಕೀಕರಣೋತ್ತರ ಕಾಲದ ಪತ್ರಿಕೋದ್ಯಮದೊಡನೆ ಬೆಳೆದುಬಂದ ಸಾಹಿತ್ಯ ಚಟುವಟಿಕೆಗಳು:**

**ಅ) ಏಕೀಕರಣೋತ್ತರ ಕಾಲದ ಕನ್ನಡ ಪತ್ರಿಕೋದ್ಯಮದ ಸಾಹಿತ್ಯ ಚಟುವಟಿಕೆಗಳ ವಿವಿಧ ಹಂತಗಳು:**

ಕನ್ನಡ ಭಾಷೆಯನ್ನಾಡುವ ಭೌಗೋಳಿಕ ಪ್ರದೇಶವು 1956ಕ್ಕೂ ಹಿಂದೆ ಭಾರತದ ವಿವಿಧ ಪ್ರಾಂತ್ಯ ಪ್ರದೇಶಗಳಲ್ಲಿ ಚದುರಿಕೊಂಡಿದ್ದು, ಈ ಎಲ್ಲ ಪ್ರಾಂತ್ಯಗಳನ್ನು ಒಗ್ಗೂಡಿಸಿ, ಒಂದೇ ಆಡಳಿತದ, ಸರಕಾರದ ಅಧೀನದಲ್ಲಿ ತರುವ ಪ್ರಯತ್ನವು 1956ರಲ್ಲಿ ಕೈಗೂಡಿತು. ಇದರಿಂದಾಗಿ 1956ರಲ್ಲಿ ಕರ್ನಾಟಕ ರಾಜ್ಯವು 'ಮೈಸೂರು ರಾಜ್ಯ' ಎಂಬ ಹೆಸರಿನೊಂದಿಗೆ ಅಸ್ತಿತ್ವಕ್ಕೆ ಬಂದಿತು. ಕ್ರಿ.ಶ. 1956ರಿಂದ (ನವೆಂಬರ್–1) ಕ್ರಿ.ಶ. 2000ದ ವರೆಗಿನ 20ನೇ ಶತಮಾನದ 44 ವರ್ಷಗಳ ಸಾಹಿತ್ಯದ ಧೋರಣೆ–ಸ್ವರೂಪ ಈ ಹಿಂದಿನ ಏಕೀಕರಣ ಪೂರ್ವದ ಧೋರಣೆ ಮತ್ತು ಸ್ವರೂಪಕ್ಕಿಂತ ಭಿನ್ನವಾಗಿರುತ್ತದೆ ಎಂಬುದನ್ನು ಗುರುತಿಸಬಹುದಾಗಿದೆ. 20ನೇ ಶತಮಾನದ (ನೂರು ವರ್ಷದ) ಪತ್ರಿಕಾ ಚಟುವಟಿಕೆಗೆ (ಸಾಹಿತ್ಯ ವಿಚಾರವನ್ನು ಲಕ್ಷಿಸಿ)

ಸಂಬಂಧಿಸಿದ ಅಧ್ಯಯನದ ಸಂದರ್ಭದಲ್ಲಿ 1957 ರಿಂದ ಕ್ರಿ.ಶ. 2000ದ ವರೆಗಿನ ಕಾಲಾವಧಿಯನ್ನು ಎರಡನೇ ಕಾಲಘಟ್ಟವೆಂದು ವಿಭಜಿಸಿಕೊಳ್ಳಲಾಗಿದೆ. ಈ ವಿಭಜನೆಗೆ ಈ ಮೇಲೆ ಹೇಳಿದಂತೆ ಏಕೀಕರಣೋತ್ತರ ಕಾಲದ ಪತ್ರಿಕೋದ್ಯಮ ಸಾಹಿತ್ಯದ ಸ್ವರೂಪ ಮತ್ತು ಧೋರಣೆಯೇ ಕಾರಣವಾಗಿರುತ್ತದೆ.

ಕನ್ನಡ ಪತ್ರಿಕೋದ್ಯಮದ ಚಟುವಟಿಕೆಗಳು ದಶಕದಿಂದ ದಶಕಕ್ಕೆ ಕಾಲಧರ್ಮಕ್ಕನುಸರಿಸಿ, ಬದಲಾಗುತ್ತಿದ್ದುದನ್ನು ಓದುಗರು ಗಮನಿಸಿದ್ದಾರೆ. ಕಾಲದ ಮೌಲ್ಯಗಳು ಬದಲಾದಂತೆ ಪತ್ರಿಕಾಸಂಪಾದಕರು ಅದನ್ನು ತಮ್ಮ ಪತ್ರಿಕೆಯಲ್ಲಿ ಒಡಮೂಡಿಸುವುದು ಪತ್ರಿಕಾಧರ್ಮವೇ ಆಗಿದೆ. ಏಕೀಕರಣಾ ನಂತರದಲ್ಲಿ ಪತ್ರಿಕೆಯು ಒಂದು ಉದ್ಯಮವೆಂಬ ರೀತಿಯಲ್ಲಿ ತನ್ನ ಸ್ವರೂಪವನ್ನು ಬದಲಾಯಿಸಿಕೊಂಡಿತು. ಪತ್ರಿಕಾ ಚಟುವಟಿಕೆಯ ವ್ಯೂಹವು ಸಂಕೀರ್ಣವೂ ಜಟಿಲವೂ ಆಗಿ, ಪತ್ರಿಕೆಯ ಸ್ವರೂಪವು ಸಂಪೂರ್ಣವಾಗಿ ಮಾರ್ಪಾಟಾಯಿತು. ಹೀಗಾಗಿ ಈ ವಿಭಾಗಕ್ರಮ ಸಮರ್ಥನೀಯ ಎಂಬ ಅಭಿಪ್ರಾಯವನ್ನು ಕನ್ನಡ ವಾರಪತ್ರಿಕೆಯನ್ನು ಕುರಿತು ನಡೆಸಿದ ಅಧ್ಯಯನದಲ್ಲಿ ಎಚ್.ವಿ. ನಾಗರಾಜ್ ಹೀಗೆ ಪ್ರಸ್ತಾಪಿಸಿದ್ದಾರೆ. 'ಸ್ವಾತಂತ್ರ್ಯಕ್ಕೂ ಹಿಂದೆ ಮತ್ತು ಸ್ವಾತಂತ್ರ್ಯಾನಂತರ ತರುಣದಲ್ಲಿ ಕರ್ನಾಟಕವೂ ಸೇರಿ, ಭಾರತೀಯ ಪತ್ರಿಕೋದ್ಯಮ, ದೇಶನಿಷ್ಠೆ, ಜನಾಂಗಪ್ರೇಮ, ಸಮಾಜೋನ್ನತಿಯ ಧ್ಯೇಯಾದರ್ಶಗಳಿಂದ ಯಾವುದೇ ವ್ಯಾಪಾರೀ ಮನೋಭಾವವಿಲ್ಲದೆ-ನೈತಿಕ ನಿಷ್ಠೆಯಿಂದ ಮಾತ್ರವೇ ಪ್ರೇರಿತವಾಗಿತ್ತು. ಇವೆಲ್ಲ ಭಾರೀ ಬಂಡವಾಳ ಹೂಡದ ಸಣ್ಣಪುಟ್ಟ ಮಧ್ಯಮ ಪ್ರಮಾಣದ ಪತ್ರಿಕೆಗಳು'(ಸಂ: ನಾಗರಾಜ ರಾವ್ ಎಚ್., 1998, ಪು-21) ಎಂದು ಕಂಡುಕೊಂಡಿದ್ದಾರೆ.

ಏಕೀಕರಣೋತ್ತರ ಕಾಲದಲ್ಲಿ (1957 ರಿಂದ) ಪತ್ರಿಕೆಯ ಪ್ರಕಟನೆ ಮತ್ತು ಪ್ರಸರಣವು ಒಂದು ಉದ್ಯಮರೂಪವನ್ನು ತಳೆಯಿತು. ಇದರ ಪರಿಣಾಮವಾಗಿ "ಪತ್ರಿಕೆಗಳ ಮಾಲೀಕರೇ ಬೇರೆ, ಪತ್ರಿಕೋದ್ಯಮಿಗಳೇ ಬೇರೆ ಎಂಬಷ್ಟು ಪ್ರಕಟನೆ ಮತ್ತು ಪ್ರಸರಣವು ಒಂದು ಉದ್ಯಮವಾಗಿ ಪರಿವರ್ತನೆಗೊಂಡಿದೆ" ಎಂದು ನಾಗರಾಜ್ ಅವರು ಗುರುತಿಸಿದ್ದಾರೆ. ಈ ಕಾಲಾವಧಿಯಲ್ಲಿ ಪತ್ರಿಕಾಪ್ರಕಟನೆ ಮತ್ತು ಪ್ರಸರಣವು ಲಾಭ ನಷ್ಟದ ಲೆಕ್ಕಾಚಾರದ ಉದ್ಯಮವಾದ ಕಾರಣ ಕಡಿಮೆ ಅವಧಿಯಲ್ಲಿ ಹೆಚ್ಚು ಪ್ರತಿಗಳನ್ನು ಉತ್ಪಾದಿಸುವುದು, ವಿಭಿನ್ನ ಮನೋಧರ್ಮದ ಓದುಗರಿಗೆ ಪತ್ರಿಕೆಯನ್ನು ರುಚಿಸುವಂತೆ ಮಾಡುವುದು ಅನಿವಾರ್ಯವಾಗಿದೆ. ಹೀಗಾಗಿ "ಇಂದು ಪತ್ರಿಕೋದ್ಯಮ ಒಂದು ಪ್ರಬಲ ಕೈಗಾರಿಕೆಯಂತೆ ನೂರು ಸಹಸ್ರ ಸಂಖ್ಯೆಗಳಿಗೆ ಮಿತಿಯಾಗಿದ್ದ ಕನ್ನಡ ವಾರಪತ್ರಿಕೆಗಳ ಪ್ರಸಾರ ಸಂಖ್ಯೆ ಇಂದು ಲಕ್ಷ ಲಕ್ಷ ಸಂಖ್ಯೆಯನ್ನು ಮೀರುತ್ತದೆ.... ಸಣ್ಣ ಪುಟ್ಟ ಮುದ್ರಣಯಂತ್ರಗಳು ಅಲ್ಪಗಾತ್ರದ ಸಿಬ್ಬಂದಿ, ಸಾದಿಲ್ವಾರುಗಳೂ ಇದಕ್ಕೆ ಸಾಲವು. ಗಂಟೆಗೆ ಸಹಸ್ರಾರು ಸಂಖ್ಯೆಯಲ್ಲಿ ಅಚ್ಚುಮಾಡಿ ಎಸೆಯುವ ಭಾರೀ ಪ್ರಮಾಣದ, ಭಾರೀ ಬೆಲೆಯ ಆಫ್‌ಸೆಟ್ ರೋಟರ್‌ಗಳೂ ಪ್ರತೀ ವಿಷಯದಲ್ಲೂ ಹೆಚ್ಚು ಪರಿಶ್ರಮ ಪಡೆದ ತಾಂತ್ರಿಕ ಸಿಬ್ಬಂದಿವರ್ಗವೂ ಈಗ ಈ ಕಾರ್ಯಕ್ಕೆ ಅಗತ್ಯ"(ಪೂರ್ವೋಕ್ತ, ಪು-11) ಎನ್ನುವುದನ್ನು ನಾಗರಾಜ ಅವರು ತಮ್ಮ ಕೃತಿಯಲ್ಲಿ ವಿವರಿಸಿದ್ದಾರೆ. ಇಂಥ ಯಶಸ್ವೀ ಉದ್ಯಮಕ್ಕೆ ಬೆಂಗಳೂರಿನ ಸುಧಾ ಮತ್ತು ಮಣಿಪಾಲದ ತರಂಗವನ್ನು ಉದಾಹರಣೆಯಾಗಿ ನೀಡಿದ್ದಾರೆ.

ಏಕೀಕರಣೋತ್ತರ ಕಾಲಾವಧಿಯ 44 ವರ್ಷಗಳ ಪತ್ರಿಕೋದ್ಯಮದೆಡೆಯಲ್ಲಿ ತ್ವರಿತಗತಿಯ ಮಾರ್ಪಾಟುಗಳು ಕಂಡುಬಂದ ಕಾರಣ ಈ ಕಾಲಘಟ್ಟವನ್ನು ಅಧ್ಯಯನದ ಪರಿಪೂರ್ಣತೆಗಾಗಿ ಎರಡು ಹಂತವಾಗಿ ವಿಭಾಗಿಸಿಕೊಳ್ಳಬೇಕಾಗಿದೆ. ಈ ವಿಭಾಗಕ್ಕೆ ಮಾನದಂಡದ ವರ್ಷವಾಗಿ 1985ನ್ನು ಇರಿಸಿಕೊಳ್ಳಲಾಗಿದೆ. ಉಡುಪಿ ಜಿಲ್ಲೆಯ ಪತ್ರಿಕೋದ್ಯಮ (ಸಾಹಿತ್ಯದ) ಚಟುವಟಿಕೆಯ ಹಿನ್ನೆಲೆಯಲ್ಲಿ ಈ ಕಾಲಘಟ್ಟವನ್ನು ಇರಿಸಿಕೊಳ್ಳಲಾಗಿದೆ. ಕಾರಣ 1985ರ ಅನಂತರದಲ್ಲಿ ಪುನಃ ಏಕವ್ಯಕ್ತಿ ಸಂಪಾದಕತ್ವ ಹಾಗೂ ಮಾಲಕತ್ವದಲ್ಲಿ ಪ್ರಾದೇಶಿಕ ಮಟ್ಟದಲ್ಲಿ ಸಾಕಷ್ಟು ಪತ್ರಿಕೆಗಳು ಹುಟ್ಟಿಕೊಂಡು ತಾತ್ಕಾಲಿಕವಾಗಿ ವಿಜೃಂಭಿಸತೊಡಗಿದುವು. 1985ರ ಅನಂತರದಲ್ಲಿ "ಪತ್ರಿಕೆಗಳ ಭೂಮಿಕೆ ಸಹಜವಾಗಿಯೇ ಬದಲಾಯಿತು. ಪ್ರಾದೇಶಿಕ ವಿಷಯಗಳಿಗೆ ವಿಶೇಷ ಮಹತ್ವ ಬಂತು. ಪತ್ರಿಕೆಗಳು ಸಾಮಾಜಿಕ ವಿಚಾರವೇದಿಕೆಯಾಯಿತು. ರಾಜಕೀಯ ವಿದ್ಯಮಾನ ವಿಶ್ಲೇಷಕವಾದಂತೆ ನಾಡಿನ ಸಾಹಿತ್ಯಶಕ್ತಿಗೂ ಚಾಲಕ ಶಕ್ತಿಯಾದವು."(ಸಂ: ನಾವಡ ಎ.ವಿ.,(ಪ್ರೊ), 2000, ಪು-1) ಈ ಕಾರಣದಿಂದಾಗಿ 1985 ರಿಂದ 2000ದ ವರೆಗೆ ಅಸ್ತಿತ್ವದಲ್ಲಿದ್ದ ಪತ್ರಿಕೆಗಳನ್ನು 20ನೇ ಶತಮಾನದ ಮೂರನೇ ಕಾಲಘಟ್ಟದ ಪತ್ರಿಕೆಗಳೆಂದು ವಿಶ್ಲೇಷಿಸಲಾಗಿದೆ.

ಆ) **ಏಕೀರಣೋತ್ತರ ಕಾಲಘಟ್ಟದ ಪ್ರಥಮ ಹಂತದ ಪ್ರಮುಖ ಪತ್ರಿಕೆಗಳು: (1956-85):**

1900 ರಿಂದ 1956ರ ಕಾಲಾವಧಿಯಲ್ಲಿ ಉಡುಪಿ ಜಿಲ್ಲಾ ವ್ಯಾಪ್ತಿಯೊಳಗೆ ಅಸ್ತಿತ್ವಕ್ಕೆ ಬಂದ (ಏಕೀಕರಣಪೂರ್ವ ಕಾಲಘಟ್ಟದ) 49 ಪತ್ರಿಕೆಗಳಲ್ಲಿ ಕೇವಲ 8 ಪತ್ರಿಕೆಗಳು ಮಾತ್ರವೇ ಏಕೀಕರಣೋತ್ತರ ಕಾಲಘಟ್ಟದಲ್ಲಿ ತಮ್ಮ ಅಸ್ತಿತ್ವವನ್ನು ಉಳಿಸಿಕೊಳ್ಳುವಲ್ಲಿ ಯಶಸ್ವಿಯಾದವು. ಈ ಪತ್ರಿಕೆಗಳ ಪ್ರಕಟಣೆ ಮತ್ತು ಪ್ರಸರಣದ ಸಹಿತ ಏಕೀಕರಣೋತ್ತರ ಕಾಲಾವಧಿಯ ಪ್ರಥಮ ಹಂತದಲ್ಲಿ ಮತ್ತೆ ವಿವಿಧ ಸ್ವರೂಪದ 26 ಪತ್ರಿಕೆಗಳು ಜಿಲ್ಲೆಯಲ್ಲಿ (ಉಡುಪಿ) ಪ್ರಕಟಗೊಂಡವು. ಈ ಪತ್ರಿಕೆಗಳಲ್ಲಿ ಅಂತರ್ಗತವಾದ ಸಾಹಿತ್ಯದ ಸತ್ವ ಮತ್ತು ಗುಣವನ್ನು ಪರಿಗಣಿಸಿ ಈ ಕೆಳಗೆ ಉಲ್ಲೇಖಿಸಲಾದ ಪತ್ರಿಕೆಗಳನ್ನು ಅತಿಮುಖ್ಯ ಪತ್ರಿಕೆಗಳೆಂದು ಪರಿಗಣಿಸಲಾಗಿದೆ. (ಇವುಗಳು ಯಾವುದೇ ನಿರ್ದಿಷ್ಟ ವಿಷಯ ವ್ಯಾಪ್ತಿಗೆ/ತಾತ್ವಿಕತೆಗೆ ಒಳಪಡದ ಕಾರಣ ಪ್ರತಿಯೊಂದು ಪತ್ರಿಕೆಯನ್ನು ಪ್ರತ್ಯೇಕವಾಗಿ ವಿಶ್ಲೇಷಿಸಲಾಗಿದೆ). ಅವುಗಳನ್ನು ಈ ಕೆಳಗಿನಂತೆ ವಿಶ್ಲೇಷಿಸಲಾಗಿದೆ.

1) **ಭವ್ಯವಾಣಿ:** (1953-85) ಸ್ವಾತಂತ್ರ್ಯೋತ್ತರ ಕಾಲದಲ್ಲಿ ಅಂದರೆ 1957ನೇ ಇಸವಿಯಲ್ಲಿ ಉಡುಪಿಯ ಕೆ. ಲಕ್ಷ್ಮೀನಾರಾಯಣ ಭಟ್ಟರ ಸಂಪಾದಕತ್ವ ಮತ್ತು ಮಾಲಕತ್ವದಲ್ಲಿ ಮಾಸ ಪತ್ರಿಕೆಯಾಗಿ ಪ್ರಕಟಗೊಂಡಿತು. ಅವಿಭಜಿತ ದ.ಕ. ಪರಿಸರದ ಹಾಗೂ ವಿರಳವಾಗಿ ಉತ್ತರ ಕರ್ನಾಟಕದ ಖ್ಯಾತ ಲೇಖಕರ ಕಥೆ, ಕವನ, ಪ್ರಬಂಧಗಳು ಪತ್ರಿಕೆಯಲ್ಲಿ ಪ್ರಕಟಗೊಳ್ಳುತ್ತಿದ್ದು, ನೆರೆ ರಾಜ್ಯದ ಕನ್ನಡಾಭಿಮಾನಿಗಳೂ ಪತ್ರಿಕೆಗೆ ಚಂದಾದಾರರಾಗಿದ್ದರು. ಉದಯೋನ್ಮುಖ ಲೇಖಕರ ಬರಹಗಳಿಗೂ ಅವಕಾಶ ನೀಡಿದ್ದ ಪತ್ರಿಕೆ ಎನ್ನುವುದು ಈ ಪತ್ರಿಕೆಯ ಹೆಗ್ಗಳಿಕೆಯಾಗಿದೆ. ಸತ್ವಯುತವಾದ ಸದಭಿರುಚಿಯ ವೈಚಾರಿಕ ಲೇಖನಗಳೇ ಭವ್ಯವಾಣಿಯಿಂದ ಪ್ರಕಟಗೊಳ್ಳುತ್ತಿದ್ದ ಕಾರಣ ಪ್ರಸರಣಸಂಖ್ಯೆಯು ಅಧಿಕವಿರುತ್ತಿತ್ತು ಎಂದು ಸ್ಥಾಪಕ ಸಂಪಾದಕರ ಸುಪುತ್ರರಾದ ವಿಪ್ರೇಂದ್ರ ಭಟ್ ಅವರು ತಮ್ಮ ಅಭಿಪ್ರಾಯವನ್ನು ಸಂದರ್ಶನದ ಸಂದರ್ಭದಲ್ಲಿ ಹೇಳಿಕೊಂಡಿದ್ದಾರೆ. 1980ರಲ್ಲಿ ವಯೋವೃದ್ಧರಾದ ಸ್ಥಾಪಕಸಂಪಾದಕರು ನಿಧನರಾದ ಪ್ರಯುಕ್ತ 1983ರ ತನಕ ಶ್ರೀಮತಿ ಕೆ. ಕಮಲಾ ಭಟ್ ಅವರು ತಮ್ಮ ಇಬ್ಬರು ಮಕ್ಕಳ ಸಹಕಾರದಿಂದ ಪತ್ರಿಕೆಯನ್ನು ನಡೆಸಿಕೊಂಡು ಬಂದರು. ಹೊಸ ಕಾಲದ ಪೈಪೋಟಿಯನ್ನು ಎದುರಿಸಲು

ಪೂರ್ಣಕಾಲದ ಸಂಪಾದಕರಾಗಿ ಯಾರೊಬ್ಬರೂ ಆಸಕ್ತಿಯಿಂದ ಪತ್ರಿಕೆಯಲ್ಲಿ ದುಡಿಯುವುದಕ್ಕೆ ಮುಂದೆ ಬಾರದ ಕಾರಣ ಪತ್ರಿಕೆ ನಿಂತು ಹೋಯಿತು.

**ಸಾಹಿತ್ಯಕ ಕೊಡುಗೆಗಳು:** ಬನ್ನಂಜೆ ಗೋವಿಂದಾಚಾರ್ಯರು, ಉದ್ಯಾವರ ಮಾಧವ ಆಚಾರ್ಯರು, ಪ್ರೊ. ಎಂ. ರಾಜಗೋಪಾಲಾಚಾರ್ಯರು, ಬಳ್ಕೂರು ಸುಬ್ರಾಯ ಅಡಿಗರು. ಪ್ರೊ. ಪಿ. ಗುರುರಾಜ ಭಟ್ಟರು, ಬಿ.ವಿ. ಕೆದಿಲಾಯರು ಆಗಾಗ ತಮ್ಮ ಲೇಖನಗಳನ್ನು ಭವ್ಯವಾಣಿಗೆ ನೀಡುತ್ತಿದ್ದುದರಿಂದ ಭವ್ಯವಾಣಿಗೆ ಅದರದೇ ಆದ ಶೈಲಿ ಸಿದ್ಧಿಸಿದ್ದು, ಓದುಗರು ಮುಕ್ತ ಮನಸ್ಸಿನಿಂದ ಪತ್ರಿಕೆಯನ್ನು ಆಸ್ವಾದಿಸಿದ್ದರು. ಆರೋಗ್ಯಚಿಂತನೆಯ ವೈದ್ಯಕೀಯ ಬರಹಗಳು ಪತ್ರಿಕೆಯಲ್ಲಿ ನಿರಂತರವಾಗಿ ಪ್ರಕಟಗೊಳ್ಳುತ್ತಿದ್ದುವು ಎನ್ನುವುದು ಪತ್ರಿಕೆಯ ಇನ್ನೊಂದು ವೈಶಿಷ್ಟ್ಯ. ಗಂಭೀರ ಬರಹದ ಓದಿನಿಂದ ಮನಸ್ಸಿನ ಒತ್ತಡವನ್ನು ಕಳೆದುಕೊಳ್ಳಲು 'ನಗೆನುಡಿ' ಎಂಬ ಶೀರ್ಷಿಕೆಯಲ್ಲಿ ಜೀವನದಲ್ಲಿ ಎದುರಾಗುವ ಕೆಲವು ರಸಸನ್ನಿವೇಶಗಳನ್ನು ಸಂಕ್ಷಿಪ್ತವಾಗಿ ನಿರೂಪಿಸುವ ತುಣುಕುಗಳು ಪತ್ರಿಕೆಯಲ್ಲಿರುತ್ತಿದ್ದವು. ಕೇವಲ 50 ಪುಟದಲ್ಲಿ ಓದುಗನೊಬ್ಬನ ಮನಸ್ಸಿಗೆ ಅವಶ್ಯಕವಾಗಿ ತಿಳಿಸಬೇಕಾದ ಅಗತ್ಯ ವಿಚಾರಗಳನ್ನು ಸರಳಶೈಲಿಯಲ್ಲಿ ನಿರೂಪಿಸಿಕೊಂಡು ಬರುತ್ತಿದ್ದ ಪತ್ರಿಕೆಯಾಗಿತ್ತು ಎಂದಷ್ಟೇ ಉಲ್ಲೇಖಿಸಬಹುದಾಗಿದೆ.

**ವೀರಭೂಮಿ: (1963–70)** ಸುಮಾರು 5 ವರ್ಷಗಳ ಪರ್ಯಂತ ಈ ಮಾಸಪತ್ರಿಕೆಯನ್ನು ಸಾಹಿತಿ ಕವಿಗಳಾದ ಸಾಂತ್ಯಾರು ವೆಂಕಟರಾಜ ಇವರು ನಿರ್ವಹಿಸಿಕೊಂಡು ಬಂದಿದ್ದರು. ಏಕೀಕರಣೋತ್ತರ ಕಾಲಘಟ್ಟದಲ್ಲಿ ಧರ್ಮ–ರಾಜ್ಯರಾಜಕಾರಣ ಹಾಗೂ ಸಮಾಜಿಕ ಸ್ಥಿತಿಗತಿಗಳು ಆದರ್ಶಪಥದಿಂದ ಜಾರುತ್ತಿದ್ದಂತೆ ತೋರಿದಾಗ ಸಾಂತ್ಯಾರು ವೆಂಕಟರಾಜರು ತಮ್ಮದೇ ಆದ ಪತ್ರಿಕೆಯೊಂದರ ಮೂಲಕ ಸಮಾಜವನ್ನು ತಿದ್ದುವ ಕನಸನ್ನು ಕಂಡು ಪತ್ರಿಕೆಯೊಂದನ್ನು ಪ್ರಕಟಿಸಿದರು. ಅವರ ಈ ಉದ್ದೇಶವು ವೀರಭೂಮಿ ಪತ್ರಿಕೆಯ ಮೊದಲ ಸಂಪಾದಕೀಯದಲ್ಲಿ ಹೀಗೆ ಅಭಿವ್ಯಕ್ತವಾಗಿರುವುದನ್ನು ಕಾಣುತ್ತೇವೆ: "ಜಗಳಕ್ಕಾಗಿಯೇ ತೊಡಗಿದ ಜಾತಿ, ದೂಷಣೆಗಳಿಗಾಗಿಯೇ ಬೆಳೆದುಬಂದ ಧರ್ಮ, ಹೊಗಳಿಕೆಗಾಗಿಯೇ ಹುಟ್ಟಿದ ರಾಜಕಾರಣ ಈ ಎಲ್ಲದರ ಮಧ್ಯದಲ್ಲಿ ಏನೂ ತಿಳಿಯದೇ ನಿಂತಿರುವ ಬೊಕ್ಕತಲೆಯ ಬೋರೇಗೌಡ ಬದುಕಲು ಸಾಧ್ಯವೇ? ಸತ್ಯಸಂಧನಾದ ಧರ್ಮರಾಯ ಸತ್ಯವನ್ನೇನೋ ಹೇಳಿದ; ಆದರೆ ಅವನ ಸತ್ಯಕ್ಕೂ ಸುಳ್ಳಿಗೂ ಏನು ವ್ಯತ್ಯಾಸವಿದ್ದಿತ್ತು, ಇಂದಿನ ಪರಿಸ್ಥಿತಿಯೂ ಅದೇ ರೀತಿ."(ಸಂ: ಜನಾರ್ದನ ಭಟ್ ಬಿ., 2006, ಪು–278) ಎಂದು ಪತ್ರಿಕಾಪ್ರಕಟನೆಯ ತಮ್ಮ ಉದ್ದೇಶವನ್ನು ನೇರವಾಗಿ ಹೇಳಿಕೊಂಡಿದ್ದಾರೆ.

**ಸಾಹಿತ್ಯಕ ಕೊಡುಗೆಗಳು:** ಸ್ವತಃ ಕವಿಯಾಗಿದ್ದ ಸಾಂತ್ಯಾರು ವೆಂಕಟರಾಜರು ತಮ್ಮ ಪತ್ರಿಕೆಯಲ್ಲಿ ಸಾಹಿತ್ಯಕ ಬರಹಗಳಿಗೆ ಪ್ರಥಮ ಪ್ರಾಶಸ್ತ್ಯವನ್ನು ನೀಡಿದರು ಎಂದು ಪ್ರತ್ಯೇಕವಾಗಿ ಹೇಳಬೇಕಾಗಿಲ್ಲ. 'ಕೇವಲ ಕುಚೋದ್ಯ' ಎಂಬ ಶೀರ್ಷಿಕೆಯಲ್ಲಿ ಸಮಕಾಲೀನ ರಾಜಕೀಯ ವಿಡಂಬನೆಯನ್ನು, 'ಮಧುರಮಂಥನ' ಎಂಬ ಶೀರ್ಷಿಕೆಯಡಿಯಲ್ಲಿ ಪುಸ್ತಕಸಮೀಕ್ಷೆಯನ್ನು, 'ವಿಚಾರವೇದಿಕೆ' ಎಂಬ ಶೀರ್ಷಿಕೆಯಡಿಯಲ್ಲಿ ಚಿಂತನಶೀಲ ಲೇಖಕರ ಲಘು ಬರಹಗಳಿಗೂ ಅವಕಾಶ ನೀಡಿದರು. 60ರ ದಶಕದಲ್ಲಿ ಅಗ್ರಗಣ್ಯ ಲೇಖಕ–ಕವಿಗಳೆಂದು ಕರ್ನಾಟಕದಾದ್ಯಂತ ಗುರುತಿಕೊಂಡ ಬೇಂದ್ರೆ, ಡಿ.ವಿ.ಜಿ., ಚೆನ್ನವೀರ ಕಣವಿ, ಬಳ್ಕೂರು ಸುಬ್ರಾಯ ಅಡಿಗ, ಸು.ರಂ. ಎಕ್ಕುಂಡಿ, ಶಂಬಾ ಜೋಷಿ, ಸಿಂಪಿ ಲಿಂಗಣ್ಣ, ಮಿರ್ಜಿ ಅಣ್ಣಾರಾಯ, ಸುಬ್ರಾಯ ಚೊಕ್ಕಾಡಿ, ಶಿವರಾಮ ಕಾರಂತ, ಎಸ್. ದಿವಾಕರ್ ಇವರು ವೀರಭೂಮಿಗೆ ತಮ್ಮ ಲೇಖನ/ಕಾವ್ಯ ಕೃತಿಗಳನ್ನು ಪ್ರಕಟನೆಗೆ ನೀಡಿ, ಸಂಚಿಕೆಯ ಸಾಹಿತ್ಯಮೌಲ್ಯವನ್ನು

ಹೆಚ್ಚಿಸುವಂತೆ ನೋಡಿಕೊಂಡರು. 'ಸ್ವಕೀಯ' ಎಂಬ ಶೀರ್ಷಿಕೆಯಲ್ಲಿ ಬರೆಯುತ್ತಿದ್ದ ಸಂಪಾದಕೀಯ ಬರಹಗಳು ಆ ಕಾಲದ ಭಾರತದ ರಾಜಕೀಯವನ್ನು ಅಭಿವ್ಯಂಜಿಸುವ ಅಮೂಲ್ಯ ಮಾಹಿತಿ ಕೋಶವಾಗಿದೆ. "ನಮ್ಮ ರಾಜ್ಯ, ದೇಶ ಮತ್ತು ಜಗತ್ತಿನ ಆಗು ಹೋಗುಗಳನ್ನು ಸೂಕ್ಷ್ಮವಾಗಿ ಗಮನಿಸಿದ ಮತ್ತು ವಿಶ್ಲೇಷಿಸಿದ ಮಹತ್ವದ ಬರಹಗಳಾಗಿವೆ. ಮೇಲಾಗಿ ಅವುಗಳು ನಿಷ್ಪಕ್ಷಪಾತವಾಗಿದೆ. ಆದುದರಿಂದ ಅವುಗಳು ಆ ಕಾಲದ ಅಮೂಲ್ಯ ಸಮಕಾಲೀನ–ಇತಿಹಾಸ ಬರಹಗಳಾಗಿವೆ."(ಪೂರ್ವೋಕ್ತ, ಪು–294)

**ಕನ್ನಡ ಕೇಸರಿ, ಮಾಸಪತ್ರಿಕೆ :** (1964) ಕೇವಲ ಮೂರು ಸಂಚಿಕೆ ಮಾತ್ರ.

ಕುಂದಾಪುರ ತಾಲೂಕಿನ ಬಸ್ರೂರಿನ ಒತ್ತಿನ ಗ್ರಾಮವಾದ ಸಬ್ಲಾಡಿಯಲ್ಲಿ ವಾಸ್ತವ್ಯವಿದ್ದ ರಘುರಾಮ ಹೆಗ್ಡೆಯವರು 'ಕನ್ನಡ ಕೇಸರಿ' ಎಂಬ ಹೆಸರಿನ ಹೊಸ ಮಾಸಪತ್ರಿಕೆಯೊಂದನ್ನು 1964ರ ಸುಮಾರಿಗೆ ಪ್ರಕಟಿಸಿದರು. ಜಿ.ಎಸ್. ಆಚಾರ್, ಬಸ್ರೂರಿನ ಸಂಜೀವ ಪ್ರಭುಗಳ ಅನಂತರ ಕನ್ನಡ ಪತ್ರಿಕಾಪ್ರಕಟನೆಯಲ್ಲಿ ರಘುರಾಮ ಹೆಗ್ಡೆಯವರದ್ದು ಮೂರನೇ ಪ್ರಯತ್ನವಾಗಿದೆ. ಬಸ್ರೂರು, ಕುಂದಾಪುರ, ಗಂಗೊಳ್ಳಿ, ಆನಗಳ್ಳಿ ಪರಿಸರದಲ್ಲಿ ಪ್ರಥಮ ಸಾಲಿನ ಪತ್ರಿಕೆಗಳಲ್ಲಿ ಸ್ಥಳಾವಕಾಶ ಪಡೆಯದ ಅನೇಕ ಬರಹಗಾರರ ಕಥೆ, ಒಗಟು, ಕವನಗಳಿಗೆ ಈ ಪತ್ರಿಕೆಯಲ್ಲಿ ಸ್ಥಳ ನೀಡಿದರು. ಬ್ರಹ್ಮಾವರದ 'ದಿನೇಶ್ ಪ್ರಿಂಟಿಂಗ್ ಪ್ರೆಸ್'ನಲ್ಲಿ ಪತ್ರಿಕೆ ಮುದ್ರಣವಾಗುತ್ತಿತ್ತು ಎಂದು ಅವರ ಕುಟುಂಬಿಕರ ಹೇಳಿಕೆಯಿಂದ ತಿಳಿದು ಬರುತ್ತದೆ. ಕನ್ನಡ ಭಾಷೆ– ಸಾಹಿತ್ಯದ ಅಭಿಮಾನಿಯಾಗಿದ್ದ ರಘುರಾಮ ಹೆಗ್ಡೆಯವರು ಯಾವುದೇ ಪೂರ್ವ ತಯಾರಿ ಇಲ್ಲದೇ ಪತ್ರಿಕೋದ್ಯಮವನ್ನು ಆರಂಭಿಸಿದ ಕಾರಣ ಕೇವಲ ಮೂರು ಸಂಚಿಕೆಯನ್ನಷ್ಟೇ ಹೊರಡಿಸಿ, ತಮ್ಮ ಪತ್ರಿಕೋದ್ಯಮಕ್ಕೆ ಪೂರ್ಣವಿರಾಮವನ್ನು ಹಾಕಿದರು ಎನ್ನುವುದು ಕೋಡಿ ಶಿವಾನಂದ ಕಾರಂತರ ಹೇಳಿಕೆಯಾಗಿದೆ. ಹೆಗ್ಡೆಯವರು ತಮ್ಮದೇ ಇತಿಮಿತಿಯಲ್ಲಿ ಸ್ಥಳೀಯ ಬರಹಗಾರರಿಗೆ ಪತ್ರಿಕೆಯ ಮೂಲಕ ಸಾಹಿತ್ಯ ವೇದಿಕೆ ನಿರ್ಮಿಸಿದರೆನ್ನುವುದು ದಾಖಲಿಸಬೇಕಾದ ಸಂಗತಿ.

**ಶಿಕ್ಷಕ ವಾಣಿ: (1968–1977):**

ಬಂಟ್ವಾಳ ಮತ್ತು ಕಾಪುವಿನಿಂದ ಏಕಕಾಲದಲ್ಲಿ ಪ್ರಕಟವಾಗುತ್ತಿದ್ದ ಈ ಪತ್ರಿಕೆಯ ಸಂಪಾದಕರು ಕೆ. ಭೋಜರಾಜ ಶೆಟ್ಟಿ ಹಾಗೂ ವಗ್ಗ ಗೋಪಾಲಕೃಷ್ಣ ಪ್ರಭು ಎಂಬುದಾಗಿ 'ಕನ್ನಡ ಪತ್ರಿಕಾಸೂಚಿ' ಎಂಬ ಗ್ರಂಥದಿಂದ ತಿಳಿದುಬರುತ್ತದೆ. (ಸಂ. ಶ್ರೀನಿವಾಸ ಹಾವನೂರ ಡಾ. 2004, ಪು–123) ಒಟ್ಟು ಒಂಬತ್ತು ವರ್ಷ ದಕ್ಷಿಣ ಕನ್ನಡ ಜಿಲ್ಲಾ ಪ್ರಾಥಮಿಕ ಶಾಲಾ ಶಿಕ್ಷಕರ ಸಂಘದ ವತಿಯಿಂದ ಪ್ರಕಟಗೊಳ್ಳುತ್ತಿದ್ದ ಈ ಪತ್ರಿಕೆಯಲ್ಲಿ ಶಿಕ್ಷಕರ ಸಮಾಲೋಚನೆ ಎಂಬ ಶೀರ್ಷಿಕೆಯಿದ್ದು, ಆಗಿನ ಪ್ರಾಥಮಿಕ ಶಿಕ್ಷಣದಲ್ಲಿ ಪಠ್ಯವಾಗಿ ಸೇರಿಕೊಂಡಿದ್ದ ಸ್ಥಳೀಯ ಕವಿಗಳ ಪದ್ಯಗಳ ಕುರಿತಾದ ಚರ್ಚೆಗಳು (ವಿಮರ್ಶಾ ಬರಹಗಳು) ಅಧ್ಯಾಪಕರ ಬೋಧನಾಸಮಸ್ಯೆಗಳ ಕುರಿತಾದ ವ್ಯಕ್ತಿಗತವಾದ ಅಭಿಪ್ರಾಯಗಳು ಈ ಪತ್ರಿಕೆಯ ಪ್ರಧಾನವಿಷಯವಾಗಿತ್ತು ಎನ್ನುವುದು ಹಿಂದಿನ ತಲೆಮಾರಿನ ಶಿಕ್ಷಕರಲ್ಲೋರ್ವರಾದ ಅಂಬಾತನಯ ಮುದ್ರಾಡಿಯವರು ಮೌಖಿಕ ಸಂದರ್ಶನದ ಸಂದರ್ಭದಲ್ಲಿ ಸ್ಮರಿಸಿಕೊಂಡಿರುತ್ತಾರೆ.

**ಬಾಲಚಂದ್ರ:** (1929–32) ಶಿಕ್ಷಣವಿಷಯಕ್ಕೇ ಮೀಸಲಾಗಿದ್ದ ಈ ಪಕ್ಷ/ಮಾಸಪತ್ರಿಕೆಯು ಮಂಗಳೂರು ಮತ್ತು ಉಡುಪಿಯಿಂದ ಪ್ರಕಟಗೊಳ್ಳುತ್ತಿದ್ದುದಾಗಿ ತಿಳಿದುಬರುತ್ತದೆ. 1932ರಿಂದ ನಿಂತುಹೋಗಿ, ಪುನಃ 1942ರಿಂದ ಮಾಸ ಪತ್ರಿಕೆಯಾಗಿ ಮುಂದುವರಿದ ಬಗ್ಗೆ ಪರೋಕ್ಷ ದಾಖಲೆಗಳು ಸಿಗುತ್ತದೆ. ಪರೋಕ್ಷ ದಾಖಲೆ ಎಂದರೆ–ಈ ಪತ್ರಿಕೆಯಲ್ಲಿ ಪ್ರಕಟವಾದ ಕಾರಂತರ ಲೇಖನಗಳನ್ನು ಶ್ರೀಮತಿ ಮಾಲಿನಿ ಮಲ್ಯರವರು ಸಂಪಾದಿಸಿದ್ದು, ಅದನ್ನು ಮಂಗಳೂರು ವಿಶ್ವವಿದ್ಯಾನಿಲಯವು 1994ರಲ್ಲಿ ಪ್ರಸಾರಂಗದ ವತಿಯಿಂದ ಪ್ರಕಟಪಡಿಸಿದೆ. ಉನ್ನತ ಶಿಕ್ಷಣಸಂಸ್ಥೆಗಳು ಆಗಿನ್ನೂ ಅಸ್ತಿತ್ವದಲ್ಲಿಲ್ಲದ ಸಂದರ್ಭದಲ್ಲಿ ಪ್ರಾಥಮಿಕ ಶಿಕ್ಷಕರು ತಮ್ಮ ಅನುಭವವಿನಿಮಯಕ್ಕಾಗಿ ಇಂತಹ ಮಾಧ್ಯಮಕ್ಕೆ ರೂಪುಕೊಟ್ಟರೆಂಬುದು ಆ ಕಾಲದ ದೃಷ್ಟಿಯಿಂದ ಮಹತ್ವದ್ದೆಂದು ಪರಿಗಣಿಸಬಹುದಾಗಿದೆ.

**ಸಾಹಿತ್ಯ ಮಂದಾರ:** ಎ.ಎಂ.ಜಿ. ಪ್ರಕಾಶನದ ಸ್ಥಾಪಕರಾದ ಕೋಣಿ ಕೃಷ್ಣ ಭಂಡಾರಿ ಎಂಬ ಸಾಹಿತ್ಯಾಭಿಮಾನಿಯೋರ್ವರ ಯೋಜನೆಯಲ್ಲಿ ದ್ವೈಮಾಸಿಕವಾಗಿ ಕೆಲವು ಕೃತಿಗಳನ್ನು ಈ ಪ್ರಕಾಶನದ ವತಿಯಿಂದ ಪ್ರಕಟಿಸುವ ಗುರಿ ಇರಿಸಿಕೊಂಡರು. ಈ ಯೋಜನೆಯ ರೂಪುರೇಷೆಗಳು ಮತ್ತು ಪ್ರಕಟಿಸಿದ ಕೃತಿಗಳ ವಿವರಗಳು 'ಬಯಲ ಬೆಟ್ಟ' ಎಂಬ ಡಾ. ನಾ. ಮೊಗಸಾಲೆಯವರ ಆತ್ಮಚರಿತ್ರೆಯಲ್ಲಿ ಉಲ್ಲೇಖಗೊಂಡಿವೆ. ಸುಮಾರು ಮೂರು ವರ್ಷಗಳ ಪರ್ಯಂತ ಕೃಷ್ಣ ಭಂಡಾರಿಯವರು ತಮ್ಮ ಪ್ರಕಟನೆಯನ್ನು ಮೇಲಿನ ಪ್ರಕಾಶನದ ವತಿಯಿಂದ ಯಶಸ್ವಿಯಾಗಿ ಮುಂದುವರಿಸಿದರು. ಮುಂದೆ ಅವರ ಅನಾರೋಗ್ಯದ ಪ್ರಯುಕ್ತ ಪ್ರಕಟನೆಯು ನಿಂತುಹೋಯಿತು ಎಂಬ ಹೇಳಿಕೆ 'ಬಯಲ ಬೆಟ್ಟ' ದಲ್ಲಿ ದಾಖಲಾಗಿದೆ. ಕೋಣಿ ಕೃಷ್ಣ ಭಂಡಾರಿಯವರು ತಮ್ಮ ಪ್ರಕಾಶನ ಸಂಸ್ಥೆಯಿಂದ 'ಸಾಹಿತ್ಯ ಮಂದಾರ' ಎಂಬ ಯೋಜನೆಯಲ್ಲಿ ಆರ್ಥಿಕ ಮೂಲಕ್ಕಾಗಿ ಅನ್ಯರನ್ನು ಆಶ್ರಯಿಸಿ, ಸಾಹಿತ್ಯಕೃತಿಗಳನ್ನು ಸ್ವತಂತ್ರವಾಗಿ ಪ್ರಕಟಿಸುವುದಕ್ಕೆ ಶಕ್ತಿಯಿಲ್ಲದ ಲೇಖಕರಿಗೆ ತಮ್ಮ ಯೋಜನೆಯಿಂದ ಬೆಂಬಲಿಸಿದರೆನ್ನುವುದು ಇಲ್ಲಿ ಮುಖ್ಯ ವಿಚಾರ. ಸಾಹಿತ್ಯವು ಸಮಾಜದ ಕಟ್ಟಕಡೆಯ ವ್ಯಕ್ತಿಯ ನೋವಿನ/ಅಸಹಾಯಕತೆಯ ಕುರಿತಂತೆ ಚಿಂತಿಸುವುದಕ್ಕೆ ಪ್ರೇರಣೆಯನ್ನು ನೀಡುತ್ತದೆ ಎಂಬ ಉದಾತ್ತ ದೃಷ್ಟಿಕೋನದಿಂದ ಕೃಷ್ಣ ಭಂಡಾರಿಯವರಂತಹ ಸಾಹಿತ್ಯಾಭಿಮಾನಿಯೋರ್ವರು ಈ ಪ್ರಯತ್ನಕ್ಕಿಳಿದಿದ್ದರು. ಅವರ ಈ ಪ್ರಯತ್ನದ ಈ ಫಲವಾಗಿಯೇ "ನನ್ನ ಹಸಿರು–ಬಿಸಿಲು ಅದರ ಮೂಲಕ ಹೊರಬಂತು" ಎಂಬುದಾಗಿ ಡಾ. ನಾ. ಮೊಗಸಾಲೆಯವರು ಹೇಳಿಕೊಂಡಿದ್ದಾರೆ. ಆದರೆ ಹಾವನೂರು ಅವರು ಸಂಪಾದಿಸಿದ ಕನ್ನಡ ಪತ್ರಿಕಾಸೂಚಿಯಲ್ಲಿ ಸಾಹಿತ್ಯ ಮಂದಾರವನ್ನು ಒಂದು ಪತ್ರಿಕೆ ಎಂಬ ರೀತಿಯಲ್ಲಿ ತಪ್ಪಾಗಿ ದಾಖಲಿಸಿದ್ದಾರೆ.

**ಕೃಷಿಕರ ಸಂಘಟನೆ:** (1967–74) ವಕೀಲರೂ, ಕೃಷಿಕರೂ, ಶಾಸಕರೂ ಆದ ಬೋಳ ರಘುರಾಮ ಶೆಟ್ಟಿಯವರು ಈ ಪತ್ರಿಕೆಯ ಸ್ಥಾಪಕ ಸಂಪಾದಕರಾಗಿದ್ದು, 1967ರಿಂದ 1974ರ ತನಕ ವಾರಪತ್ರಿಕೆಯಾಗಿ ಈ ಪತ್ರಿಕೆಯನ್ನು ಪ್ರಕಟಿಸಿದ್ದರು. ಕಾರ್ಕಳ ವಿಧಾನಸಭಾ ಕ್ಷೇತ್ರದ ಶಾಸಕರಾಗಿದ್ದು, ಕೃಷಿಕ್ಷೇತ್ರದಲ್ಲಿ ತೊಡಗಿಸಿಕೊಂಡ ರೈತಾಪಿ ಜನರಿಗೆ ಬಿಡುವಿನ ಸಮಯದ ಓದಿನ ಮೂಲಕ ವೈಚಾರಿಕ ಜಾಗೃತಿಯನ್ನು ಉಂಟುಮಾಡುವುದು ಸಂಪಾದಕರ ಮುಖ್ಯ ಉದ್ದೇಶವಾಗಿತ್ತು. ತಮ್ಮ ಉದ್ದೇಶಕ್ಕೆ ಪೂರಕವಾಗಿ ಎಂಬಂತೆ ಆಗಲೇ ಕಾರ್ಕಳ ತಾಲೂಕಿನ ಕಾಂತಾವರದಲ್ಲಿ ವೈದ್ಯರಾಗಿ ಕರ್ತವ್ಯ ನಿರ್ವಹಿಸುತ್ತಿದ್ದ, ಸಾಹಿತ್ಯಾಸಕ್ತಿಯುಳ್ಳ ಡಾ. ನಾ. ಮೊಗಸಾಲೆಯವರಿಂದ ಪ್ರತಿ ವಾರವೂ 'ವಾರದ ಖಾರ' ಎಂಬ ಶೀರ್ಷಿಕೆಯಡಿಯಲ್ಲಿ ಅಂಕಣ ಬರಹಕ್ಕೂ ಅವಕಾಶವನ್ನು ನೀಡಿದ್ದರು. ಪ್ರಚಲಿತ ರಾಜಕೀಯ ವಿದ್ಯಮಾನದ ವಿಶ್ಲೇಷಣಾತ್ಮಕ ಬರಹವು ಈ ಅಂಕಣದಲ್ಲಿ

ಪ್ರಕಟಗೊಳ್ಳುತ್ತಿತ್ತು. ಕಾರ್ಕಳ ಪರಿಸರದ ರೈತರಲ್ಲಿ ಪತ್ರಿಕೆಯ ಕುರಿತಾಗಿ ವಿಶೇಷ ಬೇಡಿಕೆ ಮತ್ತು ಒಲವಿಗೆ ಈ ಅಂಕಣವೇ ಕಾರಣವಾಗಿತ್ತು ಎನ್ನುವುದು ಡಾ। ನಾ. ಮೊಗಸಾಲೆಯವರ ಹೇಳಿಕೆಯಾಗಿದೆ. ಸಂಯುಕ್ತ ಕರ್ನಾಟಕ ಪತ್ರಿಕೆಯಲ್ಲಿ ದುಡಿದು ಅನುಭವ ಇರುವ ಕಲ್ಲೆ ನಾರಾಯಣರಾಯರೆಂಬ ಹಿರಿಯ ಪತ್ರಕರ್ತರು ಸಂಪಾದಕ ಮಂಡಳಿಯಲ್ಲಿದ್ದು, ಸಹಕರಿಸುತ್ತಿದ್ದ ಕಾರಣ ಪತ್ರಿಕೆ ಓದುಗ ವರ್ಗದಲ್ಲಿ ಸದಭಿಪ್ರಾಯ/ಮಾನ್ಯತೆಯನ್ನು ಗಳಿಸಿಕೊಂಡಿತ್ತು.

**ತುಷಾರ:** 1973 ಎಪ್ರಿಲ್ ತಿಂಗಳ ಯುಗಾದಿಯಂದು ಪತ್ರಿಕೆಯು ಮೊದಲ ಸಂಚಿಕೆಯಾಗಿ ಪ್ರಕಟಗೊಂಡು ಹೊಸ ಹೊಸ ವಿನ್ಯಾಸ ರಚನೆಗಳಿಂದ ಓದುಗರ ಮನಸ್ಸನ್ನು ಸಂಪೂರ್ಣ ಆಕರ್ಷಿಸಿದೆ. ಆರಂಭದಿಂದಲೂ ಕನ್ನಡದ ಅಗ್ರಗಣ್ಯ ಲೇಖಕರು ತಮ್ಮ ಸೃಜನಶೀಲ ಬರಹಗಳಿಂದ ತುಷಾರಕ್ಕೆ ವಿಶೇಷ ಗೌರವ ತಂದುಕೊಟ್ಟಿದ್ದಾರೆ. ಇಲ್ಲಿ ಪ್ರಕಟಗೊಂಡ ಅನೇಕ ಕೃತಿಗಳಿಗೆ ಪ್ರಶಸ್ತಿಗಳೂ ಲಭ್ಯವಾಗಿದೆ. ವೈವಿಧ್ಯಮಯವಾದ ವಸ್ತು ವಿನ್ಯಾಸ, ಸಂಯೋಜನೆಗಳೊಂದಿಗೆ ಹೊಸತನವನ್ನು ತೋರುವುದು ತುಷಾರದ ವಿಶೇಷ. ಓದುಗ ವರ್ಗಕ್ಕೆ ಪ್ರಕಟಿತ ವಿಷಯವು ಆಪ್ತವಾಗುವಂತೆ ನೋಡಿಕೊಳ್ಳುವುದು ತುಷಾರದ ಪ್ರಥಮ ಕಾಳಜಿಯಾಗಿತ್ತು. 'ಮಣಿಪಾಲ ಸಮೂಹ ಮಾಧ್ಯಮಗಳ ಜಾಲ'ದ ಒಡೆತನದಲ್ಲಿ 'ಉದಯವಾಣಿ' ದಿನಪತ್ರಿಕೆಯ ಯಶಸ್ವೀ ಮುಂದುವರಿಕೆಯ ಅನಂತರ ಅವರದೇ ವ್ಯವಸ್ಥಾಪನದಲ್ಲಿ ತುಷಾರ ಮಾಸಪತ್ರಿಕೆಯು (1973) ಪ್ರಕಟನೆಯನ್ನಾರಂಭಿಸಿತು. ಈ ಪತ್ರಿಕೆಯ ಸ್ಥಾಪಕ ಸಂಪಾದಕರಾದ ಶ್ರೀ ಎ. ಈಶ್ವರಯ್ಯನವರು ತಮ್ಮ ಖಾಸಗೀ ಜೀವನದಲ್ಲಿ ಕಲೆಯ ವಿವಿಧ ಪ್ರಕಾರಗಳಲ್ಲಿ ರೂಢಿಸಿಕೊಂಡ ಆಸಕ್ತಿಯನ್ನೇ ಈ ಪತ್ರಿಕೆಯಲ್ಲಿ ಅಭಿವ್ಯಂಜಿಸಿ ಪತ್ರಿಕೆಗೆ ಆಪ್ತ ಓದುಗವರ್ಗವನ್ನು ಸೃಷ್ಟಿಸಿದರು. (ಕಲೆಯ ನಾನಾ ಪ್ರಕಾರಗಳೆಂದರೆ ಸಂಗೀತ, ಶಿಲ್ಪವಿನ್ಯಾಸ, ಫೋಟೋಗ್ರಫಿ, ಪ್ರವಾಸ, ನಾಟಕ, ಮಿನಿಕಾದಂಬರಿ, ಸಣ್ಣಕಥೆ, ಸಂದರ್ಶನ ಬರಹಗಳು ಇತ್ಯಾದಿ, ಇತ್ಯಾದಿ.) ರಾಜಕೀಯ, ಸಾಮಾಜಿಕ ಸುದ್ದಿಗಳಿಗೆ ಪ್ರಾಮುಖ್ಯವನ್ನು ನೀಡದೆಯೂ ಸಂಚಿಕೆಯು ಓದುಗರ ಅಭಿಮಾನಕ್ಕೆ ಪಾತ್ರವಾಗಿ, ಅಖಿಲ ಕರ್ನಾಟಕ ಮಟ್ಟದಲ್ಲಿ ಮಾರುಕಟ್ಟೆಯನ್ನು ಗಿಟ್ಟಿಸಿಕೊಳ್ಳುವಲ್ಲಿ ಈಶ್ವರಯ್ಯನವರ ಕೊಡುಗೆ ಇದೆ ಎನ್ನುವುದನ್ನು ವಿಮರ್ಶಕರು ಈಗಾಗಲೇ ಗುರುತಿಸಿದ್ದಾರೆ. ತುಷಾರ ಪತ್ರಿಕೆಯ ಸಾಹಿತ್ಯ ಧೋರಣೆಯ ಪ್ರಗತಿಪರ ನಿಲುವನ್ನು ಉಲ್ಲೇಖಿಸುವುದಕ್ಕಾಗಿ 1992ರ ಸಂಪುಟ 20, ಎಪ್ರಿಲ್ ಸಂಚಿಕೆ 1 ಪುಟ 54 ರಿಂದ 63ರ ನಡುವಿನಲ್ಲಿ ಪ್ರಕಟಗೊಂಡ 'ತಾಯಿ' ಕಥೆಯ ಆಶಯವನ್ನು ಈ ಕೆಳಗಿನಂತೆ ಗುರುತಿಸಬಹುದಾಗಿದೆ.

ಮನುಷ್ಯ–ಪ್ರೀತಿಯೇ ಎಲ್ಲ ಸಂಬಂಧಗಳಿಗೂ ಹೇತುವಾಗುತ್ತದೆಯೇ ಹೊರತು, ಪ್ರೀತಿಯು ರಕ್ತಸಂಬಂಧ ಪ್ರಾದೇಶಿಕತೆ, ಮತಧರ್ಮ, ಜಾತಿ ಎಂಬಿತ್ಯಾದಿ ಮಿತಿಗಳನ್ನು ಮೀರಿ ಪ್ರವರ್ತಿಸುತ್ತದೆ ಎಂಬ ಆಶಯದ ಕಥೆಯೇ ಫಕ್ರುದ್ದೀನ ಇರುವೈಲ ಅವರ 'ತಾಯಿ' ಕಥೆಯ ಆಶಯವಾಗಿದೆ. ಆಧುನಿಕ ತಂತ್ರಜ್ಞಾನದಿಂದಾಗಿ ಪ್ರಪಂಚದ ಎಲ್ಲೆ (ಗಡಿ) ಕಿರಿದಾಗಿದ್ದರೂ ಮನುಷ್ಯನ ಹೃದಯವೈಶಾಲ್ಯ ಇಲ್ಲದ ಸಂಕುಚಿತಮನಸ್ಸುಗಳಿಗೆ ಮಾರ್ಗದರ್ಶನದಂತೆ ಈ ಕಥೆ ಪ್ರಕಟಗೊಂಡಿದೆ. ಸಾಹಿತ್ಯ, ಲಲಿತಕತೆಯನ್ನು ಆಸ್ವಾದಿಸುವುದಕ್ಕೆ ಬೇಕಾದ ಪ್ರಾಥಮಿಕ ಅರ್ಹತೆಯೇ ಸಹೃದಯನಿಗೆ ಕಲೆಯ ಕುರಿತಾಗಿ ಮೂಲಭೂತ ಜ್ಞಾನವು ಅತ್ಯವಶ್ಯಕವಾಗಿದೆ. ಈ ದಿಸೆಯಲ್ಲೂ ತುಷಾರ ಓದುಗರಿಗೆ ಸೂಕ್ತ ಮಾಹಿತಿಯನ್ನು ನೀಡಿ, ಕಲೆಯ ಕುರಿತು ಅಭಿರುಚಿ ಬೆಳೆಸಿಕೊಳ್ಳಲು ಬಗೆಬಗೆಯ ದಾರಿ ಕಂಡುಕೊಂಡಿದೆ ಎನ್ನಬಹುದು. ಈ ಹೇಳಿಕೆಯನ್ನು ಮನಗಾಣಿಸುವುದಕ್ಕಾಗಿ ಸಂಚಿಕೆಯಲ್ಲಿ ಪ್ರಕಟಗೊಂಡ ವಿಷಯ ವೈವಿಧ್ಯತೆಯನ್ನು ಸಂಕ್ಷಿಪ್ತವಾಗಿ ಹೀಗೆ ದಾಖಲಿಸಬಹುದು.

**ತರಂಗ ಸಾಪ್ತಾಹಿಕ:** (1983) ದೂರದ ಮುಂಬೈಯಲ್ಲಿ ಪತ್ರಿಕೋದ್ಯಮ ವೃತ್ತಿಯಲ್ಲಿ ತೊಡಗಿಸಿಕೊಂಡಿದ್ದ ಸಂತೋಷ ಕುಮಾರ ಗುಲ್ವಾಡಿಯವರು ಮುಂಬೈ ಪತ್ರಿಕೋದ್ಯಮಕ್ಕೆ ವಿದಾಯವನ್ನು ಹೇಳಿ, ತಮ್ಮ ಹುಟ್ಟೂರಿನ ಸಮೀಪದ ಮಣಿಪಾಲಕ್ಕೆ ಬಂದು 'ತರಂಗ' ಪತ್ರಿಕೆಯ ಸ್ಥಾಪಕಸಂಪಾದಕರಾಗಿ 1983 ರಿಂದ ಈ ನೂತನ ಪತ್ರಿಕೆಯನ್ನು ಮುನ್ನಡೆಸತೊಡಗಿದರು. ಪತ್ರಿಕಾ ಧರ್ಮ ಹಾಗೂ ತನ್ನ ವ್ಯಕ್ತಿಗತ ಜೀವನಧರ್ಮದ ನಡುವೆ ಅಂತರವಿಟ್ಟುಕೊಳ್ಳದ ಗುಲ್ವಾಡಿಯವರು ಸುಮಾರು 17 ವರ್ಷಗಳ ಕಾಲ ತನ್ನ ಅವಿರತ ಪರಿಶ್ರಮ, ಸಮರ್ಪಣಮನೋಭಾವ ಮತ್ತು ತಮ್ಮಲ್ಲಿರುವ ನೈಜ ಪತ್ರಿಕಾ ಕಾಳಜಿಯಿಂದ 'ತರಂಗ'ಕ್ಕೆ ಓದುಗ ವಲಯದಲ್ಲಿ ಶಾಶ್ವತಸ್ಥಾನವನ್ನು ದೊರಕಿಸಿಕೊಡುವಲ್ಲಿ ಯಶಸ್ಸನ್ನು ಕಂಡರು. ಹುಟ್ಟುತ್ತಲೇ ದಾಪುಗಾಲಿನ ಈ ಸಾಪ್ತಾಹಿಕ ತನ್ನ ಅಂದವಾದ ಅಕ್ಷರ ಜೋಡಣೆ, ಕಾಗದದ ಗುಣಮಟ್ಟ-ಮುದ್ರಣ ವಿನ್ಯಾಸಗಳಿಂದಾಗಿ 25-ಸೆಪ್ಟೆಂಬರ್ 1984ರಲ್ಲಿ ಒಂದೂವರೆ ಲಕ್ಷದಷ್ಟು ಪ್ರಸರಣ ಸಂಖ್ಯೆ ಇದ್ದ ಪತ್ರಿಕೆ 1985 ನವಂಬರ್‌ನಲ್ಲಿ ಎರಡು ಲಕ್ಷದ ಸಂಖ್ಯೆಗೆ ಮುಟ್ಟಿತು. 1984 ನವೆಂಬರ್ ಸಂಚಿಕೆಯಿಂದ ಡಾ। ಶಿವರಾಮ ಕಾರಂತರು ಮಕ್ಕಳ ಮುಗ್ಧ ಪ್ರಶ್ನೆಗಳಿಗೆ ಉತ್ತರ ನೀಡುವ ಕಾರಂತಜ್ಜನಾಗಿ 'ಬಾಲವನ' ವಿಭಾಗಕ್ಕೆ ಸೇರಿರುವುದು ತರಂಗಕ್ಕೆ ದೊರಕಿದ ಇನ್ನೊಂದು ಮಾನ್ಯತೆಯ ಮೈಲಿಗಲ್ಲು ಎನ್ನಬಹುದು.

ಸರ್ವರಿಗೂ ಸಮಬಾಳು-ಸರ್ವರಿಗೂ ಸಮಪಾಲು ಎಂಬ ಸಾಮಾಜಿಕ ನ್ಯಾಯದ ಬದ್ಧತೆಗೆ ಕಟಿಬದ್ಧರಾದ ಸಂಪಾದಕ ಗುಲ್ವಾಡಿಯವರ ಸಂಪಾದಕೀಯ 'ಅಂತರಂಗ-ಬಹಿರಂಗ' ಎಂಬ ಧ್ವನಿಪೂರ್ಣ ಶೀರ್ಷಿಕೆಯಲ್ಲಿ ವ್ಯವಸ್ಥೆಯ ಮುಂಚೂಣಿಯಲ್ಲಿರುವವರ ಸೋಗಲಾಡಿತನ, ಇಬ್ಬಂದಿತನ, ಸಮಯಸಾಧಕತನ, ಪಲಾಯನ ಪ್ರವೃತ್ತಿಯನ್ನು ನಿಷ್ಠುರವಾಗಿ ಖಂಡಿಸುತ್ತ ಪತ್ರಕರ್ತನ ಧ್ಯೇಯ-ಧೋರಣೆ ಏನು ಎಂಬುದನ್ನು ಎತ್ತಿಹಿಡಿದು, ಓದುಗ ವರ್ಗದಲ್ಲಿ ಪತ್ರಿಕಾ ಮಾಧ್ಯಮದ ಕುರಿತು ಭರವಸೆಯನ್ನು, ಅಭಿಮಾನವನ್ನು ಒಡಮೂಡಿಸುವಲ್ಲಿ ಸಫಲರಾದರು.

ಜಾಗತಿಕ ಸುದ್ದಿ-ರಾಷ್ಟ್ರೀಯ ಸುದ್ದಿ-ವ್ಯಕ್ತಿತ್ವ ವಿಕಸನ, ಕಥೆ, ಪ್ರಬಂಧ, ವಿಮರ್ಶೆ, ಕ್ರೀಡೆ, ಆರೋಗ್ಯ, ವೈಚಾರಿಕ ಲೇಖನ, ಸಾಂಸ್ಕೃತಿಕವಿಚಾರ, ಸಿನಿಮಾ ಮುಂತಾದ ಬಗೆಬಗೆಯ ವಿಚಾರ-ವಿಷಯಗಳನ್ನು ನೀಡುತ್ತಾ ಸಹೃದಯರ ಆಸಕ್ತಿಯನ್ನು ಉಳಿಸಿ-ಬೆಳೆಸುವಲ್ಲಿ ನಾನಾ ತಂತ್ರಗಳನ್ನು ಮೇಳೈಸಿಕೊಂಡು 'ತರಂಗ' ಮುಂದುವರಿಯಿತು. ಪತ್ರಿಕೋದ್ಯಮ ಕ್ಷೇತ್ರದಲ್ಲಿ ಸುದೀರ್ಘ ಅನುಭವವುಳ್ಳ ಗುಲ್ವಾಡಿಯವರು ತಮ್ಮ ಸಂಪಾದಕ ಹುದ್ದೆಯನ್ನು ವ್ಯಕ್ತಿಗತ ಕಾರಣಕ್ಕಾಗಿ ತ್ಯಜಿಸಿ, ಬೆಂಗಳೂರಿಗೆ ತೆರಳುವುದರೊಂದಿಗೆ ಪತ್ರಿಕೆಯ ಮೊದಲನೆಯ ಘಟ್ಟವು ಯಶಸ್ವಿಯಾಗಿ ಮುಕ್ತಾಯಗೊಂಡಿತು.

ಸಂತೋಷ ಕುಮಾರ ಗುಲ್ವಾಡಿಯವರಿಂದ ತೆರವಾದ ಸ್ಥಾನವನ್ನು ಸಂಧ್ಯಾ ಎಸ್. ಪೈಯವರು ತುಂಬಿ-ಸಂತೋಷ ಕುಮಾರ ಗುಲ್ವಾಡಿಯವರ ಮಾರ್ಗದಲ್ಲೇ ಸತ್-ಸಂಪ್ರದಾಯಗಳಿಗೆ ಸ್ಪಂದಿಸುತ್ತ, ಮಾಧ್ಯಮಕ್ಷೇತ್ರದ ಹೊಸ ಹೊಸ ಸವಾಲುಗಳನ್ನು ಸಮರ್ಪಕವಾಗಿ ಎದುರಿಸಲು ಬೇಕಾದ ಕೌಶಲವನ್ನು ಕೈಗೂಡಿಸಿಕೊಳ್ಳುತ್ತಾ ಮುಂದುವರಿಯುತ್ತಿದ್ದಾರೆ.

**ಉದಯವಾಣಿ ದೈನಿಕ:** 1970ರಲ್ಲಿ ಪ್ರಕಟನೆ ಆರಂಭಿಸಿದ 'ಉದಯವಾಣಿ' ದಿನಪತ್ರಿಕೆಯು 20ನೇ ಶತಮಾನದ ಕೊನೆಯವರೆಗೂ ಯಶಸ್ವಿಯಾಗಿ ಮುಂದುವರಿದು, 21ನೇ ಶತಮಾನದಲ್ಲಿ ಈಗಾಗಲೇ 15 ವರ್ಷಗಳನ್ನು ಪೂರೈಸಿ, ಹದಿನಾರಕ್ಕೆ ಕಾಲಿಟ್ಟಿದೆ. ಕನ್ನಡ ದೈನಿಕ ಪತ್ರಿಕೆ ಉದಯವಾಣಿ ಮಣಿಪಾಲದಿಂದ ಅದುವೇ ಪ್ರಥಮ ಬಾರಿಗೆ ಪ್ರಕಟವಾಗುವ ಮೂಲಕ

ಅವಿಭಜಿತ ದಕ್ಷಿಣ ಕನ್ನಡ ಜಿಲ್ಲೆಯ ಉಡುಪಿ ತಾಲೂಕಿನ ಪ್ರಥಮ ದಿನಪತ್ರಿಕೆ ಎಂದು ಗುರುತಿಸಿಕೊಂಡಿತು. ದಿ। ಎಸ್.ಯು. ಪಣಿಯಾಡಿಯವರು ಸ್ಥಾಪಿಸಿದ ತುಳುನಾಡು ಪ್ರೆಸ್‌ನ ಯಂತ್ರೋಪಕರಣಗಳೇ ಮಣಿಪಾಲ ಮುದ್ರಣ ಸಂಸ್ಥೆಗೆ ವಿಕ್ರಯಗೊಂಡು ಅಲ್ಲಿಯೇ 'ಮಣಿಪಾಲ ಪವರ್ ಪ್ರೆಸ್' ಎಂಬ ಹೆಸರಿನ ಮುದ್ರಣಾಲಯವು ಅಸ್ತಿತ್ವಕ್ಕೆ ಬಂದಿತು. 1938 ರಿಂದಲೇ ಮಣಿಪಾಲ ಮುದ್ರಣಾಲಯವು 'ಮಣಿಪಾಲ ಪವರ್ ಪ್ರೆಸ್' ಎಂಬ ಹೆಸರಿನಲ್ಲಿ ಕಾರ್ಯಾಚರಿಸುತ್ತಿತ್ತು ಎಂಬುದಕ್ಕೆ ಆಧಾರವಾಗಿ ದಾಖಲೆಯನ್ನು ಈ ಪ್ರಬಂಧದ ಕೊನೆಯ **ಅನುಬಂಧ ಸಂಖ್ಯೆ 2** ರಲ್ಲಿ ಗಮನಿಸಬಹುದಾಗಿದೆ. (ಉದಯವಾಣಿ) ಮಣಿಪಾಲದ ಈ ದಿನಪತ್ರಿಕೆಯು ಆಗಲೇ ಮಣಿಪಾಲದಲ್ಲಿದ್ದ ಮಣಿಪಾಲ ಪವರ್ ಪ್ರೆಸ್‌ನಿಂದ ಮುದ್ರಣಗೊಳ್ಳುತ್ತಿದ್ದು, ಈ ಮುದ್ರಣ ಯಂತ್ರಕ್ಕೂ ಈಗಾಗಲೇ ಗುರುತಿಸಿದಂತೆ ಸುದೀರ್ಘ ಇತಿಹಾಸವಿದೆ. "ಮೊದಲ ವರ್ಷವೇ ರಾಷ್ಟ್ರೀಯ ಮಟ್ಟದಲ್ಲಿ ಅಂದವಾದ ಮುದ್ರಣ ವಿನ್ಯಾಸಕ್ಕಾಗಿ ಉದಯವಾಣಿಗೆ ಪ್ರಥಮ ಪ್ರಶಸ್ತಿ ದೊರೆತಾಗ ನಮ್ಮ ಪ್ರಯತ್ನಕ್ಕೆ ಸಾರ್ಥಕತೆಯ ಭಾವ ಬಂತು. ನಮ್ಮ ಉತ್ಸಾಹ ಇಮ್ಮಡಿಗೊಳ್ಳುವಂತಾಯಿತು. ಅನಂತರ ಇದುವರೆಗೆ ಹನ್ನೊಂದು ಬಾರಿ ರಾಷ್ಟ್ರೀಯ ಮಟ್ಟದ ಪ್ರಶಸ್ತಿಯನ್ನು ಪಡೆಯುವ ಮೂಲಕ ಉದಯವಾಣಿ ನಿರಂತರವಾಗಿ ತನ್ನ ಮಟ್ಟವನ್ನು ಕಾಯ್ದುಕೊಂಡು ಮುಂದುವರಿಯಿತು" (ಸತೀಶ್ ಯು.ಪೈ, 1985, ಉದಯವಾಣಿ ನಡೆದುಬಂದ ದಾರಿ ಶೀರ್ಷಿಕೆಯಲ್ಲಿ ವ್ಯವಸ್ಥಾಪಕರ ಮಾತುಗಳು) ಎಂದು ಹದಿನೈದನೇ ವರ್ಷದ ವಿಶೇಷ ಪುರವಣಿಯಲ್ಲಿ ವ್ಯವಸ್ಥಾಪಕರು ತಮ್ಮ ಯಶಸ್ವೀ ಸಾಧನೆಯ ಸಂತೃಪ್ತಿಯನ್ನು ಓದುಗರೊಂದಿಗೆ ಹಂಚಿಕೊಂಡಿದ್ದಾರೆ. **ಅನುಬಂಧ ಸಂಖ್ಯೆ 2ಎ** ಯಲ್ಲಿ ಪ್ರಶಸ್ತಿಯ ವಿವರ ಹಾಗೂ ಮೇಲಿನ ಹೇಳಿಕೆಯನ್ನು ಗಮನಿಸಬಹುದು.

**'ಉದಯವಾಣಿ' ಯಶಸ್ಸಿಗೆ ಮುಖ್ಯವಾದ ಮೂರು ಕಾರಣಗಳು:**

1) **ಹೊಸ ಪ್ರಕಟನೆ–ಅನುಭವೀ ಸಂಪಾದಕರು ಹಾಗೂ ನುರಿತ ಸಿಬ್ಬಂದಿ ವರ್ಗ:** 1970ರಲ್ಲಿ ಮಣಿಪಾಲದಲ್ಲಿ ಉದಯವಾಣಿ ದಿನಪತ್ರಿಕೆ ಆರಂಭವಾದಾಗ ಇಲ್ಲಿಗೆ ಸೇರ್ಪಡೆಗೊಂಡ ಬನ್ನಂಜೆ ರಾಮಾಚಾರ್ಯರು, ಬನ್ನಂಜೆ ಗೋವಿಂದಾಚಾರ್ಯರು ಸಂಪಾದಕ ಮಂಡಳಿಯಲ್ಲಿದ್ದರು. ಇವರು ಆದಾಗಲೇ ಕರ್ನಾಟಕ ಮಟ್ಟದಲ್ಲಿ ಗುರುತಿಸಿಕೊಂಡ ಮುಂಚೂಣಿಯ ಲೇಖಕರಾಗಿದ್ದರು. ಹಲವು ಪತ್ರಿಕೆಯ ಸಂಪಾದಕರಾಗಿಯೂ, ವ್ಯವಸ್ಥಾಪನಾ ಸಂಪಾದಕರಾಗಿಯೂ ಕರ್ತವ್ಯ ನಿರ್ವಹಿಸಿ ಅನುಭವುಳ್ಳ ಇವರಿಗೆ ಪತ್ರಿಕೆ ಹೊಸತಾದರೂ, ಪತ್ರಿಕೋದ್ಯಮ ಹೊಸತಾಗಿರಲಿಲ್ಲ. ಇವರು ತಮ್ಮ ಅನುಭವ–ಕೌಶಲವನ್ನು ಸಂಪೂರ್ಣವಾಗಿ ಉದಯವಾಣಿಗಾಗಿ ವಿನಿಯೋಗಿಸಿದರು. ಇವರ ಸಾಲಿನಲ್ಲಿಯೇ ಹೆಸರಿಸಬೇಕಾದ ಇನ್ನೆರಡು ಹೆಸರು– ಅಂಕಣ ಬರಹಕ್ಕಾಗಿ 'ಕು.ಶಿ. ಹರಿದಾಸ ಭಟ್ಟ'ರು, ಮುದ್ರಣ ವ್ಯವಸ್ಥಾಪನಾ ಶಿಸ್ತಿಗಾಗಿ–'ಕೃಷ್ಣಯ್ಯ'ನವರು. ಈ ನಾಲ್ವರ ಆರಂಭಿಕ ಪ್ರಯತ್ನವು ಉದಯವಾಣಿ ಯಶಸ್ಸಿನ ಭದ್ರಬುನಾದಿಯಾಯಿತು.

2) **ವಸ್ತುನಿಷ್ಠವರದಿ, ಸ್ಥಳೀಯ ಕಲೆ–ಸಂಸ್ಕೃತಿ–ಸುದ್ದಿಗೆ ಪ್ರಥಮ ಪ್ರಾಶಸ್ತ್ಯ:** ರಾಜ್ಯ ಮಟ್ಟಕ್ಕೆ ಬೆಳೆದು ನಿಂತ ಉದಯವಾಣಿ ತನ್ನ ಪರಿಸರವನ್ನು ಎಂದೂ ಮರೆತು ಬೆಳೆಯಲಿಲ್ಲ. ಅದು ಇಲ್ಲಿಯ ಜನಜೀವನದ ಜೊತೆಗೆ ನಿರಂತರವಾಗಿ ಸ್ಪಂದಿಸಬಯಸಿತು. ಇಲ್ಲಿಯ (ಅವಿಭಜಿತ ದ.ಕ. ಜಿಲ್ಲೆಯ) ಕಲೆ–ಸಂಸ್ಕೃತಿಗಳನ್ನು ದೇಶದ ಇತರ ಕಡೆಗೆ ಪರಿಚಯಿಸುವಲ್ಲಿ ಪ್ರಮುಖ ಪಾತ್ರ ವಹಿಸಿತು. ಸ್ಥಳೀಯ ಸುದ್ದಿಗಳಿಗೆ ಪ್ರಾಶಸ್ತ್ಯ ನೀಡಿದಂತೆ ಸ್ಥಳೀಯ (ಅವಿಭಜಿತ ದ.ಕ. ಜಿಲ್ಲೆಯ) ಕವಿ–

ವಿಮರ್ಶಕ-ಲೇಖಕರ ಬರಹಗಳಿಗೆ ಪ್ರಥಮ ಪ್ರಾಶಸ್ತ್ಯಗಳನ್ನು ನೀಡಿತು; ಸ್ಥಳೀಯ ಸುದ್ದಿಗಳಿಗೆ ಪ್ರಾಮುಖ್ಯತೆಯನ್ನು ನೀಡಿತು. ಇದರಿಂದಾಗಿ ಜಿಲ್ಲೆಯ ಮನೆಮನೆಯಲ್ಲಿಯೂ ಪತ್ರಿಕೆಯು ಸ್ಥಾನವನ್ನು ಪಡೆಯುವಂತಾಯಿತು. ಎಲ್ಲಾ ಸುದ್ದಿಗಳಿಗೂ ಸಮಾನ ಪ್ರಾಶಸ್ತ್ಯವನ್ನು ನೀಡಿರುವುದು ಪತ್ರಿಕೆಯ ಇನ್ನೊಂದು ವೈಶಿಷ್ಟ್ಯವಾಗಿ ಎಲ್ಲ ವರ್ಗದ ಜನರಿಗೂ ಇದು 'ನಮ್ಮ ಪತ್ರಿಕೆ' ಎಂದೆನ್ನಿಸಿತು. ಆದಿತ್ಯವಾರದ ಸಾಹಿತ್ಯ ಪುರವಣಿಯಲ್ಲಿ ಶಿಶು ಸಾಹಿತ್ಯಕ್ಕೂ, ಪ್ರಾಧ್ಯಾಪಕ-ಕವಿಗಳ ಕಥೆ/ವಿಮರ್ಶೆ/ವೈಚಾರಿಕ ಲೇಖನಕ್ಕೂ ವಿಶೇಷವಾದ ಸ್ಥಳ ಒದಗಿಸಿರುವುದರಿಂದ ಆದಿತ್ಯವಾರದ ಬಿಡುವನ್ನು ಸದುಪಯೋಗಪಡಿಸಿಕೊಳ್ಳುವುದಕ್ಕೆ ಪತ್ರಿಕೆ ವಿಶೇಷ ಅವಕಾಶವನ್ನೊದಗಿಸಿಕೊಟ್ಟಂತಾಯಿತು.

3) **ನೂತನ ಆವಿಷ್ಕಾರಗಳು:** ಯಾವುದೇ ಪತ್ರಿಕೆಯು ಆರಂಭಿಸದ ಹೊಸ-ಹೊಸ ಆವಿಷ್ಕಾರಗಳು ಉದಯವಾಣಿಗೆ ಬಹುಸಂಖ್ಯೆಯಲ್ಲಿ ಓದುಗರನ್ನು ಒದಗಿಸಿಕೊಟ್ಟವು. ಆ ಆವಿಷ್ಕಾರಗಳು ಹೀಗಿವೆ:- ಕುಗ್ರಾಮ ಗುರುತಿಸುವ ಯೋಜನೆ, ಸಾಧಕರಿಗೆ ಹೊಸ ವರ್ಷದ ಪ್ರಶಸ್ತಿ ಯೋಜನೆ, ವಿದ್ಯಾರ್ಥಿ ದತ್ತಿನಿಧಿ ಪುರಸ್ಕಾರ ಯೋಜನೆ, ಮಕ್ಕಳ ದಿನಾಚರಣೆ ಪ್ರಯುಕ್ತ ಮಕ್ಕಳ ಭಾವಚಿತ್ರಕ್ಕಾಗಿ ನಗದು ಪುರಸ್ಕಾರ ಕಾರ್ಯಕ್ರಮ, ಉದಯವಾಣಿ 'ವಿಂಶತಿ' ಆಚರಣೆಯ ಅಂಗವಾಗಿ ದ.ಕ. ಜಿಲ್ಲಾ ಮಟ್ಟದ 'ಮಾದರಿ ಯುವ ಸಂಘಟನಾ ಸ್ಪರ್ಧೆ' ಈ ಮುಂತಾದ ಯೋಜನೆಗಳಿಂದ ವಾಚಕರ ಸಂಖ್ಯೆಯು ಹೆಚ್ಚಿದ್ದಲ್ಲದೇ ಪತ್ರಿಕೆಗೆ ಓದುಗರಿಂದ ವಿಶೇಷ ಗೌರವ-ಮಾನ್ಯತೆಯೂ ವೃದ್ಧಿಸುವಲ್ಲಿ ಪೂರಕ ಚಟುವಟಿಕೆಗಳಾದವು. ಉದಯವಾಣಿ ಸಂಪುಟ 23 (ಸಂಚಿಕೆ 240) 1992 ಅಕ್ಟೋಬರ್ 8ರ ಪುಟ 1ರಲ್ಲಿ ವಿಂಶತಿ ಸ್ಪರ್ಧೆಯ ಫಲಿತಾಂಶ ಪ್ರಕಟವಾಗಿರುವುದನ್ನು **ಅನುಬಂಧ ಸಂಖ್ಯೆ 3** ರಲ್ಲಿ ಗಮನಿಸಬಹುದಾಗಿದೆ. ಓದುಗರ ಸಂಖ್ಯೆಯು ಹೆಚ್ಚಿದ ಕಾರಣಗಳಿಂದಾಗಿ ಪತ್ರಿಕೆಯ ಪ್ರಸರಣ ಸಂಖ್ಯೆಯೂ ಹೆಚ್ಚಿತು. ಪ್ರಸರಣ ಸಂಖ್ಯೆಯು ಹೆಚ್ಚಿದ ಕಾರಣದಿಂದಾಗಿ ಪತ್ರಿಕೋದ್ಯಮವೂ ಒಂದು ಲಾಭದಾಯಕ ಉದ್ಯಮ ಎನ್ನುವುದನ್ನು ಮೊತ್ತಮೊದಲ ಬಾರಿಗೆ ಅವಿಭಜಿತ ಜಿಲ್ಲೆಯ ಜನತೆಗೆ ತೋರಿಸಿಕೊಟ್ಟಿತು. ಬೇಡಿಕೆಯು ಹೆಚ್ಚಿದಂತೆ ಸ್ಥಳೀಯ ಸುದ್ದಿಗಳಿಗೆ ನೀಡಬೇಕಾದ ಸ್ಥಳಾವಕಾಶವು ಹೆಚ್ಚಿತು. ಸ್ಥಳೀಯ ಸುದ್ದಿಯ ಸಾಂದ್ರತೆ ಹೆಚ್ಚಿದ ಪ್ರಯುಕ್ತ 1990ರ ದಶಕದಿಂದಲೇ ಹೊಸ ಹೊಸ ಆವೃತ್ತಿಗಳು ಪ್ರಕಟಗೊಳ್ಳುವ ನೂತನ ದಾರಿಯನ್ನು ಪತ್ರಿಕೆಯು ಕಂಡುಕೊಂಡಿದೆ.

**ಮೌಲಿಕವಾದ ಸಾಹಿತ್ಯ ಸತ್ವದಿಂದ ದೂರಸರಿದ ಪತ್ರಿಕೆ:** ಪ್ರಾದೇಶಿಕ ಸುದ್ದಿಗೂ, ಜಾಹೀರಾತಿಗೂ (ವ್ಯಕ್ತಿಗತ ಜಾಹೀರಾತಿಗೇ ಅಧಿಕ ಪ್ರಾಶಸ್ತ್ಯ) ಹೆಚ್ಚು ಅವಕಾಶ ನೀಡುತ್ತಾ ಹೋದಂತೆ ಮಾರುಕಟ್ಟೆ ಕೇಂದ್ರಿತವಾಗಿ ಪತ್ರಿಕೆಯು ತನ್ನ ದಿಕ್ಕು ದೆಸೆಯನ್ನು ಬದಲಾಯಿಸಿಕೊಂಡಿತು. ಈ ಕಾರಣದಿಂದಾಗಿ ಗುಣಾತ್ಮಕ ಸಾಹಿತ್ಯವು 1995ರ ದಶಕದಿಂದಲೇ ಪತ್ರಿಕೆಯಿಂದ ದೂರವಾಗುವಂತಾಯಿತು. ಸಾಹಿತ್ಯದ ವಿದ್ಯಾರ್ಥಿ ಮತ್ತು ಸಹೃದಯರ ಪಾಲಿಗೆ ಇದೊಂದು ಅಹಿತಕರ ಸಂಗತಿಯಾಗಿದೆ. ಮಾಸಿಕ ವೇತನದ ನಗರವಾಸಿಗಳು ಹಾಗೂ ಗ್ರಾಮೀಣ ಪ್ರದೇಶದ ಮೇಲ್-ಮಧ್ಯಮವರ್ಗವು ದೈಹಿಕ ಶ್ರಮದಿಂದ ದೂರವಾದ ಪ್ರಯುಕ್ತ ಅನೇಕ ತೆರನಾದ ದೈಹಿಕ ಜಾಡ್ಯಗಳಿಗೆ ಒಳಗಾಗುವುದು ಸಾಮಾನ್ಯ ಸಂಗತಿಯಾಗಿದೆ. ಈ ಎರಡೂ ವರ್ಗದ ದೈಹಿಕ ಜಾಡ್ಯಗಳಿಗೆ ಉಪಶಮನ ನೀಡುವ 'ವೈದ್ಯಕೀಯ ಮಾಹಿತಿ' ಶೀರ್ಷಿಕೆಯು ಸಾಹಿತ್ಯದ ಮೀಸಲು ಸ್ಥಾನವನ್ನು ಕಬಳಿಸಿರುವುದನ್ನು ಓದುಗರು ಈಗಾಗಲೇ ಗುರುತಿಸಿದ್ದಾರೆ.

**ಏಕೀಕರಣೋತ್ತರ ಕಾಲಾವಧಿಯ ಎರಡನೇ ಕಾಲಘಟ್ಟದ ಪತ್ರಿಕೋದ್ಯಮದಲ್ಲಿ ವ್ಯಕ್ತವಾದ ಸಾಹಿತ್ಯ ಚಟುವಟಿಕೆಗಳು:-**

ಇಪ್ಪತ್ತನೇ ಶತಮಾನದ ಕೊನೆಯ ಕಾಲಘಟ್ಟದ 15 ವರ್ಷಗಳಲ್ಲಿ (1986-2000) ವಿವಿಧ ವಿಷಯ ಶೀರ್ಷಿಕೆಗಳಲ್ಲಿ ಒಟ್ಟು 39 ಪತ್ರಿಕೆಗಳು ಪ್ರಕಟಗೊಂಡಿರುತ್ತವೆ. 20ನೇ ಶತಮಾನದ ಉಳಿದೆರಡೂ ಕಾಲಘಟ್ಟದಲ್ಲಿ ಬಂದ ಪತ್ರಿಕೆಗಳ ಸಂಖ್ಯೆಗಿಂತ ಈ ಅವಧಿಯಲ್ಲಿ ಪ್ರಕಟಗೊಂಡ ಪತ್ರಿಕೆಗಳು ಸಂಖ್ಯೆಯಲ್ಲಿ ಅಧಿಕವಾಗಿರುತ್ತದೆ. ಆದರೆ ಸಾಹಿತ್ಯ ಸತ್ವ ಹಾಗೂ ಕಲಾತ್ಮಕ ಬರಹಗಳಿಂದ ಕೂಡಿದ ಪತ್ರಿಕೆಗಳೆಂದು ಕೇವಲ ಏಳು ಪತ್ರಿಕೆಗಳನ್ನಷ್ಟೇ ಉಲ್ಲೇಖಿಸಬಹುದಾಗಿದೆ. (ಆ ಪತ್ರಿಕೆಗಳ ಉಲ್ಲೇಖ ಮತ್ತು ವಿಶ್ಲೇಷಣೆಯನ್ನು ಈ ಮುಂದೆ ಶೀರ್ಷಿಕೆಗನುಸರಿಸಿ ವಿವರಿಸಲಾಗಿದೆ) 20ನೇ ಶತಮಾನದ ಉತ್ತರಾರ್ಧದಲ್ಲಿ ಪ್ರಜಾಪ್ರತಿನಿಧಿ ಸರಕಾರವು ಸಾರ್ವತ್ರಿಕ ಶಿಕ್ಷಣ, ಪ್ರಜಾಪ್ರಭುತ್ವ ಚಿಂತನೆಯ ಸಂವಿಧಾನಾತ್ಮಕವಾದ ಚೌಕಟ್ಟಿನಲ್ಲಿ ಪಾರದರ್ಶಕ ನೆಲೆಯಲ್ಲಿ ಸಾಮಾಜಿಕ ನ್ಯಾಯಕ್ಕನುಸರಿಸಿ, ಉದ್ಯೋಗಾವಕಾಶಗಳನ್ನು ನೀಡಿರುವುದು ಸತ್ಯ ವಿಚಾರ. ಆದರೆ ಜಾತಿ-ಧರ್ಮ-ಮೌಢ್ಯಗಳ ಕುರಿತಾಗಿ ವಿದ್ಯಾವಂತ ವರ್ಗವು ವಿಶೇಷ ಒಲವು ತೋರಿಸುತ್ತಿರುವುದು ಈ ಶತಮಾನದ ಬಹುದೊಡ್ಡ ವಿಪರ್ಯಾಸ. ಜಾತಿಗೊಂದರಂತೆ ದೇವಸ್ಥಾನ, ಜನಾಂಗದ ಪರಂಪರೆಯ ಆಚರಣೆಯನ್ನು ಎತ್ತಿ ಹಿಡಿಯಬೇಕೆಂಬ ಹಠ, ಸ್ಥಳೀಯ ಆಚರಣೆಗಳನ್ನು ಸಂಸ್ಕೃತಿಯ ಹೆಸರಿನಲ್ಲಿ ವೈಭವೀಕರಿಸುವ ಪ್ರವೃತ್ತಿ ಈ ಕಾಲಾವಾಧಿಯ ಪತ್ರಿಕೆಗಳ ಸಾಮಾನ್ಯ ಲಕ್ಷಣಗಳಾಗಿದ್ದು, ಪತ್ರಕರ್ತರೇ ಪತ್ರಿಕಾ ಧರ್ಮವನ್ನು ಮೀರುವ ಲಕ್ಷಣಗಳನ್ನು ಗುರುತಿಸಬಹುದಾಗಿದೆ. 1985ರ ನಂತರದಲ್ಲಿ ದಿನಪತ್ರಿಕೆಗಳಾಗಿ ಪ್ರಕಟಗೊಂಡ ಬಹುತೇಕ ಸಂಜೆ ಪತ್ರಿಕೆಗಳು ಪತ್ರಿಕೋದ್ಯಮವು ಒಂದು ಲಾಭದಾಯಕ ಉದ್ಯಮವೆಂದು ಭಾವಿಸಿ, ಇಂತಹ ಪ್ರವೃತ್ತಿಗೆ ನಾಂದಿಯನ್ನು ಹಾಕಿದರು. 

ಸೀಮಿತ ಬಂಡವಾಳದಿಂದ ಮಹತ್ತರ ಲಾಭದ ಕನಸನ್ನು ಕಂಡ ಇಂತಹ ಪತ್ರಿಕೆಯ ಸಂಪಾದಕರು, (ಮೇಲೆ ಉಲ್ಲೇಖಿತ ಪತ್ರಿಕೆಗಳ) ಸಂಪಾದಕರು ಕೇವಲ ಎರಡು ಮೂರು ವರ್ಷಗಳಲ್ಲಿಯೇ ಇನ್ನು ಕೆಲವೊಮ್ಮೆ ಇನ್ನೂ ಕಡಿಮೆ ಅವಧಿಯಲ್ಲಿ ತಮ್ಮ ಪತ್ರಿಕೋದ್ಯಮವನ್ನೇ ಕೈಬಿಟ್ಟು, ಬೇರೊಂದು ವೃತ್ತಿಯನ್ನು ಕಂಡುಕೊಂಡರು. "ಜನಹಿತ, ಸಮಾಜದ ಹಿತ ಹಾಗೂ ದೇಶದ ಸಾಂಸ್ಕೃತಿಕ, ಸಾಮಾಜಿಕ ಹಿನ್ನೆಲೆಗಳನ್ನು ಗಮನದಲ್ಲಿರಿಸಿಕೊಂಡು ಮಾಧ್ಯಮಗಳು ಕೆಲಸ ನಿರ್ವಹಿಸಬೇಕಾಗುತ್ತದೆ... ಸಮಾಜದ ಹಿತವೇ ಮಾಧ್ಯಮಗಳ ಕಾರ್ಯನಿರ್ವಹಣೆಯ ಪ್ರಧಾನ ಆಶಯವಾಗಿರಬೇಕು. ಈ ಎಲ್ಲ ಅಂಶಗಳಿಗೆ ಯಾವ ಮಾಧ್ಯಮಗಳು ಸ್ಪಂದಿಸುತ್ತವೆಯೋ ಅವೇ ಪ್ರಧಾನವಾಗಿ ಜನರಿಗೆ ಹತ್ತಿರವಾಗುತ್ತವೆ." (ಸಂ: ಬಾಲಸುಬ್ರಹ್ಮಣ್ಯಂ ಎ.ಎಸ್. ಡಾ., 2003, ಪು-45) ಒಂದು ಗುಂಪಿನ ಹಿತವನ್ನು ಎತ್ತಿಹಿಡಿಯುವುದರಲ್ಲೇ ಆಸಕ್ತರಾಗಿ ಸಮಾಜದ ಹಿತವನ್ನು ಮರೆಯುವ ಯಾವುದೇ ಮಾಧ್ಯಮಗಳು ಜನರಿಂದ ದೂರವಾಗುತ್ತದೆ ಎಂಬ ಆಶಯವನ್ನು ಮೇಲಿನ ಹೇಳಿಕೆಯಲ್ಲಿ ಸ್ಪಷ್ಟವಾಗಿ ಕಂಡುಕೊಳ್ಳಬಹುದಾಗಿದೆ.

"ಪತ್ರಿಕೋದ್ಯಮಿ ಆದವನಿಗೆ ವಿಪುಲವಾದ ಶಬ್ದಸಂಪತ್ತಿ ಇರಬೇಕಾಗುತ್ತದೆ. ಬೇಡವಾದ ಒಂದು ಶಬ್ದಕ್ಕೆ ಬದಲಾಗಿ, ಬೇಕಾಗುವಂಥ ಇನ್ನೊಂದು ಶಬ್ದದ ಮೇಲೆ ಅವನ ಯಜಮಾನಿಕೆ ಇರಬೇಕಾಗುತ್ತದೆ."(ಲೇ: ಶಿವಾನಂದ ಜೋಷಿ, 2007, ಪು-4) ಯಾವುದೇ ವಿಷಯ ಶೀರ್ಷಿಕೆಯ ಪತ್ರಿಕೆಯಾದರೂ ಸಂಪಾದಕನು ಭಾಷಾನುಭವ, ಲೋಕಾನುಭವಗಳಿಂದ ಮಾಗಿದವನಾಗಿರಬೇಕು ಎನ್ನುವುದೇ ಈ ಹೇಳಿಕೆಯ ಆಶಯವಾಗಿದೆ. ಈ ಕಾಲಘಟ್ಟದಲ್ಲಿ ಪ್ರಕಟಗೊಂಡ ಪತ್ರಿಕೆಗಳನ್ನು ವಿಷಯ ಸ್ವರೂಪಕ್ಕನುಸರಿಸಿ, ಈ ಕೆಳಗಿನಂತೆ ವರ್ಗೀಕರಿಸಿಕೊಳ್ಳಬಹುದಾಗಿದೆ.

1) ಪ್ರಾದೇಶಿಕ ಸುದ್ದಿ ಪತ್ರಿಕೆಗಳು. 2) ಶಿಕ್ಷಣ–ಕಲೆ– ಸಾಂಸ್ಕೃತಿಕ– ಸಾಹಿತ್ಯಕ, ಸಂಶೋಧನ ಪತ್ರಿಕೆಗಳು.

3) ಜನಾಂಗ ಜಾತಿ ಹಿನ್ನೆಲೆಯ ಧಾರ್ಮಿಕ ಪತ್ರಿಕೆಗಳು.

**ಪ್ರಾದೇಶಿಕ ಸುದ್ದಿ ಪತ್ರಿಕೆಗಳು:** ಸಾರ್ವತ್ರಿಕ ಶಿಕ್ಷಣ ಹಾಗೂ ಸರಳೀಕೃತಗೊಂಡ ಪತ್ರಿಕಾಶಾಸನದ ಪರಿಣಾಮವಾಗಿ ಪ್ರಾದೇಶಿಕ ಭಾಷೆಯಲ್ಲಿ ಪ್ರಕಟಗೊಂಡ ಪತ್ರಿಕೆಗಳ ಸಂಖ್ಯೆ 1985ರ ಅನಂತರದಲ್ಲಿ ಹೆಚ್ಚಿರುವುದನ್ನು ಗಮನಿಸಬಹುದಾಗಿದೆ. ಉಡುಪಿ ಜಿಲ್ಲೆ ಒಂದರಲ್ಲಿಯೇ ನಿಖರವಾಗಿ 25 ಪತ್ರಿಕೆಗಳು ನೋಂದಣಿ ಸಂಖ್ಯೆಯನ್ನು ಪಡೆದು, ಪ್ರಕಟಣೆಗೆ ಬೇಕಾದ ವ್ಯವಸ್ಥೆಯನ್ನು ಕಂಡುಕೊಂಡಿದ್ದವು. ಈ ಪತ್ರಿಕೆಗಳಲ್ಲಿ ಕೇವಲ 9 ಪತ್ರಿಕೆಗಳು ಮಾತ್ರ 2010ರ ತನಕ ಪ್ರಕಟಣೆಯನ್ನು ಮುಂದುವರಿಸಿ, 2010ರ ಅನಂತರ ಕೇವಲ 4 ಪತ್ರಿಕೆಗಳು ತಮ್ಮ ಅಸ್ತಿತ್ವವನ್ನು ಉಳಿಸಿಕೊಳ್ಳುವಲ್ಲಿ ಸಮರ್ಥವಾದವು. ಆ 4 ಪತ್ರಿಕೆಗಳೇ, ಕುಂದಪ್ರಭ, ಜನಪ್ರತಿನಿಧಿ, ಜನಬಿಂಬ ಹಾಗೂ ಉಡುಪಿ ಮಿತ್ರ. ಇಷ್ಟಕ್ಕೇ ಉಡುಪಿ ಜಿಲ್ಲೆಯ ಪತ್ರಿಕೋದ್ಯಮ ಮುಕ್ತಾಯವನ್ನು ಕಾಣದೇ 21ನೇ ಶತಮನದಲ್ಲಿ ಹೊಸ ಹೊಸ ಪತ್ರಿಕಾಸಂಪಾದಕರು ನೂತನ ಪತ್ರಿಕೆಗಳ ಪ್ರಕಟನೆಗೆ ಮುಂದಾಗುತ್ತಲೇ ಇದ್ದಾರೆಂಬುದು ಪತ್ರಿಕೋದ್ಯಮ ಜಗತ್ತಿನ ವಿಸ್ಮಯವೆನ್ನಬೇಕಾಗುತ್ತದೆ. 20ನೇ ಶತಮಾನದ 90ರ ದಶಕದಲ್ಲಿ ಹುಟ್ಟಿ, ಮೇಲೆ ಉಲ್ಲೇಖಿತ ಪತ್ರಿಕೆಗಳು, ಸಾಹಿತ್ಯಕ, ಸಾಂಸ್ಕೃತಿಕ, ಸ್ಥಳೀಯ, ಪ್ರಾದೇಶಿಕ ಸುದ್ದಿಗೂ ಪ್ರಾಮುಖ್ಯವನ್ನು ನೀಡಿ, ಈಗಲೂ ಮುಂದುವರಿದುಕೊಂಡು ಬರುತ್ತಿವೆ. ಈ ಪತ್ರಿಕೆಗಳ ಸಂಕ್ಷಿಪ್ತ ವಿಶ್ಲೇಷಣೆಯನ್ನು ಈ ಕೆಳಕಂಡಂತೆ ನಿರೂಪಿಸಲಾಗಿದೆ.

**ಕುಂದಪ್ರಭ:** (1991) ಕುಂದಾಪುರದ ಭಂಡಾರ್‌ಕಾರ್ಸ್ ಕಾಲೇಜಿನ ಪ್ರಾಕ್ತನ ವಿದ್ಯಾರ್ಥಿಯಾದ ಯು.ಎಸ್. ಶೆಣೈ ಎಂಬವರು ತಮ್ಮ ವ್ಯಕ್ತಿಗತ ಪ್ರಯತ್ನದಿಂದ ಈ ಪತ್ರಿಕೆಯನ್ನು 1991 ರಿಂದ ಮುನ್ನಡೆಸಿಕೊಂಡು ಬರುತ್ತಿದ್ದಾರೆ. ಆರಂಭದಲ್ಲಿ ಪತ್ರಿಕೆಯ ಅಂಕಣಕ್ಕಾಗಿ, ಸುದ್ದಿಗಾಗಿ, ಜಾಹೀರಾತಿಗಾಗಿ ಸಾಕಷ್ಟು ಪರಿಶ್ರಮಪಟ್ಟು, ಕೊನೆಗೂ ತನ್ನದೇ ಆದ ವ್ಯೂಹರಚನೆಯಲ್ಲಿ ಯಶಸ್ವಿಯಾದ ಪ್ರಯುಕ್ತ ಈ ಪತ್ರಿಕೆ ಈಗಾಗಲೇ 25 ವರ್ಷಗಳನ್ನು ಪೂರೈಸಿದೆ. ಸಾಹಿತ್ಯಕ ಸುದ್ದಿ ಹಾಗೂ ಸಾಮಾಜಿಕ ಸುದ್ದಿಗಳನ್ನು ಸಮಾನವಾಗಿ ಮೇಳೈಸಿಕೊಂಡ ಯಾವುದೇ ಇತರ ಪತ್ರಿಕೆ 1990ರ ಹೊತ್ತಿಗೆ ಕುಂದಾಪುರ ತಾಲೂಕು ಪರಿಸರದಲ್ಲಿ ಇಲ್ಲದಿರುವ ಕೊರತೆಯನ್ನು ಕಂಡು ಯು.ಎಸ್. ಶೆಣೈಯವರು ಈ ಕೊರತೆಯನ್ನು ತಮ್ಮ ಪತ್ರಿಕೆಯ ಮೂಲಕ ತುಂಬುವ ಪ್ರಯತ್ನವನ್ನು ಮಾಡಿದರು. ಪತ್ರಿಕೆಯ ಅಂಕಣ ಬರಹವನ್ನು ಪರಿಸರದ ಸಾಹಿತಿ–ಉಪನ್ಯಾಸಕ–ವಿದ್ವಾಂಸರಾದ ಕೋ. ಶಿವಾನಂದ ಕಾರಂತ ಇವರು ನಿರ್ವಹಿಸುತ್ತಿದ್ದು, ಸಾಹಿತ್ಯ ವಿಭಾಗದಲ್ಲಿ ವಿಚಾರ–ವಿಹಾರ, ಚಿತ್ರಪ್ರಭಾ, ರಂಗಸ್ಥಳ ಎಂಬ ಉಪಶೀರ್ಷಿಕೆಯ ಅಡಿಯಲ್ಲಿ ಸಾಹಿತ್ಯ–ಲಲಿತಕಲೆಗಳ ವಿಷಯಗಳನ್ನು ಸಂಕ್ಷಿಪ್ತವಾಗಿ ನಿರೂಪಿಸುತ್ತಿದ್ದಾರೆ. ವಾರ್ಷಿಕ ವಿಶೇಷ ಸಂಚಿಕೆಯಲ್ಲಿ ಮೇಲ್ಕಂಡ ಎಲ್ಲ ಶೀರ್ಷಿಕೆಗಳನ್ನು ಇನ್ನಷ್ಟು ವಿಸ್ತರಿಸಿ, ಮುದ್ರಣವನ್ನು ಆಕರ್ಷಣಗೊಳಿಸಿ, ಪತ್ರಿಕೆಯ ಪ್ರಸರಣ ಸಂಖ್ಯೆಯನ್ನು ಹೆಚ್ಚುವಂತೆ ನೋಡಿಕೊಳ್ಳುತ್ತಿದ್ದಾರೆ.

23ನೇ ವಾರ್ಷಿಕ ವಿಶೇಷ ಸಂಚಿಕೆಯಲ್ಲಿ 'ಕನ್ನಡ ಮಾಧ್ಯಮ' ಎಂಬ ಶೀರ್ಷಿಕೆಯಲ್ಲಿ ಕಾಲೋಚಿತವಾದ ವರ್ತಮಾನದ ಕನ್ನಡದ ಸ್ಥಿತಿಯನ್ನು ಕುರಿತು, ಜಯವಂತ ಪೈಯವರು ಲೇಖನವನ್ನು ನೀಡಿರುತ್ತಾರೆ. ಪತ್ರಿಕೆ ಮಾಧ್ಯಮ ಎಂಬ ಶೀರ್ಷಿಕೆಯಲ್ಲಿ .... "ಪತ್ರಿಕಾಮಾಧ್ಯಮಕ್ಕೂ ಪುಸ್ತಕಮಾಧ್ಯಮಕ್ಕೂ ನಡುವೆ ಸಂಬಂಧವಿದ್ದು, ಕನ್ನಡ ಪುಸ್ತಕ ಓದುವ ಹವ್ಯಾಸ ಜನರಲ್ಲಿ ಉಳಿಸುವಲ್ಲಿ, ಪತ್ರಿಕಾಮಾಧ್ಯಮದ ಪಾತ್ರ ವಿಶೇಷವಾದುದು. ಪುಸ್ತಕದ ಸಾದರ ಸ್ವೀಕಾರ, ವಿಮರ್ಶೆ, ಲೇಖನಗಳ ಪ್ರಕಟಣೆ,

ಚರ್ಚೆ, ಲೇಖಕರ ಪರಿಚಯ ಮುಂತಾದವುಗಳ ಮೂಲಕ ಕನ್ನಡ ಸಾಹಿತ್ಯ ಅಭಿವೃದ್ಧಿಗೆ ಪತ್ರಿಕಾಮಾಧ್ಯಮ ವಿಶೇಷ ಕೊಡುಗೆ ನೀಡುತ್ತದೆ"(ಸಂ: ಶೆಣೈ ಯು.ಎಸ್., 2014, ಪು–62) ಎನ್ನುವುದನ್ನು ಕಂಡುಕೊಂಡಿದ್ದಾರೆ.

**ಯಶಸ್ವೀ ವ್ಯೂಹ ರಚನೆ:** ಯಶಸ್ವೀ ವ್ಯೂಹ ರಚನೆಯು ಕುಂದಪ್ರಭ ಪತ್ರಿಕೆಯ ಯಶಸ್ಸಿನ ಗುಟ್ಟು. ಪದವೀಧರ ವಿದ್ಯಾರ್ಥಿಯಾಗಿ ತಮ್ಮಲ್ಲಿರುವ ಅಲ್ಪ ಬಂಡವಾಳದೊಂದಿಗೆ ಹಾಗೂ ಕುಂದಾಪುರದ ಆಸುಪಾಸಿನ ವಿದ್ಯಮಾನದ ಕಿರು ಮಾಹಿತಿಯೊಂದಿಗೆ 1991ರಲ್ಲಿ ಈ ಪತ್ರಿಕೆಯನ್ನು ಆರಂಭಿಸಿದರು. ಕೇವಲ ಜಾಹೀರಾತನ್ನು ಮಾತ್ರ ನೆಚ್ಚಿಕೊಳ್ಳದೆ ಪತ್ರಿಕೆಯನ್ನು ಬೆಳೆಸುವುದಕ್ಕೆ ಮತ್ತು ಉಳಿಸುವುದಕ್ಕೆ ಬೇಕಾದ ವ್ಯವಸ್ಥಿತವಾದ ವ್ಯೂಹವನ್ನು ವರ್ಷದಿಂದ ವರ್ಷಕ್ಕೆ ಹೆಚ್ಚಿಸುತ್ತಲೇ ಹೋದರು. ಅದುವೇ–ಕುಂದಪ್ರಭ ಪ್ರಶಸ್ತಿ, ಸಮಾಜದಲ್ಲಿರುವ ಪ್ರತಿಭಾವಂತರಿಗೆ ನಗದು ಮೂಲಕ ಪ್ರೋತ್ಸಾಹ ನೀಡುವುದು, ಪತ್ರಿಕಾ ವರದಿಯ ಕುರಿತಂತೆ ವಿಶೇಷ ತರಬೇತಿ ಶಿಬಿರಗಳನ್ನು ಕಾಲೇಜಿನಲ್ಲಿ ಆಯೋಜಿಸುವುದು, ವಿದ್ಯಾರ್ಥಿಗಳಿಗಾಗಿಯೇ ವಿಶೇಷ ಸಾಹಿತ್ಯ–ಸಾಂಸ್ಕೃತಿಕ ಸ್ಪರ್ಧೆಗಳನ್ನು ಏರ್ಪಡಿಸಿ, ವಿಜೇತರಿಗೆ ಬಹುಮಾನವನ್ನು ನೀಡುವುದು. ಹೀಗೆ ಕುಂದಾಪುರ ಪರಿಸರದಲ್ಲಿ ಪತ್ರಿಕೆಯ ಬಗ್ಗೆ ಜನರಲ್ಲಿ ನೆನಪಿನಲ್ಲುಳಿಯುವ ಮತ್ತು ಸ್ಮರಿಸುವ ಕಾರ್ಯಕ್ರಮಗಳನ್ನು ಆಯೋಜಿಸುವ ಮೂಲಕ ಪತ್ರಿಕೆಯ ಓದುಗರ ಸಂಖ್ಯೆಯನ್ನು ಹೆಚ್ಚುವಂತೆ ನೋಡಿಕೊಂಡರು. ಈ ಎಲ್ಲ ಪ್ರಯತ್ನಗಳ ಕಾರಣದಿಂದಾಗಿ ಕುಂದಪ್ರಭವು 25 ವರ್ಷಗಳನ್ನು ಪೂರೈಸುವುದಕ್ಕೆ ಸಾಧ್ಯವಾಗಿದೆ.

**ಜನಪ್ರತಿನಿಧಿ:** (1996) ಕುಂದಾಪುರದಲ್ಲಿ 'ಕುಂದಪ್ರಭ' ಎಂಬ ಪತ್ರಿಕೆ ಯಶಸ್ವಿಯಾಗಿ ಮುನ್ನಡೆಯುತ್ತಿರುವಾಗಲೇ 1996 ಸೆಪ್ಟೆಂಬರ್ ತಿಂಗಳಲ್ಲಿ ಸುಬ್ರಹ್ಮಣ್ಯ ಪಡುಕೋಣೆ ಎಂಬುವವರ ಸಂಪಾದಕತ್ವದಲ್ಲಿ ಈ ಪತ್ರಿಕೆ ಆರಂಭಗೂಂಡಿತು. "ಕುಂದಾಪುರದಲ್ಲಿ ಈಗಾಗಲೇ ಒಂದು ಪತ್ರಿಕೆ ಇದ್ದರೂ, ಸ್ಥಳೀಯವಾಗಿ ಮತ್ತೊಂದು ಪತ್ರಿಕೆಯ ಅಗತ್ಯತೆ ಮನಗಂಡು ವಿಭಿನ್ನ ಶೈಲಿಯಲ್ಲಿ ಪತ್ರಿಕೆ ಮಾಡಬೇಕೆಂಬ ಮನಸ್ಸಿನಿಂದ ಈ ಪತ್ರಿಕೆ ಆರಂಭಗೊಂಡಿತು... ಈ ಪತ್ರಿಕೆಯಲ್ಲಿ ಸ್ಥಳೀಯ ಸುದ್ದಿಗಳೊಂದಿಗೆ ಸಮಾಜದಲ್ಲಿ ನಡೆಯತಕ್ಕ ಅವ್ಯವಸ್ಥೆ, ಗೋಲ್‌ಮಾಲ್ ಗುಳುಂಗಳು, ಸಾಮಾಜಿಕ ಪಿಡುಗು ಮುಂತಾದ ಸಮಸ್ಯೆಗಳನ್ನು ಎತ್ತಿ ಹಿಡಿಯುವುದರೊಂದಿಗೆ ಆದರ್ಶ ಸಮಾಜದ ಕನಸೇ ಈ ಪತ್ರಿಕೆಯ ಕನಸು..."(ಸಂ: ನರಸಿಂಹಮೂರ್ತಿ ಎಚ್.ವಿ., ಡಾ. 1997–98, ಪು–85) ಎಂದು ಸಂಪಾದಕರು ಪತ್ರಿಕೆಯ ಉದ್ದೇಶವನ್ನು ಹೇಳಿಕೊಂಡಿದ್ದಾರೆ. ಈ ಓದುಗರೇ 20 ವರ್ಷದಿಂದ ಪತ್ರಿಕೆಯನ್ನು ಬೆಳೆಸಿದ್ದಾರೆ. ಎಸ್. ಜನಾರ್ದನ ಮರವಂತೆ ಇವರ ಅಂಕಣ ಬರಹಗಳು, ವ್ಯಂಗ್ಯಚಿತ್ರಕ್ಕಾಗಿ ಕೆ.ಜಿ. ಹೆಬ್ಬಾರ್, ಸಿನೆಮಾ ವರದಿಗಾಗಿ ವಿಜಯಶ್ರೀ ಗಂಗೊಳ್ಳಿ ಇವರು ಈ ಪತ್ರಿಕೆಯ ಮೂಲಕ ದುಡಿಯುತ್ತಿದ್ದು, ಲಲಿತ ಕಲೆಗಳಿಗೂ ಪತ್ರಿಕೆಯ ಪುಟಗಳಲ್ಲಿ ಸ್ಥಳ ಸಿಗುವುದರೊಂದಿಗೆ ಎಲ್ಲ ವರ್ಗದ ಓದುಗರ ಅಭಿರುಚಿಯನ್ನು ಮುಟ್ಟುವ ಯತ್ನದಲ್ಲಿ ಜನಪ್ರತಿನಿಧಿಯ ಸಂಪಾದಕರು ಪತ್ರಿಕೋದ್ಯಮದಲ್ಲಿ ಯಶಸ್ಸನ್ನು ಕಂಡಿದ್ದಾರೆ.

**ಜನಬಿಂಬ: 1996**ರಲ್ಲಿ ರಾಧಾಕೃಷ್ಣ ತೋಡಿಕಾನ ಎಂಬುವವರ ಸಂಪಾದಕತ್ವದಲ್ಲಿ ಈ ವಾರಪತ್ರಿಕೆಯು ಪ್ರಕಟಗೊಳ್ಳುವುದಕ್ಕೆ ತೊಡಗಿ ಈ ತನಕವೂ ಕ್ಲಪ್ತ ಸಮಯಕ್ಕೆ ಪ್ರಕಟಗೊಂಡು ಓದುಗರ ಕೈ ಸೇರುತ್ತಿದೆ. ಬೆಳ್ತಂಗಡಿಯ 'ಸುದ್ದಿ ಬಿಡುಗಡೆ' ಎಂಬ ಪತ್ರಿಕೆಯಲ್ಲಿ ದುಡಿದು, ಅನುಭವ ಇದ್ದ ರಾಧಾಕೃಷ್ಣ ಅವರು ಕಾರ್ಕಳದಲ್ಲಿ ಈ ಪತ್ರಿಕೆಯನ್ನು ತನ್ನದೇ ಮಿತಿ ಮತ್ತು ಕಲ್ಪನೆಯಲ್ಲಿ ಪ್ರಕಟಿಸುವುದಕ್ಕೆ ತೊಡಗಿದರು. ಕೇವಲ ಸಾಹಿತ್ಯ ಸುದ್ದಿ, ಸಾಂಸ್ಕೃತಿಕ ಸುದ್ದಿಗಳನ್ನಷ್ಟೇ ಪ್ರಕಟಿಸುವುದಲ್ಲದೇ

ಸಾಹಿತ್ಯ ಬರಹಗಳಿಗಾಗಿ ಪತ್ರಿಕೆಯ ಪುಟಗಳನ್ನು ಮೀಸಲಿಡುವ ಪರಿಪಾಠಕ್ಕೆ ಮುಂದಾಗಲಿಲ್ಲ. ಆದರೆ ವರ್ಷಂಪ್ರತಿ ಹೊರತರುವ ದೀಪಾವಳಿ ಸಂಚಿಕೆಯನ್ನು ವಿಶೇಷ ಪುಟಗಳೊಂದಿಗೆ ಹೊರತರುತ್ತಾ ಕಾರ್ಕಳ ಪರಿಸರದ ಯುವ ಬರಹಗಾರ, ಲೇಖಕರ ವಿದ್ಯಾರ್ಥಿಗಳ ಬರಹಗಳಿಗೆ (ಕಥೆ–ಕವನ–ವಿಮರ್ಶೆ–ಪ್ರಬಂಧ) ಅವಕಾಶ ನೀಡಿರುತ್ತಾರೆ. ನಗರ ಪ್ರದೇಶದಿಂದ ಪ್ರಕಟವಾಗುವ ಹೆಸರಾಂತ ಪತ್ರಿಕೆಗಳಲ್ಲಿ ಸ್ಥಳೀಯ ಗ್ರಾಮೀಣ ಸುದ್ದಿಗಳ ಪ್ರಕಟನೆಗೆ ಅವಕಾಶ ದೊರೆಯದ ಪ್ರಯುಕ್ತ (ದೊರೆತರೂ ಸರಿಯಾದ ಸಮಯಕ್ಕೆ ಪ್ರಕಟಿಸರಿದುರುವ ಕಾರಣ) ಗ್ರಾಮೀಣ ಪ್ರದೇಶದ ಸುದ್ದಿಗಳನ್ನು ತತ್‌ಕ್ಷಣಕ್ಕೆ ಪ್ರಕಟಿಸುವ ಮೂಲಕ, ಸ್ಥಳೀಯ ಸುದ್ದಿಗಳನ್ನು ತಾಲೂಕು/ಜಿಲ್ಲಾ ಮಟ್ಟದಲ್ಲಿ ಪ್ರಸಾರ ಮಾಡುವ ಉದ್ದೇಶದಿಂದ ಈ ಪತ್ರಿಕೆಯನ್ನು ಆರಂಭಿಸಿರುವುದಾಗಿ ಸಂಪಾದಕರಾದ ರಾಧಾಕೃಷ್ಣ ಅವರು ಸಂದರ್ಶನದ ಸಂದರ್ಭದಲ್ಲಿ ಹೇಳಿಕೊಂಡಿದ್ದಾರೆ. ಸಂಪಾದಕೀಯ ಇಲ್ಲದೇ, ಅಂಕಣ ಬರಹಗಳಿಗೂ ಅವಕಾಶವಿಲ್ಲದೇ, ಜಾಹೀರಾತಿಗೂ ವಿಶೇಷ ಮೊರೆ ಹೋಗದೇ (ಸರಕಾರಿ ಜಾಹೀರಾತುಗಳೇ ಇಲ್ಲದೇ)ಕೇವಲ ಸುದ್ದಿಯನ್ನು ಪ್ರಕಟಿಸುವ ಪ್ರಾಮಾಣಿಕ ಶ್ರಮವನ್ನು 20 ವರ್ಷದಿಂದ ನಿರ್ವಹಿಸಿಕೊಂಡು ಬಂದಿದ್ದಾರೆ. ಸಾಹಿತ್ಯದ ಬರಹಗಳು ಸಂಚಿಕೆಯಲ್ಲಿ ಸ್ಥಳ ಪಡೆಯದೇ ಹೋದರೂ ಸಾಹಿತ್ಯದ ಸುದ್ದಿಗಳನ್ನು (ಆಳ್ವಾಸ್ ನುಡಿಸಿರಿ, ಕನ್ನಡ ಸಾಹಿತ್ಯ ಜಿಲ್ಲಾ ಮತ್ತು ತಾಲೂಕು ಸಮ್ಮೇಳನದ ವರದಿ, ಕನ್ನಡ ಸಾಹಿತ್ಯದಲ್ಲಿ ವಿಶೇಷ ಪ್ರಶಸ್ತಿ ಮತ್ತು ಬಹುಮಾನ ಪಡೆದ ವ್ಯಕ್ತಿ ಮತ್ತು ಸಂಸ್ಥೆಗಳ ವಿವರ, ಇತ್ಯಾದಿ, ಇತ್ಯಾದಿ ಸುದ್ದಿಗಳನ್ನು) ವಿಶೇಷವಾಗಿ ಪರಿಗಣಿಸಿ, ಸುದ್ದಿ ಮಾಡುತ್ತಿದ್ದೇವೆ ಎಂದು ತಮ್ಮ ಸಾಹಿತ್ಯದ ಅಭಿಮಾನವನ್ನು ಹೇಳಿಕೊಳ್ಳುತ್ತಾರೆ.

**ಕೃಷಿ ಬಿಂಬ:** 'ರಾಧಾಕೃಷ್ಣ ತೋಡಿಕಾನ' ಇವರ ಸಂಪಾದಕತ್ವದಿಂದಲೇ ಕ್ರಿ.ಶ. 2000 ದಿಂದ ಜನಬಿಂಬ ಪ್ರಕಾಶನದಿಂದ ಈ ಪತ್ರಿಕೆಯು ಮಾಸಿಕವಾಗಿ ಪ್ರಕಟಗೊಳ್ಳುತ್ತಿದೆ. ಸಂಪಾದಕೀಯ ವಿಭಾಗವಿರುವ ಈ ಪತ್ರಿಕೆಯು ರಾಜ್ಯ ಮಟ್ಟದಲ್ಲಿ ಪ್ರಸರಣಗೊಳ್ಳುವ ಪತ್ರಿಕೆಯೆನ್ನುವುದು ಉಲ್ಲೇಖಿಸಬೇಕಾದ ವಿಚಾರ. ರೈತರಿಗೂ ಕೃಷಿ ಇಲಾಖೆಗೂ ಒಂದು ರೀತಿಯ ಕೊಂಡಿಯೆಂಬಂತೆ ಪತ್ರಿಕೆಯು ಕೃಷಿ ಸಂಬಂಧಿ ಮಾಹಿತಿಗಳನ್ನು 16 ವರ್ಷಗಳಿಂದ ನೀಡುತ್ತಾ ಬಂದಿದೆ. ಕೃಷಿ ಸುದ್ದಿಗೇ ಹೆಚ್ಚಿನ ಪ್ರಾಮುಖ್ಯವನ್ನು ನೀಡುವ ಕಾರಣ ಮತ್ತು ಜನಬಿಂಬ ಪ್ರಕಾಶನದ ವತಿಯಿಂದಲೇ ಪ್ರಕಟಗೊಳ್ಳುವ ಪತ್ರಿಕೆ ಎಂಬ ಕಾರಣಕ್ಕಾಗಿ ಸುದ್ದಿ ಪತ್ರಿಕೆಯ ಶೀರ್ಷಿಕೆಯಡಿಯಲ್ಲಿಯೇ ಈ ಪತ್ರಿಕೆಯ ಕುರಿತು ಸಂಕ್ಷಿಪ್ತವಾಗಿ ವಿಶ್ಲೇಷಿಸಲಾಗಿದೆ.

**ಉಡುಪಿ ಮಿತ್ರ:** (2000) ಚಿತ್ತೂರು ಪ್ರಭಾಕರ ಆಚಾರ್ಯ ಎಂಬವರು ಈ ಪತ್ರಿಕೆಯ ಮುಖ್ಯ ಸಂಪಾದಕರಾಗಿದ್ದು, ಪತ್ರಿಕೆಯಲ್ಲಿ ದಾಖಲಾದಂತೆ ಪತ್ರಿಕೆಯ ಪ್ರಕಟನಾ ಸ್ಥಳ 'ಬ್ರಹ್ಮಾವರ' ಎಂದು ತಿಳಿದುಬರುತ್ತದೆ. ಪತ್ರಿಕೆಯ ಹೆಸರು ಉಡುಪಿ ಮಿತ್ರ ಎಂದಿದ್ದರೂ, ಪತ್ರಿಕೆಯು ಬ್ರಹ್ಮಾವರ–ಕುಂದಾಪುರದ ಸುದ್ದಿಗಳಿಗೆ ಹೆಚ್ಚು ಪ್ರಾಶಸ್ತ್ಯ ನೀಡಿದಂತೆ ಕಂಡುಬರುತ್ತದೆ. 15 ವರ್ಷಗಳಿಂದ ಪತ್ರಿಕೆ ನಿರಂತರವಾಗಿ ಪ್ರಕಟಗೊಳ್ಳುತ್ತಿದ್ದು, ಪತ್ರಿಕಾ ನಿರ್ವಹಣೆಗೆ ಬೇಕಾದ ಅಗತ್ಯ ಖರ್ಚುಗಳನ್ನು ಜಾಹೀರಾತಿನಿಂದಲೇ ಭರಿಸುತ್ತಿದ್ದರೆಂಬುದಕ್ಕೆ ಪತ್ರಿಕೆಯಲ್ಲಿ ಮುದ್ರಣಗೊಂಡ ಜಾಹೀರಾತಿನಿಂದ ತಿಳಿಯಬಹುದಾಗಿದೆ. ಸಾಹಿತ್ಯ ಬರಹಗಳಿಗೆ ಅವಕಾಶವನ್ನು ಕೊಡದೆ, (ಸಂಪಾದಕೀಯ ಇಲ್ಲದೆ, ಅಂಕಣ ಬರಹವೂ ಇಲ್ಲದೇ) ಸ್ಪರ್ಧಾತ್ಮಕ ಯುಗದ ಪರಸ್ಪರದ ನಡುವೆಯೂ, 15 ವರ್ಷಗಳಿಂದ ಉಳಿದು ಬಂದಿದೆ ಎನ್ನುವುದಕ್ಕಾಗಿ ಈ ಕನ್ನಡ ಪತ್ರಿಕೆಯನ್ನು ಇಲ್ಲಿ ಉಲ್ಲೇಖಿಸಬೇಕಾಗಿದೆ.

2) **ಶಿಕ್ಷಣ–ಕಲೆ– ಸಾಂಸ್ಕೃತಿಕ– ಸಾಹಿತ್ಯಕ, ಸಂಶೋಧನಾ ಪತ್ರಿಕೆಗಳು:**

**ಉಸಿರು:** ಕೋಟ ವಿವೇಕ ಪ್ರೌಢಶಾಲೆಯ ಸಹಾಯಕ ಅಧ್ಯಾಪಕರಾದ ಶ್ರೀ ನರೇಂದ್ರ ಕುಮಾರ್ ಎಂಬುವವರು ಈ ಪತ್ರಿಕೆಯ ಮುಖ್ಯ ಸಂಪಾದಕರೂ, ವ್ಯವಸ್ಥಾಪಕರೂ ಆಗಿದ್ದಾರೆ. 1997 ರಿಂದ ಚಾತುರ್ಮಾಸ ಪತ್ರಿಕೆಯಾಗಿ ನಿರಂತರವಾಗಿ 2000 ತನಕ ಪ್ರಕಟಿಸುತ್ತಾ ಬಂದಿದ್ದಾರೆ. ಕ್ರಿ.ಶ. 2000 ದಿಂದ ಅನಿಯತಕಾಲಿಕವಾಗಿ ಹೊರಬರುತ್ತಿದ್ದು, ಪ್ರಸರಣಕ್ಕಾಗಿ ಯಾವುದೇ ವ್ಯೂಹರಚನೆಗೆ ಮುಂದಾಗದಿರುವ ಪ್ರಯುಕ್ತ, ಕಾಲ–ಕಾಲಕ್ಕೆ ಕ್ಲಪ್ತ ಸಮಯದಲ್ಲಿ ಪತ್ರಿಕೆಯನ್ನು ಪ್ರಕಟಿಸುವುದಕ್ಕೆ ಸಾಧ್ಯವಾಗುತ್ತಿಲ್ಲ ಎಂದು ಸಂದರ್ಶನದ ಸಂದರ್ಭದಲ್ಲಿ ತಮ್ಮ ಅಭಿಪ್ರಾಯವನ್ನು ವ್ಯಕ್ತಪಡಿಸಿದ್ದಾರೆ.

**ಭಾವನಾ:** ಕುಂದಾಪುರ ಕನ್ನಡ ಸಂಘದ ಅಧ್ಯಕ್ಷರಾದ ಎ.ಎಸ್.ಎನ್. ಹೆಬ್ಬಾರ್ ಅವರ ನೇತೃತ್ವದಲ್ಲಿ ಸಂಘದ ಇತರ ಪದಾಧಿಕಾರಿಗಳ ಸಹಕಾರದೊಂದಿಗೆ 1993ರಲ್ಲಿ ಕನ್ನಡ ಸಂಘದ ವತಿಯಿಂದ ಈ ಪತ್ರಿಕೆಯನ್ನು ಅನಿಯತಕಾಲಿಕ ನೆಲೆಯಲ್ಲಿ ಪ್ರಕಟಿಸಿರುತ್ತಾರೆ. ಈ ಪತ್ರಿಕೆಯ ಸಹಸಂಪಾದಕರಾಗಿ ಕನ್ನಡ ಸಂಘದ ಪದಾಧಿಕಾರಿಗಳಾದ ಕನರಾಡಿ ವಾದಿರಾಜ ಭಟ್ಟ ಅವರು ಪತ್ರಿಕೆಯ ಸಾಹಿತ್ಯದ ಬರಹಗಳನ್ನು ಸಂಪಾದಿಸಿ, ನಿರ್ವಾಹಕ ಸಂಪಾದಕರಾಗಿಯೂ ಕರ್ತವ್ಯ ನಿರ್ವಹಿಸಿದ್ದರು. ಈ ತನಕ ಕೇವಲ ಮೂರು ಪ್ರಕಟನೆಯನ್ನಷ್ಟೇ ಹೊರತಂದಿರುತ್ತಾರೆ. ತಮ್ಮ ಪತ್ರಿಕೆಯನ್ನು ಹೊಸ ವಿನ್ಯಾಸದಿಂದ, ಹೊಸ ಸಾಹಿತ್ಯ ಹೂರಣದಿಂದ ಹೊರತರುವ ಯೋಜನೆ ಇದೆ ಎಂದು ಪತ್ರಿಕೆಯ ಕುರಿತು ಭರವಸೆಯ ಅಭಿಪ್ರಾಯಗಳನ್ನು ಸಂಪಾದಕರಾದ **ಎ.ಎಸ್.ಎನ್.ಹೆಬ್ಬಾರ್** ಮತ್ತು ಸಹಸಂಪಾದಕರಾದ **ಕನರಾಡಿ ವಾದಿರಾಜ ಭಟ್ಟ** ಅವರು ವ್ಯಕ್ತಪಡಿಸುತ್ತಾರೆ.

**ರಜತರಂಗ: (1987)** ಜಯಂತಿ ಎಂ. ಆಚಾರ್ಯ ಇವರು ವ್ಯವಸ್ಥಾಪನಾ ಸಂಪಾದಕರಾಗಿದ್ದ ಈ ಪತ್ರಿಕೆಯು 1987 ನವೆಂಬರ್ 1ರಂದು (ಕರ್ನಾಟಕ ರಾಜ್ಯೋದಯ ದಿನ) ಪ್ರಥಮ ಸಂಚಿಕೆಯಾಗಿ ಪ್ರಕಟಗೊಂಡಿತು. ಪತ್ರಿಕೆಯ ಸಲಹೆಗಾರರಾಗಿ ಉದ್ಯಾವರ ಮಾಧವ ಆಚಾರ್ಯರು ಪ್ರಕಟಣೆಯ ಉಸ್ತುವಾರಿಯನ್ನು ನಿರ್ವಹಿಸಿದ್ದರು. ತಮ್ಮ 'ಹೊಸಹೆಜ್ಜೆ–ಗೆಜ್ಜೆ' ಎಂಬ ಶೀರ್ಷಿಕೆಯ ಸಂಪಾದಕೀಯದಲ್ಲಿ ಪತ್ರಿಕೆಯ ನಿಲುವನ್ನು ಹೀಗೆ ಹೇಳಿಕೊಂಡಿದ್ದಾರೆ. 'ರಜತರಂಗ' ಮುಖ್ಯವಾಗಿ ಕಲಾಪ್ರಪಂಚದ ಹಲವು ಸಾಧ್ಯತೆ–ಸಾಧನೆಗಳ ಬಗೆಗೆ ವಿವೇಚನೆಯ ನೆಲೆಯಲ್ಲಿ ಸಾಗಲು ಹೊರಟಿರುವ ಒಂದು ಪ್ರಯತ್ನ. ನೆನಪಿನ ಸಂಚಿಕೆಗಳಾಗಿ, ಅನಿಯತಕಾಲಿಕವಾಗಿ ಖಾಸಗೀ ಪ್ರಸಾರಕ್ಕಾಗಿ ಪ್ರಕಟಗೊಳ್ಳುತ್ತಿರುವ ಈ ಪುರವಣಿಯ ಸ್ಪಷ್ಟ ರೂಪುರೇಖೆ ಚೊಚ್ಚಲ ಸಂಚಿಕೆ ಬಿಂಬಿಸಲಾರದು"(ಸಂ: ಜಯಂತಿ ಎಂ. ಆಚಾರ್ಯ, 1987, ಸಂಪುಟ–1, ಸಂಚಿಕೆ–1) ಎಂಬ ತಮ್ಮ ಅಭಿಪ್ರಾಯವನ್ನು ಓದುಗರಲ್ಲಿ ನೇರವಾಗಿ ಹೇಳಿಕೊಂಡಿದ್ದಾರೆ.

ಅವಿಭಜಿತ ದ.ಕ. ಜಿಲ್ಲೆಯ ರಂಗ ಚಟುವಟಿಕೆಗಳ ವರದಿಯನ್ನು ನೀಡುವುದರೊಂದಿಗೆ ರಂಗಕಲೆಗಳಲ್ಲಿ ತೊಡಗಿಕೊಂಡ ಸಹೃದಯರ ಲೇಖನಗಳು, ಎರಡನೇ ಸಂಚಿಕೆಯಲ್ಲಿ (ಜನವರಿ 1988)ರಲ್ಲಿ ಪ್ರಕಟಗೊಂಡಿವೆ. ಯಕ್ಷಗಾನ ಮತ್ತು ನಾಟಕ ಎಂಬ ಎರಡು ಭಿನ್ನ ರಂಗಚಟುವಟಿಕೆಗಳಿಗೂ ಸಂಚಿಕೆಯಲ್ಲಿ ಸಮಾನ ಪ್ರಾಶಸ್ತ್ಯ ನೀಡಿರುವುದನ್ನು ಕಾಣಬಹುದಾಗಿದೆ. ಕೇವಲ ಸಮಕಾಲೀನ ರಂಗಕರ್ಮಿಗಳ ಸಾಹಸವನ್ನಷ್ಟೇ ದಾಖಲಿಸಿದ್ದಲ್ಲದೇ ಮುಂದುವರಿದ ಸಂಚಿಕೆಯಲ್ಲಿ ಅವಿಭಜಿತ ದ.ಕ. ಜಿಲ್ಲೆಯಲ್ಲಿ ರಂಗ ಚಟುವಟಿಕೆಗಳಲ್ಲಿ ದುಡಿದ ಹಿರಿಯ ತಲೆಮಾರಿಗೆ ಸೇರಿದವರ ರಂಗ ಸಾಧನೆಯನ್ನು ದಾಖಲಿಸಿರುವುದು ಎರಡನೇ

ಸಂಚಿಕೆಯಲ್ಲಿ ಕಂಡುಬಂದಿದೆ. ಫೆಬ್ರುವರಿ 1989ರಲ್ಲಿ ನಾಲ್ಕನೇ ಸಂಚಿಕೆಯು ಪ್ರಕಟಗೊಂಡು, ಇದ್ದಕ್ಕಿದ್ದಂತೆ ಸಂಚಿಕೆಯು ತೆರೆಮರೆಗೆ ಸರಿಯಿತು. ಸಂಚಿಕೆಯಿಂದ ಸಂಚಿಕೆಗೆ ರಂಗಸಂಚಿಕೆಯ ಕಲಾತ್ಮಕ ಬರಹಗಳು ಪ್ರಕಟಗೊಂಡಿದ್ದರೂ ನಾಲ್ಕನೆಯ ಸಂಚಿಕೆಯೇ ಕೊನೆಯ ಸಂಚಿಕೆಯಾಗಲು ಕೂಡಿಬಂದ ಕಾರಣಗಳೇನು? ಎಂಬ ಪ್ರಶ್ನೆಗೆ ಅದೇ ಸಂಚಿಕೆಯ ಕೊನೆಯ ಪುಟದ 'ನಿವೇದನೆ' ಎಂಬ ಶೀರ್ಷಿಕೆಯಲ್ಲಿ ಸೂಚ್ಯವಾದ ಉತ್ತರವು ಕಂಡುಬರುತ್ತದೆ.

**ರೂಪತಾರಾ: (1977)** ಮಣಿಪಾಲ ಪ್ರಕಾಶನ ಜಾಲದ ವತಿಯಿಂದ ಪ್ರಕಟಗೊಳ್ಳುವ ಈ ಪತ್ರಿಕೆಯು 40 ವರ್ಷಗಳಿಂದ ತನ್ನ ಪ್ರಕಟನೆಯನ್ನು ಪ್ರಾರಂಭಿಸಿತು. ಸಿನೇಮಾ ಜಗತ್ತಿನಲ್ಲಿ ಅಭಿನಯಿಸುವ ಕಲಾವಿದರ, ನಿರ್ದೇಶಕರ, ನಿರ್ಮಾಪಕರ, ಖಾಸಗೀ ಬದುಕಿನ ಮತ್ತು ವೃತ್ತಿ ಬದುಕಿನ ವಿವರಗಳನ್ನು ಸಂಗ್ರಹಿಸಿ ಪ್ರಕಟಿಸುವುದೇ ಈ ಪತ್ರಿಕೆಯ ಒಟ್ಟು ಸ್ವರೂಪವಾಗಿದೆ. ಕಲಾವಿದರ ಖಾಸಗೀ ಬದುಕಿನ ಮತ್ತು ವೃತ್ತಿ ಬದುಕಿನ ವಿವರಗಳಿಗಾಗಿ ಹಂಬಲಿಸುವುದು, ಕಲೆಯ ಬಗೆಗೆ ಆಸಕ್ತಿ ರೂಢಿಸಿಕೊಂಡ ಸಹೃದಯರ ಸಹಜ ಪ್ರವೃತ್ತಿಯಾಗಿವೆ. ಕಲಾಸಕ್ತರ ಅಥವಾ ಕಲಾಭಿಮಾನಿಗಳ ಈ ಹವ್ಯಾಸಕ್ಕೆ ಮುಖವಾಣಿಯಾಗಿ ಇಂತಹ ಪತ್ರಿಕೆಗಳು ಅಸ್ತಿತ್ವಕ್ಕೆ ಬರುತ್ತದೆ. ಕನ್ನಡದ ಮೊದಲ ಸಿನೇಮಾ ಪತ್ರಿಕೆ 'ಚಿತ್ರ ಸಮಾಚಾರ' (1936–45) ಎಂದು ಉಲ್ಲೇಖಿಸಬಹುದಾಗಿದೆ. ಮುಂಬೈಯ "ಬಾಬು ರಾವ್ ಪಟೇಲರ ಫಿಲ್ಮ್ ಇಂಡಿಯಾ ಸ್ಫೂರ್ತಿಯಿಂದ ಹುಟ್ಟಿದ ಈ ಪತ್ರಿಕೆಯ ಸಂಪಾದಕರು ಎಚ್. ಆರ್. ಕೃಷ್ಣಮೂರ್ತಿ, ಅನಂತರ ಬಂದದ್ದು ವಾಕ್‌ಚಿತ್ರ (1942–57), ಲಾವಣ್ಯ, ಮೇನಕಾ, ರೂಪಲೇಖಾ, ಚಿತ್ರಲೇಖಾ... ಹೀಗೆ ಪಟ್ಟಿ ಮುಂದುವರಿಯುತ್ತದೆ."(ಸಂ: ರಂಗನಾಥ ರಾವ್ ಎಸ್.ಜಿ., 2006, ಪು–182) ದೂರದರ್ಶನದ ವಿವಿಧ ವಾಹಿನಿಗಳು ನಿಯತವಾಗಿ ಇಂತಹ ಸುದ್ದಿಗಳನ್ನೇ ಹೆಚ್ಚು ಹೆಚ್ಚಾಗಿ ಪ್ರಕಟಿಸುತ್ತಾ ಬರುತ್ತಿರುವುದರಿಂದ ಇಂತಹ ಪತ್ರಿಕೆಗಳ ಬೇಡಿಕೆ ಕುಸಿಯುತ್ತಿರುವುದು ನಿಜ. ಬೇಡಿಕೆ ಕುಸಿಯುತ್ತಿರುವುದರಿಂದಲೇ ಮಣಿಪಾಲದಿಂದ ಪ್ರಕಟಗೊಳ್ಳುವ ರೂಪತಾರಾ ಪತ್ರಿಕೆಯ ಪ್ರತಿ ಎರಡು ಪುಟಗಳಿಗೊಂದರಂತೆ, ಪೂರ್ಣಪುಟವನ್ನು ವಿವಿಧ ಜಾಹೀರಾತುಗಳಿಗಾಗಿ ಮೀಸಲಿರಿಸುತ್ತಾ, ತಮ್ಮ ಪತ್ರಿಕೋದ್ಯಮವು ಆದಾಯ ಕಳೆದುಕೊಳ್ಳದಂತೆ ಸಂಪಾದಕರು ಎಚ್ಚರಿಕೆ ವಹಿಸುವುದನ್ನು ಈಗ ಗಮನಿಸಬಹುದಾಗಿದೆ.

**ತುಂತುರು: (1999)** ಇದು ಮಕ್ಕಳ ಮಾಸಪತ್ರಿಕೆ. ವಿಷಯ ಮಕ್ಕಳ ಮನಸ್ಸಿಗೆ–ಕಣ್ಣಿಗೆ– ಮುದಕೊಡುವ ಈ ಪತ್ರಿಕೆಯು ಮಕ್ಕಳಲ್ಲಿ ಸಾಹಿತ್ಯಾಸಕ್ತಿಯನ್ನು, ಸೃಜನಶೀಲತೆಯನ್ನು, ಸಹೃದಯತೆಯನ್ನು ಪೋಷಿಸುವಲ್ಲಿ ಪ್ರಮುಖ ಪಾತ್ರ ವಹಿಸುತ್ತದೆ. 'ಸಾಹಿತ್ಯಾಸಕ್ತಿ' ಎಂಬ ಓದುವ ಅಭಿರುಚಿ ಅಥವಾ ಕಥೆಯನ್ನು ಆಸ್ವಾದಿಸುವ ಮನಸ್ಥಿತಿಯು ಎಳವೆಯಿಂದಲೇ ಆರಂಭವಾದಲ್ಲಿ ಮುಂದೆ ಸಹೃದಯರಾಗಿ ಓದುವ ಆಸಕ್ತಿಯನ್ನು ಸೃಜನಶೀಲ ಚಟುವಟಿಕೆಗಳಲ್ಲಿ ತೊಡಗಿಕೊಳ್ಳುವಲ್ಲಿಯೂ ಮುಂದೆ ಬರುತ್ತದೆ. ಉಡುಪಿ ಜಿಲ್ಲೆಯಲ್ಲಿ ಮಕ್ಕಳ ಸಾಹಿತ್ಯ ಸಂಚಿಕೆಯೊಂದು ಮಾಸಿಕವಾಗಿ ಪ್ರಕಟವಾಗುತ್ತಿದೆ ಎನ್ನುವುದು ಸಂತಸದ ಸಂಗತಿ. ಈ ಪತ್ರಿಕೆಯು 'ಮಣಿಪಾಲ ಪ್ರಿಂಟರ್ಸ್ ಮತ್ತು ಪಬ್ಲಿಷರ್ಸ್' ವತಿಯಿಂದಲೇ ಹೊರಬರುತ್ತಿದೆ. 'ಬಾಲವನದಲ್ಲಿ ಕಾರಂತಜ್ಜ' ಎಂಬ ವಿಶೇಷ ಶೀರ್ಷಿಕೆಯ ಪುಟವನ್ನು ಇದೇ ಪ್ರಕಾಶನ ಸಂಸ್ಥೆಯು ಪ್ರಾರಂಭಿಸಿ, ಹೆಚ್ಚು ಯಶಸ್ಸನ್ನು ಪಡೆದ ಸಂಸ್ಥೆಯು ಕಾರಂತರ ನಿಧನಾನಂತರ ಮಕ್ಕಳ ಸಾಹಿತ್ಯಾಸಕ್ತಿ ಮತ್ತು ವಯಃಸಹಜ ಕುತೂಹಲಕ್ಕೆ ತಕ್ಕಂತೆ ಪತ್ರಿಕೆಯೊಂದರ ಅವಶ್ಯಕತೆಯನ್ನು

ಕಂಡುಕೊಂಡು ಈ ಪತ್ರಿಕೆಯನ್ನು 1999ರಲ್ಲಿ ಪ್ರಾರಂಭಿಸಿದರು. ಪ್ರಾಯೋಗಿಕ ಸಂಚಿಕೆ ನವೆಂಬರ್ 1999ರಲ್ಲಿ ಪ್ರಾರಂಭಿಸಿ, ಪ್ರಸರಣವನ್ನು 2000 ದಿಂದ ಆರಂಭಿಸಿದರು.

ಮಕ್ಕಳ ಮನಸ್ಸನ್ನು ಸಾಹಿತ್ಯದ ಓದಿನ ಕಡೆಗೆ ಪ್ರೀತಿಯಿಂದ ಕರೆತರುವ ಸಂಪಾದಕರ ಪ್ರಯತ್ನವು ಮೊದಲ ಸಂಚಿಕೆಯಲ್ಲಿ ಹೀಗೆ ಉಲ್ಲೇಖಿತಗೊಂಡಿದೆ–"ತುಂತುರು ಓದುಗರ ಬಳಗಕ್ಕೆ ನಿನಗೆ ಸ್ವಾಗತ, ನನ್ನ ಹೆಸರು ಸಂಧ್ಯಾ, ನಿನಗೆ ನಾನು ಸಂಧ್ಯಾ ಮಾಮಿ. ಇದು ನನ್ನ ನಿನ್ನ ಮೊದಲ ಮಾತುಕತೆ. ಇನ್ನು ಮುಂದೆ ಪ್ರತೀ ತಿಂಗಳು ಇದೇ ಅಂಕಣದಲ್ಲಿ ಭೇಟಿಯಾಗೋಣ ಆಗಬಹುದಲ್ಲವೇ? ನೀನು ಉದಯವಾಣಿ, ತರಂಗ, ತುಷಾರ, ರೂಪತಾರ ಎಂಬ ಪತ್ರಿಕೆಗಳನ್ನು ಓದಿರಬಹುದು ಅಲ್ಲವೇ? ಅದೇ ಪತ್ರಿಕಾ ಬಳಗ ನಿನ್ನಂಥ ಪುಟ್ಟ ಮಕ್ಕಳಿಗೆಂದೇ ಬಹುಕಾಲದ ತಯಾರಿಯಿಂದ ಸಿದ್ಧಪಡಿಸಿದ ಪತ್ರಿಕೆ ತುಂತುರು. ಮೊದಲನೆಯ ಈ ಸಂಚಿಕೆಯನ್ನು ಮಕ್ಕಳ ದಿನಾಚರಣೆಯ ದಿನ ಪ್ರಾಯೋಗಿಕವಾಗಿ ಬಿಡುಗಡೆ ಮಾಡಿದ್ದೇವೆ. ಜನವರಿಯಿಂದ ಪ್ರತೀ ತಿಂಗಳು ಮೊದಲನೆಯ ವಾರ ಮಾರುಕಟ್ಟೆಯಲ್ಲಿ ಇರುತ್ತದೆ.(ತುಂತುರು ಪ್ರಥಮ ಸಂಚಿಕೆ, ಸಂಪುಟ–1, 1999) ಈ ಸಂಪಾದಕೀಯ ನುಡಿಗಳಲ್ಲಿ ಸಂಧ್ಯಾ ಮಾಮಿಯ ಕೊಂಡಾಟದ ಒಕ್ಕಣೆಗಳನ್ನು ಮಕ್ಕಳನ್ನುದ್ದೇಶಿಸಿ, ಬರೆದಂತಿದ್ದರೂ ಇದು ವ್ಯಾವಹಾರಿಕ ಲೋಕದ ಸೂತ್ರದಂತೆಯೂ ಇದೆ ಎನ್ನುವುದನ್ನು ಮನಗಾಣಬಹುದಾಗಿದೆ.

**ತುಳುವ:** (ತ್ರೈಮಾಸಿಕ) **1979**ರಲ್ಲಿ ಗೋವಿಂದ ಪೈ ಸಂಶೋಧನಾ ಕೇಂದ್ರದ ವತಿಯಿಂದ ಪ್ರೊ. ಕು.ಶಿ. ಹರಿದಾಸ ಭಟ್ಟರ ಮುಖ್ಯ ಸಂಪಾದಕತ್ವದಲ್ಲಿ ಪ್ರಕಟನೆ ಆರಂಭಗೊಂಡಿತು. ಅಖಿಲ ಕರ್ನಾಟಕ ಮಟ್ಟದ ಜಾನಪದ ಪ್ರದರ್ಶನ, ಆಚರಣೆ ಹಾಗೂ ಶಿಷ್ಟ ಸಾಹಿತ್ಯದ ವಿಮರ್ಶೆಗೆ ಸಂಬಂಧಿಸಿದ ಸಂಶೋಧನಕೇಂದ್ರದ ಚಟುವಟಿಕೆಗೆ ಸಂಬಂಧಿಸಿದ ಸಮಗ್ರ ವಿವರಗಳು ಸಂಚಿಕೆಯಲ್ಲಿ ಪ್ರಕಟಗೊಳ್ಳತೊಡಗಿದುವು. ಕಾರಣಾಂತರದಿಂದ ಕೆಲವು ಸಮಯ ಪತ್ರಿಕೆ ಪ್ರಕಟಿಸುವುದಕ್ಕೆ ಕೇಂದ್ರಕ್ಕೆ ಅಸಾಧ್ಯವಾದರೂ 1990ರ ದಶಕದ ಅನಂತರದಿಂದ ನಿರಂತರವಾಗಿ ಪತ್ರಿಕೆ ಕೇಂದ್ರದಿಂದ ಪ್ರಕಟವಾಗುತ್ತಿದೆ. 'ತುಳುವ' ಎಂಬ ಹೆಸರಿನ ಪತ್ರಿಕೆಯಾಗಿದ್ದರೂ ಕೇವಲ ತುಳುಭಾಷೆಯ ಮತ್ತು ಸಾಹಿತ್ಯದ ವಿಷಯಗಳಿಗಷ್ಟೇ ಪ್ರಾಮುವನ್ನು ನೀಡದೆ, ಕನ್ನಡ ಮತ್ತು ತುಳು ಭಾಷೆಗೆ ಪತ್ರಿಕೆಯು ಸಮಾನ ಪ್ರಾಮುಖ್ಯವನ್ನು ನೀಡುತ್ತಾ ಬಂದಿರುವುದನ್ನು ಗಮನಿಸಬಹುದಾಗಿದೆ.

ಉಡುಪಿ ಜಿಲ್ಲಾ ವ್ಯಾಪ್ತಿಯಲ್ಲಿ 86 ರ ನಂತರದ ದಶಕದಲ್ಲಿ ವಿವಿಧ ವಿಷಯ ವ್ಯಾಪ್ತಿಯಲ್ಲಿ 5 ಪತ್ರಿಕೆಗಳು ಪ್ರಕಟಗೊಂಡವು. ಬಳಕೆದಾರರ ಶಿಕ್ಷಣವು ಬಳಕೆದಾರನ ಹಕ್ಕು ಮತ್ತು ಬಿಕರಿದಾರನ ನಡುವಿನ ಸಂಬಂಧವನ್ನು ನಿರೂಪಿಸುವ ಪತ್ರಿಕೆಯಾಗಿದ್ದು, ಇದು ಬಸರೂರಿನ ಬಳಕೆದಾರರ ವೇದಿಕೆಯಿಂದ ಪ್ರಕಟಗೊಂಡಿರುತ್ತದೆ. **'ವೈದ್ಯಲೋಕ'** ಎಂಬ ಪತ್ರಿಕೆಯು ಮೊದಲು ಮಾಸ ಪತ್ರಿಕೆಯಾಗಿ ಪ್ರಕಟಗೊಂಡು ಮುಂದೆ ಅನಿಯತಕಾಲಿಕವಾಗಿ ಮುಂದುವರಿದಿದ್ದು, ವೈದ್ಯಕೀಯ ಜಗತ್ತಿನಲ್ಲಿ ನಡೆದ ಸಂಶೋಧನಾ ವಿವರಗಳನ್ನು ನೀಡುವ ಪತ್ರಿಕೆಯಾಗಿತ್ತು.

**ಜಾತಿ ಜನಾಂಗ ಹಾಗೂ ಧಾರ್ಮಿಕ ಪತ್ರಿಕೆಗಳು:** 20ನೇ ಶತಮಾನದ 1986ರಿಂದ 2000ದ ವರೆಗಿನ 15 ವರ್ಷದ ಅವಧಿಯೊಳಗೆ ಉಡುಪಿ ಜಿಲ್ಲಾ ವ್ಯಾಪ್ತಿಯಲ್ಲಿ ವಿವಿಧ ಜಾತಿ–ಜನಾಂಗದ ಮುಖವಾಣಿಯಾಗಿ 6 ಪತ್ರಿಕೆಗಳು ಪ್ರಕಟಗೊಂಡಿರುತ್ತದೆ. (ಅವಿಭಜಿತ ದ.ಕ. ಜಿಲ್ಲಾ ವ್ಯಾಪ್ತಿಯ ಮಂಗಳೂರಿನಿಂದ ಪ್ರಕಟವಾಗುವ ವಿಶ್ವಕರ್ಮ ಜನಾಂಗದ 'ಸಪಚಿಂತನ' ಎಂಬ ಪತ್ರಿಕೆಯನ್ನು ಇಲ್ಲಿ ಸೇರಿಸಿಕೊಂಡಿರುವುದಿಲ್ಲ) ಸಂಸ್ಕಾರಸುಧಾ ಹಾಗೂ ಸಾರಸ್ವತ ಸಮಾಚಾರವೆಂಬ

ಎರಡೂ ಮಾಸಿಕ ಪತ್ರಿಕೆಗಳಾಗಿದ್ದು, ಕ್ರಮವಾಗಿ 1994 ಮತ್ತು 1998ರಿಂದ ಪ್ರಕಟಣೆ ಆರಂಭವಾಗಿರುತ್ತದೆ. ಈ ಪತ್ರಿಕೆಗಳಲ್ಲಿ ಗೌಡ ಸಾರಸ್ವತ ಜನಾಂಗದ ಪ್ರಮುಖ ಆಚರಣೆ ಹಾಗೂ ಆ ಜನಾಂಗದ ಸಾಧಕರ ಸಾಧನೆ-ಸಿದ್ಧಿಗಳ ವರದಿಗಳು ಪ್ರಕಟಗೊಂಡಿರುತ್ತವೆ. ಸಂಸ್ಕಾರ ಸುಧಾ ಎಂಬ ಪತ್ರಿಕೆಯು ಸೋಮಕ್ಷತ್ರಿಯ ಜನಾಂಗದ ಪತ್ರಿಕೆಯಾಗಿದ್ದು, ಇದರಲ್ಲಿ ಸೋಮ ಕ್ಷತ್ರಿಯ ಜನಾಂಗದ ಸಾಧನೆಗಳನ್ನು, ಜನಾಂಗದ ಕಲ್ಯಾಣಕ್ಕಾಗಿ ದುಡಿದ ನೇತಾರರ ವ್ಯಕ್ತಿಗತ ಮಾಹಿತಿಯನ್ನೂ ಸರಕಾರದಿಂದ ಪಡೆಯಬೇಕಾದ ಅವಶ್ಯಕ ಸವಲತ್ತುಗಳನ್ನು ಸಂಕ್ಷಿಪ್ತವಾಗಿ ಪ್ರಕಟಗೊಳಿಸುತ್ತಾ ಬಂದಿರುತ್ತಾರೆ. ಹಾಗೆಯೇ 'ಶ್ರೀಶಾರದಾ' ಸ್ಥಾನಿಕ ಬ್ರಾಹ್ಮಣ ವರ್ಗದ ಆಶೋತ್ತರಗಳನ್ನು ಬಿಂಬಿಸುವ ಇದೇ ಸಾಲಿನಲ್ಲಿ ಹೆಸರಿಸಬಹುದಾದ ಇನ್ನೊಂದು ಪತ್ರಿಕೆಯಾಗಿದೆ.

ಆಧುನಿಕ ಕಾಲದಲ್ಲಿ ವರ್ತಮಾನ ಪತ್ರಿಕೆ, ವಾರಪತ್ರಿಕೆಗಳಿಗೆ ಯಾವ ಕೊರತೆಯೂ ಇಲ್ಲ ಎನ್ನುವ ಮಾತು ನಿಜವಾದರೂ ಜನರಲ್ಲಿ ಸದಭಿರುಚಿಯನ್ನುಂಟುಮಾಡುವ ಒಳ್ಳೆಯ ಸಂಸ್ಕಾರವನ್ನುಂಟುಮಾಡುವ ಪತ್ರಿಕೆಗಳು ವಿರಳ. "ಕೀಳು ಅಭಿರುಚಿಯನ್ನು ಹಬ್ಬಿಸುತ್ತಾ, ಧರ್ಮನಿರಪೇಕ್ಷೆಯ ಸೋಗಿನಲ್ಲಿ ತಮ್ಮ ಸನಾತನ ಧರ್ಮವನ್ನು ಪರೋಕ್ಷವಾಗಿ ಅವಹೇಳನ ಮಾಡುವ ಪತ್ರಿಕೆಗಳು ಸಾಕಷ್ಟಿವೆ. ಈ ವಿಷಯವನ್ನು ಮನಗಂಡ ಶ್ರೀಪಾದರು ಧಾರ್ಮಿಕ, ಆಧ್ಯಾತ್ಮಿಕ, ಸಾಂಸ್ಕೃತಿಕ ವಿಷಯಗಳಲ್ಲಿ ಸದಭಿರುಚಿಯನ್ನುಂಟುಮಾಡಿ, ಒಳ್ಳೆಯ ಮಾರ್ಗದರ್ಶನ ಮಾಡಲು 'ಸುಗುಣಮಾಲಾ' ಎಂಬ ಕನ್ನಡ ಮಾಸಪತ್ರಿಕೆಯನ್ನು 1986 ಜನವರಿಯಲ್ಲಿ ಪ್ರಾರಂಭಿಸಿದರು. ವೇದೋಪನಿಷತ್ತು ಭಗವದ್ಗೀತೆ ಮೊದಲಾದ ನಮ್ಮ ಪವಿತ್ರಗ್ರಂಥಗಳ ವಿಷಯವನ್ನೊಳಗೊಂಡ ಲೇಖನಮಾಲೆಗಳಲ್ಲದೆ ಹಳೆಯ ನಂಬಿಕೆಗಳನ್ನು ವೈಜ್ಞಾನಿಕವಾಗಿ ವಿಮರ್ಶಿಸಿ ಅವುಗಳ ಮಹತ್ವವನ್ನು ತಿಳಿಸುವ ಲೇಖನಗಳನ್ನು ವಿವಿಧ ವಿಚಾರಗಳನ್ನು ಪ್ರಕಟಿಸುತ್ತಾ ಈ ಪತ್ರಿಕೆ ಜನರ ಮೆಚ್ಚುಗೆಯನ್ನು ಪಡೆದು ಈಗ ಹತ್ತು ಸಾವಿರಕ್ಕೂ ಹೆಚ್ಚು ಚಂದಾದಾರರನ್ನು ಹೊಂದಿರುವುದು ಹೆಮ್ಮೆಪಡುವ ಸಂಗತಿ."(ಸಂ: ಶ್ರೀ ಸುಗುಣೇಂದ್ರತೀರ್ಥ ಶ್ರೀಪಾದರು, 1992, ಪೀಠಿಕೆಯ ಮಾತು)

ಶ್ರೀ ಎಂ. ರಾಜಗೋಪಾಲ ಆಚಾರ್ಯರು ಈ ಪತ್ರಿಕೆಯ ಆರಂಭ ಕಾಲದಿಂದ ಅವರ ಜೀವಿತಾವಧಿಯವರೆಗೂ ಪತ್ರಿಕೆಯ ಮುಖ್ಯ ಸಂಪಾದಕರಾಗಿದ್ದರು. ಬನ್ನಂಜೆ ಗೋವಿಂದಾಚಾರ್ಯರು ಪತ್ರಿಕೆಯ ನಿರ್ದೇಶಕರಾಗಿ ಇಂದಿಗೂ ತಮ್ಮ ಜವಾಬ್ದಾರಿಯನ್ನು ನಿರ್ವಹಿಸಿಕೊಂಡು ಬರುತ್ತಿದ್ದಾರೆ. ಪತ್ರಿಕೆಯ ಸಂಪಾದಕೀಯ ಭಾಗವನ್ನು ಸುಗುಣೇಂದ್ರ ತೀರ್ಥರು ಬರೆಯುತ್ತಿದ್ದು, ಇತರ ಧಾರ್ಮಿಕ ಸಾಮಾಜಿಕ ವಿಚಾರಗಳ ವಿಮರ್ಶ ಲೇಖನಗಳನ್ನು-'ಸುಶ್ರೀ'ಎಂಬ ಹೆಸರಿನೊಂದಿಗೆ ಶ್ರೀಪಾದರೇ ಬರೆದು ಪ್ರಕಟಿಸುತ್ತಿದ್ದಾರೆ.

**ಕಚ್ಚೂರು ವಾಣಿ: (1998)**ಇದು ಉಡುಪಿ ಜಿಲ್ಲೆಯ ಭಂಡಾರಿ ಸಮಾಜದ (ಸವಿತಾ ಸಮಾಜದ) ಪತ್ರಿಕೆಯಾಗಿರುತ್ತದೆ. ಜನಾಂಗದ ಸಾಧನೆಗಳನ್ನು ಮತ್ತು ಅವರ ಸಾಂಸ್ಕೃತಿಕ ಅನನ್ಯತೆಗಳನ್ನು ಎತ್ತಿಹೇಳುವುದೇ ಪತ್ರಿಕೆಯ ಮುಖ್ಯ ಧೋರಣೆಯಾಗಿದೆ. ವಿಪ್ರವಾಣಿ, ಕೂಟಬಂಧು, ಎಂಬೀ ಎರಡು ಪತ್ರಿಕೆಗಳು ಬ್ರಾಹ್ಮಣ ಜನಾಂಗದ ಆಚರಣೆ ಹಾಗೂ ಆರ್ಷೇಯ ಸಾಹಿತ್ಯದ ಕುರಿತಾದ ಲೇಖನಗಳನ್ನು ಒಳಗೊಂಡಿರುತ್ತದೆ. ಈ ಎಲ್ಲಾ ಪತ್ರಿಕೆಗಳೂ ಜಾಹೀರಾತನ್ನು ಆಶ್ರಯಿಸದೇ ಚಂದಾದಾರರಿಂದಲೇ ನಿರ್ವಹಿಸಲ್ಪಡುತ್ತದೆ ಎನ್ನುವುದು ಪತ್ರಿಕೆಯ ಕುರಿತಾಗಿ ಆ ಜನಾಂಗಕ್ಕಿರುವ ಪ್ರೀತಿ ಮತ್ತು ಅಭಿಮಾನವನ್ನು ಸೂಚಿಸುತ್ತದೆ.

ಸೇವಾವಾರ್ತೆ, ಆಚಾರ-ವಿಚಾರ, ಸುಗುಣಮಾಲಾ ಎಂಬೀ ಪತ್ರಿಕೆಗಳು ಧಾರ್ಮಿಕ ಪತ್ರಿಕೆಗಳಾಗಿದ್ದು, ಧಾರ್ಮಿಕ ವೈಚಾರಿಕತೆಯ ಹಿಂದಿನ ವಿವಿಧ ಧಾರ್ಮಿಕ ತತ್ವಗಳನ್ನು ಅಥವಾ ಸಿದ್ಧಾಂತಗಳನ್ನು ಎತ್ತಿಹಿಡಿಯುವುದೇ ಸಂಚಿಕೆಯ ಮುಖ್ಯಧೋರಣೆಯಾಗಿದೆ.

**ವಿವೇಕ ಸಂಪದ:** (1989) ಈ ಪತ್ರಿಕೆಯು ವಿವೇಕಾನಂದರ ಚಿಂತನೆಯ ಅಡಿಯಲ್ಲಿ ನೈತಿಕ ಶಿಕ್ಷಣದೊಂದಿಗೆ, ವ್ಯಕ್ತಿತ್ವ ವಿಕಸನದ ಬಗೆಯನ್ನು ವಿವರಿಸುವ ಪತ್ರಿಕೆಯಾಗಿದ್ದು, 1989 ನೇ ಇಸವಿಯಿಂದ ಸಾಲಿಗ್ರಾಮದ ಡಿವೈನ್‌ಪಾರ್ಕ್ ಎಂಬ ವಿವೇಕಾನಂದ ಕೇಂದ್ರದ ವತಿಯಿಂದ ಡಾ। ಚಂದ್ರಶೇಖರ ಉಡುಪ ಇವರ ಸಂಪಾದಕತ್ವದಲ್ಲಿ ಮಾಸಿಕವಾಗಿ ಪ್ರಕಟಗೊಳ್ಳುತ್ತಿದೆ.

**ಸಂಪರ್ಕ: 1984** ರಿಂದಲೇ ಬಂಟ ಜನಾಂಗದ ಕೇಂದ್ರ ಕಛೇರಿಯ ಮೂಲಕ ಪ್ರಕಟಗೊಳ್ಳುತ್ತಿರುವ ಜಾತೀಯ ಪತ್ರಿಕೆಯಾಗಿದೆ. ಜನಾಂಗದ ಆಗು ಹೋಗುಗಳು, ಜನಾಂಗದ ಸಾಧಕರ ವಿವರಗಳು, ಜನಾಂಗಕ್ಕೆ ಸೇರಿದ ನುರಿತ ಬರಹಗಾರರಿಂದ ಕಥೆ, ಕವನ, ಇತ್ಯಾದಿ ಸಾಹಿತ್ಯಕ ಬರಹಗಳನ್ನು ಪ್ರಕಟಿಸುತ್ತಾ ಇಂದಿಗೂ ಮಾಸಿಕವಾಗಿ, ದ್ವೈಮಾಸಿಕವಾಗಿ, ಪ್ರಕಟಗೊಳ್ಳುತ್ತಾ ಬಂದಿದೆ.

ಉನ್ನತ ಶಿಕ್ಷಣದಿಂದ ಎಲ್ಲ ಜಾತಿ ಜನಾಂಗವು ಆರ್ಥಿಕವಾಗಿ ಸಬಲರಾಗುತ್ತಿದ್ದಂತೆಯೇ ಆಯಾ ಜನಾಂಗದ ಸದಸ್ಯರುಗಳಲ್ಲಿ ಅಸ್ಮಿತೆ ಮತ್ತು ಅನನ್ಯತೆಯ ಅರಿವು ಜಾಗೃತವಾಗತೊಡಗಿರುವುದು 20ನೆ ಶತಮಾನದ 90ರ ದಶಕದ ನಂತರದ ವಿಶೇಷವಾದ ಬೆಳವಣಿಗೆಯಾಗಿದೆ. ಈ ಅಸ್ಮಿತೆ ಮತ್ತು ಅನನ್ಯತೆಯ ಹಸಿವು ಅನೇಕ ರೀತಿಯ ಜನಾಂಗ ಕಲಹ, ಜಾತೀಯ ಮೇಲಾಟ, ಕೋಮು ಕಲಹಗಳಿಗೆ ಅವಕಾಶವನ್ನು ನೀಡುತ್ತದೆ ಎನ್ನುವುದು 20ನೇ ಶತಮಾನದ ಏಕೀಕರಣೋತ್ತರ ಕಾಲದ ಹಲವು ಸಂದರ್ಭಗಳಿಂದ ತಿಳಿದುಬರುತ್ತದೆ.

ಬುದ್ಧ, ಬಸವ, ಗಾಂಧಿ ಜನ್ಮವೆತ್ತಿದ ಈ ನಾಡಿನಲ್ಲಿ ಇಂದಿಗೂ ಜಾತಿಜನಾಂಗದ ಧಾರ್ಮಿಕ ತಳಹದಿಯಲ್ಲಿ ಪತ್ರಿಕೆಗಳು ಹುಟ್ಟುತ್ತಲೇ ಇವೆ. ಆಯಾಯ ಜಾತಿಯ, ಜನಾಂಗದ ಮಂದಿ ಇಂತಹ ಪತ್ರಿಕೆಗಳ ಚಂದಾದಾರರಾಗುತ್ತಾ ಪತ್ರಿಕೆಯನ್ನು ಬೆಳೆಸುತ್ತಿದ್ದಾರೆ. ಈ ಪತ್ರಿಕೆಯ ಸಂಪಾದಕರು, ಓದುಗರು ಸದಾ ನೆನಪಿಡಬೇಕಾದ ಒಂದು ಸತ್ಯವಿದೆ. "ಭಾರತೀಯ ಸಂಸ್ಕೃತಿಗೆ ಅನೇಕ ಪರಕೀಯ ಧರ್ಮ ಹಾಗೂ ಸಂಸ್ಕೃತಿಗಳು ಕೊಟ್ಟ ಕೊಡುಗೆಗಳನ್ನು ನಾವು ನಿರ್ಲಕ್ಷಿಸಲು ಬರುವುದಿಲ್ಲ... ಇದರ ಜೊತೆ ವಿವಿಧ ಪ್ರಾಂತೀಯ ಉಪಸಂಸ್ಕೃತಿಗಳು ಈ ದೇಶದ ಪ್ರಧಾನಧಾರೆಗೆ ಮುಖಾಮುಖಿಯಾಗಿ ತಮ್ಮ ಪ್ರತಿಕ್ರಿಯೆಗಳನ್ನು ಅಭಿವ್ಯಂಜಿಸಿದ ಕ್ರಮಗಳೂ, ವಿವಿಧ ಪ್ರಾದೇಶಿಕ ಭಾಷಾಸಾಹಿತ್ಯಗಳಲ್ಲಿ ಮೈಪಡೆದುಕೊಂಡಿವೆ. ಈ ಎಲ್ಲವುಗಳ ಮೊತ್ತವು ಬಹು ಸಂಕೀರ್ಣವೂ ಆಗಿರುವ ಭಾರತೀಯ ಸಂಸ್ಕೃತಿಯ ಬಹುಮುಖತ್ವವನ್ನು ಅರ್ಥಮಾಡಿಕೊಳ್ಳದೆ ಇಂಡಿಯಾದಲ್ಲಿರುವುದೇನಿದ್ದರೂ ಮೂಲತಃ ಹಿಂದೂ ಸಂಸ್ಕೃತಿಯೆಂದೂ ಅದೊಂದೇ ಸರ್ವಶ್ರೇಷ್ಠ ಎಂದೂ ಉಳಿದವುಗಳೆಲ್ಲಾ ಹೊರಗಿನವು ಎಂದೂ ಪ್ರತಿಪಾದಿಸುವುದು ಅವೈಚಾರಿಕ ಮಾತ್ರವಲ್ಲ ಅಪಾಯಕಾರಿಯಾದದ್ದೂ ಕೂಡ."(ಸಂ: ಶಿವರುದ್ರಪ್ಪ ಜಿ.ಎಸ್. ಡಾ., 2015, ಪು-14) ಪ್ರತಿಯೊಂದು ಜನಾಂಗವೂ ಈ ಸತ್ಯವನ್ನು ಅರ್ಥೈಸಿಕೊಂಡಲ್ಲಿ 'ಅಸ್ಮಿತೆ ಮತ್ತು ಅನನ್ಯತೆ'ಯ ಹಸಿವು ಹಿಂಗೀತು.

**ಶತಮಾನದ ಸಾಹಿತ್ಯ ಚಟುವಟಿಕೆಯಲ್ಲಿ ಕನ್ನಡ ಪತ್ರಿಕೋದ್ಯಮದ ಪಾತ್ರ:** ಉಡುಪಿ ಜಿಲ್ಲೆಯ ಶತಮಾನದ ಸಾಹಿತ್ಯಚಟುವಟಿಕೆಯ ಪ್ರಕ್ರಿಯೆ ಮತ್ತು ಪರಿಣಾಮಗಳು ಎಂಬ ಅಧ್ಯಯನ ವಿಷಯದಲ್ಲಿ 20 ನೆಯ ಶತಮಾನದ ಕನ್ನಡ ಸಾಹಿತ್ಯ ಚಟುವಟಿಕೆಗೆ ಮೊದಲು ವೇದಿಕೆ ನಿರ್ಮಿಸಿದ ಪತ್ರಿಕಾಮಾಧ್ಯಮವನ್ನು ಕನ್ನಡ ಸಾಹಿತ್ಯದ ಆರಂಭಿಕ ಚಟುವಟಿಕೆ ಎಂದು ಕಂಡುಕೊಳ್ಳಲಾಗಿದೆ.

ಕರ್ನಾಟಕ ಏಕೀಕರಣ ಪೂರ್ವದಿಂದಲೇ ಕನ್ನಡ ಭೌಗೋಳಿಕ ಪ್ರದೇಶದ ಪತ್ರಿಕಾ ಚಟುವಟಿಕೆಗಳೆಂದು ಧಾರವಾಡ-ಮೈಸೂರು-ಮಂಗಳೂರು ಎಂದು ಮೂರು ಕೇಂದ್ರಗಳನ್ನು ಡಾ. ಶ್ರೀನಿವಾಸ ಹಾವನೂರ ಅವರು ತಮ್ಮ ಅಧ್ಯಯನದಲ್ಲಿ ಗುರುತಿಸಿದ್ದಾರೆ. ಪ್ರಸ್ತುತ ಮಂಗಳೂರು (ಅವಿಭಜಿತ ದ.ಕ. ಜಿಲ್ಲೆ) ಜಿಲ್ಲೆಯಿಂದ ಪ್ರತ್ಯೇಕಗೊಂಡ ಉಡುಪಿ ಜಿಲ್ಲಾ ವ್ಯಾಪ್ತಿಯ ಪತ್ರಿಕೋದ್ಯಮದ ಪ್ರಮುಖ ಅಂಶಗಳನ್ನು ಈ ಅಧ್ಯಯನದಲ್ಲಿ ಗುರುತಿಸಲಾಗಿದೆ. ಅವುಗಳನ್ನು ಈ ಕೆಳಗಿನಂತೆ ಉಲ್ಲೇಖಿಸಬಹುದಾಗಿದೆ.

1) ಉಡುಪಿ ಜಿಲ್ಲಾ ವ್ಯಾಪ್ತಿಯಲ್ಲಿ ನೂರು ವರ್ಷದ ಅವಧಿಯಲ್ಲಿ (1900–2000) 123 ಪತ್ರಿಕೆಗಳು (ಕೈಬರಹದ ಪತ್ರಿಕೆಗಳೂ ಸೇರಿ) ಪ್ರಕಟಗೊಂಡಿದ್ದು ಅವುಗಳಲ್ಲಿ ಕನಿಷ್ಟ ಒಂದು ತಿಂಗಳ ಆಯುಷ್ಯದವೂ ಸೇರಿವೆ. ಗರಿಷ್ಠ ಆಯುಷ್ಯದವು ಎಂದು ಪ್ರಸ್ತುತ 8 ಪತ್ರಿಕೆಗಳನ್ನು ಈ ಅಧ್ಯಯನದಲ್ಲಿ ಗುರುತಿಸಲಾಗಿದೆ. ಅವುಗಳು ಯಾವುದೆಂದರೆ– ನವಯುಗ (ವಾರಪತ್ರಿಕೆ–1921–1974), ಉದಯವಾಣಿ (ದೈನಿಕ 1970 ರಿಂದ ಇಂದಿನವರೆಗೂ), ತುಷಾರ (ಮಾಸಿಕ–1973 ರಿಂದ ಇಂದಿನವರೆಗೂ), ರೂಪತಾರಾ (ಸಿನೇಮಾ ಮಾಸಿಕ– 1977 ರಿಂದ ಇಂದಿನವರೆಗೂ), ತರಂಗ (ವಾರಪತ್ರಿಕೆ 1982 ರಿಂದ ಇಂದಿನವರೆಗೂ), ಬಳಕೆದಾರರ ವೇದಿಕೆ (ಪಾಕ್ಷಿಕ– 1980 ರಿಂದ ಇಂದಿನವರೆಗೂ), ಸುಗುಣಮಾಲಾ (ಮಾಸಿಕ 1986 ರಿಂದ ಇಂದಿನವರೆಗೂ), ಬಳಕೆದಾರ ಶಿಕ್ಷಣ (ಪಾಕ್ಷಿಕ–1987 ರಿಂದ ಇಂದಿನವರೆಗೂ). ಇಪ್ಪತ್ತನೇ ಶತಮಾನದಲ್ಲಿ ಅಸ್ತಿತ್ವಕ್ಕೆ ಬಂದು ಇಪ್ಪತ್ತನೇ ಶತಮಾದಲ್ಲಿಯೇ ಅಸ್ತಿತ್ವ ಕಳೆದುಕೊಂಡ ಪತ್ರಿಕೆಗಳಲ್ಲಿ ಗರಿಷ್ಠ (53 ವರ್ಷಗಳು) ಕಾಲಾವಧಿಯನ್ನು ಕಂಡ ಪತ್ರಿಕೆ **'ನವಯುಗ'** ಎಂಬುದಾಗಿ ಕಂಡುಕೊಳ್ಳಲಾಗಿದೆ.

2) ಸ್ವಾತಂತ್ರ್ಯಪೂರ್ವ ಕಾಲಘಟ್ಟದಲ್ಲಿ ಪತ್ರಿಕಾ ಚಟುವಟಿಕೆಗೆ ಮುಖ್ಯ ಕೊಡುಗೆ ನೀಡಿದವರು ಪ್ರಾಥಮಿಕ ಹಾಗೂ ಪ್ರೌಢಶಾಲಾ ಅಧ್ಯಾಪಕರುಗಳಾಗಿದ್ದು ಅವರಲ್ಲಿ ಮುಖ್ಯರಾದವರ ಹೆಸರುಗಳನ್ನು ಹೀಗೆ ದಾಖಲಿಸಬಹುದಾಗಿದೆ. ಕೆ. ಹೊನ್ನಯ್ಯ ಶೆಟ್ಟಿ, ಕೊರಡ್ಕಲ್ ಶ್ರೀನಿವಾಸ ರಾಯರು, ಫ್ರಾನ್ಸಿಸ್ ದಾಂತಿ, ಐರೋಡಿ ಶಿವರಾಮಯ್ಯ, ಡಿ.ವಿ. ಹೊಳ್ಳ, ವೆಂಕಪ್ಪ ಶೆಟ್ಟಿ, ಬೈಕಾಡಿ ವೆಂಕಟಕೃಷ್ಣರಾಯರು, ಕು.ಶಿ. ಹರಿದಾಸ ಭಟ್ಟ, ಯಜ್ಞನಾರಾಯಣ ಉಡುಪ, ಎಚ್. ವಿಠಲ ಶೆಣೈ, ಬಿ.ಪಿ. ಬಾಯರಿ, ಯು.ಎಲ್. ಐತಾಳ್, ಪಿ.ಪಿ. ಕಾರಂತ್.

3) ಏಕೀಕರಣಪೂರ್ವದಲ್ಲಿ ಉಡುಪಿ ಜಿಲ್ಲಾ ವ್ಯಾಪ್ತಿಯಿಂದ ಯಾವುದೇ ದಿನಪತ್ರಿಕೆಯು ಪ್ರಕಟಗೊಂಡಿರುವುದಿಲ್ಲ.

4) ಏಕೀಕರಣಪೂರ್ವದ ಅವಧಿಯಲ್ಲಿ ಉಡುಪಿ ಜಿಲ್ಲೆಯಿಂದ ಪ್ರಕಟಗೊಳ್ಳುವ ಪತ್ರಿಕೆಗಳ ನಡುವೆ ಯಾವುದೇ ಪೈಪೋಟಿ ಅಥವಾ ಸ್ಪರ್ಧೆ ಇರದೆ ಒಂದು ಪತ್ರಿಕೆಯ ಸಂಪಾದಕರು ಇನ್ನೊಂದು ಪತ್ರಿಕೆಯಲ್ಲಿ ತಮ್ಮ ಲೇಖನಗಳನ್ನು ಪ್ರಕಟಿಸುತ್ತಿದ್ದುದನ್ನು ಗಮನಿಸಬಹುದಾಗಿದೆ. ಉದಾಹರಣೆಗೆ: ನವಯುಗ ಪತ್ರಿಕೆಯ ಸಂಪುಟ 33ರ ಸಂಚಿಕೆ 21ರ ಪ್ರಜಾರಾಜ್ಯ ಸಂಚಿಕೆಯಲ್ಲಿ ಶ್ರೀ ರಾ.ವೆ. ಕರಿಗುದರಿ ಸಂಪಾದಕ ಜಯಹಿಂದ ಹುಬ್ಬಳ್ಳಿ ಇವರ 'ಆಧುನಿಕತೆಯೇ ಮುಳುವಾಗಿದೆ' ಎಂಬ ಲೇಖನ ಹಾಗೂ ನವಯುಗದ ಇದೇ ಸಂಚಿಕೆಯಲ್ಲಿ ಕಲಿಯುಗ ಪತ್ರಿಕೆಯ ಸಂಪಾದಕರಾದ ಡಾ. ಎಂ. ಗೋಪಾಲಕೃಷ್ಣ ರಾವ್ ಅವರ 'ಸ್ವಾತಂತ್ರ್ಯವೂ ಶರೀರ ಸಂಪತ್ತು' ಎಂಬ ಲೇಖನವು ಪ್ರಕಟಗೊಂಡಿರುವುದನ್ನು ಗಮನಿಸಬಹುದು. ಇದೇ ರೀತಿಯಾಗಿ ಸಾಕಷ್ಟು ಉದಾಹರಣೆಗಳನ್ನು ನೀಡಬಹುದು.

5) ವ್ಯಕ್ತಿಗತ ಸಾಧನೆ–ಪ್ರಶಂಸೆಗೆ ಪತ್ರಿಕೆಗಳು ವೇದಿಕೆಯೇ ಅಲ್ಲ ಎಂಬಷ್ಟರ ಮಟ್ಟಿಗೆ ಪತ್ರಿಕೆಯು ಸಾರ್ವಜನಿಕ ಅಭಿಪ್ರಾಯ ಮತ್ತು ಸಮೂಹದ ಬೇಕು ಬೇಡಗಳಿಗೆ ಸ್ಪಂದಿಸುತ್ತಿದ್ದುದನ್ನು ಗಮನಿಸಬಹುದಾಗಿದೆ. ಇದಕ್ಕೆ ಮುಖ್ಯ ಕಾರಣ ಪತ್ರಿಕೋದ್ಯಮವು ಬಂಡವಾಳ ತೊಡಗಿಸಿ ಹಣಗಳಿಸುವ ವ್ಯವಹಾರ ಉದ್ದಿಮೆಯಾಗಿ ಮಾರ್ಪಟ್ಟಿರಲಿಲ್ಲ ಎನ್ನುವುದೇ ಮುಖ್ಯ ಕಾರಣವಾಗಿತ್ತು.

6) ಏಕೀಕರಣ ಪೂರ್ವದ ಎಲ್ಲಾ ಪತ್ರಿಕಾ ಸಂಪಾದಕರು ತಮ್ಮ ಜಿಲ್ಲೆಯ ಬರಹಗಾರರಿಗಷ್ಟೇ ತಮ್ಮ ಸಂಚಿಕೆಯಲ್ಲಿ ಸ್ಥಳ ನೀಡಿದ್ದಲ್ಲದೇ ಮುಕ್ತ ಮನಸ್ಸಿನಿಂದ ಜಿಲ್ಲೆಯ ಹೊರಗಿನ ಬರಹಗಾರರಿಗೂ ತಮ್ಮ ಸಂಚಿಕೆಯಲ್ಲೇ ಅವಕಾಶವನ್ನು ಒದಗಿಸಿಕೊಡುತ್ತಿದ್ದರು.

7) ಉಡುಪಿ ಜಿಲ್ಲೆಯ ಕನ್ನಡ ಪತ್ರಿಕೋದ್ಯಮ ಇತಿಹಾಸದ ಅಧ್ಯಯನದಿಂದ ತಾತ್ವಿಕ ನಿಲುವೊಂದನ್ನು ಹೀಗೆ ಕಂಡುಕೊಳ್ಳಲಾಗಿದೆ. ಯಾವುದೇ ಪತ್ರಿಕೆಯು ನಿರಂತರವಾಗಿ ಉಳಿದು ಬರಲು ಆಯಾ ಪತ್ರಿಕೆಯ ಸಂಪಾದಕ ವರ್ಗವು ಕಟ್ಟುವ ವ್ಯೂಹ ಹಾಗೂ ಜನಮಾನಸದಲ್ಲಿ ಮೂಡಿಸಿದ ಭಾವವೇ ಕಾರಣವಾಗಿರುತ್ತದೆ. ಪತ್ರಿಕಾ ಸಂಪಾದಕರು ಆರ್ಥಿಕ ಬಡತನಕ್ಕೆ ಸಿಲುಕಲು ವ್ಯೂಹರಚನೆಯ ವಿಫಲತೆಯೇ ಕಾರಣವಾಗಿ ಜನಸಾಮಾನ್ಯ ಓದುಗವರ್ಗದ ಆಪ್ತ ಭಾವದಿಂದ ಪತ್ರಿಕೆಯು ಹಿಂದೆ ಸರಿಯುತ್ತವೆ. ಇದರಿಂದಾಗಿ ಪತ್ರಿಕೆಯು ನೆಲೆಕಳೆದುಕೊಳ್ಳಬೇಕಾಗುತ್ತದೆ.

ವ್ಯೂಹ ಎಂದರೆ ಆಧುನಿಕ ಆಂಗ್ಲ ಪರಿಭಾಷೆಯಲ್ಲಿ ಹೇಳುವ Network ಅಥವಾ ಜಾಲ ರಚನೆ ಎಂದರ್ಥ. ಪತ್ರಿಕೆಯ ಮೊಳೆ ಜೋಡಿಸುವ, ಮೂಟೆಕಟ್ಟುವ ಸಾಗಾಟದ ಉಸ್ತುವಾರಿ ನೋಡಿಕೊಳ್ಳುವ–ವಿವಿಧ ಶ್ರಮಿಕವರ್ಗದ ನಿಷ್ಠೆ/ಕಾರ್ಯತತ್ಪರತೆ ಹಾಗೂ ವಿವಿಧ ಶೀರ್ಷಿಕೆಗೆ ಲೇಖನಗಳನ್ನು ಬರೆಯುವ ತಜ್ಞ ಬರಹಗಾರರನ್ನು ಸೆಳೆಯುವಲ್ಲಿ ಸಂಪಾದಕರು ಹೂಡುವ ತಂತ್ರ–ಇವುಗಳು ಪರಿಣಾಮಕಾರಿಯಾದಲ್ಲಿ ಮಾತ್ರವೇ ಪತ್ರಿಕೆಯು ಜನಸಾಮಾನ್ಯ ಓದುಗ ವರ್ಗದ ಭಾವವಾಗುತ್ತವೆ. ವ್ಯೂಹ ಮತ್ತು ಭಾವವು ಪರಸ್ಪರ ಪೂರಕವಾದಾಗಲೇ ಪತ್ರಿಕೆಯು ನಿರಂತರವಾಗಿ ಮುಂದುವರೆದುಕೊಂಡು ಹೋಗುತ್ತದೆ. ವ್ಯೂಹವು ಪರಿಣಾಮಕಾರಿಯಾಗಿಲ್ಲವಾದಲ್ಲಿ ಅದರ ಪರಿಣಾಮವು ಜನತೆಯ ಭಾವದ ಮೇಲುಂಟಾಗಿ ಪತ್ರಿಕೆಯು ಸೋಲನ್ನು ಕಾಣಬೇಕಾಗುತ್ತದೆ. 20ನೇ ಶತಮಾನದಲ್ಲಿ ಹುಟ್ಟಿಕೊಂಡ ಉಡುಪಿ ಜಿಲ್ಲೆಯ ಪತ್ರಿಕೆಗಳ ಸೋಲಿಗೆ ವ್ಯೂಹ ಮತ್ತು ಭಾವದ ಅಸಮರ್ಪಕ ಹೊಂದಾಣಿಕೆಯೇ ಕಾರಣವೆನ್ನುವುದನ್ನು ಕಂಡುಕೊಳ್ಳಲಾಗಿದೆ.

ಕನ್ನಡ ಓದುಗರ ಅಭಿರುಚಿಯನ್ನು ತಿದ್ದುವ ಅವರ ಧೋರಣೆಯನ್ನು ಬದಲಾಯಿಸುವಲ್ಲಿ 20ನೇ ಶತಮಾನದ ಎಲ್ಲ ಪತ್ರಿಕೆಗಳೂ ಶ್ರಮವಹಿಸಿದುವು. ಈ ದೃಷ್ಟಿಯಿಂದ ಹೇಳುವುದಾದರೆ ಪತ್ರಿಕೆ ಎನ್ನುವುದು ಲೋಕಜ್ಞಾನದ ಅಂಗವಾಗಿ ದುಡಿದು ಪತ್ರಿಕೆಯ ಸಂಪಾದಕರೇ ಲೋಕಶಿಕ್ಷಕರಾದರು.

1900ನೇ ಇಸ್ವಿಯಿಂದ 2000ದ ವರೆಗಿನ ನೂರು ವರ್ಷದ ಕನ್ನಡ ಪತ್ರಿಕೋದ್ಯಮದ ಇತಿಹಾಸವು ಕನ್ನಡ ಸಾಹಿತ್ಯ ನಡೆಯನ್ನು ಕುರಿತು, ಸ್ಪಷ್ಟವಾದ ಚಿತ್ರಣವನ್ನು ನೀಡುತ್ತದೆ. ಉಡುಪಿ ಜಿಲ್ಲಾ ವ್ಯಾಪ್ತಿಯೊಳಗೆ 20ನೇ ಶತಮಾನದ ಪ್ರಾರಂಭದಿಂದಲೇ ಕನ್ನಡ ಸಾಹಿತ್ಯಚಟುವಟಿಕೆಗಳನ್ನು ಪತ್ರಿಕೆಯ ಮೂಲಕ ಆರಂಭಿಸಿದವರು ಪತ್ರಿಕಾ ಸಂಪಾದಕರು ಮತ್ತು ಶಾಲಾಶಿಕ್ಷಕರು ಎನ್ನುವುದನ್ನು ಗುರುತಿಸಬಹುದಾಗಿದೆ.

ಏಕೀಕರಣಪೂರ್ವದ ಪತ್ರಿಕೆಯನ್ನು ಲಕ್ಷಿಸಿ, ಉಲ್ಲೇಖಿಸುವುದಾದಲ್ಲಿ ಪತ್ರಕರ್ತರು ತಮ್ಮ ಸಂಪಾದಕೀಯ/ವೈಚಾರಿಕ ಲೇಖನದಲ್ಲಿ ಎತ್ತಿ ಹಿಡಿಯುವ ಧೋರಣೆಗೂ ಅದೇ ಪತ್ರಿಕೆಯಲ್ಲಿ ಪ್ರಕಟಗೊಳ್ಳುವ ಸಾಹಿತ್ಯ ಬರಹದ ವೈಚಾರಿಕತೆಗೂ ಸಾಮ್ಯ ಇರುವುದನ್ನು ಗುರುತಿಸಬಹುದಾಗಿದೆ.

ಮುದ್ರಣ, ಪ್ರಕಟನೆ ಮತ್ತು ಪ್ರಸರಣ ಒಂದು ಸಂಕೀರ್ಣ ಉದ್ಯಮವಾಗಿದ್ದು, ಸಾಹಿತ್ಯಕೃತಿಯನ್ನು ವ್ಯಕ್ತಿಗತವಾಗಿ ಪ್ರಕಟಿಸುವುದಕ್ಕೆ ಲೇಖಕನಿಗೆ ವೈಯಕ್ತಿಕವಾಗಿ ಅಸಾಧ್ಯವಾಗಿದ್ದು, ಪತ್ರಿಕೆಯೇ ಲೇಖಕನ ಪ್ರಕಟನೆಯನ್ನು ಪ್ರಕಟಿಸುವುದರೊಂದಿಗೆ ಕನ್ನಡ ಸಾಹಿತ್ಯ ಚಟುವಟಿಕೆಗಳಿಗೆ ಪತ್ರಿಕೆಯೊಂದು ವೇದಿಕೆಯಾಯಿತು.

ಪತ್ರಿಕೆಯೊಂದು ಅಸ್ತಿತ್ವದಲ್ಲಿದ್ದ ಆಯಾ ಜಿಲ್ಲೆಯ/ತಾಲೂಕಿನ ಬರಹಗಾರರಲ್ಲದೇ ಅಖಿಲ ಕರ್ನಾಟಕ ವ್ಯಾಪ್ತಿಯ ಲೇಖಕರ/ ಇತರ ಪತ್ರಿಕಾ ಸಂಪಾದಕರ ಕೃತಿಗಳನ್ನು ಓದುಗರಿಗೆ ಪರಿಚಯಿಸಿದ ಸಾಧನೆ ಅಥವಾ ಹೆಗ್ಗಳಿಕೆಯು ಉಡುಪಿ ಪತ್ರಿಕೋದ್ಯಮಕ್ಕೆ ಸೇರುವುದಾಗಿದೆ.

ಕನ್ನಡ ನಾಡು–ನುಡಿ, ಸಾಹಿತ್ಯ, ಕನ್ನಡದ ನೆಲದ ಕುರಿತು ಪತ್ರಿಕೋದ್ಯಮವು ಕನ್ನಡಿಗರಲ್ಲಿ ಜಾಗೃತಿಯನ್ನುಂಟುಮಾಡಿದ ಕಾರಣ ಕನ್ನಡ ಸಾಹಿತ್ಯದ ಅಭಿಮಾನವನ್ನು ಹೆಚ್ಚಿಸಿವುದರಲ್ಲಿ ಕನ್ನಡ ಪತ್ರಿಕೆಗಳ ಪಾತ್ರ ಪ್ರಮುಖವಾಗಿವೆ.

ಕನ್ನಡ ಅಭಿಮಾನಿಗಳು, ಕನ್ನಡ ಸಾಹಿತ್ಯ ಅಭಿಮಾನಿಗಳೂ ಆದ ಕನ್ನಡ ಪತ್ರಕರ್ತರು, ಕನ್ನಡ ಸಾಹಿತ್ಯದ ಚಲನಶೀಲತೆಗನುಸರಿಸಿ, ಕನ್ನಡ ಪತ್ರಿಕೆಯ ಸ್ವರೂಪವನ್ನು ಬದಲಾಯಿಸಿಕೊಂಡ ಪ್ರಯುಕ್ತ 1957ರಿಂದ 1985ರ ನಡುವಿನಲ್ಲಿ ಕನ್ನಡದಲ್ಲಿ ಸಾರವತ್ತಾದ ಮತ್ತು ಸತ್ವಯುತವಾದ ಪತ್ರಿಕೆಗಳು ಮತ್ತು ಸಾಹಿತ್ಯ ಬರಹಗಳು ಕಂಡುಬಂದವು.

1985ರ ನಂತರದಲ್ಲಿ ಕನ್ನಡ ಪತ್ರಿಕೋದ್ಯಮವು ವಿದ್ಯುನ್ಮಾನ ಕ್ಷೇತ್ರದ ಮಾಧ್ಯಮಗಳ ಜೊತೆಯಲ್ಲಿ ಸ್ಪರ್ಧಿಸಲೇ ಬೇಕಾದ ಪ್ರಯುಕ್ತ ಪತ್ರಿಕೆಯ ಪ್ರಸರಣ ಸಂಖ್ಯೆಯು ಕಡಿಮೆಯಾಗತೊಡಗಿತು. ಮುಂದಕ್ಕೆ ಪ್ರಸರಣ ಸಂಖ್ಯೆಯು ಕಡಿಮೆಯಾದ ಕಾರಣ ಲಾಭಾಂಶವು ಕಡಿಮೆಯಾಗುತ್ತಿದ್ದಂತೆಯೇ ಜಾಹೀರಾತನ್ನು ಆಶ್ರಯಿಸುತ್ತಾ ಲಾಭದ ಪ್ರಮಾಣದಲ್ಲಿ ಏರಿಕೆ ಕಂಡುಕೊಳ್ಳತೊಡಗಿದಂತೆಯೇ ಸಾಹಿತ್ಯ ಸತ್ವವುಳ್ಳ ಚಿಂತನಾತ್ಮಕ ಬರಹಗಳು ಪತ್ರಿಕೆಯಲ್ಲಿ ವಿರಳವಾಗುವುದಕ್ಕೆ ತೊಡಗಿತು. (ಪ್ರಸರಣ ಸಂಖ್ಯೆ ಕಡಿಮೆಯಾಗಿಯೂ ಜಾಹೀರಾತಿನ ಪ್ರಮಾಣವನ್ನು ಹೆಚ್ಚಿಸಿಕೊಂಡ ಈ ಹೊಂದಾಣಿಕೆಯಿಂದಾಗಿ ಪತ್ರಿಕೆಯ ಲಾಭಾಂಶದಲ್ಲಿ ಸಂಪಾದಕರು ಸ್ಥಿರೀಕರಣವನ್ನು ಕಂಡುಕೊಂಡರು).

1995ರ ಅನಂತರದಲ್ಲಿ ಮಾಹಿತಿ ಪ್ರಿಯರಾದ ಸಹೃದಯರು ವೈವಿಧ್ಯಮಯವಾದ ಮಾಹಿತಿಗಳಿಗಾಗಿಯೇ ಪತ್ರಿಕೆಯನ್ನು ಆಶ್ರಯಿಸುತ್ತಿದ್ದಂತೆಯೇ ಅದು ವಾಣಿಜ್ಯ ಕ್ಷೇತ್ರದ ಮುಖವಾಣಿಯಾಯಿತು. ಈ ಹೇಳಿಕೆಯು 20ನೇ ಶತಮಾನದ ಕೊನೆಯ ದಶಕದ ಎಲ್ಲ ಪತ್ರಿಕೆಗಳಿಗೂ ಅನ್ವಯಿಸಬಹುದಾದ ಸಾಮಾನ್ಯ ಹೇಳಿಕೆಯಾಗಿದೆ.

**20ನೇ ಶತಮಾನದಲ್ಲಿ ಕನ್ನಡ ಪತ್ರಿಕೋದ್ಯಮದ ಉಗಮ ಹಾಗೂ ವಿಕಾಸದ ಗತಿ:**

ಉಡುಪಿ ಜಿಲ್ಲೆಯ 20ನೇ ಶತಮಾನದ ಪತ್ರಿಕೋದ್ಯಮದ ಉಗಮ ಮತ್ತು ವಿಕಾಸದ ಗತಿಯನ್ನು ರೇಖಾಚಿತ್ರದಲ್ಲಿ ಗುರುತಿಸಿದಂತೆ ಹೀಗೆ ವಿವರಿಸಬಹುದಾಗಿದೆ–ಸ್ವಾತಂತ್ರ್ಯ ಹೋರಾಟದ ಜತೆಜತೆಯಲ್ಲಿಯೇ ಜನರಲ್ಲಿ ರಾಷ್ಟ್ರಾಭಿಮಾನ ಹಾಗೂ ಲೋಕಜ್ಞಾನದ ಅರಿವನ್ನುಂಟುಮಾಡುವುದಕ್ಕಾಗಿ ಹೊಸ ಹೊಸ ಪತ್ರಿಕೆಗಳು ಹುಟ್ಟಿಕೊಳ್ಳತೊಡಗಿದವು. 1946 ರಿಂದ 1949ರ

ಅವಧಿಯವರೆಗೆ ಪತ್ರಿಕೆಗಳ ಸಂಖ್ಯೆ ಗರಿಷ್ಠ ಮಟ್ಟವನ್ನು ತಲುಪಿತು. ಸ್ವಾತಂತ್ರ್ಯ ಹೋರಾಟವು ಯಶಸ್ವಿಯಾದಂತೆ ಪತ್ರಿಕೋದ್ಯಮದ ಮುಖ್ಯ ಆಶಯವೇ ಈಡೇರಿತು ಎಂಬ ಭಾವನೆಗೆ ಒಳಗಾದ ಪತ್ರಿಕಾ ಸಂಪಾದಕರು ಹೊಸ ಪತ್ರಿಕೆಗಳ ಆರಂಭಕ್ಕೆ ವಿದಾಯವನ್ನು ಹೇಳಿದ ಪ್ರಯುಕ್ತ 1960ರ ವರೆಗೂ ಹೊಸ ಪತ್ರಿಕೆಗಳ ಹುಟ್ಟು ಸ್ಥಗಿತಗೊಂಡಿತು. 1960ರ ನಂತರ ಪತ್ರಿಕೋದ್ಯಮ ಕ್ಷೇತ್ರವು ನಿಧಾನಗತಿಯಲ್ಲಿ ವಿಕಾಸವನ್ನು ಹೊಂದುತ್ತಾ 20ನೇ ಶತಮಾನದ ಕೊನೆಯ ದಶಕದಲ್ಲಿ ಗರಿಷ್ಠ ಸಂಖ್ಯೆಯಲ್ಲಿ ಪತ್ರಿಕೆಗಳು ಹುಟ್ಟಿಕೊಂಡವು. 1960ರ ಅನಂತರದಿಂದ ತುರ್ತುಪರಿಸ್ಥಿತಿಯ ಅವಧಿಯನ್ನು ಹೊರತುಪಡಿಸಿ, 2000ದ ವರೆಗಿನ ಅವಧಿಯಲ್ಲಿ ಪತ್ರಿಕೆಗಳು ಏರುಗತಿಯಲ್ಲಿ ವಿಕಾಸವನ್ನು ಹೊಂದಿದ ಪರಿಯನ್ನು ಮುಂದಿನ 'ರೇಖಾ ನಕ್ಷೆ'ಯಲ್ಲಿ ತೋರಿಸಬಹುದಾಗಿದೆ.

**ಕನ್ನಡ ಪತ್ರಿಕೋದ್ಯಮ ಸಾಹಿತ್ಯಚಟುವಟಿಕೆಯ ಅಂತಿಮ ಅವಲೋಕನ:**

ವಿವಿಧ ಪ್ರಾಂತ್ಯಗಳಲ್ಲಿ ಹಂಚಿಹೋದ ಕನ್ನಡ ಭಾಷಾಪ್ರದೇಶವು ಏಕೀಕರಣವನ್ನು ಸಾಧಿಸುವಲ್ಲಿ ಮತ್ತು ವಸಾಹತುಶಾಹಿ ವ್ಯವಸ್ಥೆಯಿಂದ ಭಾರತವನ್ನು ಮುಕ್ತಗೊಳಿಸುವಲ್ಲಿ ಪತ್ರಿಕೋದ್ಯಮದ ಪಾತ್ರವು ಮಹತ್ತರವಾದುದು ಎಂಬುದು ಈ ಅಧ್ಯಯನದಲ್ಲಿಯೂ ತಿಳಿದುಬರುತ್ತದೆ. 'ಕನ್ನಡ ವಾಗ್ಭೂಷಣ' ಎಂಬ ಪತ್ರಿಕೆ ಹಾಗೂ 'ಕರ್ನಾಟಕ ವಿದ್ಯಾವರ್ಧಕ ಸಂಘ' ಎಂಬ ಸಂಸ್ಥೆಯನ್ನು ಧಾರವಾಡದಲ್ಲಿ ಆರಂಭಿಸಿದ ರಾ.ಹ. ದೇಶಪಾಂಡೆಯವರು ಕನ್ನಡ ಭಾಷೆ-ಸಾಹಿತ್ಯ ಹಾಗೂ ಸಾಂಸ್ಕೃತಿಕಚಟುವಟಿಕೆಗಳಿಗೆ ಈ ಸಂಘಟನೆಯ ಮೂಲಕ ಚಾಲನೆಯನ್ನು ನೀಡಿದರು. ಕನ್ನಡ ಭಾಷಾ ಪತ್ರಿಕೋದ್ಯಮ ಚಟುವಟಿಕೆಯು ಏಕೀಕರಣಪೂರ್ವದಲ್ಲಿ ಮುಖ್ಯವಾಗಿ ಮೂರು ಕೇಂದ್ರಗಳಲ್ಲಿ ಗುರುತಿಸಿಕೊಂಡಿರುವುದನ್ನು ಆ ಕ್ಷೇತ್ರದಲ್ಲಿ ಅಧ್ಯಯನ ನಡೆಸಿದ ಡಾ. ಶ್ರೀನಿವಾಸ ಹಾವನೂರ ಮತ್ತು ನಾಡಿಗ ಕೃಷ್ಣಮೂರ್ತಿ ಅವರು ಸರಿಯಾಗಿಯೇ ಗುರುತಿಸಿರುತ್ತಾರೆ. ಆ ಮೂರು ಕೇಂದ್ರಗಳೇ ಬಾಂಬೆ ಪ್ರೆಸಿಡೆನ್ಸಿಯ ಆಡಳಿತಕ್ಕೊಳಪಟ್ಟ ಧಾರವಾಡ ಮತ್ತು ಮೈಸೂರು ರಾಜರ ಆಡಳಿತಕ್ಕೊಳಪಟ್ಟ ಹಳೆಯ ಮೈಸೂರು ಪ್ರದೇಶ ಹಾಗೂ ಮದ್ರಾಸ್ ಪ್ರೆಸಿಡೆನ್ಸಿಯ ಅಧೀನಕ್ಕೊಳಪಟ್ಟ ಮಂಗಳೂರು ಜಿಲ್ಲಾ ಕೇಂದ್ರವಾಗಿ ಗುರುತಿಸಿಕೊಂಡ ಅವಿಭಜಿತ ದಕ್ಷಿಣ ಕನ್ನಡ ಪ್ರದೇಶ.

1896ರಲ್ಲಿಯೇ ಕನ್ನಡ ವಾಗ್ಭೂಷಣ ಎಂಬ ಪತ್ರಿಕೆಗೆ ಕನ್ನಡದ ಮೊದಲ ತಲೆಮಾರಿನ ಲೇಖಕರು, ವಿದ್ವಾಂಸರೂ ಆದ ಆಲೂರು ವೆಂಕಟರಾಯರು, ಬೆನಗಲ್ ರಾಮರಾಯರು ತಿ.ತಾ. ಶರ್ಮ, ಬೆಟಗೇರಿ ಕೃಷ್ಣ ಶರ್ಮ, ಜಿ.ಬಿ. ಜೋಶಿ ಮೊದಲಾದವರು ಈ ಪತ್ರಿಕೆಯ ಪ್ರಸರಣಕ್ಕಾಗಿ ಸಂಪಾದಕ ನೆಲೆಯಲ್ಲಿ ದುಡಿದು, ಕನ್ನಡದ ಜಾಗೃತಿಗೆ ಕಾರಣರಾದರು. ಕನ್ನಡ ಸಾಹಿತ್ಯ ಪರಿಷತ್ತಿಗೆ ಸಮಾನವಾದ ಈ ಸಂಸ್ಥೆಯ ಚಟುವಟಿಕೆಗಳ ಪ್ರೇರಣೆಯಿಂದಾಗಿ ಮುಂದೆ 'ಗೆಳೆಯರ ಗುಂಪು' ಎಂಬ ಸಂಘಟನೆಯು ಧಾರವಾಡದಲ್ಲೇ ಹುಟ್ಟಿಕೊಂಡಿತು. ಜಯಕರ್ನಾಟಕ (1938), ಜಯಂತಿ(1938-77), ಎಂಬ ಮೌಲಿಕ ಸಾಹಿತ್ಯ ಪತ್ರಿಕೆಗಳು ಧಾರವಾಡದಲ್ಲಿ ಪ್ರಕಟಗೊಂಡವು. ಮುಂದಿನ ಕಾಲಘಟ್ಟದಲ್ಲಿ ಸಂಯುಕ್ತ ಕರ್ನಾಟಕ ಎಂಬ ದಿನಪತ್ರಿಕೆಯು ಪ್ರಕಟನೆಯನ್ನು ಆರಂಭಿಸಿ, ಉತ್ತರ ಕರ್ನಾಟಕದ ನಾಗರಿಕರ ಜನಪ್ರಿಯ ದಿನಪತ್ರಿಕೆಯಾಗಿ ಇಂದಿಗೂ ಮುಂದುವರಿಯುತ್ತಿದೆ. ಇದೇ ಪತ್ರಿಕೆಯ ಒಡೆತನದಲ್ಲಿ ಸಾಹಿತ್ಯ ವಿಷಯಗಳ ಪ್ರಕಟನೆಗಾಗಿ 'ಕರ್ಮವೀರ' ಪತ್ರಿಕೆಯು ಜನ್ಮತಾಳಿ ಈ ಪತ್ರಿಕೆಯ



ಪತ್ರಿಕೆಗಳ ಉಗಮ ಮತ್ತು ವಿಕಾಸ
ಪತ್ರಿಕೆಗಳ ಸಂಖ್ಯೆ
20
1
1
1
2
3
2
7
9
5
11
7
3
4
7
3
7
6
8
15
19
1900-1905
1906-1910
1911-1915
1915-1920
1921-1925
1926-1930
1931-1935
1936-1940
1941-1945
1946-1950
1951-1955
1956-1960
1961-1965
1966-1970
1971-1975
1976-1980
1981-1985
1986-1990
1991-1995
1996-2000
ವರ್ಷ

ಮುಖೇನ ಸಾಹಿತ್ಯ ಪ್ರಕಾರಗಳಾದ ಕಥೆ–ಕಾದಂಬರಿ, ಕವನಗಳು ವಿಶೇಷ ಆದ್ಯತೆಯ ನೆಲೆಯಲ್ಲಿ ಪ್ರಕಟಗೊಳ್ಳುವುದಕ್ಕೆ ತೊಡಗಿತು.

ಈ ಎಲ್ಲಾ ಸಾಹಿತ್ಯಚಟುವಟಿಕೆಗಳ ಪ್ರೇರಣೆಯಿಂದಾಗಿ ಉತ್ತರ ಕರ್ನಾಟಕದಲ್ಲಿ ಪ್ರಜ್ಞಾವಂತ ಓದುಗರ ಪಡೆಯೇ ರೂಪುಗೊಂಡಿತು. ಮುಂದಿನ ಹಂತವಾಗಿ ಪಾಟೀಲ ಪುಟ್ಟಪ್ಪನವರ ಸಂಪಾದಕತ್ವದಲ್ಲಿ 'ಪ್ರಪಂಚ' ಪಾಕ್ಷಿಕವು ಅಸ್ತಿತ್ವಕ್ಕೆ ಬಂದಿತು. ಸಂಯುಕ್ತ ಕರ್ನಾಟಕದ ಆಡಳಿತ ಬಳಗದಿಂದ ಪಾ. ವೆಂಕಟರಮಣ ಆಚಾರ್ಯರ ಸಮರ್ಥ ಸಂಪಾದಕತ್ವದಲ್ಲಿ 'ಕಸ್ತೂರಿ' (1956) ಎಂಬ ಮಾಸಿಕವು ಪ್ರಕಟಗೊಳ್ಳುವುದಕ್ಕೆ ಆರಂಭಿಸಿ, ಇಂದಿಗೂ ಯಶಸ್ವಿಯಾಗಿ ಮುಂದುವರಿಯುತ್ತಿದೆ. ವ್ಯಕ್ತಿಗತ ಪ್ರಯತ್ನದಿಂದ ತನ್ನದೇ ಆದ ಓದುಗ ವರ್ಗವನ್ನು ರೂಪಿಸಿಕೊಂಡ ಚಂಪಾ ಅವರು 'ಸಂಕ್ರಮಣ'ದ ಮೂಲಕ ಸಮಕಾಲೀನ ಕನ್ನಡ ಸಾಹಿತ್ಯ ಪ್ರವೃತ್ತಿಗಳಿಗೆ ಸ್ಪಂದಿಸುತ್ತಿದ್ದಾರೆ. ವಿಶ್ವವಿದ್ಯಾನಿಲಯದ ವತಿಯಿಂದ ಪ್ರಕಟಗೊಳ್ಳುವ 'ಕರ್ನಾಟಕ ಭಾರತಿ' ಕೃತಿ ವಿಮರ್ಶೆ ಹಾಗೂ ವೈಚಾರಿಕ ಲೇಖನಗಳಿಂದಾಗಿ ಕನ್ನಡಿಗರಿಂದ ಗುರುತಿಸಿಕೊಂಡಿದೆ.

ಹಳೆ ಮೈಸೂರು ಮತ್ತು ಬೆಂಗಳೂರು ಪರಿಸರವು ಕನ್ನಡ ಪತ್ರಿಕೋದ್ಯಮಚಟುವಟಿಕೆಯ ಎರಡನೇ ಕೇಂದ್ರ ಎಂದು ಗುರುತಿಸಲಾಗಿದೆ. ಕರ್ನಾಟಕ ವಿದ್ಯಾವರ್ಧಕ ಸಂಘವು ಕನ್ನಡಚಟುವಟಿಕೆಗಳಿಗಾಗಿ ದುಡಿದ ಮಾದರಿಯಲ್ಲಿಯೇ ಇಲ್ಲಿಯ 'ಪ್ರಬುದ್ಧ ಕರ್ನಾಟಕ'ವು ಕನ್ನಡ ಪರ ಚಟುವಟಿಕೆಗಳಿಗಾಗಿ ಪ್ರತ್ಯಕ್ಷ ಹಾಗೂ ಪರೋಕ್ಷವಾಗಿ ಶ್ರಮಿಸಿತು. ಬೆಂಗಳೂರು–ಹುಬ್ಬಳ್ಳಿಯನ್ನೇ ಕೇಂದ್ರವಾಗಿರಿಸಿಕೊಂಡು 20ನೇ ಶತಮಾನದ ಮೊದಲ ಸಾಲಿನ ಪತ್ರಿಕೆ ಎಂದು ಗುರುತಿಸಿಕೊಂಡ 'ಪ್ರಜಾಮತ', 'ಪ್ರಜಾವಾಣಿ', 'ಸುಧಾ', 'ಮಯೂರ' ಅನೇಕ ಏಳುಬೀಳುಗಳನ್ನು ಕಂಡು ಇಂದಿಗೂ ಯಶಸ್ವಿಯಾಗಿ ಮುಂದುವರಿಯುತ್ತಿರುವ ಜನಪ್ರಿಯ ಪತ್ರಿಕೆಗಳಾಗಿವೆ. ದಿ ಮೈಸೂರ್ ಪ್ರಿಂಟರ್ಸ್ ಪ್ರೈ.ಲಿ. ರವರ ಆಡಳಿತಕ್ಕೊಳಪಟ್ಟ ಈ ಪತ್ರಿಕೆಯನ್ನು ಟೀಯೆಸ್ಸಾರ್ ಎಂದೇ ಖ್ಯಾತರಾದ ಟಿ. ಎಸ್. ರಾಮಚಂದ್ರರಾಯರು ಬಿ.ಪುಟ್ಟಸ್ವಾಮಯ್ಯ, ಖಾದ್ರಿ ಶಾಮಣ್ಣ, ವೈ.ಎನ್.ಕೆ. ಎಂ.ಬಿ. ಸಿಂಗ್ ಮುಂತಾದ ಪತ್ರಿಕೋದ್ಯಮ ಧೀಮಂತರ ಸಂಪಾದಕತ್ವದಲ್ಲಿ ಯಶಸ್ವಿಯಾಗಿ ಮುನ್ನಡೆದಿದೆ. ಕನ್ನಡದ ಹಿರಿಯ ಸಾಹಿತಿಗಳ ಖ್ಯಾತ ಕಲಾಕೃತಿಗಳು ಈ ಮೇಲಿನ ಉಲ್ಲೇಖಿತ ಪತ್ರಿಕೆಗಳಲ್ಲಿ 20ನೇ ಶತಮಾನದುದ್ದಕ್ಕೂ (ಮತ್ತು ಇಂದಿಗೂ) ಪ್ರಕಟವಾಗುತ್ತಲೇ ಬಂದಿವೆ.

ವ್ಯಕ್ತಿಗತವಾಗಿ ತನ್ನ ಹೆಸರಿನಲ್ಲಿಯೇ ಪತ್ರಿಕೆ ನಡೆಸಿದ ಕನ್ನಡದ ಇನ್ನೋರ್ವ ಪತ್ರಕರ್ತ, ಪ್ರಾಧ್ಯಾಪಕ ದಿ। ಪಿ. ಲಂಕೇಶ್ ಇವರು ಸ್ಥಾಪಿತ ಹಿತಾಸಕ್ತಿಗಳ ಭ್ರಷ್ಟ ಮುಖವನ್ನು ಪತ್ರಿಕೆಯಲ್ಲಿ ಬಯಲುಮಾಡುತ್ತಾ, ಅದೇ ಪತ್ರಿಕೆಯ ಮತ್ತಷ್ಟು ಪುಟಗಳನ್ನು ಕನ್ನಡದಲ್ಲಿ ಆಗಿನ್ನೂ ಹೆಸರು ಮಾಡದ ಕೃತಿಕಾರರಿಗಾಗಿ ಮೀಸಲಿಟ್ಟರು. (ವೈದೇಹಿ, ಪೂರ್ಣಚಂದ್ರ ತೇಜಸ್ವಿ, ಸಾರಾ ಅಬೂಬಕರ್ ಇವರೆಲ್ಲರಿಗೂ ಅವಕಾಶ ನೀಡಿದ ಪತ್ರಿಕೆ)

**ಅವಿಭಜಿತ ದಕ್ಷಿಣ ಕನ್ನಡ ಜಿಲ್ಲೆಯ ತಾಲೂಕಾಗಿ ಮುಂದೆ ಜಿಲ್ಲೆ ಎಂದು ಗುರುತಿಸಿಕೊಂಡ ಉಡುಪಿ ಜಿಲ್ಲೆಯ ಪತ್ರಿಕೋದ್ಯಮದ ಸಂಕ್ಷಿಪ್ತ ವಿಶ್ಲೇಷಣೆ:** ಕ್ರಿ.ಶ. 1900 ರಿಂದ ಕ್ರಿ.ಶ. 2000ದ ವರೆಗಿನ ಕಾಲಾವಧಿಯ ನೂರು ವರ್ಷ ಅವಧಿಯಲ್ಲಿ 124 ಪತ್ರಿಕೆಗಳು ಉಡುಪಿ ಜಿಲ್ಲಾ ಭೌಗೋಳಿಕ ವ್ಯಾಪ್ತಿಯಲ್ಲಿ ಅಸ್ತಿತ್ವಕ್ಕೆ ಬಂದಿದ್ದವು. ಈ ಕಾಲಾವಧಿಯಲ್ಲಿ ಏಕೀಕರಣಪೂರ್ವದಲ್ಲಿ (1956ಕ್ಕೂ

ಮೊದಲು) ಅಸ್ತಿತ್ವಕ್ಕೆ ಬಂದು ಏಕೀಕರಣದೊಳಗಾಗಿಯೇ ಅವಸಾನಕಂಡ ಒಟ್ಟು ಪತ್ರಿಕೆಗಳ ಸಂಖ್ಯೆ 39. ಏಕೀಕರಣಪೂರ್ವದಲ್ಲಿ ಪ್ರಕಟನೆಗೊಂಡು, ಏಕೀಕರಣ ನಂತರದಲ್ಲೂ ಮುಂದುವರಿದ, ಉಡುಪಿ ಜಿಲ್ಲೆಯ ಒಟ್ಟು ಪತ್ರಿಕೆಗಳು 10. ಈ ಎಲ್ಲಾ ಪತ್ರಿಕೆಗಳ ಸಮೂಹದಲ್ಲಿ 20ನೇ ಶತಮಾನಾದ ಸುದೀರ್ಘ ಇತಿಹಾಸವುಳ್ಳ ಏಕೈಕ ಪತ್ರಿಕೆಯೇ 'ನವಯುಗ' ಪತ್ರಿಕೆಯಾಗಿದೆ. 'ನವಯುಗ' ಪತ್ರಿಕೆಯ ಯಶಸ್ಸಿನ ಬಗೆಯನ್ನು ಪತ್ರಕರ್ತ ಕವಿ ಕೈಯಾರರು ಈ ಪತ್ರಿಕೆಯ ಸುವರ್ಣೋತ್ಸವ ಸಂಚಿಕೆಯಲ್ಲಿ ಹೀಗೆ ವಿವರಿಸಿದ್ದಾರೆ: "ದಾಸ್ಯದ ಕೆಸರಲ್ಲಿ ನಮ್ಮ ರಾಷ್ಟ್ರಪುರುಷ ಅದ್ದಿ ನರಳುತ್ತಿದ್ದಾಗ, ಆ ಕಾಲದಲ್ಲಿ ಜನತೆಯನ್ನು ಶಕ್ತಿಶಾಲಿಯಾಗಿ ಸಂಘಟಿಸುವರೇ ದೇಶಭಾಷಾ ಪತ್ರಿಕೆಗಳು ಅತ್ಯಂತ ಹಿರಿದಾದುದು" (ಸುವರ್ಣ ಮಹೋತ್ಸವ ಸಂಪುಟ–1974). ಜನತೆಯನ್ನು ಶಕ್ತಿಶಾಲಿಯಾಗಿ ಸಂಘಟಿಸುವ ಪ್ರಯತ್ನ ಈ ಪತ್ರಿಕೆಯಿಂದ ನಡೆಯಿತೆಂಬ ಹೇಳಿಕೆ ನಿಜವಾದರೂ, ಉಡುಪಿ ಜಿಲ್ಲೆಯ ಹಿಂದುಳಿದ ವರ್ಗಗಳ ಮುಖವಾಣಿಯಾಗಿ ಈ ಪತ್ರಿಕೆ ಪ್ರಕಟಗೊಳ್ಳಲಿಲ್ಲ ಎನ್ನುವುದು ಪತ್ರಿಕೆಯ ಪ್ರಕಟಿತ ಲೇಖನಗಳಿಂದ ತಿಳಿದುಬರುತ್ತದೆ. ರಾಷ್ಟ್ರೀಯ ಹೋರಾಟವನ್ನು, ಗಾಂಧಿಯುಗದ ಮೌಲ್ಯವನ್ನು ಸ್ಥಳೀಯ ಧಾರ್ಮಿಕ ಸಂಸ್ಥೆಗಳ ಮೌಢ್ಯವನ್ನು ಖಂಡಿಸುವುದರೊಂದಿಗೆ ತನ್ನ ವಿಶೇಷ ಸಂಚಿಕೆಗಳಲ್ಲಿ ಪ್ರಾದೇಶಿಕ ಸಂಸ್ಕೃತಿಯ ವೈಶಿಷ್ಟ್ಯಗಳನ್ನು ವೈಭವೀಕರಿಸುವ ಸಾಹಿತ್ಯಕ್ಕಷ್ಟೇ ಪತ್ರಿಕೆ ಮುಂದಾಗಿರುವುದನ್ನು ಮುಂದಿನ ಕೆಲವು ದೃಷ್ಟಾಂತಗಳಿಂದ ಸಮರ್ಥಿಸಬಹುದಾಗಿದೆ.

ಕಾಂಗ್ರೇಸ್ ಪಕ್ಷದ ನಾಯಕರು, ಜಾತಿವಾದಿಗಳು, ಸ್ವಜನಪಕ್ಷಪಾತಿಗಳೂ ಆಗಿದ್ದು, ನಿಸ್ವಾರ್ಥದಿಂದ ದೇಶ ಹಿತಕ್ಕಾಗಿ ದುಡಿಯುವ ಸಮರ್ಥ ನಾಯಕನೊಬ್ಬನ ಅವಶ್ಯಕತೆಯನ್ನು ಶ್ರೀನಿವಾಸ ಉಪಾಧ್ಯಾಯ ಪಣಿಯಾಡಿಯವರು 1939ರ 'ಮಕರಸಂಕ್ರಾಂತಿ' ಸಂಚಿಕೆಯ ಪುಟ ಸಂಖ್ಯೆ 59 ಮತ್ತು 60ರಲ್ಲಿ 'ವಾಂಟೆಡ್ ಎ ಲೀಡರ್' ಎಂಬ ಶೀರ್ಷಿಕೆಯಲ್ಲಿ ಉಲ್ಲೇಖಿಸಿದ್ದಾರೆ. 'ಶ್ರೀಕೃಷ್ಣ ಮಠದಲ್ಲಿಯ ಸುವ್ಯವಸ್ಥೆ' ಎಂಬ 11.01.1940ರ ಪರ್ಯಾಯ ಸಂಚಿಕೆಯಲ್ಲಿ ಶ್ರೀ ಕೊರಡ್ಕಲ್ ಶ್ರೀನಿವಾಸರಾಯರು ಸಂಭಾಷಣಾ ತಂತ್ರದ ಶೈಲಿಯಲ್ಲಿ ಮಠಗಳು ಧಾರ್ಮಿಕ ಮೌಢ್ಯವನ್ನು ಕಳೆದುಕೊಂಡು ಜನಪರ ಕಾಳಜಿಯ ಯೋಜನೆಗಳನ್ನು ಹಮ್ಮಿಕೊಳ್ಳಬೇಕೆಂಬ ಚಿಂತನೆಯನ್ನುಳ್ಳ ವಿಚಾರಧಾರೆಯನ್ನು ಮಂಡಿಸಿರುವುದನ್ನು ಇಲ್ಲಿ ಉಲ್ಲೇಖಿಸಬಹುದಾಗಿದೆ. ಏಕೀರಣಪೂರ್ವದ ಮತ್ತು ಏಕೀಕರಣಾ ನಂತರದ ಉಡುಪಿ ಜಿಲ್ಲೆಯ ಯಾವುದೇ ಪತ್ರಿಕೆಯು ಶಿಕ್ಷಣವಂಚಿತ ಜನವರ್ಗದ ಮುಖವಾಣಿಯಾಗಿ ಮೂಡಿಬರಲಿಲ್ಲ ಎನ್ನುವುದು ವಾಸ್ತವವಿಚಾರ. ಶಾಲಾಶಿಕ್ಷಣದ ಅವಶ್ಯಕತೆಯನ್ನು ಮನಗಂಡ ದೇಸೀಯ ಮುಖಂಡರು ಹಳ್ಳಿಹಳ್ಳಿಗಳಲ್ಲಿ ಶಿಕ್ಷಣ ಸಂಸ್ಥೆಗಳನ್ನು ಆರಂಭಿಸಿ, ಸಾರ್ವತ್ರಿಕ ಶಿಕ್ಷಣ ಸಹಿತ 'ಸ್ತ್ರೀಶಿಕ್ಷಣ ಅಭಿಯಾನ'ಕ್ಕೂ ಮುಂದಾದರು. ಸ್ತ್ರೀಶಿಕ್ಷಣದ ಒಳಿತು ಕೆಡುಕುಗಳ ಕುರಿತು ಪತ್ರಿಕೆಯಲ್ಲಿ ಚರ್ಚೆಗಳಾದವು. ಆದರೆ ಯಾವೊಂದು ಪತ್ರಿಕೆಯೂ ಪರಿಶಿಷ್ಟಜಾತಿ ಮತ್ತು ಪಂಗಡದ ಶಿಕ್ಷಣವನ್ನು ಒಂದು ಆಂದೋಲನವೆಂಬಂತೆ ತಮ್ಮ ಧೋರಣೆಯನ್ನು ರೂಪಿಸಿಕೊಳ್ಳಲಿಲ್ಲ. ಬಾರಕೂರು ಸಮೀಪದ ಹನೆಹಳ್ಳಿ ಗ್ರಾಮದ ಕೂರಾಡಿ ಎಂಬಲ್ಲಿ ಕಲ್ಕೂರ ಸಹೋದರರು ಸ್ಥಾಪಿಸಿದ 'ಶಾಂತಿನಿಕೇತನ' ಶಾಲೆಯಲ್ಲಿ ಪರಿಶಿಷ್ಟಜಾತಿಯ ವಿದ್ಯಾರ್ಥಿಗಳಿಗೆ ವಸತಿಸಹಿತ, ಶಿಕ್ಷಣ ವ್ಯವಸ್ಥೆಗೆ ಚಾಲನೆ ನೀಡಿ ಹೊಸ ಕ್ರಾಂತಿಗೆ ಮುಂದಾದರು. ಈ ಶಿಕ್ಷಣಕ್ರಮವನ್ನು ಮೆಚ್ಚಿದ ಅಂದಿನ ರಾಷ್ಟ್ರೀಯ ಮುಂದಾಳು, 'ಅಂತರಂಗ' ಪತ್ರಿಕೆಯ ಸ್ಥಾಪಕ ಸಂಪಾದಕ ಏಸ್.ಯು. ಪಣಿಯಾಡಿಯವರು ಅಲ್ಲಿಗೆ ಭೇಟಿ ನೀಡಿದ ಸಂದರ್ಭದ ಅವರ ಭಾವಚಿತ್ರವು

ಶಾಲಾಸಂಸ್ಥಾಪಕರ ಮನೆಯ ಕೊಠಡಿಯಲ್ಲಿ ಇಂದಿಗೂ ಸಾಕ್ಷಿಯಾಗುಳಿದಿದೆ. ಕಲ್ಲೂರ ಸಹೋದರರ ಶಾಲಾ ಚಟುವಟಿಕೆಗಳು 'ಅಂತರಂಗ' ಪತ್ರಿಕೆಯಲ್ಲಿ ಕಿರು ವರದಿಯಾಗಿ ಪ್ರಕಟಗೊಂಡಿದೆ. 'ನವಯುಗ' ಪತ್ರಿಕೆಗಿಂತ 'ಅಂತರಂಗ' ಪತ್ರಿಕೆಯು ಈ ದಿಸೆಯಲ್ಲಿ ಹೆಚ್ಚು ಪ್ರಗತಿಪರವಾಗಿದ್ದು, ಸಾಮಾಜಿಕ ನ್ಯಾಯ ಮತ್ತು ಸ್ತ್ರೀದೌರ್ಜನ್ಯವನ್ನು ಹತ್ತಿಕ್ಕುವ ಅನೇಕ ಸಣ್ಣ ಕಥೆಗಳನ್ನು ಅಂತರಂಗ ಪ್ರಕಾಶನದ ವತಿಯಿಂದ ಪ್ರಕಟಿಸಿರುವುದನ್ನು ಗಮನಿಸಬಹುದಾಗಿದೆ. ಈಗಾಗಲೇ ಸಂಶೋಧನ ಪ್ರಬಂಧದಲ್ಲಿ ಉಲ್ಲೇಖಿಸಿದಂತೆ ಎಂ.ವಿ. ಹೆಗಡೆಯವರ 'ಮಗುವಿನ ತಂದೆ' ಕಥೆಯನ್ನು ಇಲ್ಲಿ ಪುನಃಸ್ಮರಿಸಿಕೊಳ್ಳಬಹುದಾಗಿದೆ.

ಏಕೀಕರಣಪೂರ್ವದ ಕಾಲಾವಧಿಯಲ್ಲಿ ಶಾಲಾಶಿಕ್ಷಣಕ್ಕೆ ತೆರೆದುಕೊಂಡ ಸೀಮಿತ ಸಂಖ್ಯೆಯ ಕೆಳಜಾತಿಯ ವಿದ್ಯಾರ್ಥಿಗಳು ತಮ್ಮ ಹಳ್ಳಿಯ ಗಡಿಯನ್ನು ದಾಟಿ, ಉನ್ನತಶಿಕ್ಷಣಕ್ಕೆ ಪ್ರವೇಶಪಡೆಯಲು ಸಾಧ್ಯವಿಲ್ಲದ ಕಾರಣ ತಮ್ಮ ಶಿಕ್ಷಣವನ್ನು ಅರ್ಧದಲ್ಲಿಯೇ ಮೊಟಕುಗೊಳಿಸಿದ ಉದಾಹರಣೆಗಳನ್ನು ಗಮನಿಸಬಹುದಾಗಿದೆ. ಏಕೀಕರಣಪೂರ್ವದಲ್ಲಿ ಯಾವುದೇ ವಿದ್ಯಾರ್ಥಿಯು ಬರಹಗಾರನಾಗುವುದಾಗಲೀ, ಉನ್ನತ ಹುದ್ದೆಗಳಿಗೆ ಅರ್ಹತೆ ಹೊಂದಿದ ವಿದ್ಯಾಭ್ಯಾಸ ಪಡೆಯುವುದಾಗಲೀ, ಆರ್ಥಿಕ, ಸಾಮಾಜಿಕ ಕಾರಣಗಳಿಂದ ಕಷ್ಟಸಾಧ್ಯವಾಗಿತ್ತು. ಉಡುಪಿ ಜಿಲ್ಲೆಯಲ್ಲಿ 20ನೇ ಶತಮಾನದಲ್ಲಿ ಅಸ್ತಿತ್ವದಲ್ಲಿದ್ದ ಒಟ್ಟು ಪತ್ರಿಕೆಗಳ ಸಂಖ್ಯೆ 125. ಇವುಗಳಲ್ಲಿ ಏಕೀಕರಣಪೂರ್ವದಲ್ಲಿ ಅಸ್ತಿತ್ವಕ್ಕೆ ಬಂದ ಒಟ್ಟು ಪತ್ರಿಕೆಗಳ ಸಂಖ್ಯೆ 49. ಇವುಗಳಲ್ಲಿ ಧಾರ್ಮಿಕ ವಿಷಯಗಳಿಗೆ ಸಂಬಂಧಿಸಿದ ಒಟ್ಟು ಪತ್ರಿಕೆಗಳ ಸಂಖ್ಯೆ 8, ರಾಜಕೀಯ, ವಾಣಿಜ್ಯ ಹಾಗೂ ಸ್ಥಳೀಯ ಸುದ್ದಿಗೆ ಸಂಬಂಧಿಸಿದ ಒಟ್ಟು ಪತ್ರಿಕೆಗಳ ಸಂಖ್ಯೆ 18, ಸಾಹಿತ್ಯ ಬರಹಗಳಿಗೆ ಮೀಸಲಾದ ಪತ್ರಿಕೆಗಳ ಸಂಖ್ಯೆ 23. (ಸಾಹಿತ್ಯ ಬರಹಗಳಿಗೆ ಮೀಸಲಾದ 23 ಪತ್ರಿಕೆಗಳಲ್ಲಿ 6 ಪತ್ರಿಕೆಗಳು ಕೈಬರಹದ ಪತ್ರಿಕೆಗಳಾಗಿದ್ದವು). ಈ ಅಂಕಿ ಅಂಶಗಳಿಂದ ತಿಳಿದುಬರುವಂತೆ ಏಕೀಕರಣಪೂರ್ವಕಾಲದಲ್ಲಿ ಪ್ರಕಟವಾಗುತ್ತಿದ್ದ ಪತ್ರಿಕೆಗಳಲ್ಲಿ ಸಾಹಿತ್ಯ ವಿಚಾರಗಳಿಗೆ ಪ್ರಾಮುಖ್ಯ ನೀಡುತ್ತಿದ್ದ ಪತ್ರಿಕೆಗಳು ಕೇವಲ 48% ಮಾತ್ರ ಆಗಿದೆ.

ಏಕೀಕರಣೋತ್ತರ ಕಾಲದಲ್ಲಿ ಒಟ್ಟು ಪ್ರಕಟಿತ ಪತ್ರಿಕೆಗಳು 75 ಸಂಖ್ಯೆಯಷ್ಟಿದ್ದು, ಇವುಗಳಲ್ಲಿ ಧಾರ್ಮಿಕ ವಿಷಯಗಳಿಗೆ ಸಂಬಂಧಿಸಿದ ಒಟ್ಟು ಪತ್ರಿಕೆಗಳು 11 ಮಾತ್ರ. 29 ಪತ್ರಿಕೆಗಳು ಕೇವಲ ರಾಜಕೀಯ ಮತ್ತು ಊರ ಸುದ್ದಿಗಾಗಿಯೇ ಪ್ರಕಟವಾಗುತ್ತಿದ್ದ ಪತ್ರಿಕೆಗಳಾಗಿದ್ದವು. ಇನ್ನುಳಿದ 35 ಪತ್ರಿಕೆಗಳು ಸಾಹಿತ್ಯ ವಿಚಾರಗಳಿಗೆ ಮೀಸಲಾದ ಪತ್ರಿಕೆಗಳಾಗಿದ್ದವು. ಈ ಅಂಕಿ ಅಂಶಗಳಂತೆ ಏಕೀಕರಣೋತ್ತರ ಕಾಲದ ಒಟ್ಟು ಪ್ರಕಟಿತ ಪತ್ರಿಕೆಗಳಲ್ಲಿ ಸಾಹಿತ್ಯ ವಿಚಾರಗಳಿಗೆ ಪ್ರಾಮುಖ್ಯ ನೀಡಿದ ಪತ್ರಿಕೆಗಳು 47% ಮಾತ್ರ ಆಗಿದೆ ಎನ್ನುವುದನ್ನು ಅಧ್ಯಯನದಿಂದ ಕಂಡುಕೊಳ್ಳಲಾಗಿದೆ.

**ಉಡುಪಿ ಜಿಲ್ಲಾ ಪತ್ರಿಕೆಗಳ ವಿಶೇಷ ವೈಶಿಷ್ಟ್ಯಗಳು:**

1. ಏಕೀಕರಣಪೂರ್ವದಲ್ಲಿ ಉಡುಪಿ ಜಿಲ್ಲೆಯಿಂದ ಪ್ರಕಟವಾಗುತ್ತಿದ್ದ 49 ಪತ್ರಿಕೆಗಳಲ್ಲಿ ಕೇವಲ ಏಳು ಪತ್ರಿಕೆಗಳು ಮಾತ್ರ ಅವಿಭಜಿತ ಜಿಲ್ಲೆಯ ಗಡಿಯನ್ನು ದಾಟಿ, ಅಖಿಲ ಕರ್ನಾಟಕ ಮಟ್ಟದಲ್ಲಿ ಪ್ರಸರಣದಲ್ಲಿದ್ದು, ಓದುಗರನ್ನು ಹೊಂದಿದ್ದರೆನ್ನುವುದು ತಿಳಿದುಬರುತ್ತದೆ. ಉಳಿದಂತೆ 42 ಪತ್ರಿಕೆಗಳು ಜಿಲ್ಲೆಯಲ್ಲಿಯೇ ಹುಟ್ಟಿ, ಜಿಲ್ಲೆಯಲ್ಲಿಯೇ ಕೊನೆಗೊಂಡವು.

2. ಏಕೀಕರಣಪೂರ್ವದಲ್ಲಿ ಅಸ್ತಿತ್ವಕ್ಕೆ ಬಂದು 20ನೇ ಶತಮಾನದ ಅಂತ್ಯದವರೆಗೆ ಪ್ರಕಟನೆ ಮುಂದುವರಿಸಿಕೊಂಡು ಬಂದ ಪತ್ರಿಕೆಗಳು ಎಂದು ಉಲ್ಲೇಖಿಸುವುದಕ್ಕೆ ಜಿಲ್ಲೆಯಲ್ಲಿ ಯಾವೊಂದು ಪತ್ರಿಕೆಗಳ ಉದಾಹರಣೆಯೇ ಇಲ್ಲ ಎನ್ನುವುದನ್ನು ಕಂಡುಕೊಳ್ಳಲಾಗಿದೆ.

3. ನಾಡು-ನುಡಿಯ ಏಳಿಗೆಗಾಗಿ ಉತ್ತರ ಕರ್ನಾಟಕದಲ್ಲಿ ಕರ್ನಾಟಕ ವಿದ್ಯಾವರ್ಧಕ ಸಂಸ್ಥೆಯು ಅಸ್ತಿತ್ವಕ್ಕೆ ಬಂದಿದ್ದು, 1930ರ ತನಕವೂ ಈ ಮಾದರಿಯ ಸಾಹಿತ್ಯಕ ಸಂಸ್ಥೆಗಳು ಜಿಲ್ಲೆಯಲ್ಲಿ ಅಸ್ತಿತ್ವಕ್ಕೆ ಬಂದಿಲ್ಲ ಎನ್ನುವುದನ್ನು ಅಧ್ಯಯನದಿಂದ ಕಂಡುಕೊಳ್ಳಬಹುದಾಗಿದೆ.

4. 'ವಸಂತ', 'ಸುಪ್ರಭಾತ', 'ಅಂತರಂಗ' 'ಯುಗಪುರುಷ' ಈ ನಾಲ್ಕು ಪತ್ರಿಕೆಗಳು ಮಾತ್ರವೇ ಏಕೀಕರಣಪೂರ್ವದಲ್ಲಿ ಸಾಹಿತ್ಯವಿಷಯಕ್ಕೆ ಪ್ರಾಶಸ್ತ್ಯನೀಡಿದ ಪತ್ರಿಕೆಗಳಾಗಿದ್ದವು. ಈ ನಾಲ್ಕೂ ಪತ್ರಿಕೆಗಳಿಗೂ ಜಿಲ್ಲೆಯ ಹೊರಗಿನ ಓದುಗರು ಸಾಕಷ್ಟಿದ್ದರು. ಆದರೆ ವಸಂತ ಕೇವಲ ಎರಡು ವರ್ಷದಲ್ಲಿಯೂ, ಸುಪ್ರಭಾತ ಕೇವಲ ಒಂದು ವರ್ಷದಲ್ಲಿಯೂ, ಅಂತರಂಗ ಒಂಬತ್ತು ವರ್ಷಗಳಲ್ಲಿಯೂ ತನ್ನ ಪ್ರಕಟನೆಯನ್ನು ನಿಲ್ಲಿಸಿತು. (ಯುಗಪುರುಷ ಪತ್ರಿಕೆಯು ದ.ಕ. ಜಿಲ್ಲೆಯ ಕಿನ್ನಿಗೋಳಿಯಲ್ಲಿ ಪ್ರಕಟನೆಗೊಂಡು ಪ್ರಸರಣಗೊಳ್ಳುವುದಕ್ಕೆ ತೊಡಗಿ ಇಂದಿಗೂ ಅಲ್ಲಿಯೇ ಪ್ರಕಟಗೊಳ್ಳುತ್ತಿದೆ).

5. ಸಾಹಿತ್ಯ, ಸಾಹಿತ್ಯವಿಮರ್ಶೆ, ಸಂಶೋಧನೆ, ಲಲಿತಕಲೆಯ ಸುದ್ದಿ ಬಿತ್ತರಕ್ಕಾಗಿ ಏಕೀಕರಣೋತ್ತರ ಕಾಲಘಟ್ಟದಲ್ಲಿ 6 ಪತ್ರಿಕೆಗಳು ಅಸ್ತಿತ್ವಕ್ಕೆ ಬಂದಿದ್ದು, ಇವುಗಳಲ್ಲಿ 'ತುಳುವ' ಎಂಬ ಒಂದೇ ಪತ್ರಿಕೆಯು 20 ನೇ ಶತಮಾನವನ್ನು ದಾಟಿ, 21ನೇ ಶತಮಾನದಲ್ಲೂ ಪ್ರಕಟನೆಯನ್ನು ಮುಂದುವರಿಸಿದೆ.

6. 1970ರ ತನಕವೂ ಉಡುಪಿ ಜಿಲ್ಲೆಯಿಂದ ಯಾವೊಂದು ದಿನಪತ್ರಿಕೆಯೂ ಪ್ರಕಟಗೊಂಡಿರುವುದಿಲ್ಲ ಎನ್ನುವುದನ್ನು ಈ ಅಧ್ಯಯನದಲ್ಲಿ ಗುರುತಿಸಲಾಗಿದೆ.

7. ಪರಿಶಿಷ್ಟ ಜಾತಿ-ಜನಾಂಗ, ಹಿಂದುಳಿದ ಸಮೂಹದ ಆಶೋತ್ತರಗಳನ್ನು ಬಿಂಬಿಸಲೋಸುಗ 1992ರಲ್ಲಿ 'ಪೀಂಚಲು' ಎಂಬ (ಮಾಸಿಕ) ಪತ್ರಿಕೆಯನ್ನು ದೇವದಾಸ್ ಶೆಟ್ಟಿ ಎಂಬುವವರು ತಮ್ಮ ಸಂಪಾದಕತ್ವದಲ್ಲಿ ಆರಂಭಿಸಿದರು. ಕೇವಲ ಎರಡು ಸಂಚಿಕೆಯನ್ನಷ್ಟೇ ನೀಡಿ ಈ ಪತ್ರಿಕೆಯು ನಿಂತಿತು. ಆದರೆ ಇದೊಂದು ವಿನೂತನ ಪ್ರಯತ್ನ ಎನ್ನುವುದನ್ನು ಈ ಅಧ್ಯಯನದಲ್ಲಿ ಗಮನಿಸಲಾಗಿದೆ. ಪರಿಶಿಷ್ಟ ಜಾತಿ-ಪಂಗಡ, ಹಿಂದುಳಿದ ವರ್ಗಗಳ ಆಶೋತ್ತರಗಳನ್ನು ಸಮರ್ಪಕವಾಗಿ ಪ್ರತಿನಿಧಿಸುವ ಯಾವುದೇ ಒಂದು ನಿರ್ದಿಷ್ಟ ಪತ್ರಿಕೆಯು ಉಡುಪಿ ಜಿಲ್ಲೆಯಲ್ಲಿ ಈ ತನಕ ಅಸ್ತಿತ್ವಕ್ಕೆ ಬಂದ ಉದಾಹರಣೆಗಳೇ ಇಲ್ಲ. ಎಲ್ಲ ಪತ್ರಿಕೆಗಳು ಸಾಂಪ್ರದಾಯಿಕ ಶಿಕ್ಷಣವನ್ನು ಹೊಂದಿದ ಮೇಲ್ವರ್ಗ-ಜಾತಿಗೆ ಸೇರಿದ ಸಂಪಾದಕರಿಂದಲೇ ಪ್ರಕಟಗೊಂಡುವು ಎಂಬುದು ಈ ಜಿಲ್ಲೆಯ ಪತ್ರಿಕೋದ್ಯಮದ ವಸ್ತುಸ್ಥಿತಿ. ಈ ಹೇಳಿಕೆಗೆ ಅಪವಾದ ಎಂಬಂತೆ 1990ರ ದಶಕದ ಅನಂತರದಲ್ಲಿ ಹಿಂದುಳಿದ ಸಮೂಹದ ಸಂಪಾದಕತ್ವದಲ್ಲಿ ವಿವಿಧ ಜಾತಿ ಮತಗಳಿಗೆ ಸೇರಿದ ಲೇಖಕರ ಸಂಪಾದಕತ್ವದಲ್ಲಿ ವಾರ, ಪಾಕ್ಷಿಕ, ಮಾಸ ಪತ್ರಿಕೆಗಳು ಪ್ರಕಟನೆಗೊಂಡು ಅವುಗಳೆಲ್ಲವೂ ಮಾರುಕಟ್ಟೆ ಇಲ್ಲದೆ ಪ್ರಕಟನೆಯನ್ನು ನಿಲ್ಲಿಸಿದುವು.

8. "ಅಂಗಹೀನರಾದವರು, ಮನೋವಿಕಲರಾದವರು ಸಮಾಜ ಹಾಗೂ ಸರಕಾರದ ಹೆಚ್ಚಿನ ರಕ್ಷಣೆಗೆ ಅರ್ಹರು. ಅವರ ಬದುಕನ್ನು ಹಸನುಗೊಳಿಸಲು ಸರ್ವ ಪ್ರಯತ್ನಗಳನ್ನು ಮಾಡುವುದು ಪ್ರತಿಯೊಬ್ಬ ನಾಗರಿಕನ ಕರ್ತವ್ಯ" ಎಂಬುದಾಗಿ 'ಅಪಂಗಾ' ಎಂಬ ಹೆಸರಿನಲ್ಲಿ ಅಂಗವೈಕಲ್ಯಕ್ಕೊಳಗಾದ ಕೊಲ್ಲೂರಿನ ಯುಗಾನಂದ ಶೆಟ್ಟಿಯವರ ಸಂಪಾದಕತ್ವದಲ್ಲಿ ಬಂದ ಪತ್ರಿಕೆಯ ಕುರಿತಾಗಿ ಕೈಯಾರ ಕಿಞ್ಞಣ್ಣ ರೈಯವರು ಆ ಪತ್ರಿಕೆಗೆ ಅದರ ಸಂಪುಟ–1, ಸಂಚಿಕೆ–1ರ ಪುಟ–5ರಲ್ಲಿ (1979 ಸೆಪ್ಟೆಂಬರ್) ಶುಭ ಹಾರೈಸಿದ್ದರು. ಆದರೆ ಯುಗಾನಂದರ ಈ ಪ್ರಯತ್ನಕ್ಕೆ ಜನತೆಯ ಪ್ರೋತ್ಸಾಹ ಇಲ್ಲದೆ ಕೇವಲ ನಾಲ್ಕೇ ಸಂಚಿಕೆಗೆ ಪತ್ರಿಕೆಯು ಕೊನೆಗೊಂಡಿತು. ಅಂಗವಿಕಲರೊಬ್ಬರು ಪತ್ರಿಕೆಯನ್ನು ಹುಟ್ಟುಹಾಕಿ ಸರಕಾರದ ಮತ್ತು ಸಮಾಜದ ಪ್ರೋತ್ಸಾಹವನ್ನು ಯಾಚಿಸಿರುವುದು ಪತ್ರಿಕೋದ್ಯಮದ ದೃಷ್ಟಿಯಿಂದ ಉಲ್ಲೇಖಿಸಬೇಕಾದ ಅಂಶ. ಆದರೆ ಜಿಲ್ಲೆಯ ಜನತೆ ಅವರ ಪ್ರಯತ್ನಕ್ಕೆ ಪೂರಕವಾಗಿ ಸ್ಪಂದಿಸಲಿಲ್ಲ ಎಂಬುವುದನ್ನು ಅಧ್ಯಯನದಲ್ಲಿ ಗುರುತಿಸಲಾಗಿದೆ.

9. ಏಕೀಕರಣೋತ್ತರ ಕಾಲಾವಧಿಯಲ್ಲಿ ಜಾತಿ–ಧರ್ಮ ಎನ್ನುವ ಎರಡೇ ಬಂಡವಾಳವನ್ನು ಹಿನ್ನೆಲೆಯಾಗಿ ಹೊಂದಿದ್ದು, ಇದುವೇ ಮಾರುಕಟ್ಟೆ ತಂತ್ರದ ವ್ಯೂಹವನ್ನಾಗಿ ಕಂಡುಕೊಂಡು, ಅಸ್ತಿತ್ವಕ್ಕೆ ಬಂದ ಎಲ್ಲಾ ಪತ್ರಿಕೆಗಳೂ 21ನೇ ಶತಮಾನದಲ್ಲೂ ಯಶಸ್ವಿಯಾಗಿ ಮುಂದುವರಿದುಕೊಂಡು ಬರುತ್ತಿದೆ ಎನ್ನುವುದು ಈ ಜಿಲ್ಲೆಯ ಪತ್ರಿಕೆಯ ಇನ್ನೊಂದು ವಾಸ್ತವ.

10. ಸಂಪಾದಕೀಯವು ಪತ್ರಿಕೆಯ ಅವಿಭಾಜ್ಯ ಅಂಗವಾಗಿದ್ದು, ಇದು ಪತ್ರಿಕೆಯ ಸಂಪಾದಕರ ಧೋರಣೆ, ನೀತಿ, ನಿಲುವುಗಳನ್ನು ತಿಳಿಯುವುದಕ್ಕಿರುವ ಮುಖ್ಯ ವಿಭಾಗವಾಗಿದೆ. ಸಾರ್ವಜನಿಕ ಅಭಿಪ್ರಾಯವನ್ನು ರೂಪಿಸುವಲ್ಲಿ ಇದೊಂದು ಸೂಕ್ತ ವೇದಿಕೆಯಾಗಿದ್ದರೂ, ಸಂಪಾದಕೀಯ ವಿಭಾಗ ಇಲ್ಲದೆಯೂ ಈ ಜಿಲ್ಲೆಯ ಗರಿಷ್ಠ ಮಾರುಕಟ್ಟೆಯುಳ್ಳ (ಉದಯವಾಣಿ) ಪತ್ರಿಕೆಯು 20ನೇ ಶತಮಾನದಲ್ಲಿ ಆರಂಭಗೊಂಡು 21ನೇ ಶತಮಾನದಲ್ಲಿ ಅದೇ ಪ್ರಸಿದ್ಧಿಯೊಂದಿಗೆ ಮುಂದುವರಿಯುತ್ತಿರುವುದು ಈ ಜಿಲ್ಲೆಯ ಪತ್ರಿಕೋದ್ಯಮದ ಇನ್ನೊಂದು ವಾಸ್ತವವಾಗಿದೆ.

11. ಸಾಹಿತ್ಯ ವಿಮರ್ಶೆ, ಸಂಶೋಧನೆಗೆ ಸಂಬಂಧಿಸಿದ ವಿಷಯ ಪ್ರತಿಪಾದನೆಗಾಗಿ ಇತರ ಎರಡು ಕೇಂದ್ರ ಪ್ರದೇಶಗಳಲ್ಲಿ (ಧಾರವಾಡ, ಬೆಂಗಳೂರು) 'ಪ್ರಬುದ್ಧ ಕರ್ನಾಟಕ', 'ಜಯಂತಿ', 'ಸಾಧನೆ' ಮುಂತಾದ ಉತ್ಕೃಷ್ಟ ಮಟ್ಟದ ಪತ್ರಿಕೆಗಳು ಉಡುಪಿ ಜಿಲ್ಲೆಯಲ್ಲಿ ಪ್ರಕಟಗೊಂಡಿಲ್ಲ ಎನ್ನುವುದು ಉಡುಪಿ ಜಿಲ್ಲೆಯ ಪತ್ರಿಕೋದ್ಯಮದ ಮಿತಿ ಎಂಬುದನ್ನು ಕಂಡುಕೊಳ್ಳಲಾಗಿದೆ. ವಿಪುಲ ಸಂಖ್ಯೆಯ ಬರಹಗಾರರಿದ್ದೂ, ವಿಮರ್ಶಕರಿದ್ದೂ, ಈ ಜಿಲ್ಲೆಯ ವ್ಯಾಪ್ತಿಯಲ್ಲಿ ಕೇವಲ ಸಾಹಿತ್ಯ ಮತ್ತು ಸಾಹಿತ್ಯ ವಿಮರ್ಶೆಗೆ ಸಂಬಂಧಿಸಿದ ಪತ್ರಿಕೆ 20ನೇ ಶತಮಾನದ ಕಾಲಾವಧಿಯಲ್ಲಿ ಮೂಡಿಬಂದಿಲ್ಲ ಎಂಬ ವಾಸ್ತವವನ್ನು ಈ ಅಧ್ಯಯನದ ಸಂದರ್ಭದಲ್ಲಿ ಗುರುತಿಸಲಾಗಿದೆ. 21ನೇ ಶತಮಾನದಲ್ಲಿ ಕಾಂತಾವರ ಕನ್ನಡ ಸಂಘವು 'ಕರಣ ಕಾರಣ' ಎಂಬ ವಿಮರ್ಶಾ ಮಾಸಿಕ ಸಂಕಲನವನ್ನೂ, ಕುಂದಾಪುರದ

ಎನ್.ಆರ್.ಎಚ್. ಪ್ರಕಾಶನವು 'ಸ್ಥಿತಿ-ಗತಿ' ಎಂಬ ತ್ರೈಮಾಸಿಕ ಸಂಚಿಕೆಯನ್ನೂ ಪ್ರಕಟಿಸುವುದಕ್ಕೆ ತೊಡಗಿರುವುದು ಈ ಶತಮಾನದ ಹೊಸ ಹೆಜ್ಜೆ ಎನ್ನುವುದನ್ನು ಅಧ್ಯಯನದಲ್ಲಿ ಗುರುತಿಸಲಾಗಿದೆ.

**ಉಡುಪಿ ಜಿಲ್ಲೆಯ ಪತ್ರಿಕೋದ್ಯಮ ಚಟುವಟಿಕೆಗೆ ಇತರ ಜಿಲ್ಲಾ ಕವಿ/ಸಾಹಿತಿಗಳ ಕೊಡುಗೆ:**

ಉಡುಪಿ ಜಿಲ್ಲೆಯ ಪತ್ರಿಕೆಗಳಲ್ಲಿ ಇತರ ಜಿಲ್ಲೆಯ ಲೇಖಕರು ತಮ್ಮ ಸಾಹಿತ್ಯ/ವೈಚಾರಿಕ ಲೇಖನಗಳನ್ನು ನೀಡುವುದರೊಂದಿಗೆ ಪತ್ರಿಕೆಯ ಮೌಲ್ಯವನ್ನು ಹೆಚ್ಚಿಸಿದ್ದರು. 20ನೇ ಶತಮಾನದ ಮೊದಲ ಪತ್ರಿಕೆ ಎಂದು ಉಲ್ಲೇಖಿಸಬಹುದಾದ (ಈ ಅಧ್ಯಯನ ದೃಷ್ಟಿಯಿಂದ ಮಾತ್ರ). ಶ್ರೀಕೃಷ್ಣ ಸೂಕ್ತಿಯಿಂದ ತೊಡಗಿ 1982ರಿಂದ ಪ್ರಕಟನೆ ಆರಂಭಿಸಿದ ಮತ್ತು ಈಗಲೂ ಯಶಸ್ವಿಯಾಗಿ ಪ್ರಕಟನೆ ಮುಂದುವರಿಸಿದ ತರಂಗ ಪತ್ರಿಕೆಯ ತನಕ ಇದು ಮುಂದುವರಿಯುತ್ತಲೇ ಇದೆ. (ಕೇವಲ ಸಾಹಿತ್ಯ ವಿಷಯಕ ಪತ್ರಿಕೆಗಳಲ್ಲಿ ಮಾತ್ರವಲ್ಲದೆ ಉಳಿದ ವಿಷಯವರ್ಗದ ಪತ್ರಿಕೆಗಳಲ್ಲೂ ಈ ವಿಷಯವನ್ನು ಮನಗಾಣಬಹುದಾಗಿದೆ). ಈ ಪತ್ರಿಕೆಯನ್ನು ತಮ್ಮ ಮೌಲಿಕ ಬರಹಗಳಿಂದ ಸತ್ವವನ್ನು ಹೆಚ್ಚಿಸಿದವರು ಕೆರೂರು ವಾಸುದೇವ ಆಚಾರ್ಯ, ಹೊಸಕೆರೆ ಚಿದಂಬರಯ್ಯ, ಬಿ. ವೆಂಕಟಾಚಾರ್, ನಂಜನಗೂಡು ಶ್ರೀಕಂಠ ಶಾಸ್ತ್ರಿ, ಮಾಸ್ತಿ ವೆಂಕಟೇಶ ಅಯ್ಯಂಗಾರ್ ಮುಖ್ಯರಾಗಿದ್ದಾರೆ. ಇವರುಗಳ ಲೇಖನ ಕೊಡುಗೆಯನ್ನು ಪತ್ರಿಕೆಯ ಸಂಪಾದಕರಾದ ಕಡೆಕಾರು ರಾಜಗೋಪಾಲಕೃಷ್ಣರಾಯರ ಕುರಿತು ವಿಶೇಷ ಅಧ್ಯಯನ ನಡೆಸಿದ ಡಾ. ಹಾ. ತಿ. ಕೃಷ್ಣೇಗೌಡರು ಗುರುತಿಸಿದ್ದಾರೆ.

ಡಾ. ದ.ರಾ. ಬೇಂದ್ರೆ, ಗೋವಿಂದ ಪೈ, ಮುಳಿಯ ತಿಮ್ಮಪ್ಪಯ್ಯ ಮುಂತಾದವರು 'ವಸಂತ' ಪತ್ರಿಕೆಗೆ ತಮ್ಮ ಕೃತಿಗಳನ್ನು ಪ್ರಕಟನೆಗಾಗಿ ಕಳುಹಿಸಿದ್ದರು ಎಂಬ ಉಲ್ಲೇಖ ಆ ಪತ್ರಿಕೆಯ ಸಂಸ್ಥಾಪಕ ಸಂಪಾದಕರೂ ಆಗಿದ್ದ ಡಾ. ಶಿವರಾಮ ಕಾರಂತರು ತಮ್ಮ 'ಸ್ಮೃತಿಪಟಲದಿಂದ' ಎಂಬ ತಮ್ಮ ಆತ್ಮಚರಿತ್ರೆಯಲ್ಲಿ ದಾಖಲಿಸಿಕೊಂಡಿದ್ದರು. ಏಕೀಕರಣಪೂರ್ವದಲ್ಲಿ ಪ್ರಕಟನೆಯನ್ನು ಆರಂಭಿಸಿ, ಏಕೀಕರಣೋತ್ತರ ಕಾಲದಲ್ಲಿ ಮುಂದುವರಿದ ಸುದೀರ್ಘ 50 ವರ್ಷದ ಇತಿಹಾಸವುಳ್ಳ ಉಡುಪಿ ಜಿಲ್ಲೆಯ ನವಯುಗ ಪತ್ರಿಕೆಗೂ ಇತರ ಜಿಲ್ಲಾ ಸಾಹಿತಿ/ಕವಿಗಳು ತಮ್ಮ ಬರಹಗಳನ್ನು ನೀಡಿದ್ದರು. ಅವರುಗಳಲ್ಲಿ ಉಲ್ಲೇಖಿಸಲೇಬೇಕಾದ ಹೆಸರುಗಳು- ಶ್ರೀ ಕೆ.ವಿ. ಪುಟ್ಟಪ್ಪ, ಗೋವಿಂದ ಪೈ, ಸಿಂಪಿ ಲಿಂಗಣ್ಣ, ಯು. ರಾಘವೇಂದ್ರ ಆಚಾರ್ಯ (ಮದ್ರಾಸ್ ಲೊಯೋಲಾ ಕಾಲೇಜಿನ ಭೌತಶಾಸ್ತ್ರ ಪ್ರಾಧ್ಯಾಪಕರು) ಮುಂತಾದ ಹಿರಿಯ ಲೇಖಕರ ಬರಹಗಳನ್ನು ನವಯುಗದಲ್ಲಿ ಗಮನಿಸಬಹುದಾಗಿದೆ. ಅಂತರಂಗ ವಾರಪತ್ರಿಕೆಯಲ್ಲಿ ಬಿ.ಎಸ್. ಆರಾಧ್ಯ (ಸ್ವಾತಂತ್ರ್ಯಪೂರ್ವದ ಶಿವಮೊಗ್ಗ ಜಿಲ್ಲೆಯ ಸಣ್ಣಕಥೆಗಾರರು) ಪಂಡಿತ ತಾರಾನಾಥ, ಮಿರ್ಜಿ ಅಣ್ಣರಾಯರ ಸಾಹಿತ್ಯಕ ಬರಹಗಳನ್ನು ಅಂತರಂಗ ಪತ್ರಿಕೆಯಲ್ಲಿ ಸ್ಥಾನ ಪಡೆದಿರುವುದನ್ನು ಗಮನಿಸಬಹುದಾಗಿದೆ. ಪ್ರಕಾಶ ಮಾಸಪತ್ರಿಕೆಯೂ ತನ್ನದೇ ಆದ ಇತಿಮಿತಿಯಲ್ಲಿ ಹೊರಗಿನ ಲೇಖಕರಿಗೆ ಅವಕಾಶ ನೀಡಿರುವುದನ್ನು ಅಧ್ಯಯನದಲ್ಲಿ ಗಮನಿಸಬಹುದಾಗಿದೆ. 'ಹೊರನಾಡಿನಲ್ಲಿ ಹೆಸರು ಪಡೆದ ಓರ್ವ ಮಹಿಳೆ' ಎಂಬ ಶೀರ್ಷಿಕೆಯಲ್ಲಿ ಪ್ರೊ. ಎಚ್.ಎಸ್. ಪಾಟೀಲರು ಪದ್ಮಾವತಿ ನರಗುಂದ ಅವರ ಸಾಧನೆಯನ್ನು ಜನವರಿ 1948ರ ಪುಟ 49ರಲ್ಲಿ ವಿವರಿಸಿರುವುದನ್ನು ಕಾಣುತ್ತೇವೆ. ಇದೇ ಸಂಚಿಕೆಯ 38-39ನೇ ಪುಟದಲ್ಲಿ ಗೋವಿಂದ ಪೈಯವರ ಪ್ರಸಿದ್ಧ ಕವನ 'ಭಿಕ್ಷುವೂ ಪಕ್ಷಿಯೂ' ಪ್ರಕಟಗೊಂಡಿರುತ್ತದೆ; ಅಂತೆಯೇ ಸಂಚಿಕೆಯ ಪುಟ ಸಂಖ್ಯೆ 40ರಲ್ಲಿ ಬೆಂಗಳೂರಿನ ಗೋಪಾಲಕೃಷ್ಣರಾಯರೆಂಬ

ಲೇಖಕರ 'ಪುನರ್ಮಿಲನ' ಎಂಬ ಸಣ್ಣಕಥೆಯೊಂದು ಪ್ರಕಟಗೊಂಡಿರುವುದನ್ನು ಗಮನಿಸಬಹುದಾಗಿದೆ. 'ಭವ್ಯವಾಣಿ' ಪತ್ರಿಕೆಯಲ್ಲೂ ಕರ್ನಾಟಕದ ಇತರ ಭಾಗದ ಲೇಖಕರು ತಮ್ಮ ಸಾಹಿತ್ಯಕ ಬರಹಗಳಿಂದ ಗುರುತಿಸಿಕೊಂಡಿರುತ್ತಾರೆ. ಏಕೀಕರಣೋತ್ತರ ಕಾಲದ ಎಲ್ಲ ನಿಯತಕಾಲಿಕಗಳಲ್ಲೂ ಜಿಲ್ಲೆಯ ಹೊರಗಿನ ಲೇಖಕರು ತಮ್ಮ ಸಾಹಿತ್ಯಕ ಬರಹಗಳ ಕೊಡುಗೆಯ ಮೂಲಕ ಜಿಲ್ಲೆಯ ಪತ್ರಿಕೆಗಳ ಪ್ರಸರಣವ್ಯಾಪ್ತಿ ಮತ್ತು ವಿಷಯವ್ಯಾಪ್ತಿಯ ಹರವನ್ನು ವಿಸ್ತರಿಸಿದ್ದಾರೆ ಎನ್ನುವುದು ಅಧ್ಯಯನದಿಂದ ಖಚಿತವಾಗುತ್ತದೆ. ಏಕೀಕರಣೋತ್ತರ ಕಾಲಘಟ್ಟದಲ್ಲಿ ಈ ಹಿನ್ನೆಲೆಯಿಂದ ಉಲ್ಲೇಖಿಸಬಹುದಾದ ಪತ್ರಿಕೆಗಳೆಂದರೆ, ಉದಯವಾಣಿ, ತುಷಾರ, ತರಂಗ ಹಾಗೂ ಸಂಶೋಧನ ಸಂಚಿಕೆಯಾದ 'ತುಳುವ'ದಲ್ಲೂ ಅನ್ಯಜಿಲ್ಲೆಯ ಸಂಪನ್ಮೂಲ ವ್ಯಕ್ತಿಗಳ ಸಂಶೋಧನಾತ್ಮಕ ಲೇಖನಗಳನ್ನು ಗಮನಿಸಬಹುದಾಗಿದೆ.

**ಉಡುಪಿ ಜಿಲ್ಲೆಯಿಂದ ಹೊರತಾದ ಪತ್ರಿಕೆಗಳಲ್ಲಿ ಉಡುಪಿ ಜಿಲ್ಲಾ ಲೇಖಕ ಬರಹಗಾರರು ಗುರುತಿಸಿಕೊಂಡ ಬಗೆ:**

ಉಡುಪಿ ಪರಿಸರದ ಪ್ರತಿಭಾವಂತ ಬರಹಗಾರರಿಗೆ ಜಿಲ್ಲೆಯ ಹೊರಗಿನ ಪತ್ರಿಕಾ ಸಂಪಾದಕರು ತಮ್ಮ ಪತ್ರಿಕೆಯಲ್ಲಿ ಲೇಖನ/ಬರಹ ಪ್ರಕಟನೆಗಾಗಿ ಸಾಕಷ್ಟು ಅವಕಾಶ ನೀಡಿದ್ದರು. ಪ್ರಜಾವಾಣಿ, ಕನ್ನಡಪ್ರಭ, ಕಸ್ತೂರಿ, ಪ್ರಪಂಚ, ಪತ್ರಿಕೆಗಳು ಉಡುಪಿ ಜಿಲ್ಲಾ ಬರಹಗಾರರ ವಿದ್ವತ್ಪೂರ್ಣ ಲೇಖನಗಳಿಗೆ ಸಾಕಷ್ಟು ಅವಕಾಶ ನೀಡುತ್ತಾ ಬಂದಿದೆ. ಮೈಸೂರು ವಿ.ವಿ. ಪ್ರಕಟಿಸುತ್ತಿದ್ದ ಪ್ರಬುದ್ಧ ಕರ್ನಾಟಕದ ಸುವರ್ಣ ಮಹೋತ್ಸವ ಕವಿಗೋಷ್ಠಿಯಲ್ಲಿ ಉಡುಪಿಯ ವೀರಭೂಮಿ ಪತ್ರಿಕೆಯ ಸಂಪಾದಕ ಸಾಂತ್ಯಾರು ವೆಂಕಟರಾಜರು ವಾಚಿಸಿದ ಕವನವು 'ಚಿನ್ನದ ಗರಿ' ಎಂಬ ನೆನಪಿನ ಸಂಚಿಕೆಯಲ್ಲಿ ಪ್ರಕಟಗೊಂಡಿತ್ತು. ಸಾಧನೆ ಪತ್ರಿಕೆಯ ಸಂಪುಟ 7, ಸಂಚಿಕೆ–3ರಲ್ಲಿ ಕಾರಂತರ ಕಾದಂಬರಿಗಳ ಕುರಿತಾದ 7 ವಿಮರ್ಶಾ ಬರಹಗಳಿವೆ. ಪ್ರಜಾವಾಣಿ ಪತ್ರಿಕೆಯ ದೀಪಾವಳಿ ಸಂಚಿಕೆಯಲ್ಲಿ, ಕಸ್ತೂರಿ ಮಾಸಿಕದಲ್ಲಿ, ಪಾಟೀಲ ಪುಟ್ಟಪ್ಪನವರ ಪ್ರಪಂಚ ಪತ್ರಿಕೆಯಲ್ಲಿ ಡಾ. ವ್ಯಾಸರಾವ್ ನಿಂಜೂರು ಅವರ ಸಾಹಿತ್ಯಬರಹಗಳು ಪ್ರಕಟಗೊಂಡಿರುತ್ತದೆ. ಕಾರಂತರಿಗೆ ಅವಕಾಶಕೊಡದ ಪತ್ರಿಕೆಗಳೇ ಇಲ್ಲವೆನ್ನುವಷ್ಟು ಅವರ ಪ್ರಕಟನೆಗಳು, ವೈಚಾರಿಕ ಲೇಖನಗಳು ಅನ್ಯಜಿಲ್ಲೆಯ ಪತ್ರಿಕೆಗಳ ಪುಟಗಳನ್ನು ತುಂಬಿವೆ. ಡಾ. ವ್ಯಾಸರಾವ್ ನಿಂಜೂರು ಅವರ ಉಸಿರು ಕಾದಂಬರಿಯ ಕೆಲವು ಅಧ್ಯಾಯಗಳು 'ಸಾರಿಕಾ' ಎಂಬ ಹಿಂದೀ ಪತ್ರಿಕೆಯಲ್ಲಿ ಪ್ರಕಟಗೊಂಡಿದೆ ಎಂಬುದು ಉಡುಪಿ ಜಿಲ್ಲೆಗೆ ಸಂದ ಗೌರವವೂ ಹೌದು. ವಸುಮತಿ ಉಡುಪ, ಗೋಪಾಲಕೃಷ್ಣ ಪೈ, ಎಸ್.ಪಿ. ಪದ್ಮಪ್ರಸಾದ್ ಈ ಮುಂತಾದ ಲೇಖಕರು ಉಡುಪಿ ಜಿಲ್ಲೆಯ ಸಣ್ಣಕಥೆಗಾರರಾಗಿ ಮಯೂರ ನಿಯತಕಾಲಿಕಕ್ಕೆ ಕೊಡುಗೆ ನೀಡುತ್ತಲೇ ಬಂದಿದ್ದಾರೆ. ಕಸ್ತೂರಿ ಮಾಸಿಕಕ್ಕೆ ಪ್ರೊ. ಕು.ಶಿ. ಹರಿದಾಸ ಭಟ್, ಬಿ. ಸುಬ್ರಾಯ ಅಡಿಗರಿಂದ ತೊಡಗಿ 20ನೇ ಶತಮಾನದ ಉತ್ತರಾರ್ಧದ ಜಿಲ್ಲೆಯ ಯುವ ಬರಹಗಾರರು ತಮ್ಮ ವೈಚಾರಿಕ ಪ್ರಬಂಧ, ವಿಮರ್ಶೆಗಳಿಂದ ಗುರುತಿಸಿಕೊಂಡಿರುತ್ತಾರೆ. ಸುಧಾ ವಾರಪತ್ರಿಕೆಯಲ್ಲಿ ಉತ್ತರ ಕರ್ನಾಟಕದ ಮೇರು ಕವಿಗಳು ತಮ್ಮ ಹೊಸ ಪ್ರಕಟನೆಯ ಮೂಲಕ ಕನ್ನಡ ಲೋಕಕ್ಕೆ ಪರಿಚಿತರಾದಂತೆ ಈ ಜಿಲ್ಲೆಯ ಕೆ. ಶಾರದಾ ಭಟ್, ಶಾಂತಾರಾಮ ಸೋಮಯಾಜಿ, ಶುಭಾ ಡಿ. ದೇವಾಡಿಗ, ಮಹಾಬಲ ಕಿರಿಮಂಜೇಶ್ವರ, ಮಾಲತಿ ಪೈ ಇವರು ಸುಧಾ ಪತ್ರಿಕೆಗೆ ತಮ್ಮ ಸಾಹಿತ್ಯ ಬರಹಗಳನ್ನು ನೀಡುತ್ತಿದ್ದಾರೆ. ಬಿ. ಗೋಪಾಲ ಶೆಟ್ಟಿ ಇಂದ್ರಾಳಿ ಇವರು 'ವಾರ್ತಾಭಾರತಿ'ಯ ಅಂಕಣಕಾರರಾಗಿದ್ದು, ಮುಂಬೈಯ ಬಂಟರವಾಣಿ ಪತ್ರಿಕೆಯ ಸಂಪಾದಕರಾಗಿಯೂ

ಅನಂತರವಲ್ಲಿ ಅಲ್ಲಿಂದಲೇ ಪ್ರಕಟಗೊಳ್ಳುತ್ತಿದ್ದ 'ಪತ್ರಪುಷ್ಪ'ದ ಸಂಪಾದಕರಾಗಿಯೂ ಮುಂಬೈಯಲ್ಲಿ ಗುರುತಿಸಿಕೊಂಡ ಕನ್ನಡಿಗರಾಗಿದ್ದರು. ಕರ್ಮವೀರ ಪತ್ರಿಕೆಗೂ ಪ. ರಾಮಕೃಷ್ಣ ಶಾಸ್ತ್ರಿ, ರಾಮ ಭಟ್ಟ ನಿಡುವಜೆ ಇವರು ತಮ್ಮ ಬರಹಗಳನ್ನು ನೀಡಿ ಉಡುಪಿ ಜಿಲ್ಲೆಯನ್ನು ಪ್ರತಿನಿಧಿಸುತ್ತಿದ್ದಾರೆ. ಏಕೀಕರಣಪೂರ್ವದಿಂದ 20ನೇ ಶತಮಾನದುದ್ದಕ್ಕೂ ಅಧ್ಯಾಪಕ ಬೈಕಾಡಿ ವೆಂಕಟಕೃಷ್ಣರಾಯರು ಕನ್ನಡ ಪ್ರಭ, ಪ್ರಜಾವಾಣಿ ಪತ್ರಿಕೆಯ ವಿಶೇಷ ಪುರವಣಿಗೆ ತಮ್ಮ ಲೇಖನಗಳನ್ನು ನೀಡಿ, ಅಖಿಲ ಕರ್ನಾಟಕ ಮಟ್ಟದಲ್ಲಿ ಗುರುತಿಸಿಕೊಂಡಿದ್ದರು ಎನ್ನುವುದನ್ನು ಇಲ್ಲಿ ಉಲ್ಲೇಖಿಸಲೇ ಬೇಕಾಗಿದೆ.

**ಉಡುಪಿ ಜಿಲ್ಲೆಯ ಪತ್ರಿಕೆಗಳು ಸಾಮಾಜಿಕ ನ್ಯಾಯ ಹಾಗೂ ಸಮಾನತೆಯನ್ನು ಎತ್ತಿಹಿಡಿಯುವಲ್ಲಿ ನಿರ್ವಹಿಸಿದ ಪಾತ್ರ:**

ಪ್ರಜಾಪ್ರಭುತ್ವದ ಕಾವಲು ನಾಯಿ ಅಥವಾ ಸಾಮಾಜಿಕ ನ್ಯಾಯವನ್ನು ಎತ್ತಿ ಹಿಡಿಯುವ ಪ್ರಜಾಪ್ರಭುತ್ವ ವ್ಯವಸ್ಥೆಯ ನಾಲ್ಕನೆಯ ಅಂಗ ಪತ್ರಿಕೆ ಎನ್ನುವುದು ಪ್ರಜಾಪ್ರಭುತ್ವ ವ್ಯವಸ್ಥೆಯಲ್ಲಿ ವಿಶ್ವಾಸವನ್ನಿರಿಸಿದ ಎಲ್ಲರ ನಂಬಿಕೆ. ಈ ಜವಾಬ್ದಾರಿಯನ್ನು ಅಥವಾ ವಿಶ್ವಾಸವನ್ನು ನಿರ್ವಹಿಸುವುದು ಮತ್ತು ಉಳಿಸಿಕೊಳ್ಳುವುದು ಪತ್ರಿಕೆಗಳ ಆದ್ಯತೆ ಮತ್ತು ಧರ್ಮವಾಗಿದೆ. ಈ ನಿಟ್ಟಿನಿಂದ ಉಡುಪಿ ಜಿಲ್ಲಾ ಪತ್ರಿಕೆಗಳು ತಮ್ಮ ಸ್ವರೂಪಕ್ಕನುಸರಿಸಿ ತಮ್ಮ ತಮ್ಮ ನೆಲೆಯಲ್ಲಿ ಶ್ರಮಿಸಿದೆ ಎನ್ನುವುದನ್ನು ಪತ್ರಿಕೋದ್ಯಮ ಚಟುವಟಿಕೆಯ ಇತಿಹಾಸವನ್ನು ಅವಲೋಕಿಸಿದಾಗ ಖಚಿತವಾಗುತ್ತದೆ. ಉಡುಪಿ ಜಿಲ್ಲೆಯ ಪತ್ರಿಕೆಗಳು ಈ ನಿಟ್ಟಿನಲ್ಲಿ **ಭಾಗಶಃ** ಯಶಸ್ಸನ್ನು ಪಡೆದಿದೆ ಎನ್ನುವುದನ್ನು ಈ ಅಧ್ಯಯನದಲ್ಲಿ ಗುರುತಿಸಲಾಗಿದೆ. ಜಿಲ್ಲೆಯ ಪತ್ರಿಕೆಗಳು ತಮ್ಮ ನಿರ್ದಿಷ್ಟ ಪುಟಗಳಲ್ಲಿ ಸಾಹಿತ್ಯ ಅಂಕಣಕ್ಕಾಗಿ ಸ್ಥಳವನ್ನು ಕಾಯ್ದಿರಿಸಿ, ಜಿಜ್ಞಾಸುಗಳಾದ ಓದುಗರಿಗೆ ಸಮಾಜದ ಸಮಸ್ಯೆ ಮತ್ತು ವಾಸ್ತವದ ಅರಿವನ್ನು ಉಂಟುಮಾಡಿಸುವಲ್ಲಿ ಶ್ರಮಿಸಿರುವುದು ವೇದ್ಯವಾಗುತ್ತದೆ.

ಉಡುಪಿ ಜಿಲ್ಲೆಯ ಏಕೀಕರಣಪೂರ್ವದ ಪತ್ರಿಕೆಗಳು ರಾಷ್ಟ್ರೀಯ ಜಾಗೃತಿಯನ್ನೂ, ಸ್ವಾತಂತ್ರ್ಯದ ಮಹತ್ವವನ್ನೂ, ಏಕೀಕರಣದ ಅವಶ್ಯಕತೆಯನ್ನು ಮನಗಾಣಿಸುವಲ್ಲಿ ತಮ್ಮ ಜವಾಬ್ದಾರಿಯನ್ನು ಸಮರ್ಪಕವಾಗಿ ನಿರ್ವಹಿಸಿದೆ. ವಸಾಹತುಶಾಹಿ ಆಡಳಿತ ಹಾಗೂ ಆಧುನಿಕ ಶಿಕ್ಷಣದ ಪರಿಣಾಮವಾಗಿ ಸಾಮಾಜಿಕ ಸಂರಚನೆಯ ಮಾರ್ಪಾಟಿನ ಸಂದರ್ಭದ ಸಂಕ್ರಾಂತಿಯ ಕಾಲಘಟ್ಟದ ಸ್ಥಿತ್ಯಂತರಗಳನ್ನು ಆ ಕಾಲದ ಪತ್ರಿಕೆಗಳು ತಮ್ಮ ಸಾಹಿತ್ಯ ಬರಹಗಳ ಮೂಲಕ ಸಮರ್ಪಕವಾಗಿ ಬಿಂಬಿಸಿವೆ. (ಕೊರಡ್ಕಲ್ ಶ್ರೀನಿವಾಸರಾಯರು, ಎಂ. ವಿ. ಹೆಗ್ಡೆಯವರು, ಹೊನ್ನಯ್ಯ ಶೆಟ್ಟಿಯವರು, ಪಾಂಡೇಶ್ವರ ಗಣಪತಿ ರಾಯರು, ಶಿವರಾಮ ಕಾರಂತರು ಈ ಮೊದಲಾದ ಬರಹಗಾರರನ್ನು ಇಲ್ಲಿ ನೆನಪಿಸಿಕೊಳ್ಳಬಹುದಾಗಿದೆ). ಏಕೀಕರಣೋತ್ತರ ಕಾಲಾವಧಿಯಲ್ಲಿ ಪತ್ರಿಕಾಚಟುವಟಿಕೆ ಎಂಬ ಲಿಖಿತ ಸೇವಾ ಚಟುವಟಿಕೆಯು ಉದ್ಯಮವಾಗಿ ಬದಲಾಗುತ್ತಿದ್ದಂತೆ ಪತ್ರಿಕಾ ಸಂಪಾದಕರು ತಮ್ಮ ನಿಷ್ಠುರ ನೀತಿಯನ್ನು ಕೈಬಿಟ್ಟು ವ್ಯವಹಾರದ ದಾರಿಯನ್ನು ಹಿಡಿದರು ಎನ್ನುವುದು ಏಕೀಕರಣೋತ್ತರ ಕಾಲಘಟ್ಟದ ಪತ್ರಿಕಾಚಟುವಟಿಕೆಗಳ ಅಧ್ಯಯನದಿಂದ ಖಚಿತವಾಗುತ್ತದೆ.

<u>20ನೇ ಶತಮಾನದ ಉತ್ತರಾರ್ಧದ ಪತ್ರಿಕೋದ್ಯಮ ಸಾಹಿತ್ಯದಲ್ಲಿ ಹಿಂದುಳಿದ ಜಾತಿ ಮತ್ತು ಅಲ್ಪಸಂಖ್ಯಾತರು ಪಾಲ್ಗೊಂಡ ಬಗೆ</u>: 20ನೇ ಶತಮಾನದ ಉತ್ತರಾರ್ಧದ ಪತ್ರಿಕೆಯಲ್ಲಿ ಹಿಂದುಳಿದ ಜಾತಿ ಮತ್ತು ಅಲ್ಪಸಂಖ್ಯಾತರ ಪಾಲ್ಗೊಳ್ಳುವಿಕೆಯು ತಮ್ಮ ಸಾಹಿತ್ಯ ಬರಹಗಳಲ್ಲಿ ವಿರಳವೆನ್ನುವುದು ಅಧ್ಯಯನದಿಂದ ತಿಳಿದುಬರುತ್ತದೆ. ಪ್ರಕಟಿತ ಎಲ್ಲ ಪತ್ರಿಕೆಗಳು ಪ್ರತಿಷ್ಠಿತ ಜಾತಿ ಜನವರ್ಗದಿಂದಲೇ ಪ್ರಕಟಿತಗೊಂಡು, ನಿರ್ಲಕ್ಷಿತ ಜನಸಮೂಹವು ಪತ್ರಿಕಾ ಲೋಕದಿಂದ ಮರೆಯಾಗಿರುವುದು ವಾಸ್ತವ.

ಇಪ್ಪತ್ತನೇ ಶತಮಾನದ ಉತ್ತರಾರ್ಧದಲ್ಲಿ ಉನ್ನತ ಶಿಕ್ಷಣದ ಅವಕಾಶ ಪಡೆದ ಫ್ರಾನ್ಸಿಸ್ ದಾಂತಿ, (ಶಿಕ್ಷಕರು ಮತ್ತು ಬ್ಯಾಂಕ್ ನೌಕರರು), ಶಿರ್ತಾಡಿ ವಿಲಿಯಂ ಪಿಂಟೋ, ಫಕೀರ್ ಅಹಮದ್ ಕಟ್ಪಾಡಿ, ಶ್ರೀನಿವಾಸ ಕಾಳಾವರ ಇವರ ಬರಹಗಳು 20ನೇ ಶತಮಾನದ ಪತ್ರಿಕೆಗಳಲ್ಲಿ ಅಲ್ಲಲ್ಲಿ ಪ್ರಕಟಗೊಂಡಿದೆ. ಉಡುಪಿ ಜಿಲ್ಲೆಯಲ್ಲಿ ಸ್ವಾತಂತ್ರ್ಯಪೂರ್ವದಲ್ಲಿ ಅಸ್ತಿತ್ವಕ್ಕೆ ಬಂದ ನವಯುಗ ಪತ್ರಿಕೆಯಲ್ಲಿ ಸ್ವಾತಂತ್ರ್ಯ ಚಳುವಳಿ ಕಾಲದಲ್ಲಿ ಪತ್ರಿಕಾಧರ್ಮಕ್ಕೆ ಚ್ಯುತಿ ತಾರದೆ ಸಾಮಾಜಿಕ ನ್ಯಾಯವನ್ನು ಎತ್ತಿ ಹಿಡಿಯುವಲ್ಲಿ ತನ್ನ ಪಾಲಿನ ಕೊಡುಗೆಯನ್ನು ನೀಡಿದೆ. ಸಮಾಜದ ಗಣ್ಯರ ನಡೆ–ನುಡಿಯ ನಡುವಿನ ವ್ಯತ್ಯಾಸವನ್ನು ಪತ್ರಿಕಾ ಸಂಪಾದಕರಾದ ಕೆ. ಹೊನ್ನಯ್ಯ ಶೆಟ್ಟಿಯವರೇ ತಮ್ಮ ಪತ್ರಿಕೆಯಲ್ಲಿ (1938 ಆಗೋಸ್ಟ್ 7ರ ಸಂಚಿಕೆಯ ಪುಟ ಸಂಖ್ಯೆ 38ರಲ್ಲಿ) 'ಮಠಗಳ ಸುಧಾರಣೆ' ಎಂಬ ಶೀರ್ಷಿಕೆಯಲ್ಲಿ ಬಯಲು ಮಾಡಿದ್ದಾರೆ. ಆದರೆ ಇದೇ ಪತ್ರಿಕೆಯು ಸ್ವಾತಂತ್ರ್ಯೋತ್ತರ ಕಾಲಾವಧಿಯ ಸಮಾಜದ ಕಟ್ಟಕಡೆಯ ಮಂದಿ ಅನುಭವಿಸುವ ಅಸ್ಪೃಶ್ಯತೆಯ ಸಮಸ್ಯೆಯ ಕುರಿತಾಗಿ ಯಾವುದೇ ರೀತಿಯಲ್ಲಿ ಸ್ಪಂದಿಸಲಿಲ್ಲವೆನ್ನುವುದು ಪತ್ರಿಕಾ ಬರಹಗಳ ಪರಾಮರ್ಶನದಿಂದ ತಿಳಿದುಬರುತ್ತದೆ.

ಅಸ್ಪೃಶ್ಯರ ಕುರಿತಾಗಿ ಜಿಲ್ಲೆಯ ಇತರ ಪತ್ರಿಕೆಗಳಂತೆ ನವಯುಗವೂ ಕೇವಲ ಅನುಕಂಪದ ನಿಲುವುಗಳನ್ನು ತಳೆದಿದೆಯೇ ಹೊರತು, ಈ ದಿಸೆಯಲ್ಲಿ ಸಾಮಾಜಿಕ ಹೋರಾಟಕ್ಕಾಗಿ ಜನಾಭಿಪ್ರಾಯವನ್ನು ಪ್ರೇರೇಪಿಸಿಲ್ಲ ಎನ್ನುವುದು ಸತ್ಯವಿಚಾರವಾಗಿದೆ. ಪತ್ರಿಕೆಯು ಪ್ರಕಟನೆ ನಿಲ್ಲಿಸುವ ಕೇವಲ ಒಂದು ವರ್ಷದ ಮೊದಲು ಈ ಪತ್ರಿಕೆಯಲ್ಲಿ ಕೈಯಾರ ಕಿಞ್ಞಣ್ಣ ರೈಯವರು ದೀಪಾವಳಿ ವಿಶೇಷಾಂಕದ ಪುಟ ಸಂಖ್ಯೆ 31ರಲ್ಲಿ 'ಕೊರಗ' ಶೀರ್ಷಿಕೆಯ ಕವನಕ್ಕೆ ಬರೆದ ಪೂರಕ ಹೇಳಿಕೆ ಹೀಗಿದೆ–

"ನಾಡನಾಳುವ ಮಂದಿ, ಉತ್ತಮೋತ್ತಮ ಜನರು ವೇದಶುದ್ಧಿ ಸಮಾಜ ಮುಖಕೆ ಉಗುಳುವ ತೆರದಿ

ಬಣ್ಣಕೆಡದಿರುವ ಇವನ ಪೀಳಿಗೆಗೆಸೆದ ಹೆಸರು ಇವ ಕಾಡಿನ ಕೊರಗ! ಆದರೂ ಇವ ಕೊರಗ!"

ಈ ಅನುಕಂಪದ ದಯೆಯ ಬಗೆಯಲ್ಲಿಯೇ ಕವನವು ನಿಂತಿದೆ; ಪತ್ರಿಕೆಯೂ ನಿಂತಿತು. ಉಳಿದ ಎಲ್ಲಾ ಪತ್ರಿಕೆಗಳ ಪ್ರವೃತ್ತಿ ಇದೇ ಆದ ಕಾರಣ ಈ ಕುರಿತಾಗಿ ಇತರ ಪತ್ರಿಕೆಗಳನ್ನು ಇಲ್ಲಿ ವಿಶ್ಲೇಷಿಸುವುದಿಲ್ಲ. ಸ್ವಾತಂತ್ರ್ಯಪೂರ್ವದ ಎಲ್ಲಾ ಪತ್ರಿಕೆಗಳಿಗೂ ರಾಷ್ಟ್ರಹಿತ, ಸ್ವಾತಂತ್ರ್ಯ ಏಕೀಕರಣ ಮುಖ್ಯವಾಯಿತು. ಆದರೆ ಸ್ವಾತಂತ್ರ್ಯಾನಂತರದಲ್ಲಿ ಈ ಪತ್ರಿಕೆಗಳು ನಿರ್ಲಕ್ಷಿತ ವರ್ಗದ (ಪರಿಶಿಷ್ಟ ಜಾತಿ, ಅಲ್ಪಸಂಖ್ಯಾತರು, ಹಿಂದುಳಿದ ಜಾತಿಗಳು) ಹಿತಾಸಕ್ತಿಗಾಗಿ ಪ್ರತ್ಯೇಕ ಅಂಕಣವನ್ನಾಗಲೀ, ಆವೃತ್ತಿಯನ್ನಾಗಲೀ ತಂದಿಲ್ಲ. ಇವರಿಗಾಗಿಯೇ ಪ್ರತ್ಯೇಕ ಪತ್ರಿಕೆಯ ಪ್ರಯತ್ನವು ಕೇವಲ ಎರಡು ಸಂಚಿಕೆಯ ಪ್ರಯತ್ನದಲ್ಲಿಯೇ ವಿಫಲಗೊಂಡಿತು. (ಪೀಂಚಲು 1992, ಪ್ರ.ಸಂ. ದೇವದಾಸ ಶೆಟ್ಟಿ). ನಿರ್ಲಕ್ಷಿತ ಸಮೂಹದ ಕುರಿತಾಗಿ ಸಾಮಾಜಿಕ ಕಳಕಳಿ ಮೂಡಿಸುವ ಮತ್ತು ಸಾಮಾಜಿಕ ನ್ಯಾಯಕ್ಕಾಗಿ ಪ್ರಯತ್ನಿಸುವ ಪ್ರತ್ಯೇಕ ಆವೃತ್ತಿ ಪ್ರತಿಯೊಂದು ಪತ್ರಿಕೆಗೂ ಕಷ್ಟಸಾಧ್ಯವಾದರೂ ನಿರ್ದಿಷ್ಟ ಅಂಕಣ ಮೀಸಲಿಡುವುದಕ್ಕೆ ಯಾವ ಅಡ್ಡಿ ಆತಂಕಗಳೂ ಇದ್ದಿರಲಿಲ್ಲ. ಉಡುಪಿ ಜಿಲ್ಲೆಯ ಪತ್ರಿಕೆಗಳು ಈ ಬದ್ಧತೆಯನ್ನು ಕೈಬಿಟ್ಟಿವೆ ಎನ್ನುವುದು ಕಹಿ ವಾಸ್ತವ ವಿಚಾರವಾಗಿದೆ. (ಕರ್ಮವೀರ ಪತ್ರಿಕೆಯು ಗಾಂಧೀಜಿಯವರ ಪ್ರಭಾವದಿಂದ 'ಹರಿಜನ' ಪುರವಣಿಯನ್ನು ಪ್ರಕಟಿಸಿದೆ ಎಂಬ ಉಲ್ಲೇಖ ಸ್ವಾತಂತ್ರ್ಯ ಹೋರಾಟದಲ್ಲಿ ಕರ್ಮವೀರದ ಪಾತ್ರ ಎಂಬ ಶೀರ್ಷಿಕೆಯ ಶ್ರೀ ಸುರೇಂದ್ರ ದಾನಿಯವರ ಲೇಖನವು ಕನ್ನಡ ಪತ್ರಿಕಾಸೂಚಿ ಪ್ರತಿಯ ಪುಟ ಸಂಖ್ಯೆ 93ರಲ್ಲಿ ಉಲ್ಲೇಖಗೊಂಡಿದೆ). ಸುಧಾ ಪತ್ರಿಕೆಯು ದೇವನೂರು ಮಹಾದೇವ ಅವರ ಬರಹಗಳಿಗೆ ಆದ್ಯತೆಯನ್ನು ನೀಡಿ, ಅವರ ಸಾಹಿತ್ಯದ ಸತ್ವ ಮತ್ತು ಶಕ್ತಿಯನ್ನು

ಕನ್ನಡಿಗರಿಗೆ ಪರಿಚಯಿಸುವುದಕ್ಕೆ ಮುಂದಾಗಿತ್ತು. ಲಂಕೇಶ್ ಪತ್ರಿಕೆಯು ಸಾರಾ ಅಬೂಬಕ್ಕರ್ ಅವರ ಕಾದಂಬರಿಯ ಆಶಯವನ್ನು ಗ್ರಹಿಸಿ, ಪತ್ರಿಕೆಯಲ್ಲಿ ಧಾರಾವಾಹಿಯಾಗಿ ಪ್ರಕಟಿಸುವ ಮೂಲಕ ಕನ್ನಡ ಜಗತ್ತಿಗೆ ಪರಿಚಯಿಸಿತು. ಆದರೆ ಜಿಲ್ಲೆಯ ಪತ್ರಿಕೆಯಲ್ಲಿ ಈ ತೆರನಾದ ಪ್ರಯತ್ನಗಳು ಕಂಡುಬರುವುದಿಲ್ಲ. ಪತ್ರಿಕೆಯು ಈ ಜವಾಬ್ದಾರಿಯನ್ನು ನಿರ್ವಹಿಸದ ಕಾರಣದಿಂದಾಗಿಯೇ ಮಜೂರು ಬಾಬು ಮಾಸ್ತರ್‌ನಂತಹ ಪರಿಶಿಷ್ಟ ಜಾತಿಯ ಸ್ವಾತಂತ್ರ್ಯ ಸೇನಾನಿ ಸರಕಾರದ ಮತ್ತು ಸಮಾಜದ ನಿರ್ಲಕ್ಷ್ಯಕ್ಕೊಳಗಾಗಿ ಶಕ್ತಮೇಲುವರ್ಗದ ಬಲಿಷ್ಠ ಶಕ್ತಿಯಿಂದಾಗಿ ಆರ್ಥಿಕ ಸಂಕಷ್ಟಕ್ಕೊಳಗಾಗುವಂತಾದರು. 20ನೇ ಶತಮಾನದಲ್ಲಿ ಯಾವೊಂದು ಪತ್ರಿಕೆಯೂ ಅವರ ಕಾರ್ಯನಿಷ್ಠೆ ಮತ್ತು ದೇಶನಿಷ್ಠೆಯನ್ನು ಗುರುತಿಸಿರುವುದಿಲ್ಲ. 93 ವರ್ಷದ ಇವರನ್ನು ದಿನಾಂಕ 01.01.2010 ರಂದು ಸ್ಥಳೀಯ 'ಕಲ್ಲಟ್ಟೆ ಫ್ರೆಂಡ್ಸ್, ಪಡುಬಿದ್ರಿ' ಇವರು ಸನ್ಮಾನಿಸಿರುವ ಸಂದರ್ಭದಲ್ಲಿ ನೀಡಲಾದ ಸನ್ಮಾನಪತ್ರವೊಂದೇ ಅವರ ಸಾಧನೆಯನ್ನು ತಿಳಿದುಕೊಳ್ಳಲು ಸಂಶೋಧಕರಿಗೆ ಉಳಿದಿರುವ ದಾಖಲೆಯಾಗಿದೆ. ಈ ದಾಖಲೆಯನ್ನು **ಅನುಬಂಧ-4** ರಲ್ಲಿ ನೀಡಲಾಗಿದೆ. ಹಂಝ ಕಾಳಾವರ ಎಂಬ ಅಲ್ಪಸಂಖ್ಯಾತ ಯುವಕ ತನ್ನ 23ನೇ ವಯಸ್ಸಿಗೆ ಕಾದಂಬರಿಯೊಂದನ್ನು ರಚಿಸಿದ್ದರು. ಇದು ಕುಂದಾಪುರದ ಎನ್.ಆರ್.ಎಚ್. ಪ್ರಕಾಶನದ ಮೂಲಕ ಪ್ರಕಟಗೊಂಡಿತ್ತು. (ಹುಚ್ಚುನಾಯಿಯ ಕಡಿತಕ್ಕೊಳಗಾಗಿ, ಸಮರ್ಪಕ ಶುಶ್ರೂಷೆಯ ಕೊರತೆಯಿಂದಾಗಿ ಹಂಝ ಅವರು 28ನೇ ವಯಸ್ಸಿಗೆ ಅಸುನೀಗಿದನು.)

ಪ್ರಾಥಮಿಕ, ಪ್ರೌಢ ಹಾಗೂ ಉನ್ನತ ಶಿಕ್ಷಣಕ್ಕೆ ಸರಕಾರದ ಶಾಸನಾತ್ಮಕ ಪ್ರೋತ್ಸಾಹದಿಂದಾಗಿ ಪರಿಶಿಷ್ಟ ಮತ್ತು ಅಲ್ಪಸಂಖ್ಯಾತ ವರ್ಗದಿಂದ ಶಿಕ್ಷಣಕ್ಕೆ ಬರುವವರ ಸಂಖ್ಯೆ 1980ರ ದಶಕದಿಂದ ನಿಧಾನವಾಗಿ ವೃದ್ಧಿಗೊಂಡಿದೆ. ಆದರೆ ಈ ಸಮೂಹದ ಯುವಕರು ಸಾಹಿತ್ಯ ಚಟುವಟಿಕೆಗಳಲ್ಲಿ ಪಾಲ್ಗೊಳ್ಳದೆ ತಾವು ರಚಿಸಿಕೊಂಡ ಸಂಘಟನೆಗಳಲ್ಲಿ (ಅಂಬೇಡ್ಕರ್ ಯುವಕ ಸಂಘ ಮೇಲ್‌ಗಂಗೊಳ್ಳಿ, ಕನ್ನಡ ಸಂಘ, ಹೆಮ್ಮಾಡಿ, ಗೆಳೆಯರ ಬಳಗ, ಹಂದಾಡಿ) ಕೇವಲ ಮನೋರಂಜನಾತ್ಮಕ ಚಟುವಟಿಕೆಗಳಲ್ಲಿ ಆಸಕ್ತರಾಗುತ್ತಿದ್ದಾರೆಯೇ ಹೊರತು ಸಾಹಿತ್ಯಚಟುವಟಿಕೆಗಳಲ್ಲಿ ಸಕ್ರಿಯರಾಗುತ್ತಿಲ್ಲವೆನ್ನುವುದು ಅವರ ಸಂಘಟನೆಯ ಮಿತಿ ಎಂಬುದಾಗಿ ಗುರುತಿಸಬೇಕಾಗಿದೆ.

**21ನೇ ಶತಮಾನದ ಸಾಧ್ಯತೆಗಳು:**

ಪದವಿ ಶಿಕ್ಷಣ ಪಡೆಯದೆಯೂ ಕೇವಲ ಪ್ರಾಥಮಿಕ, ಪ್ರೌಢಶಿಕ್ಷಣವನ್ನು ಪಡೆದ ನಿರ್ಲಕ್ಷಿತ ಸಮೂಹವು ತಮ್ಮ ಲಿಖಿತ ಮತ್ತು ಮೌಖಿಕ ಸಾಹಿತ್ಯಚಟುವಟಿಕೆಗಳಲ್ಲಿ ಗುರುತಿಸಿಕೊಳ್ಳುತ್ತಿರುವ ಬಗೆಯನ್ನು 20ನೇ ಶತಮಾನದ ಕೊನೆ ಮತ್ತು 21ನೇ ಶತಮಾನದ ಒಂದು-ಎರಡನೇ ದಶಕದಿಂದ ಗುರುತಿಸಬಹುದಾಗಿದೆ. ಮಂಜುನಾಥ ಕುಲಾಲ್ ಹಿಲಿಯಾಣ ಇವರು ರಚಿಸಿದ ರೇಡಿಯೋ ನಾಟಕ, ಮಂಗಳೂರು ಆಕಾಶವಾಣಿಯಲ್ಲಿ ಬಿತ್ತರಗೊಂಡಿದೆ. ಇವರ ಸ್ವರಚಿತ ಕಿರುಚಿತ್ರ 'ಬಾಸುಮ ಕೊಡಗು' ಇವರ ನಿರ್ದೇಶನದಲ್ಲಿ ಚಿತ್ರ 'ಅಣ್ಣು' (ಮಂಗಳೂರು) ಸ್ಥಳೀಯ ದೂರದರ್ಶನ ಚಾನೆಲ್‌ನಲ್ಲಿ ಪ್ರಸಾರಗೊಂಡಿದೆ. ತಾರಾನಾಥ ಮೇಸ್ತ ಎಂಬ ಪರಿಶಿಷ್ಟ ಜಾತಿಯ ಯುವಕನ ಸಾಹಿತ್ಯ ಬರಹಗಳು ಆಗೊಮ್ಮೆ ಈಗೊಮ್ಮೆ ಸ್ಥಳೀಯ ಪತ್ರಿಕೆಯಲ್ಲಿ ಅವಕಾಶ ಪಡೆಯುತ್ತಿದೆ. (ಯುಗಪುರುಷ ಪತ್ರಿಕೆಯಲ್ಲಿ ಪ್ರಕಟವಾದ ಸಣ್ಣಕಥೆಯೊಂದನ್ನು ಪ್ರಬಂಧದ ಕೊನೆಯಲ್ಲಿ ಅನುಬಂಧ ಸಂಖ್ಯೆ-5 ರಲ್ಲಿ ನೀಡಲಾಗಿದೆ. ಕೇವಲ ಪ್ರೌಢಶಾಲಾ ಹಂತದ ಶಿಕ್ಷಣವನ್ನು ಪೂರೈಸಿಕೊಂಡು, ಪೆಂಟಿಂಗ್ ಕಾರ್ಮಿಕನಾಗಿ

ಸಾಹಿತ್ಯಚಟುವಟಿಕೆಯಲ್ಲಿ ಗುರುತಿಸಿಕೊಂಡಿರುವುದನ್ನು ಈ ಅಧ್ಯಯನದಲ್ಲಿ ಗುರುತಿಸಲಾಗಿದೆ. ಅರುಣ್ ಜಾರ್ಕಳ್ ಎಂಬ ಬೋವಿ ಜನಾಂಗದ ಯುವಕನೋರ್ವ ಧ್ವನಿಸುರುಳಿ ಮತ್ತು ದೃಶ್ಯ ಸಿ.ಡಿ. ಮುಖೇನ ಯಕ್ಷಗಾನ ಹೆಜ್ಜೆಗಾರಿಕೆಯನ್ನು ಕಲಿತು ಸಾಲಿಗ್ರಾಮ ಮೇಳದ ಮುಖ್ಯ ವಿದೂಷಕನಾಗಿ ರಂಗ ಪ್ರವೇಶಿಸಿದ್ದಾನೆ.

ಜಿಲ್ಲೆಯ ಪ್ರತಿಷ್ಠಿತ ಪತ್ರಿಕೆಗಳು ಸಾಕಷ್ಟು ಸಿದ್ಧ, ಖ್ಯಾತ ಬರಹಗಾರರ ಲೇಖನಗಳ ಸರಬರಾಜಿನಿಂದಾಗಿ ಯುವ ಬರಹಗಾರರು ಪತ್ರಿಕೆಯಲ್ಲಿ ಅವಕಾಶದಿಂದ ವಂಚಿತರಾಗುತ್ತಿದ್ದಾರೆ. ಹೊಸ ಬರಹಗಾರರಿಗೆ ಅವಕಾಶ ಕಲ್ಪಿಸುವ ಸೂಕ್ತ ಪತ್ರಿಕೆಯು ಜಿಲ್ಲೆಯಲ್ಲಿಲ್ಲದ ಕಾರಣ ಯುವ ಬರಹಗಾರರು ನೆರೆಯ ಜಿಲ್ಲೆಯ ಪತ್ರಿಕೆಗಳ ಅವಕಾಶದ ಸರದಿಗಾಗಿ ಕಾಯುವಂತಹ ಸ್ಥಿತಿ ಬಂದೊದಗಿದೆ.

## ಅಧ್ಯಾಯ-3
## ಶಿಕ್ಷಣ ಸಂಸ್ಥೆಗಳಲ್ಲಿ ಸಾಕಾರಗೊಂಡ ಕನ್ನಡ ಸಾಹಿತ್ಯಚಟುವಟಿಕೆಗಳು

**ಪ್ರಸ್ತಾವನೆ:** ಪತ್ರಿಕೆಗಳಲ್ಲಿ ಆರಂಭಗೊಂಡ ಸಾಹಿತ್ಯ ಚಟುವಟಿಕೆಗಳು ಮುಂದೆ ಎರಡನೇ ಹಂತವಾಗಿ ಶಿಕ್ಷಣಸಂಸ್ಥೆಗಳಲ್ಲಿ ಬಗೆಬಗೆಯ ರೂಪಗಳಲ್ಲಿ ತಮ್ಮ ಅಸ್ತಿತ್ವವನ್ನು ಕಂಡುಕೊಂಡುವು. ಆ ರೂಪಗಳೇ ಉಪನ್ಯಾಸ (ಭಾಷಣ), ಭಿತ್ತಿಪತ್ರ, ಹಸ್ತಪತ್ರಿಕೆ, ಚರ್ಚಾಗೋಷ್ಠಿ, ವಿಚಾರಸಂಕಿರಣ, ಆಶುಭಾಷಣ, ವಾರ್ಷಿಕ ಸಂಚಿಕೆ ಇತ್ಯಾದಿ ಹೆಸರುಗಳ ಸಾಹಿತ್ಯಚಟುವಟಿಕೆಗಳಾಗಿವೆ. ಶಿಕ್ಷಣಸಂಸ್ಥೆಗಳಲ್ಲಿ ನಡೆದ ಸಾಹಿತ್ಯಚಟುವಟಿಕೆಗಳ ಸ್ವರೂಪ ಹಾಗೂ ಈ ಚಟುವಟಿಕೆಗಳ ಹಿಂದಿನ ವ್ಯವಸ್ಥಾಪಕರುಗಳ ಒಟ್ಟಾರೆ ಉದ್ದೇಶ ಮತ್ತು ಈ ಚಟುವಟಿಕೆಗಳ ಫಲಶ್ರುತಿಯನ್ನು ವಿವರಿಸುವುದು ಈ ಸಂಶೋಧನ ವಿಷಯಕ್ಕೆ ಪೂರಕವಾದ ವಿಷಯವಾಗಿದೆ. ಮೇಲಿನ ಶೀರ್ಷಿಕೆಯ ವಿಷಯವಿಶ್ಲೇಷಣೆಗಾಗಿ ಮೊದಲು ಆಧುನಿಕ ಶಿಕ್ಷಣಸಂಸ್ಥೆಗಳ ಆರಂಭ ಮತ್ತು ವಿಕಾಸದ ಬಗೆಯನ್ನು ಚರ್ಚಿಸಿ, ತದನಂತರದಲ್ಲಿ ವಿವಿಧ ಹಂತದ ಶೈಕ್ಷಣಿಕ ಸಂಸ್ಥೆಗಳಲ್ಲಿ ಸಾಹಿತ್ಯಚಟುವಟಿಕೆಗಳು ಸಾಕಾರಗೊಂಡ ಬಗೆಯನ್ನು ಮೇಲಿನ ವಿಷಯ ಶೀರ್ಷಿಕೆಯಡಿಯಲ್ಲಿ ಚರ್ಚಿಸಬೇಕಾಗಿದೆ. ಈ ಹಿನ್ನೆಲೆಯಿಂದ ಮೊದಲಿಗೆ ಆಧುನಿಕ ಶಿಕ್ಷಣಸಂಸ್ಥೆಗಳು ಹುಟ್ಟಿಕೊಂಡ ಸಂದರ್ಭ ಮತ್ತು ಈ ಸಂಸ್ಥೆಗಳಲ್ಲಿ ಸಾಹಿತ್ಯ ಚಟುವಟಿಕೆಗಳು ವಿಕಾಸಗೊಂಡ ಬಗೆಯನ್ನು ವಿಶ್ಲೇಷಿಸಲಾಗುವುದು.

**ಆಧುನಿಕ ಶಿಕ್ಷಣ ಸಂಸ್ಥೆಗಳ ಆರಂಭ ಮತ್ತು ವಿಕಾಸ**

**ಆಧುನಿಕ ಶಿಕ್ಷಣ ಸಂಸ್ಥೆಗಳ ಹಿನ್ನೆಲೆ:** 1799ರಲ್ಲಿ ಟಿಪ್ಪುಸುಲ್ತಾನನು ಆಂಗ್ಲರೊಂದಿಗೆ ನಡೆಸಿದ ಹೋರಾಟದಲ್ಲಿ ಸೋಲಿನ ಸಹಿತ ಸಾವನ್ನು ಕಂಡ ಪರಿಣಾಮವಾಗಿ ಟಿಪ್ಪುವಿನ ಆಡಳಿತದಲ್ಲಿದ್ದ ಎಲ್ಲ ಪ್ರಾಂತ್ಯಗಳೂ ಬ್ರಿಟೀಷರ ಕೈವಶವಾಯಿತು. ತಾವು ವಶಪಡಿಸಿಕೊಂಡ ಪ್ರಾಂತ್ಯಗಳಲ್ಲಿ ಸುಮಾರು 3 ದಶಕಗಳ ತನಕವೂ ಯಾವುದೇ ಶೈಕ್ಷಣಿಕ ಚಟುವಟಿಕೆಗಳಿಗೆ ಅವರು (ಆಂಗ್ಲ ಸರ್ಕಾರ) ಮುಂದಾಗಲಿಲ್ಲ. ಆದರೆ ದೇಶೀ ವೈದಿಕ ಪಾಠಶಾಲೆ, ಗುರುಕುಲ, ಅಗ್ರಹಾರಗಳಲ್ಲಿ ಸಾಂಪ್ರದಾಯಿಕ ಮಾದರಿಯ ಶಿಕ್ಷಣವೇ ಮುಂದುವರಿದುಕೊಂಡು ಬಂದಿತ್ತು. ತಮ್ಮ ಆಡಳಿತವು ಭದ್ರಗೊಳ್ಳುತ್ತಿದೆ ಎನ್ನುವುದನ್ನು ಸಂಪೂರ್ಣ ಖಚಿತಪಡಿಸಿಕೊಂಡ ಆಂಗ್ಲರು ಭಾರತದಲ್ಲಿ ಶಿಕ್ಷಣಸಂಸ್ಥೆಗಳ ಸ್ಥಾಪನೆ ಹಾಗೂ ಸ್ವರೂಪದ ಕುರಿತು ಸ್ಪಷ್ಟ ನಿರ್ಣಯಗಳನ್ನು ತೆಗೆದುಕೊಳ್ಳಲು 1833ರಲ್ಲಿ ಮದ್ರಾಸಿನಲ್ಲಿ ಶಿಕ್ಷಣ ಮಂಡಳಿಯ ಸ್ಥಾಪನೆಗೆ ಮುಂದಾದರು. ಇಷ್ಟರಲ್ಲೇ ಬ್ರಿಟೀಷ್ ಸರಕಾರದ ಅನುಮತಿಯ ಮೇರೆಗೆ ಧರ್ಮಪ್ರಚಾರಕರಾಗಿ ಭಾರತಕ್ಕೆ ಬಂದಿದ್ದ, ಕ್ರೈಸ್ತ ಮಿಶನರಿಗಳು ಮದ್ರಾಸ್ ಪ್ರೆಸಿಡೆನ್ಸಿಯ ಆಡಳಿತ ಪ್ರದೇಶದಲ್ಲಿ ಶಿಕ್ಷಣಸಂಸ್ಥೆಗಳ ಸ್ಥಾಪನೆಗೆ ಮುಂದಾಗಿದ್ದರು. ಕ್ರೈಸ್ತ ಮಿಶನರಿಗಳ ಶಿಕ್ಷಣಸಂಸ್ಥೆಗಳು ಪ್ರಾಯೋಗಿಕವಾಗಿ ಕಾರ್ಯನಿರ್ವಹಿಸುತ್ತಿದ್ದ ಸಂದರ್ಭಗಳಲ್ಲಿಯೇ ಶಿಕ್ಷಣದ ಬಗೆಗೆ ಸರಕಾರದ ನೀತಿ ನಿಲುವುಗಳ ಕುರಿತಂತೆ ಸರಕಾರಿ ಅಧಿಕಾರಿ ಮೆಕಾಲೆಯು, ಸರ್ಕಾರದ ನಿರ್ದೇಶನದ ಮೇರೆಗೆ, ಶಿಕ್ಷಣದ ನೀತಿಯ ಸ್ವರೂಪದ ಕುರಿತಂತೆ ತನ್ನದೇ ಆದ ಪರಿಪತ್ರವನ್ನು ಅಂದಿನ ಗವರ್ನರ್ ಜನರಲ್ ವಿಲಿಯಂ ಬೆಂಟಿಂಕ್‌ನ ಮೂಲಕ ಸರಕಾರಕ್ಕೆ ನೀಡಿದ್ದನು. ಆದರೆ ಈತನ ಶಿಫಾರಸುಗಳು ತತ್‌ಕ್ಷಣಕ್ಕೆ ಅನುಷ್ಠಾನಕ್ಕೆ ಬಂದಿರಲಿಲ್ಲ. ಕ್ರೈಸ್ತ ಮಿಷನರಿ ಶಿಕ್ಷಣ ಸಂಸ್ಥೆಗಳು ತಮ್ಮ ಕಾರ್ಯಾಚರಣೆಯಲ್ಲಿರುತ್ತಿದ್ದಂತೆಯೇ

ಮೆಕಾಲೆಯ ನೀತಿಯನ್ನು ಪರಿಣಾಮಕಾರಿಯಾಗಿ ಅನುಷ್ಠಾನಕ್ಕೆ ತರಲು "ಅಂದಿನ ಬ್ರಿಟೀಷ್ ಸರಕಾರದ ವಿದ್ಯಾ ಇಲಾಖೆಯ ಕಾರ್ಯನಿರ್ವಾಹಕ ಮಂಡಳಿಯ ಅಧ್ಯಕ್ಷನಾದ ಚಾರ್ಲ್ಸ್‌ವುಡ್‌ನನ್ನು ಕೇಳಿಕೊಳ್ಳಲಾಯಿತು. ಆತನು ದಿನಾಂಕ 19.07.1854ರಂದು ತನ್ನ ಸಲಹೆಗಳನ್ನು ಅಂದಿನ ಗವರ್ನರ್ ಜನರಲ್‌ನ ಮುಖಾಂತರ ಬ್ರಿಟೀಷ್ ಸರಕಾರಕ್ಕೆ ತಿಳಿಸಿದನು. ಅದು 'ವುಡ್‌ನ ಡಿಸ್ಪ್ಯಾಚ್' ಅಥವಾ 'ವುಡ್‌ನ ಪೇಪರ್'ಗಳೆಂದೇ ಪ್ರಸಿದ್ಧಿಯಾಗಿದೆ."(ಸಂ: ನಾರಾಯಣ ಬಲ್ಲಾಳ್ ಎಸ್.ಎನ್., 2013, ಪು-36)

20ನೇ ಶತಮಾನದ ಆರಂಭದ ಹೊತ್ತಿಗೆ ಕ್ರೈಸ್ತ ಧರ್ಮೀಯರು ಜಿಲ್ಲಾ ಕೇಂದ್ರವಾದ ಮಂಗಳೂರಿನಲ್ಲಿ ಶಿಕ್ಷಣ ಚಟುವಟಿಕೆಗಳಲ್ಲಿ ಸಕ್ರಿಯವಾಗಿ ತೊಡಗಿಸಿಕೊಂಡರು. ಆಧುನಿಕ ಶಿಕ್ಷಣಸಂಸ್ಥೆಗಳು ಅಂದಿನ ಸಾಮಾಜಿಕ ನೇತಾರರ ಜನಜಾಗೃತಿಯ ಚಳುವಳಿಯಿಂದಾಗಿ ಸಮಾಜದಲ್ಲಿ ವಿಶೇಷವಾದ ಗೌರವ ಹಾಗೂ ಮಾನ್ಯತೆಯನ್ನು ಪಡೆಯುವಂತಾಯಿತು.

ಕ್ರೈಸ್ತಧರ್ಮ ಪ್ರಚಾರಕ್ಕಾಗಿಯೇ ವಿದೇಶದಿಂದ ಭಾರತಕ್ಕೆ ಬಂದ ಕ್ಯಾಥೋಲಿಕ್ ಕ್ರೈಸ್ತರು, ಪ್ರೊಟೆಸ್ಟಂಟ್ ಕ್ರೈಸ್ತರು, ಬಾಸೆಲ್ ಮಿಷನ್ ಕ್ರೈಸ್ತರು 19ನೇ ಶತಮಾನದ ಪೂರ್ವಾರ್ಧದಲ್ಲಿ ಕ್ರೈಸ್ತ ಧರ್ಮ ಪ್ರಚಾರದ ಕಾರ್ಯದಲ್ಲಿ ತೊಡಗಿಕೊಂಡು ತಮ್ಮದೇ ಆದ ಚರ್ಚುಗಳನ್ನು ಸ್ಥಾಪಿಸಿಕೊಂಡಿದ್ದರು. ತಾವು ಸ್ಥಾಪಿಸಿದ ಇಗರ್ಜಿಗಳ ವಠಾರದಲ್ಲಿ ಪ್ರಾಥಮಿಕ ಶಾಲೆಗಳನ್ನು ತೆರೆದು, ಜನರಿಗೆ ಅಕ್ಷರಜ್ಞಾನವನ್ನು ನೀಡುವುದರೊಂದಿಗೆ ಜನರನ್ನು ಶಿಕ್ಷಿತರನ್ನಾಗಿ ಪರಿವರ್ತಿಸುವ ಕಾಯಕದಲ್ಲಿ ತೊಡಗಿಸಿಕೊಂಡರು. ಅವಿಭಜಿತ ದ.ಕ. ಜಿಲ್ಲೆಯ ಖಾಸಗೀ ನೆಲೆಯ ಶಿಕ್ಷಣಕ್ಷೇತ್ರದ ಸಾಧನೆಗಳನ್ನು ದಾಖಲಿಸುವಾಗ ಮೊದಲು ಉಲ್ಲೇಖಿಸಬೇಕಾದ ಹೆಸರೇ ಬಾಸೆಲ್ ಮಿಷನರಿಯವರ ಶೈಕ್ಷಣಿಕ ಕೊಡುಗೆಗಳಾಗಿವೆ. "ದ. ಕ. ದ ವಿದ್ಯಾಕ್ಷೇತ್ರದ ಪ್ರಗತಿಗಾಗಿ ಬಾಸೆಲ್ ಮಿಷನ್ ಸಂಸ್ಥೆಯು ಸಲ್ಲಿಸಿದ ಸೇವೆಯು ಅಮೋಘವಾದುದು. 1836ರಲ್ಲಿ ರೆವೆ। ಹೇಬಿಕ್ ಮಂಗಳೂರಿನಲ್ಲಿ ತಮ್ಮ ಪ್ರಾಥಮಿಕ ಶಾಲೆಯನ್ನು ಪ್ರಾರಂಭಿಸುವಾಗ ಬರೇ ನಾಲ್ಕು ಮಕ್ಕಳ ಹೆಸರು ಹಾಜರುಪಟ್ಟಿಯಲ್ಲಿತ್ತು. ಬಹುಬೇಗನೆ ವಿದ್ಯಾರ್ಥಿಗಳ ಸಂಖ್ಯೆ ಹಲವು ಪಟ್ಟು ಹೆಚ್ಚಾಯಿತು."(ಸಂ: ಪೀಟರ್ ವಿಲ್ಸನ್ ಪ್ರಭಾಕರ ಡಾ., 1989, ಪು-9) ಬ್ರಿಟೀಷ್ ಅಧಿಪತ್ಯಕ್ಕೆ ಒಳಪಟ್ಟ ಎಲ್ಲಾ ಪ್ರಾಂತ್ಯಗಳಲ್ಲೂ ಬಾಸೆಲ್ ಮಿಷನ್‌ನವರು ತಮ್ಮ ಶಾಖೆಗಳನ್ನು ಆರಂಭಿಸಿದ್ದಲ್ಲದೇ ಇಂದಿನ ಉಡುಪಿ ಜಿಲ್ಲೆಯ ಉಡುಪಿ, ಕಾರ್ಕಳ, ಬಸ್ರೂರು, ಕುಂದಾಪುರ, ಬೈಲೂರು ಮುಂತಾದ ಪ್ರದೇಶಗಳಲ್ಲಿ ತಮ್ಮ ಧಾರ್ಮಿಕ, ಶೈಕ್ಷಣಿಕ ಚಟುವಟಿಕೆಗಳನ್ನು ಆರಂಭಿಸಿದರು. ಕ್ರೈಸ್ತ ಶಿಕ್ಷಣಸಂಸ್ಥೆಗಳ ಜೊತೆಜೊತೆಯಲ್ಲಿಯೇ ದೇಶೀಯರಲ್ಲಿ ಶಿಕ್ಷಣದ ಜನಜಾಗೃತಿಗಾಗಿ ಶ್ರಮಿಸಿದವರಲ್ಲಿ ಕಾರ್ನಾಡ್ ಸದಾಶಿವ ರಾವ್ ಮತ್ತು ಕುದ್ಮುಲ್ ರಂಗರಾಯರು ಎಂಬಿಬ್ಬರು ಮುಖ್ಯರಾಗಿದ್ದಾರೆ. ಅಂದಿನ ಉಡುಪಿ ಮತ್ತು ಕಾರ್ಕಳ ತಾಲೂಕಿನ ಪರಿಸರದಲ್ಲಿಯೂ ಶೈಕ್ಷಣಿಕ ಜಾಗೃತಿಗಾಗಿ ಶ್ರಮಿಸುವುದಕ್ಕೆ ಅನೇಕರು ಮುಂದೆ ಬಂದರು. ಅವರುಗಳಲ್ಲಿ ಉಲ್ಲೇಖಿಸಲೇ ಬೇಕಾದ ಮಹನೀಯರೆಂದರೆ ಅಲೆವೂರು ಅಚ್ಚಣ್ಣ ಶೆಟ್ಟಿ, ಶ್ರೀನಿವಾಸ ಉಪಾಧ್ಯಾಯ ಪಣಿಯಾಡಿ, ಕುರ್ಕಾಲು ಗಣಪಯ್ಯ ಶೆಟ್ಟಿ, ನೇರಳಕಟ್ಟೆ ನರಸಿಂಹಯ್ಯ, ಹೇರಿಕುದ್ರು ನಂದ್ಯಪ್ಪ ಶೆಟ್ಟಿ, ಹನೆಹಳ್ಳಿ-ಕೂರಾಡಿಯ ವಾಸುದೇವ ಕಲ್ಕೂರ ಸಹೋದರರು, ಕಾರ್ಕಳ ಕುಕ್ಕುಂದೂರಿನ ಶಿವಣ್ಣ ಶೆಟ್ಟಿ ಮುಂತಾದವರು.

**ಶಿಕ್ಷಣದಲ್ಲಿ ಸಾಹಿತ್ಯದ ಸ್ಥಾನ:** ಶಿಕ್ಷಣ ಮತ್ತು ಸಾಹಿತ್ಯಕ್ಕೂ ನೇರವಾದ ಸಂಬಂಧವಿರುವುದರಿಂದ ಶಿಕ್ಷಣಸಂಸ್ಥೆಗಳು ಸಾಹಿತ್ಯಚಟುವಟಿಕೆಗಳಿಗೆ ಪ್ರಧಾನ ಅಂಗಣವಾಗಿದೆ. ಎಲ್ಲ ರೀತಿಯ ಔಪಚಾರಿಕ ಶಿಕ್ಷಣವೂ ಸಂವಹನದ ಮೂಲಕವೇ

ನಡೆಯುವುದರಿಂದ ಶಿಕ್ಷಣಾರ್ಥಿ ಮತ್ತು ಶಿಕ್ಷಕ ನಿರ್ದಿಷ್ಟವಾದ ಭಾಷೆಯೊಂದನ್ನು ಅವಲಂಬಿಸಲೇ ಬೇಕು. ಎಲ್ಲ ಜ್ಞಾನ ಸಂವಹನ ಮಾಧ್ಯಮವು ಭಾಷೆಯಾದುದರಿಂದ ಭಾಷಾಕಲಿಕೆಯು ಶಿಕ್ಷಣದ ಅನಿವಾರ್ಯ ಅಂಗವಾಗಿದೆ. ಭಾಷೆಯಲ್ಲಿ ರಚಿತವಾದ ಸಾಹಿತ್ಯದ  ಓದು ಅಥವಾ ಅಭ್ಯಾಸವೂ ಭಾಷಾ ಕಲಿಕೆಯ ಪ್ರಧಾನ ಅಂಶಗಳಾಗಿದೆ. ಸಂವಹನಕ್ಕಾಗಿ ಭಾಷೆಯು ಅಗತ್ಯವೆಂದು ತಿಳಿದು, ಮಗುವಿನ ಎಳೆಯ ಮನಸ್ಸಿಗೆ ಪ್ರೌಢ ಸಾಹಿತ್ಯ ಕೃತಿಗಳನ್ನು ಬೋಧಿಸುವುದು ಸಾಧುವೂ ಅಲ್ಲ, ಸಾಧ್ಯವೂ ಇಲ್ಲ. ವಿದ್ಯಾರ್ಥಿಯ ವಯಸ್ಸು ಮತ್ತು ಮಾನಸಿಕ ಪರಿಪಕ್ವತೆಗನುಸರಿಸಿ, ಪ್ರಾಥಮಿಕ, ಪ್ರೌಢ ಮತ್ತು ಉನ್ನತ ಶಿಕ್ಷಣ ಸಂದರ್ಭದ ವಿವಿಧ ಹಂತಗಳಲ್ಲಿ ಸಾಹಿತ್ಯ ಕೃತಿಗಳನ್ನು ಬೋಧನೆಗಾಗಿ ನಿಗದಿಪಡಿಸಲಾಗಿದೆ. ಹೀಗೆ ನಿಗದಿಪಡಿಸಿದಾಗ ಮಾತ್ರ ವಿದ್ಯಾರ್ಥಿಯ ಕಲಿಕೆ, ಅಭಿರುಚಿ ಮತ್ತು ಆಸಕ್ತಿ ಕುಡಿಯೊಡೆಯುವುದಕ್ಕೆ ಸಾಧ್ಯವಾಗುತ್ತದೆ. ಅಭಿರುಚಿ ಬೆಳೆದಾಗ ವ್ಯಕ್ತಿಗೆ ತಾನು ಮುಂದೆ ಎಂತಹ ವಿಷಯಗಳನ್ನು ಆರಿಸಿಕೊಳ್ಳಬಹುದು? ಯಾವುದು ಎಟುಕಿಗೆ ಸಿಗಬಹುದು? ಎಂಬ ದಾರಿ ಕಾಣಿಸುತ್ತದೆ. "ಹೀಗೆ ದಾರಿ ಕಾಣಬೇಕಾದರೆ ಪ್ರಚೋದನೆಗೆ ಪ್ರಥಮ ಸ್ಥಾನ, ಬೋಧನೆಗೆ ಎರಡನೇ ಸ್ಥಾನವನ್ನು ನೀಡಬೇಕು. ಪ್ರಚೋದನೆಗೆ ಅವಕಾಶ ಕೊಟ್ಟಾಗ ಮಗು ತಾನಾಗಿ ತನಗೆ ತಿಳಿದುದ್ದನ್ನು ಕೇಳುವ ಉತ್ಸಾಹವನ್ನು ತೋರುತ್ತದೆ. ಆದರೆ ನಮ್ಮ ಶಿಕ್ಷಣದಲ್ಲಿ ನಾವು ಹೇಳಿದ್ದನ್ನು ಮರುಪಾಠ ಹೇಳುವ ವಿದ್ಯೆಯನ್ನಾಗಿ ಪರಿವರ್ತಿಸಿದ್ದೇವೆ. ಇದರಿಂದಾಗಿ ಶಿಕ್ಷಣ ನೀರಸ ಮತ್ತು ನಿಷ್ಪ್ರಯೋಜಕವಾಗುತ್ತದೆ."(ಸಂ: ಮಾಲಿನಿ ಮಲ್ಯ ಬಿ., 1994, ಪು–214)  ಎನ್ನುವುದು ಕಾರಂತರ ನಿಲುವಾಗಿದೆ.

ಲಾರ್ಡ್ ಮೆಕಾಲೆಯ ಪರಿಪತ್ರದಿಂದ ಮೊದಲ್ಗೊಂಡು, 20ನೇ ಶತಮಾನದ 80ರ ದಶಕದಲ್ಲಿ ಕೇಂದ್ರ ಸರಕಾರದಿಂದ ನಿರೂಪಿತವಾದ 1986ರ ರಾಷ್ಟ್ರೀಯ ಶಿಕ್ಷಣ ನೀತಿಯಲ್ಲಿ ಸಾಂಸ್ಕೃತಿಕ ಮಹತ್ವದ ಅಂಶಗಳನ್ನು ಪಠ್ಯದಲ್ಲಿ ಅಳವಡಿಸಿ, ವಿದ್ಯಾರ್ಥಿಗಳಲ್ಲಿ ಸೌಂದರ್ಯಪ್ರಜ್ಞೆ, ಸಾಮರಸ್ಯ ಬೆಳೆಸಲು ಶಿಫಾರಸು ಮಾಡಿದೆ. ಇದಕ್ಕೆ ಪೂರಕವಾಗಿ ಬಂದ "1992ರ ಕಾರ್ಯಕ್ರಮಾನುಷ್ಠಾನ ಸೂಚಿಯು ಪ್ರಾಥಮಿಕ ಹಂತದಲ್ಲಿ ಸಾಂಸ್ಕೃತಿಕ ಪ್ರಜ್ಞೆ ಬೆಳೆಸಲು ಒಟ್ಟು ಒಂಬತ್ತು ಚಟುವಟಿಕೆಗಳನ್ನು ಸೂಚಿಸಿದ್ದು, ಅವುಗಳಲ್ಲಿ ಅತ್ಯಂತ ಮಹತ್ವದ ಚಟುವಟಿಕೆ ಮತ್ತು ಇದೇ ಮೊದಲ ಬಾರಿಗೆ ಪ್ರಸ್ತಾವಿತವಾದ ವಿಚಾರವೆಂದರೆ, ಮಕ್ಕಳ ಶಾಲಾ ರಂಗಚಳುವಳಿಯಾಗಿದೆ."(ಸಂ: ಮಹಾಬಲೇಶ್ವರ ರಾವ್ ಡಾ., 2012, ಪು–51–52)   ಈ ಹಿನ್ನೆಲೆಯಲ್ಲಿ ಸಾಹಿತ್ಯ–ಸಾಹಿತ್ಯ ಪಠ್ಯಾಧರಿತ ಕಥೆ, ನಾಟಕ, ಅಭಿನಯದ ಮೂಲಕ ಸಾಕಾರಗೊಂಡು ವಿದ್ಯಾರ್ಥಿಗಳಲ್ಲಿ ಸಾಹಿತ್ಯ ಮತ್ತು ಸಾಂಸ್ಕೃತಿಕ ಮೌಲ್ಯಗಳ ಅರಿವು ಮೂಡಿಸಬೇಕಾಗಿತ್ತು. ಆದರೆ ಆಡಳಿತ ಜವಾಬ್ದಾರಿ ಹೊತ್ತ ಇಲಾಖಾ ಅಧಿಕಾರಿಗಳು ರಂಗಸಂಬಂಧಿ ಚಟುವಟಿಕೆಗಳನ್ನು ಅನುಷ್ಠಾನಗೊಳಿಸುವಲ್ಲಿ ಅನಾಸಕ್ತರಾದ ಕಾರಣ ಇದು ಕೇವಲ ಯೋಜನೆಯಲ್ಲಿಯೇ ಉಳಿದ ವಿಚಾರವಾಗಿದೆ. ಈ ತೆರನಾದ ಬೋಧನೆ ಹಾಗೂ ತರಬೇತಿಗೆ ಅಗತ್ಯವಾದ ನೂತನ ವಿನ್ಯಾಸದ  ತರಗತಿ ಕೊಠಡಿಗಳೇ ಪ್ರಾಥಮಿಕ ಹಾಗೂ ಪ್ರೌಢಶಿಕ್ಷಣ ಸಂಸ್ಥೆಗಳಲ್ಲಿ ಇನ್ನೂ ರಚನೆಗೊಂಡಿರುವುದಿಲ್ಲ ಎನ್ನುವುದು ವಾಸ್ತವ. ಹಾಗಾಗಿ "ತರಗತಿಯ ಕೊಠಡಿಗಳು ಉಪನ್ಯಾಸ ಮಾದರಿಗೆ ಮಾತ್ರ ಸೂಕ್ತವಾಗಿದೆ. ಚಟುವಟಿಕೆಗಳಿಗೆ ಪೂರಕವಾಗುವ ಸೌಲಭ್ಯಗಳನ್ನು ತರಗತಿಯ ಕೊಠಡಿಗಳು ಹೊಂದಿಲ್ಲ. ಪ್ರೌಢಶಾಲೆಗಳಲ್ಲಿ ಶೇ. 60ಕ್ಕಿಂತಲೂ ಹೆಚ್ಚಿನ ವಿದ್ಯಾರ್ಥಿಗಳು ಲಿಪಿಗ್ರಹಿಕೆಯ ಹಂತದಲ್ಲಿಯೇ ಸಮಸ್ಯೆಗಳನ್ನು ಎದುರಿಸುತ್ತಿದ್ದಾರೆ... ಪಠ್ಯಪುಸ್ತಕ ನಿರ್ದೇಶನಾಲಯವು ವಿದ್ಯಾರ್ಥಿಗಳ ಭಾಷಾಸಾಮರ್ಥ್ಯವನ್ನು ಹೆಚ್ಚಿಸುವ

ಉದ್ದೇಶದಿಂದ ಪಠ್ಯಪುಸ್ತಕಗಳಲ್ಲಿ ನಿರ್ದೇಶಿಸಿರುವ ಚಟುವಟಿಕೆಗಳು ತರಗತಿಯ ವಾಸ್ತವದಲ್ಲಿ ನಡೆಯುತ್ತಿಲ್ಲ"(ಲೇ: ರಾಮಕೃಷ್ಣ ಡಾ., 2014,ಪು-207) ಎಂಬ ವಿಚಾರವನ್ನು ಡಾ. ರಾಮಕೃಷ್ಣ ಅವರು ತಮ್ಮ ಅಧ್ಯಯನದಲ್ಲಿ ಗುರುತಿಸಿದ್ದಾರೆ. ಇಲ್ಲಿ ಚಟುವಟಿಕೆಗಳೆಂದರೆ "ಶಿಕ್ಷಕರು ಹಾಗೂ ಮಕ್ಕಳು ಕಥೆಗಳನ್ನು ಓದಿ, ಅಭಿನಯಿಸುವುದು. ಪಠ್ಯಪುಸ್ತಕದಿಂದ ಆಯ್ದ ಪಾಠಗಳನ್ನು ನಾಟಕೀಕರಿಸುವುದು. ಸ್ಥಳೀಯ ಗುಡ್ಡಗಾಡು ಅಥವಾ ಜಾನಪದ ರಂಗಸಂಪ್ರದಾಯಗಳ ಕಲಿಕೆಗೆ ಪ್ರೋತ್ಸಾಹ ನೀಡುವುದು ಮೊದಲಾದ ಚಟುವಟಿಕೆಗಳನ್ನು ಆರಂಭಿಸಬೇಕು"(ಮಹಾಬಲೇಶ್ವರ ರಾವ್ ಡಾ., 2012, ಪು-52) ಇದುವೇ ಸಾಹಿತ್ಯ ಚಟುವಟಿಕೆಯ ಪ್ರಾಯೋಗಿಕ ರೂಪ ಎನ್ನಬಹುದಾಗಿದೆ.

ಒಂದು ಭಾಷೆಯನ್ನು ತರಗತಿ ಒಳಗೆ ಬೋಧಿಸುವ ಮುಖ್ಯ ಉದ್ದೇಶ ಭಾಷಾ ಕಲಿಕೆ; ಅಥವಾ ಆ ಭಾಷೆಯ ಬೋಧನೆಯೆಂಬುದು ಸಂವಹನದ ಸಾಧ್ಯತೆಯ ಕುರಿತು ನೀಡುವ ತರಬೇತಿ. ಈ ತರಬೇತಿ ಪಡೆಯಲು ವಿದ್ಯಾರ್ಥಿಯ ಭಾಷೆಯ ಬಗೆಗೆ ಅಭಿರುಚಿ ಬೆಳೆಸಬೇಕು. "ಕನ್ನಡ ಭಾಷೆಯ ಬಗ್ಗೆ ಅಭಿರುಚಿಯನ್ನುಂಟುಮಾಡಲು ಮತ್ತು ಭಾಷಾ ಕೌಶಲಗಳನ್ನು ಹೆಚ್ಚಿಸಲು ಸಹಗಾಮಿ ಚಟುವಟಿಕೆಗಳನ್ನು ತರಗತಿಯಲ್ಲಿ ಸಾಕಷ್ಟು ಕೊಡಬೇಕು. ಕನ್ನಡ ಭಾಷಾಕೌಶಲವೆಂದರೆ ಶ್ರವಣಕೌಶಲ, ಭಾಷಣಕೌಶಲ, ವಾಚನಕೌಶಲ ಮತ್ತು ಲೇಖನಕೌಶಲ. ಕಲಿತ ಜ್ಞಾನವನ್ನು ನಿರಂತರವಾಗಿ ನೆಲೆಸುವಂತೆ ಮಾಡುವುದಕ್ಕೆ ಈ ಚಟುವಟಿಕೆಗಳು ಜ್ಞಾನಾರ್ಜನೆಯನ್ನು ಹೆಚ್ಚುಮಾಡುತ್ತವೆ. ಸುಲಭವಾಗಿ ಗ್ರಹಿಸುವಂತೆ ಮಾಡುತ್ತವೆ; ಮತ್ತೆ ವಿದ್ಯಾರ್ಥಿಗಳಲ್ಲಿ ಅಭಿರುಚಿಯನ್ನುಂಟುಮಾಡಿ, ಕನ್ನಡ ಭಾಷೆಯನ್ನು ಕಲಿಯಲು ಸಹಾಯ ಮಾಡುತ್ತವೆ."(ಲೇ: ಕೇಶವಮೂರ್ತಿ ಎಚ್. ಡಾ., 2008, ಪು-12) ಈ ಕಲಿಕೆಯ ಒಟ್ಟಾರೆ ಪರಿಣಾಮವಾಗಿ ವಿದ್ಯಾರ್ಥಿಯು "ಕನ್ನಡ ಭಾಷೆಯನ್ನು ಚೆನ್ನಾಗಿ ಅರಿತುಕೊಂಡು ಓದುವುದರಲ್ಲಿ, ಮಾತನಾಡುವುದರಲ್ಲಿ, ಲೇಖನ ಬರೆಯುವುದರಲ್ಲಿ, ನುರಿತವನಾಗುತ್ತಾನೆ. ಇದಲ್ಲದೇ ಸಂಗೀತ, ನೃತ್ಯ, ಕಲೆ, ಅಭಿನಯ, ಚಿತ್ರಕಲೆ, ಶಿಲ್ಪಕಲೆ, ವಾಸ್ತುಕಲೆ, ಕವಿಕರ್ಮ, ಮುಂತಾದುವುಗಳಲ್ಲಿ ಆಸಕ್ತಿಯನ್ನು ಪಡೆಯುತ್ತಾನೆ."(ಪೂರ್ವೋಕ್ತ, ಪು-43) ಸಹಗಾಮಿ ಚಟುವಟಿಕೆಗಳ ಒಟ್ಟು ಉದ್ದೇಶ ವಿದ್ಯಾರ್ಥಿಯ ಸೃಜನಶೀಲತೆಯನ್ನು ಉದ್ದೀಪನಗೊಳಿಸುವುದೇ ಆಗಿದೆ.

ಡಾ. ಶಿವರಾಮ ಕಾರಂತರು ಅನೇಕ ಶಾಲಾ ವಿದ್ಯಾರ್ಥಿಗಳನ್ನು ರಂಗಚಟುವಟಿಕೆಗಳಲ್ಲಿ ಪ್ರಾಯೋಗಿಕವಾಗಿ ದುಡಿಸಿಕೊಂಡು ಇದರಿಂದ ಉತ್ತಮ ಫಲಿತಾಂಶವನ್ನು ಕಂಡುಕೊಂಡ ಬಗೆಗೆ ಅವರ ಆತ್ಮಚರಿತ್ರೆಯಲ್ಲಿ ಉಲ್ಲೇಖಗಳು ಸಿಗುತ್ತವೆ. (ವಿವರಗಳಿಗೆ 'ಹುಚ್ಚು ಮನಸ್ಸಿನ ಹತ್ತು ಮುಖಗಳು' ಪುಟ 141-144, 14ನೇ ಮುದ್ರಣ ಇದನ್ನು ಗಮನಿಸಬಹುದು.) ಪಠ್ಯೇತರ ಚಟುವಟಿಕೆಗಳಲ್ಲಿ ಆಸಕ್ತಿಯನ್ನು ಕುದುರಿಸುವ ಸಲುವಾಗಿ ಶಿಕ್ಷಕರು "ವಿವಿಧ ಬಗೆಯ ಚಟುವಟಿಕೆಗಳನ್ನು ಹಮ್ಮಿಕೊಂಡು ವಿದ್ಯಾರ್ಥಿಗಳಿಗೆ ಪ್ರೇರಣೆ ನೀಡಿ, ಪ್ರಚೋದನೆ ಒದಗಿಸಿ, ಕಾರ್ಯಕ್ರಮಗಳಲ್ಲಿ ಅವರು ಪಾಲ್ಗೊಳ್ಳುವಂತೆ ಮಾಡಬೇಕು. ಜೊತೆಗೆ ತರಗತಿಯಲ್ಲಿ ಪಾಠ ಮಾಡುವ ಸಂದರ್ಭದಲ್ಲಿ ಪಾಠದಾಚೆಗಿನ ಹಲವು ಸಂಗತಿಗಳನ್ನು ಪಠ್ಯಕ್ಕೆ ಪೂರಕವಾದ ಬಹುಪಠ್ಯಗಳನ್ನು ಶಿಕ್ಷಕರು ಪ್ರಸ್ತಾಪಿಸಿ, ಸಾಹಿತ್ಯದಲ್ಲೇನೋ ರುಚಿಕರವಾದುದು, ಬದುಕಿಗೆ ಅನಿವಾರ್ಯವಾದುದು ಇದೆ ಎನ್ನುವುದನ್ನು ವಿದ್ಯಾರ್ಥಿಗಳಲ್ಲಿ ಒಡಮೂಡಿಸಬೇಕು."(ಸಂ: ಮಹಾಬಲೇಶ್ವರ ರಾವ್ ಡಾ. 2009, ಪು-29) ತಮ್ಮ ಈ ಹೇಳಿಕೆಯಲ್ಲಿ ಡಾ. ಮಹಾಬಲೇಶ್ವರ ರಾವ್ ಅವರು ವಿದ್ಯಾರ್ಥಿಗಳ ಸಾಹಿತ್ಯಾಸಕ್ತಿಯು ಶಿಕ್ಷಕರ ಬೋಧನತಂತ್ರ ಮತ್ತು

ವಿದ್ಯಾರ್ಥಿಗಳನ್ನು ಸಾಹಿತ್ಯದತ್ತ ಆಕರ್ಷಿಸುವುದರಲ್ಲಿ ಆತನು (ಶಿಕ್ಷಕರು) ಕಂಡುಕೊಳ್ಳುವ ದಾರಿಯನ್ನು ಅವಲಂಬಿಸಿರುತ್ತದೆ ಎಂದು ಪ್ರತಿಪಾದಿಸಿರುತ್ತಾರೆ.

**ಶಿಕ್ಷಣ ಸಂಸ್ಥೆಗಳಲ್ಲಿ ಕುಡಿಯೊಡೆದ ಸಾಹಿತ್ಯ ಚಟುವಟಿಕೆಗಳು:**

ಉಡುಪಿ ಜಿಲ್ಲೆಯಲ್ಲಿ 20ನೇ ಶತಮಾನದಲ್ಲಿ ಅಸ್ತಿತ್ವದಲ್ಲಿದ್ದ ಶಿಕ್ಷಣ ಸಂಸ್ಥೆಗಳು ಸಾಂಸ್ಕೃತಿಕ ಚಟುವಟಿಕೆ, ಸಾಹಿತ್ಯ ಚಟುವಟಿಕೆ, ಸಾಹಿತ್ಯ ಸಂವಾದ, ಚರ್ಚಾಗೋಷ್ಠಿ, ಕಮ್ಮಟ, ಸಂಶೋಧನೆ, ಪ್ರಕಟನೆ ಎಂಬಿತ್ಯಾದಿ ಬಗೆಬಗೆಯ ವೈವಿಧ್ಯಮಯ ಚಟುವಟಿಕೆಗಳನ್ನು ನಿರ್ವಹಿಸಿರುವುದನ್ನು ಪ್ರಸ್ತುತ ಅಧ್ಯಯನದಲ್ಲಿ ಗಮನಿಸಲಾಗಿದೆ. ಈ ತೆರನಾದ ಚಟುವಟಿಕೆಗಳು ಕೇವಲ ಉನ್ನತ ಶಿಕ್ಷಣಸಂಸ್ಥೆಗಳಲ್ಲಿ ಮಾತ್ರವೇ ಕಂಡುಬಂದಿದ್ದು, ಪ್ರಾಥಮಿಕ ಹಾಗೂ ಪ್ರೌಢಶಿಕ್ಷಣ ಸಂಸ್ಥೆಗಳಲ್ಲಿ ಸಾಂಸ್ಕೃತಿಕ ಚಟುವಟಿಕೆಗಳು ಹಾಗೂ ದಶಮಾನೋತ್ಸವ, ಬೆಳ್ಳಿಹಬ್ಬ, ಸುವರ್ಣ ಮಹೋತ್ಸವ, ಶತಮಾನೋತ್ಸವ ಸಮಾರಂಭಗಳು ನಡೆದು, ಆ ಸಮಾರಂಭದ ನೆನಪಿನ ಸಂಚಿಕೆಗಳು ಪ್ರಕಟಗೊಂಡಿರುವುದನ್ನು ಗಮನಿಸಲಾಗಿದೆ. ಪ್ರಾಥಮಿಕ ಶಿಕ್ಷಣ ಸಂಸ್ಥೆಗಳಲ್ಲಿ ವಿದ್ಯಾರ್ಥಿಯ ಬರವಣಿಗೆ ಚಟುವಟಿಕೆಗಳಾಗಿ 'ಪ್ಯಾನಲ್ ಬೋರ್ಡ್' ಯೋಜನೆಯನ್ನು 20ನೇ ಶತಮಾನದ 90ರ ದಶಕದಲ್ಲಿಯೇ ಜಾರಿಗೆ ತಂದಿದ್ದು, ಈ ಚಟುವಟಿಕೆಯ ಆಶಯ ಮತ್ತು ಸ್ವರೂಪವು ವಿದ್ಯಾರ್ಥಿಯ ಲಿಖಿತ ಚಟುವಟಿಕೆಗೆ ಪ್ರೇರಣೆ ನೀಡಬಲ್ಲುದು ಎನ್ನುವುದನ್ನು ಪ್ರಸ್ತುತ ಅಧ್ಯಯನದಲ್ಲಿ ಗಮನಿಸಲಾಗಿದೆ.

ಪ್ರೌಢ ಶಿಕ್ಷಣಸಂಸ್ಥೆಗಳು ಸಾಹಿತ್ಯ ಚಟುವಟಿಕೆಗೆ ನೀಡುವ ಪ್ರೇರಣೆಯು ಅಲ್ಲಿನ ಕನ್ನಡ ಅಧ್ಯಾಪಕರ ಮತ್ತು ಮುಖ್ಯೋಪಾಧ್ಯಾಯರ ಆಸಕ್ತಿಯನ್ನು ಅವಲಂಬಿಸಿಕೊಂಡಿದೆ ಎನ್ನುವುದು ಉಡುಪಿ ಜಿಲ್ಲೆಯ ಪ್ರೌಢಶಾಲಾ ಸಂಸ್ಥೆಗಳ ಸಾಹಿತ್ಯ ಚಟುವಟಿಕೆಗಳ ಕುರಿತಾಗಿ ನಡೆಸಿದ ಸಮೀಕ್ಷೆಯಲ್ಲಿ ಕಂಡುಕೊಂಡ ವಿಚಾರವಾಗಿರುತ್ತದೆ. ಪದವಿಪೂರ್ವ ಶಿಕ್ಷಣ ಸಂಸ್ಥೆಯ ಹಂತದಲ್ಲಿ ಸಾಹಿತ್ಯ ಚಟುವಟಿಕೆಯ ಅವಕಾಶವು ಅದೇ ಆವರಣದಲ್ಲಿರುವ ಪ್ರೌಢಶಾಲಾ ಮುಖ್ಯೋಪಾಧ್ಯಯರ ಸಂಬಂಧ ಮತ್ತು ಸಹಕಾರವನ್ನು ಅವಲಂಬಿಸಿಕೊಂಡಿರುತ್ತದೆ ಎನ್ನುವುದನ್ನು ಗಮನಿಸಲಾಗಿದೆ.

ಸಂವಹನಕ್ಕೆ ಅಗತ್ಯವಾದ ಭಾಷೆಯ ಸ್ವರೂಪ ಮತ್ತು ಆಯಾಮಗಳನ್ನು ಗುರುತಿಸುವುದೇ ಭಾಷಾ ಪಠ್ಯದ ಮೊದಲ ಹಂತದ ಗುರಿಯಾಗಿರುತ್ತದೆ. ಪಠ್ಯದ ಆಶಯಕ್ಕೆ ಪೂರಕವಾಗಿ ಮತ್ತು ಶಿಕ್ಷಣಸಂಸ್ಥೆಗಳ ವ್ಯವಸ್ಥಾಪಕರ ಧೋರಣೆಗನುಸರಿಸಿ, ವಿವಿಧ ರೀತಿಯ ಪಠ್ಯಪೂರಕ ಸಾಹಿತ್ಯಚಟುವಟಿಕೆಗಳು ನಿರ್ವಹಿಸಲ್ಪಡುತ್ತವೆ. ಇಂತಹ ಸಾಹಿತ್ಯ ಚಟುವಟಿಕೆಗಳ ನಿರ್ವಾಹಕರ ಪ್ರೇರಣೆ ಮತ್ತು ಪರಿಣಾಮಗಳನ್ನು ಚರ್ಚಿಸುವುದು ಈ ಅಧ್ಯಯನ ವಿಷಯಕ್ಕೆ ಪೂರಕವಾದ ವಿಚಾರವಾಗಿದೆ.

**ಶಿಕ್ಷಣ ಸಂಸ್ಥೆಗಳಲ್ಲಿ ವಿಸ್ತಾರಗೊಂಡ ಸಾಹಿತ್ಯಚಟುವಟಿಕೆಗಳು:**

ಶಿಕ್ಷಣಸಂಸ್ಥೆಗಳ ಸಾಹಿತ್ಯ ಚಟುವಟಿಕೆಗಳ ವೈವಿಧ್ಯತೆಯು ಶಿಕ್ಷಣಸಂಸ್ಥೆಗಳ ಸ್ವರೂಪವನ್ನು ಅವಲಂಬಿಸಿಕೊಂಡಿರುತ್ತವೆ. ಆದುದರಿಂದ ಈ ಶೀರ್ಷಿಕೆಯ ಅಧ್ಯಯನದಲ್ಲಿ **ಪ್ರಾಥಮಿಕ ಹಾಗೂ ಪ್ರೌಢಶಿಕ್ಷಣ ಸಂಸ್ಥೆಗಳ ಸಾಹಿತ್ಯಚಟುವಟಿಕೆ, ಪದವಿ ಪೂರ್ವ ಹಾಗೂ ಪದವಿ ಶಿಕ್ಷಣ ಸಂಸ್ಥೆಗಳ ಸಾಹಿತ್ಯಚಟುವಟಿಕೆ ಮತ್ತು ವೃತ್ತಿ ಶಿಕ್ಷಣ ಸಂಸ್ಥೆಗಳ ಸಾಹಿತ್ಯ ಚಟುವಟಿಕೆಗಳು** ಎಂಬ ಮೂರು ವಿಭಾಗದಲ್ಲಿ ಅಧ್ಯಯನ ನಡೆಸಲಾಗಿದೆ.

**ಪ್ರಾಥಮಿಕ ಮತ್ತು ಪ್ರೌಢ ಶಿಕ್ಷಣ ಸಂಸ್ಥೆಗಳು 20 ನೇ ಶತಮಾನದಲ್ಲಿ ನಿರ್ವಹಿಸಿದ ಕನ್ನಡ ಸಾಹಿತ್ಯಚಟುವಟಿಕೆಗಳು:**

ಯಾವುದೇ ಉನ್ನತ ಶಿಕ್ಷಣಕ್ಕೆ ಪ್ರವೇಶ ಪಡೆಯುವ ಪೂರ್ವದಲ್ಲಿ ಪ್ರಾಥಮಿಕ ಮತ್ತು ಪ್ರೌಢ ಶಿಕ್ಷಣದ ಕಲಿಕೆಯು ಅನಿವಾರ್ಯವಾಗಿರುತ್ತದೆ. ಈ ಹಂತದ ಕಲಿಕೆಯಲ್ಲಿ ವಿದ್ಯಾರ್ಥಿಯ ಅಂತರಂಗವು ವಿವಿಧ ರಸಭಾವಗಳಿಗೆ ಸ್ಪಂದಿಸುವ ಬಗೆಗೆ ಇಲ್ಲಿಯ ಶಿಕ್ಷಕರೇ ಮುಖ್ಯ ಕಾರಣಕರ್ತರಾಗುತ್ತಾರೆ. ಯಾವುದೇ ಒಂದು ಸಂಸ್ಥೆಯು ಸಾಹಿತ್ಯಚಟುವಟಿಕೆಗಳನ್ನು ನಿರ್ವಹಿಸಬೇಕಾದಲ್ಲಿ, ಚಟುವಟಿಕೆಗಳನ್ನು ನಿರ್ವಹಿಸುವ ಆಸಕ್ತ ಅಧ್ಯಾಪಕರು, ಪರಿಸರದ ಸಹೃದಯರು, ಸ್ಥಳೀಯ ಸಾಹಿತಿ ವಿದ್ವಾಂಸರು, ಇಲಾಖೆಯ ಜವಾಬ್ದಾರಿಯುತ ಅಧಿಕಾರಿ ವರ್ಗದವರು ಕಾರಣಕರ್ತರಾಗುತ್ತಾರೆ. ಸ್ವಾತಂತ್ರ್ಯಪೂರ್ವ ಕಾಲದಲ್ಲಿ ಉಡುಪಿ ಜಿಲ್ಲೆಯ ಪ್ರಾಥಮಿಕ ಮತ್ತು ಪ್ರೌಢಶಾಲಾ ಹಂತದಲ್ಲಿ ನಡೆದ ಸಾಹಿತ್ಯಚಟುವಟಿಕೆಗಳನ್ನು ಅವಲೋಕಿಸಿದಾಗ ಮೇಲಿನ ಹೇಳಿಕೆಯ ಸತ್ಯಾಂಶವು ಅರಿವಿಗೆ ಬರುತ್ತದೆ.

**ಪ್ರಾಥಮಿಕ ಹಾಗೂ ಪ್ರೌಢಶಿಕ್ಷಣ ಸಂಸ್ಥೆಗಳ ಸಾಹಿತ್ಯಚಟುವಟಿಕೆಗಳು:**

ಶಿಕ್ಷಣದ ಆರಂಭಿಕ ಹಂತವಾದ ಪ್ರಾಥಮಿಕ ಹಾಗೂ ಪ್ರೌಢಶಿಕ್ಷಣ ಸಂಸ್ಥೆಯಲ್ಲಿ ಮಗುವಿನ ಕಲಿಕೆಯ ಜೊತೆಯಲ್ಲಿ ಸಾಹಿತ್ಯಾಸಕ್ತಿ/ಅಭಿರುಚಿಯನ್ನು ರೂಢಿಸಲು ಇಲಾಖೆಯು ರೂಪಿಸಿದ ಯೋಜನೆಗಳೇನು? ಈ ಯೋಜನೆಯು ಪ್ರಾಥಮಿಕ ಹಾಗೂ ಪ್ರೌಢಶಾಲಾ ಹಂತದಲ್ಲಿ ಕಾರ್ಯಗತವಾಗುತ್ತಿರುವ ಬಗೆ ಹೇಗೆ ಎನ್ನುವುದನ್ನು ಪರಿಶೀಲಿಸಲು ಜಿಲ್ಲೆಯ 120 ಪ್ರಾಥಮಿಕ ಶಾಲೆಗಳಿಗೂ, 60 ಪ್ರೌಢಶಾಲೆಗಳಿಗೂ, 40 ಪದವಿಪೂರ್ವ ಕಾಲೇಜುಗಳಿಗೂ ಭೇಟಿ ನೀಡಲಾಯಿತು. ಅಧ್ಯಯನದ ಉದ್ದೇಶದಿಂದ ಭೇಟಿ ನೀಡಿದ ಸಂದರ್ಭದಲ್ಲಿ ಅಲ್ಲಿಯ ಮುಖ್ಯಾಧ್ಯಾಪಕ/ಪ್ರಾಂಶುಪಾಲರಿಗೆ ಪ್ರಶ್ನೆಗಳ ಒಂದು ಪ್ರಶ್ನಾವಳಿಯನ್ನು ನೀಡಿ, ಉತ್ತರ ಪಡೆದುಕೊಳ್ಳಲಾಯಿತು. ಶಾಲಾ ಭೇಟಿಯ ಸಂದರ್ಭದಲ್ಲಿ ಶಾಲಾ ವಾಚನಾಲಯ ಹಾಗೂ ಅಲ್ಲಿನ ರಂಗಮಂಟಪದ ಕುರಿತಾಗಿಯೂ ಭೌತಿಕ ವಿವರಗಳನ್ನು ಸಂಗ್ರಹಿಸಲಾಯಿತು. ಈ ಎಲ್ಲಾ ಮಾಹಿತಿಗಳೊಂದಿಗೆ ಶಾಲೆಗಳಲ್ಲಿ ಲಭ್ಯವಿರುವ ವಾರ್ಷಿಕ ಸಂಚಿಕೆ ಮತ್ತು ವಿಶೇಷ ಸಂಚಿಕೆಯನ್ನು ಕೈಬರಹದ (ಹಸ್ತಪ್ರತಿ)ಸಂಚಿಕೆಯನ್ನು ಪಡೆದುಕೊಳ್ಳಲಾಯಿತು. ಸ್ವಾತಂತ್ರ್ಯಪೂರ್ವದಲ್ಲಿ ಆರಂಭಗೊಂಡ ಶಾಲೆಗಳ ಸಾಹಿತ್ಯಚಟುವಟಿಕೆಗಳ ಮಾಹಿತಿಗಾಗಿ ಆ ಅವಧಿಯ ವರ್ತಮಾನ ಪತ್ರಿಕೆಯನ್ನೂ ಸಂಗ್ರಹಿಸಲಾಯಿತು.

ಉಡುಪಿ ಜಿಲ್ಲೆಯ ಶತಮಾನದ ಸಾಹಿತ್ಯ ಚಟುವಟಿಕೆ ಎಂಬ ಈ ಅಧ್ಯಯನ ವಿಷಯದಲ್ಲಿ 'ಶಿಕ್ಷಣಸಂಸ್ಥೆಗಳ ಸಾಹಿತ್ಯಚಟುವಟಿಕೆ' ಎಂಬ ಈ ವಿಷಯವು ಅತಿ ಮುಖ್ಯವಾದ ಅಧ್ಯಯನ ಶೀರ್ಷಿಕೆಯಾಗಿದೆ. ಕಾರಣ: ವಿಭಿನ್ನ ಸ್ವರೂಪದ ಚಟುವಟಿಕೆಗಳು ಶಿಕ್ಷಣಸಂಸ್ಥೆಯಲ್ಲಿ ಸಾಕಾರಗೊಂಡಿದ್ದು, ಮುಂದೆ ಇಲ್ಲಿನ ಪರಿಣಾಮಗಳಿಂದಲೇ ವಿವಿಧ ಕಾಲಘಟ್ಟಗಳಲ್ಲಿ ವಿವಿಧ ನೆಲೆಗಳಲ್ಲಿ ಸಾಹಿತ್ಯಚಟುವಟಿಕೆಗಳು ಪ್ರವಹಿಸುವುದಕ್ಕೆ ಕಾರಣವಾಯಿತು. ಈ ವಿಸ್ತಾರ ಶೀರ್ಷಿಕೆಯಲ್ಲಿ ಈ ಅಧ್ಯಾಯ ಶೀರ್ಷಿಕೆಯನ್ನು ಹೊಂದಿಸಿಕೊಂಡ ಪ್ರಯುಕ್ತ ಮುಖ್ಯ ಶೀರ್ಷಿಕೆಗೆ ಪೂರಕವಾಗಿ ಮಾತ್ರ ಇಲ್ಲಿನ ಚಟುವಟಿಕೆಗಳನ್ನು ಚರ್ಚಿಸಲಾಗಿದೆ. ಲಭ್ಯ ಮಾಹಿತಿಯ ಹಿನ್ನೆಲೆಯಲ್ಲಿ ಅಧ್ಯಯನದಲ್ಲಿ ಗುರುತಿಸಲಾದ ಅಂಶಗಳನ್ನು ಈ ಕೆಳಗಿನಂತೆ ಕ್ರಮವತ್ತಾಗಿ ದಾಖಲಿಸಲಾಗಿದೆ.

1. ಕರ್ನಾಟಕದ ಏಕೀಕರಣ ಪೂರ್ವದಲ್ಲಿ (1956ರ ಮೊದಲು) ಅಸ್ತಿತ್ವಕ್ಕೆ ಬಂದ ಖಾಸಗೀ ಹಾಗೂ ಸರಕಾರಿ ಶಾಲೆಗಳ ಅಧ್ಯಾಪಕರು ಬಹುತೇಕ ಮಂದಿ ಕವಿಗಳೂ, ಗಾಂಧೀವಾದಿಗಳೂ, ಕಷ್ಟಸಹಿಷ್ಣುಗಳೂ, ಸಮರ್ಪಣ ಮನೋಭಾವದ ಗುಣಗಳನ್ನು ಮೈಗೂಡಿಸಿಕೊಂಡವರಾಗಿದ್ದರು. ಈ ಹೇಳಿಕೆಗೆ ನಿದರ್ಶನವಾಗಿ ಡಾ. ಶಿವರಾಮ ಕಾರಂತರ ಐರೋಡಿ ಶಿವರಾಮಯ್ಯನವರ ಬದುಕು–ಬರಹ ಕೃತಿಯ ಪುಟ 18ರಲ್ಲಿ ಉಲ್ಲೇಖಿತವಾದ ವಿವರಗಳನ್ನು ಗಮನಿಸಬಹುದು. ಹಾಗೆಯೇ 'ನವಯುಗ ಪ್ರವರ್ತಕ'ಎಂಬ ಕೃತಿಯ ನವಯುಗದ ಹೊನ್ನಯ್ಯ ಶೆಟ್ಟರು ಎಂಬ ಶೀರ್ಷಿಕೆಯ ಅ.ಬಾ. ಶೆಟ್ಟಿಯವರ ಪುಟ 142ರಲ್ಲಿ ಉಲ್ಲೇಖಗೊಂಡ ಹೇಳಿಕೆಗಳನ್ನು ಗಮನಿಸಬಹುದಾಗಿದೆ. ಮೂರನೆಯದಾಗಿ ದ.ಕ. ಜಿ.ಪಂ. ಹಿ.ಪ್ರಾ.ಶಾಲೆ ಕಾರ್ಕಡ ಇಲ್ಲಿನ 'ಶತಪತ್ರ'ವೆಂಬ ಸಂಚಿಕೆಯ ಪುಟ ಸಂಖ್ಯೆ 35–36ರಲ್ಲಿ ಉಕ್ತವಾದ ಕಾರ್ಕಡ ರಾಮಚಂದ್ರ ಉಡುಪರ 'ಶಾಲೆಯ ಶಾಲೆ ಕಾರ್ಕಡ ಶಾಲೆ' ಎಂಬ ಶೀರ್ಷಿಕೆಯಲ್ಲಿ ಪ್ರಕಟವಾದ ಲೇಖನವನ್ನೂ ಗಮನಿಸಬಹುದಾಗಿದೆ.

2. ಏಕೀಕರಣಪೂರ್ವದ ಪ್ರಾಥಮಿಕ ಶಿಕ್ಷಣ ಸಂಸ್ಥೆಗಳಲ್ಲಿ ಸಾಂಸ್ಕೃತಿಕ ಚಟುವಟಿಕೆಗಳ ಸಹಿತ ಸಾಹಿತ್ಯ ಚಟುವಟಿಕೆಗಳಿಗೂ ವಿಶೇಷ ಪ್ರೋತ್ಸಾಹ ನೀಡಲಾಗಿದ್ದು, ಅಂದಿನ ವಿದ್ಯಾರ್ಥಿ ಸಮೂಹ ಮತ್ತು ಶಿಕ್ಷಕ ಶಿಕ್ಷಕಿಯರು ಈ ಚಟುವಟಿಕೆಗಳಲ್ಲಿ ಸಕ್ರಿಯವಾಗಿ ಭಾಗವಹಿಸುವ ಮನೋಭಾವವನ್ನು ರೂಢಿಸಿಕೊಂಡು ಬಂದಿದ್ದರು. ಈ ಹೇಳಿಕೆಗೆ ಪೂರಕ ಆಧಾರವು ಉ.ಜಿ. ಮಾದರಿ ಹಿ.ಪ್ರಾ. ಶಾಲೆ ಧೂಳಂಗಡಿ–ಹಂಗಾರಕಟ್ಟೆ ಶತಮಾನೋತ್ಸವ ಸ್ಮರಣಸಂಚಿಕೆ 2003ರ ಪುಟ ಸಂಖ್ಯೆ 24ರ 'ಧೂಳಂಗಡಿ ಶಾಲೆ ಕೆಲವು ನೆನಪುಗಳು' ಎಂಬ ಬಿ.ವಿ. ಕೆದಿಲಾಯರ ಲೇಖನದಲ್ಲಿ ದೊರಕುತ್ತದೆ.

3. 1972ಕ್ಕೆ ಮೊದಲು ಸ್ಥಳೀಯ ಅಭಿವೃದ್ಧಿ ಸಮಿತಿಯ ಪ್ರತ್ಯಕ್ಷ ಹಿಡಿತ ಪರೋಕ್ಷ ಸುಪರ್ದಿಗೆ ಯಾವೊಂದು ಶಾಲೆಯೂ ಒಳಪಟ್ಟಿರುವುದಿಲ್ಲ. ಇದರಿಂದಾಗಿ ಪಾಠ ಪಠ್ಯ ಬೋಧನೆ ಮತ್ತು ಸಾಂಸ್ಕೃತಿಕ ಕಾರ್ಯಕ್ರಮಗಳು, ಸಾಹಿತ್ಯ ಚಟುವಟಿಕೆಗಳ ಏರ್ಪಾಡುಗಳಲ್ಲಿ ಮುಖ್ಯಾಧ್ಯಾಪಕರು ಮತ್ತು ಅಧ್ಯಾಪಕರು ಪೂರ್ಣ ಸ್ವತಂತ್ರರಾಗಿದ್ದರು. ಈ ಹೇಳಿಕೆಯ ಸಮರ್ಥನೆಗಾಗಿ ಕೋಟೇಶ್ವರ ಹಿರಿಯ ಪ್ರಾಥಮಿಕ ಶಾಲೆಯ 'ಅಮೃತ ಸ್ಮರಣಸಂಚಿಕೆ' ಪುಟ ಸಂಖ್ಯೆ 16ರ ಶಿಕ್ಷಕ ದುಗ್ಗಪ್ಪ ಶೆಟ್ಟಿಯವರ ಲೇಖನವನ್ನು ಗಮನಿಸಬಹುದಾಗಿದೆ.

4. 1940–56ರ ನಡುವಿನ ಅವಧಿಯಲ್ಲಿ ಉಡುಪಿ ಜಿಲ್ಲಾ ವ್ಯಾಪ್ತಿಯಲ್ಲಿ ಅಸ್ತಿತ್ವಕ್ಕೆ ಬಂದ ಬಹುತೇಕ ಖಾಸಗೀ ಹಾಗೂ ಸರಕಾರಿ ಪ್ರೌಢಶಾಲೆಗಳು ಕನ್ನಡ ಸಾಹಿತ್ಯ ಚಟುವಟಿಕೆಗಳಿಗೆ ವಿಶೇಷ ಮಹತ್ವವನ್ನು ನೀಡಿದ್ದವು. ಈ ಹೇಳಿಕೆಗೆ ಸಮರ್ಥನೆ ಎಂಬಂತೆ ಉಲ್ಲೇಖಿಸಲೇ ಬೇಕಾದ ಸಂಸ್ಥೆಗಳೆಂದರೆ: ಬೋರ್ಡ್ ಹೈಸ್ಕೂಲು ಕುಂದಾಪುರ, ಸರಕಾರಿ ಪ್ರೌಢಶಾಲೆ ಹಿರಿಯಡ್ಕ, ಮಿಲಾಗ್ರಿಸ್ ಪ್ರೌಢಶಾಲೆ ಕಲ್ಯಾಣಪುರ, ಸರಕಾರಿ ಪ್ರೌಢಶಾಲೆ ಹೆಬ್ರಿ, ವಿವೇಕ ಪ್ರೌಢಶಾಲೆ ಕೋಟ. ಇಲ್ಲಿಯ ಅಧ್ಯಾಪಕವರ್ಗವು ಸಾಹಿತ್ಯಚಟುವಟಿಕೆಗಳಿಗೆ ನೀಡಿದ ವಿಶೇಷ ಆದ್ಯತೆಯೇ ಇಲ್ಲಿಯ ವಿದ್ಯಾರ್ಥಿಗಳಿಗೆ ಮುಂದಿನ ವಿದ್ಯಾಭ್ಯಾಸದ ಅವಧಿಯಲ್ಲಿ ಸಾಹಿತ್ಯಾಸಕ್ತಿಯನ್ನು ರೂಢಿಸಿಕೊಳ್ಳುವುದಕ್ಕೆ ಪ್ರೇರಣೆಯನ್ನು ನೀಡಿತು. ಈ ಹೇಳಿಕೆಯ ಸಮರ್ಥನೆಗಾಗಿ ಮಿಲಾಗ್ರಿಸ್ ಪ್ರೌಢಶಾಲೆ ಕಲ್ಯಾಣಪುರ ಇಲ್ಲಿಯ ಅಮೃತೋತ್ಸವ ಸಂಚಿಕೆಯ ಪುಟ ಸಂಖ್ಯೆ 64ರ ಮಾಲತಿ ಮೂರ್ತಿಯವರ ಲೇಖನ ಶೀರ್ಷಿಕೆ 'ನನ್ನ ಶಾಲಾ ದಿನಗಳು' ಹಾಗೂ ಸರಕಾರಿ ಪದವಿಪೂರ್ವ ಕಾಲೇಜು ಹಿರಿಯಡ್ಕ ಇಲ್ಲಿನ

ಸ್ಮರಣ ಸಂಚಿಕೆ 'ಸುವರ್ಣ ಸಂಪದ'ದ ಪುಟ ಸಂಖ್ಯೆ 28ರ 'ನನ್ನ ಶಾಲೆ' ಎಂಬ ಶೀರ್ಷಿಕೆಯಲ್ಲಿ ಪ್ರೊ. ಬಿ.ಎಂ. ಹೆಗ್ಡೆಯವರ ಲೇಖನವನ್ನು, ಬೋರ್ಡ್ ಹೈಸ್ಕೂಲು ಕುಂದಾಪುರ (ಈಗಿನ ಸರಕಾರಿ ಪ.ಪೂ. ಕಾಲೇಜು) ಶತಮಾನೋತ್ಸವ ಸ್ಮರಣಸಂಚಿಕೆಯಲ್ಲಿ ಪ್ರಕಟಗೊಂಡ ಎ.ಎಸ್.ಎನ್. ಹೆಬ್ಬಾರರ ಸಂಪಾದಕೀಯ ನುಡಿಯೊಂದಿಗೆ ಪ್ರಾಕ್ತನ ವಿದ್ಯಾರ್ಥಿಗಳಾದ ಜಿ.ವಿ. ಹೇರ್ಳೆ, ವೈದೇಹಿ, ಸೂರ್ಯನಾರಾಯಣ ಚಡಗ ಇವರ ಅನುಭವದ ನುಡಿಗಳನ್ನು ಗಮನಿಸಬಹುದಾಗಿದೆ.

ಕೋಟೇಶ್ವರ ಸರಕಾರಿ ಪ್ರೌಢಶಾಲೆಯ ಅಧ್ಯಾಪಕರು ಪ್ರೇರಣೆ ನೀಡಿದ ವಿಷಯವನ್ನು ಶತಮಾನೋತ್ಸವ ಸ್ಮರಣಸಂಚಿಕೆ 'ಹೊನ್ನ ಹೊತ್ತಗೆ-2000'ದ ಪುಟ ಸಂಖ್ಯೆ 27ರ ಡಾ. ಚಂದ್ರಶೇಖರ ಶೆಟ್ಟಿ (ರಾಜೀವ ಗಾಂಧಿ ಆರೋಗ್ಯ ವಿಶ್ವವಿದ್ಯಾನಿಲಯದ ನಿವೃತ್ತ ಉಪಕುಲಪತಿ) ಯವರ ಹೇಳಿಕೆಯಲ್ಲಿ ಮನಗಾಣಬಹುದಾಗಿದೆ. ಹಾಗೆಯೇ ಸರಕಾರಿ ಪ್ರೌಢಶಾಲೆ ಹೆಬ್ರಿಯ ಸ್ಮರಣಸಂಚಿಕೆ ಸುವರ್ಣ ಲಹರಿಯ ಪುಟ ಸಂಖ್ಯೆ 70ರರಲ್ಲಿ ತಮ್ಮ ಕನ್ನಡ ಗುರುಗಳಾದ ಶ್ರೀ ಜಿನರಾಜರನ್ನು ವಿಲಾಸ್ ಕುಮಾರ್ ಎಂಬ ಪ್ರಾಕ್ತನ ವಿದ್ಯಾರ್ಥಿ ನೆನಪಿಸಿಕೊಂಡಿರುವುದನ್ನು ಗಮನಿಸಬಹುದು. ಈ ಎಲ್ಲ ಸಂಚಿಕೆಗಳಲ್ಲಿ ವಿವಿಧ ವಿದ್ವಾಂಸರು ನೀಡಿದ ಎಲ್ಲ ಹೇಳಿಕೆಗೂ ಮುಖ್ಯ ತಿರುಳೆಂಬಂತೆ ಕುಂದಾಪುರ ಭಂಡಾರ್ಕಾರ್ಸ್ ಕಾಲೇಜಿನ ಪ್ರಾಂಶುಪಾಲರಾಗಿದ್ದ (ಈಗ ದಿವಂಗತರು) ಪ್ರೊ. ಎ. ಸಿ. ತುಂಗರು ಕೋಟ ವಿವೇಕ ಪ್ರೌಢಶಾಲೆಯು ತಮ್ಮ ಭವಿಷ್ಯಕ್ಕೆ ನೀಡಿದ ಪ್ರೇರಣೆಯನ್ನು ಹೀಗೆ ಉಲ್ಲೇಖಿಸಿದ್ದಾರೆ.... "ಪಾಠೇತರ ಚಟುವಟಿಕೆಗಳಲ್ಲಿ ಪಾಲ್ಗೊಳ್ಳದ ವಿದ್ಯಾರ್ಥಿ ವಿದ್ಯಾರ್ಥಿಯೇ ಅಲ್ಲ. ಆಟದಲ್ಲಿ, ಡಿಬೇಟುಗಳಲ್ಲಿ, ನಕ್ಷತ್ರವೀಕ್ಷಣೆಯಲ್ಲಿ, ಶೈಕ್ಷಣಿಕ ಸಿನೇಮಾಗಳನ್ನು ನೋಡುವುದರಲ್ಲಿ, ನಾಟಕಗಳಲ್ಲಿ, ಯಕ್ಷಗಾನಗಳಲ್ಲಿ, ಚಿತ್ರಕಲೆಗಳಲ್ಲಿ ಭಾಗವಹಿಸಲಿಚ್ಛಿಸುವವರಿಗೆ ತುಂಬಾ ಅವಕಾಶಗಳಿದ್ದವು... ನನ್ನ ಜೀವನದ ಅತೀ ಅಮೂಲ್ಯವಾದ ಮೂರು ವರ್ಷ (1956-59)ಗಳನ್ನು ರಾಜ್ಯದಲ್ಲೇ ಅತ್ಯುತ್ತಮ ಪ್ರೌಢಶಾಲೆ ಎಂದು ಹೆಸರು ಪಡೆದ ವಿವೇಕ ಹೈಸ್ಕೂಲಿನಲ್ಲಿ ನನ್ನ ಆಸಕ್ತಿಯ ಕ್ಷೇತ್ರಗಳನ್ನು ಗುರುತಿಸಿಕೊಳ್ಳಲು ಬಳಸಿಕೊಂಡಿದ್ದೇನೆನ್ನಲು ಹೆಮ್ಮೆಯೆನಿಸುತ್ತಿದೆ. ಮುಂದೆ ಎಂ.ಜಿ.ಎಂ. ಕಾಲೇಜಿನಲ್ಲಿ ಅಭ್ಯಾಸ ಮಾಡುವಾಗಲೂ ಇಲ್ಲಿ ನೀಡಲಾದ ಭದ್ರ ಬುನಾದಿಯೇ ನಮ್ಮ ವ್ಯಕ್ತಿತ್ವದ ಬೆಳವಣಿಗೆಗೆ ಸಹಾಕರಿಯಾದವು. ಭಾಷಣ ಕಲೆ, ಕವನ-ಲೇಖನಗಳನ್ನು ಬರೆಯುವ ಹವ್ಯಾಸ ಇಲ್ಲಿನ ಪ್ರೇರಣೆಯಿಂದಲೇ ಮುಂದುವರಿಸಲು ಸಾಧ್ಯವಾಯಿತು."(ಗುಂಡ್ಮಿ ಶಂಕರನಾರಾಯಣ ಅಡಿಗ, 1999, ಪು-19-20)

5) ಏಕೀಕರಣಪೂರ್ವದಲ್ಲಿ ಅಸ್ತಿತ್ವಕ್ಕೆ ಬಂದು ಸಾಹಿತ್ಯ ಚಟುವಟಿಕೆಗಳಲ್ಲಿ ತೊಡಗಿಕೊಂಡ ಬಹುತೇಕ ಪ್ರಾಥಮಿಕ ಹಾಗೂ ಪ್ರೌಢಶಿಕ್ಷಣ ಸಂಸ್ಥೆಗಳು 1985ರ ತನಕವೂ ತಮ್ಮ ಸಾಹಿತ್ಯಕ ಮತ್ತು ಸಾಂಸ್ಕೃತಿಕಚಟುವಟಿಕೆಗಳನ್ನು ಒಂದು ಪರಂಪರೆ ಎಂಬಂತೆ ಮುಂದುವರಿಸಿಕೊಂಡು ಬಂದವು. ಏಕೀಕರಣದ ಅನಂತರದಲ್ಲಿ ಅಸ್ತಿತ್ವಕ್ಕೆ ಬಂದ ಕೆಲವು ಪ್ರಾಥಮಿಕ ಪ್ರೌಢ ಶಿಕ್ಷಣಸಂಸ್ಥೆಗಳು ಪಠ್ಯ ಚಟುವಟಿಕೆಗಳಿಗೆ ಪೂರಕವಾಗಿ ಸಾಹಿತ್ಯಕಚಟುವಟಿಕೆಗಳನ್ನು ಆರಂಭಿಸತೊಡಗಿದವು. ಇದರಲ್ಲಿ ಮೊದಲಾಗಿ ಉಲ್ಲೇಖಿಸಬಹುದಾದ ಹೆಸರುಗಳು ಹೀಗಿವೆ. ಬೇಲಾಡಿ ಅನುದಾನಿತ ಹಿರಿಯ ಪ್ರಾಥಮಿಕ ಶಾಲೆ, ಬೇಲಾಡಿ (ಕನ್ನಡ ಸಾಹಿತ್ಯ ಚಟುವಟಿಕೆಗಾಗಿ-ಉಪನ್ಯಾಸ ಮತ್ತು ಲಿಖಿತ ಬರಹಗಳಿಗಾಗಿ), ಬಿ.ಎಂ.ಎಂ. ಪ್ರೌಢಶಾಲೆ, ಕೂರಾಡಿ (ನಾಟಕ ಪ್ರದರ್ಶನಕ್ಕಾಗಿ), ಯು. ಕಮಲಾ ಬ್ಯಾ ಪ್ರೌಢಶಾಲೆ ಕಡಿಯಾಳಿ, ಚೇತನಾ ಪ್ರೌಢಶಾಲೆ ಹಂಗಾರಕಟ್ಟೆ (ಸಾಹಿತ್ಯ

ಮತ್ತು ಸಾಂಸ್ಕೃತಿಕ ಚಟುವಟಿಕೆಗಳಿಗಾಗಿ) ಉ.ಜಿ.ಪ. ಹಿರಿಯ ಪ್ರಾಥಮಿಕ ಶಾಲೆ ಹೆಸ್ಕುತ್ತೂರು (ಲಿಖಿತ ಚಟುವಟಿಕೆಗಳಿಗಾಗಿ), ಪೆರ್ಡೂರು ಪ್ರೌಢಶಾಲೆ ಪೆರ್ಡೂರು (ಸಾಹಿತ್ಯ ಚಟುವಟಿಕೆಗಳಿಗಾಗಿ–ಮುಖ್ಯೋಪಾಧ್ಯಾಯರಾದ ಗೋಪಾಲಕೃಷ್ಣ ಉಪಾಧ್ಯಾಯರು, ಸಾಹಿತ್ಯ ಮತ್ತು ಸಾಂಸ್ಕೃತಿಕ ಚಟುವಟಿಕೆಗಳಿಗೆ ವಿಶೇಷ ಪ್ರೋತ್ಸಾಹ ನೀಡಿದರು) ಈ ಮುಂತಾದ ಸಂಸ್ಥೆಗಳು ಮುಖ್ಯವಾದವುಗಳಾಗಿವೆ. ಯು. ಕಮಲಾ ಬ್ಯಾ ಪ್ರೌಢಶಾಲೆ ಕಡಿಯಾಳಿ ಇಲ್ಲಿನ ಪ್ರಾಕ್ತನ ವಿದ್ಯಾರ್ಥಿ ತನ್ನ ಸಾಹಿತ್ಯಾಸಕ್ತಿ ವಿಶೇಷ ಪ್ರಚೋದನೆ ನೀಡಿದ ಸಂಸ್ಥೆಯ ಕುರಿತು ಅಭಿವ್ಯಕ್ತಿಸಿದ ಅಭಿಪ್ರಾಯ ಹೀಗಿದೆ... "ಇಂದು ನಾನು ಯಾವ ರೀತಿಯಿಂದಾದರೂ ಯಶಸ್ಸು ಕಂಡಿದ್ದರೆ ಅದಕ್ಕೆ ನಾನು ಕಲಿತ ಕಮಲಾಬ್ಯಾ ಹೈಸ್ಕೂಲೇ ಕಾರಣ... ಇಂದು ನಾನು ಸರಕಾರಿ ಕಾಲೇಜೊಂದರಲ್ಲಿ ಕನ್ನಡ ಉಪನ್ಯಾಸ ಬರಹಗಾರನಾಗಿ ಒಂದಿಷ್ಟು ಕಥೆ, ಕವನ, ಹಾಸ್ಯ ಲೇಖನ ಇತ್ಯಾದಿಗಳನ್ನು ಬರೆದಿದ್ದೇನೆ. ಅದೆಲ್ಲ ಸಾಧ್ಯವಾದದ್ದು ಕಮಲಾಬ್ಯಾ ಹೈಸ್ಕೂಲಿನಲ್ಲಿ ನಾನು ಕಲಿತ ಕಾರಣದಿಂದಲೇ. ಅಲ್ಲಿನ ಮೇಷ್ಟ್ರುಗಳು ನನ್ನನ್ನು ರೂಪಿಸಿದ್ದಾರೆ."(ಲೇ: ಶಿರ್ವ ಗೋಪಿಚಂದ ರಾವ್., 2013, ಪು–96–97) ಎಂದು ತನ್ನ ಸಾಹಿತ್ಯಾಭಿರುಚಿಗೆ ಮೂಲ ಕಾರಣ ತಾನು ಓದಿದ ಶಾಲೆಯೆನ್ನುವುದನ್ನು ಕೃತಜ್ಞತೆಯಿಂದ ಸ್ಮರಿಸಿಕೊಂಡಿದ್ದಾರೆ. 1986 ರ ಅನಂತರದಲ್ಲಿ ಉಡುಪಿ ಜಿಲ್ಲೆಯ ಬಹುತೇಕ ಖಾಸಗಿ ಮತ್ತು ಸರಕಾರಿ ಪ್ರಾಥಮಿಕ ಪ್ರೌಢಶಿಕ್ಷಣ ಸಂಸ್ಥೆಗಳು ಸಾಹಿತ್ಯಕ ಮತ್ತು ಸಾಂಸ್ಕೃತಿಕ ಚಟುವಟಿಕೆಗಳಿಂದ ಹಿಂದೆ ಸರಿದವು. ಈ ಸಾಹಿತ್ಯ ಚಟುವಟಿಕೆಗಳ ಗೈರಿಗೆ ಕಾರಣಗಳನ್ನು ಹೀಗೆ ಗುರುತಿಸಲಾಗಿದೆ.

1) ಏಕೀಕರಣೋತ್ತರ ಕಾಲದ ಶಿಕ್ಷಣ ನೀತಿ, ಕೌಟುಂಬಿಕ ರಚನೆಯಲ್ಲಾದ ಮಾರ್ಪಾಟುಗಳಿಂದ ಶಾಲಾ ಶಿಕ್ಷಣವು ಕೇವಲ ವ್ಯಾವಹಾರಿಕವಾಯಿತು. ಇದರ ಪರಿಣಾಮ ಎಲ್ಲ ಚಟುವಟಿಕೆಗಳು ತಮ್ಮ ತಮ್ಮ ಮಹತ್ವವನ್ನು ಕಳೆದುಕೊಂಡುವು. ಕೋಟೇಶ್ವರದ ಜಿ.ಪಂ. ಹಿ. ಪ್ರಾ. ಶಾಲೆಯ ಅಧ್ಯಾಪಕರಾದ ದುಗ್ಗಪ್ಪ ಶೆಟ್ಟಿಯವರ ಹೇಳಿಕೆಯನ್ನು ಇಲ್ಲಿ ದಾಖಲಿಸುವುದು ಸಮಯೋಚಿತವಾಗಿದೆ. "ಉತ್ತಮ ಸಾಮಾಜಿಕ ಪ್ರಜೆಯನ್ನಾಗಿ ರೂಪಿಸಬಲ್ಲ ಮಾರ್ಗದರ್ಶಿ ಮಹನೀಯರ ಚರಿತ್ರೆಯು ಅಧ್ಯಯನ ಪಠ್ಯಪುಸ್ತಕಗಳಿಂದ ಮಾಯವಾಗಿದೆ. ಕೇವಲ ವೈಜ್ಞಾನಿಕಜ್ಞಾನ, ಕಾಲ್ಪನಿಕ ಕಥಾನಕಗಳನ್ನೊಳಗೊಂಡ ವಿಚಾರಗಳ ಅಧ್ಯಯನವಾಗಿದೆ. ವಿದ್ಯಾರ್ಜನೆ ಕೇವಲ ಬದುಕಿನ ಅರ್ಥಸಂಪಾದನೆಯ ಮಾರ್ಗವಾಗಿರದೆ, ದೇಶದ ಯುವ ಪ್ರಜ್ಞಾವಂತ ಪ್ರಜೆಗಳನ್ನಾಗಿ ರೂಪಿಸುವ ಮಾರ್ಗವಾಗಿರಬೇಕು. ಆಗಲೇ ವಿದ್ಯಾರ್ಜನೆಗೊಂದು ಬೆಲೆ."(ಲೇ: ಐತಾಳ್ ಜಿ.ಕೆ., 1995, ಪು–16) ದುಗ್ಗಪ್ಪ ಶೆಟ್ಟಿಯವರ ಅಭಿಪ್ರಾಯವನ್ನು ಇನ್ನಷ್ಟು ವಿಸ್ತರಿಸುವುದಾದರೆ "ಇಂದಿನ ಹೆಚ್ಚಿನ ಮಕ್ಕಳಿಗೆ ಸಮಾಜದಲ್ಲಿ ಗೌರವದಿಂದ ಬದುಕಲು ಬೇಕಾದ ಆತ್ಮವಿಶ್ವಾಸವನ್ನು ಹೆಚ್ಚಿಸುವ ಪಠ್ಯಾಂಶಗಳು ಸಿಗುತ್ತಿಲ್ಲ. ಮಕ್ಕಳ ಬೌದ್ಧಿಕ ಮಟ್ಟ ಮತ್ತು ಅಭಿರುಚಿಗೆ ತಕ್ಕ ಶಿಕ್ಷಣಕ್ಕೆ ನಮ್ಮಲ್ಲಿ ಅವಕಾಶ ಕಡಿಮೆ."(ಲೇ: ರಾಮ ಭಟ್ಟ ಸಜಂಗದ್ದೆ, 2000, ಪು–42)

2) **ಭಾರತ ಸರಕಾರದ ಜಾಗತಿಕ ಮಕ್ಕಳ ಹಕ್ಕುಗಳ ಘೋಷಣೆ**: ವಿಶ್ವಸಂಸ್ಥೆಯು 1959ರಲ್ಲಿಯೇ ಪ್ರಕಟಪಡಿಸಿದ ಜಾಗತಿಕ ಮಕ್ಕಳ ಹಕ್ಕುಗಳ ಘೋಷಣೆಯನ್ನು ಭಾರತ ಸರಕಾರವು 1992ರಲ್ಲಿ ಅನುಷ್ಠಾನಕ್ಕೆ ತಂದಿತು. "ಅದರಂತೆ ಮೂಲಭೂತ ಸೌಕರ್ಯಗಳನ್ನು ಒದಗಿಸದೆ ಮಕ್ಕಳನ್ನು ಸತಾಯಿಸುವಂತಿಲ್ಲ. ಹಿಂಸೆ, ದಬ್ಬಾಳಿಕೆ ಶರೀರ ದಂಡನೆ ಮಾಡುವ ಹಾಗಿಲ್ಲ"(ಲೇ: ಪಿಟಾ ಬ್ಯಾ ಜಿ.ನಾಯಕ, 2010, ಪು–48) ಎನ್ನುವುದೂ ದಶಸೂತ್ರಗಳಲ್ಲಿ ಒಂದಾಗಿದೆ. ಮಕ್ಕಳಿಗೆ ಎಳವೆಯಲ್ಲಿಯೇ

ನೀಡುವ ಈ ಅತಿ ಸೌಲಭ್ಯ ಮತ್ತು ಹಕ್ಕುಗಳು ಮಕ್ಕಳಿಗೆ ಶಿಕ್ಷಣದ ಬಗ್ಗೆ ಮತ್ತು ಶಿಕ್ಷಕರ ಬಗ್ಗೆ ಅಸಡ್ಡೆ ಮೂಡುವಂತೆ ಮಾಡಿದೆ. ಶಿಕ್ಷಕರ ಹೇಳಿಕೆಯನ್ನು ಪರಿಪಾಲಿಸುವ ನಿಷ್ಠೆ ವಿದ್ಯಾರ್ಥಿಗಳಿಂದ ಕಾಣದಾಯಿತು. ಶಿಕ್ಷಣವು ಉದ್ಯಮವಾಗಿ ಬೆಳೆದಂತೆಲ್ಲಾ ವಿದ್ಯಾರ್ಥಿಗಳ ಈ ಭಾವವು ಇನ್ನಷ್ಟು ಬಲಿಯಿತು.

3) **ಉದ್ದಿಮೆಯಾಗಿ ಹುಟ್ಟಿಕೊಂಡ ಆಂಗ್ಲ ಮಾಧ್ಯಮ ಶಾಲೆಗಳು:** 1980ರ ದಶಕದ ಅನಂತರದಲ್ಲಿ ವರ್ಷದಿಂದ ವರ್ಷಕ್ಕೆ ಆರಂಭಗೊಳ್ಳುವ ಆಂಗ್ಲಮಾಧ್ಯಮ ಶಾಲೆಗಳ ಸಂಖ್ಯೆ ಹೆಚ್ಚುತ್ತಾ ಬಂದಿತು. 1980–81ರಲ್ಲಿ ಉಡುಪಿ ಜಿಲ್ಲಾ ವ್ಯಾಪ್ತಿಯಲ್ಲಿ ಕೇವಲ 6 ಆಂಗ್ಲಮಾಧ್ಯಮ ಶಾಲೆಗಳಲ್ಲಿ 1000ದ ಮಿತಿಯಲ್ಲಿದ್ದ ವಿದ್ಯಾರ್ಥಿ ಸಂಖ್ಯೆಯು, 1998–99ರಲ್ಲಿ 14,405 ಸಂಖ್ಯೆಯನ್ನು ತಲುಪಿ, 6.85%ವನ್ನು ಮುಟ್ಟಿತು. 2015–16ನೇ ಶೈಕ್ಷಣಿಕ ವರ್ಷದಲ್ಲಿ 63,856 ವಿದ್ಯಾರ್ಥಿಗಳು ಆಂಗ್ಲ ಮಾಧ್ಯಮಕ್ಕೆ ಸೇರ್ಪಡೆಗೊಂಡು ಈ ಪ್ರಮಾಣ 40.19%ಕ್ಕೆ ತಲುಪಿದೆ. (ಈ ಮಾಹಿತಿಯು ಉಡುಪಿ ಜಿಲ್ಲಾಧಿಕಾರಿ ಕಛೇರಿಯ ಅಂಕೆ–ಸಂಖ್ಯೆ ವಿಭಾಗದಿಂದ ಪಡೆದ ಅಧಿಕೃತ ದಾಖಲೆಯಾಗಿದೆ.) ಆಂಗ್ಲಮಾಧ್ಯಮ ಶಾಲೆಗಳಿಗೆ ವಿದ್ಯಾರ್ಥಿಗಳನ್ನು ಸೇರ್ಪಡೆಗೊಳಿಸುವುದು ಹೆತ್ತವರ ಪ್ರತಿಷ್ಠೆಯ ದ್ಯೋತಕ ಎಂಬ ಭಾವ ಬಲಿಯಿತು. ಬಡ ಮಧ್ಯಮವರ್ಗದ ಹೆತ್ತವರಿಗೆ ದುಬಾರಿ ಶುಲ್ಕವನ್ನು ತೆತ್ತು ಆಂಗ್ಲ ಮಾಧ್ಯಮ ಪ್ರಾಥಮಿಕ ಶಾಲೆಗೆ ವಿದ್ಯಾರ್ಥಿಗಳನ್ನು ಸೇರ್ಪಡೆಗೊಳಿಸುವುದಕ್ಕೆ ಅಸಾಧ್ಯವಾದುದನ್ನು ಮನಗಂಡು ಸರಕಾರವೇ ಪ್ರೌಢಶಾಲಾ ಹಂತದಲ್ಲಿ ಆಂಗ್ಲಮಾಧ್ಯಮ ತರಗತಿಗಳನ್ನು ಆರಂಭಿಸುವುದರೊಂದಿಗೆ ಮಧ್ಯಮವರ್ಗದ ಶೈಕ್ಷಣಿಕ ಕೋರಿಕೆಯನ್ನು ಮನ್ನಿಸಿತು. ತಾಲೂಕು ಕೇಂದ್ರದಲ್ಲಿ ವಸತಿಶಾಲೆಗಳೆಂಬ (ನವೋದಯ) ಕೇಂದ್ರ ಸರಕಾರದ ಆಂಗ್ಲ ಮಾಧ್ಯಮ ಶಾಲೆಗಳು ಆರಂಭವಾಗುವುದರೊಂದಿಗೆ ಆಂಗ್ಲ ಮಾಧ್ಯಮದ ಪ್ರಾಶಸ್ತ್ಯ ಇನ್ನಷ್ಟು ಹೆಚ್ಚಿತು. ಈ ಎಲ್ಲಾ ಕಾರಣಗಳಿಂದಾಗಿ ಕನ್ನಡ ಮಾಧ್ಯಮವು ಕನ್ನಡಿಗರ ಪೋಷಕರಿಂದಲೇ ದೂರವಾಯಿತು. ಇಂತಹ ಸಂದರ್ಭದಲ್ಲಿ ಕನ್ನಡ ಸಾಹಿತ್ಯ ಚಟುವಟಿಕೆಗಳನ್ನು ನಿರೀಕ್ಷಿಸುವುದು ಕೇವಲ ಭ್ರಮೆಯಲ್ಲದೇ ವಾಸ್ತವವಾಗದು. ಮಾಧ್ಯಮದಲ್ಲಾದ ಪಲ್ಲಟದ ಬಗೆಯನ್ನ್ನು ಸ್ತಂಬ ರೇಖಾಚಿತ್ರ ಹಾಗೂ ವೃತ್ತ ರೇಖಾಚಿತ್ರದಲ್ಲಿ ಮುಂದೆ ತೋರಿಸಲಾಗಿದೆ.

4) **ಪರಿಣಾಮಕಾರಿಯಾಗಿ ಅನುಷ್ಠಾನಗೊಳ್ಳದ ಇಲಾಖಾ ನಿಯಮ/ಅಧಿಸೂಚನೆ ಸುತ್ತೋಲೆಗಳು:** ಪ್ರಾಥಮಿಕ ಪ್ರೌಢಶಾಲಾ ಅಧ್ಯಾಪಕರಿಗೆ ಶಿಕ್ಷಣದ ಜವಾಬ್ದಾರಿಯ ಸಹಿತ ಪಠ್ಯೇತರ ಜವಾಬ್ದಾರಿಗಳಲ್ಲಿ ಶಿಕ್ಷಕರನ್ನು ತೊಡಗಿಸುತ್ತಾ ಸರಕಾರವು ತರಗತಿ ಬೋಧನೆಗೆ ತಡೆಯನ್ನೊಡ್ಡುತ್ತಿರುವುದು 90ರ ದಶಕದ ಅನಂತರದಲ್ಲಿ ವಿದ್ಯಾರ್ಥಿಗಳ ಹೆತ್ತವರು ಕಂಡುಕೊಂಡ ಸಾಮಾನ್ಯ ಅಂಶವಾಗಿದೆ. ಬೋಧನೆಗೆ ಸಂಬಂಧಿಸಿದಂತೆ ಪ್ರಾಥಮಿಕ ಶಾಲಾ ಕ್ಲಷ್ಟರ್ ಮಟ್ಟದಲ್ಲಿ ಚರ್ಚೆಗಳಾಗುತ್ತಿದ್ದರೂ ಈ ಚರ್ಚೆಯ ಅಂತಿಮ ಪರಿಣಾಮ ಮತ್ತು ಅನುಷ್ಠಾನದ ಕುರಿತಂತೆ ಸಾರ್ವಜನಿಕರಿಗಾಗಲೀ, ವಿದ್ಯಾರ್ಥಿಗಳ ಹೆತ್ತವರಿಗಾಗಲೀ ಯಾವುದೇ ಮಾಹಿತಿ ಇಲ್ಲದಿರುವುದರಿಂದ ಸಾರ್ವಜನಿಕರು ಪ್ರಾಥಮಿಕ ಮತ್ತು ಪ್ರೌಢಶಿಕ್ಷಣದ ಕುರಿತಂತೆ ವಿಶ್ವಾಸವನ್ನೇ ಕಳೆದುಕೊಳ್ಳುವಂತಾಯಿತು. **ಶಾಲೆಗೆ ಬನ್ನಿ ಶನಿವಾರ, ಪ್ಯಾನೆಲ್ ಬೋರ್ಡ್ ಎಂಬ ಎರಡು ಚಟುವಟಿಕೆಗಳು ವಿದ್ಯಾರ್ಥಿಗಳ ಸಾಹಿತ್ಯಾಸಕ್ತಿಯನ್ನು ಉತ್ತೇಜಿಸುವ ಯೋಜನೆಯಾಗಿದ್ದರೂ ಇದನ್ನು ಪರಿಣಾಮಕಾರಿಯಾಗಿ ಅಳವಡಿಸುವಲ್ಲಿ ಶಾಲಾ ಅಧ್ಯಾಪಕರು ಮತ್ತು ಇಲಾಖೆ ವಿಫಲವಾಗಿರುವುದು ಕಂಡುಬರುತ್ತದೆ.** ಪ್ರತಿಭಾ ಕಾರಂಜಿ/ಪ್ರದರ್ಶನ ಪ್ರಾಥಮಿಕ ಶಾಲಾ


ಮಾಧ್ಯಮವಾರು ಶಿಕ್ಷಣ ಸಂಸ್ಥೆಗಳಲ್ಲಿ ದಾಖಲಾತಿ ಪ್ರಮಾಣ
ಉಡುಪಿ ಜಿಲ್ಲೆ
1998 – 99
210000
180000
150000
120000
90000
60000
30000
0
196084
93.15%
14405
6.85%
ಕನ್ನಡ ಮಾಧ್ಯಮ
ಆಂಗ್ಲ ಮಾಧ್ಯಮ


ಮಾಧ್ಯಮವಾರು ಶಿಕ್ಷಣ ಸಂಸ್ಥೆಗಳಲ್ಲಿ ದಾಖಲಾತಿ ಪ್ರಮಾಣ
ಉಡುಪಿ ಜಿಲ್ಲೆ
2015 – 16
112000
96000
80000
64000
48000
32000
16000
0
94707
59.61%
63856
40.19%
318
0.20%
ಕನ್ನಡ ಮಾಧ್ಯಮ
ಆಂಗ್ಲ ಮಾಧ್ಯಮ
ಇತರೆ


ಮಾಧ್ಯಮವಾರು ಶಿಕ್ಷಣ ಸಂಸ್ಥೆಗಳಲ್ಲಿ ದಾಖಲಾತಿ ಪ್ರಮಾಣ
ಉಡುಪಿ ಜಿಲ್ಲೆ
1998 – 99
ಆಂಗ್ಲ ಮಾಧ್ಯಮ, 6.85%
ಕನ್ನಡ ಮಾಧ್ಯಮ, 93.15%


ಮಾಧ್ಯಮವಾರು ಶಿಕ್ಷಣ ಸಂಸ್ಥೆಗಳಲ್ಲಿ ದಾಖಲಾತಿ ಪ್ರಮಾಣ
ಉಡುಪಿ ಜಿಲ್ಲೆ
2015 – 16
ಇತರೆ, 0.20%
ಆಂಗ್ಲ ಮಾಧ್ಯಮ, 40.19%
ಕನ್ನಡ ಮಾಧ್ಯಮ 59.61%

ವಿದ್ಯಾರ್ಥಿಗಳಿಗೆ ಸಾರ್ವಜನಿಕವಾಗಿ ತಮ್ಮ ಪ್ರತಿಭೆಯನ್ನು ಅಭಿವ್ಯಕ್ತಿಸಲು ಇರುವ ಅಪೂರ್ವ ಅವಕಾಶವಾದರೂ ಆ ಕಾರ್ಯಕ್ರಮದ ಹಿಂದಿನ ಔಪಚಾರಿಕ ವಿಧಿ ವಿಧಾನಗಳು ಸ್ಥಳೀಯ ರಾಜಕಾರಣಿಗಳ ಪ್ರಚಾರ ಚಪಲಕ್ಕೆ ಅವಕಾಶವನ್ನೊದಗಿಸಿಕೊಟ್ಟಂತಾಗಿದೆ.

5) **ಆರ್.ಟಿ.ಇ. ಅಧಿನಿಯಮ ಹಾಗೂ ಸರ್ವೋಚ್ಚ ನ್ಯಾಯಾಲಯದ ತೀರ್ಪು:** ಶಿಕ್ಷಣ ಮಾಧ್ಯಮದ ಕುರಿತಂತೆ ಕರ್ನಾಟಕ ಸರಕಾರ ಮತ್ತು ಖಾಸಗಿ ಶಿಕ್ಷಣ ಮಂಡಳಿಗಳ ನಡುವಿನ ಸುದೀರ್ಘ ಹೋರಾಟದಲ್ಲಿ ಖಾಸಗೀ ಶಿಕ್ಷಣ ಮಂಡಳಿಯು ಅಂತಿಮವಾಗಿ ಸರ್ವೋಚ್ಚ ನ್ಯಾಯಾಲಯದಲ್ಲಿ ಜಯವನ್ನು ಸಾಧಿಸಿತು. ಆ ಜಯದ ಹಿಂದೆ ಸರ್ವೋಚ್ಚ ನ್ಯಾಯಾಲಯವು ಕಂಡುಕೊಂಡ ಮುಖ್ಯ ಅಂಶವು ಹೀಗಿದೆ: "ಶಿಕ್ಷಣ ಮಾಧ್ಯಮದ ಆಯ್ಕೆಯು ಮಗುವಿನ ಹೆತ್ತವರ ಮೂಲಭೂತ ಹಕ್ಕಾಗಿದ್ದು, ಇದನ್ನು ಪ್ರಶ್ನಿಸುವುದಕ್ಕೆ ಸರಕಾರಕ್ಕೆ ಯಾವುದೇ ಹಕ್ಕುಗಳಿಲ್ಲ. ಹೆತ್ತವರ ಆಯ್ಕೆಯನ್ನು ಪ್ರಶ್ನಿಸುವುದು ಹೆತ್ತವರ ಮೂಲಭೂತ ಹಕ್ಕುಗಳನ್ನು ಚ್ಯುತಿಗೊಳಿಸಿದಂತೆ" ಎಂಬ ಈ ಅಭಿಪ್ರಾಯಕ್ಕನುಸರಿಸಿ ಸರ್ವೋಚ್ಚ ನ್ಯಾಯಾಲಯವು ಕರ್ನಾಟಕ ಖಾಸಗಿ ಶಿಕ್ಷಣ ಮಂಡಳಿಯ ಪರವಾಗಿ ತೀರ್ಪನ್ನು ನೀಡಿತು. ಈ ತೀರ್ಪು ಕನ್ನಡ ಸಾಹಿತ್ಯಾಭಿಮಾನಿಗಳಿಗೆ, ತಮ್ಮ ಕನ್ನಡ ಚಟುವಟಿಕೆಗಳಿಗೆ ಪೂರ್ಣವಿರಾಮ ಎಂಬಂತಾಯಿತು.

ದುಬಾರಿ ಶುಲ್ಕ ತೆತ್ತು ಆಂಗ್ಲ ಮಾಧ್ಯಮ ಶಾಲೆಗೆ ಸೇರ್ಪಡೆಗೊಳಿಸಲಸಾಧ್ಯವಾದ ಹೆತ್ತವರಿಗೆ ಆರ್.ಟಿ.ಇ. ಅಧಿನಿಯಮವು ವರದಾನವಾಯಿತು. ಕನ್ನಡ ಮಾಧ್ಯಮದಲ್ಲುಳಿದ ಅಲ್ಪಸ್ವಲ್ಪ ಮಕ್ಕಳನ್ನು ಸರಕಾರವೇ ಶುಲ್ಕ ತುಂಬಿಸಿ, ಖಾಸಗೀ ಆಂಗ್ಲ ಮಾಧ್ಯಮ ಶಾಲೆಗಳಿಗೆ ಸೇರ್ಪಡೆಗೊಳಿಸುವುದರಿಂದ ಕನ್ನಡ ಮಾಧ್ಯಮ ಶಾಲೆಗಳಲ್ಲಿ ವಿದ್ಯಾರ್ಥಿಗಳ ಸಂಖ್ಯೆ ಗಣನೀಯವಾಗಿ ಕುಗ್ಗುತ್ತಿದೆ. ಇಂತಹ ಸಂದರ್ಭದಲ್ಲಿ ಯಾವುದೇ ಸಾಹಿತ್ಯಚಟುವಟಿಕೆಗಳನ್ನು ಕನ್ನಡಮಾಧ್ಯಮ ಶಾಲೆಗಳಲ್ಲಾಗಲೀ, ಆಂಗ್ಲ ಮಾಧ್ಯಮ ಶಾಲೆಗಳಲ್ಲಾಗಲೀ ನಿರೀಕ್ಷಿಸುವುದಕ್ಕೆ ಸಾಧ್ಯವಿಲ್ಲ.

**ಪದವಿಪೂರ್ವ ಶಿಕ್ಷಣ ಹಂತದಲ್ಲಿ ನಡೆದ ಸಾಹಿತ್ಯಚಟುವಟಿಕೆಗಳು:** 1940ರ ದಶಕದಲ್ಲಿ ಆರಂಭವಾದ ಪ್ರೌಢಶಾಲಾ ಶಿಕ್ಷಣ ಸಂಸ್ಥೆಗಳ ಪರಿಸರದಲ್ಲಿ ಮುಂದೆ 1970ರ ದಶಕದಲ್ಲಿ ಪದವಿಪೂರ್ವ ಕಾಲೇಜುಗಳು ಅಸ್ತಿತ್ವಕ್ಕೆ ಬಂದವು. ಸ್ವತಂತ್ರ ಅಸ್ತಿತ್ವ ಇಲ್ಲದ ಈ ಪದವಿಪೂರ್ವ ಕಾಲೇಜುಗಳಲ್ಲಿ ಕೆಲವಾರು ಕಾಲೇಜುಗಳು ಪ್ರೌಢಶಾಲಾ ತರಗತಿಗಳಿಗೆ ಸೇರಿಕೊಂಡರೆ ಮತ್ತೆ ಕೆಲವು ಕಾಲೇಜುಗಳು ಪದವಿ ಕಾಲೇಜಿನ ನಿವೇಶನದಲ್ಲಿ ಪದವಿ ತರಗತಿಗಳಿಗೆ ಹೊಂದಿಕೊಂಡು ಕಾರ್ಯಾಚರಿಸಿದವು.

ಜಿಲ್ಲೆಯಲ್ಲಿರುವ ಎಲ್ಲಾ ಪದವಿಪೂರ್ವ ಕಾಲೇಜುಗಳು ಪದವಿಪೂರ್ವ ಶಿಕ್ಷಣ ಮಂಡಳಿಯ ಅಧೀನಕ್ಕೊಳಪಟ್ಟವೆಯಾದರೂ ಅವುಗಳ ಆಡಳಿತ ಸ್ವರೂಪದಲ್ಲಿ ಭಿನ್ನತೆಗಳಿವೆ. ಆಡಳಿತ ಸ್ವರೂಪದ ಹಿನ್ನೆಲೆಯಿಂದ ಮೂರು ಮುಖ್ಯ ಪ್ರಭೇದಗಳನ್ನಾಗಿ ವಿಂಗಡಿಸಬಹುದಾಗಿದೆ. 1)ಅನುದಾನಿತ ಪದವಿಪೂರ್ವ ಕಾಲೇಜು 2) ಅನುದಾನರಹಿತ ಪದವಿಪೂರ್ವ ಕಾಲೇಜು, 3) ಸರಕಾರಿ ಪದವಿಪೂರ್ವ ಕಾಲೇಜು.

**ಅನುದಾನಿತ ಪದವಿಪೂರ್ವ ಕಾಲೇಜು:** ಅನುದಾನಿತ ಪದವಿಪೂರ್ವ ಕಾಲೇಜಿನ ಆಡಳಿತ ಮಂಡಳಿ ಹಾಗೂ ಅಲ್ಲಿಯ ಕನ್ನಡ ಉಪನ್ಯಾಸಕರ ಹಾಗೂ ಸ್ಥಳೀಯ ಸಂಘಟನೆಗಳ ಬೆಂಬಲ ಮತ್ತು ಸಹಕಾರದೊಂದಿಗೆ ಈ ಕಾಲೇಜುಗಳು ಸಾಕಷ್ಟು ಸಾಹಿತ್ಯ ಚಟುವಟಿಕೆಗಳನ್ನು (ಕಾಲೇಜು ಮಟ್ಟದಲ್ಲಿ) ನಡೆಯಿಸಿಕೊಂಡು ಬಂದಿರುವುದು ಕಂಡುಬರುತ್ತದೆ. ಇಲ್ಲಿ ಸಾಹಿತ್ಯಚಟುವಟಿಕೆ

ಎಂದರೆ 'ಸಾಹಿತ್ಯಸಂಘ'ದ ಮೂಲಕ ನಡೆಯುವ ಉಪನ್ಯಾಸ ಚಟುವಟಿಕೆ, ವಿದ್ಯಾರ್ಥಿಗಳಿಂದ ಲಿಖಿತ ಚಟುವಟಿಕೆಗೆ ಪ್ರೋತ್ಸಾಹ ನೀಡಿ, ಅದನ್ನು ಸಂಚಿಕೆಯಾಗಿ (ಹಸ್ತಪ್ರತಿಯಾಗಿ) ಪ್ರಕಟಿಸುವುದು. ಕಾಲೇಜು ಮಟ್ಟದಲ್ಲಿ ಲಿಖಿತ ಸಾಹಿತ್ಯ ಚಟುವಟಿಕೆಯ ಸ್ಪರ್ಧೆಯನ್ನು ಹಮ್ಮಿಕೊಳ್ಳುವುದು ಇತ್ಯಾದಿ ಇತ್ಯಾದಿ. ಇಂತಹ ಚಟುವಟಿಕೆಗಳ ಸಹಿತ ಮುನ್ನಡೆದ ಕಾಲೇಜುಗಳೆಂದು ಈ ಕೆಳಗಿನ ಅನುದಾನಿತ ಕಾಲೇಜುಗಳನ್ನು ಗುರುತಿಸಬಹುದಾಗಿದೆ. 1) ವಿವೇಕ ಪದವಿಪೂರ್ವ ಕಾಲೇಜು, ಕೋಟ, 2) ವಿದ್ಯಾವರ್ಧಕ ಪದವಿಪೂರ್ವ ಕಾಲೇಜು, ಮುಂಡ್ಕೂರು. 3) ಮಣಿಪಾಲ ಪದವಿಪೂರ್ವ ಕಾಲೇಜು, ಮಣಿಪಾಲ. 4) ಎಸ್.ವಿ.ಎಸ್. ಪದವಿಪೂರ್ವ ಕಾಲೇಜು, ಕಟಪಾಡಿ. 5) ಎಸ್.ವಿ.ಎಸ್. ಪದವಿಪೂರ್ವ ಕಾಲೇಜು, ಗಂಗೊಳ್ಳಿ. 5) ಪೂರ್ಣಪ್ರಜ್ಞ ಪದವಿಪೂರ್ವ ಕಾಲೇಜು, ಅದಮಾರು. ಮುಂಡ್ಕೂರು, ಕಟಪಾಡಿ, ಅದಮಾರು, ಮಣಿಪಾಲ ಈ ನಾಲ್ಕು ಕಾಲೇಜುಗಳಲ್ಲಿ ವಿದ್ಯಾರ್ಥಿಗಳಿಂದ ಕೈಬರಹದ ಸಂಚಿಕೆಗಳು, ಅಲ್ಲಿಯ ಕನ್ನಡ ಉಪನ್ಯಾಸಕರ ಹಾಗೂ ಪ್ರಾಂಶುಪಾಲರ ಮುತುವರ್ಜಿಯಿಂದ ಪ್ರಕಟಗೊಂಡಿರುವುದನ್ನು ಗಮನಿಸಬಹುದಾಗಿದೆ. ವಿವೇಕ ಪದವಿಪೂರ್ವ ಕಾಲೇಜು ಇಲ್ಲಿ ವಾರ್ಷಿಕ ಸಂಚಿಕೆಯು ಮುದ್ರಣ ರೂಪದಲ್ಲಿ ವರ್ಷಂಪ್ರತಿ ಪ್ರಕಟಗೊಂಡಿರುತ್ತಾ ವಿದ್ಯಾರ್ಥಿಗಳ ಮತ್ತು ಅಧ್ಯಾಪಕರ ಸಾಹಿತ್ಯ ಪ್ರಕಟನೆಗೆ ವೇದಿಕೆಯಾಗಿದೆ. ಮಣಿಪಾಲ ಪದವಿಪೂರ್ವ ಕಾಲೇಜಿನಲ್ಲಿ 1990 ರಿಂದ ಈಚೆಗಷ್ಟೇ ವಾರ್ಷಿಕ ಸಂಚಿಕೆಯು ಮುದ್ರಿತವಾಗಿ ಪ್ರಕಟಗೊಳ್ಳುತ್ತಿದ್ದು, 1976–77 ಮತ್ತು 1977–78ನೇ ಸಾಲಿನ ಕೈಬರಹ ಸಂಚಿಕೆ, 'ಅರುಣ' ಮತ್ತು 'ಸಂಕೀರ್ಣ' ಎಂಬೆರೆಡು ಹೊತ್ತಗೆಗಳಲ್ಲಿ ವಿದ್ಯಾರ್ಥಿಗಳ ಸಾಹಿತ್ಯ ಬರಹಗಳು ಪ್ರಕಟಗೊಂಡಿರುವುದನ್ನು ಕಾಣಬಹುದು. ಅತ್ಯಂತ ಉತ್ಕೃಷ್ಟ ಮಟ್ಟದ ಸಾಹಿತ್ಯ ಮೌಲ್ಯಗಳುಳ್ಳ ಬರಹಗಳನ್ನು ಈ ಹಸ್ತಪ್ರತಿಗಳು ಒಳಗೊಂಡಿದ್ದು, ಸಂಚಿಕೆಯ ಸಂಪಾದಕರಾದ ಡಾ. ಆರ್. ಕೆ. ಮಣಿಪಾಲ ಇವರ ಪರಿಶ್ರಮ ಇಲ್ಲಿ ಗಮನಾರ್ಹವಾಗಿದೆ. ಕ್ರಿ.ಶ. 2000ದ ಅನಂತರದಲ್ಲಿ ಪದವಿ ಕಾಲೇಜಿನಿಂದ ಪ್ರತ್ಯೇಕಗೊಂಡ ಇನ್ನುಳಿದ ಆರು ಕಾಲೇಜಿನ ಸಾಹಿತ್ಯಚಟುವಟಿಕೆಗಳನ್ನು ಪದವಿ ಕಾಲೇಜುಗಳ ಸಾಹಿತ್ಯ ಚಟುವಟಿಕೆಯ ಶೀರ್ಷಿಕೆಯಲ್ಲಿ ಚರ್ಚಿಸಲಾಗುವುದು. ಆ ಕಾಲೇಜುಗಳ ಹೆಸರು ಹೀಗಿವೆ: 1) ಎಂ.ಜಿ.ಎಂ. ಕಾಲೇಜು, ಉಡುಪಿ 2) ಮಿಲಾಗ್ರಿಸ್ ಕಾಲೇಜು, ಕಲ್ಯಾಣಪುರ 3) ಶ್ರೀ ಶಾರದಾ ಕಾಲೇಜು, ಬಸ್ರೂರು 4) ಪೂರ್ಣಪ್ರಜ್ಞ ಕಾಲೇಜು, ಉಡುಪಿ 5) ಭುವನೇಂದ್ರ ಕಾಲೇಜು, ಕಾರ್ಕಳ 6) ಭಂಡಾರ್‌ಕಾರ್ಸ್ ಕಾಲೇಜು, ಕುಂದಾಪುರ.

**ಅನುದಾನರಹಿತ ಪದವಿಪೂರ್ವ ಕಾಲೇಜುಗಳು:** ಕ್ರಿ.ಶ. 1999–2000ನೇ ಶೈಕ್ಷಣಿಕ ವರ್ಷದಲ್ಲಿ ಉಡುಪಿ ಜಿಲ್ಲೆಯಲ್ಲಿ ಒಟ್ಟು 11 ಅನುದಾನರಹಿತ ಕಾಲೇಜುಗಳು ಕಾರ್ಯನಿರ್ವಹಿಸುತ್ತಿದ್ದು, ಈ ಹನ್ನೊಂದು ಕಾಲೇಜುಗಳಲ್ಲಿ ಸಾಹಿತ್ಯ ಚಟುವಟಿಕೆಗಳಿಗೆ ಪ್ರಾಮುಖ್ಯವನ್ನು ನೀಡಿದ ಏಕೈಕ ಕಾಲೇಜು ಶ್ರೀ ಮುಕಾಂಬಿಕಾ ಪದವಿಪೂರ್ವ ಕಾಲೇಜು, ಕೊಲ್ಲೂರು ಮಾತ್ರವಾಗಿದೆ. ವಾರ್ಷಿಕ ಸಂಚಿಕೆಗಾಗಿ ಲೇಖನವನ್ನು ಆಹ್ವಾನಿಸುವ, ಭಾಷಣ ಸ್ಪರ್ಧೆಗಾಗಿ ವಿದ್ಯಾರ್ಥಿಗಳನ್ನು ಇತರೆಡೆಗೆ ಕಳುಹಿಸುವ ಪರಿಪಾಠ, ಭಿತ್ತಿಪತ್ರದಲ್ಲಿ ಶ್ರೇಷ್ಠ ಬರಹಗಳಿಗಾಗಿ ಬಹುಮಾನ ಯೋಜನೆ, ಈ ತೆರನಾದ ಚಟುವಟಿಕೆಗಳಿಂದ ವಿದ್ಯಾರ್ಥಿಗಳಲ್ಲಿ ಸಾಹಿತ್ಯಾಸಕ್ತಿಗೆ ಉತ್ತೇಜನವನ್ನು ನೀಡುತ್ತಿರುವುದನ್ನು ಗಮನಿಸಬಹುದಾಗಿದೆ. 1999–2000ನೇ ಶೈಕ್ಷಣಿಕ ವರ್ಷದಲ್ಲಿ ವಾರ್ಷಿಕ ಸಂಚಿಕೆಯನ್ನು ಮುದ್ರಿಸಿ, ಆ ಮೂಲಕ ತಮ್ಮ ಸಾಹಿತ್ಯಾಸಕ್ತಿಯನ್ನು ಪ್ರಕಟಪಡಿಸಿರುತ್ತಾರೆ.

**ಸರಕಾರಿ ಪದವಿಪೂರ್ವ ಕಾಲೇಜುಗಳು**: 1999-2000ದಲ್ಲಿ ನೇರವಾಗಿ ಸರಕಾರದ ಪದವಿಪೂರ್ವ ಶಿಕ್ಷಣ ಇಲಾಖೆಯ ಅಧೀನಕ್ಕೊಳಪಟ್ಟು, 30 ಕಾಲೇಜುಗಳು ಕಾರ್ಯನಿರ್ವಹಿಸುತ್ತಿದ್ದು, ಇಲ್ಲಿಯ ಸಾಹಿತ್ಯಚಟುವಟಿಕೆಗಳ ಸ್ವರೂಪವನ್ನು ಹೀಗೆ ಗುರುತಿಸಬಹುದಾಗಿದೆ.

1) ಸರ್ಕಾರಿ ಪ್ರೌಢಶಾಲೆಯು ಪದವಿ ಪೂರ್ವ ಕಾಲೇಜಾಗಿ ಪರಿವರ್ತನೆಗೊಂಡು ಸಾಹಿತ್ಯ ಚಟುವಟಿಕೆಗಳಿಂದ ಹಿಂದೆ ಸರಿದ ಕಾಲೇಜಿನ ಹೆಸರುಗಳು ಹೀಗಿವೆ. 1. ಸರಕಾರಿ ಪದವಿಪೂರ್ವ ಕಾಲೇಜು ಕೋಟೇಶ್ವರ, 2. ಸ.ಪ.ಪೂ. ಕಾ. ಹೆಜಮಾಡಿ, 3. ಸ.ಪ.ಪೂ.ಕಾ. ಪಲಿಮಾರು., 4. ಸ.ಪ.ಪೂ. ಕಾಲೇಜು ಹೊಸಂಗಡಿ. ಈ ಕಾಲೇಜುಗಳಲ್ಲಿ ಪ್ರೌಢಶಾಲೆ ಮತ್ತು ಪದವಿಪೂರ್ವ ಸಂಸ್ಥೆಯ ಮುಖ್ಯಸ್ಥರ ನಡುವೆ ಇರುವ ಅಧಿಕಾರದ ಮತ್ತು ಅವಕಾಶಗಳ ಬಗೆಗೆ ಪರಸ್ಪರ ಪೈಪೋಟಿ ಇರುವ ಪ್ರಯುಕ್ತ ಯಾವುದೇ ಚಟುವಟಿಕೆಗಳಿಗೆ ಇಲ್ಲಿ ಆಸ್ಪದ ಇಲ್ಲದಂತಾಗಿದೆ.
2) ಪ್ರೌಢಶಾಲಾ ಹಂತದಲ್ಲಿದ್ದಾಗಾಗಲೀ, ಪದವಿಪೂರ್ವ ಕಾಲೇಜಾಗಿ ಪರಿವರ್ತನೆ ಹೊಂದಿದ ಅನಂತರದಲ್ಲಾಗಲೀ ಸಾಹಿತ್ಯಚಟುವಟಿಕೆಗಳಿಗೆ ಮುಂದಾಗದ ಪದವಿಪೂರ್ವ ಕಾಲೇಜುಗಳ ಹೆಸರುಗಳು ಹೀಗಿವೆ: ಸ.ಪ.ಪೂ. ಕಾಲೇಜು, ಶಿರೂರು, ಕಂಬದಕೋಣೆ, ವಂಡ್ಸೆ, ಮುನಿಯಾಲು, ತೆಕ್ಕಟ್ಟೆ, ನೇಷನಲ್ ಪ.ಪೂ. ಕಾಲೇಜು ಬಾರಕೂರು(ಖಾಸಗಿ), ಶ್ರೀ ದುರ್ಗಾಪರಮೇಶ್ವರಿ ದೇವಳ ಕಾಲೇಜು, ಮಂದರ್ತಿ (ಖಾಸಗಿ)
3) ಸರಕಾರಿ ಪ್ರೌಢಶಾಲೆಯಾಗಿದ್ದಾಗ ಸಾಹಿತ್ಯಚಟುವಟಿಕೆಗಳಿಗೆ ಮುಂದಾಗದೇ ಪದವಿಪೂರ್ವ ಕಾಲೇಜಾಗಿ ಪರಿವರ್ತನೆಗೊಂಡು ಸಾಹಿತ್ಯ ಚಟುವಟಿಕೆಗಳಿಗೆ ಪ್ರೋತ್ಸಾಹ ನೀಡಿದ ಸಂಸ್ಥೆಗಳ ಹೆಸರುಗಳು ಹೀಗಿವೆ: 1. ಸ.ಪ.ಪೂ. ಕಾಲೇಜು, ಕೊಕ್ಕರ್ಣೆ, 2. ಸರಕಾರಿ ಪ.ಪೂ. ಕಾಲೇಜು, ನಾವುಂದ, 3. ಸರಕಾರಿ ಪ.ಪೂ. ಕಾಲೇಜು, ಎರ್ಮಾಳು ಬಡಾ., 4. ಸ.ಪ.ಪೂ. ಕಾಲೇಜು, ಮುದರಂಗಡಿ., 5. ಸರಕಾರಿ ಪ.ಪೂ. ಕಾಲೇಜು, ಗೋಳಿಯಂಗಡಿ.
4) ಸರಕಾರಿ ಪ್ರೌಢಶಾಲೆಯಾಗಿ ಕಾರ್ಯಾಚರಿಸುತ್ತಿದ್ದಾಗ ಸಾಹಿತ್ಯಚಟುವಟಿಕೆಗಳಿಂದ ಗುರುತಿಸಿಕೊಂಡ ಸಂಸ್ಥೆಗಳು ಪದವಿಪೂರ್ವ ಕಾಲೇಜಾಗಿ ಪರಿವರ್ತನೆಗೊಂಡ ನಂತರದಲ್ಲೂ ಅದೇ ಮಾದರಿಯ ಸಾಹಿತ್ಯಚಟುವಟಿಕೆಗಳಲ್ಲಿ ತೊಡಗಿಕೊಂಡ ಸಂಸ್ಥೆಗಳ ಹೆಸರು ಈ ಕೆಳಗಿನಂತಿವೆ. 1. ಸರಕಾರಿ ಪ. ಪೂ. ಕಾಲೇಜು, ಶಂಕರನಾರಾಯಣ, 2. ಸರಕಾರಿ ಪ. ಪೂ. ಕಾಲೇಜು, ಬೈಲೂರು, 3. ಸರಕಾರಿ ಪ. ಪೂ. ಕಾಲೇಜು, ಬೆಳ್ಮಣ್ಣು 4. ಸರಕಾರಿ ಪ.ಪೂ. ಕಾಲೇಜು, ಪೊಲಿಪು., 5. ಸರಕಾರಿ ಪ. ಪೂ. ಕಾಲೇಜು, ಬಜಗೋಳಿ, 6. ಸ. ಪ. ಪೂ. ಕಾಲೇಜು ಹಿರಿಯಡ್ಕ, 7. ಸ. ಪ. ಪೂ. ಕಾಲೇಜು, ಕೆಮ್ಮಣ್ಣು, 8. ಸ. ಪ. ಪೂ. ಕಾಲೇಜು, ಕುಂದಾಪುರ.
5) ಕಾಲೇಜಿನ ಪ್ರಾಂಶುಪಾಲರಾಗಲೀ, ಕನ್ನಡ ಉಪನ್ಯಾಸಕರಾಗಲೀ ಸಾಹಿತ್ಯಚಟುವಟಿಕೆಗಳಿಗೆ ಮುಂದಾಗದಿದ್ದರೂ, ಪರಿಸರದ ಸಂಘ ಸಂಸ್ಥೆಗಳ ( ರೋಟರಿ, ಲಯನ್ಸ್, ತಾಲೂಕು ಸಾಹಿತ್ಯ ಪರಿಷತ್ತು ಹಾಗೂ ಇನ್ನಿತರ ಸಂಘಟನೆಗಳು) ಸಹಕಾರದಿಂದ ಸಾಹಿತ್ಯಚಟುವಟಿಕೆಗಳನ್ನು ನಿರ್ವಹಿಸುತ್ತಿರುವ ಪದವಿಪೂರ್ವ ಕಾಲೇಜುಗಳ ಹೆಸರುಗಳು ಹೀಗಿವೆ. 1. ಸರಕಾರಿ ಪ. ಪೂ. ಕಾಲೇಜು, ಬಿದ್ಕಲ್‌ಕಟ್ಟೆ, 2. ಸ.ಪ.ಪೂ. ಕಾಲೇಜು, ಬೈಂದೂರು, 3. ಸ. ಪ. ಪೂ. ಕಾಲೇಜು, ಉಪ್ಪುಂದ 4. ಸ. ಪ. ಪೂ. ಕಾಲೇಜು, ಪಡುಬಿದ್ರೆ. ಯಾವುದೇ ಕಾಲೇಜಿನ ಸಾಹಿತ್ಯ ಚಟುವಟಿಕೆಗಳನ್ನು ಹಸ್ತಪ್ರತಿ/ಮುದ್ರಿತ ಪ್ರತಿಯಿಂದ

ಆಯ್ದುಕೊಂಡು, ವಿಶ್ಲೇಷಣೆ ಮಾಡಿದಲ್ಲಿ ಸಂಶೋಧನ ಪ್ರಬಂಧದ ಅತಿವ್ಯಾಪ್ತಿಗೆ ಕಾರಣವಾಗುವುದೆಂಬ ಕಾರಣಕ್ಕಾಗಿ ಆ ಚರ್ಚೆಗೆ ಅವಕಾಶಕೊಡದೆ ಪ್ರಶ್ನಾವಳಿಗಳಿಂದ ಸಂಗ್ರಹಿಸಿದ ಮಾಹಿತಿಯನ್ನಾಧರಿಸಿ, ಈ ಮೇಲ್ಕಂಡ ಅಂಶಗಳನ್ನು ಗುರುತಿಸಲಾಗಿದೆ.

**ಪದವಿ ಕಾಲೇಜುಗಳಲ್ಲಿ ನಡೆದ 20ನೇ ಶತಮಾನದ ಕಾಲಾವಧಿಯ ಸಾಹಿತ್ಯಚಟುವಟಿಕೆಗಳು:**

ಉಡುಪಿ ಜಿಲ್ಲೆಯಲ್ಲಿ ಅಸ್ತಿತ್ವಕ್ಕೆ ಬಂದ ಪದವಿ ಕಾಲೇಜುಗಳನ್ನು (ಪ್ರಥಮದರ್ಜೆ ಕಾಲೇಜುಗಳು) ಎರಡು ಹಂತದಲ್ಲಿ ಗುರುತಿಸಲಾಗಿದೆ. 1949 ರಿಂದ 1979ರ ನಡುವಿನ 30 ವರ್ಷಗಳ ಅವಧಿಯಲ್ಲಿ ಅಸ್ತಿತ್ವಕ್ಕೆ ಬಂದ ಕಾಲೇಜುಗಳನ್ನು ಮೊದಲ ಹಂತದ ಕಾಲೇಜುಗಳೆಂದು ಗುರುತಿಸಲಾಗಿದ್ದು, ಈ ಕಾಲೇಜುಗಳು ಸ್ಥಾಪನೆಗೊಂಡ ಮೂರುವರ್ಷದೊಳಗಾಗಿಯೇ ಸರಕಾರದ ವೇತನಾನುದಾನ ಮತ್ತು ನಿರ್ವಹಣಾನುದಾನವನ್ನು ಪಡೆದುಕೊಂಡಿರುತ್ತವೆ. ಮೊದಲ ಹಂತದಲ್ಲಿ ಗುರುತಿಸಬಹುದಾದ ಆರು ಕಾಲೇಜುಗಳ ಹೆಸರು ಹೀಗಿವೆ: 1) ಮಹಾತ್ಮಾಗಾಂಧಿ ಮೆಮೋರಿಯಲ್ ಕಾಲೇಜು, ಉಡುಪಿ, 2) ಪೂರ್ಣಪ್ರಜ್ಞ ಕಾಲೇಜು, ಉಡುಪಿ, 3) ಶ್ರೀ ಭುವನೇಂದ್ರ ಕಾಲೇಜು, ಕಾರ್ಕಳ, 4) ಭಂಡಾರ್‌ಕಾರ್ಸ್ ಕಾಲೇಜು, ಕುಂದಾಪುರ, 5) ಮಿಲಾಗ್ರಿಸ್ ಕಾಲೇಜು, ಕಲ್ಯಾಣಪುರ, 6) ಶ್ರೀ ಶಾರದಾ ಕಾಲೇಜು, ಬಸ್ರೂರು.

1979 ರಿಂದ 1999ರ ನಡುವಿನಲ್ಲಿ ಆರಂಭವಾದ ಕಾಲೇಜುಗಳನ್ನು ಎರಡನೇ ಹಂತದ ಕಾಲೇಜುಗಳೆಂದು ಗುರುತಿಸಿದ್ದು, ಈ ಕಾಲೇಜುಗಳು ಆರಂಭಗೊಂಡ 5 ವರ್ಷಗಳ ಅನಂತರ ಕರ್ನಾಟಕ ಸರಕಾರದ ಅನುದಾನಕ್ಕೊಳಪಟ್ಟಿರುತ್ತವೆ. ಈ ವಿಭಾಗದಲ್ಲಿ 1987ರನಂತರ ಆರಂಭಗೊಂಡ ಕಾಲೇಜುಗಳು ಖಾಯಂ ಅನುದಾನರಹಿತ ಕಾಲೇಜುಗಳೆಂದು, ಸರಕಾರದ ಅನುಮತಿ ಮತ್ತು ವಿಶ್ವವಿದ್ಯಾನಿಲಯದ ಸಂಯೋಜನೆಯನ್ನು ಪಡೆದುಕೊಂಡಿರುತ್ತವೆ. ಕಾಲೇಜುಗಳಲ್ಲಿ ನಡೆದ ಸಾಹಿತ್ಯ ಚಟುವಟಿಕೆಗಳಿಂದ ಪ್ರೇರಿತರಾದ ಅದೆಷ್ಟೋ ವಿದ್ಯಾರ್ಥಿಗಳು ಪದವಿ ಶಿಕ್ಷಣದ ಅನಂತರ ತಮ್ಮ ಖಾಸಗಿ ಬದುಕಿನಲ್ಲಿ ಸಾಹಿತ್ಯಚಟುವಟಿಕೆಗಳಲ್ಲಿ ತೊಡಗಿಸಿಕೊಂಡು ಸಮಾಜದಿಂದ ಗುರುತಿಸಿಕೊಂಡಿದ್ದಾರೆ. ಹೀಗೆ ಗುರುತಿಸಿಕೊಂಡವರ ಹೆಸರುಗಳನ್ನು ಆಯಾ ಶಿಕ್ಷಣಸಂಸ್ಥೆಯ ಸಾಹಿತ್ಯಚಟುವಟಿಕೆಗಳ ಪ್ರೇರಣೆ ಮತ್ತು ಪರಿಣಾಮಗಳು ಎಂದು ಈ ಅಧ್ಯಯನದಲ್ಲಿ ಕಂಡುಕೊಳ್ಳಲಾಗಿದೆ. ಈ ಸಂಶೋಧನ ಪ್ರಬಂಧದ ಕೊನೆಯಲ್ಲಿ ಅನುಬಂಧ ಶೀರ್ಷಿಕೆಯಲ್ಲಿ ವಿವಿಧ ಕಾಲೇಜಿಗಳ ಸಾಹಿತ್ಯಚಟುವಟಿಕೆಗಳ ಪರಿಣಾಮಗಳ ಪಟ್ಟಿಯನ್ನು ನೀಡಲಾಗಿದೆ.

## ಮಹಾತ್ಮಾಗಾಂಧಿ ಮೆಮೋರಿಯಲ್ ಕಾಲೇಜು, ಉಡುಪಿ

**ಕಾಲೇಜಿನ ಹಿನ್ನೆಲೆ:** 1949ರಲ್ಲಿ ಮಹಾತ್ಮಾಗಾಂಧಿ ಮೆಮೋರಿಯಲ್ ಕಾಲೇಜು ಎಂಬೀ ಸಂಸ್ಥೆಯು ಉಡುಪಿ ಜಿಲ್ಲೆಯ ಮೊದಲ ಕಾಲೇಜಾಗಿ ಹಾಗೂ ಅವಿಭಜಿತ ದ.ಕ. ಜಿಲ್ಲೆಯ ಮೂರನೆಯ ಕಾಲೇಜಾಗಿ ಅಸ್ತಿತ್ವಕ್ಕೆ ಬಂದಿತು. ಕಾಲೇಜಿನ ಸ್ಥಾಪಕ ಪ್ರಾಂಶುಪಾಲರಾದ ಪ್ರೊ. ಎಚ್. ಸುಂದರರಾಯರು ಸ್ವತಃ ಆಂಗ್ಲಭಾಷೆಯಲ್ಲಿ ಸ್ನಾತಕೋತ್ತರ ಪದವೀಧರರಾಗಿ ಮದನಪಲ್ಲಿಯ ಕಾಲೇಜೊಂದರಲ್ಲಿ ಆಂಗ್ಲಭಾಷಾ ಉಪನ್ಯಾಸಕರಾಗಿ ಶ್ರೀಮತಿ ಅನಿಬೆಸೆಂಟ್‌ರ ತಾತ್ವಿಕ ವಿಚಾರಗಳಿಂದ ಪ್ರಭಾವಿತರಾದವರು. ಪ್ರಾಂಶುಪಾಲರಾದ ಪ್ರೊ. ಸುಂದರರಾಯರು ಕಾಲೇಜಿನಲ್ಲಿ ಸಾಹಿತ್ಯಚಟುವಟಿಕೆಗಳಿಗೆ ವಿಶೇಷ ಪ್ರಾಶಸ್ತ್ಯ ನೀಡುತ್ತಾ ಬಂದರು.

ಇವರ ಸಾಹಿತ್ಯ ಯೋಜನೆಗಳಿಗೆ ಸಂಪೂರ್ಣ ಸಹಕಾರ ನೀಡಲು ಬದ್ಧರಾಗಿ ಸಾಹಿತ್ಯಾಸಕ್ತಿಯನ್ನು ಎಳವೆಯಿಂದಲೇ ರೂಢಿಸಿಕೊಂಡ ಪ್ರೊ. ಕು. ಶಿ. ಹರಿದಾಸ ಭಟ್ಟರು ಅರ್ಥಶಾಸ್ತ್ರ ಉಪನ್ಯಾಸಕರಾಗಿ ಕಾಲೇಜಿಗೆ ಸೇರ್ಪಡೆಗೊಂಡರು.

**ಕಾಲೇಜಿನಲ್ಲಿ ಸಾಕಾರಗೊಂಡ ಸಾಹಿತ್ಯಚಟುವಟಿಕೆಗಳು:** ಶೈಕ್ಷಣಿಕ ಪಠ್ಯಕ್ಕೆ ಪೂರಕವಾಗಿ ಈ ಸಂಸ್ಥೆಯು ನಡೆಸಿದ 20ನೇ ಶತಮಾನದ 50 ವರ್ಷದ ಚಟುವಟಿಕೆಗಳನ್ನು 3 ಮುಖ್ಯ ಶೀರ್ಷಿಕೆಗಳಲ್ಲಿ ಅಧ್ಯಯನ ನಡೆಸಲಾಗಿದೆ. 3 ಶೀರ್ಷಿಕೆಗಳನ್ನು ಮೂರು ವಿಭಾಗಗಳಲ್ಲಿ ಅಂತರ್ಗತಗೊಳಿಸಲಾಗಿದೆ. ಆ ಮೂರು ವಿಭಾಗಗಳು ಹೀಗಿವೆ.

1) ಕ್ರಿ.ಶ. 1949–1963ನೇ ಇಸವಿ ತನಕದ ವರೆಗೆ ಪ್ರಾಂಶುಪಾಲರಾಗಿದ್ದ ಎಚ್. ಸುಂದರರಾಯರ ಕಾಲಾವಧಿಯನ್ನು ಮೊದಲ ಘಟ್ಟವೆಂದು ಪರಿಗಣಿಸಲಾಗಿದೆ.
2) 01.04.1964 ರಿಂದ 1979 ರವರೆಗಿನ ಶೈಕ್ಷಣಿಕ ವರ್ಷವನ್ನು ಅಂದರೆ 31.03.1979ರ ವರೆಗೆ ಪ್ರಾಂಶುಪಾಲರಾಗಿ ಅಧಿಕಾರ ನಿರ್ವಹಿಸಿದ ಕು. ಶಿ. ಹರಿದಾಸ ಭಟ್ಟರ ಕಾಲಾವಧಿಯನ್ನು ಎರಡನೇ ವಿಭಾಗ ಅಥವಾ 2ನೇ ಘಟ್ಟವೆಂದು ಪರಿಗಣಿಸಲಾಗಿದೆ.
3) 01.04.1979ರಿಂದ 31.03.2000ದ ವರೆಗೆ ಪ್ರಾಂಶುಪಾಲರಾಗಿ ಕರ್ತವ್ಯ ನಿರ್ವಹಿಸಿದ ಏಳು ಮಂದಿ ಪ್ರಾಂಶುಪಾಲರ ಕಾರ್ಯಾವಧಿಯನ್ನು ಮೂರನೇ ಕಾಲಘಟ್ಟವೆಂದು ಪರಿಗಣಿಸಲಾಗಿದೆ.

ಈ ಮೂರೂ ಕಾಲಘಟ್ಟಗಳಲ್ಲೂ ಎಂ.ಜಿ.ಎಂ. ಕಾಲೇಜಿನಲ್ಲಿ ವಿಶಿಷ್ಟವಾದ ಸಾಹಿತ್ಯ ಸಂಬಂಧಿ ಚಟುವಟಿಕೆಗಳು ನಡೆದುಕೊಂಡು ಬರುತ್ತಿದ್ದು ಅವುಗಳನ್ನು ಈ ಕೆಳಗಿನಂತೆ ಉಲ್ಲೇಖಿಸಬಹುದಾಗಿದೆ.

1. ಮುದ್ದಣ ಸ್ಮಾರಕ ಸಾಹಿತ್ಯೋತ್ಸವ. ಅಥವಾ ಮುದ್ದಣ ಕವಿಯ ನೆನಪಿನಲ್ಲಿ ನಡೆದ ಖ್ಯಾತ ಕವಿಗಳ ಜನ್ಮದಿನ, ಶತಮಾನೋತ್ಸವ ಅಥವಾ ಹಿರಿಯ ಕವಿ–ಲೇಖಕರ ಕೃತಿಗಳ ಕುರಿತಾದ ಉಪನ್ಯಾಸ–ಗೋಷ್ಠಿ –ಚರ್ಚೆಗಳು
2. ಸಾಹಿತ್ಯ ಸಂಘ, ಲಲಿತಕಲಾ ಸಂಘ, ಭಾಷಾ ಸಂಘದ (Language Association) ಮೂಲಕ ನಡೆಯುವ ಚಟುವಟಿಕೆಗಳು.
3. 1949–50ನೇ ಶೈಕ್ಷಣಿಕ ವರ್ಷದಿಂದ ಪ್ರಕಟನೆಗೊಂಡ ವಾರ್ಷಿಕ ಸಂಚಿಕೆಗಳು ಹಾಗೂ ವಿಶೇಷ ಸಂಚಿಕೆಗಳು.

ಈ ಮೇಲೆ ಉಲ್ಲೇಖಿಸಿದ ಮೂರು ಕಾಲಘಟ್ಟಗಳಲ್ಲಿ ನಡೆದುಬಂದ ವಿಶಿಷ್ಟವಾದ ಸಾಹಿತ್ಯಚಟುವಟಿಕೆಗಳನ್ನು ಈಗಾಗಲೇ ಉಲ್ಲೇಖಿಸಿದ ಮೂರು ಶೀರ್ಷಿಕೆಗಳಲ್ಲಿ ವಿಶ್ಲೇಷಿಸಲಾಗಿದೆ.

**1. ಮುದ್ದಣ ಸ್ಮಾರಕ ಸಾಹಿತ್ಯೋತ್ಸವ:**

ಈ ಮೇಲೆ ಉಲ್ಲೇಖಿಸಲಾದ ಕಾಲಘಟ್ಟಗಳಲ್ಲಿ ಸಾಮಾನ್ಯ ಪರಂಪರೆ ಎಂಬಂತೆ ನಡೆದುಕೊಂಡು ಬಂದಿರುವ ಮುದ್ದಣ ಸ್ಮಾರಕ ಸಾಹಿತ್ಯೋತ್ಸವದ ಕುರಿತಾಗಿ, ನಡೆಸಿದ ಅಧ್ಯಯನ ವಿವರಗಳನ್ನು ಹೀಗೆ ದಾಖಲಿಸಬಹುದಾಗಿದೆ. ಕಾಲೇಜಿನ ಸ್ಥಾಪಕ ಪ್ರಾಂಶುಪಾಲರಾದ ಪ್ರೊ. ಸುಂದರರಾಯರ ಕಾಲದಿಂದಲೂ ನಡೆದುಕೊಂಡು ಬಂದ ಈ ಸಾಹಿತ್ಯೋತ್ಸವದ ಆರಂಭದ ಕುರಿತಂತೆ ಕು. ಶಿ. ಅವರ ಹೇಳಿಕೆಯು ಹೀಗಿದೆ. "ನಮ್ಮ ಕಾಲೇಜಿನ ಪ್ರಥಮ ಪ್ರಾಂಶುಪಾಲ ಸುಂದರರಾಯರು ಇಂಗ್ಲೀಷ್ ಸಾಹಿತ್ಯದಲ್ಲಿ ಶ್ರೇಷ್ಠ ಅಧ್ಯಾಪಕರೂ, ಒಟ್ಟು ಸಾಹಿತ್ಯದ ಅಭಿಮಾನಿಗಳು ಆಗಿದ್ದರು. ಉಡುಪಿಯ ಕವಿ ಮುದ್ದಣನ ಖಾಸಾ

ಆಡುಂಬೊಲವಾಗಿದ್ದರಿಂದ ಮುದ್ದಣನ ಹೆಸರಿನಲ್ಲಿ ನಾವು ಮೂರು ದಿನಗಳ ಸಾಹಿತ್ಯೋತ್ಸವವನ್ನು ನಡೆಸಬೇಕೆಂಬ ಸೂಚನೆಗೆ ಅವರು ಬೆಂಬಲವಿತ್ತರು..... ಈ ನಮ್ಮ ಕಾಲೇಜಿನ ಮುದ್ದಣ ಉತ್ಸವ ಕಾಲೇಜಿನ ಭಾಷಾ ಸಂಘಗಳ ಇತಿಹಾಸದಲ್ಲಿ ಒಂದು ಸ್ಥಾನ ಕಲ್ಪಿಸಿಕೊಂಡಿದೆ. ಈ ಉತ್ಸವಕ್ಕೆ ಬಾರದ ಸಾಹಿತಿಗಳಿಲ್ಲ."(ಸಂ: ಮಣಿಪಾಲ್ ಮೀಡಿಯಾ ಪ್ರೈ. (ಲಿ.), 1983, ಪು–77)

ಪ್ರೊ. ಸುಂದರರಾಯರು ಪ್ರಾಂಶುಪಾಲರಾಗಿ ಕರ್ತವ್ಯ ನಿರ್ವಹಿಸುತ್ತಿದ್ದ ಕಾಲಾವಧಿಯಲ್ಲಿ ಎರಡು ದಿನಗಳ ಅವಧಿಗೆ ಮುದ್ದಣ ಸ್ಮಾರಕ ಸಾಹಿತ್ಯೋತ್ಸವವನ್ನು ಆಚರಿಸಿಕೊಂಡು ಬರುವ ಪರಂಪರೆಯನ್ನು ರೂಢಿಸಿಕೊಂಡಿದ್ದರು. ಈ ಸಂದರ್ಭದಲ್ಲಿ ಸಾಹಿತ್ಯೋಪನ್ಯಾಸವನ್ನು ನಡೆಯಿಸಿಕೊಂಡು ಬರಲು ಆಗಲೇ ಕರ್ನಾಟಕದಲ್ಲಿ ಗುರುತಿಸಿಕೊಂಡ ಕವಿ–ಬರಹಗಾರರನ್ನು ಆಹ್ವಾನಿಸಿ, ವಿವಿಧ ಕವಿ ಕೃತಿಗಳ ಕುರಿತು ಮತ್ತು ಸಾಹಿತ್ಯ ಪರಂಪರೆಯ ಕುರಿತು ಉಪನ್ಯಾಸವನ್ನು ಹಮ್ಮಿಕೊಳ್ಳುತ್ತಿದ್ದರು.

**ಮುದ್ದಣ ಸ್ಮಾರಕ ಸಾಹಿತ್ಯಗೋಷ್ಠಿ–ಒಂದು ಅವಲೋಕನ:**

ಮುದ್ದಣ ಕವಿಯ ಸ್ಮಾರಕವಾಗಿ ಕಾಲೇಜಿನಲ್ಲಿ ನಡೆಸಿಕೊಂಡು ಬರಲಾದ 50 ವರ್ಷದ ಚಟುವಟಿಕೆಗಳನ್ನು ಅವಲೋಕಿಸಿದಾಗ ಕಂಡುಕೊಂಡ ಅಂಶಗಳು ಹೀಗಿವೆ:–

ಅ) **ಯಾಂತ್ರಿಕ ಆಚರಣೆ:**– ಕಾಲೇಜು ವಾರ್ಷಿಕೋತ್ಸವದ ಮೊದಲ ದಿನ ಕಾಲೇಜು ರಂಗಮಂಟಪದಲ್ಲಿ ನಡೆಸುವ ಈ ಆಚರಣೆಯೆಂಬುದು ಪ್ರಾರಂಭದಲ್ಲಿ ಉತ್ತಮ ಸಾಹಿತ್ಯೋತ್ಸವವಾಗಿದ್ದುದು ಬರಬರುತ್ತಾ ಕೇವಲ ಉತ್ಸವವಾಗಿ ಆಚರಿಸಲಾಗುತ್ತಿದೆಯೇ ಹೊರತು ಆ ಸಾಹಿತ್ಯಚಟುವಟಿಕೆಯ ಕುರಿತಂತೆ ಯಾವುದೇ ಗಂಭೀರ ಉದ್ದೇಶ ಆಚರಣೆಯಲ್ಲಿ ಎದ್ದು ತೋರುವುದಿಲ್ಲ. ಒಳ್ಳೆಯ ಉದ್ದೇಶದಿಂದ ಪ್ರಾರಂಭಗೊಂಡರೂ ಅದನ್ನು ಸಾಧಿಸುವಲ್ಲಿ ವೈಫಲ್ಯವುಂಟಾಗಿರುವುದು ಸ್ಪಷ್ಟ.

ಆ) **ಪರಂಪರೆ ಕಾರ್ಯಕ್ರಮ:** 20ನೇ ಶತಮಾನದ ಕೊನೆಯ ಘಟ್ಟದಲ್ಲಿ 'ಪರಂಪರೆಯಿಂದ ಆಚರಿಸಲ್ಪಡುವ' ಕಾರ್ಯಕ್ರಮ ಎನ್ನುವ ಕಾರಣಕ್ಕಾಗಿ ನಡೆಸಿಕೊಂಡು ಬರಲಾಗುತ್ತಿತ್ತೇ ಹೊರತು ಕೆಲವರಿಗಾದರೂ ಇದರ ಸಾಹಿತ್ಯಕ ಮೌಲ್ಯವನ್ನು ಅರಗಿಸಿಕೊಳ್ಳಬೇಕೆಂಬ ಧೋರಣೆಯಿಲ್ಲದಿರುವುದು ಕಂಡುಬರುತ್ತದೆ.

ಇ) **ಸ್ಪಷ್ಟ ಧೋರಣೆ ಅಥವಾ ಉದ್ದೇಶದಿಂದ ಹೊರತಾದ ಸಂಪ್ರದಾಯ:** ಕಾಲೇಜು ಸ್ಥಾಪನೆಯಾದ ಮರುವರ್ಷದಿಂದಲೇ ಈ ಆಚರಣೆಯನ್ನು ಪರಂಪರೆ ಎಂಬಂತೆ ಆಚರಿಸಿಕೊಂಡು ಬರಲಾಗಿದೆ. ಆದರೆ ಈ ಕಾರ್ಯಕ್ರಮಕ್ಕೆ ಯಾವುದೇ ಉದ್ದೇಶವಿದ್ದಂತೆ ತೋರುವುದಿಲ್ಲ. ಕೇವಲ ಪರಂಪರೆಯಿಂದ ಆಚರಿಸಲ್ಪಡುವ ಕಾರ್ಯಕ್ರಮ ಎನ್ನುವ ಕಾರಣಕ್ಕಾಗಿ ಆಚರಿಸಿಕೊಂಡು ಬರಲಾಗುತ್ತಿದೆಯೇ ಹೊರತು ಯಾವುದೇ ರೀತಿಯಲ್ಲಾದರೂ ಕೆಲವರಿಗಾದರೂ ಇದರ ಸಾಹಿತ್ಯಕ ಮೌಲ್ಯ ತಿಳಿಯಬೇಕೆಂಬ ಧೋರಣೆಯೇ ಇಲ್ಲದಿರುವುದು ಕಂಡುಬರುತ್ತದೆ.

2. **ಸಾಹಿತ್ಯ ಸಂಘ, ಲಲಿತಕಲಾ ಸಂಘ, ಭಾಷಾ ಸಂಘದ (Language Association) ಮೂಲಕ ನಡೆಯುವ ಚಟುವಟಿಕೆಗಳು:**

**ಸಾಹಿತ್ಯಚಟುವಟಿಕೆಗಳ ಸಂಕ್ಷಿಪ್ತ ಅವಲೋಕನ :** 1949 ರಿಂದ 1963–64ನೇ ಶೈಕ್ಷಣಿಕ ವರ್ಷ ಎಂದರೆ ಮೊದಲ 15 ವರ್ಷದ ಅವಧಿಯಲ್ಲಿ ಭಾಷಾ ಸಂಘ, ಲಲಿತಕಲಾ ಸಂಘ, ಸಾಹಿತ್ಯ ಸಂಘದ ಮೂಲಕ ನಡೆದ ಸಾಹಿತ್ಯ ಚಟುವಟಿಕೆಗಳು

ಕಾಲಾನುಕ್ರಮದಂತೆ **ಈ ಪ್ರಬಂಧದ ಕೊನೆಯ ಅನುಬಂಧ ಐದರಲ್ಲಿ ದಾಖಲಿಸಲಾಗಿದೆ.** ದಾಖಲಿಸಲಾದ ಸಾಹಿತ್ಯ ಚಟುವಟಿಕೆಗಳನ್ನು ಗಮನದಲ್ಲಿರಿಸಿಕೊಂಡು, ಈ ಕೆಳಗಿನ ಕೆಲವು ಅಂಶಗಳನ್ನು ಉಲ್ಲೇಖಿಸಬಹುದಾಗಿದೆ.

**ಭಾಷಾ ಸಂಘ, ಸಾಹಿತ್ಯ ಸಂಘ ಮತ್ತು ಲಲಿತಕಲಾ ಸಂಘ:** ಈ ಮೂರೂ ಸಂಘಗಳು 1950–51ರಿಂದಲೇ ಅಸ್ತಿತ್ವಕ್ಕೆ ಬಂದಿದ್ದವು. ಈ ಮೂರೂ ಸಂಘಗಳು ಸಾಹಿತ್ಯಚಟುವಟಿಕೆಗಳನ್ನೂ ನಿರಂತರವಾಗಿ ನಡೆಸಿಕೊಂಡು ಬಂದಿದ್ದು, ಪ್ರತಿ ವರ್ಷವೂ ಭಾಷಾ ಸಂಘದ ವಾರ್ಷಿಕಚಟುವಟಿಕೆಗಳನ್ನು ಗಣ್ಯ ಸಾಹಿತಿಗಳೊಬ್ಬರು ಸಾಂಪ್ರದಾಯಿಕವಾಗಿ ಉದ್ಘಾಟಿಸುತ್ತಿದ್ದರು. ಉದ್ಘಾಟನೆಯ ದಿನದಂದು ಉದ್ಘಾಟಕರು ಯಾವುದಾದರೂ ಕವಿ ಅಥವಾ ಸಾಹಿತ್ಯ ವಿಚಾರಗಳ ಕುರಿತಾಗಿ ಉಪನ್ಯಾಸ ನೀಡುವುದು ಕಾಲೇಜಿನ ಪರಂಪರೆಯಾಗಿತ್ತು. ಸಾಮಾನ್ಯವಾಗಿ ಆಗಸ್ಟ್ ತಿಂಗಳಿನಲ್ಲಿ ಚಟುವಟಿಕೆಗಳು ಆರಂಭಗೊಂಡರೆ, ಆ ಶೈಕ್ಷಣಿಕ ವರ್ಷದ ಫೆಬ್ರುವರಿಯ ತನಕವೂ ಚಟುವಟಿಕೆಗಳು ಮುಂದುವರಿಯುತ್ತವೆ.

ಕಾಲೇಜಿನ ಎರಡನೇ ಹಂತದ ಅಥವಾ ಎರಡನೇ ಘಟ್ಟದ ಕಾಲಾವಧಿಯಲ್ಲಿ ಪ್ರಾಂಶುಪಾಲರಾಗಿ ಜವಾಬ್ದಾರಿ ನಿರ್ವಹಿಸಿದ ಪ್ರೊ. ಕು. ಶಿ. ಅವರ 14 ವರ್ಷಗಳ ಕಾಲಾವಧಿಯ ಚಟುವಟಿಕೆಗಳು ವೈಶಿಷ್ಟ್ಯಪೂರ್ಣವಾಗಿದ್ದವು. ಈ ಕಾಲಾವಧಿಯಲ್ಲಿ ಕಾಲೇಜು ಏರ್ಪಡಿಸಿದ ಉತ್ಸವಗಳು, ನಡೆಸಿದ ವಿಚಾರಸಂಕಿರಣಗಳು, ಉಪನ್ಯಾಸಗಳು, ಜರಗಿಸಲಾದ ಚರ್ಚಾಗೋಷ್ಠಿಗಳು, ಪ್ರಕಟಿಸಲಾದ ಪುಸ್ತಕಗಳು, ಏರ್ಪಡಿಸಲಾದ ಶತಮಾನೋತ್ಸವದಂಥ ಆಚರಣೆಗಳು ಜಿಲ್ಲೆಯ ಸಾಹಿತ್ಯಾಸಕ್ತರ ಪಾಲಿಗೆ ಮರೆಯಲಾರದ ನೆನಪುಗಳಾಗಿವೆ. ಈಗಾಗಲೇ ಉಲ್ಲೇಖಿಸಿದಂತೆ ಈ ಕಾಲಘಟ್ಟದ ಚಟುವಟಿಕೆಗಳು ಪ್ರೊ. ಕು. ಶಿ. ಯವರಿಗೂ ಎಂ. ಜಿ. ಎಂ. ಕಾಲೇಜಿಗೂ ಮತ್ತು ಅವಿಭಜಿತ ದ. ಕ. ಜಿಲ್ಲೆಗೂ ವಿಶೇಷ ಖ್ಯಾತಿಯನ್ನು ತಂದುಕೊಟ್ಟವು. ಆ ಎಲ್ಲಾ ಚಟುವಟಿಕೆಗಳನ್ನು ಇಲ್ಲಿ ವಿಶ್ಲೇಷಿಸುವುದು ಈ ಸಂಶೋಧನಾ ವಿಷಯಕ್ಕೆ ಅತಿವ್ಯಾಪ್ತಿಯನ್ನು ತಂದುಕೊಡುವ ಕಾರಣಕ್ಕಾಗಿ ಅತ್ಯಂತ ಮುಖ್ಯವೆಂದು ಕಂಡುಕೊಂಡ 'ಕಾರಂತರ ಅಭಿನಂದನ ಉತ್ಸವ' ಹಾಗೂ ಕಾಲೇಜಿನ ಬೆಳ್ಳಿಹಬ್ಬದ ಸಂಭ್ರಮದ ಸಾಹಿತ್ಯ ಚಟುವಟಿಕೆಗಳನ್ನಷ್ಟೇ ಈ ಅಧ್ಯಯನದಲ್ಲಿ ದಾಖಲಿಸಲಾಗಿದೆ.

**ಕಾರಂತ ಅಭಿನಂದನ ಉತ್ಸವ:**

ಜಿ. ಹಿರಿಯಣ್ಣ ಐತಾಳ ಎಂಬ ಅಂತಿಮ ಬಿ.ಎಸ್ಸಿ. ತರಗತಿಯ ವಿದ್ಯಾರ್ಥಿಯು 1969ರ ಅಕ್ಟೋಬರ್ 30ರಿಂದ ಮೊದಲ್ಗೊಂಡು, ನವೆಂಬರ್ 4 ರ ತನಕ ಎಂ.ಜಿ.ಎಂ. ಕಾಲೇಜು ನಿವೇಶನದಲ್ಲಿ ನಡೆದ ಕಾರಂತ ಅಭಿನಂದನ ಉತ್ಸವವನ್ನು ಆ ಶೈಕ್ಷಣಿಕ ವರ್ಷದ ಸಂಚಿಕೆಯಲ್ಲಿ ಸಮಗ್ರವಾಗಿ ದಾಖಲಿಸಿರುತ್ತಾನೆ. ಐದು ದಿನಗಳ ಆ ಕಾರ್ಯಕ್ರಮದ ಪ್ರಯುಕ್ತ 'ಕನ್ನಡದಲ್ಲಿ ವೈಜ್ಞಾನಿಕ ಪಠ್ಯಪುಸ್ತಕಗಳು', 'ಕನ್ನಡ ಕಾದಂಬರಿಗಳು', 'ಪತ್ರಿಕೆಗಳು ಮತ್ತು ರಾಷ್ಟ್ರಧರ್ಮ' ಎಂಬ ಮೂರು ಮುಖ್ಯ ವಿಷಯಗಳ ಕುರಿತಂತೆ ವಿಚಾರ ಸಂಕಿರಣಗಳು ನಡೆದುವು. ಕಾರಂತರ ವ್ಯಕ್ತಿತ್ವಕ್ಕೆ ಅನುಗುಣವಾಗಿ ಅಭಿನಂದನ ಸಮಾರಂಭದಲ್ಲಿ 'ಕಾರಂತ ಪ್ರಪಂಚ' ಎಂಬ ಅಭಿನಂದನ ಗ್ರಂಥವನ್ನು ಕಾರಂತರಿಗೆ ಸಮರ್ಪಿಸಲಾಯಿತು. ಅಭಿನಂದನೆಯನ್ನು ಸ್ವೀಕರಿಸಿದ ಡಾ. ಶಿವರಾಮ ಕಾರಂತರು ತಮ್ಮ ಅಭಿನಂದನೆಗೆ ಪೂರಕ ಅಭಿಪ್ರಾಯದ ಉತ್ತರವೆಂಬಂತೆ ವೇದಿಕೆಯಲ್ಲಿ ಅಂದು ಉಪನ್ಯಾಸ ನೀಡಿದರು. ವೇದಿಕೆಯಲ್ಲಿ ಡಾ. ಸುನೀತಿ ಕುಮಾರ್ ಚಟರ್ಜಿ, ದೇ.ಜ.ಗೌ, ಸಿಂಪಿ ಲಿಂಗಣ್ಣ, ಟಿ.ಎ. ಪೈ., ಹಿರಿಯ ಕವಿ ಎಂ. ಗೋಪಾಲಕೃಷ್ಣ ಅಡಿಗ ಇವರುಗಳು ಉಪಸ್ಥಿತರಿದ್ದರು. ಅಂದಿನ ಸಮಾರಂಭದಲ್ಲಿ ಕಾರಂತಾಭಿಮಾನಿ ಕನ್ನಡ ಸಹೃದಯ

ಲೋಕವು ಕಾರಂತರ ಮುಂದೆ ಸಮಾವೇಶಗೊಂಡಿತ್ತು. ಚಿರಸ್ಮರಣೀಯವಾದ ಆ ಸಮಾರಂಭದಲ್ಲಿ ಡಾ. ಶಿವರಾಮ ಕಾರಂತರು ಒಂದೂವರೆ ಗಂಟೆಗಳ ಕಾಲ ಆಡಿದ ಮಾತುಗಳ ಸಾರಾಂಶವನ್ನು ವಿದ್ಯಾರ್ಥಿ ಹಿರಿಯಣ್ಣ ಐತಾಳ ಕಾಲೇಜು ಸಂಚಿಕೆಯಲ್ಲಿ ಹೀಗೆ ದಾಖಲಿಸುತ್ತಾನೆ:

1. "ನನ್ನ ಜೀವನದ 68 ವರ್ಷಗಳ ಲೆಕ್ಕಾಚಾರವನ್ನು ನಿಮಗೆ ನಾನು ಒಪ್ಪಿಸಬೇಕಾಗಿದೆ. ಕನ್ನಡಿಗರಿಗೆ ಈ ಮೂಲಕ ನಾನು ಋಣಭಾರ ತೀರಿಸುತ್ತಿದ್ದೇನೆ. ನನಗೆ ನನ್ನ ಬದುಕಿನ ಪಯಣವನ್ನು ಹಿಂದಿರುಗಿ ನೋಡಬೇಕೆನ್ನಿಸುವುದಿಲ್ಲ. ಪುನರ್ಜನ್ಮದಲ್ಲಿ ನನಗೆ ನಂಬಿಕೆ ಇಲ್ಲ. ನಾನೇ ಶ್ರೇಷ್ಠ ಎಂಬ ಹೆಮ್ಮೆ ಇಲ್ಲ. ನಾನು ನನ್ನ ಮೊದಲ ತಲೆಮಾರಿನವರಿಗೂ ಮುಂದಿನದಕ್ಕೂ ಇರುವ ಸಂಬಂಧ ತಂತುಮಾತ್ರ. ಎಲ್ಲರಂತೆ ನನಗೂ ವಿನಾಶವಿದೆ."
2. "ನಿದ್ರಿಸುತ್ತಿದ್ದ ಸಮಾಜವನ್ನು ಎಚ್ಚರಿಸುತ್ತೇನೆ ಎಂದು ಹೊರಟ ನನಗೂ ನಿರಾಶೆ ಕಾದಿತ್ತು. ಆದರೆ ನನ್ನ ದೌರ್ಬಲ್ಯವನ್ನು ನಾನು ನೀಗಿಸಿಕೊಳ್ಳುವೆ. ಸಮಾಜವನ್ನು ಎತ್ತುತ್ತೇನೆ ಎಂಬ ಹುಚ್ಚು ಹೆಮ್ಮೆ ಈಗ ಇಲ್ಲ. ಜನರನ್ನು ಮೇಲೆತ್ತುವ ಇಲಾಖೆಯೆ ಬೇರೆ; ಅದರಲ್ಲಿ ನಾನಿಲ್ಲ."
3. "ನನ್ನ ಜೀವನದಲ್ಲಿ ನಿರಾಶೆ ತುಂಬಿದವರೆಂದರೆ ಸಾಹಿತಿಗಳು. ಬರಹಕ್ಕೂ, ನಡೆನುಡಿಗೂ ಸಂಬಂಧವಿಲ್ಲದಂತೆ ವರ್ತಿಸುವ ಇವರನ್ನು ಕಂಡು ಸಂಕಟವಾಗುತ್ತದೆ."
4. "ನನ್ನ ವಿಚಾರವನ್ನು ಒಪ್ಪಿ; ಬಿಡಿ, ಅದು ನನಗೆ ಬೇಕಿಲ್ಲ. ಅದು ನಿಮ್ಮ ಯೋಗ್ಯ ಆಯ್ಕೆಗೆ ಸಂಬಂಧಿಸಿದ್ದು. ನನ್ನ ಪ್ರಭಾವ ನಿಮ್ಮ ಮೇಲೆ ಬೀರಲು ಒತ್ತಾಯಿಸುವುದಿಲ್ಲ."

ಕಾರಂತರ ವ್ಯಕ್ತಿತ್ವವನ್ನು ಮೇಲಿನ ಮಾತುಗಳು ಧ್ವನಿಸುತ್ತಿದ್ದು, ಇಂದಿನ ಸಮಸ್ಯೆಗಳು ಪ್ರಕ್ಷುಬ್ಧತೆಗಳಿಗೆ ಯಾರು ಯಾವ ರೀತಿಯಲ್ಲಿ ಹೊಣೆ? ಎನ್ನುವುದನ್ನು ಈ ಮಾತುಗಳು ಸ್ಪಷ್ಟವಾಗಿ ಸೂಚಿಸುತ್ತವೆ.

"ಅಂತೂ ಕನ್ನಡಿಗರ ಇತಿಹಾಸದಲ್ಲಿ ಮಹಾತ್ಮಾಗಾಂಧಿ ಸ್ಮಾರಕ ಕಾಲೇಜಿನ ಗತವೈಭವದಲ್ಲಿ ಇದು ಮಹತ್ವದ ಯಶಸ್ವೀ ಸಮಾರಂಭವಾಗಿ ಜನಮನದಲ್ಲೂ ಕೃತಿಯಲ್ಲೂ ದಾಖಲಾಗಿ ಶಾಶ್ವತವಾಗಿ ಉಳಿದಿದೆ."(ಲೇ: ಹರಿದಾಸ ಭಟ್ಟ ಕು.ಶಿ., 1969–70, ಪು–28)

ಈ ಚಟುವಟಿಕೆಗಳ ಕುರಿತಂತೆ ಕಾಲೇಜು ಪ್ರಕಟಿಸಿದ 73–74ನೇ ಶೈಕ್ಷಣಿಕ ವರ್ಷದ 'ಸಗರಿ' ಎಂಬ ವಾರ್ಷಿಕ ಸಂಚಿಕೆ ಹಾಗೂ 'ಭಾಗ್ಯದ ಬಾಗಿಲು' ಎಂಬ ವಿಶೇಷ ಸಂಚಿಕೆಯಲ್ಲಿ ಸುದೀರ್ಘ ಮಾಹಿತಿಗಳು ಲಭ್ಯವಾಗುತ್ತವೆ.

**ಬೆಳ್ಳಿಹಬ್ಬದ ಪ್ರಯುಕ್ತ ಹಮ್ಮಿಕೊಂಡ ವಿಚಾರಗೋಷ್ಠಿಯ ಸಂಕ್ಷಿಪ್ತ ಅವಲೋಕನ:–**

1974ನೇ ಫೆಬ್ರುವರಿ 8 ರಿಂದ ಆರಂಭಗೊಂಡು, ಫೆಬ್ರುವರಿ 11ರ ತನಕ (1974) ನಾಲ್ಕು ದಿನಗಳಲ್ಲಿ ನಡೆದ ನಾಲ್ಕು ವಿಚಾರಗೋಷ್ಠಿಗಳು ಅತಿ ಮುಖ್ಯದ್ದೂ, ಮಹತ್ವದ್ದೂ ಆಗಿದ್ದು, ಆ ಗೋಷ್ಠಿಗಳ ಸಂಕ್ಷಿಪ್ತ ಅವಲೋಕನವು ಈ ಕೆಳಕಂಡಂತಿದೆ.

**ವಿಚಾರಗೋಷ್ಠಿ–1** ಪೂರ್ವಾಹ್ನ: ವಿಷಯ: ಕರಾವಳಿ ಕರ್ನಾಟದಲ್ಲಿ ಶಿಕ್ಷಣ ಮತ್ತು ಉದ್ಯೋಗಾವಕಾಶಗಳ ಭವಿಷ್ಯ: (8.02.1974): ಆರಂಭದಲ್ಲಿ ವಿಷಯದ ಪ್ರಸ್ತುತತೆಯ ಬಗ್ಗೆ ಪ್ರೊ. ಕು. ಶಿ. ಹರಿದಾಸ ಭಟ್ಟರು ತಮ್ಮ ವಿಚಾರವನ್ನು ಮಂಡಿಸಿದ

ಅನಂತರ ಸಂಪನ್ಮೂಲ ವ್ಯಕ್ತಿಗಳಾದ ಡಾ. ಎನ್.ಆರ್. ರಾವ್., ಡಾ. ಎನ್.ಕೆ. ತಿಂಗಳಾಯ ಅವರು ಪ್ರಬಂಧ ಮಂಡಿಸಿದರು. ಕೆ. ಸೂರ್ಯನಾರಾಯಣ ಅಡಿಗರು ಅಂದಿನ ಗೋಷ್ಠಿಯ ಸಮಾರೋಪ ಸಮಾರಂಭವನ್ನು ನಡೆಸಿಕೊಟ್ಟರು.

**ವಿಚಾರಗೋಷ್ಠಿ 2:** 'ಕರ್ನಾಟಕದಲ್ಲಿ ಜಾನಪದ ಅಧ್ಯಯನ' ಎಂಬ ವಿಷಯದ ಕುರಿತು ಫೆ. 9, 1974 ರಂದು ಗೋಷ್ಠಿ ಏರ್ಪಾಡಾಗಿದ್ದು, ಕ್ಯಾಲಿಫೋರ್ನಿಯಾ ವಿಶ್ವವಿದ್ಯಾನಿಲಯದ ಪ್ರೊ. ಹೆಲ್‌ಸ್ಟೀನ್ ಮತ್ತು ಅವರ ಶ್ರೀಮತಿಯವರಾದ ಡಾ. ಎಂಟೋಯ್ನೆಟ್ ಬಿ. ಹೆಲ್‌ಸ್ಟೀನ್ ಹಾಗೂ ಡಾ. ಪಿ. ಗುರುರಾಜ ಭಟ್ ಅವರು ಪ್ರಬಂಧ ಮಂಡಿಸಿದರು.

**ವಿಚಾರಗೋಷ್ಠಿ 3:** ದಿನಾಂಕ: ಫೆಬ್ರುವರಿ 10, 1974, ಗೋಷ್ಠಿಯ ವಿಷಯ– ಸಾಮಾಜಿಕ ಕ್ರಾಂತಿ ಮತ್ತು ಕನ್ನಡ ಸಾಹಿತ್ಯ:

ಹೆಸರಾಂತ ಲೇಖಕ ಎಸ್.ಎಲ್. ಭೈರಪ್ಪ ಅವರು ತಮ್ಮ ಪ್ರಬಂಧದಲ್ಲಿ ಕೃತಿಯನ್ನು ಓದುವ ಓದುಗನ ಮನೋಭಿಲಾಷೆಯನ್ನು ಅನುಸರಿಸಿ, ಕೃತಿಯು ಕ್ರಾಂತಿಗೆ ಪ್ರೇರಕವೇ ಅಥವಾ ವಿರೋಧಿಯೇ? ಎನ್ನುವುದು ನಿರ್ಣೀತವಾಗುತ್ತದೆ ಎಂಬ ನಿಲುವನ್ನು ಮಂಡಿಸುತ್ತಾರೆ. ಶ್ರೀಕೃಷ್ಣ ಆಲನಹಳ್ಳಿಯವರು ಭೈರಪ್ಪನವರ ವಾದವನ್ನು ಸಂಪೂರ್ಣ ತಳ್ಳಿಹಾಕಿದರೆ, ಡಿ. ರಘುನಾಥ ರಾವ್ ಅವರ ತಾತ್ವಿಕತೆಯು ಆಲನಹಳ್ಳಿಯವರ ಸಮೀಪದಲ್ಲಿಯೇ ಬಂದು ನಿಲ್ಲುತ್ತದೆ. ಜಿ.ಹೆಚ್. ನಾಯಕ್, ವ್ಯಾಸರಾಯ ಬಲ್ಲಾಳ, ಹೆಚ್. ಕೆ. ರಾಮಮೂರ್ತಿ ಇವರುಗಳೆಲ್ಲರೂ ತಮ್ಮ ತಮ್ಮ ವೈಚಾರಿಕತೆಯನ್ನು ಎತ್ತಿ ಹಿಡಿಯುವ ಮೂಲಕ ಭೈರಪ್ಪನವರ ಪ್ರಬಂಧಕ್ಕೆ ತಮ್ಮದೇ ಆದ ರೀತಿಯಲ್ಲಿ ಪ್ರತಿಕ್ರಿಯಿಸಿದರು. ಅದೇ ಗೋಷ್ಠಿಯಲ್ಲಿ ಉಪಸ್ಥಿತರಿದ್ದ ಡಾ. ಪ್ರಭುಶಂಕರ್ ಹಾಗೂ ತೆಕ್ಕುಂಜ ಗೋಪಾಲಕೃಷ್ಣ ಭಟ್ಟರು 'ಸಾಹಿತ್ಯವು ಸಮಾಜದ ಸಹೃದಯರಿಗೆ ನೆಮ್ಮದಿಯನ್ನು ನೀಡುವ ಭಾಷೆಯಲ್ಲಿ ರಚಿತವಾದ ಕಲಾಪ್ರಕಾರ; ಕ್ರಾಂತಿಗೂ ಸಾಹಿತ್ಯಕ್ಕೂ ಸಂಬಂಧವಿಲ್ಲ' ವೆಂಬ ಅಭಿಪ್ರಾಯವನ್ನು ಮಂಡಿಸುವುದರೊಂದಿಗೆ ವಿಚಾರಗೋಷ್ಠಿ ಎಂಬ ಶಬ್ದಕ್ಕೆ ಅಪಚಾರವಾಗದಂತೆ ಗೋಷ್ಠಿಯು ಯಶಸ್ವಿಯಾಗಿ ಮುಕ್ತಾಯಕಂಡಿತು.

**ಗೋಷ್ಠಿ 4:** ವಿಷಯ: ಕನ್ನಡ ರಂಗಭೂಮಿಯ ಆಧುನಿಕ ಪ್ರವೃತ್ತಿಗಳು: (ದಿನಾಂಕ: 11.02.1974) ಈ ಗೋಷ್ಠಿಯನ್ನು ಉದ್ಘಾಟಿಸಿದ ಡಾ. ಶಿವರಾಮ ಕಾರಂತರು ತಮ್ಮ ಉದ್ಘಾಟನ ಭಾಷಣದಲ್ಲಿ "ನಾವೀನ್ಯ ಮುಖ್ಯವಲ್ಲ, ನಾವೀನ್ಯದಿಂದ ಸಾಧಿಸತಕ್ಕ ಪರಿಣಾಮ ಮುಖ್ಯ... ಯಾವ ತಂತ್ರದಿಂದ ತೋರಿಸಿದರೆ ಜನಗಳನ್ನು ಅದು ಯಶಸ್ವಿಯಾಗಿ ಮುಟ್ಟೀತು? ಎನ್ನುವ ಸಂಪೂರ್ಣ ದೃಷ್ಟಿಯಿದ್ದಾಗ ಮಾತ್ರ ರಂಗಭೂಮಿಯ ಪ್ರಯೋಗಗಳು ಪರಿಣಾಮಕಾರಿಯಾದಾವು."(ಸಂ: ಹರಿದಾಸ ಭಟ್ಟ ಕು.ಶಿ. ಪ್ರೊ., 1974, ಪು–225) ಎಂಬ ನಿಲುವನ್ನು ಮಂಡಿಸುತ್ತಾರೆ. ಅಂತಿಮವಾಗಿ ಸಮಾರೋಪದ ಮಾತುಗಳನ್ನಾಡಿದ ಕೆ.ವಿ. ಸುಬ್ಬಣ್ಣ ಅವರು "ನಿರ್ದೇಶಕನ ಅನುಭವವೇ ರಂಗಕೃತಿಯ ಮೂಲದ್ರವ್ಯ ಅದನ್ನು ಕೃತಿಯಾಗಿ ಕಟ್ಟಿ ನಿಲ್ಲಿಸುವುದಕ್ಕೆ ಆತ ನಾಟಕವನ್ನು ನಟರನ್ನೂ, ರಂಗಸಜ್ಜಿಕೆಯನ್ನೂ ಪರಿಕರ ದ್ರವ್ಯವಾಗಿ ಬಳಸಿಕೊಳ್ಳುತ್ತಾನೆ"(ಪೂರ್ವೋಕ್ತ, ಪು–232) ಎಂಬೀ ಮಾತು ಕಾರಂತರ ಉದ್ಘಾಟನ ಸಂದರ್ಭದ ಮಾತುಗಳ ಜತೆಗೇ ಬಂದು ನಿಲ್ಲುತ್ತದೆ ಎನ್ನುವುದನ್ನು ಓದುಗರು ಪರಿಭಾವಿಸಬಹುದಾಗಿದೆ.

ಮೂರನೇ ಕಾಲಘಟ್ಟದ ಅವಧಿಯಲ್ಲಿ ಏಳು ಮಂದಿ ಪ್ರಾಂಶುಪಾಲರು ಕಾಲೇಜಿನ ಜವಾಬ್ದಾರಿಯನ್ನು ನಿರ್ವಹಿಸಿದ್ದು, ಪ್ರೊ. ಆಲ್ವಿನ್ ಡಿ'ಸೋಜರು ಪ್ರಾಂಶುಪಾಲರಾಗಿ ಕರ್ತವ್ಯ ನಿರ್ವಹಿಸುವುದಕ್ಕೆ ಮೊದಲು ಪ್ರಾಂಶುಪಾಲರಾಗಿ ಕರ್ತವ್ಯ ನಿರ್ವಹಿಸಿದ ಮೂವರು ಪ್ರಾಂಶುಪಾಲರ ಕಾಲಾವಧಿಯಲ್ಲಿ (ಪ್ರೊ. ರಾಮದಾಸ್, ಪ್ರೊ. ಈಶ್ವರನ್, ಪ್ರೊ. ರಾಮ ಭಟ್)

ಪರಂಪರೆಯ ಸಾಹಿತ್ಯ ಚಟುವಟಿಕೆಗಳನ್ನು ಹೊರತುಪಡಿಸಿ, ವಿಶೇಷವಾದ ಯಾವುದೇ ಚಟುವಟಿಕೆಗಳು ಇಲ್ಲದ ಪ್ರಯುಕ್ತ ಅವರ ಕಾಲಾವಧಿಯ ಚಟುವಟಿಕೆಯ ಕುರಿತಾಗಿ ಇಲ್ಲಿ ಉಲ್ಲೇಖಿಸಲಾಗುತ್ತಿಲ್ಲ.

**ಪ್ರೊ. ಆಲ್ವಿನ್ ಡಿ'ಸೋಜ:** (ದಿನಾಂಕ 01.04.1990 ರಿಂದ 30.11.1994ರ ವರಗೆ) ಪ್ರೊ। ಆಲ್ವಿನ್ ಡಿ'ಸೋಜ ಇವರು ಪರಂಪರೆಯ ಚಟುವಟಿಕೆಗಳನ್ನು ಮುಂದುವರಿಸುವುದರೊಂದಿಗೆ 1992–93ನೇ ಶೈಕ್ಷಣಿಕ ವರ್ಷದಲ್ಲಿ ಮಣಿಪಾಲ ಅಕಾಡಮಿ ಶಿಕ್ಷಣ ಸಂಸ್ಥೆಯ ಸುವರ್ಣ ಮಹೋತ್ಸವವನ್ನು ಆಚರಿಸುವ ಅವಕಾಶವು ಇವರಾದ್ದಾಯಿತು. ಸುವರ್ಣಮಹೋತ್ಸವದ **ಮುಖ್ಯ ಕಾರ್ಯಕ್ರಮಗಳನ್ನು ಸಾಹಿತ್ಯಚಟುವಟಿಕೆಯ ದೃಷ್ಟಿಯಿಂದ** ಈ ಕೆಳಗಿನಂತೆ ಉಲ್ಲೇಖಿಸಬಹುದಾಗಿದೆ.

ಅ) **ಸುವರ್ಣ ಮಹೋತ್ಸವದ ಉದ್ಘಾಟನೆ:** ಸುವರ್ಣ ಮಹೋತ್ಸವದ ಉದ್ಘಾಟನೆಯು ಡಾ. ಶಿವರಾಮ ಕಾರಂತರಿಂದ ನೆರವೇರಿದ್ದು, ತಮ್ಮ ಉದ್ಘಾಟನ ಉಪನ್ಯಾಸದಲ್ಲಿ ಎಂ. ಜಿ. ಎಂ. ಕಾಲೇಜಿನ ಸ್ಥಾಪನೆಯ ಆರಂಭದ ದಿನಗಳನ್ನು ನೆನಪಿಸಿಕೊಳ್ಳುತ್ತಾ ಸಮಾರಂಭವನ್ನು ಉದ್ಘಾಟಿಸುತ್ತಾರೆ.

ಆ) **ಪುಸ್ತಕ ಸಂಸ್ಕೃತಿ ವಿಚಾರಗೋಷ್ಠಿ:–** ಪುಸ್ತಕ ಸಂಸ್ಕೃತಿಯ ಕುರಿತಂತೆ ವಿಚಾರಗೋಷ್ಠಿಯನ್ನು ಚಿನ್ನದ ಹಬ್ಬದ ಪ್ರಯುಕ್ತ ಹಮ್ಮಿಕೊಳ್ಳಲಾಗಿದ್ದು, ವಿಚಾರಗೋಷ್ಠಿಯನ್ನು ಖ್ಯಾತ ಸಾಹಿತಿ, ಉಪನ್ಯಾಸಕ, ಮಾಜಿ ಉಪಕುಲಪತಿಗಳೂ ಆದ ಡಾ. ಹಾ.ಮಾ. ನಾಯಕ ಅವರು ಉದ್ಘಾಟಿಸುತ್ತಾ ಯುವ ತಲೆಮಾರು ಪುಸ್ತಕ ಸಂಸ್ಕೃತಿಯಿಂದ ದೂರವಾಗುತ್ತಿರುವುದಕ್ಕೆ ವಿಷಾದ ವ್ಯಕ್ತಪಡಿಸಿದರು. ವೇದಿಕೆಯಲ್ಲಿ ಉಪಸ್ಥಿತರಿದ್ದ ಕನ್ನಡ ವಿಭಾಗದ ಮಾಜಿ ಮುಖ್ಯಸ್ಥರಾದ ಡಾ. ಶ್ರೀನಿವಾಸ ಹಾವನೂರ ಅವರು ತಮ್ಮ ಪ್ರಬಂಧದಲ್ಲಿ ಸಂಶೋಧಕನ ಸಂಶೋಧನಚಟುವಟಿಕೆಗಳಲ್ಲಿ ಪುಸ್ತಕವು ವಹಿಸುವ ಪಾತ್ರದ ಕುರಿತಂತೆ ತನ್ನ ಸ್ವಂತ ಅನುಭವದ ಹಿನ್ನಲೆಯಲ್ಲಿ ವಿಷಯ ನಿರೂಪಣೆ ಮಾಡಿದರು.

ಇ) ಅಕಾಡೆಮಿ ಚಿನ್ನದ ಹಬ್ಬದ ಸವಿನೆನಪಿಗಾಗಿ ನಡೆಸಿದ ಇನ್ನೊಂದು ಬಹುಮುಖ್ಯ ಕಾರ್ಯಕ್ರಮವೇ 1992 ಫೆಬ್ರುವರಿ 5ರಂದು ನಡೆದ 'ಜ್ಞಾನಪೀಠ ಪ್ರಶಸ್ತಿ ಪುರಸ್ಕೃತ ಡಾ. ವಿ. ಕೃ. ಗೋಕಾಕರ ಕುರಿತು ನಡೆದ ವಿಚಾರಗೋಷ್ಠಿಯಾಗಿರುತ್ತದೆ. ಆ ವಿಚಾರಗೋಷ್ಠಿಯಲ್ಲಿ ಕನ್ನಡದ ಖ್ಯಾತ ವಿಮರ್ಶಕರಾದ ಪ್ರೊ. ಜಿ.ಎಸ್. ಅಮೂರ, ಪ್ರೊ. ಎಂ. ರಾಜಗೋಪಾಲ ಆಚಾರ್ಯ, ಕವಿ ಕಯ್ಯಾರ ಕಿಞ್ಞಣ್ಣ ರೈ, ಪ್ರೊ. ಕುಲಕರ್ಣಿ, ಪ್ರೊ. ಕು. ಶಿ. ಹರಿದಾಸ ಭಟ್ ಇವರುಗಳು, ಗೋಕಾಕ್‌ರ ಕಾವ್ಯದ ಕುರಿತಂತೆ ಅವರ ವಿವಿಧ ಕೃತಿಯನ್ನಾಧರಿಸಿ, ತಮ್ಮ ನಿಲುವುಗಳನ್ನು ವಿವರಿಸಿದರು'

ಪ್ರೊ. ಆಲ್ವಿನ್ ಡಿ'ಸೋಜರ ಅನಂತರ ಪ್ರೊ. ಶ್ರೀಶ ಆಚಾರ್ಯ ಹಾಗೂ ಡಾ. ಪಿ.ಎನ್. ನರಸಿಂಹಮೂರ್ತಿಯವರು ಕಾಲೇಜಿನ ಪ್ರಾಂಶುಪಾಲರಾಗಿ ಕಾಲೇಜನ್ನು ಮುನ್ನಡೆಸಿದರು. ಇವರ ಕಾಲದಲ್ಲಿ ಸಾಹಿತ್ಯಚಟುವಟಿಕೆಗಳಿಗೆ ಸಂಬಂಧಿಸಿದಂತೆ ಉಲ್ಲೇಖಿಸಬಹುದಾದ ಯಾವುದೇ ಮುಖ್ಯ ಚಟುವಟಿಕೆಗಳು ನಡೆದಿರುವುದಿಲ್ಲ. ಇವರುಗಳ ಅನಂತರ ಪ್ರೊ. ಸ್ಯಾಮ್ ಡೇನಿಯಲ್ ಅವರು ಪ್ರಾಂಶುಪಾಲರ ಜವಾಬ್ದಾರಿಯನ್ನು ಸ್ವೀಕರಿಸಿ, ಕಾಲೇಜನ್ನು ಮುನ್ನಡೆಸಿದರು.

**ಪ್ರೊ. ಸ್ಯಾಮ್ ಡೇನಿಯಲ್ (1998–2001):**

ಕಾಲೇಜಿನ ಸುವರ್ಣ ಮಹೋತ್ಸವವು ಇವರ ಅವಧಿಯಲ್ಲಿಯೇ ನಡೆಸುವ ಸದವಕಾಶ ಇವರಿಗೆ ಕೂಡಿಬಂದಿತು. ಈ ಉತ್ಸವವನ್ನು 1999 ಫೆಬ್ರುವರಿ 7 ರಿಂದ ಫೆಬ್ರುವರಿ 11ರ ತನಕ ಐದು ದಿನಗಳ ಉತ್ಸವವನ್ನಾಗಿ ಆಚರಿಸಿದರು. ಈ

ಚಟುವಟಿಕೆಗಳಲ್ಲಿ ಸಾಂಪ್ರದಾಯಿಕ ಉದ್ಘಾಟನಾ ಭಾಷಣ, ಸಾಹಿತ್ಯಗೋಷ್ಠಿ, ವಿಜ್ಞಾನಗೋಷ್ಠಿ, ಕವಿಗೋಷ್ಠಿ, ಕಡೆಂಗೋಡ್ಲು ಸ್ಮಾರಕ ಬಹುಮಾನ ವಿಜೇತ ಕವಿಗಳ ಸಮಾವೇಶ ಎಂಬ ವಿವಿಧ ಕಾರ್ಯಕ್ರಮಗಳು ಜರಗಿರುವ ಕುರಿತು ಕಾಲೇಜು ಸಂಚಿಕೆ ಮತ್ತು ಅದೇ ವರ್ಷ ಬಿಡುಗಡೆಗೊಂಡ ಸುವರ್ಣ ಮಹೋತ್ಸವದ ವಿಶೇಷ ಸಂಚಿಕೆ 'ನಂದಾದೀಪ' ದಿಂದ ತಿಳಿದುಬರುತ್ತದೆ.

ದಿನಾಂಕ 11.02.2000ದಂದು ಸುವರ್ಣ ಮಹೋತ್ಸವದ ಕೊನೆಯ ದಿನವಾಗಿದ್ದು, ವಿದ್ಯಾರ್ಥಿ ಸಂಘದ ದಿನಾಚರಣೆಯು ವಿದ್ಯಾರ್ಥಿಗಳ ಅದ್ದೂರಿಯ ಸಾಂಸ್ಕೃತಿಕ ಕಾರ್ಯಕ್ರಮಗಳಿಂದ ವಿಜೃಂಭಿಸಿತು. "ಒಟ್ಟಿನಲ್ಲಿ ಸುವರ್ಣ ಮಹೋತ್ಸವದ ಎಲ್ಲ ವಿಚಾರಗೋಷ್ಠಿಗಳೂ, ಸಮ್ಮೇಳನಗಳೂ ಕಾಲೇಜಿನ ಬೌದ್ಧಿಕ ಸಾಧನೆಯ ಇತಿಹಾಸವನ್ನು ನೆನಪಿಸಿದವು..."(ಸಂ: ಡೇನಿಯಲ್ ಪ್ರೊ, 1999–2000, ಪು–35)

**3. 1949–50ನೇ ಶೈಕ್ಷಣಿಕ ವರ್ಷದಿಂದ ಪ್ರಕಟಗೊಂಡ ವಾರ್ಷಿಕ ಸಂಚಿಕೆಗಳು:**

ಎಂ.ಜಿ.ಎಂ. ಕಾಲೇಜಿನ ಸಾಹಿತ್ಯಚಟುವಟಿಕೆಗಳ ಅಧ್ಯಯನ ವಿಷಯದ ಮೂರನೇ ಶೀರ್ಷಿಕೆಯಲ್ಲಿ 20ನೇ ಶತಮಾನದ 50 ವರ್ಷಗಳ ಕಾಲಾವಧಿಯಲ್ಲಿ ಪ್ರಕಟಿಸಲಾದ ವಾರ್ಷಿಕ ಸಂಚಿಕೆಗಳ ಮತ್ತು ವಿಶೇಷ ಪ್ರಕಟಿತ ಕೃತಿಗಳ ಬರಹಗಳ ಕುರಿತು ವಿಶ್ಲೇಷಿಸಲಾಗಿದೆ. ಈ ವಿಶ್ಲೇಷಣೆಯು ಸಾಹಿತ್ಯಚಟುವಟಿಕೆಗಳ ಸ್ವರೂಪ ಮತ್ತು ಸತ್ವವನ್ನು ಮನಗಾಣಿಸುವ ಉದ್ದೇಶದಿಂದ ನಡೆಸಿರುವುದೇ ಹೊರತು ಕಾಲೇಜಿನ ಸಂಚಿಕೆಯ ಮೂಲಕ, ಕಾಲೇಜಿನ ಸಾಹಿತ್ಯಕ ಮೌಲ್ಯಮಾಪನದ ಅಂಗವೆಂದು ಪರಿಗಣಿಸಿರುವುದಿಲ್ಲ. ಮೂರು ಕಾಲಘಟ್ಟದ ಅವಧಿಯ ಸಂಚಿಕೆಗಳಲ್ಲಿ ಪ್ರಕಟಗೊಂಡ ವಿವಿಧ ಶೀರ್ಷಿಕೆಗಳನ್ನು ವಿಶ್ಲೇಷಿಸಿ, ಅವುಗಳ ಸಾಹಿತ್ಯಕ ಮೌಲ್ಯ ಮತ್ತು ಆಶಯಗಳನ್ನು ಈ ಪ್ರಬಂಧದಲ್ಲಿ ಗುರುತಿಸಲಾಗಿದೆ. ಹೀಗೆ ಗುರುತಿಸುವ ಸಂದರ್ಭದಲ್ಲಿ ಸಂಚಿಕೆಗಳಲ್ಲಿ ಪ್ರಕಟಗೊಂಡ ಸಣ್ಣಕಥೆಯ ಪ್ರಕಾರವೂ ಬಹುಮುಖ್ಯ ಆಕರವಾದ ಕಾರಣ ಪ್ರತೀ ಕಾಲಘಟ್ಟದಲ್ಲೂ ಪ್ರಕಟಗೊಂಡ ಸಣ್ಣಕಥಾ ಪ್ರಕಾರವೊಂದನ್ನು ಅವಶ್ಯವಾಗಿ ಪರಿಗಣಿಸುವುದು ಅನಿವಾರ್ಯವಾಗಿದೆ.

ಪ್ರಥಮ ಕಾಲಘಟ್ಟದಲ್ಲಿ ಪ್ರಕಟಗೊಂಡ (1949–1964) ವಾರ್ಷಿಕ ಸಂಚಿಕೆಗಳಿಂದ ಆಯ್ಕೆ ಮಾಡಿಕೊಂಡ ವಿವಿಧ ಸಾಹಿತ್ಯ ಶೀರ್ಷಿಕೆಗಳನ್ನು ಈ ಕೆಳಗಿನಂತೆ ವಿಶ್ಲೇಷಿಸಲಾಗಿದೆ.

**ಕಾಲೇಜಿನ ಪ್ರಥಮ ವಾರ್ಷಿಕ ಸಂಚಿಕೆಯಲ್ಲಿ ಪ್ರಕಟಗೊಂಡ ಮೊದಲ ಸಣ್ಣಕಥೆ:**

**ಸಣ್ಣಕಥೆ:** 1950–51ನೇ ಶೈಕ್ಷಣಿಕ ಸಾಲಿನಲ್ಲಿ ವಾರ್ಷಿಕ ಸಂಚಿಕೆಯಲ್ಲಿ ಪ್ರಕಟಗೊಂಡ ಜಗನ್ನಾಥ ಮೂಡ್ಲಕಟ್ಟೆ ಎಂಬ ಪ್ರಥಮ ಇಂಟರ್ ಮೀಡಿಯೆಟ್ ವಿದ್ಯಾರ್ಥಿಯ 'ಫಲಿತಾಂಶ' ಎಂಬ ಶೀರ್ಷಿಕೆಯಲ್ಲಿ ಬರೆದ ಕಥೆಯೇ ಮೊದಲನೆಯ ಕಥೆ.

**ಕಥೆಯ ವಸ್ತು:** ಮೂರು ಬಾರಿ ಎಸ್.ಎಸ್.ಎಲ್.ಸಿ. ಪರೀಕ್ಷೆಯಲ್ಲಿ ಅನುತ್ತೀರ್ಣನಾಗಿ ನಾಲ್ಕನೇ ಪ್ರಯತ್ನದಲ್ಲಿ ಪಾಸಾಗಿ ಕಾಲೇಜು ಸೇರುವ ಕನಸು ಕಾಣುತ್ತಿರುವ ವಿದ್ಯಾರ್ಥಿ ಈ ಬಾರಿಯ ಫಲಿತಾಂಶದಲ್ಲಿ ಖಂಡಿತ ಉತ್ತೀರ್ಣನಾಗುತ್ತೇನೆಂದು ತಂದೆ, ತಾಯಿ, ಸ್ನೇಹಿತರಲ್ಲಿ ವಿಶ್ವಾಸದ ಮಾತುಗಳನ್ನೇ ಆಡಿಕೊಂಡಿದ್ದ, ಫಲಿತಾಂಶಕ್ಕೆ ಇನ್ನೂ ಒಂದು ದಿನ ಇದೆ ಎನ್ನುವಾಗ ಪೇಟೆಗೆ ಹೋಗಿ ಫಲಿತಾಂಶ ಪ್ರಕಟಗೊಂಡ ಪತ್ರಿಕೆಯನ್ನು ಪಡೆದು ಓದಿ ಮರುದಿನ ಮನೆಗೆ ಬರುತ್ತೇನೆಂದು ಹೇಳಿ ಮನೆಯಿಂದ ಹೊರಟು ಹೋಗುತ್ತಾನೆ. ಮನೆಯಿಂದ ಪೇಟೆಗೆ ಹೋದವನು ಪೇಟೆಯ ಹೋಟೇಲಿನ ವಸತಿಗೃಹದಲ್ಲಿ ಉಳಿದುಕೊಂಡು ರಾತ್ರಿ ಕಾಣುವ ಆತನ 'ಕನಸಿನ ಅದ್ವಾನ'ದ ಚಿತ್ರಣವು ಕನಸಿನಲ್ಲಿ ಅನಾವರಣಗೊಳ್ಳುತ್ತಾ ಹೋಗುತ್ತದೆ. ಆ ಕನಸಿನ ವಿವರಗಳು

ಹೀಗಿವೆ. ನಿರೂಪಕನು (ಕನಸಿನಲ್ಲಿ) 4ನೇ ಬಾರಿ ಎಸ್.ಎಸ್.ಎಸ್.ಸಿ. ಪರೀಕ್ಷೆ ಎದುರಿಸಿದವನು ಪರೀಕ್ಷೆಯಲ್ಲಿ ಅನುತ್ತೀರ್ಣವಾಗಿ ಮನೆಬಿಟ್ಟು ಮಂಗಳೂರಿನ ರೈಲು ನಿಲ್ದಾಣಕ್ಕೆ ಬಂದು ಟ್ರೈನ್‌ನಲ್ಲಿ ಮದ್ರಾಸಿಗೆ ತೆರಳುತ್ತಾನೆ. ಆತನೇ ಹೇಳುವಂತೆ ...... "ಉಳ್ಳಾಲ ಸೇತುವೆಯ ಮೇಲೆ ಟ್ರೈನು ಓಡುವಾಗ ಮಂಗಳೂರಿಗೆ ಮುಖಮಾಡಿ ಕೊನೆಯ ನಮಸ್ಕಾರ ಸಲ್ಲಿಸಿದೆ......" ಎಂಬ ವಿದಾಯದ ಅನುಭವಕ್ಕೂ ಒಳಗಾಗಿ "ಇದ್ದಕ್ಕಿದ್ದಂತೆ ರೈಲಿನ ಚಾರ್‌ಕೋಲ್ (ಕಲ್ಲಿದ್ದಲು) ಮಸಿಯು ಮುಖಕ್ಕೆ ಬಡಿಯಿತು. 'ಕಣ್ಣುಜ್ಜುವ ರಭಸದಲ್ಲಿ ರೈಲುಬಾಗಿಲಿಗೆ ಹಿಡಿದ ಕೈ ಬಿಟ್ಟುಬಿಟ್ಟೆ; ಅಮ್ಮಾ... ಎಂದರಚುತ್ತಾ ಕೆಳಕ್ಕುರುಳಿದೆ! ರೈಲು ನಿಂತಿತು. ಆದರೆ ಕಾಲಮೇಲೇ ಚಕ್ರ ಬಂದು ನಿಂತಿತ್ತು. ನೋವಿನಿಂದ ಅಪ್ಪಾ... ಎಂದೆ. ಅಷ್ಟು ಮಾತ್ರ ನನಗೆ ಗೊತ್ತು. ಮತ್ತು ಏನೆಲ್ಲಾ ನಡೆಯಿತೋ ಗೊತ್ತಿಲ್ಲ. ಬೆಳಗ್ಗೆ ಏಳುವಾಗ ಘಂಟೆ 9.30 ಆಗಿದ್ದು, ಸ್ನೇಹಿತರೆಲ್ಲ ಪಾಸಾದ ಪ್ರಯುಕ್ತ ಕಾಫಿಗಾಗಿ ಸುತ್ತುಗಟ್ಟಿದ್ದರು"(ಸಂ: ಸುಂದರರಾಯರು ಪ್ರೊ., 1949–50, ಪು–16) ಎಂಬ ವಿವರದೊಂದಿಗೆ ಕಥೆ ಮುಕ್ತಾಯವಾಗುತ್ತದೆ.

**ಕಥೆಯ ಶೈಲಿ:** "ಎಸ್.ಎಸ್.ಎಲ್.ಸಿ. ರಿಸಲ್ಟ್ ಕೇಳಲಿಕ್ಕೆ ಪೇಟೆಗೆ ಹೋದ ನಿನಗೆ ಹತ್ತುದಿನದ ಮುಂಚೆಯೇ ರೂಮು ಏಕೆ ಬೇಕಿತ್ತು? ನಿನ್ನ ಸನ್ನಾಹ, ಸಿದ್ಧತೆ ನೋಡಿ ನಾವೆಲ್ಲ ಧೈರ್ಯಗೊಂಡಿದ್ದೆವು. ಆದರೆ ಕೊನೆಗೆ ಪರ್ವತ ಹೆಗ್ಗಣ ಹೊತ್ತ ಹಾಗೂ ಆಗಲಿಲ್ಲ"(ಪೂರ್ವೋಕ್ತ, ಪು–14) ಎಂಬ ತಂದೆಯ ಪತ್ರದಲ್ಲಿ ಇಷ್ಟೆಲ್ಲಾ ತಾನು ಖರ್ಚು ಮಾಡಿರುವುದು ವ್ಯರ್ಥವಾಯಿತು ಎಂಬ ಆತಂಕವನ್ನು ಧ್ವನಿಸುತ್ತದೆ.

**ಕಥೆಯ ಉದ್ದೇಶ:** ಅನುತ್ತೀರ್ಣನಾಗುತ್ತೇನೆಂಬ ಮಾನಸಿಕ ಭಯದಿಂದ ಜರ್ಝರಿತನಾದ ನಿರೂಪಕ ಅನುತ್ತೀರ್ಣನಾದ ಕನಸನ್ನು ಕಾಣುತ್ತಾನೆ. ಅನುತ್ತೀರ್ಣನಾದ ಕಾರಣಕ್ಕೆ ತಂದೆ ದುಃಖಿಸುವುದು ಮನೆಬಿಟ್ಟುಹೋದ ಕಾರಣಕ್ಕಾಗಿ ತಾಯಿ ಕೊರಗುವುದು ಮುಂತಾದ ಚಿತ್ರಣಗಳನ್ನು ಕಥೆ ಸಮರ್ಪಕವಾಗಿ ಬಿಂಬಿಸುತ್ತದೆ. ಕಥೆಯ ಆರಂಭದಲ್ಲಿ ನಿರೂಪಕ ಫೈಲಾದಲ್ಲಿ ತನಗೆ ಭವಿಷ್ಯವೇ ಇಲ್ಲವೆಂದು ಭಾವಿಸಿಕೊಳ್ಳುವುದು; ಇವೆಲ್ಲವೂ ಬ್ರಿಟೀಷ್ ಶಿಕ್ಷಣ ವ್ಯವಸ್ಥೆಯು ನೀಡುವ ಶಿಕ್ಷಣವೇ ಸರ್ವಸುಖಕ್ಕೆ ಆಧಾರವೆಂದು ತಿಳಿದುಕೊಂಡ ಆ ಕಾಲದ ತಂದೆತಾಯಂದಿರ ಮತ್ತು ಯುವ ವಿದ್ಯಾರ್ಥಿಗಳ ಅನಿಸಿಕೆಯಾಗಿತ್ತು. ಮಕ್ಕಳ ಭವಿಷ್ಯಕ್ಕಾಗಿ ಯಾವುದೇ ಬೆಲೆ ತೆತ್ತಾದರೂ ತಂದೆತಾಯಂದಿರು ಹಣ ಖರ್ಚು ಮಾಡುವುದಕ್ಕೆ ಸಿದ್ಧರಿರುತ್ತಿದ್ದರು. ಆದರೆ ಅನುತ್ತೀರ್ಣನಾದಲ್ಲಿ ಹಾಕಿದ ಹಣವೆಲ್ಲವೂ ವ್ಯರ್ಥ ಎಂಬ ಕೊರಗಿಗೊಳಗಾಗುತ್ತಿದ್ದರು. ಆ ಕಾಲದಲ್ಲಿ 'ಶಿಕ್ಷಣ'ವನ್ನು ಭರವಸೆಯಾಗಿ ನಂಬಿಕೊಂಡ ಪೋಷಕರು–ಶಿಕ್ಷಣದಲ್ಲಿ ಅನುತ್ತೀರ್ಣನಾಗುವ ಮೂಲಕ ವಿಫಲನಾದಲ್ಲಿ ಮಗನಿಗೆ ಭವಿಷ್ಯವೇ ಇಲ್ಲವೆಂಬಷ್ಟು ಹತಾಶರಾಗುತ್ತಾರೆ. ಈ ಸ್ಥಿತಿ ಇಂದಿಗೂ ಮುಂದುವರಿದುಕೊಂಡು ಬಂದಿದೆ.

1950ರ ಸುಮಾರಿಗೆ 'ಶಿಕ್ಷಣ'ದ ಬಗ್ಗೆ ಮಧ್ಯಮವರ್ಗದ ಕುಟುಂಬವು 'ಅದನ್ನೊಂದು ಭವಿಷ್ಯದ ದಾರಿ' ಎಂದು ತಿಳಿದಿತ್ತು. ಅದೇ 'ಕಾಳಜಿ' 21ನೇ ಶತಮಾನದಲ್ಲಿ ಇನ್ನಷ್ಟು ವೇಗ ಪಡೆದುಕೊಂಡಿರುವುದನ್ನು ಗಮನಿಸಬಹುದಾಗಿದೆ.

ಕಾಲೇಜಿನ ಪ್ರಥಮ ಸಂಚಿಕೆಯಲ್ಲಿ ಪ್ರಕಟಗೊಂಡ ವೈ. ಶಿವಣ್ಣ ಹೆಗ್ಡೆ ಎಂಬ ದ್ವಿತೀಯ ಇಂಟರ್ ಮೀಡಿಯಟ್ ತರಗತಿಯ ವಿದ್ಯಾರ್ಥಿ ಬರೆದ **'ಆಹುತಿ'** ಎಂಬ ಇನ್ನೊಂದು ಕಥೆಯನ್ನು ಇಲ್ಲಿ ವಿಶ್ಲೇಷಣೆಗೊಳಪಡಿಸಲಾಗಿದೆ. ಮೇಲಿನ ಸಂಚಿಕೆಯಲ್ಲಿಯೇ ಪ್ರಕಟಗೊಂಡ ಕಥೆಯಾಗಿದ್ದು, ಕಥೆಯ ಮೇಲ್ಗಡೆ "ಶೀಲವೇ ಕುಲ; ಕುಲವೇ ಶೀಲ! ಸದಾಚಾರವೇ

ಸದ್ಧರ್ಮ, ದಯವೇ ಧರ್ಮದ ಮೂಲ" ಎಂಬ ಕಥೆಯ ಆಶಯವನ್ನು ಸಂಕ್ಷಿಪ್ತವಾಗಿ ಮುದ್ರಿಸಲಾಗಿದೆ. ಕಥೆಯ ಆಶಯವನ್ನು ಜೀವನದ ಪೂರ್ಣ ಅನುಭವಕ್ಕೊಳಗಾಗದ ಹದಿಹರೆಯದ ಪೋರ ತನ್ನದೇ ರೀತಿಯಲ್ಲಿ ಚಿತ್ತರಿಸುವುದನ್ನು ಕಂಡಾಗ; ಇಂದಿನ ಶಿಕ್ಷಣ ಬೋಧನೆ, ಪಾಠ ಪಠ್ಯದ ಕುರಿತಂತೆ ಮನಸ್ಸು ಪ್ರಶ್ನಿಸುವುದಕ್ಕೆ ತೊಡಗುತ್ತದೆ. ಇಂಟರ್ ಮೀಡಿಯಟ್ ಮಟ್ಟದ ವಯಸ್ಸಿನ ಇಂದಿನ ಯುವಕ/ಯುವತಿಯರಿಗೆ ಇದೇಕೆ ಸಾಧ್ಯವಾಗದು ಎಂಬ ಪ್ರಶ್ನೆ ಮತ್ತೆ ಮತ್ತೆ ಅಧ್ಯಾಪಕರನ್ನು ಕಾಡುವುದಕ್ಕೆ ತೊಡಗುತ್ತದೆ.

ಕಾಲೇಜಿನ ಮೊದಲ ಸಂಚಿಕೆಯಲ್ಲಿ ಪ್ರಕಟವಾದ **'ಆಹುತಿ'** ಎಂಬ ಕಥೆಯು (1950–51ನೇ ಶೈಕ್ಷಣಿಕ ಸಾಲಿನ ಪ್ರಥಮ ಸಂಚಿಕೆ–ಪುಟಸಂಖ್ಯೆ ಕ.ವಿ. 17–23 ಪ್ರಧಾನ ಸಂಪಾದಕರು ಹೆಚ್. ಸುಂದರರಾಯರು–ಪ್ರಾಂಶುಪಾಲರು ಎಂ.ಜಿ.ಎಂ. ಕಾಲೇಜು, ಉಡುಪಿ) ಎರಡು ಕಾರಣಗಳಿಂದಾಗಿ ಮುಖ್ಯವೆನಿಸಿದೆ.

**ಮೊದಲ ಕಾರಣ:** ತನ್ನ ಕಾಲದ ಪರಂಪರೆಯ ಮೌಲ್ಯವನ್ನು ನಿರಾಕರಿಸಿ, ಪ್ರಗತಿಪರ ಮೌಲ್ಯಗಳನ್ನು ತನಿಯನೆಂಬ ಮಾದಿಗನ ಪಾತ್ರದ ಮೂಲಕ ಎತ್ತಿ ಹಿಡಿದು, 'ಮಹಾತ್ಮಾ ಗಾಂಧಿ' ಕಾಲೇಜು ಎಂಬ ತಾನು ಓದುತ್ತಿದ್ದ ಕಾಲೇಜಿನ ಹೆಸರನ್ನು ಸಾರ್ಥಕಗೊಳಿಸಿದನೆನ್ನಬಹುದು.

**ಎರಡನೆಯ ಕಾರಣ:** ಧನಿಯ ಪ್ರತಿನಿಧಿಯಾದ ಶ್ಯಾಮ ಒಕ್ಕಲೆಬ್ಬಿಸಿದ್ದು, ತನ್ನ ಮಗನ ವೈದ್ಯಕೀಯ ಚಿಕಿತ್ಸೆಗೆ ತೆರಳಲು ವಾಹನ ಕೇಳುವಾಗ ಶ್ಯಾಮ ನಿರಾಕರಿಸಿದ್ದು... ಅಷ್ಟಾಗಿಯೂ ತನ್ನ ಚಾಕರಿ ಮನೆಯ ಮಗಳು ಸುಧಾಳ ಪ್ರಾಣರಕ್ಷಣೆಗಾಗಿ ಬೆಂಕಿಯ ಜ್ವಾಲೆಯನ್ನು ಲೆಕ್ಕಿಸದೆ ತನಿಯ ಆಕೆಯ ಜೀವವುಳಿಸಿದ್ದು, ಪ್ರಾಣ ಬಿಡುವ ಮೊದಲೇ ಅದೇ ತನಿಯ "ಸುಧಾಮ್ಮ ಎಲ್ಲಿ?" ಎಂದು ಕೇಳಿದ್ದು, ಈ ಮುಂತಾದ ನಿರೂಪಣತಂತ್ರದಿಂದಾಗಿ ಕಥೆಯ ಕಲಾತ್ಮಕ ಪರಿಣಾಮವು ಉನ್ನತ ಹಂತವನ್ನು ತಲುಪಿರುವುದನ್ನು ಗಮನಿಸಬಹುದಾಗಿದೆ.

1953–54ನೇ ಶೈಕ್ಷಣಿಕ ಸಾಲಿನ ಸಂಚಿಕೆಯಲ್ಲಿ ಪ್ರಕಟಗೊಂಡ ಬಿ. ಕೃಷ್ಣಾನಂದ ಹೆಗ್ಡೆಯವರ ಒಂದು ಕವನದ ಕುರಿತಾಗಿ ಅದರ ಭಾಷೆ ಹಾಗೂ ಸಾಹಿತ್ಯ ಮೌಲ್ಯಕ್ಕಾಗಿ ಗುರುತಿಸಬಹುದಾಗಿದೆ.

ಇಲ್ಲಿ ಕವಿ ಬುದ್ಧನಿಗೆ ಶರಣಾಗುತ್ತಿದ್ದಾರೆ. ಬುದ್ಧ ಮಿಂಚುವ ಕಾಂತಿಯಿಂದ ಮಂದಹಾಸವನ್ನು ಬೀರುತ್ತಾ ದೇದೀಪ್ಯಮಾನವಾದ ಅನುಭೂತಿಯನ್ನುಂಟುಮಾಡುವ ವಿಶ್ವಾತ್ಮನು. 'ಈ ಜೀವದೊಳಹೊಕ್ಕು ಆದರ್ಶ ಸತ್ಯವಂ। ಮಾಂಗಲ್ಯಮೂರ್ತಿಯಂ ಆರಾಧ್ಯ ನೀತಿಯಂ' ಯಾರೇ ಆದರೂ ಸಂಪರ್ಕಿಸಿದಲ್ಲಿ ಅಜ್ಞಾನದ ಕತ್ತಲನ್ನು ಕಳೆದುಕೊಂಡು ಜ್ಞಾನವೆಂಬ ಬೆಳಕಿನ ದೋಣಿಯಲ್ಲಿ ಬೆಳಕಿನ ಮುಕ್ತಿಯನ್ನು ಸೇರಲಿದ್ದಾರೆ. ಅಂತಹ ಚಿನ್ಮಯಮೂರ್ತಿಗೆ ಭವಭೂತಿಯ ಶಿಷ್ಯನಾಗಿ ನಮಿಸುತ್ತೇನೆ ಎಂದು ಬುದ್ಧನಿಗೆ ಶರಣಾಗಿದ್ದಾರೆ.

**ಎಂ.ಜಿ.ಎಂ. ಕಾಲೇಜಿನ 2ನೇ ಕಾಲಘಟ್ಟದ ಕಾಲಾವಧಿಯ ಕಾಲೇಜು ವಾರ್ಷಿಕ ಸಂಚಿಕೆಗಳಲ್ಲಿ ಪ್ರಕಟವಾದ ಸಾಹಿತ್ಯಕ ಬರವಣಿಗೆಗಳ ಸಂಕ್ಷಿಪ್ತ ಅವಲೋಕನ:** ಪ್ರೊ. ಕು.ಶಿ. ಹರಿದಾಸ ಭಟ್ಟರ ಕಾಲಾವಧಿಯನ್ನು ಈಗಾಗಲೇ ಎರಡನೇ

ಕಾಲಘಟ್ಟವೆಂದು ಉಲ್ಲೇಖಿಸಲಾಗಿದ್ದು, ಈ ಕಾಲಘಟ್ಟದ 14 ವರ್ಷಗಳ ಅವಧಿಯಲ್ಲಿ ಕಾಲೇಜು ವಾರ್ಷಿಕ ಸಂಚಿಕೆಗಳಲ್ಲಿ ಪ್ರಕಟಗೊಂಡ ಕೆಲವು ಶೀರ್ಷಿಕೆಯನ್ನಷ್ಟೇ ವಿಶ್ಲೇಷಣೆಗಾಗಿ ಆರಿಸಿಕೊಳ್ಳಲಾಗಿದೆ.

1968-69 ಹಾಗೂ 1969-70ರ ಆಯ್ದ ಕೆಲವು ಬರಹಗಳನ್ನಷ್ಟೇ ವಿಶ್ಲೇಷಿಸಲಾಗಿದೆ. 1968-69ನೇ ಶೈಕ್ಷಣಿಕವರ್ಷದ ವಾರ್ಷಿಕ ಸಂಚಿಕೆಯಲ್ಲಿ ದ್ವಿತೀಯ ಬಿ.ಎ. ವಿದ್ಯಾರ್ಥಿ ಹಾಗೂ ಪ್ರಥಮ ವರ್ಷದ ಕನ್ನಡ ಡಿಪ್ಲೊಮಾ ವಿದ್ಯಾರ್ಥಿ ಮುರಳೀಧರ ಉಪಾಧ್ಯ ಇವರ ವಿಮರ್ಶಾ ಲೇಖನ 'ನವೋದಯ-ನವ್ಯ ಕವಿಗಳು ಗಾಂಧೀಜಿಯವರ ವ್ಯಕ್ತಿತ್ವವನ್ನು ಕಂಡ ಬಗೆ'ಯನ್ನು ವಿಶ್ಲೇಷಿಸಿದ್ದಾರೆ. ವಿಷಾದ, ವ್ಯಂಗ್ಯ, ವಿಡಂಬನೆ, ನಿರಾಶೆ ಹಲವು ಬಗೆಯಲ್ಲಿ ಗಾಂಧೀಜಿಯವರ ವ್ಯಕ್ತಿತ್ವದ ಮೂಲಕ ಸ್ವಾತಂತ್ರ್ಯೋತ್ತರ ಕಾಲದ ವಿಷಮ ಗೊಂದಲವನ್ನು ಬೇರೆ ಬೇರೆ ಕವಿಗಳು ನಿರೂಪಿಸಿದ ಬಗೆಯನ್ನು ಈ ಲೇಖನದಲ್ಲಿ ನಿರೂಪಿಸಿದ್ದಾರೆ.

**ಕಥೆ: 'ನಾನು ಹುಚ್ಚನೇ'**? ಕೆ. ಕೃಷ್ಣಮೂರ್ತಿ ಮೊದಲ ಬಿ.ಎಸ್ಸಿ 1969-70ರ ಕಾಲೇಜು ವಾರ್ಷಿಕ ಸಂಚಿಕೆಯಲ್ಲಿ ಪ್ರಕಟವಾದ ಕಥೆ 'ನಾನು ಹುಚ್ಚನೇ' ಎನ್ನುವುದು. ಸಂಪಾದಕರೇ ಕಥೆಯ ಶೀರ್ಷಿಕೆಯ ಕೆಳಗಡೆ ಉಲ್ಲೇಖಿಸಿದಂತೆ ಎಳೆಯರ ಕಥೆಗಳಲ್ಲಿ ಕಾಣುವ 'ಎಳೆತನ' ಈ ಎಳೆಯರ ಕಥೆಯಲ್ಲಿ ಕಾಣದಿರುವುದೇ ಅದರ ವಿಶೇಷ' ಈ ಹೇಳಿಕೆಯು ಪೂರ್ಣಮಟ್ಟದಲ್ಲಿ ಒಗ್ಗಿಕೊಳ್ಳುವ ಕಥೆ ಇದಾಗಿದೆ.

ರಾಮ ಐತಾಳರೆಂಬವರ ಮನೆಯಲ್ಲಿ ಒಕ್ಕಲಾಗಿ ಕೆಲವು ವರ್ಷ ವಾಸ್ತವ್ಯವಿದ್ದು, ತದನಂತರದಲ್ಲಿ ಮನೆ ಮಾಲಿಕರಾದ ರಾಮ ಐತಾಳರು ಮೈಸೂರಿನಿಂದ ಹಿಂದಿರುಗಿದ ಅನಂತರ ನಿರೂಪಕನು ರಾಮ ಐತಾಳರಿಗೇ ತಾವಿದ್ದ ಮನೆಯನ್ನು ಬಿಟ್ಟುಕೊಡುತ್ತಾರೆ. ಸ್ವಂತ ಮನೆ ಇಲ್ಲದ ನಿರೂಪಕ ಸಂಸಾರ ಸಾಗಿಸಲು ಪಡುವ ಕಷ್ಟ ಹೊಟ್ಟೆ ಹೊರೆದುಕೊಳ್ಳಲು ಅಲ್ಲಿ ಇಲ್ಲಿ ಊಟಕ್ಕೆ ಹೋಗಿ ಬದುಕುವ ಬವಣೆ ಈ ಕಥೆಯಲ್ಲಿ ಚಿತ್ರಿತಗೊಂಡಿದೆ.

ಯಾವುದೇ ಜಾತಿ ಇರಲಿ ಬಡತನದಲ್ಲಿದ್ದ ವ್ಯಕ್ತಿಗೆ ಸಮಾಜದಲ್ಲಿ ಯಾರೂ ಗೌರವ ಕೊಡಲಾರರು. ಬಡತನಕ್ಕೆ ಯಾವುದೇ ಒಂದು ಜಾತಿ ಹೊರತಲ್ಲ. ಮೇಲು ಜಾತಿಯಲ್ಲಿ ಹುಟ್ಟಿದ ನಿರೂಪಕ ಒಂದು ದಿನ ತನ್ನ ಮನೆಯ ಮಾರ್ಗದಲ್ಲೇ ಇರುವ ರಾಮ ಐತಾಳರ ಮನೆಗೆ ಹೋದಾಗಲೂ ಅಲ್ಲಿ ನಿರೂಪಕನನ್ನು ನಡೆಸಿಕೊಳ್ಳುವ ರೀತಿಯಿಂದಾಗಿ 'ಜಾತಿ' ಎನ್ನುವುದು ಗೌರವ ಸಂಪಾದಿಸುವ ಅರ್ಹತೆಯನ್ನು ಕೊಡಲಾರದು ಎಂಬ ಸಂಗತಿ ತಿಳಿಯುತ್ತದೆ ಅಪರಾತ್ರಿಯಲ್ಲಿ ರಾಮ ಐತಾಳರ ಮನೆಯಿಂದ ತನ್ನ ಸ್ವಂತ ಗುಡಿಸಲಿಗೆ ಬರುವಾಗ ಐತಾಳರ ಮನೆಯ ಮಕ್ಕಳೂ ಆತನನ್ನು ಅತ್ಯಂತ ಅಸಡ್ಡೆಯಿಂದ ನಡೆಸಿಕೊಳ್ಳುವ ವಿವರಗಳು ಕಥೆಯಲ್ಲಿ ಸಿಗುತ್ತದೆ. ಸಾಹಿತ್ಯದ ಬರಹಗಳು ಆ ಕಾಲದ ಸಾಮಾಜಿಕ ಬಡತನವನ್ನು ಹೇಗೆ ಕಟ್ಟಿಕೊಡಬಲ್ಲುದು ಎಂಬುದಕ್ಕೆ ಈ ಕಥೆ ಅಪೂರ್ವ ಸಾಕ್ಷಿ.

ಅಸಗತ್ಯವಾಗಿ ಐತಾಳರ ಮನೆಗೆ ತೆರಳಿದ ನಿರೂಪಕನಿಗೆ ಅತ್ಯಂತ ತಿರಸ್ಕಾರದಿಂದ ರಾತ್ರಿ ಊಟವನ್ನು ನೀಡಿದರೂ ಐತಾಳ ದಂಪತಿಗಳು ಊಟ ಮುಗಿಸಿ ನಿರೂಪಕನಿಗೆ ಉಳಿದುಕೊಳ್ಳುವಂತೆ ಹೇಳದೇ ಅಲ್ಲಿಂದ ಸಾಗ ಹಾಕುವ ಚಿತ್ರಣ ಕಥೆಯಲ್ಲಿ ಮನೋಜ್ಞವಾಗಿ ನಿರೂಪಿತಗೊಂಡಿದೆ. ರಾತ್ರಿ ಆತನೇ ಮಾಡಿದ ಸೋಗೆಯ ಪಂಜಿನಲ್ಲಿ ನಿರೂಪಕ ಅಲ್ಲಿಂದ

ತೆರಳುವಾಗ ಮನೆಯ ಮಕ್ಕಳಲ್ಲಿ ಐತಾಳರು "ಅವರನ್ನು ಸ್ವಲ್ಪ ದೂರ ಕಳುಹಿಸಿಕೊಟ್ಟು ಬನ್ನಿ" ಎನ್ನುತ್ತಾರೆ. (ರಾತ್ರಿ ಉಳಿದುಕೊಳ್ಳಿ ಎಂದು ಉಪಚಾರ ಮಾಡದ ತನ್ನ ಮೇಲಿನ ಸಿಟ್ಟಿಗಾಗಿ ಮನೆಯ ಹೊರಗೆ ಎಲ್ಲಾದರೂ ಬೆಂಕಿ ಕೊಟ್ಟಾರೆಂಬ ಭಯ ಐತಾಳರಿಗಿದೆ.) ದಕ್ಷಿಣ ಕನ್ನಡ ಜಿಲ್ಲೆಯ ಸಂಸ್ಕೃತಿಯನ್ನು ಬಿಂಬಿಸುವ ಒಂದು ಕಥೆ ಎನ್ನುವುದನ್ನು ಈ ಕೆಳಗಿನ ಅಂಶಗಳಿಂದ ಗಮನಿಸಬಹುದು.

1) ವಾಸಕ್ಕಾಗಿ ಮನೆಯನ್ನು ಬಿಟ್ಟುಕೊಟ್ಟು ಮನೆಯ ಮಾಲಿಕ ಮನೆ ಬೇಕೆಂದು ಬಯಸಿದಾಗ ಮನೆಯನ್ನು ತೆರವು ಮಾಡುವ ಪದ್ಧತಿ.
2) ಜಾತಿಗೊಂದರಂತೆ ದೇವಸ್ಥಾನವಿದ್ದು, ಆ ದೇವಸ್ಥಾನದ ಪಾರಂಪರಿಕ ಪೂಜೆ, ಉತ್ಸವಗಳಿಗೆ ಆ ಜಾತಿಯ ಸಂಬಂಧಿಸಿದ ಜನರೇ ಮುಖ್ಯಭಾಗೀದಾರರಾಗಿರುವುದು. ಉದಾಹರಣೆಗೆ ಬಾರಕೂರು ಶ್ರೀ ಕಾಳಿಕಾಂಬಾ-ವಿಶ್ವಕರ್ಮ ಅಥವಾ 'ಆಚಾರಿ' ಜಾತಿಯವರಿಗೆ ಸಂಬಂಧಿಸಿದ್ದಾದರೆ, ಬಗ್ವಾಡಿ ಮಹಿಷಮರ್ದಿನಿ-ಮೊಗವೀರ ಜಾತಿಯವರಿಗೆ ಸಂಬಂಧಿಸಿದ್ದಾಗಿದೆ. ಕೋಟದ ಹಂದಟ್ಟು ವಿಷ್ಣುಮೂರ್ತಿ ದೇವಸ್ಥಾನ ಹಂದೆ ಮನೆತನದವರಿಗೆ ಸಂಬಂಧಿಸಿದ್ದಾಗಿದೆ. ಹಾಗೆಯೇ ಕೋಟದ ಅಮೃತೇಶ್ವರಿ ದೇವಸ್ಥಾನ-ಜೋಗಿ ಜನಾಂಗದವರಿಗೆ ಸಂಬಂಧಿಸಿದ್ದಾಗಿದೆ.
3) ರಾತ್ರಿ ಕಾಲದಲ್ಲಿ ಊರಿಂದೂರಿಗೆ ಸಂಚಾರಕ್ಕೆ ಹೋಗುವ ಕಾಲದಲ್ಲಿ ತೆಂಗಿನಗರಿಯ ಸೂಟೆಯನ್ನು ಮಾಡಿ ಅದನ್ನು ಉರಿಸಿಕೊಂಡು ಆದರ ಬೆಳಕಿನಲ್ಲಿ ಹೋಗುವ ಪರಿಪಾಠವಿತ್ತು.
4) ದೇವಸ್ಥಾನದಲ್ಲಿ ನಡೆಯುವ ವಿಶೇಷ ಉತ್ಸವದ ಊಟಕ್ಕೆ ಹೋಗುವಾಗ ಅಥವಾ ಸಂಬಂಧಿಕರ ಮನೆಯ ವಿಶೇಷದ ಊಟಕ್ಕೆ ಹೋಗುವಾಗ ಸಾಮಾನ್ಯವಾಗಿ ಬ್ರಾಹ್ಮಣ ದಿರಿಸುಗಳು ಹೀಗಿರುತ್ತವೆ. ಕಥೆಯಲ್ಲಿ ನಿರೂಪಕ ಹೇಳುವಂತೆ "ನನ್ನ ಉಡುಪುಗಳು ಇಷ್ಟೇ ಒಂದು ಮೊಣಕಾಲಿನವರೆಗೆ ಬರುವ ಕಚ್ಚೆ ಮೇಲೆ ಹೊದ್ದುಕೊಳ್ಳಲು ಒಂದು ವಲ್ಲಿ ಮತ್ತು ಬಗುಲಲ್ಲಿ ಒಂದು ಚೀಲ. ಇದರಲ್ಲಿ ನನ್ನ ಅಗತ್ಯದ ಸಾಮಾನುಗಳನ್ನು ಇಟ್ಟುಕೊಳ್ಳುತ್ತೇನೆ."(ಸಂ: ಹರಿದಾಸ ಭಟ್ಟ ಕು.ಶಿ. ಪ್ರೊ, 1969-70, ಪು-14)

**ಮೂರನೇ ಕಾಲಘಟ್ಟದಲ್ಲಿ ಪ್ರಕಟಗೊಂಡ ವಾರ್ಷಿಕ ಸಂಚಿಕೆಗಳಲ್ಲಿ ಅಭಿವ್ಯಕ್ತಿಗೊಂಡ ಸಾಹಿತ್ಯ ಬರಹಗಳ ಸಂಕ್ಷಿಪ್ತ ಅವಲೋಕನ:**

1981ರ ಸಂಚಿಕೆಯಲ್ಲಿ ಪ್ರಕಟವಾದ ಪದ್ಮರಾಜ್ ಹೆಗ್ಡೆ ಎಂಬ ತೃತೀಯ ಬಿ.ಎ. ವಿದ್ಯಾರ್ಥಿ ಬರೆದ 'ಫೋರೆಸ್ಟ್ ಬಂಗ್ಲೆ' ಎಂಬ ಕಥೆ 'ಸಣ್ಣಕಥೆ ಎಂದರೇನು?' ಎಂಬ ಪ್ರಶ್ನೆಗೆ ಉತ್ತರ ನೀಡುವಂತಿದೆ. ಕಥಾನಾಯಕನು ತನ್ನ ತಾಯಿ ಹಾಗೂ ಪತ್ನಿ ಸೀತಾಳನ್ನು ಮನೆಯಲ್ಲಿ ಬಿಟ್ಟು ಸಮೀಪದ ದೂರದ ಮಾಗುಂಡಿ ಎಂಬಲ್ಲಿಗೆ ವರ್ಗವಾಗಿ ಕರ್ತವ್ಯಕ್ಕಾಗಿ ತೆರಳುವನು. ಫೋರೆಸ್ಟ್ ಗಾರ್ಡ್ ಆದ ಈತನಿಗೆ ಈತನ ಮೇಲಧಿಕಾರಿ ಶ್ರೀಮಂತ ಗೌಡರ ಪರಿಚಯ ಮಾಡಿಸುವನು. ಅದೇ ದಿನ ರಾತ್ರಿ ಯಾರೋ ಓಡಾಡಿದ ಸದ್ದು... ಮನೆಗೆ ಕಲ್ಲು ಎಸೆದಂತಾಗುವುದು... ಮುಂತಾದ ವಿಚಿತ್ರ ಅನುಭವಕ್ಕೆ ಕಥಾನಾಯಕ ಒಳಗಾಗುತ್ತಾನೆ. ಕುತೂಹಲದಿಂದ ತನ್ನ ಚಿಕ್ಕ ಕೈಬೆಳಕಿನಿಂದ ನೋಡುವಾಗ, ಗೌಡರ ಆಳುಗಳು ಮರಕಡಿಯುವ ದೃಶ್ಯವನ್ನು ಕಾಣುವನು. ಬಾಗಿಲು

ತೆಗೆಮ ಹೊರಗೆ ಹೋಗುತ್ತಿದ್ದಂತೆಯೇ ಗೌಡರು ಸಿಡಿಸಿದ ಗುಂಡು ತಗಲಿ ಸಾಯುತ್ತಾನೆ. ಇದು ಕಥೆಯ ಸಂಕ್ಷಿಪ್ತ ಘಟನೆ ಅಥವಾ ಕಥಾವಸ್ತು. ವ್ಯವಸ್ಥೆಯನ್ನು ಎದುರುಹಾಕಿಕೊಳ್ಳದ 'ರೇಂಜರ್'-ಗೌಡರ ಸ್ನೇಹದಿಂದ ಸುಖ ಸಂತೋಷದಿಂದ ಕಾಲಕಳೆಯುತ್ತಿರಲು ಕಾರಣವೇನೆನ್ನುವುದು ಓದುಗರಿಗೆ ಕಥೆಯ ಕೊನೆಯಲ್ಲಿ ಅರ್ಥವಾಗುತ್ತದೆ. ವ್ಯವಸ್ಥೆಯ ನಾನಾ ಮಜಲುಗಳು ಹೇಗಿವೆ? ವಾಸ್ತವದೊಂದಿಗೆ ರಾಜಿ ಬೇಕೆ? ಅಥವಾ ವಾಸ್ತವದೊಂದಿಗೆ ಸಂಘರ್ಷ ಬೇಕೆ? ಎಂಬ ಈ ಪ್ರಶ್ನೆಗಳು ಸದಾ ಸಂವೇದನಾಶೀಲನೊಬ್ಬನನ್ನು ಕಾಡುವ ಪ್ರಶ್ನೆಗಳಾಗಿವೆ. ಹದಿಹರೆಯದ ವಯಸ್ಸನ್ನು ಇನ್ನೂ ದಾಟದ ವಿದ್ಯಾರ್ಥಿಗೆ ಈ ವಾಸ್ತವ ಅರ್ಥವಾಗಿದೆ ಎಂದರೆ ಆತನ 'ಪ್ರತಿಭೆ' ಬಗ್ಗೆ ಗೌರವ ಮೂಡುತ್ತದೆ.

ವಿದ್ಯಾರ್ಥಿಯ ನಿರೂಪಣಶೈಲಿ ಹೃದ್ಯವಾಗಿದ್ದು, ಕಥಾನಾಯಕ ಸೋಮಪ್ಪನ (ಫಾರೆಸ್ಟ್ ಗಾರ್ಡ್) ಒಂಟಿತನದಲ್ಲಿ ಸಂಜೆಯ ಭಾವಗಳು ಗರಿಬಿಚ್ಚುವ ಬಗೆ ಹೀಗೆ ಉಲ್ಲೇಖಗೊಂಡಿದೆ. "ಸಂಜೆಯ ದೃಶ್ಯವು ಸುಂದರವಾಗಿತ್ತು. ಸೂರ್ಯನ ಹೊಂಗಿರಣ, ಕಾಡಿನ ಹಸಿರು ಎಲೆಗಳ ಮೇಲೆ ಬಿದ್ದು, ಎಲೆಗಳೆಲ್ಲಾ ಥಳಥಳಿಸುತ್ತಿದ್ದವು. ಚಳಿಗಾಳಿ ಬೀಸುತ್ತಿತ್ತು. ಹಕ್ಕಿಗಳೆಲ್ಲ ಚಿಲಿಪಿಲಿಗುಟ್ಟುತ್ತಾ ಗೂಡು ಸೇರುವ ಆತುರದಲ್ಲಿ ಹಾರಾಡುತ್ತಿದ್ದವು. ಸೂರ್ಯ ನಿಧಾನವಾಗಿ ಪಡುವಣಕ್ಕೆ ಸರಿಯುತ್ತಿದ್ದ. ಸೋಮಪ್ಪನಿಗೆ ತನ್ನ ಮನೆಯ ನೆನಪು ಬಂತು."(ಸಂ: ರಾಮದಾಸ ಪ್ರೊ., 1980–81, ಪು–17) ಕೇವಲ ಘಟನೆಗಷ್ಟೇ ಒತ್ತುಕೊಡದೇ ಘಟನೆಯ ನಡುವೆ ಪ್ರತಿಕ್ಷಣದ ಅಲ್ಲಿನ ಪರಿಸರದ ಒಳಗನ್ನು ಆತನ ಒಳಗಣ್ಣು ಗುರುತಿಸುವ ಬಗೆಯಿಂದಾಗಿ ಇದೊಂದು ಅಪೂರ್ವವಾದ ಕಥೆಯಾಗಿದೆ.

ಇಂತಹ ಕಥೆಗಳು ಇಂದಿನ ತಲೆಮಾರಿನ ವಿದ್ಯಾರ್ಥಿಗಳಿಂದ ಯಾಕೆ ಹುಟ್ಟುತ್ತಿಲ್ಲ? ಹುಟ್ಟುತ್ತಿದ್ದರೂ ಅಲ್ಲೊಂದು ಇಲ್ಲೊಂದು ಮಾತ್ರ ಯಾಕೆ? 21ನೇ ಶತಮಾನದ ನಮ್ಮ ವಿದ್ಯಾರ್ಥಿಗಳ ಭಾವಗಳು ಬತ್ತಿಹೋಗಲು ಕಾರಣ ಏನು? ಎಂಬ ಪ್ರಶ್ನೆ ಒಬ್ಬ ಸಂಶೋಧಕನಾಗಿ ಪ್ರಶ್ನೆ ಹಾಕಿಕೊಂಡು ಇದೇ ಸಂಚಿಕೆಯ ಪುಟತಿರುವುತ್ತಿದ್ದಾಗ ಸತ್ಯ ಎಸ್. ಅಂತಿಮ ಬಿ.ಕಾಂ. ವಿದ್ಯಾರ್ಥಿಯೋರ್ವ 'ಇಂದಿನ ಮಕ್ಕಳೇ ಮುಂದಿನ ಜನಾಂಗ' ಎಂಬ ವೈಚಾರಿಕ ಪ್ರಬಂಧದಲ್ಲಿ ಆತನ ಸಮಕಾಲೀನ ಯುವ ಜನಾಂಗದ ಬಗ್ಗೆ ಆತ ನೀಡುವ ವಿವರಣೆ ಹೀಗಿದೆ: "ಧನ, ಅಧಿಕಾರದ ಕೀರ್ತಿ, ಸುಖಗಳ ಆಸೆ ತೋರಿಸಿ, ವಿದ್ಯಾರ್ಥಿಗಳನ್ನು ತಪ್ಪು ಹಾದಿಗೆಳೆಯುವ ಯತ್ನ ನಮ್ಮ ನಾಯಕರೆನಿಸಿಕೊಳ್ಳುವವರಿಂದ ನಡೆಯುತ್ತಿದೆ...... ಮಕ್ಕಳ ಗುಣನಡತೆ ತಿದ್ದುವ ಕಾರ್ಯ ಒಂದೋ ಹೆತ್ತವರಿಂದಾಗಬೇಕು. ಇಲ್ಲ ಎಂದರೆ ಗುರುಗಳಿಂದಾಗಬೇಕು. ಆದರೆ ಹೆತ್ತವರಾಗಲೀ, ಅಧ್ಯಾಪಕರಾಗಲೀ ಅಷ್ಟಾಗಿ ಗಮನ ಹರಿಸುತ್ತಿಲ್ಲ. ಹೀಗಿರುವಾಗ ವಿದ್ಯಾರ್ಥಿಗಳಲ್ಲಿ ಶಿಸ್ತು, ವಿನಯ, ಸತ್ಯಪ್ರಿಯತೆ, ಪರೋಪಕಾರ, ಕ್ಷಮೆ, ತ್ಯಾಗ ಮುಂತಾದ ಆದರ್ಶಗಳು ಹುಟ್ಟಿ ಬೆಳೆಯುವುದಾದರೂ ಎಂತು?"(ಪೂರ್ವೋಕ್ತ, ಪು–37) ಹೀಗೆ ಪ್ರಶ್ನಿಸುವ ಮೂಲಕ ಸಮಕಾಲೀನ ವಾಸ್ತವದ ಕುರಿತು ವಿವರಣೆ ನೀಡಿದ್ದಾನೆ.

1997–98ನೇ ಶೈಕ್ಷಣಿಕ ವರ್ಷದ ವಾರ್ಷಿಕ ಸಂಚಿಕೆಯು ಇಂಗ್ಲಿಷ್, ಕನ್ನಡ, ಹಿಂದೀ ಮೂರೂ ಭಾಷೆಗಳ ಲೇಖನಗಳಿಂದ ಕೂಡಿದ್ದು, ಕನ್ನಡ ವಿಭಾಗದಲ್ಲಿ ವೈಚಾರಿಕ ಬರಹಗಳು, ವಿಮರ್ಶಾ ಬರಹಗಳು, ಲಲಿತ ಪ್ರಬಂಧಗಳು ಮತ್ತು ಎರಡು ಸಣ್ಣ ಕಥೆಗಳು, ಅನುಭವ ಬರಹಗಳು ಹಾಗೂ ಕವನಗಳು– ಎಂಬೀ ಭಿನ್ನ ಬಗೆಯ ಸಾಹಿತ್ಯ ಪ್ರಕಾರಗಳಿಗೆ

ಸಂಚಿಕೆಯಲ್ಲಿ ಅವಕಾಶ ನೀಡಲಾಗಿದೆ. 'ಕಣ್ಮರೆಯಾದ ಕರುಣಾಮಯಿ ಮದರ್ ಥೆರೆಸಾ' ಎನ್ನುವುದು ಪ್ರಥಮ ಬಿ.ಕಾಂ. ವಿದ್ಯಾರ್ಥಿನಿ ಕೀರ್ತಿ ಕುಮಾರಿಯ ಒಂದು ವ್ಯಕ್ತಿಚಿತ್ರದ ಲೇಖನವಾಗಿದೆ. ನಾನಾರೀತಿಯ ಸೇವೆಗಳಲ್ಲಿ ಮುಂದುವರಿದು (ಸಾಮಾಜಿಕ, ವೈದ್ಯಕೀಯ, ಆರ್ಥಿಕ, ಶೈಕ್ಷಣಿಕ) ದೇಶದ ಸಾರ್ವಜನಿಕ ಸಂಸ್ಥೆ, ಸರಕಾರಗಳಿಂದ ಪುರಸ್ಕಾರವನ್ನು ಪಡೆದು, ಎಲ್ಲಾ ಪ್ರಶಸ್ತಿಗಳಿಗಿಂತಲೂ ಶ್ರೇಷ್ಠವಾದ ನೋಬೆಲ್ ಪ್ರಶಸ್ತಿಯನ್ನು ಗಳಿಸಿದ ಮದರ್ ಥೆರೆಸಾರ ವ್ಯಕ್ತಿಚಿತ್ರವನ್ನು ಚೆನ್ನಾಗಿ ನಿರೂಪಿಸಲಾಗಿದೆ.

ಕಾಲೇಜಿನಲ್ಲಿ ನಡೆಸಲಾದ ಸಾಹಿತ್ಯಚಟುವಟಿಕೆಗಳಿಂದ ಪ್ರೇರಣೆ ಪಡೆದ ವಿದ್ಯಾರ್ಥಿಗಳು ತಮ್ಮ ಪದವಿಶಿಕ್ಷಣದ ಅನಂತರ ಸಾಹಿತ್ಯಚಟುವಟಿಕೆಗಳಲ್ಲಿ ತೊಡಗಿಸಿಕೊಂಡ ಬಗೆಯನ್ನು ಪ್ರಬಂಧದ ಕೊನೆಯಲ್ಲಿ **ಅನುಬಂಧ ಸಂಖ್ಯೆ 6** ರಲ್ಲಿ ಸಮಗ್ರವಾಗಿ ದಾಖಲಿಸಲಾಗಿದೆ.

## ಪೂರ್ಣಪ್ರಜ್ಞ ಕಾಲೇಜು, ಉಡುಪಿ

**ಕಾಲೇಜಿನ ಹಿನ್ನೆಲೆ:** ಆರಂಭದ 20 ವರ್ಷ ಮೈಸೂರು ವಿಶ್ವವಿದ್ಯಾನಿಲಯದ ಸಂಯೋಜನೆಗೊಳಪಟ್ಟ ಈ ಕಾಲೇಜು, 1980 ರಿಂದ ಈಚೆಗೆ ಮಂಗಳೂರು ವಿಶ್ವವಿದ್ಯಾನಿಲಯದ ಸಂಯೋಜನೆಗೆ ಒಳಪಟ್ಟು, ಸಾಹಿತ್ಯ ಚಟುವಟಿಕೆಯ ಸತ್ವ ಮತ್ತು ಪರಿಣಾಮಗಳಲ್ಲಿ ಅಗ್ರಸ್ಥಾನವನ್ನು ಪಡೆದುಕೊಂಡ ಕಾಲೇಜು ಎಂಬುದಾಗಿ ಈ ಅಧ್ಯಯನದಲ್ಲಿ ಗುರುತಿಸಲಾಗಿದೆ.

20ನೇ ಶತಮಾನದ ಸುದೀರ್ಘ 40 ವರ್ಷಗಳಲ್ಲಿ ನಡೆದ ಸಾಹಿತ್ಯಚಟುವಟಿಕೆಗಳ ಸಮಗ್ರ ಮಾಹಿತಿಯು ಕಾಲೇಜಿನ ವಾರ್ಷಿಕ ಸಂಚಿಕೆಗಳಲ್ಲಿ ದಾಖಲಾಗಿರುತ್ತದೆ. ಕಾಲೇಜಿನ ಉಪನ್ಯಾಸಕರು, ವಿದ್ಯಾರ್ಥಿಗಳು ಹಾಗೂ ಕಾಲೇಜಿಗೆ ಅತಿಥಿಗಳಾಗಿ ಆಗಮಿಸಿದ ವಿದ್ವಾಂಸರು ನೀಡಿದ ಉಪನ್ಯಾಸದ ವಿವರಗಳು ಕಾಲೇಜು ಸಂಚಿಕೆಗಳಲ್ಲಿ ಪ್ರಕಟಗೊಂಡಿರುವುದನ್ನು ಕಾಣಬಹುದಾಗಿದೆ. ಸುದೀರ್ಘ 40 ವರ್ಷಗಳಲ್ಲಿ ನಡೆದ ಸಾಹಿತ್ಯ ಚಟುವಟಿಕೆಗಳ ವಿಶ್ಲೇಷಣೆಯನ್ನು ಅಧ್ಯಯನದ ಸಮಗ್ರತೆಯ ದೃಷ್ಟಿಯಿಂದ ಮೂರು ಕಾಲಘಟ್ಟಗಳನ್ನಾಗಿ ವಿಭಾಗಿಸಿಕೊಳ್ಳಲಾಗಿದೆ.

ಈ ಮೂರೂ ಕಾಲಘಟ್ಟದಲ್ಲಿ ಕರ್ತವ್ಯ ನಿರ್ವಹಿಸಿದ ಪ್ರಾಂಶುಪಾಲರುಗಳು ಆಯೋಜಿಸಿದ ಸಾಹಿತ್ಯ ಚಟುವಟಿಕೆಗಳನ್ನು ಈ ಕೆಳಗಿನ ಶೀರ್ಷಿಕೆಯಲ್ಲಿ ಒಂದೊಂದಾಗಿ ಚರ್ಚಿಸಲಾಗಿದೆ.

**ಮೊದಲ ಕಾಲಘಟ್ಟ:** (1960–61 ರಿಂದ 1970–71)

ಈ ಕಾಲಘಟ್ಟದ 11 ವರ್ಷದ ಅವಧಿಯಲ್ಲಿ ಮೂವರು ಪ್ರಾಂಶುಪಾಲರು ಕಾಲೇಜಿನ ಜವಾಬ್ದಾರಿಯನ್ನು ನಿರ್ವಹಿಸಿರುತ್ತಾರೆ.

1. **ಪ್ರೊ. ವಿ.ಎಂ. ಇನಾಂದಾರ್ –1960–61 ರಿಂದ 1966–67 (ಏಳು ವರ್ಷ)**

2. **ಪ್ರೊ. ಶಂಕರ ಮೊಕಾಶಿ ಪುಣೇಕರ – 1967–68 (ಒಂದು ವರ್ಷ)**

3. **ಪ್ರೊ. ಗೋಪಾಲಕೃಷ್ಣ ಅಡಿಗ – 1968–69 ರಿಂದ 1970–71 (ಮೂರು ವರ್ಷ)**

1) **ಕಾಲೇಜಿನ ವಿವಿಧ ವೇದಿಕೆಗಳ ವತಿಯಿಂದ ನಡೆದ ಮೌಖಿಕ ಸಾಹಿತ್ಯ ಚಟುವಟಿಕೆಗಳಾದ ಉಪನ್ಯಾಸ, ಕಮ್ಮಟ, ಗೋಷ್ಠಿ, ಸಂವಾದ, ಚರ್ಚೆಗಳು:** ಕಾಲೇಜಿನ ನಿರ್ದಿಷ್ಟ ವಿಭಾಗದ ಅಥವಾ ಸಮಸ್ತ ವಿದ್ಯಾರ್ಥಿಗಳನ್ನು ಉದ್ದೇಶಿಸಿ ನಡೆಸುವ

ಸಭಾಕಾರ್ಯಕ್ರಮದಲ್ಲಿ ಸಂಪನ್ಮೂಲ ವ್ಯಕ್ತಿ ಅಥವಾ ಅತಿಥಿಗಳು ನೀಡುವ ಉಪನ್ಯಾಸ ಕಾರ್ಯಕ್ರಮ ಅಥವಾ ನಡೆಸಿಕೊಡುವ ಕಾರ್ಯಾಗಾರ ಕಮ್ಮಟವನ್ನು ಮೌಖಿಕಚಟುವಟಿಕೆ ಎಂದು ಪರಿಗಣಿಸಲಾಗಿದೆ.

**ಕಾಲೇಜು ವಠಾರದಲ್ಲಿ ನಡೆದ ಸಾಹಿತ್ಯ ಚಟುವಟಿಕೆಗಳ** ಕುರಿತಂತೆ ಅನುಬಂಧದಲ್ಲಿ ಉಲ್ಲೇಖಿಸಲಾದ ಈ ಕೆಳಗಿನ ಸಾಹಿತ್ಯ ಚಟುವಟಿಕೆಗಳು ಅತಿ ಮುಖ್ಯವಾಗಿದ್ದು, ಅವುಗಳ ಕುರಿತಾದ ಸಂಕ್ಷಿಪ್ತ ವಿಶ್ಲೇಷಣೆಯು ಈ ಕೆಳಕಂಡಂತಿರುತ್ತದೆ.

**ಪುರಂದರದಾಸರ ಕೀರ್ತನೆಯ ವಿಚಾರಗೋಷ್ಠಿ:** 1963-64ನೇ ಶೈಕ್ಷಣಿಕ ವರ್ಷದಲ್ಲಿ ಕಾಲೇಜಿನ ಸಾಹಿತ್ಯ ವೇದಿಕೆಯ ವತಿಯಿಂದ ನಡೆದ ಪುರಂದರದಾಸರ ಕೀರ್ತನಗೋಷ್ಠಿಯ ಸಮಗ್ರ ವಿವರಗಳು ಕಾಲೇಜು ಸಂಚಿಕೆಯಲ್ಲಿ ಪ್ರಕಟಗೊಂಡಿರುತ್ತವೆ. ದಿನಾಂಕ: 05.01.1964 ಮತ್ತು ದಿನಾಂಕ 06.01.1964ರ ಎರಡು ದಿನಗಳಲ್ಲಿ ಗೋಷ್ಠಿಯನ್ನು ನಡೆಸಿದ್ದು, ಮೊದಲ ದಿನ ಎಂ. ರಾಮಚಂದ್ರರು "ಪುರಂದರದಾಸರ ಕೀರ್ತನೆಯಲ್ಲಿ ಕವಿತ್ವ' ಎಂಬ ವಿಷಯದ ಕುರಿತಾಗಿ ಉಪನ್ಯಾಸ ನೀಡಿದರು. ಅವರು 'ಪುರಂದರದಾಸರ ಕೀರ್ತನಾಕಾಶದಲ್ಲಿ ಶ್ರೀಕೃಷ್ಣಲೀಲಾವರ್ಣನಪರವಾದ ಸುಂದರ ಕವಿತೆಗಳು ಅಲ್ಲಲ್ಲಿ ಸೂರ್ಯಚಂದ್ರರಂತಲ್ಲವಾದರೆ ನಕ್ಷತ್ರಗಳಂತೆ ಮಿಂಚುತ್ತದೆ ಎಂದು ಭಾವಿಸುವುದು ಉಚಿತವಾಗಿದೆ, ವಿವೇಕವಾಗಿದೆ"(ಸಂ: ಇನಾಂದಾರ್ ವಿ.ಎಂ. ಪ್ರೊ., 1963-64, ಪು-22) ಎಂದಿದ್ದಾರೆ.

ಇದೇ ಪ್ರಥಮ ಬಾರಿ ಎಂಬಂತೆ ಮಂಗಳೂರು ವಿಶ್ವವಿದ್ಯಾನಿಲಯ ವ್ಯಾಪ್ತಿಯೊಳಗಿನ ಕಾಲೇಜು ವಿದ್ಯಾರ್ಥಿಗಳಿಗೆ ದಿನಾಂಕ 19.12.1998ರಂದು ಒಂದು ದಿನದ ಸಾಹಿತ್ಯಸೃಷ್ಟಿ ತರಬೇತಿ ಕಾರ್ಯಕ್ರಮವನ್ನು 'ಸಾಹಿತ್ಯಸೃಷ್ಟಿಗೊಂದು ಮಾರ್ಗದರ್ಶನ' ಎಂಬ ಶೀರ್ಷಿಕೆಯಲ್ಲಿ ನಡೆಸಲಾಗಿತ್ತು. ಆ ಮಾರ್ಗದರ್ಶನ ಶಿಬಿರದ ಸಮಗ್ರ ಮಾಹಿತಿಯು ಕಾಲೇಜು ವಾರ್ಷಿಕ ಸಂಚಿಕೆ 1998-99ರ ಪುಟ ಸಂಖ್ಯೆ 26, 27, 28ರಲ್ಲಿ ಪ್ರಕಟಗೊಂಡಿರುತ್ತದೆ. ಆ ದಿನದ ಕೊನೆಯ ಗೋಷ್ಠಿ ರಂಗ ಚಟುವಟಿಕೆಯ ಕುರಿತಾಗಿದ್ದು, ಈ ಗೋಷ್ಠಿಯನ್ನು ಖ್ಯಾತ ರಂಗನಿರ್ದೇಶಕ ಸಾಹಿತಿ, ಉಪನ್ಯಾಸಕ ಬಿ. ಆರ್. ನಾಗೇಶ್ ಅವರು ನಡೆಸಿಕೊಟ್ಟರು. ಕಾಲೇಜಿನ ಪ್ರಾಧ್ಯಾಪಕಿ ಪ್ರೊ. ಮಾಧವಿ ಭಂಡಾರಿಯವರು "ಧೀಮಂತ ಸಾಹಿತಿಗಳನ್ನೇ ತನ್ನೊಡಲೊಳಗೆ ಇರಿಸಿಕೊಂಡಿದ್ದ ಹೆಗ್ಗಳಿಕೆಯುಳ್ಳ ಈ ಸಂಸ್ಥೆಯಲ್ಲಿ....... ಈಗಿನ ಲವಲವಿಕೆಯ ಈ ಕಾರ್ಯಕ್ರಮವು ಮೂಡಿಬಂತು"(ಸಂ: ನಟರಾಜ ಧೀಕ್ಷಿತ್ ಪ್ರೊ., 1998-99, ಪು-28) ಎಂದು ತಮ್ಮ ಅಭಿಪ್ರಾಯವನ್ನು ಮಂಡಿಸಿದ್ದಾರೆ.

**ಸಾಹಿತ್ಯಚಟುವಟಿಕೆಗಳಿಗೆ ಕಾಲೇಜು ನೀಡಿದ ಪ್ರೋತ್ಸಾಹ:-**

ಸಾಹಿತ್ಯಕ್ಷೇತ್ರದಲ್ಲಿ ಉನ್ನತಸ್ಥಾನವನ್ನು ಪಡೆದು, ವಿಶ್ವಸಾಹಿತ್ಯಚರಿತ್ರೆಯ ಪುಟಗಳಲ್ಲಿ ತಮ್ಮ ಹೆಸರು ದಾಖಲಿಸಿಕೊಂಡ ಟಾಲ್‌ಸ್ಟಾಯ್ ಹಾಗೂ ರವೀಂದ್ರನಾಥ ಠಾಗೋರ್ ಅವರ ಹೆಸರಿನಲ್ಲಿ ಕಾರ್ಯಕ್ರಮವನ್ನು ಆರಂಭಿಸಿ, ಪಠ್ಯಪೂರಕ ಚಟುವಟಿಕೆಗಳು ಶೈಕ್ಷಣಿಕ ಪಠ್ಯಗಳೊಂದಿಗೆ ಹೊಂದಿದ ಸಂಬಂಧವೇನು ಎಂಬುದನ್ನು ಕಾಲೇಜು ಆರಂಭಗೊಂಡ ಮೊದಲ ವರ್ಷದಲ್ಲಿಯೇ ಕಾಲೇಜಿನ ಸ್ಥಾಪಕ ಪ್ರಾಂಶುಪಾಲರು ಮನವರಿಕೆ ಮಾಡಿಕೊಟ್ಟರು. ಕಾಲೇಜಿನ ಸಾಹಿತ್ಯ ಮತ್ತು ಸಾಂಸ್ಕೃತಿಕ ಚಟುವಟಿಕೆಗಳ ಪರಂಪರೆಯ ಕುರಿತು ಪ್ರೊ. ಬಿ. ಆರ್. ನಾಗೇಶ್ ಅವರು ನೀಡುವ ವಿವರಗಳನ್ನು ಇಲ್ಲಿ ಹೀಗೆ ಸ್ಮರಿಸಿಕೊಳ್ಳಬಹುದಾಗಿದೆ. "ಪಾಠೇತರ ಚಟುವಟಿಕೆಗಳು ವಿದ್ಯಾರ್ಥಿಗಳಿಗೆ ಅಗತ್ಯವಾದ ಹೊರಕಿಂಡಿಗಳಾಗಿವೆ. ಇದರಿಂದಾಗಿ

ಎಷ್ಟೋ ವಿದ್ಯಾರ್ಥಿಗಳಿಗೆ ಲಲಿತಕಲೆಗಳಲ್ಲಿ ನಿಜವಾದ ಆಸಕ್ತಿ ಬೆಳೆಯಲು ಸಾಧ್ಯ. ಹಾಗೆ ಆಸಕ್ತಿ ಬೆಳೆಸಿಕೊಂಡು ತಮ್ಮ ಮುಂದಿನ ಜೀವನದಲ್ಲಿ ಅದೇ ಹಾದಿ ಹಿಡಿಯಬಲ್ಲ ಧೈರ್ಯಶೀಲ ಒಳತುಡಿತ ವಿದ್ಯಾರ್ಥಿಗಳಲ್ಲಿ ಉಂಟಾಗಲು ಈ ಬಗೆಯ ಕಾರ್ಯಕ್ರಮಗಳು ನೆರವಾಗಬಲ್ಲವು"(ಸಂ: ಸುಧಾಕರ ಎಂ., ಪ್ರೊ, 1993–94, ಪು–5) ಎಂದಿದ್ದಾರೆ.

**ಕಾಲೇಜು ಸಂಚಿಕೆಯ ಮೂಲಕ ಪ್ರಕಟಗೊಂಡ ಸಾಹಿತ್ಯಕ ಲೇಖನಗಳು:**

1960ನೇ ಜುಲೈ 11 ರಂದು ಮೈಸೂರು ವಿಶ್ವವಿದ್ಯಾನಿಲಯದ ಸಂಯೋಜನೆಯೊಂದಿಗೆ ಆರಂಭಗೊಂಡ ಕಾಲೇಜು 20ನೇ ಶತಮಾನದ ಸುದೀರ್ಘ 40 ವರ್ಷಗಳಲ್ಲಿ ನಡೆದ ಸಾಹಿತ್ಯ ಚಟುವಟಿಕೆಗಳ ಸಮಗ್ರ ಮಾಹಿತಿ ಕಾಲೇಜಿನ ವಾರ್ಷಿಕ ಸಂಚಿಕೆಗಳಲ್ಲಿ ದಾಖಲಾಗಿರುತ್ತದೆ. ಕಾಲೇಜಿನ ಉಪನ್ಯಾಸಕರು, ವಿದ್ಯಾರ್ಥಿಗಳು ಹಾಗೂ ಕಾಲೇಜಿಗೆ ಅತಿಥಿಗಳಾಗಿ ಆಗಮಿಸಿದ ವಿದ್ವಾಂಸರು ನೀಡಿದ ಉಪನ್ಯಾಸದ ವಿವರಗಳು ಕಾಲೇಜು ಸಂಚಿಕೆಯಲ್ಲಿ ಪ್ರಕಟಗೊಂಡಿರುವುದನ್ನು ಕಾಣಬಹುದಾಗಿದೆ. ಸುದೀರ್ಘ 40 ವರ್ಷಗಳಲ್ಲಿ ನಡೆದುಬಂದ ಸಾಹಿತ್ಯಚಟುವಟಿಕೆಗಳ ವಿಶ್ಲೇಷಣೆಯನ್ನು ಅಧ್ಯಯನದ ದೃಷ್ಟಿಯಿಂದ ಮೂರು ಕಾಲಘಟ್ಟಗಳನ್ನಾಗಿ ವಿಭಾಗಿಸಿಕೊಳ್ಳಲಾಗಿವೆ.

**ಮೊದಲ ಕಾಲಘಟ್ಟ:–**

**1960–61ನೇ ಶೈಕ್ಷಣಿಕ ವರ್ಷದಿಂದ ರಿಂದ 1970–71ನೇ ಶೈಕ್ಷಣಿಕ ವರ್ಷದ ಅವಧಿ:**

**ಎರಡನೇ ಕಾಲಘಟ್ಟ: 1971–72ನೇ ಶೈಕ್ಷಣಿಕ ವರ್ಷದಿಂದ 1987–88ನೇ ವರ್ಷಗಳ ವರೆಗಿನ ಅವಧಿ**

**ಮೂರನೇ ಕಾಲಘಟ್ಟ: 1988–89 ರಿಂದ ಈ ಶತಮಾನದ ಕೊನೆಯ ವರ್ಷ 1999–2000**ದ ವರೆಗಿನ ಅವಧಿ. ಹೀಗೆ ಮೂರು ಕಾಲಘಟ್ಟಗಳಲ್ಲಿ ಕಾಲೇಜು ಸಂಚಿಕೆಗಳ ಬರಹಗಳ ಅಧ್ಯಯನವನ್ನು ವಿಭಾಗಿಸಿಕೊಳ್ಳಲಾಗಿದೆ.

| | | | |
|---|---|---|---|
| 1. | ಮೊದಲ ಕಾಲಘಟ್ಟ | 1960–61 ರಿಂದ 1970–71 | ಪ್ರಾಂಶುಪಾಲರು: ಪ್ರೊ. ವಿ.ಎಂ. ಇನಾಂದಾರ್, (1960–61 ರಿಂದ 1966–67)<br>ಪ್ರೊ. ಶಂಕರ ಮೊಕಾಶಿ ಪುಣೇಕರ (1967–68)<br>ಪ್ರೊ. ಎಂ. ಗೋಪಾಲಕೃಷ್ಣ ಅಡಿಗ (1968–69 ರಿಂದ 1970–71) |

1960–61ರಿಂದ 1970–71ರ ಹನ್ನೊಂದು ವರ್ಷದ ಕಾಲಾವಧಿಯನ್ನು ಮೊದಲ ಕಾಲಘಟ್ಟವೆಂದು ಪರಿಗಣಿಸಲಾಗಿದೆ. ಈ ಮೊದಲ ಕಾಲಘಟ್ಟದಲ್ಲಿ ಮೇಲೆ ಉಲ್ಲೇಖಿಸಲಾದ ಮೂವರು ಪ್ರಾಂಶುಪಾಲರು ಕಾಲೇಜನ್ನು ಮುನ್ನಡೆಸಿದ್ದು, ಆ ಮೂವರು ಪ್ರಾಂಶುಪಾಲರು ಆಂಗ್ಲಭಾಷೆ ಮತ್ತು ಸಾಹಿತ್ಯದಲ್ಲಿ ನುರಿತ ಪ್ರಾಧ್ಯಾಪಕರಾಗಿದ್ದರೆಂಬುದು ವಿಶೇಷವಾಗಿ ಉಲ್ಲೇಖಿಸಬೇಕಾದ ವಿಚಾರವಾಗಿರುತ್ತದೆ. ಮೊದಲ ಕಾಲಘಟ್ಟದ ಪ್ರಾಂಶುಪಾಲರು ಕಾಲೇಜಿನಲ್ಲಿ ಆರಂಭಿಸಿದ ಸಾಹಿತ್ಯ–ಸಾಂಸ್ಕೃತಿಕ ಹಾಗೂ ಇನ್ನಿತರ ಲಲಿತಕಲಾ ಚಟುವಟಿಕೆಗಳಿಂದ ಈ ಕಾಲೇಜು ವಿಶ್ವವಿದ್ಯಾನಿಲಯ ಮಟ್ಟದಲ್ಲಿ ಗುರುತಿಸಿಕೊಳ್ಳುವುದಕ್ಕೆ ಸಾಧ್ಯವಾಯಿತು.

ಸಂಶೋಧನಾ ಪ್ರಬಂಧದಲ್ಲಿ ಅತಿವಿಸ್ತರಣೆಗೆ ಅವಕಾಶವಿಲ್ಲದಂತೆ ಮೊದಲ ಪ್ರಾಂಶುಪಾಲರ ಕಾಲಾವಧಿಯ ಆಯ್ದ ಎರಡು ಸಂಚಿಕೆಗಳ ಕೆಲವು ಮುಖ್ಯ ಸಾಹಿತ್ಯಕ ಶೀರ್ಷಿಕೆಗಳನ್ನಷ್ಟೇ ಇಲ್ಲಿ ವಿಶ್ಲೇಷಣೆಗೊಳಪಡಿಸಲಾಗಿದೆ.

**ಮೊದಲನೇ ಕಾಲಘಟ್ಟದ ಪ್ರಥಮ ಸಂಚಿಕೆ: –**

ಮೊದಲನೇ ಕಾಲಘಟ್ಟದ ಮೊದಲ ಸಂಚಿಕೆಯಾಗಿ 1960–61ನೇ ಸಾಲಿನ ಕಾಲೇಜು ಆರಂಭದ ಶೈಕ್ಷಣಿಕ ವರ್ಷದ ಸಂಚಿಕೆಯನ್ನು ಆಯ್ಕೆ ಮಾಡಿಕೊಳ್ಳಲಾಗಿದೆ. ಈ ಸಂಚಿಕೆಯಲ್ಲಿ ಆಂಗ್ಲ, ಕನ್ನಡ, ಹಿಂದಿ, ಸಂಸ್ಕೃತ ಹೀಗೆ ನಾಲ್ಕು ಭಾಷೆಗಳಲ್ಲಿ ಲೇಖನಗಳು–ಸಾಹಿತ್ಯ ಬರಹಗಳು ಪ್ರಕಟಗೊಂಡಿರುತ್ತದೆ. ಸಂಚಿಕೆಯ ಕನ್ನಡ ಸಾಹಿತ್ಯ ಬರಹಗಳನ್ನು ಪದ್ಯ ಮತ್ತು ಗದ್ಯ ಭಾಗವೆಂದು ಎರಡು ವಿಭಾಗಗಳಾಗಿ ವಿಂಗಡಿಸಿದ್ದು, ಪದ್ಯವಿಭಾಗವನ್ನು 'ಕಾವ್ಯವಿಹಾರ' ಎಂಬ ವಿಶೇಷ ಶೀರ್ಷಿಕೆಯಲ್ಲಿ ಹೆಸರಿಸಿ, ಕವನಗಳನ್ನು ಪ್ರಕಟಿಸಲಾಗಿದೆ. ಕಾಲೇಜು ವರದಿಯಲ್ಲಿ ಆ ಶೈಕ್ಷಣಿಕ ವರ್ಷದ ವಿವಿಧ ಸಂಘಟನೆಗಳ ಮೂಲಕ ನಡೆದ ಚಟುವಟಿಕೆಗಳನ್ನು ಸಂಗ್ರಹಿಸಿ ನೀಡಲಾಗಿದ್ದು, ಕನ್ನಡ ಸಂಘ ಹಾಗೂ ಲಲಿತಕಲಾ ಸಂಘದ ಚಟುವಟಿಕೆಯ ವರದಿಗಳು ಆಂಗ್ಲಭಾಷೆಯಲ್ಲಿಯೇ ದಾಖಲಾಗಿರುವುದು ಕಂಡುಬರುತ್ತವೆ. ಪ್ರಾಂಶುಪಾಲರಾಗಿದ್ದ ಪ್ರೊ. ವಿ.ಎಂ. ಇನಾಂದಾರ್ ಅವರ 'ಕಾದಂಬರಿಕಾರನ ದೃಷ್ಟಿಕೋನ' ಎಂಬ ಗದ್ಯಪ್ರಬಂಧವು ಕಾಲೇಜಿನ ಪ್ರಥಮ ಸಂಚಿಕೆಯಲ್ಲಿ ಪ್ರಕಟಗೊಂಡಿದ್ದು, ಇದರಿಂದ ಸಂಚಿಕೆಯ ಮೌಲ್ಯವು ಹೆಚ್ಚಿದೆ ಎನ್ನಬಹುದು.

**'ಸುಪ್ರಭಾತ'**: ವಿಠಲ ಉಪಾಧ್ಯಾಯ ಎಂಬ ಪಿಯುಸಿ ವಿದ್ಯಾರ್ಥಿಯು ಈ ಕವನದಲ್ಲಿ ಅರುಣೋದಯದಲ್ಲಿ ಕಂಗೊಳಿಸುವ ಪ್ರಕೃತಿದೇವಿಯ ಸೊಗಸನ್ನು ವರ್ಣಿಸಿದ್ದಾನೆ. ಆದಿಪ್ರಾಸಸಹಿತವಾದ ಈ ಕವನವು ಎಂಟು ಚೌಪದಿಗಳ ಸುದೀರ್ಘ ಕವನವಾಗಿದೆ. ಅರುಣೋದಯದ ಶುಭಮುಹೂರ್ತದಲ್ಲಿ ಉಷೆ ಇಳೆಗಿಳಿಯುವ ಸಂದರ್ಭ ಹೀಗಿದೆ.

"ಶುಭ್ರವಸನವನುಟ್ಟು ಓಡೋಡಿ ಬರುತಿಹಳು... ।------------------------।

ಶುಭ್ರವೇ ಮೈತಳೆದು ಸ್ತ್ರೀರೂಪವನು ಧರಿಸಿ । ಅಭ್ರದಿಂ ಈ ಭೂಮಿಗಿಳಿದು ಬಂದಿಹಳು"(ಸಂ: ಇನಾಂದಾರ್ ವಿ.ಎಂ. ಪ್ರೊ., 1960–61, ಪು–3)

ಎಂದು ಅರುಣೋದಯದ ಉಷೆಯನ್ನು ಹೆಣ್ಣಿನೊಂದಿಗೆ ಸಮೀಕರಿಸಿ ಆಕೆಯನ್ನು ಶುಭ್ರಳೂ, ಗಂಭೀರೆಯೂ, ಪ್ರಸನ್ನಳೂ ಎಂದು 'ಸರಸ್ವತಿ'ಯು ಧರೆಗಿಳಿವಳು ಎಂಬ ಕಲ್ಪನೆಯನ್ನು ಓದುಗರಲ್ಲಿ ಒಡಮೂಡಿಸಿರುವುದನ್ನು ಕಾಣಬಹುದು.

**ಕಾಡು ಮಲ್ಲಿಗೆ:** ಈ ಶೀರ್ಷಿಕೆಯ ಕವನದಲ್ಲಿ ನಿರ್ಜನಾರಣ್ಯದಲ್ಲಿ ತಾನಾಗಿ ಅರಳಿ–ತನ್ನಷ್ಟಕ್ಕೇ ತಾನು ಬಾಡಿಹೋಗುವ ಹೂವಿನ ನಿಸ್ವಾರ್ಥ ಬದುಕು ಅರಳಿರುವುದನ್ನು ಕಾಣಬಹುದು. ಕೆಲವು ಸ್ವಾರ್ಥಿಗಳು ಇಂತಹ ಹೂವಿಗೆ ಕೈಯಿಕ್ಕಿ ಘಾಸಿಗೊಳಿಸಿದಾಗ ಮನಸ್ಸಿಗೆ ಆಗುವ ನೋವನ್ನು ವಿದ್ಯಾರ್ಥಿ ಕವಿಯು ಇಲ್ಲಿ ಚಿತ್ರಿಸಿದ್ದಾನೆ.

"ಇನಿತೇಕೆ ಸಂಕೋಚ, ಮುಳ್ಳುಗಿಡ ಮರೆಯಲ್ಲಿ । ತನುವ ಬಚ್ಚಿಡುವಿಯೇತಕೆ ಕಾಡುಮಲ್ಲಿ? (ಪೂರ್ವೋಕ್ತ, ಪುಟ 4)–ಎಂದು ಹೂವಿನ ಸಂಕೋಚನ್ನು ಕವಿ ಪ್ರಶ್ನಿಸುತ್ತಾನೆ. ಮತ್ತು ಅದೇ ಹೂವಿಗೆ ಕೈಯಿಕ್ಕ ಬರುವ ಕೆಲವು ಅರಸಿಕರ ಮನಸ್ಥಿತಿಗಾಗಿ ಕವಿಹೃದಯ ಇಲ್ಲಿ ಹೀಗೆ ಮರುಗಿದೆ:

'ಐಸೆ ಬಳಿಕೇನು ಜಗ ನಿನ್ನ ನೋಡದು ಅಲ್ಲಿ । ಘಾಸಿಯಾಗಿಹುದೆನ್ನೆದೆಯು ನಿನ್ನ ಕಂಡಿಲ್ಲಿ.' (ಪೂರ್ವೋಕ್ತ., ಪುಟ 4) –ವಿದ್ಯಾರ್ಥಿ ಕವಿಯು ತನ್ನ ಮನಸ್ಸಿನಲ್ಲಿ ಒಡಮೂಡಿದ ಪ್ರತಿಕ್ರಿಯೆಯನ್ನು ಇಲ್ಲಿ ಅಭಿವ್ಯಂಜಿಸಿರುವುದನ್ನು ಕಾಣಬಹುದು.

ಒಟ್ಟಿನಲ್ಲಿ ಸಂಚಿಕೆಯಲ್ಲಿ ಪ್ರಕಟವಾದ 9 ಪ್ರಬಂಧಗಳಲ್ಲಿ ಹರಟೆ, ಮಾಹಿತಿ ಲೇಖನ, ಸಣ್ಣಕಥೆ, ಸಾಹಿತ್ಯ ವಿಮರ್ಶೆ, ವೈಚಾರಿಕ ಲೇಖನ ಎಂಬ ಈ ಎಲ್ಲಾ ಪ್ರಕಾರಗಳಿಗೂ ಅವಕಾಶ ನೀಡಿರುವುದನ್ನು ಗಮನಿಸಬಹುದಾಗಿದೆ.

**ಮೊದಲ ಕಾಲಘಟ್ಟದ ಅಧ್ಯಯನದ 2ನೇ ಸಂಚಿಕೆಯಾಗಿ ಆಯ್ಕೆ ಮಾಡಿಕೊಂಡ(ಸಂಪುಟ 8) ಸಂಚಿಕೆ ವರ್ಷ,1967–68ರ ವಿಶೇಷ ವೈಶಿಷ್ಟ್ಯಗಳು: (ಪ್ರ.ಸಂಪಾದಕರು–ಡಾ. ಶಂಕರ ಆರ್. ಮೊಕಾಶಿ ಪುಣೇಕರ್)**

ಮೊದಲ ಕಾಲಘಟ್ಟದ ಎರಡನೇ ಪ್ರಾಂಶುಪಾಲರಾಗಿ 1967–68ನೇ ಶೈಕ್ಷಣಿಕ ವರ್ಷದಲ್ಲಿ ಕಾಲೇಜನ್ನು ಮುನ್ನಡೆಸಿದವರೇ ಡಾ. ಶಂಕರ ಆರ್. ಮೊಕಾಶಿ ಪುಣೇಕರ್. ಇವರ ಒಂದು ವರ್ಷಾವಧಿಯ ಸಂದರ್ಭದ ಕಾಲೇಜು ಸಂಚಿಕೆಯ ಮುಖ್ಯ ಶೀರ್ಷಿಕೆಗಳನ್ನು ಈ ಕೆಳಗಿನಂತೆ ವಿಶ್ಲೇಷಣೆಗೊಳಪಡಿಸಲಾಗಿದೆ. ಸಂಚಿಕೆಯಲ್ಲಿ ಕಥಾಕುಂಜ ಎಂಬ ಶೀರ್ಷಿಕೆಯಲ್ಲಿ 12 ಸಣ್ಣ ಕಥೆಗಳು ಪ್ರಕಟವಾಗಿದ್ದು, 'ತಲೆಯಾಳುಗಳಿಗೆ' ಎಂಬ ಶೀರ್ಷಿಕೆಯಲ್ಲಿ ಬೇರೆ ಬೇರೆ ಮಾದರಿಯ 5 ಪ್ರಬಂಧಗಳಿವೆ. 'ಕಾವ್ಯವಿಹಾರ' ಎಂಬ ಪದ್ಯವಿಭಾಗದಲ್ಲಿ ಎಂಟು ಕವನಗಳಿದ್ದು, ಎಲ್ಲ ಕವನಗಳೂ ವಿದ್ಯಾರ್ಥಿಗಳ ಸಾಹಿತ್ಯದ ಬಗೆಗಿರುವ ವಿಶೇಷವಾದ ಆಸಕ್ತಿಯನ್ನೂ, ಅವರ ಕಾವ್ಯಪ್ರತಿಭೆಯನ್ನೂ ಕಾವ್ಯದ ಮೂಲಕ ಸಾಮಾಜಿಕ ಕಳಕಳಿಯನ್ನು ಅಭಿವ್ಯಂಜಿಸಿದಂತಿದೆ.

ಸಣ್ಣಕಥಾ ಶೀರ್ಷಿಕೆಯಲ್ಲಿ ಉಲ್ಲೇಖಿಸಬೇಕಾದ ಮುಖ್ಯಕಥೆ ಅಂತಿಮ ಬಿ.ಕಾಂ. ಯು.ಎಸ್. ಮಂಜುನಾಥ ಬಲ್ಲಾಳ ಎಂಬ ವಿದ್ಯಾರ್ಥಿಯ **'ನೊಂದ ಜೀವಿ'** ಎಂಬ ಶೀರ್ಷಿಕೆಯದಾಗಿದೆ. ಆದರೆ ಸಂಶೋಧನ ಪ್ರಬಂಧವು ಪುಟಗಳ ಮಿತಿಗೊಳಪಟ್ಟಿರುವುದರಿಂದ ಈ ಕಥೆಯ ಕುರಿತಂತೆ ವಿಮರ್ಶಾತ್ಮಕ ವಿಶ್ಲೇಷಣೆಗೆ ಅವಕಾಶವನ್ನು ನೀಡಿರುವುದಿಲ್ಲ.

**'ತಲೆಯಾಳುಗಳಿಗೆ'** ಎಂಬ ಶೀರ್ಷಿಕೆಯಲ್ಲಿ 5 ಬೇರೆ ಬೇರೆ ಪ್ರಬಂಧಗಳಿದ್ದು ಇದರಲ್ಲಿ 'ಅಪರೂಪದ ವ್ಯಕ್ತಿ ರಾಮಯ್ಯ ಮಾಸ್ಟ್ರು' ಎಂಬ ಪ್ರಬಂಧದಲ್ಲಿ ತನ್ನ ಲಾಭಕ್ಕಾಗಿ ಯಾವುದೇ ಮಟ್ಟದಲ್ಲಾದರೂ ವರ್ತಿಸುವ ಲಂಪಟ ವ್ಯಕ್ತಿಚಿತ್ರವನ್ನು ನಿರೂಪಿಸಲಾಗಿದೆ.

ಕಾವ್ಯವಿಹಾರ ಎಂಬ ಗುಂಪಿನಲ್ಲಿ 8 ಕವನಗಳಿದ್ದು ಕೆಲವು ಕವನಗಳ ಸ್ವಾರಸ್ಯವನ್ನು ಈ ಕೆಳಗೆ ವಿಶ್ಲೇಷಿಸಲಾಗಿದೆ.

'ಮಸಣವದು ಕರೆದಿತ್ತು....' ಎಂಬ ಶೀಷಿಕೆಯ ಕವನದಲ್ಲಿ ಕವಿ ಮಸಣದ ಸಂದೇಶವನ್ನು ಕಿವಿಗೊಟ್ಟು ಆಲಿಸುತ್ತಿದ್ದಾನೆ. ಮಸಣವು ಕವಿಯಲ್ಲಿ ಹೇಳಿಕೊಂಡಂತೆ ಶ್ಮಶಾನಭೂಮಿಗೆ ಎಲ್ಲರೂ ಬರಲೇಬೇಕು. ಯಾರೂ ಈ ಭೂಮಿಯಲ್ಲಿ ಶಾಶ್ವತರಲ್ಲ. ಭೂಮಿಗೆ ಬರಲು ಇಬ್ಬರ ಪ್ರಯತ್ನ, ಮಸಣಕ್ಕೆ ಬರಲು ನಾಲ್ಕು ಜನರ ಸಹಾಯ, ಅಗ್ನಿಗೆ ಆಹುತಿಯಾಗುವ ಸಮಯದಲ್ಲಿ ಯಾವ ಪೋಷಾಕಿನ ಸಂಭ್ರಮವೂ ಬೇಕಿಲ್ಲ. ಬೇರೆಯವರ ರಕ್ತ ಹೀರಿ ಬದುಕಿದವನಿಗೆ ಮುಂದೊಂದು ದಿನ ಗೋಳುತಪ್ಪಿದ್ದಲ್ಲ. ಹದವರಿತು ನಡೆದಲ್ಲಿ ಸುಖವಿದೆ. ಎಂಬ ಸಂದೇಶವನ್ನು ನೀಡಿದಂತೆ ಕವಿಗೆ ಕೇಳಿಬರುತ್ತದೆ. 'ಹೆಣ್ಣು' ಎಂಬ ಕವನದಲ್ಲಿ ಹೆಣ್ಣು ತಾಯಿಯಾಗಿ ತನ್ನ ಮಕ್ಕಳನ್ನು ದೇವರಂತೆ ಪೊರೆಯುವ ಬಗೆಯನ್ನು ಕವನದಲ್ಲಿ ವಿಶ್ಲೇಷಿಸಲಾಗಿದೆ.

'ಮುದ್ದು ಕಂದನ ಕೂಗು ಕೇಳಲೋಡುತ ಬಂದು । ಮುದ್ದಿಕ್ಕಿ ಮೊಲೆಯೂಡಿದೆ, ಅಮ್ಮ ಎಂದು ॥

ಮುದ್ದು ಹೆಜ್ಜೆಗಳಿಂದೆ ಬಿದ್ದೆದ್ದು ನಡೆಯುತಿರೆ । ಎದ್ದು ಮುದ್ದಾಡಿ ಕರೆವೆ 'ಸಿರಿಕುವರ' ಎಂದು' ॥ (ಸಂ: ಶಂಕರ ಆರ್. ಮೊಕಾಶಿ ಪುಣೇಕರ್ ಡಾ., 1967–68, ಪು–7) ಎಂಬಲ್ಲಿ ತಾಯಿ ಮಗುವಿನ ಸಂಬಂಧ–ಕಾಳಜಿ–ಪ್ರೇಮ ಎಲ್ಲವೂ ಅಭಿವ್ಯಕ್ತವಾಗಿದೆ.

**ಏಳೇಳು ಗೆಳೆಯ** ಎಂಬ ಬಿ. ಪದ್ಮನಾಭ ಸಾಮಗ ಎಂಬ ಪ್ರಥಮ ಬಿ.ಎಸ್ಸಿ. ವಿದ್ಯಾರ್ಥಿಯ ಕವನದಲ್ಲಿ ಸಮಯವನ್ನು ಸದುಪಯೋಗಪಡಿಸಿಕೊಂಡು,

'ಕರ್ತವ್ಯಪಥದೆಡೆಗೆ ನೀ ಸಾಗು ಬೇಗ । ಕರ್ತ ದೇವನು ಕಾಯ್ವನೆನುವೆ ನಾ ಸಾಮಗ.' (ಪೂರ್ವೋಕ್ತ, ಪುಟ 12)

ಎಂದು ದೇವರ ಕರೆಗೆ ಓಗೊಡುವ, ಅವನೇ ನಮ್ಮನ್ನು ಒಡಗೂಡಿಕೊಳ್ಳಲು ಕಾಯುತ್ತಿರುವನಾದ ಕಾರಣ ಎಲ್ಲರೂ ತಮ್ಮ ಕರ್ತವ್ಯಗಳಲ್ಲಿ ತೊಡಗಿರಿ ಎಂಬ ಆಶಯದೊಂದಿಗೆ ಕವಿ ಸಮಸ್ತರನ್ನು ಎಚ್ಚರಿಸುತ್ತಿದ್ದಾನೆ.

ಕೇವಲ ಇಂಗ್ಲೀಷ್ ಮತ್ತು ಕನ್ನಡದ ಬರಹಗಳ ಹೊರತಾಗಿ ಸಂಚಿಕೆಯಲ್ಲಿ ಹಿಂದಿ, ಸಂಸ್ಕೃತ ಭಾಷೆಯ ವಿಭಾಗದಿಂದ ಯಾವುದೇ ಲೇಖನಗಳು ಪ್ರಕಟಗೊಳ್ಳದಿರುವುದು ಕುತೂಹಲದ ಸಂಗತಿಯಾಗಿದೆ.

**ಎರಡನೇ ಕಾಲಘಟ್ಟ:**

| | | | |
|---|---|---|---|
| **2.** | **ಎರಡನೇ ಕಾಲಘಟ್ಟ** | **1971–72 ರಿಂದ 1977–78** | **ಡಾ. ಪಿ. ನಾರಾಯಣ ರಾವ್** |
| | | **1978–79 ರಿಂದ 1987–88** | **ಪ್ರೊ. ಕೆ.ಜಿ. ತಂತ್ರಿ** |

ಮೇಲ್ಕಂಡ ಕಾಲಾವಧಿಯ ಸಾಹಿತ್ಯ ಚಟುವಟಿಕೆಗಳನ್ನು ಅಧ್ಯಯನ ಮಾಡಲಿಕ್ಕಾಗಿ ಇಬ್ಬರು ಪ್ರಾಂಶುಪಾಲರ ಅವಧಿಯ ಆಯ್ದ ಎರಡು ವಾರ್ಷಿಕ ಸಂಚಿಕೆಗಳನ್ನು ಆಯ್ದುಕೊಂಡು ಕೆಲವೊಂದು ಮುಖ್ಯ ಶೀರ್ಷಿಕೆಗಳನ್ನು ಈ ಪ್ರಬಂಧದಲ್ಲಿ ವಿಶ್ಲೇಷಿಸಲಾಗಿದೆ.

**ಎರಡನೇ ಕಾಲಘಟ್ಟದ ಅಧ್ಯಯನಕ್ಕಾಗಿ ಆಯ್ಕೆ ಮಾಡಿಕೊಂಡ 1977–78ನೇ ಸಾಲಿನ ವಾರ್ಷಿಕಾಂಕದಲ್ಲಿ ಪ್ರಕಟವಾದ ಸಾಹಿತ್ಯಕ ಬರಹಗಳ ಸಂಕ್ಷಿಪ್ತ ಅವಲೋಕನ: (ಪ್ರ.ಸಂ. ಡಾ. ಪಿ.ನಾರಾಯಣ ರಾವ್)**

ಸಂಪಾದಕ ಮಂಡಳಿಯು ತಮ್ಮ ಸಂಪಾದಕೀಯ ಬರಹದಲ್ಲಿ ದಾಖಲಿಸಿದಂತೆ "ವಿದ್ಯಾರ್ಥಿಗಳು ಮನಸ್ಸು ಮಾಡಿದರೆ ಯಾವ ಕೆಲಸ ತಾನೆ ಆಗುವುದಿಲ್ಲ? ಕಾಗದದ ಬೆಲೆ ಏರಿದೆ. ಮುದ್ರಣದ ವೆಚ್ಚ ಮಿತಿ ಮೀರಿದೆ ಕಾಲೇಜಿನ ವಾರ್ಷಿಕ ಪ್ರಕಟಣೆಗೆ ಕಷ್ಟ ಅಂದರೂ ಬಿಡದೆ ಕಳೆದ ವರ್ಷ ವಿದ್ಯಾರ್ಥಿಗಳೇ ಮುಂದಾಗಿ ಮ್ಯಾಗಜಿನ್ ಪ್ರಕಟಿಸಿದರು. ಈ ವರ್ಷ ಮತ್ತೆ ಅದೇ ಉತ್ಸಾಹದಿಂದ ಮ್ಯಾಗಜ಼ಿನ್ ಹೊರತರುವ ಸಾಹಸದ ಕೆಲಸ ಮಾಡಿದ್ದಾರೆ"(1977–78, ಸಂಪಾದಕೀಯ ಮಾತು) ಎಂದು ವಿದ್ಯಾರ್ಥಿವರ್ಗದ ಪ್ರಯತ್ನವನ್ನು ಶ್ಲಾಘಿಸಿದ್ದಾರೆ.

'ಪರಿವಿಡಿ' ಎಂಬ ಪ್ರತ್ಯೇಕ ಪುಟದ ಶೀರ್ಷಿಕೆಯಡಿಯಲ್ಲಿ ಸಣ್ಣಕಥೆ, ಪ್ರಬಂಧ, ನಗೆಹನಿ, ವೈಚಾರಿಕ ಲೇಖನ, ಕಾಲೇಜು–ವರದಿ ಎಂಬ ವಿವಿಧ ಬರಹ ಪ್ರಭೇದಗಳನ್ನು ದಾಖಲಿಸಿರುವುದು ಕಂಡುಬರುತ್ತದೆ. ಸಂಚಿಕೆಯಲ್ಲಿ ಕಾಲೇಜಿನ ಶೈಕ್ಷಣಿಕ ವರ್ಷದ ಚಟುವಟಿಕೆಯಲ್ಲಿ ಸಂಕ್ಷಿಪ್ತವಾಗಿ ದಾಖಲಿಸಿ, ಎಲ್ಲಾ ಮಾದರಿಯ ಎಲ್ಲಾ ತರಗತಿಯ ವಿದ್ಯಾರ್ಥಿವೃಂದದ ಸಾಹಿತ್ಯಕ ಬರಹಗಳಿಗೆ ಅವಕಾಶ ನೀಡಿರುವುದನ್ನು ಗಮನಿಸಬಹುದಾಗಿದೆ.

**ಸಂಚಿಕೆಯಲ್ಲಿ ಪ್ರಕಟವಾದ ಕವನಗಳು:**

ಸಂಚಿಕೆಯಲ್ಲಿ ಮುಖ್ಯವಾಗಿ ಗಮನಿಸಬೇಕಾದ ನಾಲ್ಕು ಕವನಗಳಿದ್ದು, ಅವೆಲ್ಲವೂ ಆ ಕಾಲಧರ್ಮದಂತೆ ನವ್ಯ ಕವನಗಳೇ ಆಗಿವೆ. ಪುಟ ಸಂಖ್ಯೆ 23ರಲ್ಲಿ 'ಸೆರೆ' ಎಂಬ ಶೀರ್ಷಿಕೆಯಲ್ಲಿ ಎಲ್. ಆರ್. ಚಂದ್ರಶೇಖರ ಭಟ್ ಎಂಬ ದ್ವಿತೀಯ

ಬಿ.ಕಾಂ. ವಿದ್ಯಾರ್ಥಿಯು ಕವನವೊಂದು ಪ್ರಕಟವಾಗಿದ್ದು, ಇಲ್ಲಿ ವಿದ್ಯಾರ್ಥಿ ಕವಿ ನವ್ಯಕವನದ ತಾತ್ತ್ವಿಕತೆಗೆ ಬದ್ಧನಾಗಿ 'ಸೆರೆ' ಎಂಬ ಶಬ್ದವನ್ನು ಪ್ರತಿಮೆಯಾಗಿ ಬಳಸಿರುವುದು ಕಂಡುಬರುತ್ತದೆ. 'ಸೆರೆ' ಎಂಬುದು ಕೇವಲ ಬಂಧನವಾಗಿರದೇ ಅವಮಾನದ ಬಂಧನವೂ ಹೌದು; ಹೇಡಿತನದಿಂದ ತನಗೆ ತಾನೇ ನಿರ್ಮಿಸಿಕೊಂಡ ಬಂಧನವೂ ಹೌದು ಎಂದು ವಿದ್ಯಾರ್ಥಿ ಕವಿ ತನ್ನ ಕವನದಲ್ಲಿ ನಿರೂಪಿಸಿರುವುದು ಕಂಡುಬರುತ್ತದೆ.

**ಚಂಡಮಾರುತ:** ಇದೇ ಸಂಚಿಕೆಯ ಪುಟ ಸಂಖ್ಯೆ 31ರಲ್ಲಿ ಅಂತಿಮ ಬಿ.ಬಿ.ಎಂ. ತರಗತಿಯ ಕೆ. ಎಲ್. ಕಿಣಿ ಎಂಬ ವಿದ್ಯಾರ್ಥಿ ಬರೆದ ಕವನ ಇದಾಗಿದೆ. ಬೇರೆ ಬೇರೆ ಕಾಲಘಟ್ಟದಲ್ಲಿ ನಾನಾ ನಮೂನೆಯ ಚಂಡಮಾರುತದ ಹಾವಳಿಗೆ ಸಿಲುಕಿದ ಅನುಭವವನ್ನು ವಿದ್ಯಾರ್ಥಿ ಕವಿ ನಿರೂಪಿಸಿದ್ದಾನೆ.

ಇಲ್ಲಿ ಕವಿ 'ಚಂಡಮಾರುತ' ಎಂಬ ಶಬ್ದವನ್ನು ಪ್ರತಿಮೆಯಾಗಿ ಬಳಸಿರುವುದು ಕಂಡುಬರುತ್ತದೆ. ಹಾಗಾಗಿ ಚಂಡಮಾರುತ ಎಂದರೆ ಕೋಮುದಳ್ಳುರಿ ಇರಬಹುದು. ಒಂದು ಪಕ್ಷದ ಅಲೆ ಇರಬಹುದು, ವಿವಿಧ ರಾಜಕೀಯ ಪಕ್ಷಗಳ ಅಬ್ಬರದ ಅಲೆ ಇರಬಹುದು. ಯಾವ ಅಲೆಯೂ ಇಂದಿನ ಸ್ವತಂತ್ರ ಭಾರತದಲ್ಲಿ ಶಾಶ್ವತವಾದ ಪರಿಣಾಮವನ್ನುಂಟುಮಾಡುವ ಶಕ್ತಿಯನ್ನು ಕಳೆದುಕೊಂಡಿದೆ ಎಂದು ತನ್ನ ಕವನವನ್ನು ಮುಗಿಸಿದ್ದಾನೆ.

**ಸಂಚಿಕೆಯಲ್ಲಿ ಪ್ರಕಟಗೊಂಡ ಸಣ್ಣ ಕಥೆ:**

**'ರಂಗಜ್ಜ'** ಎಂಬ ಹೆಸರಿನ ಕಥೆಯು ಸಂಚಿಕೆಯ ಪುಟ ಸಂಖ್ಯೆ: 53ರಲ್ಲಿ ಪ್ರಕಟಗೊಂಡಿದ್ದು, ಇದು ಶ್ರೀಕಾಂತ ಎಂ. ಶೆಟ್ಟಿ ಎಂಬ ತೃತೀಯ ಬಿ.ಎ. ವಿದ್ಯಾರ್ಥಿಯ ರಚನೆಯಾಗಿದೆ. ಈ ಕಥೆಯಲ್ಲಿ ಅನಾವರಣಗೊಂಡ ಸನ್ನಿವೇಶ ಸಂದರ್ಭಗಳು ಸಾಮಾನ್ಯ ಸಂಗತಿಯಾಗಿದ್ದು, ವಯೋವೃದ್ಧರ ಬದುಕಿಗಿಂತ ಅವರ ಲೌಕಿಕ ಆಸ್ತಿಗಳ ಕುರಿತೇ ಅವರ ವಾರೀಸುದಾರರಿಗೆ ವ್ಯಾಮೋಹವಿರುತ್ತದೆ ಎನ್ನುವುದನ್ನು ವಿದ್ಯಾರ್ಥಿ ಕಥೆಯ ಮೂಲಕ ವಿವರಿಸಿದ್ದಾನೆ.

**ವೈಚಾರಿಕ ಲೇಖನಗಳು:** 'ಜಾತಿಪದ್ಧತಿ ಮತ್ತು ಅಸ್ಪೃಶ್ಯತೆ' ಎನ್ನುವುದು ವೈಚಾರಿಕ ಲೇಖನವಾಗಿದ್ದು, ಪ್ರಕೃತ ಲೇಖನದಲ್ಲಿ ಜಾತಿ ವ್ಯವಸ್ಥೆಯ ಹುಟ್ಟಿನ ಹಿನ್ನೆಲೆ ಹಾಗೂ ಅದರ ಉದ್ದೇಶವನ್ನು ವಿವರಿಸಲಾಗಿದೆ. ಪ್ರಬಂಧದ ಕೊನೆಯಲ್ಲಿ ವಿದ್ಯಾರ್ಥಿಯು ಜಾತಿ ಪದ್ಧತಿಯು ಅಸ್ತಿತ್ವದಲ್ಲಿ ಇಲ್ಲದಂತಹ ಒಂದು ವ್ಯವಸ್ಥೆ ಸಮಾಜದಲ್ಲಿ ನಿರ್ಮಾಣಗೊಳ್ಳಲಿ ಎಂಬ ಸದಾಶಯದೊಂದಿಗೆ ಪ್ರಬಂಧವನ್ನು ಮುಕ್ತಾಯಗೊಳಿಸಿದ್ದಾನೆ.

**ಮೌಖಿಕ ಸಂದರ್ಶನ:** ಕಸ್ತೂರಿ ಮಾಸ ಪತ್ರಿಕೆಯ ಸಂಪಾದಕರಾಗಿ 'ವಿಚಾರಿ' ಹಾಗೂ 'ಲಾಂಗೂಲಾಚಾರ್ಯ' ಎಂಬ ಕಾವ್ಯನಾಮಗಳಿಂದ ಕನ್ನಡನಾಡಿನ ಜನತೆಗೆ ಚಿರಪರಿಚಿತರೆನಿಸಿಕೊಂಡು 'ಪಾವೆಂ' ಎಂಬ ಸಂಕ್ಷಿಪ್ತ ನಾಮದಿಂದ ಖ್ಯಾತರಾದವರು ಪಾಡಿಗಾರು ವೆಂಕಟರಮಣ ಆಚಾರ್ಯರು. ಇವರು ಪತ್ರಿಕಾಸಂಪಾದಕರಾಗಿ ಮಾಡಿದ ಸಾಧನೆಯನ್ನು ಅಂತಿಮ ಬಿ.ಎ. ವಿದ್ಯಾರ್ಥಿ ಶ್ರೀಧರ ನಾಯಕ್ ಸಂಚಿಕೆಯಲ್ಲಿ ದಾಖಲಿಸಿದ್ದಾನೆ. ಅಷ್ಟು ಮಾತ್ರವಲ್ಲದೆ ಶ್ರೀಧರನು ಸಂಚಿಕೆಗಾಗಿ ಮೌಖಿಕ ಸಂದರ್ಶನದ ಮೂಲಕ ಕೆಲವೊಂದು ವಿಚಾರಗಳನ್ನು ಅವರಿಂದಲೇ ಪಡೆದು, ಸಂಚಿಕೆಯಲ್ಲಿ ಪ್ರಕಟಿಸಿದ್ದಾನೆ.

**ಎರಡನೇ ಕಾಲಘಟ್ಟದ ಅಧ್ಯಯನದ ಮೂರನೇ ಸಂಚಿಕೆಯಾಗಿ ಆಯ್ಕೆ ಮಾಡಿಕೊಂಡ 1981–82ನೇ ಸಾಲಿನ ಶೈಕ್ಷಣಿಕ ಸಂಚಿಕೆಯ ವಿಶೇಷತೆಗಳು: ಪ್ರಧಾನ ಸಂಪಾದಕರು ಪ್ರೊ. ಕೆ.ಜಿ. ತಂತ್ರಿ.**

ಈ ಶೈಕ್ಷಣಿಕ ಸಾಲಿನ ಸಂಚಿಕೆಯಲ್ಲಿಯೂ ಇಂಗ್ಲಿಷ್ ಕನ್ನಡ ಭಾಷೆಯ ಲೇಖನಗಳನ್ನು ಮಾತ್ರ ಕಾಣಬಹುದೇ ಹೊರತು, ಹಿಂದಿ ಸಂಸ್ಕೃತ ಭಾಷಾವಿಭಾಗದಿಂದ ಯಾವುದೇ ಸಾಹಿತ್ಯ ಲೇಖನಗಳು ಪ್ರಕಟಗೊಂಡಿರುವುದಿಲ್ಲ. ಇಂಗ್ಲಿಷ್ ಭಾಷೆಯ ಮೂರು ಲೇಖನಗಳನ್ನು ಹೊರತುಪಡಿಸಿದರೆ ಮತ್ತುಳಿದಂತೆ ಕನ್ನಡ ಭಾಷಾ ಸಾಹಿತ್ಯದ ಲೇಖನಗಳೇ ಸಂಚಿಕೆಯಲ್ಲಿ ತುಂಬಿಕೊಂಡಿರುವುದನ್ನು ಕಾಣಬಹುದು. ಕನ್ನಡ ಭಾಷೆಯ ಲೇಖನಗಳಲ್ಲಿ ಕಾಲೇಜು ಉಪನ್ಯಾಸಕರು ಸಂಚಿಕೆಗಾಗಿ ಬರೆದ ಲೇಖನಗಳು ಇವೆ ಎನ್ನುವುದು ಉಲ್ಲೇಖನೀಯ ಅಂಶವಾಗಿದೆ.

ಸಂಚಿಕೆಯ ಗದ್ಯ ಬರಹದಲ್ಲಿ ಉಲ್ಲೇಖಿಸಬೇಕಾದ ಮುಖ್ಯ ಕಥೆ ಅಂತಿಮ ಬಿ.ಕಾಂ. ವಿದ್ಯಾರ್ಥಿ ಭರತ್ ಕುಮಾರ್ ಪೊಲಿಪು ಅವರ **ಅಂಧಕಾರಪುರದಲ್ಲಿ ನಮ್ಮವರು** ಎಂಬ ಕಥೆ. ಈ ಕಥೆಯಲ್ಲಿ ಬರುವ ಸನ್ನಿವೇಶಗಳು ಸಾಂಕೇತಿಕವಾಗಿದ್ದು, ಪ್ರಜಾಪ್ರಭುತ್ವ ವ್ಯವಸ್ಥೆಯ ಹಿಂದಿನ ಮಲಿನತೆಗಳನ್ನು ಇಲ್ಲಿ ಬಯಲುಮಾಡಲಾಗಿದೆ.

**ಸಂಚಿಕೆಯಲ್ಲಿ ಪ್ರಕಟಗೊಂಡ ಕವನಗಳು ಒಂದು ಅವಲೋಕನ:**

ಶೈಲಜಾ, ಅಂತಿಮ ಬಿ.ಎ. ಇವರು ರಚಿಸಿದ **'ಚಿವುಟಿದರೆ ನೋವಾಗದಂತೆ ಬದುಕಬಹುದು'** ಎಂಬ ಈ ಕವನದಲ್ಲಿ ಬರೀ ಬಯಲಿಗೆ ಹಸುರು ತುಂಬಿದ, ಕಾಮನಬಿಲ್ಲಿಗೆ ಬಣ್ಣ ತುಂಬಿದವರು, ಕಷ್ಟ-ನಿಷ್ಠುರಗಳಿಗೆ ಇಷ್ಟಪಟ್ಟವರೇನಲ್ಲ! ಕಷ್ಟ ಪಡುತ್ತಲೇ ಕಾವ್ಯಸೃಷ್ಟಿಯ ಮೂಲಕ ಪ್ರತಿಯೊಬ್ಬರೂ ತಮ್ಮದೇ ಆದ ಕಾವ್ಯಲೋಕವನ್ನು ಸೃಷ್ಟಿಸಿಕೊಂಡವರಾಗಿದ್ದಾರೆ... ಆ ಕಾವ್ಯಲೋಕದಲ್ಲಿ

'ಅಲ್ಲಿ ಕೋಗಿಲೆಯ ಹಾಡಿಗೆ ಮಾವು ಚಿಗುರಬಹುದು । ದುಂಬಿ ಮೊರೆದು ಮಲ್ಲಿಗೆಯರಳಬಹುದು

ನಾವಿಲ್ಲಿ ಬದುಕಬಹುದು । ಚಿವುಟಿದರೆ ನೋವಾಗದಂತೆ'(ತಂತ್ರಿ ಕೆ.ಜಿ., 1981–82, ಪು–17)

ಸಂವೇದನಾಶೀಲರು, ಸೂಕ್ಷ್ಮಮನಸ್ಕರು ಚಿವುಟಿದರೆ; ನೋವಾಗುವ ಪ್ರಜ್ಞೆ ಉಳ್ಳವರು. ಇನ್ನೊಬ್ಬರ ನೋವಿಗೆ ಸ್ಪಂದಿಸುವವರಾಗಿರುತ್ತಾರೆ. ಆದರೆ ಧರ್ಮವನ್ನೇ ಕೈಬಿಟ್ಟ ಮನುಷ್ಯನಿಗೆ ಇನ್ನೊಬ್ಬನ ನೋವಿಗೆ ಸ್ಪಂದಿಸಲಾರ ಎನ್ನುವುದೇ ಕವಿಯ ಆಶಯವಾಗಿದೆ.

**ಮೂರನೇ ಕಾಲಘಟ್ಟ:**

| | | |
|---|---|---|
| **3.** | **ಮೂರನೆಯ ಕಾಲಘಟ್ಟ** | **ಪ್ರೊ. ಕೆ. ಶ್ರೀಪತಿ ಉಪಾಧ್ಯಾಯ(1988–89)** |
| | | **ಪ್ರೊ. ಎಚ್. ಶಿವರಾಮ ಶೆಟ್ಟಿ (1989–90 ರಿಂದ 1993)** |
| | | **ಪ್ರೊ. ಎಂ. ಸುಧಾಕರ ರಾವ್ (1993–94)** |
| | | **ಪ್ರೊ. ಎಂ. ಸುಬ್ರಹ್ಮಣ್ಯ (1994–95ರಿಂದ 1996–97)** |
| | | **ಪ್ರೊ. ನಟರಾಜ ಬಿ. ದೀಕ್ಷಿತ್ (1997–98 ರಿಂದ 1998–99)** |
| | | **ಡಾ. ಎಸ್. ಲಕ್ಷ್ಮೀನಾರಾಯಣ ಕಾರ್ಣಿಕ್ (1999–2000)** |

1988 ರಿಂದ 2000 ಇಸ್ವಿಯ ವರೆಗಿನ 13 ವರ್ಷಗಳ ಕಾಲಾವಧಿಯಲ್ಲಿ 6 ಮಂದಿ ಪ್ರಾಂಶುಪಾಲರುಗಳು ಕಾಲೇಜನ್ನು ಮುನ್ನಡೆಸಿದ್ದು, ಈ ಅವಧಿಯ ಕೇವಲ ಮೂವರು ಪ್ರಾಂಶುಪಾಲರ ಕಾಲಾವಧಿಯಲ್ಲಿ ಪ್ರಕಟಗೊಂಡ ಆಯ್ದ ಸಾಹಿತ್ಯಕ ಬರಹಗಳನ್ನಷ್ಟೇ ವಿಶ್ಲೇಷಣೆಗೊಳಪಡಿಸಲಾಗಿದೆ. ಪ್ರಬಂಧದಲ್ಲಿ ವಿಸ್ತರಣೆಗೆ ಅವಕಾಶ ಕಲ್ಪಿಸದೆ ಸಾಹಿತ್ಯ ಸತ್ವದ ಮಾದರಿಯನ್ನಷ್ಟೇ ಮನಗಾಣಿಸುವ ಉದ್ದೇಶದಿಂದ ಈ ವಿಶ್ಲೇಷಣೆಯನ್ನು ಸಂಕ್ಷಿಪ್ತವಾಗಿ ನಿರೂಪಿಸಲಾಗಿದೆ.

**1990–91ನೇ ಶೈಕ್ಷಣಿಕ ಸಾಲಿನ ಮೂರನೇ ಕಾಲಘಟ್ಟದ ವಾರ್ಷಿಕ ಸಂಚಿಕೆಯ ಸಾಹಿತ್ಯಕ ಬರಹಗಳ ಒಂದು ಸಂಕ್ಷಿಪ್ತ ಅವಲೋಕನ: (ಪ್ರಧಾನ ಸಂಪಾದಕರು ಪ್ರೊ. ಎಚ್. ಶಿವರಾಮ ಶೆಟ್ಟಿ, ಸಂಪುಟ–31)**

ವಾರ್ಷಿಕ ಸಂಚಿಕೆಯಲ್ಲಿ ಒಟ್ಟು 7 ಕನ್ನಡ ಶೀರ್ಷಿಕೆಗಳಿದ್ದು, ಪ್ರಥಮ ಶೀರ್ಷಿಕೆಯಾಗಿ 'ಉಪನಿಷತ್ ಸಾರುವ ಜೀವನ ಮೌಲ್ಯಗಳು' ಎಂಬ ಧಾರ್ಮಿಕ ಪ್ರಬಂಧವು ಪ್ರಕಟವಾಗಿದ್ದು ಇದು ಸಂಸ್ಕೃತ ಕಾಲೇಜಿನ ಸಗ್ರಿ ರಾಘವೇಂದ್ರ ಉಪಾಧ್ಯಾಯರೆಂಬ ಉಪನ್ಯಾಸಕರು ಸಂಚಿಕೆಗಾಗಿ ಬರೆದ ಪ್ರಬಂಧವಾಗಿದೆ. ಇನ್ನು ಮುಂದಿನ ಎರಡು ಪ್ರಬಂಧಗಳು ರಾಷ್ಟ್ರೀಯ ಸೇವಾ ಯೋಜನೆಯ ಮಹತ್ವವನ್ನು ವಿವರಿಸುವ, ರಾಷ್ಟ್ರೀಯ ಸೇವಾಯೋಜನೆಯ ಸಕ್ರಿಯ ಸದಸ್ಯರು ಬರೆದು ಪ್ರಕಟಿಸಿರುವ ಲೇಖನವಾಗಿರುತ್ತದೆ. ಸಂಚಿಕೆಯ ನಾಲ್ಕನೇ ಶೀರ್ಷಿಕೆ 'ಕ್ಯಾಂಪಸ್ಸಿನ ಸುತ್ತಮುತ್ತ' ಎಂದು ಪ್ರಕಟಗೊಂಡಿದ್ದು, ಇದು ಆ ಶೈಕ್ಷಣಿಕ ವರ್ಷದ ವಿದ್ಯಾರ್ಥಿ ವೇದಿಕೆಯ ಕಾರ್ಯದರ್ಶಿ ತೃತೀಯ ಬಿ.ಎ. ವಿದ್ಯಾರ್ಥಿ ಪಿ. ಬಿ. ಪ್ರಸನ್ನ ಅವರ ಬರವಣಿಗೆಯಾಗಿದೆ. ಸಂಚಿಕೆಯ ಐದನೇ ಶೀರ್ಷಿಕೆಯು 'ಸಮುದ್ರ ಪಾಲಾಗುತ್ತಿರುವ ಮಾಲ್ದೀವ್ಸ್' ಎಂಬುದೊಂದು ವೈಜ್ಞಾನಿಕ ಲೇಖನವಾಗಿದ್ದು, ಇದು ದ್ವಿತೀಯ ಬಿ.ಎಸ್ಸಿ. ವಿದ್ಯಾರ್ಥಿ ಹರೀಶ್ ಕುಮಾರ್ ಸಂಚಿಕೆಗಾಗಿ ಬರೆದ ಲೇಖನವಾಗಿರುತ್ತದೆ. ಸಾಹಿತ್ಯದ ದೃಷ್ಟಿಯಿಂದ ಉಲ್ಲೇಖಿಸುವುದಾದಲ್ಲಿ ಸಂಚಿಕೆಯಲ್ಲಿ ಪ್ರಕಟಿತ ಏಕೈಕ ಗದ್ಯ ಸಾಹಿತ್ಯವೇ 'ದೃಷ್ಟಿ' ಎಂಬ ಹೆಸರಿನ ಸಣ್ಣಕಥೆಯಾಗಿರುತ್ತದೆ. ಪದ್ಯ ಅಥವಾ ಕವನ ಶೀರ್ಷಿಕೆಯಲ್ಲಿ 5 ಕವನಗಳು ಪ್ರಕಟಗೊಂಡಿದ್ದು, ಇದರಲ್ಲಿ ಆಧುನಿಕತೆಯ ವ್ಯರ್ಥ ಆಸೆ ಎಂಬ 2 ಕವನಗಳು ಮಧ್ಯಮ ಮಟ್ಟದಲ್ಲಿದ್ದು, ಇನ್ನುಳಿದ ಮೂರು ಕವನಗಳು ಸಾಮಾನ್ಯ ಮಟ್ಟದಲ್ಲಿವೆ.

**ಸಂಚಿಕೆಯಲ್ಲಿ ಪ್ರಕಟಗೊಂಡ ಪದ್ಯಗಳು:**

ದ್ವಿತೀಯ ಪಿ.ಯು.ಸಿ. ತರಗತಿಯ ರೇಖಾ ಆರ್. ಉಪಾಧ್ಯ ಅವರ 'ಕನಸುಗಳು ಕೊಲ್ಲುತ್ತವೆ' ಎಂಬ ಶೀರ್ಷಿಕೆ ಅರ್ಥವತ್ತಾಗಿದೆಯಾದರೂ ನಿರೂಪಣೆಯ ವಸ್ತು–ಮತ್ತು ಭಾಷೆ ತೀರಾ ಕೃತಕವಾಗಿದೆ. 'ಕನಸುಗಳು ಕೆಲವೊಮ್ಮೆ ಮಧುರ ಕ್ಷಣಗಳನ್ನು ನೀಡಿ, ಮನ ಪುಳಕಗೊಳ್ಳುವ ಅರಳಿದ ಕುಸುಮಗಳಂತೆ ಮುದ ನೀಡಿದರೆ ಇನ್ನೂ ಕೆಲವೊಮ್ಮೆ ಮಧುರತೆಯ ಸವಿಯನ್ನೇ ಕಹಿಯಾಗಿಸಿ ಚುಚ್ಚಿ...ಚುಚ್ಚಿ... ಕೊಲ್ಲುವ ವಿಷದ ಮುಳ್ಳುಗಳೂ ಆಗುತ್ತವೆ' ಎಂದು ಹೇಳುತ್ತಾಳೆ. 'ನಾನು ಆಕೆಯನ್ನು ಪ್ರೀತಿಸುತ್ತೇನೆ' ಎಂಬ ಶೀರ್ಷಿಕೆಯಲ್ಲಿ ಪ್ರಥಮ ಬಿ.ಎಸ್ಸಿ. ಶ್ರೀನಿವಾಸ ಬಿ.ಕೆ.ಯವರು ಬರೆದ ಕವನವು ಸಂಚಿಕೆಯಲ್ಲಿ ಪ್ರಕಟಗೊಂಡಿದ್ದು, ಆಕೆ ನನ್ನನ್ನು ಪ್ರೀತಿಸುತ್ತಿಲ್ಲ ಎಂಬುದೇ ಕವನದ ಮುಖ್ಯವಸ್ತು ವಾಚ್ಯವಾಗಿ ನಿರೂಪಿತವಾಗಿದೆ.

'ಆಕೆ ನನ್ನ ಕಂಡಾಗ । ಕಂಡು ನಗದೇ ಹೋದಾಗ ॥

ನಾನು ಗುಣುಗುಟ್ಟುತ್ತೇನೆ'(ಸಂ: ಶಿವರಾಮ ಶೆಟ್ಟಿ ಎಚ್. ಪ್ರೊ., 1990-91, ಪು-50) ಎಂಬ ಉಲ್ಲೇಖದಲ್ಲಿ ನೇರ ವಾಚ್ಯ ನಿರೂಪಕಣೆ ಇದೆ. 'ಆಕೆ ನನ್ನನ್ನು ಪ್ರೀತಿಸುತ್ತಿಲ್ಲ ಆದರೂ ನಾನಾಕೆಯನ್ನು ಪ್ರೀತಿಸುತ್ತೇನೆ'-ಎಂಬ ವಾಚ್ಯ ವಿವರದೊಂದಿಗೆ ಕವನವು ಕೊನೆಗೊಳ್ಳುತ್ತದೆ.

**ಶೈಕ್ಷಣಿಕ ವರ್ಷ 1999-2000 ನೇ ಸಾಲಿನ ವಾರ್ಷಿಕ ಸಂಚಿಕೆಯ (ಮೂರನೇ ಕಾಲಘಟ್ಟದ) ಸಾಹಿತ್ಯಕ ಬರಹಗಳ ಸಂಕ್ಷಿಪ್ತ ಅವಲೋಕನ:** (ಸಂಪುಟ 40, ಪ್ರಧಾನ ಸಂಪಾದಕರು ಡಾ. ಎಸ್. ಎಲ್. ಕಾರ್ಣಿಕ್, ಪ್ರಕಟಣೆ: ಪೂರ್ಣಪ್ರಜ್ಞ ಕಾಲೇಜು, ಉಡುಪಿ).

ಶತಮಾನದ ಕೊನೆಯ ಸಂಚಿಕೆ ಎಂಬ ಹೆಸರಿಗೆ ಪಾತ್ರವಾದ ಈ ಸಂಚಿಕೆಯು ಕಥೆ, ಕವನ, ವೈಚಾರಿಕ ಲೇಖನ, ಧಾರ್ಮಿಕ ಜಾಗೃತಿಯನ್ನು ಮೂಡಿಸುವ ಪ್ರಬಂಧ, ಹಲವಾರು ಹನಿಗವನ, ಕವನ ಮುಂತಾದ ವೈವಿಧ್ಯಮಯ ಸಾಹಿತ್ಯ ಪ್ರಕಾರಗಳನ್ನೊಳಗೊಂಡಿದೆ. 'ಚಿತ್ರಕಥೆ', 'ಚಿತ್ರ ಕವನ', ಎಂಬ ಶೀರ್ಷಿಕೆಯಲ್ಲಿ ವಿದ್ಯಾರ್ಥಿಗಳು ಚಿತ್ರವನ್ನವಲಂಬಿಸಿ, ಬರೆದ ಕಥೆ-ಕವನಗಳು ಸಂಚಿಕೆಯಲ್ಲಿ ಪ್ರಕಟಗೊಂಡಿದೆ. ಗಂಭೀರ ಬರಹಗಳ ಜೊತೆಯಲ್ಲಿ ಅಲ್ಲಲ್ಲಿ ಹಾಸ್ಯ ಲೇಖನಗಳೂ ಸಂಚಿಕೆಯಲ್ಲಿದ್ದು, ಓದುಗರಿಗೆ ತಾವು ವೈಚಾರಿಕ ಕಾಳಜಿಯ ಚಿಂತನೆಯಿಂದ ಹೊರಬಂದು, ಮನಸ್ಸು ಹಗುರವಾಗುವ ದಾರಿಯಾಗಿ ಇಂತಹ ಬರಹಗಳು ಮನಸ್ಸಿಗೆ ಮುದ ನೀಡುತ್ತವೆ.

**ಸಂಚಿಕೆಯಲ್ಲಿ ಪ್ರಕಟಗೊಂಡ ಕಥೆಗಳು:**

**ವಸ್ತುಸ್ಥಿತಿ:** ವಿಷ್ಣುಮೂರ್ತಿ ಪ್ರಭು ಎಂಬ ದ್ವಿತೀಯ ಬಿ.ಎ. ವಿದ್ಯಾರ್ಥಿಯ ಈ ಕಥೆ ಉತ್ಕೃಷ್ಠ ಮಟ್ಟದ ಕಲಾತ್ಮಕ ಅಭಿವ್ಯಕ್ತಿ ಎನ್ನುವುದಕ್ಕೆ ಸಾಕಷ್ಟು ಸಮರ್ಥನೆಯನ್ನುಳ್ಳ ಕಥೆ ಎನ್ನಬಹುದಾಗಿದೆ. ಜಾನೆಟ್ ಎಂಬವಳು ರವಿ ಎಂಬವನ ಕಂಪ್ಯೂಟರ್ ಸೆಂಟರ್‌ನಲ್ಲಿ ಕೆಲಸಕ್ಕಿದ್ದು, ಆತನನ್ನು ಪ್ರೀತಿಸತೊಡಗುತ್ತಾಳೆ. ಆದರೆ ರವಿಯು ಜಾನೆಟ್‌ಳ ಪ್ರೀತಿಗೆ ಯಾವುದೇ ಪ್ರತಿಕ್ರಿಯೆ ನೀಡುವುದಿಲ್ಲ. ಜಾನೆಟ್‌ಗೆ ಅವಳ ಮನೆಯಿಂದ ಮದುವೆಯ ಏರ್ಪಾಟು ಮಾಡಿದಾಗ ರವಿ ಜಾನೆಟ್‌ನನ್ನು ಮದುವೆಯಾಗುವ ತೀರ್ಮಾನಕ್ಕೆ ಬರುವುದಿಲ್ಲ. ಕಾರಣ ರವಿಗೊಬ್ಬ ಅಕ್ಕ, ಅಣ್ಣನಿರುವುದಲ್ಲದೆ, ವೃದ್ಧ ತಂದೆ, ತಾಯಿಗಳ ಮನಸ್ಸು ನೋಯಿಸುವ ಇಚ್ಛೆ ಇಲ್ಲದಿರುವುದರಿಂದ ಆತ ಪ್ರೀತಿಯ ಕುರಿತು ಯಾವುದೇ ನಿರ್ಣಯಗಳನ್ನು ಹೇಳುವುದಿಲ್ಲ. ಜಾನೆಟ್‌ಗೆ ಮನೆಯವರು ಬೇರೊಬ್ಬನೊಂದಿಗೆ ಸಾಂಪ್ರದಾಯಿಕ ಮದುವೆ ಮಾಡುತ್ತಾರೆ. ಮುಂದೆ ಜಾನೆಟ್ ಎರಡು ಮಕ್ಕಳ ತಾಯಿಯೂ ಆಗುತ್ತಾಳೆ. ಆರು ವರ್ಷದ ಅನಂತರ ಜಾನೆಟ್ ತನ್ನ ಗಂಡನಿಗೆ ವರ್ಗವಾದ ಪ್ರಯುಕ್ತ ರವಿಯ ಊರಿಗೇ ಬರುತ್ತಾಳೆ. ಮತ್ತು ರವಿಯ ಮನೆಯ ಪಕ್ಕದಲ್ಲೇ ಬಾಡಿಗೆ ಮನೆಯನ್ನು ಪಡೆದುಕೊಳ್ಳುತ್ತಾಳೆ. ರವಿಯು ತನ್ನ ಪೂರ್ವ ಪರಿಚಯವಿರುವುದರಿಂದ ಆಗಾಗ ಮನೆಗೆ ಬಂದು ಮಕ್ಕಳನ್ನು ಮಾತನಾಡಿಸುತ್ತಿರುತ್ತಾನೆ. ಒಂದು ದಿನ ಜಾನೆಟ್ ರವಿಯನ್ನು ಏಕಾಂತದಲ್ಲಿ ಮಾತನಾಡಿಸಿದಾಗ ತಾನು ವಿವಾಹವಾಗದಿರಲು ಕಾರಣ ತನ್ನ ಅಕ್ಕ ಅಣ್ಣಮದುವೆಯಾಗದೇ ಉಳಿದಿರುವಾಗ ಮದುವೆಯಾಗುವ ಸ್ಥಿತಿಯಲ್ಲಿ ಇಲ್ಲದಿರುವ ತನ್ನ ಅಸಹಾಯಕತೆಯನ್ನು ಹೇಳಿಕೊಳ್ಳುತ್ತಾ "ಯಾರನ್ನೋ ಪ್ರೀತಿಸಿ, ಯಾರನ್ನೋ ಮದುವೆಯಾಗಬೇಕಾ? ಅಥವಾ ಆ ಬರುವವಳ ಪ್ರೀತಿಗಾಗಿ ತಂದೆತಾಯಿಯವರ ಅಲ್ಪ ಪ್ರೀತಿಯನ್ನು ಕಳೆದುಕೊಳ್ಳಬೇಕಾ"? ಎಂದು ಕೇಳುವ ಮೂಲಕ ರವಿಯ ಪ್ರೌಢ ಮಾತುಗಳಿಂದ ಜಾನೆಟ್ ರವಿಯನ್ನು ಸಂಪೂರ್ಣವಾಗಿ ಅರ್ಥಮಾಡಿಕೊಳ್ಳುವುದಕ್ಕೆ ಸಾಧ್ಯವಾಗುತ್ತದೆ. ಬಾಲಿಶವಲ್ಲದ

ಗಂಡುಹೆಣ್ಣಿನ ವಯೋಮಾನ ಸಹಜವಾದ ಯಾವೊಂದು ಸನ್ನಿವೇಶಗಳಿಗೂ ಕಥೆಯಲ್ಲಿ ಆಸ್ಪದವಿಲ್ಲದೆ ಅತ್ಯಂತ ಪ್ರೌಢ ಶೈಲಿಯ ಗಂಭೀರ ಉದ್ದೇಶದ ಕಥೆ ಎಂದು ಪರಿಗಣಿಸಬಯಸುವ ಒಂದು ಕಥೆ ಎಂದು ಹೇಳಬಹುದಾಗಿದೆ.

**ಸೀಟಾಯಣ:** ವಿನಯ ಮಯ್ಯ ದ್ವಿತೀಯ ಪಿಯುಸಿ ವಿದ್ಯಾರ್ಥಿಯ ಈ ನಗೆಬರಹದಲ್ಲಿ ಅವಕಾಶಕ್ಕಾಗಿ ಜನ ಎಷ್ಟು ಅವಸರದಿಂದ ಕಾರ್ಯಪ್ರವೃತ್ತರಾದರೂ ಸೀಟು ಸಿಗದಿರುವ ಕುರಿತು ತನ್ನ ಹಾಸ್ಯ ಶೈಲಿಯಲ್ಲಿ ಆಧುನಿಕ ಬದುಕಿನ ಕೆಲವು ಕಾರ್ಯವೈಖರಿ– ಅವಾಂತರಗಳನ್ನು ಓದುಗರ ಮುಂದೆ ಬಿಡಿಸಿಟ್ಟಿರುವುದನ್ನು ಕಾಣಬಹುದಾಗಿದೆ. ಆಧುನಿಕ ಕಾಲದ ವಿದ್ಯಾರ್ಥಿ ಸೀಮಿತ ಸೀಟಿಗಾಗಿ ಅಪರಿಮಿತ ಸ್ಪರ್ಧಿಗಳೊಂದಿಗೆ ಸ್ಪರ್ಧಿಸಬೇಕಾದ ಅನಿವಾರ್ಯತೆಯನ್ನು ಈ ಪ್ರಬಂಧದಲ್ಲಿ ಹಾಸ್ಯ ಶೈಲಿಯಲ್ಲಿ ನಿರೂಪಿಸಿದ್ದಾನೆ.

**ಭಾರತದಲ್ಲಿ ಮತಾಂತರ ಮುಗಿಯದ ಸಮಸ್ಯೆ:–**

ಈ ಲೇಖನವು ಪ್ರಥಮ ಬಿ.ಎಸ್ಸಿ. ತರಗತಿಯ ಪ್ರವೀಣ ಕುಮಾರ ಎಂಬ ವಿದ್ಯಾರ್ಥಿಯ ವೈಚಾರಿಕ ಲೇಖನವಾಗಿದೆ. ಜಾತ್ಯತೀತ ರಾಷ್ಟ್ರದಲ್ಲಿ ಮತಾಂತರ ಎನ್ನುವುದು ಸಾಮಾಜಿಕರ ಬದುಕನ್ನು ಅಸ್ತವ್ಯಸ್ತ ಮಾಡುವ ಒಂದು ಸಂಕೀರ್ಣ ಸಮಸ್ಯೆ ಎನ್ನುವುದನ್ನು ಪ್ರವೀಣ್ ಕುಮಾರ್ ಈ ಪ್ರಬಂಧದಲ್ಲಿ ಎತ್ತಿ ಹಿಡಿದಿದ್ದಾನೆ. ಪ್ರಲೋಭನೆಯಿಂದ ಆಸೆ ತೋರಿಸಿ, ದಲಿತರ ಕಣ್ಣೀರು ಒರೆಸುವೆವು ಎನ್ನುತ್ತಾ ಮತಾಂತರಿಸಿ, ತಮ್ಮ ಅನುಯಾಯಿಗಳನ್ನಾಗಿಸಿ, ತಮ್ಮ ಮತೀಯರ ಸಂಖ್ಯೆ ಜಾಸ್ತಿಯಾಯಿತೆಂದು ಘೋಷಿಸಿ, ಹೆಮ್ಮೆಪಡುವುದೇ ಮತಾಂತರದ ಹಿಂದಿರುವ ಹುನ್ನಾರವಾಗಿದೆ. ಇದಕ್ಕೆ ಪರಿಹಾರವೆಂದರೆ ಎಲ್ಲ ಮತಗಳೂ ತಮ್ಮ ಆಂತರಿಕ ಹುಳುಕುಗಳನ್ನು ಸರಿಪಡಿಸಿಕೊಂಡರೆ ಮತಾಂತರದ ಪ್ರಶ್ನೆಯೇ ಉದ್ಭವಿಸಲಾರದು". ಎನ್ನುವುದು ವಿದ್ಯಾರ್ಥಿ ಪ್ರವೀಣ್ ಕುಮಾರ್ ಪಿ.ವಿ. ಅವರ ನಿಲುವು. (ಸಂಚಿಕೆ 1999–2000 ಪ್ರ.ಸಂ. ಎಸ್.ಎಲ್. ಕಾರ್ಣಿಕ್)

**ಪೂರ್ಣಪ್ರಜ್ಞ ವಿದ್ಯಾಸಂಸ್ಥೆಗಳ ಸಾಹಿತ್ಯಚಟುವಟಿಕೆಗಳ ವೈಶಿಷ್ಟ್ಯಗಳು:**

**1) ವಿವಿಧ ಸಂಘಟನೆಗಳ ಸಹಯೋಗದಿಂದ ನಡೆದ ಸಾಹಿತ್ಯಚಟುವಟಿಕೆಗಳು:**

ಕಾಲೇಜಿನ ಕನ್ನಡ ಸಂಘ ಅಥವಾ ವಿದ್ಯಾರ್ಥಿ ವೇದಿಕೆ, ಸಾಹಿತ್ಯಚಟುವಟಿಕೆಗಳನ್ನು ನಿರ್ವಹಿಸುವ ಜವಾಬ್ದಾರಿಯನ್ನು ಯಶಸ್ವಿಯಾಗಿ ನಿಭಾಯಿಸುತ್ತದೆ. ಆದರೆ ಕೆಲವು ವಿಶೇಷ ಸಾಹಿತ್ಯಚಟುವಟಿಕೆಗಳಿಗೆ ಬೇಕಾದ ಹಣಕಾಸಿನ ನೆರವನ್ನು ನಿಭಾಯಿಸುವುದಕ್ಕಾಗಿ ಅನೇಕ ಬಾಹ್ಯ ಸಂಘಟನೆಗಳು ಕಾಲೇಜಿನ ವೇದಿಕೆಯೊಂದಿಗೆ ಕೈಜೋಡಿಸುತ್ತವೆ. ಇವರುಗಳಲ್ಲಿ ಹೆಸರಿಸಬೇಕಾದ ಸಂಘಟನೆಗಳೆಂದರೆ: ರಥಬೀದಿ ಗೆಳೆಯರು, ಅಂಬಲಪಾಡಿ ದೇವಾಲಯ, ಅಷ್ಟಮಠಗಳು ಇತ್ಯಾದಿ ಸಾಮಾಜಿಕ ಮುಂಚೂಣಿಯಲ್ಲಿರುವ ಸಂಘಟನೆ/ಸಂಸ್ಥೆಗಳು.

2) **ವಿದ್ಯಾರ್ಥಿ ಉಪನ್ಯಾಸಕರ ಜಂಟಿ ಸಹಭಾಗಿತ್ವ:** ಕಾಲೇಜಿನ ಯಾವುದೇ ಕಾರ್ಯಕ್ರಮಕ್ಕೂ ತಮ್ಮ ತಮ್ಮ ವಿಭಾಗದ ಸಂಪೂರ್ಣ ಸಹಕಾರ ನೀಡುತ್ತಾ, ಉಪನ್ಯಾಸಕರು ವಿದ್ಯಾರ್ಥಿಗಳಷ್ಟೇ ಆಸಕ್ತಿಯಿಂದ ಕಾರ್ಯಕ್ರಮಗಳಲ್ಲಿ ಪಾಲ್ಗೊಳ್ಳುವುದು ಈ ಕಾಲೇಜಿನ ವೈಶಿಷ್ಟ್ಯ. ಕಾಲೇಜು ಸಂಚಿಕೆಗಳಲ್ಲಿ ಇದಕ್ಕೆ ಸಾಕಷ್ಟು ಉದಾಹರಣೆಗಳು ದೊರಕುತ್ತವೆ. ಉದಾಹರಣೆಗಾಗಿ ಉದ್ಯಾವರ ಮಾಧವ ಆಚಾರ್ಯರ ಹೇಳಿಕೆಯನ್ನಿಲ್ಲಿ ದಾಖಲಿಸುವುದು ಔಚಿತ್ಯಪೂರ್ಣವಾಗಿದೆ. "ರಾತ್ರಿ 2 ಗಂಟೆಯ ತನಕ ನಾಟಕ, ಯಕ್ಷಗಾನ, ನೃತ್ಯರೂಪಕಗಳ ಸಿದ್ಧತೆ ನಡೆಸಿದರೂ ಹೆತ್ತವರ ಆಣತಿಯೊಂದಿಗೆ ವಿದ್ಯಾರ್ಥಿಸಮೂಹ ನಲಿಮು, ನಟಿಸುತ್ತಿದ್ದರಲ್ಲ; ಎಂಥ ತನ್ಮಯತೆ; ಎಂಥ ನಂಬಿಕೆ; ನನ್ನ 69ನೆಯ ಮಾದರಿಯ ಅಂಬಾಸಿಡರ್ 3547 ಅವರನ್ನೆಲ್ಲಾ ಹೊತ್ತು

ಎಲ್ಲಿ ಕಟಪಾಡಿಯ ಕಾಡಿನ ಬದಿಯ ಮನೆ, ಎಲ್ಲಿ ಕುತ್ಪಾಡಿಯ ಓಣಿಯ ಒಳಗಿನ ಮನೆ ಅಲ್ಲೆಲ್ಲ ಹೋಗಿ ಅವರನ್ನೆಲ್ಲ ಮನೆತಲುಪಿಸಿ, ಮತ್ತೆ ಮನೆಗೆ ಬಂದು ನನಗಾಗಿ ಕಾದು ಎದ್ದು ಬಂದು ಅನ್ನ ಹುಳಿ-ಸಾರು-ಬಿಸಿಮಾಡಿ, ಉಣಬಡಿಸಿ, ಮತ್ತೆ ನಾನು ಉಣ್ಣುತ್ತಿದ್ದ ನನ್ನ ಮನೆಯವಳ ತ್ಯಾಗಕ್ಕೂ ನನ್ನಮ್ಮನ ಕಾಯುವಿಕೆಗೂ ಪೂರ್ಣಪ್ರಜ್ಞದ ವಾತಾವರಣವೇ ನೆರಳಾಗಿತ್ತು."(ಸಂ: ನಟರಾಜ ಧೀಕ್ಷಿತ ಬಿ., 1997-98, ಪು-26)

**3) ಸಾಹಿತ್ಯ-ಸಂಗೀತ-ನಾಟಕ-ಯಕ್ಷಗಾನ-ಸಿನೆಮಾ-ಧಾರಾವಾಹಿ ಮುಂತಾದ ಚಟುವಟಿಕೆಗಳಲ್ಲಿ ಗುರುತಿಸಿಕೊಂಡ ಕಾಲೇಜು:**

ಪೂರ್ಣಪ್ರಜ್ಞ ಕಾಲೇಜು ಆರಂಭದಿಂದಲೂ ಈಗಾಗಲೇ ಉಲ್ಲೇಖಿಸಿದಂತೆ ಸಾಹಿತ್ಯ ಮತ್ತು ಸಾಂಸ್ಕೃತಿಕ ಚಟುವಟಿಕೆಗಳಿಗೆ ಸಮಾನಪ್ರಾಶಸ್ತ್ಯವನ್ನು ನೀಡುತ್ತಾ ಬಂದಿದೆ. ವಿದ್ಯಾರ್ಥಿಗಳು ತಮ್ಮ ಆಸಕ್ತಿ ಅಭಿರುಚಿಗಳಿಗನುಸರಿಸಿ, ವಿವಿಧ ಸಾಂಸ್ಕೃತಿಕ-ಸಾಹಿತ್ಯ-ಚಟುವಟಿಕೆಗಳಲ್ಲಿ ತೊಡಗಿಸಿಕೊಳ್ಳುವುದು ಅವರ ಆಯ್ಕೆಗೆ ಬಿಟ್ಟ ವಿಚಾರವೆನ್ನುವುದು ಕಾಲೇಜು ಸಂಚಿಕೆಯಿಂದ ಅರ್ಥೈಸಬಹುದಾಗಿದೆ. ವಿದ್ಯಾರ್ಥಿ ಮತ್ತು ಉಪನ್ಯಾಸಕರ ಈ ಸಾಂಸ್ಕೃತಿಕ ಆಸಕ್ತಿ ಮುಂದೆ ಸಿನೆಮಾ-ಧಾರಾವಾಹಿಯಲ್ಲಿ ನಟಿಸುವ ಹಂತವನ್ನೂ ತಲುಪಿತು ಎನ್ನುವುದು ಕಾಲೇಜು ಉಪನ್ಯಾಸಕರ ಮತ್ತು ವಿದ್ಯಾರ್ಥಿಗಳ ಸಾಂಸ್ಕೃತಿಕ ಅಭಿರುಚಿಯ ತೀವ್ರತೆಯನ್ನು ತೆರೆದು ತೋರಿಸುತ್ತದೆ.

**4) ಭೌತವಿಜ್ಞಾನ ವಾಣಿಜ್ಯ ವಿಭಾಗ ಜೀವವಿಜ್ಞಾನ ಮುಂತಾದ ಸಾಹಿತ್ಯೇತರ ನಿಕಾಯಗಳಿಂದಲೂ ಚರ್ಚೆ, ಕಮ್ಮಟ, ವಿಚಾರಗೋಷ್ಠಿಯ ವ್ಯವಸ್ಥೆ:**

ಕಾಲೇಜಿನ ವಿವಿಧ ಸಾಹಿತ್ಯ-ಸಾಂಸ್ಕೃತಿಕ ವೇದಿಕೆಗಳು ಸಾಹಿತ್ಯಗೋಷ್ಠಿ ಮತ್ತು ಕಮ್ಮಟಗಳನ್ನು ನಡೆಸುವುದು ಎಲ್ಲ ಕಾಲೇಜಿನಲ್ಲೂ ಸಾಮಾನ್ಯ ವಿಚಾರವಾಗಿದೆ. ಆದರೆ ಪೂರ್ಣಪ್ರಜ್ಞ ಕಾಲೇಜಿನ ವಿಜ್ಞಾನ ಹಾಗೂ ವಾಣಿಜ್ಯ ವಿಭಾಗವು ವಿವಿಧ ವೇದಿಕೆಗಳ ವತಿಯಿಂದ ನಿರಂತರವಾಗಿ ಕಮ್ಮಟ, ವಿಚಾರಗೋಷ್ಠಿಗಳನ್ನು ಸಂಘಟಿಸುತ್ತಾ ಬಂದಿದೆ. ಆ ಗೋಷ್ಠಿಗಳ ಮೂಲಕ ಆಯಾ ಕ್ಷೇತ್ರಗಳಿಗೆ ಸಂಬಂಧಿಸಿದ ಪ್ರಚಲಿತ ವಿದ್ಯಮಾನಗಳ ಸಮಸ್ಯೆಗಳನ್ನು ಎತ್ತಿ ಹಿಡಿಯುವುದು, ಆ ಸಮಸ್ಯೆಗಳ ಮಹತ್ವವನ್ನು ಆಯಾಯ ಕ್ಷೇತ್ರಗಳಲ್ಲಿ ತಜ್ಞತೆ ಇರುವ ಎಲ್ಲರಿಗೂ ಮನಗಾಣಿಸುವುದೇ ಈ ಕಮ್ಮಟಗಳ ಮುಖ್ಯ ಉದ್ದೇಶವೆನ್ನುವುದು ಸಂಚಿಕೆಗಳಲ್ಲಿರುವ ದಾಖಲೆಗಳಿಂದ ತಿಳಿದುಬರುತ್ತದೆ.

**5) ವಿದ್ಯಾರ್ಥಿಗಳಿಂದ ಪ್ರಬಂಧ ಮಂಡನೆ:** ಬೇರೆ ಬೇರೆ ಕಾಲೇಜುಗಳಲ್ಲಿ ನಡೆಯುವ ಕಮ್ಮಟ, ವಿಚಾರಸಂಕಿರಣಗಳಲ್ಲಿ ವಿದ್ಯಾರ್ಥಿಗಳು ಪಾಲ್ಗೊಳ್ಳುವುದು ಮಾತ್ರವಲ್ಲದೆ, ಅಲ್ಲಿಯ ಕಮ್ಮಟಗಳಲ್ಲಿ ಪ್ರಬಂಧ ಓದುವುದಕ್ಕೆ ಬೇಕಾದ ಸಿದ್ಧತೆಯೊಂದಿಗೆ ವಿದ್ಯಾರ್ಥಿಗಳು ಹಾಜರಾಗುತ್ತಾರೆ ಎನ್ನುವುದು ಪೂರ್ಣಪ್ರಜ್ಞದ ವಿಶೇಷತೆಯಾಗಿರುತ್ತದೆ.

**6) ಸಂವಾದ ಮಾದರಿಯ ಚಟುವಟಿಕೆಗಳಿಗೆ ಹೆಚ್ಚಿನ ಪ್ರಾಶಸ್ತ್ಯ:** ಪೂರ್ಣಪ್ರಜ್ಞದ ವಿವಿಧ ವೇದಿಕೆಗಳು ನಡೆಸುವ ಸಾಹಿತ್ಯ ಗೋಷ್ಠಿಗಳಲ್ಲಿ ವೇದಿಕೆಯಲ್ಲಿರುವ ಸಂಪನ್ಮೂಲ ವ್ಯಕ್ತಿಗಳು ವಿದ್ಯಾರ್ಥಿಗಳೊಂದಿಗೆ ಚರ್ಚೆ ಅಥವಾ ಪರಸ್ಪರ ಸಂವಾದಕ್ಕೆ ಹೆಚ್ಚಿನ ಪ್ರಾಶಸ್ತ್ಯವನ್ನು ನೀಡುತ್ತಿರುವುದನ್ನು ಗಮನಿಸಬಹುದಾಗಿದೆ. 1960ರ ದಶಕದ ಸು.ರಂ. ಎಕ್ಕುಂಡಿಯವರ ಕಾರ್ಯಕ್ರಮದಿಂದ ಮೊದಲ್ಗೊಂಡು, 1996-97ರ ಸಾಹಿತ್ಯಸೃಷ್ಟಿಯ ಕಮ್ಮಟದ ತನಕ ಎಲ್ಲಾ ಸಾಹಿತ್ಯ ಚಟುವಟಿಕೆಗಳಲ್ಲಿ ಸಂವಾದವೇ ಕಾರ್ಯಕ್ರಮದ ಪ್ರಧಾನ ವೈಶಿಷ್ಟ್ಯವಾಗಿರುತ್ತಿತ್ತು.

7) **ಕಾಲೇಜಿನ ಬಹುಮಂದಿ ಉಪನ್ಯಾಸಕರು-ಸಾಹಿತ್ಯ-ಸಾಂಸ್ಕೃತಿಕ-ಸಂಗೀತ ಕಲೋಪಾಸಕರು:**

ಇಲ್ಲಿಯ ಬಹುತೇಕ ಉಪನ್ಯಾಸಕರು ನಾಟಕ, ಯಕ್ಷಗಾನ, ಸಂಗೀತ, ನೃತ್ಯ, ಸಾಹಿತ್ಯ ಮುಂತಾದ ಪಠ್ಯೇತರ ಕ್ಷೇತ್ರಗಳಲ್ಲಿ ಕೇವಲ ಆಸಕ್ತರು ಮಾತ್ರವಲ್ಲದೇ ಪರಿಣತರೂ ಹೌದು. ಸಂಗೀತ-ನಾಟಕ-ನೃತ್ಯ-ಯಕ್ಷಗಾನದಂತಹ ವಿಭಿನ್ನ ಕಲಾಮಾಧ್ಯಮದ ಮೂಲಕ ಜೀವನದ ಸಂಕೀರ್ಣ ಸಮಸ್ಯೆಗಳಿಂದ ಬಿಡುಗಡೆಹೊಂದಿ ಬದುಕಿನ ಸತ್ಯದ ಶೋಧವು-ಉಪನ್ಯಾಸಕರ ಗುರಿಯಾಗಿದ್ದು, ಈ ದಾರಿಯಲ್ಲಿಯೇ ವಿದ್ಯಾರ್ಥಿವೃಂದವನ್ನು ಮುನ್ನಡೆಸುವುದಕ್ಕಾಗಿ ವಿವಿಧ ವೇದಿಕೆಗಳ ಮೂಲಕ ಸಂವಾದ-ಚರ್ಚೆಗಳಿಗೆ ಅವಕಾಶ ಕಲ್ಪಿಸಲಾಗಿದೆ. ಇದುವೇ ಪೂರ್ಣಪ್ರಜ್ಞ ಸಾಹಿತ್ಯ-ಸಾಂಸ್ಕೃತಿಕ ಚಟುವಟಿಕೆಗಳ ಹಿಂದಿನ ತಾತ್ತ್ವಿಕತೆ ಎನ್ನುವುದು ಉದ್ಯಾವರ ಮಾಧವ ಆಚಾರ್ಯ ಹಾಗೂ ನಟರಾಜ್ ದೀಕ್ಷಿತ್ ಅವರು ತಮ್ಮ ಅಭಿಪ್ರಾಯವನ್ನು ಮೌಖಿಕ ಸಂದರ್ಶನದ ಸಂದರ್ಭದಲ್ಲಿ ಹೇಳಿಕೊಂಡಿದ್ದಾರೆ. ಇಲ್ಲಿ ನಡೆಸಲಾಗುವ **ಚಿಂತನಾತ್ಮಕ ಚಟುವಟಿಕೆ**ಗಳ ಮೂಲಕ ವಿದ್ಯಾರ್ಥಿ ಪೂರ್ಣಪ್ರಜ್ಞನಾಗುವ ದಾರಿಯಲ್ಲಿ ಮುನ್ನಡೆಯಬೇಕೆಂಬುದೇ ಸಂಸ್ಥೆಯ ಉಪನ್ಯಾಸಕರ ಹಾಗೂ ಸಂಸ್ಥಾಪಕರ ನಿಲುವಾಗಿದೆ.

8) **ಸರ್ವವೂ ಪೂರ್ಣಪ್ರಜ್ಞಾಂತರ್ಗತ:** ಪೂರ್ಣಪ್ರಜ್ಞದ ಎಲ್ಲ ಚಟುವಟಿಕೆಗಳು ಪೂರ್ಣಪ್ರಜ್ಞ ಕಾಲೇಜು ತರಗತಿಗಳಲ್ಲಿಯೂ ಇನ್ನು ಕೆಲವೊಮ್ಮೆ ಸಣ್ಣ ಸಭಾಮಂದಿರಗಳಲ್ಲಿಯೂ ಕೆಲವು ಬೃಹತ್ ಸಮ್ಮೇಳನಗಳು ಪೂರ್ಣಪ್ರಜ್ಞ ಸಭಾಮಂದಿರದಲ್ಲಿಯೂ ಜರಗುತ್ತವೆ. ಕಾಲೇಜು ನಿವೇಶನದಲ್ಲಿರುವ ಎಲ್ಲ ಭೌತಿಕ ಕಟ್ಟಡಗಳೂ ಪೂರ್ಣಪ್ರಜ್ಞವೇ! ಎಲ್ಲ ಕಾರ್ಯಚಟುವಟಿಕೆಗಳು ಪೂರ್ಣಪ್ರಜ್ಞವೆಂಬ ಅಖಂಡ ಜ್ಞಾನಕೇಂದ್ರದ ಸುತ್ತಲೂ ನಡೆಯುತ್ತಿರುತ್ತವೆ. ವಠಾರದಲ್ಲಿರುವ ವಿವಿಧ ಕಟ್ಟಡಗಳಿಗೆ ವಿವಿಧ ಹೆಸರುಗಳಿರದೆ ಎಲ್ಲವೂ ಒಂದೇ ಹೆಸರಿನ ಅಧೀನದಲ್ಲಿಯೇ ಉಳಿದಿವೆ ಎನ್ನುವುದು ಈ ಸಂಸ್ಥೆಯ ಇನ್ನೊಂದು ವೈಶಿಷ್ಟ್ಯವಾಗಿದೆ.

**ಪೂರ್ಣಪ್ರಜ್ಞ ಕಾಲೇಜು, ಉಡುಪಿ ಇಲ್ಲಿನ ಕನ್ನಡ ಸಾಹಿತ್ಯಚಟುವಟಿಕೆಗಳಿಂದ ಪ್ರೇರಿತರಾಗಿ, ಸಾಹಿತ್ಯ ಚಟುವಟಿಕೆಗಳಲ್ಲಿ ತೊಡಗಿಸಿಕೊಂಡ ವಿದ್ಯಾರ್ಥಿಗಳ ಮಾಹಿತಿ : ಅನುಬಂಧ ಸಂಖ್ಯೆ 7 ರಲ್ಲಿ ನೀಡಲಾಗಿದೆ.**

## ಶ್ರೀ ಭುವನೇಂದ್ರ ಕಾಲೇಜು, ಕಾರ್ಕಳ

**ಕಾಲೇಜಿನ ಹಿನ್ನೆಲೆ:**

ಕಾರ್ಕಳದ ಶ್ರೀ ವೆಂಕಟರಮಣ ದೇವಳದ ಅಧೀನಕ್ಕೊಳಪಟ್ಟ ಶಿಕ್ಷಣ ಪ್ರತಿಷ್ಠಾನವು 20ನೇ ಶತಮಾನದ ಎರಡನೇ ದಶಕದ ಹೊತ್ತಿಗೆ ಕಾರ್ಕಳದ ಶ್ರೀನಿವಾಸಾಶ್ರಮದಲ್ಲಿ ಮದ್ರಾಸ್ ವಿಶ್ವವಿದ್ಯಾನಿಲಯದ ಸಂಯೋಜನೆಗೊಳಪಟ್ಟು 'ಶ್ರೀ ಭುವನೇಂದ್ರ ಸಂಸ್ಕೃತ ಕಾಲೇಜು' ಎಂಬ ಸಂಸ್ಥೆಯನ್ನು ನಡೆಸಿಕೊಂಡು ಬರುತ್ತಿತ್ತು. ಈ ಸಂಸ್ಥೆಯು 1960ರ ಸುಮಾರಿಗೆ ವಿದ್ಯಾರ್ಥಿಗಳ ಪ್ರವೇಶವಿಲ್ಲದೇ ಮುಚ್ಚಿಕೊಂಡಿತ್ತು. ಆ ಸಂಸ್ಕೃತ ಕಾಲೇಜಿನ ಕಟ್ಟಡ ಮತ್ತು ನಿವೇಶನವು ಶ್ರೀ ಭುವನೇಂದ್ರ ಕಾಲೇಜು ಎಂಬ ಡಾ। ಮಾಧವ ಪೈ ಅವರ ಸಂಸ್ಥೆಗೆ ಷರತ್ತುಬದ್ಧವಾಗಿ ವರ್ಗಾವಣೆಗೊಂಡು ದಿನಾಂಕ 18.08.1960ರಲ್ಲಿ ಅಧಿಕೃತವಾಗಿ ಉಡುಪಿಯಲ್ಲಿ ನೋಂದಾವಣಿಗೊಂಡಿತು.

ಮೈಸೂರು ವಿಶ್ವವಿದ್ಯಾನಿಲಯದ ಸಂಯೋಜನೆಗೊಳಪಟ್ಟ ಶ್ರೀ ಭುವನೇಂದ್ರ ಕಾಲೇಜಿನ ಪ್ರಾಂಶುಪಾಲರಾಗಿ ಸುಮಾರು 17 ವರ್ಷಗಳ ಕಾಲ ಕಾಲೇಜನ್ನು ಸಮರ್ಥವಾಗಿ ಮುನ್ನಡೆಸಿದವರೇ ಪ್ರೊ. ಕೆ. ದಾಮೋದರ ಕಿಣಿಯವರು. ಈ ಪ್ರಾಂಶುಪಾಲರ ಆಯ್ಕೆಯ ಕುರಿತು ಪ್ರೊ. ಕು. ಶಿ. ಹರಿದಾಸ ಭಟ್ಟರ ಅಭಿಪ್ರಾಯವನ್ನು ಇಲ್ಲಿ ದಾಖಲಿಸುವುದು ಈ ಅಧ್ಯಯನ ದೃಷ್ಟಿಯಿಂದ ಔಚಿತ್ಯಪೂರ್ಣವೇ ಆಗಿದೆ.

"ಒಳ್ಳೆಯ ಪ್ರಾಧ್ಯಾಪಕರನ್ನು ಪ್ರಿನ್ಸಿಪಾಲರನ್ನಾಗಿ ಮಾಡಿ ಕಾಲೇಜಿನ ಅಂತರಾತ್ಮದ ಭದ್ರತೆ ನೋಡಿಕೊಳ್ಳುವ ಡಾ. ಪೈ ಅವರ ಪದ್ಧತಿಯಂತೆ ಕಾರ್ಕಳದ ಜನರು ಜಿಲ್ಲೆಯ ಆಸುಪಾಸು ತಡಕಾಡಿದರು. ಸೈಂಟ್ ಅಲೋಷಿಯಸ್ ಕಾಲೇಜಿನ ರಸಾಯನಶಾಸ್ತ್ರ ಪ್ರಾಧ್ಯಾಪಕರೂ, ಕಾರ್ಕಳದ ಸಂಜಾತರೂ ಆಗಿದ್ದ ದಾಮೋದರ ಕಿಣಿಯವರನ್ನು ಆರಿಸಿ, ಕರೆತಂದದ್ದಾಯಿತು."(ಸಂ: ಅಭಿನಂದನ ಸಮಿತಿ, 1987, ಪು–12) ಪಠ್ಯವಿಷಯಗಳ ಸಹಿತ ಪಠ್ಯೇತರ ಚಟುವಟಿಕೆಗಳಿಗೆ ಕಾಲೇಜು ಆರಂಭದಿಂದಲೂ ವಿಶೇಷ ಪ್ರೋತ್ಸಾಹ ನೀಡುತ್ತಾ ಬಂದಿದ್ದು, ಪಠ್ಯಪೂರಕ ಚಟುವಟಿಕೆಗಳಲ್ಲಿ ಬಹಳ ಮುಖ್ಯವಾದ ಅಂಗವೇ ಸಾಹಿತ್ಯ ಚಟುವಟಿಕೆಗಳಾಗಿವೆ. ಆ ಸಾಹಿತ್ಯ ಚಟುವಟಿಕೆಗಳ ಸ್ವರೂಪ ಮತ್ತು ಪರಿಣಾಮಗಳ ಕುರಿತು ಕಾಲೇಜಿನ ಸಾಹಿತ್ಯಸಂಘದ ಸಂಚಾಲಕರೂ, ಕನ್ನಡ ವಿಭಾಗದ ಮುಖ್ಯಸ್ಥರೂ ಆಗಿದ್ದ ಪ್ರೊ. ಎಂ. ರಾಮಚಂದ್ರ ಅವರ ಹೇಳಿಕೆಯನ್ನು ಇಲ್ಲಿ ಹೀಗೆ ಉಲ್ಲೇಖಿಸಬಹುದಾಗಿದೆ. "ಶ್ರೀ ಭುವನೇಂದ್ರ ಕಾಲೇಜಿನಲ್ಲಿ ನನ್ನ ಅಧ್ಯಾಪನದ 35 ವರ್ಷಗಳಲ್ಲಿ 33 ವರ್ಷ ಕಾಲೇಜಿನ ಸಾಹಿತ್ಯಸಂಘದ ಅಧ್ಯಕ್ಷನಾಗಿ ಕರ್ತವ್ಯನಿರ್ವಹಿಸುವ ಅವಕಾಶ ಲಭಿಸಿತ್ತು. ಸಂಘದ ಕಾರ್ಯಕ್ರಮಗಳು ಅನೇಕ ವಿದ್ಯಾರ್ಥಿನಿಯರ ಹೃದಯಕ್ಷೇತ್ರದಲ್ಲಿ ಸಾಹಿತ್ಯಾಸಕ್ತಿಯ ಬೀಜವನ್ನು ಹೇಗೆ ಬಿತ್ತಿತು, ಆ ಬೀಜಗಳು ಹೇಗೆ ಮೊಳೆತುವು, ಬೆಳೆದು ಹೂ ಹಣ್ಣುಗಳಿಂದ ತುರುಗಿದವು ಎಂಬುದನ್ನು ನಾನು ಕಂಡಿದ್ದೇನೆ. ಕಂಡು ಅತ್ಯಂತ ಹರ್ಷಿತನಾಗಿದ್ದೇನೆ."(ಸಂ: ಪದ್ಮನಾಭ ಗೌಡ ವಿ., ಪ್ರೊ., 2011, ಪು–176) ಎಂದು ತಮ್ಮ ದುಡಿತದ ಮೂಲಕ ಸಿಕ್ಕಿದ ಆನಂದ ಹಾಗೂ ಆತ್ಮತೃಪ್ತಿಯನ್ನು ಓದುಗರಲ್ಲಿ ಹಂಚಿಕೊಂಡಿದ್ದಾರೆ.

1) **ಕಾಲೇಜು ವಠಾರದಲ್ಲಿ ನಡೆದ ಸಾಹಿತ್ಯ ಚಟುವಟಿಕೆಗಳು:** ಇಲ್ಲಿನ ಸಾಹಿತ್ಯಚಟುವಟಿಕೆಗಳಲ್ಲಿ ಪಾಲ್ಗೊಳ್ಳಲು ಸಂಪನ್ಮೂಲವ್ಯಕ್ತಿಗಳಾಗಿ ರಾಜ್ಯದ ವಿವಿಧ ಭಾಗಗಳಿಂದ ವಿದ್ವಾಂಸರು ಆಗಮಿಸಿರುವುದು ಕಂಡುಬರುತ್ತದೆ. ಸೇಡಿಯಾಪು ಅವರ ಸಾಹಿತ್ಯೋತ್ಸವ ಸಮಾರಂಭದಲ್ಲಿ ಸಂಪನ್ಮೂಲವ್ಯಕ್ತಿಯಾಗಿ ಪಾಲುಗೊಂಡ ಶ್ರೀ ಆರ್. ಗಣೇಶ್, ಶ್ರೀ ಜಿ.ಟಿ. ನಾರಾಯಣರಾವ್, ಡಾ. ಎಸ್. ವೇಣುಗೋಪಾಲರಾವ್ ಎಂಬೀ ಮೂವರು ಅಂದಿನ ವೇದಿಕೆಯಲ್ಲಿ ಮಂಡಿಸಿದ ಪ್ರಬಂಧವು 1989–90ರ ಸಂಚಿಕೆಯಲ್ಲಿ ದಾಖಲಾಗಿರುವುದು ಕಂಡುಬರುತ್ತದೆ. ಇನ್ನುಳಿದಂತೆ ಕಾಲೇಜು ನಡೆಸಿದ ಯಾವುದೇ ಸಾಹಿತ್ಯ ಚಟುವಟಿಕೆಗಳ ಸಮಗ್ರ ಅಥವಾ ಸಂಕ್ಷಿಪ್ತ ವರದಿಯು ಸಂಚಿಕೆಯಲ್ಲಿ ವರದಿ ರೂಪದಲ್ಲಿ ದಾಖಲಾಗಲಿಲ್ಲ ಎನ್ನುವುದು ಸಾಹಿತ್ಯ ವಿದ್ಯಾರ್ಥಿಗಳ ಪಾಲಿಗೆ ಒಂದು ಕೊರತೆಯೆಂದೇ ಗುರುತಿಸಬಹುದಾದ ಸಂಗತಿಯಾಗಿದೆ.

ಕಾರ್ಕಳದ ಸುತ್ತಮುತ್ತಲಿನ ಪ್ರದೇಶದ ಸಾಂಸ್ಕೃತಿಕ ಮಹತ್ವವನ್ನು ಎತ್ತಿ ಹಿಡಿಯುವ ಹಾಗೂ ಆ ಪರಿಸರ ಪ್ರದೇಶದ ಸಂಚಿಕೆ–ಆಚರಣೆ–ಆರಾಧನೆಗೆ ಸಂಬಂಧಿಸಿದ ಯಾವುದೇ ವಿಚಾರಗೋಷ್ಠಿ, ಉಪನ್ಯಾಸಗಳಿಗೆ ಕಾಲೇಜಿನ ಸಾಹಿತ್ಯ ಚಟುವಟಿಕೆಗಳಲ್ಲಿ ಅವಕಾಶ ನೀಡಿಲ್ಲ ಎನ್ನುವುದು ವಾರ್ಷಿಕ ಸಂಚಿಕೆಗಳಿಂದ ತಿಳಿದುಬರುತ್ತದೆ. ಆದರೆ '**ಕಾರ್ಕಳ ಒಂದು**

**ಪ್ರಾದೇಶಿಕ ಅಧ್ಯಯನ'** ಎಂಬ ವಿಶೇಷ ಸಂಚಿಕೆಯನ್ನು ಬೆಳ್ಳಿಹಬ್ಬದ ಪ್ರಯುಕ್ತ ಪ್ರಕಟಗೊಳಿಸಲಾಗಿದ್ದು, ಆ ಗ್ರಂಥವಲ್ಲಿ ಕಾರ್ಕಳ ತಾಲೂಕು ಪ್ರದೇಶದ ಇತಿಹಾಸ, ಆರ್ಥಿಕ ಸಾಮಾಜಿಕ ವಿಶ್ಲೇಷಣೆ ಹಾಗೂ ಇಲ್ಲಿಯ ರಾಣೆ ಜನಾಂಗದ ಕುರಿತು ನಡೆಸಿದ ಅಧ್ಯಯನದ ಪ್ರಬಂಧವೊಂದನ್ನು ಈ ಸಂಚಿಕೆಯಲ್ಲಿ ಪ್ರಕಟಿಸಲಾಗಿದೆ ಎಂಬುದು ಈ ಸಂಚಿಕೆಯ ವಿಶೇಷತೆ.

ಕಾಲೇಜಿನ ಶೈಕ್ಷಣಿಕ ಇತಿಹಾಸದಲ್ಲಿ ಶಾಶ್ವತವಾಗಿ ನೆನಪಿನಲ್ಲುಳಿಯುವ ಸಾಹಿತ್ಯಕವಾಗಿ ಅತ್ಯಂತ ಪ್ರಮುಖವಾಗಿ ಗುರುತಿಸಲೇ ಬೇಕಾದ ಕಾರ್ಯಕ್ರಮ ಅಥವಾ ಚಟುವಟಿಕೆಯೇ ಈ ಕಾಲೇಜಿನ ರಜತಮಹೋತ್ಸವ ಸಮಾರಂಭ. 1985ನೇ ಜನವರಿ 30 ರಿಂದ ಮೊದಲ್ಗೊಂಡು, ಫೆಬ್ರುವರಿ 7 ರ ತನಕ ನಡೆದ ಈ ಸುದೀರ್ಘ ಕಾರ್ಯಕ್ರಮದಲ್ಲಿ ಫೆಬ್ರುವರಿ 5 ರಂದು ಸಾಹಿತ್ಯಚಟುವಟಿಕೆಯಾಗಿ ಚರ್ಚೆ, ಗೋಷ್ಠಿ, ಸಂವಾದಗಳು ವೈಶಿಷ್ಟ್ಯಪೂರ್ಣವಾಗಿ ನಡೆದು, ಸಂಪನ್ಮೂಲ ಅತಿಥಿಗಳು ತಮ್ಮ ಅಪಾರ ಅನುಭವದ ಮತ್ತು ವಿದ್ವತ್ತಿಯ ಹಿನ್ನೆಲೆಯಿಂದ ತಮ್ಮ ಪ್ರಬಂಧಗಳನ್ನು ಮಂಡಿಸಿದರು. ವಾರಪೂರ್ತಿ ನಡೆದ ಈ ಬೆಳ್ಳಿಹಬ್ಬ ಕಾರ್ಯಕ್ರಮದಲ್ಲಿ ಆರ್ಥಿಕಗೋಷ್ಠಿ, ಶಿಕ್ಷಣ ಗೋಷ್ಠಿ, ಪ್ರಾಕ್ತನ ವಿದ್ಯಾರ್ಥಿಗಳಿಂದ ಗುರುವಂದನಾ ಕಾರ್ಯಕ್ರಮ ಕಾಲೇಜಿನ ವರ್ಧಂತ್ಯುತ್ಸವ ವಿವಿಧ ಸಾಂಸ್ಕೃತಿಕ ಕಾರ್ಯಕ್ರಮಗಳು ನಡೆದ ಸುದೀರ್ಘ ವಿವರಣೆಗಳು 'ಬೆಳ್ಳಿಗರಿ' ಎಂಬ ವಿಶೇಷ ಸಂಚಿಕೆಯಲ್ಲಿ ಪ್ರಕಟಗೊಂಡಿರುತ್ತವೆ. ಈ ಎಲ್ಲ ಕಾರ್ಯಕ್ರಮಗಳ ವಿವರಗಳು ಈ ಅಧ್ಯಯನದ ವ್ಯಾಪ್ತಿಗೆ ಮೀರಿರುವ ಕಾರಣ ಕೇವಲ ಫೆಬ್ರುವರಿ 5, 1985ರಂದು ನಡೆದ 'ಸಾಹಿತ್ಯಗೋಷ್ಠಿ'ಯ ಚರ್ಚೆಯನ್ನು ಸ್ವರೂಪವನ್ನಷ್ಟೇ ಇಲ್ಲಿ ಸಂಕ್ಷಿಪ್ತವಾಗಿ ವಿಶ್ಲೇಷಿಸಲಾಗಿದೆ. ಅಂದು ಪೂರ್ವಾಹ್ನ ಗೋಷ್ಠಿಯನ್ನು ಉದ್ಘಾಟಿಸಿದ ಡಾ. ಶಿವರಾಮ ಕಾರಂತರು ಪತ್ರಿಕೆಗಳು ಕನ್ನಡದ ಕುರಿತಂತೆ ಬಳಕೆಯಲ್ಲಿರುವ ಇಂಗ್ಲೀಷ್ ಪದಗಳನ್ನೇ ಕನ್ನಡ ಪತ್ರಿಕೆಯಲ್ಲಿ ಅನುಕರಿಸಬೇಕಾಗಿಲ್ಲ ಎಂದು ಸೂಚಿಸಿ, ವಿಜ್ಞಾನ ವಿಷಯವನ್ನು ಇಂಗ್ಲೀಷ್‌ನಲ್ಲಿ ಬರೆದಂತೆ ಕನ್ನಡದಲ್ಲೂ ಬರೆಯಲು ಸಾಧ್ಯ ಎಂದು ತಮ್ಮದೇ ಕೃತಿಯ ಉದಾಹರಣೆಯೊಂದಿಗೆ ಪ್ರಸ್ತಾವಿಸಿ, ತಮ್ಮ ಉದ್ಘಾಟನಾ ಭಾಷಣವನ್ನು ನೆರವೇರಿಸಿದರು.

ಉದ್ಘಾಟನೆಯ ಅನಂತರ ಆರಂಭಗೊಂಡ ಮೊದಲ ಗೋಷ್ಠಿಯಲ್ಲಿ 'ಸಾಹಿತ್ಯದಲ್ಲಿ ಕನ್ನಡ' ಎಂಬ ವಿಷಯದ ಕುರಿತಂತೆ ಡಾ. ಸಿ.ಪಿ. ಕೃಷ್ಣಕುಮಾರ್ ಅವರು ತಮ್ಮ ನಿಲುವನ್ನು ಮಂಡಿಸುತ್ತಾ ಕನ್ನಡ ಕವಿಗಳು ಬಳಸಿದ ಭಿನ್ನ ಶೈಲಿಯ ಕನ್ನಡದ ಪ್ರಭೇದಗಳನ್ನು ವಿದ್ವಾಂಸರ ಮುಂದೆ ಪರಿಚಯಿಸಿದರು.

'ರಾಜ್ಯಭಾಷೆಯಾಗಿ ಕನ್ನಡ' ಎಂಬ ಪ್ರಬಂಧದಲ್ಲಿ ಜಯತೀರ್ಥ ರಾಜಪುರೋಹಿತ ಅವರು ಚರಿತ್ರೆಯ ಕಾಲಘಟ್ಟದಲ್ಲಿ ಕನ್ನಡ ಭಾಷಾಶೈಲಿ ಇಂದಿನ ಆಡುಭಾಷೆಗಿಂತ ಮತ್ತು ಕಾವ್ಯಭಾಷೆಗಿಂತ ಹೇಗೆ ಭಿನ್ನ ಎಂಬುದನ್ನು ಉದಾಹರಣೆಗಳಿಂದ ಸಮರ್ಥಿಸಿದರು. ಈ ಸಮರ್ಥನೆಯೊಂದಿಗೆ ನ್ಯಾಯಾಲಯಗಳಲ್ಲೂ ಕನ್ನಡ ಬಳಕೆ ಸಾಧ್ಯ ಎನ್ನುವುದನ್ನು ಚಿತ್ರದುರ್ಗ ಜಿಲ್ಲಾ ರೆವೆನ್ಯೂ ನ್ಯಾಯಾಲಯದ ನಿದರ್ಶನದೊಂದಿಗೆ ತಮ್ಮ ವಾದವನ್ನು ಸಮರ್ಥಿಸಿದರು. 'ಪತ್ರಿಕೋದ್ಯಮದಲ್ಲಿ ಕನ್ನಡ' ಎಂಬ ವಿಷಯವಾಗಿ ಪ್ರಬಂಧ ಮಂಡಿಸಿದ ಪತ್ರಕರ್ತ ಪಾ. ವೆಂ. ಆಚಾರ್ಯರು "ಹೊಸಗನ್ನಡ ಪತ್ರಿಕಾ ಶೈಲಿ ಹಿಂದಿನ ಮೈಸೂರು ಕನ್ನಡದ ಕಡೆಗೆ ಒತ್ತುತ್ತಾ ಬಂದಿದೆ. ಪ್ರಾದೇಶಿಕ ಪದಗಳು ಧಾರಾಳವಾಗಿ ವಿನಿಮಯ ಹೊಂದಿದ್ದರೂ, ಶೈಲಿ ಮತ್ತು ವ್ಯಾಕರಣ

ರೂಪಗಳು ಮೈಸೂರು ಕನ್ನಡದತ್ತ ವಾಲುತ್ತಿರುವುದು ಸ್ಪಷ್ಟ. ಇದರಲ್ಲಿ ಕೆಲವಂಶ ಇಷ್ಟವಾದ ಪರಿವರ್ತನೆ"(ಸಂ: ದಾಮೋದರ ಕಿಣಿ ಕೆ., 1986, ಪು–169)–ಎನ್ನುವುದನ್ನು ಸೂಕ್ತ ಉದಾಹರಣೆಗಳೊಂದಿಗೆ ವಿವರಿಸಿದರು.

ಸಾಹಿತ್ಯಗೋಷ್ಠಿಯ ಕೊನೆಯ ಪ್ರಬಂಧವಾಗಿ ತಮ್ಮ ನಿಲುವನ್ನು ಮಂಡಿಸಿದವರು ಖ್ಯಾತ ವಿಜ್ಞಾನ ಬರಹಗಾರರಾದ ಮತ್ತು ಪ್ರಾಧ್ಯಾಪಕರಾದ ಪ್ರೊ. ಜಿ.ಟಿ. ನಾರಾಯಣ ರಾವ್ ಅವರು. ವಿಜ್ಞಾನ ಪಠ್ಯಪುಸ್ತಕಗಳನ್ನು ಮೊದಲಾಗಿ ಈ ಜಿಲ್ಲೆಯಲ್ಲಿ ರಚಿಸಿದ ಕೋಟ ಲಕ್ಷ್ಮೀನಾರಾಯಣ ಕಾರಂತ ಮತ್ತು ಕೋಟ ವಾಸುದೇವ ಕಾರಂತ ಎಂಬಿಬ್ಬರು ಸಹೋದರರನ್ನು ತಮ್ಮ ಉಪನ್ಯಾಸದ ಪ್ರಾರಂಭದಲ್ಲಿ ನೆನಪಿಸಿ, ಮೈಸೂರು ವಿಶ್ವವಿದ್ಯಾನಿಲಯದಲ್ಲಿ ಪದವಿ ಹಂತದಲ್ಲಿ ಮೂಲವಿಜ್ಞಾನವನ್ನು ಕನ್ನಡ ಮಾಧ್ಯಮದಲ್ಲಿ ಓದುವ ವಿದ್ಯಾರ್ಥಿಗಳಿಗೆ ಕನ್ನಡದಲ್ಲಿ ಪಠ್ಯಪುಸ್ತಕ ಬರೆದ ವಿದ್ವಾಂಸರ ಹೆಸರುಗಳನ್ನು ತಮ್ಮ ಪ್ರಬಂಧದಲ್ಲಿ ಉಲ್ಲೇಖಿಸಿದರು. ಪ್ರೊ. ಜಿ.ಟಿ. ನಾರಾಯಣ ರಾವ್ ಅವರು ತಮ್ಮ ಪ್ರಬಂಧದಲ್ಲಿ, ವಿಜ್ಞಾನ ಬರಹಗಾರನಿಗೆ ಪರಿಕಲ್ಪನಾತ್ಮಕ ಸ್ಪಷ್ಟತೆ, ಭಾಷಾಪ್ರಭುತ್ವ, ಕಾರ್ಯೋತ್ಸಾಹ ಮೂರು ಅರ್ಹತೆಗಳು ಅವಶ್ಯಕ ಎಂದು ಕಂಡುಕೊಂಡ ಪ್ರೊ. ಜಿ. ಟಿ. ನಾರಾಯಣ ರಾವ್ ಅವರು ಈ ಮೂರಲ್ಲಿ ಯಾವುದಾದರೊಂದು ಮರೆಯಾದಲ್ಲಿ ಮೂಲಭಾಷೆಯ ವಿಚಾರಗಳು ಅನುವಾದಿತ ಭಾಷೆಯಲ್ಲಿ ಪರಿಣಾಮಕಾರಿಯಾಗಿ ಒಡಮೂಡವು ಎಂದು ತಮ್ಮ ಅಭಿಪ್ರಾಯವನ್ನು ಮಂಡಿಸಿದರು. ಕಾರ್ಯಕ್ರಮದ ಇನ್ನೊಂದು ಗೋಷ್ಠಿಯಾಗಿ ಡಾ. ಎಸ್. ಎಂ. ವೃಷಭೇಂದ್ರ ಸ್ವಾಮಿಯವರು 'ಬೋಧನೆಯಲ್ಲಿ ಕನ್ನಡ ಮಾಧ್ಯಮ' ಎಂಬ ವಿಷಯವಾಗಿ ತಮ್ಮ ನಿಲುವನ್ನು ಮಂಡಿಸುತ್ತಾ ಇದು ಕೇವಲ ಶಿಕ್ಷಣಮಾಧ್ಯಮಕ್ಕೆ ಮಾತ್ರ ಅನ್ವಯಿಸುವ ವಿಷಯವಾಗಿರದೆ ಇದರಲ್ಲಿ ದೇಶಭಕ್ತಿಯ ಪ್ರಶ್ನೆಯೂ ಅಡಗಿದೆ. ಪರಂಪರೆಯ ಪರಿಜ್ಞಾನದ ಪ್ರಶ್ನೆಯೂ ಹೌದು ಎನ್ನುತ್ತಾ ನಮ್ಮ ಶಿಕ್ಷಣ ಮಾಧ್ಯಮ ಮತ್ತು ಬೋಧನವಿಧಾನಗಳು ದೇಶಭಕ್ತಿಯ ಪ್ರಚೋದನೆಗೂ ಪರಂಪರೆಯ ಪುರಸ್ಕಾರಕ್ಕೂ ಪೂರಕವಾಗಿರಬೇಕು ಎಂಬ ಅಭಿಪ್ರಾಯವನ್ನು ಸ್ಪಷ್ಟಪಡಿಸಿದರು. ಕಾರ್ಯಕ್ರಮದ ಕೊನೆಯ ಗೋಷ್ಠಿಯಾಗಿ 'ಕನ್ನಡ ಮತ್ತು ಇತರ ದೇಶಭಾಷೆಗಳು' ಎಂಬ ವಿಷಯದ ಕುರಿತಾಗಿ ಖ್ಯಾತ ವಿದ್ವಾಂಸ ಭಾಷಾತಜ್ಞ ಪ್ರೊ. ಜಿ. ವೆಂಕಟಸುಬ್ಬಯ್ಯ ಅವರು ತಮ್ಮ ವಿಚಾರಗಳನ್ನು ಮಂಡಿಸುತ್ತಾ ದೇಶದಲ್ಲಿರುವ ಒಟ್ಟು ಭಾಷೆಗಳ ಸಂಖ್ಯೆ, ಸಂವಿಧಾನದಿಂದ ಮಾನ್ಯತೆ ಪಡೆದ ಭಾಷೆಗಳು–ಮತ್ತು ಪ್ರತಿಯೊಂದು ಭಾಷೆನ್ನಾಡುವ ಒಟ್ಟು ಜನಸಂಖ್ಯೆ, ಉತ್ತರ ಭಾರತದ ಇಂಡೋ–ಆರ್ಯನ್ ಭಾಷೆಗಳ ಸ್ವರೂಪ, ದಕ್ಷಿಣ ಭಾರತದ ದ್ರಾವಿಡ ಭಾಷೆಗಳ ವಿವರ, ಅವುಗಳಲ್ಲಿ ರಚನೆಯಾದ ಸಾಹಿತ್ಯದ ಪ್ರಾಚೀನತೆ ಇವುಗಳ ಕುರಿತಾದ ಸಂಕ್ಷಿಪ್ತ ವಿಶ್ಲೇಷಣೆಯನ್ನು ನಡೆಸಿದರು.

ಗೋಷ್ಠಿಯ ಕೊನೆಯಲ್ಲಿ ಅಧ್ಯಕ್ಷರ ಭಾಷಣವನ್ನು ಹಂಪ ನಾಗರಾಜಯ್ಯನವರು ನಡೆಸಿ ಕೊಡುವುದರೊಂದಿಗೆ ಬೆಳ್ಳಿಹಬ್ಬದ ಸಾಹಿತ್ಯಗೋಷ್ಠಿಯು ಮುಕ್ತಾಯಗೊಂಡಿತು.

**2) ಕಾಲೇಜು ವಠಾರದಲ್ಲಿ ಆಯೋಜಿಸಲಾದ ಆಧ್ಯಾತ್ಮಿಕ ಮತ್ತು ನೈತಿಕ ಶಿಕ್ಷಣ ಶಿಬಿರದ ಚಟುವಟಿಕೆಗಳು:**

ಕಾಲೇಜು ಶಿಕ್ಷಣದ ಅವಧಿಯಲ್ಲಿ ವಿಶ್ವವಿದ್ಯಾನಿಲಯವು ರೂಪಿಸಲಾದ ಎಲ್ಲ ಪಾಠ ಪಠ್ಯಗಳೂ ಲೌಕಿಕಜೀವನದ ಅಗತ್ಯಕ್ಕೆ ಸಂಬಂಧಿಸಿದವುಗಳೇ ಆಗಿರುತ್ತವೆ. ಆದರೆ ಜೀವನವು ಕೇವಲ ಐಹಿಕ ಸುಖ–ಭೋಗಗಳಿಗೆ ಮಾತ್ರ ಮೀಸಲಾಗಿರದೆ ಲೌಕಿಕ ಶಿಕ್ಷಣದೊಂದಿಗೆ ಪ್ರತಿಯೋರ್ವ ವ್ಯಕ್ತಿಯೂ ಅಗತ್ಯ ನೈತಿಕ ಶಿಕ್ಷಣವನ್ನು ಪಡೆಯುವುದು ಅವಶ್ಯವಾಗಿದೆ. ಸಮಾಜದಲ್ಲಿ ಶಾಂತಿ–ಸಮೃದ್ಧಿ ನೆಲೆಗೊಳ್ಳಲು ಪ್ರತಿಯೋರ್ವನಿಗೂ ಆಧ್ಯಾತ್ಮಿಕ ಧ್ಯಾನದ ಅವಶ್ಯಕತೆ ಇದೆ. ಈ ಅವಶ್ಯಕತೆಯನ್ನು

ಪೂರೈಸುವುದಕ್ಕಾಗಿ ಸಂಸ್ಥೆಯು 1974ರಿಂದ ಈ ಶಿಕ್ಷಣ ಶಿಬಿರವನ್ನು ಸಂಯೋಜಿಸಿಕೊಂಡು ಬಂದಿದೆ. ಕೇವಲ ನಾಲ್ಕು ದಿನದ ಶಿಬಿರವು ವಿದ್ಯಾರ್ಥಿಯ ಮುಂದಿನ 40 ವರ್ಷದ ಭವಿಷ್ಯದ ಬದುಕಿಗೆ ಬೇಕಾದ ನೈತಿಕಜ್ಞಾನವನ್ನು ನೀಡುವುದರ ಮೂಲಕ ಆತನ ಬದುಕು ಶಾಂತಿ ಮತ್ತು ನೆಮ್ಮದಿಯನ್ನು ಕಂಡುಕೊಳ್ಳುವ ದಾರಿಯನ್ನು ತೋರಿಸುತ್ತದೆ. ಇದಕ್ಕಾಗಿ ಆ ಕ್ಷೇತ್ರದ ತಜ್ಞ ಸಂಪನ್ಮೂಲವ್ಯಕ್ತಿಗಳನ್ನು ಕಾಲೇಜಿಗೆ ಆಹ್ವಾನಿಸಿ, ಅವರಿಂದ ಸೂಕ್ತ ತರಬೇತಿಯನ್ನು ಕೊಡಿಸುತ್ತಾ ಬಂದಿರುವುದಕ್ಕೆ ಕಾಲೇಜು ವಾರ್ಷಿಕ ಸಂಚಿಕೆಯಲ್ಲಿ ಸಮರ್ಪಕ ಸಚಿತ್ರ ವರದಿಗಳು ಲಭ್ಯವಾಗುತ್ತವೆ.

ಕಾರ್ಕಳ ಶ್ರೀ ಭುವನೇಂದ್ರ ಕಾಲೇಜಿನ ನೈತಿಕ ಮತ್ತು ಆಧ್ಯಾತ್ಮಿಕ ಶಿಬಿರಗಳಲ್ಲಿ ಪ್ರವಚನಕಾರರಾಗಿ ನಿರಂತರವಾಗಿ ಭಾಗವಹಿಸಿದ ಶ್ರೀ ರಾಮಕೃಷ್ಣಾಶ್ರಮದ ಶ್ರೀ ಜಗದಾತ್ಮಾನಂದಜೀ ಅವರು ತಮ್ಮ ಅಭಿಪ್ರಾಯವನ್ನು ಹೀಗೆ ದಾಖಲಿಸಿದ್ದಾರೆ: "ಕಾರ್ಕಳದ ಆಧ್ಯಾತ್ಮಿಕ ಶಿಬಿರ ನನ್ನ ಪಾಲಿಗೆ ಒಂದು ಸವಿನೆನಪು. ಕಾಲೇಜಿನ ನಾನಾ ಚಟುವಟಿಕೆಗಳ ಮಧ್ಯದಲ್ಲೂ ಮೌಲ್ಯಗಳ ಮಹಾತ್ಮ್ಯೆಯನ್ನು ಮಕ್ಕಳಿಗೆ ಮನದಟ್ಟು ಮಾಡಿಕೊಡುವಂಥ ಆಧ್ಯಾತ್ಮಿಕ ಶಿಕ್ಷಣ ಶಿಬಿರವನ್ನು ಏರ್ಪಡಿಸಿ, ಅದನ್ನು ಈ ಹತ್ತು ವರ್ಷಗಳಿಂದ ಶ್ರದ್ಧೆಯಿಂದ ತಪ್ಪದೇ ನಡೆಸಿಕೊಂಡು ಬಂದಿರುವ ಶ್ಲಾಘ್ಯ ಕಾರ್ಯಕ್ರಮವನ್ನು ಕೈಗೊಂಡಿದ್ದೀರಿ..... ಇದು ಅತ್ಯಂತ ಪುಣ್ಯಕಾರ್ಯ."(ಸಂ: ರಾಮಚಂದ್ರ ಎಂ.ಪ್ರೊ., 1985, ಪು-35) ಇಂತಹ ಶಿಬಿರದಲ್ಲಿ ಭಾಗಿಯಾದ ಶಾರದಾಪ್ರಸನ್ನ ಎಂಬ ವಿದ್ಯಾರ್ಥಿನಿ ತನ್ನ ಅಭಿಪ್ರಾಯವನ್ನು 1989-90ನೇ ಸಾಲಿನ ವಾರ್ಷಿಕ ಸಂಚಿಕೆಯ 'ಬೆಳಕಿನೆಡೆಗೆ' ಎಂಬ ಶೀರ್ಷಿಕೆಯಲ್ಲಿ ಸಮಗ್ರವಾಗಿ ನಿರೂಪಿಸಿದ್ದಾಳೆ.

3) **ಪರಂಪರೆಯಾಗಿ ನಡೆದುಬರುವ ಸಂಸ್ಮರಣಾ ಉಪನ್ಯಾಸ ಕಾರ್ಯಕ್ರಮಗಳು:** 1960-87ರ ತನಕ ಭುವನೇಂದ್ರ ಕಾಲೇಜಿನ ಪ್ರಾಂಶುಪಾಲರಾಗಿ ಆ ಹುದ್ದೆಯನ್ನು ಅಚ್ಚುಕಟ್ಟಾಗಿ ನಿರ್ವಹಿಸಿ, ಕಾಲೇಜಿಗೆ ವಿಶ್ವವಿದ್ಯಾನಿಲಯ ಮಟ್ಟದಲ್ಲಿ ಒಂದು ಸ್ಥಾನವನ್ನು ತಂದುಕೊಟ್ಟವರೇ ಪ್ರೊ. ಕೆ. ದಾಮೋದರ ಕಿಣಿಯವರು. ಪ್ರೊ. ಕಿಣಿಯವರು ನಿವೃತ್ತಿಯ ಅನಂತರ ಕೇವಲ ಮೂರು ವರ್ಷವಷ್ಟೇ ವಿಶ್ರಾಂತ ಜೀವನವನ್ನು ನಡೆಸಿ, 1990ರಲ್ಲಿ ಇಹಲೋಕವನ್ನು ತ್ಯಜಿಸಿದರು. ಶ್ರೀ ಭುವನೇಂದ್ರ ಕಾಲೇಜಿಗೆ ಸತ್‌ಪರಂಪರೆಯ ನಾಂದಿಯನ್ನು ಹಾಕಿ ಕಾಲೇಜು ವಿದ್ವಜ್ಜನರಿಂದ ಗುರುತಿಸಿಕೊಳ್ಳುವಲ್ಲಿ ತಮ್ಮ ಶ್ರಮವನ್ನು ಮುಡಿಪಾಗಿಟ್ಟ ಪ್ರೊ. ದಾಮೋದರ ಕಿಣಿಯವರನ್ನು ವರ್ಷಂಪ್ರತಿ ಸ್ಮರಿಸಿಕೊಳ್ಳುವುದಕ್ಕಾಗಿ ಅವರ ಹೆಸರಿನ ಸಂಸ್ಮರಣಕಾರ್ಯಕ್ರಮವನ್ನು ಆಡಳಿತವು ಆಯೋಜಿಸಿಕೊಂಡು ಬಂದಿದೆ. ಇದುವೇ ಈ ಕಾಲೇಜಿನ ಆಡಳಿತವು ಅವರಿಗೆ ಸಲ್ಲಿಸಬಹುದಾದ ಕೃತಜ್ಞತೆಯಾಗಿದೆ. "ಶಿಕ್ಷಣವು ಅರ್ಥಪೂರ್ಣವಾಗಬೇಕು, ಶಿಕ್ಷಕರು ಕರ್ತವ್ಯನಿಷ್ಠರಾಗಬೇಕು, ಶಿಕ್ಷಿತರು ಸಭ್ಯ ಪ್ರಜೆಗಳಾಗಬೇಕು ಇವು ಶ್ರೀ ಕಿಣಿಯವರ ಬಯಕೆ. ಅದಕ್ಕಾಗಿ ದಣಿವರಿಯದ ದುಡಿಮೆ, ಕಣ್ಣಮುಂದೆ ನಿಚ್ಚಳವಾದ ಈ ಗುರಿಯನ್ನು ಇರಿಸಿಕೊಂಡು ನೇರದಾರಿಯಲ್ಲಿ ಎದೆ ಸೆಟೆಯಿಸಿ ನಡೆದವರು ಅವರು. ತಮ್ಮ ಈ ದಾರಿಯಲ್ಲಿ ಎದುರಾದ ಎಂತೆಂತಹ ಬಂಡೆಕಲ್ಲುಗಳಿಗೂ ಅವರು ಜಗ್ಗಲಿಲ್ಲ."(ಸಂ: ದಾಮೋದರ ಕಿಣಿ ಅಭಿನಂದನಾ ಸಮಿತಿ, 1987, ಪು-49) ಇಂತಹ ನಿಷ್ಠಾವಂತ ಸಮರ್ಪಣಮನೋಭಾವದ ಸಜ್ಜನವ್ಯಕ್ತಿಯನ್ನು ಕಾಲೇಜು ಆಡಳಿತವು ವಿದ್ಯಾರ್ಥಿಗಳ ಮುಂದೆ ಸ್ಮರಿಸುವ ಕಾರ್ಯಕ್ರಮವನ್ನು 1991-92ನೇ ವರ್ಷದಿಂದಲೇ ಹಮ್ಮಿಕೊಂಡು ಬಂದಿದೆ.

1991-92ನೇ ಶೈಕ್ಷಣಿಕ ವರ್ಷದಿಂದ 1999-2000ದ ತನಕ ಸಂಸ್ಮರಣ ಉಪನ್ಯಾಸ ನೀಡಲು ಆಗಮಿಸಿದ ಸಂಪನ್ಮೂಲ ವ್ಯಕ್ತಿಗಳು ನೀಡಿದ ಉಪನ್ಯಾಸದ ವಿಷಯ, ವಿವರಗಳು ಕಾಲೇಜು ಸಂಚಿಕೆಯಲ್ಲಿ ಲಭ್ಯವಾಗುವುದಿಲ್ಲ. ಈ ಹೇಳಿಕೆಗೆ ಅಪವಾದವೆಂಬಂತೆ 1998-99ನೇ ವರ್ಷದ ಸಂಚಿಕೆಯಲ್ಲಿ ಡಾ. ಎಂ.ಎಂ. ಕಲಬುರ್ಗಿಯವರು ಕನ್ನಡ ಜಾನಪದ ಸಾಹಿತ್ಯದ ಕುರಿತು ವಿದ್ವತ್ಪೂರ್ಣವಾದ ಉಪನ್ಯಾಸವನ್ನು ನೀಡಿದ ಅವರ ಉಪನ್ಯಾಸದ ವರದಿಯು ಕಾಲೇಜು ಸಂಚಿಕೆಯಲ್ಲಿ ದಾಖಲಾಗಿದೆ.

**4) ಕಾಲೇಜು ವಾರ್ಷಿಕ ಸಂಚಿಕೆ ಹಾಗೂ ಇತರ ಪ್ರಕಟಣೆಗಳು:**

ಕಾಲೇಜು ಆರಂಭಗೊಂಡ ವರ್ಷದಿಂದ 20ನೇ ಶತಮಾನದ ಕೊನೆಯ ತನಕದ ಒಟ್ಟು 40 ವರ್ಷದ ಅವಧಿಯಲ್ಲಿ ಕಾಲೇಜು 38 ಸಂಚಿಕೆಯನ್ನು ಪ್ರಕಟಿಸಿದೆ. ವಿದ್ಯಾರ್ಥಿಗಳು ತಮ್ಮ ಸೃಷ್ಟಿಶೀಲಬರಹಗಳನ್ನು ಕಾಲೇಜು ಸಂಚಿಕೆಯಲ್ಲಿ ಪ್ರಕಟಿಸುವುದಕ್ಕೆ ಸಂಪಾದಕ ಮಂಡಳಿಯು ಅವಕಾಶವನ್ನೊದಗಿಸಿದೆ ಎನ್ನುವುದಕ್ಕೆ ಕಾಲೇಜಿನಲ್ಲಿ ಕಾಯ್ದಿಟ್ಟಿರುವ ಲಭ್ಯ ಸಂಚಿಕೆಗಳೇ ಸಾಕ್ಷಿಯಾಗಿದೆ. ಪ್ರಸ್ತುತ ಅಧ್ಯಯನದ ಸಂದರ್ಭಕ್ಕೆ ಸಂಚಿಕೆಯ ಸಮಗ್ರ ವಿಶ್ಲೇಷಣೆಯು ಅವಶ್ಯವಿಲ್ಲದ ಕಾರಣ ವಾರ್ಷಿಕ ಸಂಚಿಕೆಯ ಸಾಹಿತ್ಯ ಬರಹಗಳನ್ನು ಈ ಕೆಳಗಿನ ಮೂರು ಘಟ್ಟಗಳಲ್ಲಿ ಅಭ್ಯಾಸ ಮಾಡಲಾಗಿದೆ.

**1) ಮೊದಲ ಕಾಲಘಟ್ಟದ 1960 ರಿಂದ 1987ರ ಕಾಲಾವಧಿಯ ಸಾಹಿತ್ಯಚಟುವಟಿಕೆಗಳು:**

ಪ್ರತಿ ಕಾಲಘಟ್ಟದ ಚಟುವಟಿಕೆಗಳನ್ನು ವಾರ್ಷಿಕ ಸಂಚಿಕೆಯಲ್ಲಿ ಪ್ರಕಟವಾದ ಸಾಹಿತ್ಯ ಬರಹಗಳು ಹಾಗೂ ಸಾಹಿತ್ಯ ಸಂಘದ ಚಟುವಟಿಕೆಗಳು ಎಂದು ಎರಡು ಶೀರ್ಷಿಕೆಗಳಲ್ಲಿ ಅಧ್ಯಯನ ನಡೆಸಲಾಗಿದೆ.

**ಪ್ರಥಮ ಕಾಲಘಟ್ಟದ ವಾರ್ಷಿಕ ಸಂಚಿಕೆಗಳು:**

ಸ್ಥಾಪಕ ಪ್ರಾಂಶುಪಾಲರಾದ ಪ್ರೊ. ಕೆ. ದಾಮೋದರ ಕಿಣಿಯವರ ಕಾಲಘಟ್ಟವನ್ನು ಮೊದಲ ಕಾಲಘಟ್ಟವೆಂದು ಪರಿಗಣಿಸಲಾಗಿದೆ. ಈ ಕಾಲಾವಧಿಯ 27 ವರ್ಷಗಳ ಎಲ್ಲಾ ಸಂಚಿಕೆಯ ಬರಹಗಳ ವಿಶ್ಲೇಷಣೆಯು ಈ ಅಧ್ಯಯನದಲ್ಲಿ ಸಾಧ್ಯವಲ್ಲದ ಕಾರಣ ಕೇವಲ ಮೂರು ಸಂಚಿಕೆಗಳನ್ನು ಮಾದರಿಯಾಗಿ ಆಯ್ಕೆಮಾಡಿ ಅಲ್ಲಿನ ಸಾಹಿತ್ಯ ಪ್ರಕಾರಗಳನ್ನು ವಿಶ್ಲೇಷಣೆಗೊಳಪಡಿಸಲಾಗಿದೆ.

1974-75 ನೇ ಶೈಕ್ಷಣಿಕ ವರ್ಷದ ಸಂಚಿಕೆಯಲ್ಲಿ ದ್ವಿತೀಯ ಬಿ.ಕಾಂ. ತರಗತಿಯ ರವೀಂದ್ರ ಶೆಟ್ಟಿ ಎಂಬ ವಿದ್ಯಾರ್ಥಿಯು ಬರೆದ ಡಾ. ಶಿವರಾಮ ಕಾರಂತರ ಕಾದಂಬರಿ 'ಚೋಮನ ದುಡಿ'ಯ ಕುರಿತಂತೆ ವಿಮರ್ಶಾ ಲೇಖನವು ಪ್ರಕಟಗೊಂಡಿರುತ್ತದೆ. ಕಾದಂಬರಿಯಲ್ಲಿ ನಿರೂಪಿಸಿದಂತೆ, ಚೋಮ ಹಾಗೂ ಆತನ ಮಕ್ಕಳ ದೈನಂದಿನ ದುಡಿಮೆ ಮತ್ತು ಧನಿಯವರಾದ ಸಂಕಪ್ಪನವರೊಂದಿಗೆ ಇರುವ ಸಂಬಂಧವನ್ನು ನಿರೂಪಿಸುತ್ತಾ, ಸಾಮಾಜಿಕ ಬದುಕಿನಲ್ಲಿ ಅವನಿಗಿರುವ ಮಿತಿ ಅಥವಾ ನಿರ್ಬಂಧಗಳು ಕಾದಂಬರಿಯಲ್ಲಿ ಅನಾವರಣಗೊಳ್ಳುವುದನ್ನು ತನ್ನ ವಿಮರ್ಶೆಯಲ್ಲಿ ವಿದ್ಯಾರ್ಥಿ ಸರಿಯಾಗಿ ಗುರುತಿಸಿದ್ದಾನೆ. ಕಾರಂತರ ಆಶಯವನ್ನು ಸರಿಯಾಗಿ ಅರ್ಥೈಸಿಕೊಂಡ ವಿದ್ಯಾರ್ಥಿ ತನ್ನ ವಿಮರ್ಶಾ ಲೇಖನದ ಕೊನೆಯಲ್ಲಿ , "ಈ ಕಾದಂಬರಿಯನ್ನು ಓದುತ್ತಿದ್ದಂತೆಯೇ ಓದುಗರಲ್ಲಿ ಅಸ್ಪೃಶ್ಯತಾನಿವಾರಣೆಯನ್ನು ಮಾಡಬೇಕೆಂಬ ಉತ್ಸಾಹವು ತನ್ನಿಂತಾನಾಗಿಯೇ ಉಕ್ಕಿ ಬಂದಲ್ಲಿ ಡಾ. ಕಾರಂತರು ಈ ಕಾದಂಬರಿಯನ್ನು ಬರೆದುದು ಸಾರ್ಥಕವಾಯಿತೆಂದೇ

ತಿಳಿಯುತ್ತೇನೆ''(ಸಂ: ಕೆ.ಡಿ.ಕಿಣಿ ಪ್ರೊ. 1974–75, ಪು–59) ಎಂಬ ಉಲ್ಲೇಖಿತ ಹೇಳಿಕೆಯು ಕಾರಂತರ ಉದ್ದೇಶವು ನೇರವಾಗಿ ಧ್ವನಿಸುವಂತಿದೆ.

**'ಜಾನಪದ ಕತೆ'** ಎಂಬ ಶೀರ್ಷಿಕೆಯಲ್ಲಿ, ದ್ವಿತೀಯ ಬಿ. ಎ. ನೋನಯ್ಯ ಎಂಬ ವಿದ್ಯಾರ್ಥಿಯು 1974–75ನೇ ಸಾಲಿನ ಸಂಚಿಕೆಯಲ್ಲಿ ತುಳು ಭಾಷೆಯ ಪಾಡ್ಡನದಲ್ಲಿ ನಿರೂಪಿತವಾದ ಕಥೆಯನ್ನು ಕನ್ನಡದಲ್ಲಿ ಸಂಗ್ರಹಿಸಿ ಸಂಚಿಕೆಗಾಗಿ ನೀಡಿದ್ದಾನೆ. ತುಳುಭಾಷೆಯನ್ನು ತಿಳಿದವರಿಗೆ ಇದು ಸಾಮಾನ್ಯ ನಿರೂಪಣವೆಂದು ಕಂಡು ಬಂದರೂ ತುಳು ತಿಳಿಯದ ಬಹಳ ಮಂದಿಗೆ ಪಾಡ್ಡನದ ಕಥೆಯು ಕನ್ನಡದಲ್ಲಿ ಹೊಸ ವಿಚಾರಗಳನ್ನು ತಿಳಿದುಕೊಳ್ಳಲು ನೆರವಾಗುತ್ತದೆ. ಆ ಹೊಸ ವಿಚಾರಗಳು ಹೀಗಿವೆ:

1. ಶ್ರವಣಬೆಳಗೊಳ–ಕಾರ್ಕಳ–ವೇಣೂರು–ಈ ಮೂರು ಬೇರೆ ಬೇರೆ ಭೌಗೋಳಿಕ ಪ್ರದೇಶದಲ್ಲಿ ಪ್ರತಿಷ್ಠಾಪಿಸಲ್ಪಟ್ಟ ಗೋಮಟೇಶ್ವರ ವಿಗ್ರಹವು ಒಂದೇ ಕುಟುಂಬದ ಬೇರೆ ಬೇರೆ ವ್ಯಕ್ತಿಗಳು ರಚಿಸಿದ ಕಲಾಸೃಷ್ಟಿಗಳಾಗಿವೆ.
2. ಮೂರೂ ಪ್ರದೇಶದಲ್ಲಿ ಪ್ರತಿಷ್ಠಾಪನೆಗೊಂಡ ವಿಗ್ರಹಗಳು ಆ ಕಾಲದ ಆಳುವ ಅರಸರ ಪ್ರತಿಷ್ಠೆ ಮತ್ತು ವೈಭವದ ಸಂಕೇತಗಳಾಗಿದ್ದವು.
3. ರಾಜರು ಕಲಾಪ್ರಿಯರೇ ಹೊರತು, ಕಲಾಕರ್ಮದ ದಾತಾರರನ್ನು ಅಥವಾ ಕಲೆಯನ್ನು ಸೃಷ್ಟಿಸಿದ ನಿರ್ಮಾತೃಗಳ ಮೇಲೆ ಗೌರವ ಹೊಂದಿರಲಿಲ್ಲ ಎಂಬ ವಿಷಯ ನೋನಯ್ಯ ಅವರು ನಿರೂಪಿಸಿದ ಪಾಡ್ದನದ ಕನ್ನಡ ಭಾಷಾಂತರದ ಮೂಲಕ ತಿಳಿದು ಬರುತ್ತದೆ.

ಸುಧಾಕರ ಕೆ. ತೃತೀಯ ಬಿ.ಕಾಂ ವಿದ್ಯಾರ್ಥಿ ಬರೆದ 'ಪ್ರಾಯ' ಎಂಬ ವೈಚಾರಿಕ ಪ್ರಬಂಧವು 1974–75 ನೇ ಶೈಕ್ಷಣಿಕ ಸಾಲಿನ ಪುಟ ಸಂಖ್ಯೆ 53 ಮತ್ತು 54 ರಲ್ಲಿ ಪ್ರಕಟಗೊಂಡಿದ್ದು ಇಲ್ಲಿ ವಿದ್ಯಾರ್ಥಿ ದಾರ್ಶನಿಕನಾಗಿ ತನ್ನ ಅಭಿಪ್ರಾಯ ಮಂಡಿಸಿದ್ದಾನೆ. ಹದಿಹರೆಯದ ವಯೋಮಾನದ ವಿದ್ಯಾರ್ಥಿ 'ಪ್ರೇಮ'ಎಂಬ ಶಬ್ದವನ್ನು ವಿಶಾಲ ಅರ್ಥದಲ್ಲಿ ಗ್ರಹಿಸಿರುವುದು ಆತನ ಮಾನಸಿಕ ಪ್ರಬುದ್ಧತೆಯನ್ನು ಸೂಚಿಸುತ್ತದೆ ಎನ್ನಬಹುದು.

**'ಬಸವಣ್ಣನವರು ಮತ್ತು ಅವರ ವ್ಯಕ್ತಿತ್ವ'** ಎಂಬ ಶಿರ್ಷಿಕೆಯಲ್ಲಿ ಕೆ. ನಳಿನಿ ಕಾಮತ್ ಎಂಬ ವಿದ್ಯಾರ್ಥಿನಿಯು ಬಸವಣ್ಣನವರ ವ್ಯಕ್ತಿತ್ವವನ್ನು ತನ್ನದೇ ಭಾಷೆಯಲ್ಲಿ ಸರಳವಾಗಿ ನಿರೂಪಿಸಿದ್ದಾಳೆ. ಬಸವಣ್ಣನವರು 12 ನೇ ಶತಮಾನದ ಕಾಲಾವಧಿಯಲ್ಲಿ ಶೋಷಿತವರ್ಗದ ಧ್ವನಿಯಾಗಿ ಸಾಮಾಜಿಕ ಕ್ರಾಂತಿಯ ನೇತಾರರಾಗಿ ಸತ್ಯ–ಧರ್ಮ ಎಂಬ ಸಾಮಾಜಿಕ ಮೌಲ್ಯವನ್ನು ಸಮಾಜದಲ್ಲಿ ಪ್ರತಿಷ್ಠಾಪಿಸಿದರು ಎಂಬುದು ಅವಳ ನಿರೂಪಣೆ. ವಿಚಾರಸಾಹಿತ್ಯದ ಸ್ವರೂಪವನ್ನು ಆಕೆ ವಿಶ್ಲೇಷಿಸಿದ ಬಗೆ ಹೀಗಿದೆ– "ಕನ್ನಡಕ್ಕೆ ವಚನವು ಒಂದು ವಿಶಿಷ್ಟ ಸಾಹಿತ್ಯರೂಪ. ಈ ರೀತಿಯ ಸಾಹಿತ್ಯಪ್ರಕಾರ ವಿಶ್ವಸಾಹಿತ್ಯಕ್ಕೆ ವೀರಶೈವರ ಒಂದು ಮಹತ್ವದ ಕೊಡುಗೆ. ವಚನಗಳಲ್ಲಿ ಗದ್ಯದ ನಿರರ್ಗಳ ಪ್ರವಾಹದೊಂದಿಗೆ ಪದ್ಯದ ಲಯವೂ ಸಮ್ಮಿಳಿತವಾಗಿದೆ. ಅದು ಸ್ಪಷ್ಟ, ಸಂಕ್ಷಿಪ್ತ ಹಾಗೂ ಸರಳ..."(ಪೂರ್ವೋಕ್ತ, ಪು–45) ಹೀಗೆ ವಚನಸಾಹಿತ್ಯದ ಸ್ವರೂಪ ಮತ್ತು ಉದ್ದೇಶವನ್ನು ಬಸವಣ್ಣನವರ ಕೊಡುಗೆಯ ಹಿನ್ನಲೆಯಲ್ಲಿ ಸಮರ್ಪಕವಾಗಿ ವಿವರಿಸಿದ್ದಾಳೆ.

ಕರ್ಮಯೋಗವೆಂದರೇನು? ಎಂಬ ಪ್ರಶ್ನೆಗೆ 1974–75 ರ ಸಂಚಿಕೆಯಲ್ಲಿ ವಿನಾಯಕ ಭಟ್ಟ ಎಂಬ ತೃತೀಯ ಬಿ.ಕಾಂ. ವಿದ್ಯಾರ್ಥಿ ಸ್ಪಷ್ಟವಾಗಿಯೂ, ಸರಳವಾಗಿಯೂ, ಸಂಕ್ಷಿಪ್ತವಾಗಿಯೂ ಉತ್ತರ ನೀಡಿದ್ದಾನೆ.

'ಯೋಗ' ಎಂಬ ಶಬ್ದವನ್ನು ವಿದ್ಯಾರ್ಥಿ ವಿವರಿಸಿದ ಬಗೆ ಹೀಗಿದೆ: "ಯೋಗವು ಕರ್ಮದ ವ್ಯತಿರಿಕ್ತ ರೂಪ. ಇದು ಒಂದು ಸಾಧನೆಯಾಗಿದೆ.......ಯೋಗ ಎಂಬ ಶಬ್ದವು ಪತಂಜಲಿ ಮುನಿಯ ಯೋಗಸೂತ್ರದಲ್ಲಿ ವಿಶಿಷ್ಟರೀತಿಯಲ್ಲಿ ಅಭಿವ್ಯಕ್ತವಾಗಿದೆ. ಯೋಗ ಈ ಪದವು ಯುಜ್ ಎಂಬ ಪದದಿಂದ ಜನಿತವಾಗಿದೆ. ಯೋಗವೆಂಬುವುದು ಜೀವಾತ್ಮ ಪರಮಾತ್ಮರ ಐಕ್ಯ. ಮಾನವನು ಕರ್ಮವನ್ನು ಯೋಗವೆಂಬ ಸೂತ್ರದಿಂದ ಕಟ್ಟಿ ಅದರ ಸಹಾಯದಿಂದ ಜ್ಞಾನದ ಹಾದಿಯಲ್ಲಿ ಮುನ್ನಡೆಯುತ್ತಾ ಮುಕ್ತಿಯನ್ನು ತಲುಪುವನು."(ಪೂರ್ವೋಕ್ತ, ಪು–63) ತನ್ನೀ ವ್ಯಾಖ್ಯಾನದಲ್ಲಿ ಯೋಗ ಎಂಬ ಶಬ್ದದ ಸಂಕೀರ್ಣ ಆಯಾಮಗಳನ್ನು ವಿದ್ಯಾರ್ಥಿ ಗುರುತಿಸಿದ್ದಾನೆ.

ಇದೇ ಮಾರ್ಗದಲ್ಲಿ ಮುಂದುವರಿದ ಇನ್ನೊಂದು ಪ್ರಬಂಧವೇ –'ನಾ ಕಂಡ ಸ್ವಾಮಿ ವಿವೇಕಾನಂದರು' ಎಂಬ ದ್ವಿತೀಯ ಬಿ. ಎ. ವಿದ್ಯಾರ್ಥಿ ಯು.ಎಸ್. ಪರಮೇಶ್ವರ ಎಂಬವನು ಬರೆದ ಗದ್ಯ ಲೇಖನವಾಗಿದೆ. ತನ್ನೀ ಪ್ರಬಂಧದಲ್ಲಿ ವಿದ್ಯಾರ್ಥಿ ಜೀವನವೆಂದರೆನು ? ಜೀವನದಲ್ಲಿ ಗುರಿಯನ್ನು ಕಾಣುವ ಬಗೆ ಹೇಗೆ? ವಿದ್ಯಾಭ್ಯಾಸದ ಉದ್ದೇಶವೇನು? ನಿಜವಾದ ಜ್ಞಾನಿಯ ಲಕ್ಷಣಗಳು ಯಾವುದು? ಎಂಬಿತ್ಯಾದಿ ಪ್ರಶ್ನೆಗಳಿಗೆ ವಿವೇಕಾನಂದರು ನೀಡಿದ ಉತ್ತರಗಳನ್ನು ಸಂಗ್ರಹಿಸಿ ನೀಡಲಾಗಿದೆ.

ಇದೇ ಶೈಕ್ಷಣಿಕ ವರ್ಷದ ಸಂಚಿಕೆಯ ಇನ್ನೊಂದು ವೈಚಾರಿಕ ಲೇಖನವನ್ನು ಪ್ರಥಮ ಬಿ.ಕಾಂ. ತರಗತಿಯ ಎನ್. ಪ್ರಕಾಶ ಹೆಗ್ಡೆ ಎಂಬ ವಿದ್ಯಾರ್ಥಿಯು ಬರೆದಿದ್ದು ಕಂಡುಬರುತ್ತದೆ. ಪ್ರಬಂಧದ ಶೀರ್ಷಿಕೆಯು "ವಿಚಾರ–ಆಚಾರಗಳ ನಡುವಿನ ಅಂತರವೇ ದೇಶದ ದುರ್ಗತಿಗೆ ಕಾರಣ" ಎಂದಿದ್ದು ಶೀರ್ಷಿಕೆಯಲ್ಲಿಯೇ ಸೂಚಿಸಿದಂತೆ ವಿವಿಧ ಕ್ಷೇತ್ರಗಳ ಭ್ರಷ್ಟಾಚಾರವನ್ನು ವಿವರಿಸಿ ಹೇಳುವುದು ಪ್ರಬಂಧದ ಉದ್ದೇಶವಾಗಿದೆ. ಶಿಕ್ಷಣಕ್ಷೇತ್ರದಲ್ಲಿ, ರಾಜಕೀಯಕ್ಷೇತ್ರದಲ್ಲಿ, ವಾಣಿಜ್ಯಕ್ಷೇತ್ರದಲ್ಲಿ ನಡೆಯುವ ಭ್ರಷ್ಟಾಚಾರದ ಕುರಿತು ವಿವರಿಸುವ ವಿದ್ಯಾರ್ಥಿಯು ಪ್ರಬಂಧದ ಕೊನೆಯಲ್ಲಿ "ಇಂದು ಗಾಂಧೀಜಿಯವರ ಅವಶ್ಯಕತೆ ಎಂದಿಗಿಂತ ಹೆಚ್ಚಾಗಿ ಕಾಣಿಸಿಕೊಂಡಿದೆ" ಎಂದು ಗಾಂಧಿ ವಿಚಾರಧಾರೆಯ ಪ್ರಸ್ತುತತೆಯನ್ನು ಪ್ರಬಂಧದಲ್ಲಿ ಮನಗಾಣಿಸಿದ್ದಾನೆ.

ಒಟ್ಟಿನಲ್ಲಿ 1974–75ನೇ ಸಾಲಿನಲ್ಲಿ ಪ್ರಕಟವಾದ ಕಾಲೇಜು ಸಂಚಿಕೆಯಲ್ಲಿ 13 ಕನ್ನಡ ಶೀರ್ಷಿಕೆಗಳಿದ್ದು–ಇದರಲ್ಲಿ ಮೊದಲ ಒಂದು ಬರಹವನ್ನು ಹೊರತುಪಡಿಸಿದರೆ ಉಳಿದ 12 ಪ್ರಬಂಧಗಳು ವಿದ್ಯಾರ್ಥಿಗಳೇ ರಚಿಸಿದ ಪ್ರಬಂಧಗಳಾಗಿವೆ.

**ಶ್ರೀ ಭುವನೇಂದ್ರ ಕಾಲೇಜಿನ 2 ನೇ ಕಾಲಘಟ್ಟದ ವಿಭಾಗ ಕ್ರಮದಲ್ಲಿ ಆಯ್ಕೆ ಮಾಡಿಕೊಂಡ ಮೊದಲ ಸಂಚಿಕೆಯೇ 1989–90ನೇ ಸಾಲಿನಲ್ಲಿ ಪ್ರಕಟವಾದ 28 ನೇ ಸಂಪುಟವಾಗಿರುತ್ತದೆ:**

ಸಂಪಾದಕೀಯದಲ್ಲಿ "ಒಂದು ನಿರ್ದಿಷ್ಟ ವರ್ಷದ ಅವಧಿಯಲ್ಲಿ ಕಾಲೇಜಿನ ಪಠ್ಯ ಮತ್ತು ಪಠ್ಯಪೂರಕ ಕಲಾಪಗಳೆಲ್ಲಾ ಹೇಗೆ ನಡೆದವು ಎಂಬುವುದನ್ನು ಅದು ಯಥಾವಕಾಶ ಪ್ರತಿಬಿಂಬಿಸುತ್ತದೆ"(ಸಂ: ನೀಲಾವರ ಕೆ.ಬಿ. ಪ್ರೊ. 1989–90, ಸಂಪಾದಕೀಯ) ಎಂದು ಉಲ್ಲೇಖಿಸಿದ್ದಾರೆ. ವಿದ್ಯಾರ್ಥಿಗಳು 14 ವಿವಿಧ ಶೀರ್ಷಿಕೆಗಳಲ್ಲಿ ತಮ್ಮ ಲೇಖನ ಶಕ್ತಿಯನ್ನು ಅಭಿವ್ಯಂಜಿಸಿರುವುದು ಈ ಶೈಕ್ಷಣಿಕ ಸಾಲಿನಲ್ಲೂ ಕಂಡು ಬರುತ್ತದೆ.

‘ಬೆಳಕಿನಡೆಗೆ’ ಎಂಬ ಶೀರ್ಷಿಕೆಯಲ್ಲಿ ಶಾರದಾಪ್ರಸನ್ನ ಎಂಬ ವಿದ್ಯಾರ್ಥಿನಿ ಕಾಲೇಜಿನಲ್ಲಿ ಆಯೋಜಿಸಲಾದ ನೈತಿಕ–ಆಧ್ಯಾತ್ಮಿಕ ಶಿಕ್ಷಣ ಶಿಬಿರದ ಅನುಭವವನ್ನು ನಿರೂಪಿಸಿದ್ದಾಳೆ. ವಿದ್ಯಾರ್ಥಿಗಳ ಬರಹದ 14 ಶೀರ್ಷಿಕೆಗಳಲ್ಲಿ 8 ಶೀರ್ಷಿಕೆ ಕವನಗಳೆನ್ನುವುದು ಈ ವರ್ಷದ ವಿಶೇಷವಾಗಿತ್ತು. ಇನ್ನುಳಿದ 6 ಶೀರ್ಷಿಕೆಗಳ 3 ಬರಹಗಳು ಅನುಭವನಿರೂಪಣೆಯಾದರೆ ಇನ್ನುಳಿದ ಮೂರು ಶೀರ್ಷಿಕೆಗಳಲ್ಲಿ 2 ಶೀರ್ಷಿಕೆಗಳು (ನಿಜವಾದ ಭಕ್ತಿ ಹಾಗೂ ಯೋಗ ಒಂದು ಪರಿಚಯ) ತಾತ್ವಿಕ ಪ್ರಬಂಧವಾಗಿದ್ದು ‘ತಿರುಗುಬಾಣ’ ಎನ್ನುವುದು ಸಂಚಿಕೆಯ ಒಂದೇ ಒಂದು ಸೃಜನಶೀಲ ವಿಭಾಗದ ಹೃದ್ಯವಾದ ಲಲಿತಪ್ರಬಂಧದ ಶೈಲಿಯಲ್ಲಿ ಒಡಮೂಡಿದ ಗದ್ಯ ಬರಹವಾಗಿದೆ. ವೈಚಾರಿಕ ಪ್ರಬಂಧ, ತಾತ್ವಿಕ ಪ್ರಬಂಧ, ಜೀವನಾನುಭವದ ಮಾದರಿಯ ಗದ್ಯಪ್ರಬಂಧಗಳ ನಡುವೆ 8 ಕವನಗಳು ಪ್ರಕಟಗೊಂಡಿರುವುದು ಇದುವೇ ಮೊದಲ ಬಾರಿ ಎನ್ನಬಹುದು.

**ಸಂಚಿಕೆಯಲ್ಲಿ ಪ್ರಕಟಗೊಂಡ ಕವನಗಳು:**

ಸಂಚಿಕೆಯ ಪುಟ ಸಂಖ್ಯೆ 17 ರಲ್ಲಿ ಕೆ.ಎಸ್. ಮೋಹನದಾಸ ಎಂಬ ದ್ವಿತೀಯ ಬಿ.ಎಸ್ಸಿ. ವಿದ್ಯಾರ್ಥಿಯ ‘ಪುಸ್ತಕ–ಮಸ್ತಕ’ ಎಂಬ ಶೀರ್ಷಿಕೆಯಲ್ಲಿ ಕವನವೊಂದು ಪ್ರಕಟಗೊಂಡಿರುತ್ತದೆ. ಪುಸ್ತಕದ ವಿಚಾರಗಳು ಮಸ್ತಕದಲ್ಲಿ ದಾಖಲಾಗದೆ, ಮಸ್ತಕವು ಖಾಲಿಯಾಗುತ್ತಿರುವುದನ್ನು ಪದ್ಯರೂಪದಲ್ಲಿ ಹೇಳುವ ಪ್ರಯತ್ನವು ವಿದ್ಯಾರ್ಥಿಯದ್ದಾಗಿದೆ. ಒಟ್ಟಿನಲ್ಲಿ ಕವನದ ಕೊನೆಯಲ್ಲಿ ಹೇಳುವಂತೆ “ಕದಡಿದ ಮನ ಮುದುಡಿದ ತನುಗಳ ಜೋಡಿ ಮುಷ್ಕರ”ದಿಂದಾಗಿ ಓದಿದ್ದು ಮಸ್ತಕದಲ್ಲಿ ನೆನಪಾಗಿ ಉಳಿಯದಿರುವುದನ್ನು ಅಭಿವ್ಯಂಜಿಸಿದ್ದಾನೆ.

ಸಂಚಿಕೆಯ 2ನೇ ಕವನ ‘ಜೀವನ’ಎಂಬ ಶೀರ್ಷಿಕೆಯಲ್ಲಿದ್ದು ಇದನ್ನು ಅಂತಿಮ ಬಿ. ಎಸ್ಸಿ. ತರಗತಿಯ ರತ್ನಾಕರ ಶೆಟ್ಟಿ ಎಂಬ ವಿದ್ಯಾರ್ಥಿಯು ಬರೆದಿರುವುದಾಗಿದೆ. ವಿದ್ಯಾರ್ಥಿ ಕವಿ ತನ್ನ ಕವನದಲ್ಲಿ ಜೀವನ ಎಂಬ ಪ್ರಶ್ನೆಗೆ ಉತ್ತರಿಸುವ ಪ್ರಯತ್ನ ಮಾಡಿದ್ದಾನೆ . ಈ ಪ್ರಶ್ನೆಗೆ ಪ್ರಪಂಚದಲ್ಲಿರುವ ಎಲ್ಲರೂ ಒಂದೇ ಉತ್ತರವನ್ನು ನೀಡುವ ಸಾಧ್ಯತೆಯಿಲ್ಲವೆಂದು ಈ ಕವನದಲ್ಲಿ ಪ್ರತಿಪಾದಿಸಲಾಗಿದೆ. ಇಳಿ ವಯಸ್ಸಿನ ಅನುಭವಿಯೊಬ್ಬನು ಅನುಭವವೇ ಜೀವನ ಎಂದು ಉತ್ತರಿಸಿದರೆ, ಬಯಸಿದ್ದು ಸಿಗದ ವಿಫಲಪ್ರಣಯಿಯ ಪಾಲಿಗೆ ‘ಜೀವನವೇ ವಿಷ’ದಂತೆ ಎಂಬ ತೀರ್ಮಾನವಿದೆ. ವಿಜ್ಞಾನಿಯ ಪಾಲಿಗೆ ಜೀವನವು ‘ಕ್ರಮವಾದ ರಾಸಾಯನಿಕ ಕ್ರಿಯೆಗಳ ಜೋಡಣೆ’ ಎಂದು ತೋರಿ ಬಂದೀತು. ‘ಸನ್ಯಾಸಿ’ಗೆ ತಪಸ್ಸೇ ಜೀವನವಾಗುತ್ತದೆ. ಕಾರಣ, ಅದನ್ನುಳಿದು ಆತ ಬೇರೆ ಅನುಭವಕ್ಕೆ ಒಳಗಾಗಿರುವುದಿಲ್ಲ. ಆದರೆ ಕವಿಯ ಪಾಲಿಗೆ ಸಮರಸವಾದ ಅನುಭವಗಳ ಒಕ್ಕೂಟವು ಜೀವನವೆಂದು ಕಂಡರೆ ಇಲ್ಲಿಯ ವಿದ್ಯಾರ್ಥಿಕವಿಯ ಪಾಲಿಗೆ ಜೀವನವು ‘ಅಮೃತಸದೃಶ’. ಆದರೆ ಅದು ಬಯಸಿದಾಗಲೆಲ್ಲಾ ಸಿಗದ ‘ದಿವ್ಯಪವಿತ್ರ ಅನುಭವ’ ಎಂದಿದ್ದಾನೆ.

ಸಂಚಿಕೆಯ ಪುಟಸಂಖ್ಯೆ 29ರಲ್ಲಿ ‘ಬಂಡೆಯ ಬದುಕು’ ಎಂಬ ಕವನದಲ್ಲಿ ಕವಿ ಸಂಜೀವ ರೆಂಜಾಳ, ಬಂಡೆಯು ಶಿಲ್ಪಿಯ ಕರ್ಮದಲ್ಲಿ ಕಲ್ಲು ಕಾವ್ಯವಾಗಿ ಅರಳುವುದನ್ನು ಗುರುತಿಸುತ್ತಾನೆ. ಬಂಡೆಯು ದೇವಗತಿಯನ್ನು ಹೊಂದುವುದಕ್ಕೆ ಶಿಲ್ಪಿಯ ಶಿಲ್ಪಜ್ಞಾನದ ಪ್ರತಿಭೆಯೇ ಕಾರಣ. ಪ್ರತಿಭೆಯು ಕಲ್ಲುಕುಟಿಗ ಶಿಲ್ಪಿಯ ಚೇಣಿನ ಅಚ್ಚುಕಟ್ಟಾದ

ಹೊಡೆತದಿಂದಲೇ ಕಲೆಯಾಗಿ ಒಡಮೂಡುತ್ತದೆ. ಕವನದ ಅಂತ್ಯದ ಸಾಲುಗಳು ಓದುಗರನ್ನು ಯೋಚಿಸುವುದಕ್ಕೆ ಅವಕಾಶವನ್ನು ಒದಗಿಸುತ್ತದೆ. ಆ ಸಾಲುಗಳು ಹೀಗಿವೆ:

'ಎಲೆ ನಿರ್ಜೀವ ನಿರಾಡಂಬರ ಬಂಡೆಗಳೇ । ದ್ವಂದ್ವಾತೀತ ಈ ಜಗತ್ತಿನೊಳಗೆ ।

ಸರಿಸಮಾನವೆಂಬುದಿಲ್ಲ ಸರ್ವವೂ ದ್ವಂದ್ವಮಯ'(ಪೂರ್ವೋಕ್ತ, ಪು–29) ಎಂದಿದ್ದಾನೆ.

ಇಲ್ಲಿ ಕವಿಯ ಪ್ರಶ್ನೆ–ಶಿಲ್ಪಿಯು ತನ್ನ ಶ್ರಮದಿಂದ ಗುರುತಿಸಿಕೊಂಡನೇ? ಅಥವಾ ಬಂಡೆಯ ಕಾಠಿನ್ಯದಿಂದಾಗಿಯೇ ಶಿಲ್ಪಿಯ ಪೆಟ್ಟಿನಿಂದ ಬಂಡೆಯಲ್ಲಿ ಕಲೆ ಅರಳುವಂತಾಯಿತೇ? ನೇರವಾಗಿ ಹೇಳುವುದಾದರೆ ಬಂಡೆ ಹೆಚ್ಚೋ, ಬಂಡೆಯಲ್ಲಿ ಶಿಲ್ಪ (ಕಲೆ) ಮೂಡಿಸಿದ ಶಿಲ್ಪಿ ಹೆಚ್ಚೋ? ಈ ಪ್ರಶ್ನೆಗೆ ಉತ್ತರಿಸಲು ಅಸಾಧ್ಯ. ಕಾರಣ ಪ್ರಪಂಚವೇ ದ್ವಂದ್ವಮಯ. ಈ ಪ್ರಶ್ನೆಯು ಓದುಗನನ್ನು ಪುರುಷ ಹೆಚ್ಚೋ ಪ್ರಕೃತಿ ಹೆಚ್ಚೋ? ಎಂಬ ಪ್ರಶ್ನೆಗೆ ತಂದು ನಿಲ್ಲಿಸುತ್ತದೆ.

ಇದೇ ಪುಟದಲ್ಲಿ ಪ್ರಕಟವಾದ ಜಿ.ಕೆ. ಎಂಬ ದ್ವಿತೀಯ ಬಿ.ಕಾಂ. ವಿದ್ಯಾರ್ಥಿಯ ಕವನ 'ನಾವೆಲ್ಲಿದ್ದೇವೆ'? ಸಾಮಾನ್ಯ ಕವನವಾಗಿದೆ. ವಿದ್ಯಾವಂತರು, ನಾಗರಿಕರು ಎಂದು ಕರೆಸಿಕೊಳ್ಳುವ ಮಂದಿ ಆಲ್ಕೋಹಾಲ್, ಬೀಡಿ, ಸಿಗರೇಟು, ಹೆರಾಯಿನ್, ಗಾಂಜಾ ಮುಂತಾದ ಮತ್ತು ಬರಿಸುವ ಪದಾರ್ಥಗಳ ಸೇವನೆಗೊಳಗಾಗಿ ಗುಣವಾಗಲಾರದ ಕಾಹಿಲೆಗೆ ತುತ್ತಾಗುತ್ತಾರೆ.

'ಕೆಲವೇ ಕ್ಷಣಗಳ ಸಂತೋಷ ಆನಂದ । ಕೊನೆ ಮಾತ್ರ ದುಃಖಾಂಧಕಾರ...; ________________________

ಈ ಯುವಶಕ್ತಿ ಭವಿಷ್ಯತ್ತಿಗೆ ಬುನಾದಿ । ಸ್ವಲ್ಪ ಯೋಚಿಸಿ–ನಾವೆಲ್ಲಿದ್ದೇವೆ?!'(ಪೂರ್ವೋಕ್ತ, ಪು–29) ಎಂಬ ಪ್ರಶ್ನಾರ್ಥಕ ಉದ್ಗಾರದೊಂದಿಗೆ ಕವನ ಮುಕ್ತಾಯಗೊಂಡಿದೆ.

**ಸಂಚಿಕೆಯಲ್ಲಿ ಪ್ರಕಟಗೊಂಡ ಗದ್ಯಬರಹಗಳು:** ಸಂಚಿಕೆಯ ಮೊದಲ ಗದ್ಯಬರಹ 'ಬೆಳಕಿನೆಡೆಗೆ' ಎಂಬ ಶೀರ್ಷಿಕೆಯಡಿಯ ಪ್ರಬಂಧವು ಈಗಾಗಲೇ ಉಲ್ಲೇಖಿಸಿದಂತೆ ಶಾರದಾ ಪ್ರಸನ್ನ ಎಂಬ ವಿದ್ಯಾರ್ಥಿನಿಯು ವರದಿ ರೂಪದಲ್ಲಿ ಬರೆದು ದಾಖಲಿಸಿದ ಆ ಶೈಕ್ಷಣಿಕ ವರ್ಷದ ನೈತಿಕ, ಆಧ್ಯಾತ್ಮಿಕ ಶಿಕ್ಷಣ ಶಿಬಿರದ 2 ದಿನಗಳ ಕಾರ್ಯಕ್ರಮದಲ್ಲಿ ಹಮ್ಮಿಕೊಂಡಿದ್ದ ಉಪನ್ಯಾಸಗಳ ವಿಚಾರಗಳಾಗಿರುತ್ತದೆ. ಎರಡು ದಿನಗಳ ಕಾಲಾವಧಿಯಲ್ಲಿ ವಿವಿಧ ಸಂಪನ್ಮೂಲ ವ್ಯಕ್ತಿಗಳು ನೀಡಿದ ಉಪನ್ಯಾಸದ ಮಾಹಿತಿಯನ್ನು ಸಂಚಿಕೆಯಲ್ಲಿ ಸಂಗ್ರಹಿಸಿ ನೀಡಿರುತ್ತಾಳೆ.

**ನಿಜವಾದ ಭಕ್ತಿ:** ಎಂಬ ಶೀರ್ಷಿಕೆಯ ಪ್ರಬಂಧವನ್ನು ಚಂದ್ರಕಾಂತ ಎಸ್. ಶೆಟ್ಟಿ ಎಂಬ ಅಂತಿಮ ಬಿ.ಕಾಂ. ವಿದ್ಯಾರ್ಥಿಯು ಬರೆದುದಾಗಿದ್ದು, ಇದೊಂದು ಶುದ್ಧ ತಾತ್ವಿಕ ಪ್ರಬಂಧವಾಗಿದೆ. ಪ್ರಬಂಧದ ಕೊನೆಯಲ್ಲಿ ಭಕ್ತಿ ಮತ್ತು ಯೋಗಕ್ಕೆ ಸಂಬಂಧವನ್ನು ಕಲ್ಪಿಸಿ ಯೋಗದ ವಿಧ, ಸ್ವರೂಪವನ್ನು ಸಮರ್ಪಕ, ತಾರ್ಕಿಕ ಉದಾಹರಣೆಗಳೊಂದಿಗೆ ವಿವರಿಸಿದ್ದಾನೆ.

**ಯೋಗ ಒಂದು ಪರಿಚಯ:** ಎಂಬ ಈ ಲೇಖನವನ್ನು ತೃತೀಯ ಬಿ.ಕಾಂ. ಗುರುರಾಜ್ ಎಂಬ ವಿದ್ಯಾರ್ಥಿಯು ಬರೆದಿದ್ದು ಇಲ್ಲಿ ಪತಂಜಲಿಯು ಕಂಡುಕೊಂಡ ಯಮ, ನಿಯಮ, ಆಸನ, ಪ್ರಾಣಾಯಮ, ಪ್ರತ್ಯಾಹಾರ, ಧಾರಣ, ಧ್ಯಾನ, ಸಮಾಧಿ ಎಂಬ ಎಂಟು ಹಂತಗಳನ್ನು ವಿದ್ಯಾರ್ಥಿಗಳೆಲ್ಲರೂ ಓದಿ ಅರ್ಥೈಸಿಕೊಳ್ಳಲು ಸಾಧ್ಯವಾಗುವಂತೆ ಸರಳ ಶೈಲಿಯಲ್ಲಿ ನಿರೂಪಿಸಿರುತ್ತಾನೆ.

ಭಾರತೀಯ ಸಂಸ್ಕೃತಿಯ ಅಸಂಖ್ಯಾತ ಅಮೂಲ್ಯ ಕೊಡುಗೆಗಳಲ್ಲಿ ಯೋಗಶಾಸ್ತ್ರವೂ ಒಂದಾಗಿದ್ದು, ಇದನ್ನು ಬೆಳಸಿ ಬಳಸಿಕೊಳ್ಳುವುದು ನಮ್ಮೆಲ್ಲರ ಕರ್ತವ್ಯ ಎಂಬ ಸಂದೇಶವನ್ನು ನೀಡುವುದರೊಂದಿಗೆ ತನ್ನ ಪ್ರಬಂಧವನ್ನು ಮುಗಿಸಿದ್ದಾನೆ.

ಸಂಚಿಕೆಯ ಪುಟ ಸಂಖ್ಯೆ 25ರಲ್ಲಿ 'ಅಜ್ಜಿಕುಂಜದ ಹಾದಿಯಲ್ಲಿ' ಎಂಬ ರಾಷ್ಟ್ರೀಯ ಸೇವಾಯೋಜನೆಯ ವಿದ್ಯಾರ್ಥಿಗಳು ಒಂದು ದಿನ ವಿಹಾರಕ್ಕೆ ಹೋಗಿ ಬಂದ ಅನುಭವವನ್ನು ಸಂಕ್ಷಿಪ್ತವಾಗಿ ಹರಿಶ್ಚಂದ್ರ ಎಂಬ ದ್ವಿತೀಯ ಬಿ.ಕಾಂ. ಸಂಗ್ರಹ ರೂಪದಲ್ಲಿ ನೀಡಿರುತ್ತಾನೆ.

ಸಂಚಿಕೆಯಲ್ಲಿ ಸೃಜನಶೀಲ ಬರವಣಿಗೆಯ ಪಟ್ಟಿಯಲ್ಲಿ ಸೇರಿಸಬಹುದಾದ ಒಂದೇ ಒಂದು ಬರವಣಿಗೆ ದ್ವಿತೀಯ ಬಿ.ಕಾಂ. ತರಗತಿಯ ಗಿರಿಧರ ಶೆಣೈ ಎಂಬ ವಿದ್ಯಾರ್ಥಿಯ 'ತಿರುಗುಬಾಣ' ಎಂಬ ಲಲಿತಪ್ರಬಂಧವಾಗಿದೆ. ಪ್ರಬಂಧದ ಶೀರ್ಷಿಕೆಯಲ್ಲಿಯೇ ಪ್ರಬಂಧದ ಧ್ವನಿಯು ಸುಪ್ತವಾಗಿ ಅಡಗಿಕೊಂಡಂತಿದೆ.

ಸೇಡಿಯಾಪು ಸಾಹಿತ್ಯೋತ್ಸವವು ಈ ಶೈಕ್ಷಣಿಕ ವರ್ಷದ (1989–90) ವಿಶೇಷ ಸಾಹಿತ್ಯ ಚಟುವಟಿಕೆಯಾಗಿದ್ದು, ಈ ಸಂದರ್ಭದಲ್ಲಿ ವಿಶೇಷ ಉಪನ್ಯಾಸ ನೀಡಲು ಕಾಲೇಜಿಗೆ ಆಗಮಿಸಿದ ಸಂಪನ್ಮೂಲ ವ್ಯಕ್ತಿಗಳ ಹೆಸರುಗಳು ಹೀಗಿವೆ:

ಕರ್ನಾಟಕ ವಿಶ್ವವಿದ್ಯಾನಿಲಯ ಪ್ರಾಧ್ಯಾಪಕರಾದ ಡಾ. ಎಸ್. ಎಂ. ವೃಷಭೇಂದ್ರಸ್ವಾಮಿ, ಕಾಸರಗೋಡು ಸರಕಾರಿ ಕಾಲೇಜಿನ ಕನ್ನಡ ಉಪನ್ಯಾಸಕ ಡಾ. ಪಿ. ಶ್ರೀಕೃಷ್ಣ ಭಟ್ಟ, ಬೆಂಗಳೂರಿನ ಶತಾವಧಾನಿ ಆರ್. ಗಣೇಶ್, ಪ್ರೊ. ಗಿರಡ್ಡಿ ಗೋವಿಂದರಾಜ್, ಡಾ. ಹೊಸಬೆಟ್ಟು ಸೀತಾರಾಮಾಚಾರ್, ಪ್ರೊ. ಕು. ಶಿ. ಹರಿದಾಸ ಭಟ್, ಪ್ರೊ. ಜಿ. ಟಿ. ನಾರಾಯಣ ರಾವ್, ಪ್ರೊ. ಎಂ. ರಾಜಗೋಪಾಲಾಚಾರ್ಯ, ಪ್ರೊ. ಉದ್ಯಾವರ ಮಾಧವಾಚಾರ್ಯ ಇವರುಗಳೆಲ್ಲರ ಉಪನ್ಯಾಸಗಳ ವಿವರಗಳು ಪ್ರಬಂಧರೂಪವಾಗಿ ಕಾಲೇಜು ಸಂಚಿಕೆಯಲ್ಲಿ ಸಂಕ್ಷಿಪ್ತವಾಗಿ ಪ್ರಕಟಗೊಂಡಿರುತ್ತದೆ.

**ಮೂರನೇ ಕಾಲಘಟ್ಟದಲ್ಲಿ ಆಯ್ಕೆ ಮಾಡಿಕೊಂಡ ವಾರ್ಷಿಕ ಸಂಚಿಕೆ:**

1995 ರಿಂದ 2000ದ ಇಸವಿ ವರೆಗಿನ ಐದು ವರ್ಷದ ಕಾಲಾವಧಿಯನ್ನು ಅಧ್ಯಯನ ದೃಷ್ಟಿಯಿಂದ ಮೂರನೇ ಕಾಲಘಟ್ಟವೆಂದು ವಿಭಾಗಿಸಿಕೊಳ್ಳಲಾಗಿದ್ದು, ಈ ಅವಧಿಯಲ್ಲಿ ಬಂದ 1998–1999ನೇ ಶೈಕ್ಷಣಿಕ ಸಾಲಿನ ವಾರ್ಷಿಕ ಸಂಚಿಕೆಯನ್ನು ವಿಶ್ಲೇಷಣೆಗಾಗಿ ಆಯ್ಕೆ ಮಾಡಿಕೊಳ್ಳಲಾಗಿದೆ.

ಕಾಲೇಜಿನ ಸ್ಥಾಪಕ ಪ್ರಾಂಶುಪಾಲರಾಗಿದ್ದ ದಿ। ದಾಮೋದರ ಕಿಣಿಯವರ ಸಂಸ್ಮರಣಾರ್ಥವಾಗಿ ನಡೆಸಿಕೊಂಡು ಬರುವ ಉಪನ್ಯಾಸ ಕಾರ್ಯಕ್ರಮದ ಅಂಗವಾಗಿ ಕನ್ನಡ ವಿಶ್ವವಿದ್ಯಾನಿಲಯದ ಕುಲಪತಿಗಳಾಗಿದ್ದ ಎಂ.ಎಂ. ಕಲಬುರ್ಗಿಯವರು ಜಾನಪದ ಸಾಹಿತ್ಯವನ್ನು ಕುರಿತು ಉಪನ್ಯಾಸವನ್ನು ನೀಡಿರುವುದು ಈ ಶೈಕ್ಷಣಿಕ ವರ್ಷದ ವಿಶೇಷ ಕಾರ್ಯಕ್ರಮವೆಂದು ಪರಿಗಣಿಸಬಹುದಾಗಿದೆ. ಕುಲಪತಿಯವರ ಭಾಷಣದ ಯಥಾವರದಿಯನ್ನು ಕಾಲೇಜು ಸಂಚಿಕೆಯಲ್ಲಿ ಪ್ರಕಟಿಸಲಾಗಿದೆ.

ಈ ಹಿಂದಿನ ವರ್ಷಗಳಂತೆ ಈ ಶೈಕ್ಷಣಿಕ ವರ್ಷದಲ್ಲಿಯೂ ಸಂಚಿಕೆಯಲ್ಲಿ ಕವನ, ಹಾಸ್ಯಲೇಖನ, ಶಿಬಿರಾನುಭವ, ಕಥೆ ಎಂಬ ವಿವಿಧ ಶೀರ್ಷಿಕೆಗಳು ವಿದ್ಯಾರ್ಥಿಗಳ ಸಾಹಿತ್ಯ ಚಟುವಟಿಕೆಗಳಾಗಿ ಪ್ರಕಟವಾಗಿರುತ್ತದೆ.

ಶ್ರೀ ಭುವನೇಂದ್ರ ಕಾಲೇಜು ಕಾರ್ಕಳ ಇಲ್ಲಿನ ಕನ್ನಡ ಸಾಹಿತ್ಯ ಚಟುವಟಿಕೆಗಳಿಂದ ಪ್ರೇರಿತರಾಗಿ ಸಾಹಿತ್ಯ ಚಟುವಟಿಕೆಗಳಲ್ಲಿ ತೊಡಗಿಸಿಕೊಂಡ ವಿದ್ಯಾರ್ಥಿಗಳ ಮಾಹಿತಿ **ಅನುಬಂಧ ಸಂಖ್ಯೆ 8** ರಲ್ಲಿ ನೀಡಲಾಗಿದೆ.

# ಭಂಡಾರ್‌ಕಾರ್ಸ್ ಕಾಲೇಜು, ಕುಂದಾಪುರ

ಮಣಿಪಾಲ ಅಕಾಡೆಮಿಯ ಪ್ರಯತ್ನ ಹಾಗೂ ಕುಂದಾಪುರ ವಿಧಾನಸಭಾ ಕ್ಷೇತ್ರದ ಜನಪ್ರಿಯ ಶಾಸಕ ಯೆಡ್ತರೆ ಮಂಜಯ್ಯ ಶೆಟ್ಟಿಯವರ ಸಹಕಾರ ಹಾಗೂ ಡಾ. ಎ.ಎಸ್. ಭಂಡಾರ್‌ಕಾರ್ ಅವರ ಆರಂಭಿಕ ಆರ್ಥಿಕ ಸಹಾಯದಿಂದಾಗಿ ಭಂಡಾರ್‌ಕಾರ್ಸ್ ಆರ್ಟ್ಸ್ ಆಂಡ್ ಸಯನ್ಸ್ ಕಾಲೇಜು ಕ್ರಿ.ಶ. 1963ರಲ್ಲಿ ಕುಂದಾಪುರದಲ್ಲಿ ಅಸ್ತಿತ್ವಕ್ಕೆ ಬಂದಿತು. ಕಾಲೇಜಿನ ಆರಂಭದ ವರ್ಷದಿಂದಲೇ ಕಾಲೇಜಿನ ಆಡಳಿತವನ್ನು ನಿರ್ವಹಿಸುತ್ತಿದ್ದ ಸ್ಥಳೀಯ ಸಮಿತಿಯ ಸದಸ್ಯರು ಹಾಗೂ ಕಾಲೇಜಿನ ಸ್ಥಾಪಕ ಪ್ರಾಂಶುಪಾಲರಾಗಿದ್ದ ಕೆ.ಜಿ. ಶೆಣೈಯವರು ಕಾಲೇಜಿನ ಸಾಹಿತ್ಯ ಚಟುವಟಿಕೆಗಳಿಗೆ ವಿಶೇಷ ಪ್ರೋತ್ಸಾಹ ನೀಡಿದರು. ಈ ಪ್ರೋತ್ಸಾಹದ ಕಾರಣದಿಂದಾಗಿ ಕಾಲೇಜು ಸ್ಥಾಪನೆಗೊಂಡ ಎರಡನೇ ವರ್ಷದಲ್ಲಿಯೇ ರಾಷ್ಟ್ರಕವಿ ಗೋವಿಂದ ಪೈ ಅವರ ಕೃತಿಗಳ ವಿಚಾರಸಂಕಿರಣವು ನಡೆದು, ಕಾಲೇಜು ರಾಜ್ಯ ಮಟ್ಟದಲ್ಲಿ ಗುರುತಿಸಿಕೊಂಡಿತು. ಈ ವಿಚಾರಸಂಕಿರಣದಲ್ಲಿ ಮಂಡಿತವಾದ ಪ್ರಬಂಧಗಳು 'ದೀವಿಗೆ' ಎಂಬ ಹೆಸರಿನಲ್ಲಿ ಕಾಲೇಜಿನ ವತಿಯಿಂದಲೇ ಪ್ರಕಟಗೊಳ್ಳುವ ಮೂಲಕ ಸಾಹಿತ್ಯ ಚಟುವಟಿಕೆಗಳ ಶುಭಾರಂಭಕ್ಕೆ ನಾಂದಿಯಾಯಿತು. ವಾರ್ಷಿಕ ಸಂಚಿಕೆಯ ಪ್ರಕಟನೆಯ ಪರಂಪರೆಯನ್ನು ಮೊದಲ ವರ್ಷದಿಂದಲೇ ಆರಂಭಿಸಿದ್ದಲ್ಲದೇ ವಿವಿಧ ಸಾಹಿತ್ಯ ಹಾಗೂ ಸಾಂಸ್ಕೃತಿಕ ವೇದಿಕೆಗಳ ಮೂಲಕ ನಡೆಯುವ ಚಟುವಟಿಕೆಗಳು ಕಾಲೇಜು ಸಂಚಿಕೆಯ ಪುಟಗಳಲ್ಲಿ ಕಾಣಿಸಿಕೊಂಡವು. ಕನ್ನಡ ಐಚ್ಛಿಕ ಪತ್ಯದ ಆರಂಭ, ಯಕ್ಷಗಾನ–ನಾಟಕದಂತಹ ದೃಶ್ಯಕಲೆಗಳಿಗೆ ಸಂಬಂಧಿಸಿದಂತೆ ವಿಶೇಷ ಪ್ರೋತ್ಸಾಹ, ವಿಶ್ವವಿದ್ಯಾನಿಲಯ ಮಟ್ಟದಲ್ಲಿ ನಡೆಯುವ ಸಾಹಿತ್ಯ–ಸಾಂಸ್ಕೃತಿಕ ಚಟುವಟಿಕೆಗಳ ಸ್ಪರ್ಧೆಗಳಲ್ಲಿ ವಿದ್ಯಾರ್ಥಿಗಳು ಭಾಗವಹಿಸುತ್ತಾ, ಕಾಲೇಜಿನ ಹಿರಿಮೆಯನ್ನು ಎತ್ತಿ ಹಿಡಿಯುವುದರೊಂದಿಗೆ ತಮ್ಮ ಪ್ರತಿಭೆಯ ಪ್ರದರ್ಶನಕ್ಕೂ ಅವಕಾಶವನ್ನು ಪಡೆದುಕೊಂಡರು. ದಶಮಾನೋತ್ಸವ, ಬೆಳ್ಳಿಹಬ್ಬ, 40ರ ಹಬ್ಬ, ಸುವರ್ಣ ಮಹೋತ್ಸವ ಮುಂತಾದ ಉತ್ಸವಗಳಲ್ಲೂ ಸಾಹಿತ್ಯ ಚಟುವಟಿಕೆಗಳಿಗೆ ಕಾಲೇಜು ಪ್ರೋತ್ಸಾಹ ನೀಡಿದ್ದು, 20ನೇ ಶತಮಾನದ 38 ವರ್ಷಗಳಲ್ಲಿ ನಡೆಸಿದ ಚಟುವಟಿಕೆಗಳು, ವಿದ್ಯಾರ್ಥಿಗಳ ವ್ಯಕ್ತಿತ್ವವನ್ನು ರೂಪಿಸಿದ ಬಗೆಯನ್ನು ಈ ಅಧ್ಯಯನ ಶೀರ್ಷಿಕೆಯಲ್ಲಿ ವಿಶ್ಲೇಷಿಸಲಾಗಿದೆ.

ಈ ಕಾಲೇಜು ವಿವಿಧ ವೇದಿಕೆಗಳ ಮೂಲಕ ನಿರ್ವಹಿಸಿದ ಸಾಹಿತ್ಯ ಹಾಗೂ ಸಾಂಸ್ಕೃತಿಕ ಚಟುವಟಿಕೆಗಳನ್ನು ಈ ಕೆಳಗಿನ ಶೀರ್ಷಿಕೆಯಲ್ಲಿ ಸಂಗ್ರಹಿಸಲಾಗಿದೆ.

1. ವಿವಿಧ ಸಮಾರಂಭದ ಸಂದರ್ಭಗಳಲ್ಲಿ ನಡೆಸಿದ ಸಾಹಿತ್ಯೋತ್ಸವ ಚಟುವಟಿಕೆಗಳು ಹಾಗೂ ಸಾಂಸ್ಕೃತಿಕ ಚಟುವಟಿಕೆಗಳು.
2. ಕಾಲೇಜು ಪ್ರಕಟಿಸಿದ ಕೆಲವು ವಿಶೇಷ ಪ್ರಕಟಣೆಗಳು ಹಾಗೂ ಕಾಲೇಜು ವಾರ್ಷಿಕವಾಗಿ ಪ್ರಕಟಿಸಿದ ವಾರ್ಷಿಕ ಸಂಚಿಕೆಗಳು.
3. ಕಾಲೇಜಿನ ಸಾಂಸ್ಕೃತಿಕ ಚಟುವಟಿಕೆಗಳ ಅಂತಿಮ ಫಲಿತಗಳು, ಪ್ರಕಟಗೊಂಡ ವಿಭಿನ್ನ ಬಗೆಗಳು.

1. **ವಿವಿಧ ಸಮಾರಂಭದ ಸಂದರ್ಭಗಳಲ್ಲಿ ನಡೆಸಿದ ಸಾಹಿತ್ಯೋತ್ಸವಚಟುವಟಿಕೆಗಳು ಹಾಗೂ ಸಾಂಸ್ಕೃತಿಕ ಚಟುವಟಿಕೆಗಳು:**

ಕಾಲೇಜು ಪ್ರಾರಂಭದಿಂದಲೂ ಸಾಹಿತ್ಯ ಹಾಗೂ ಸಾಂಸ್ಕೃತಿಕ ಚಟುವಟಿಕೆಗಳಿಗೆ ಸಮಾನ ಪ್ರಾಶಸ್ತ್ಯವನ್ನು ನೀಡುತ್ತಾ ಬಂದಿದೆ. (80ರ ದಶಕದ ಅನಂತರದಲ್ಲಿ ಸಾಂಸ್ಕೃತಿಕ ಚಟುವಟಿಕೆಗಳಿಗೆ ಅಧಿಕ ಪ್ರಾಶಸ್ತ್ಯವನ್ನು ನೀಡಿದಂತೆ

ಕಂಡುಬರುತ್ತದೆ) ಸಾಹಿತ್ಯ ಚಟುವಟಿಕೆಗಳಿಗೆ ಪ್ರಾಮುಖ್ಯವನ್ನು ನೀಡಲು ಸಾಹಿತ್ಯಸಂಘ, ಮಾನವಿಕ ಸಂಘ, ಬರಹಗಾರರ ಸಂಘ ಎಂಬ ವೇದಿಕೆಗಳಿದ್ದರೆ, ಸಾಂಸ್ಕೃತಿಕ ಚಟುವಟಿಕೆಗಳಿಗೆ ಅವಕಾಶವನ್ನು ನೀಡಲು ನಾಟಕ ಸಂಘ, ಯಕ್ಷಗಾನ ಸಂಘ, ಲಲಿತಕಲಾ ಸಂಘ ಎಂಬ ವೇದಿಕೆಗಳಿವೆ. ಶೈಕ್ಷಣಿಕ ವರ್ಷದುದ್ದಕ್ಕೂ ಪಠ್ಯ ಚಟುವಟಿಕೆಗಳಿಗೆ ಪೂರಕವಾಗಿ ವಿವಿಧ ಸಾಹಿತ್ಯಕ, ಸಾಂಸ್ಕೃತಿಕ ಚಟುವಟಿಕೆಗಳನ್ನು ನಿರ್ವಹಿಸುತ್ತಾ ಬಂದು ತನ್ಮೂಲಕ ವಿದ್ಯಾರ್ಥಿಗಳ ಪ್ರತಿಭೆಯ ಅಭಿವ್ಯಕ್ತಿಗೆ ಅವಕಾಶವನ್ನು ನೀಡುತ್ತಾ ಕಾಲೇಜು ರಾಜ್ಯಮಟ್ಟದಲ್ಲಿ ಹೆಸರು ಪಡೆದುಕೊಂಡಿದೆ. ಕಾಲೇಜಿನಲ್ಲಿ ನಡೆದ 40 ವರ್ಷದ ಸಾಹಿತ್ಯ ಚಟುವಟಿಕೆಗಳ ಸ್ವರೂಪವನ್ನು ಸಂಕ್ಷಿಪ್ತವಾಗಿ ಉಲ್ಲೇಖಿಸುವುದಕ್ಕೆ ನಿವೃತ್ತ ಪ್ರಾಂಶುಪಾಲರೊಬ್ಬರ ಹೇಳಿಕೆಯನ್ನು ಹೀಗೆ ದಾಖಲಿಸಬಹುದಾಗಿದೆ. "ಆರಂಭದ ವರ್ಷದಲ್ಲಿ ನವೆಂಬರ್ 1ರಂದು ರಾಜ್ಯೋತ್ಸವ, ಸಾಹಿತ್ಯೋತ್ಸವವನ್ನು ಏರ್ಪಡಿಸಲಾಗುತ್ತಿತ್ತು. ಅಂತರ್‌ಕಾಲೇಜು ಮಟ್ಟದಲ್ಲಿ ಅನೇಕ ಬಾರಿ ಸಣ್ಣಕಥಾ ಕಮ್ಮಟಗಳನ್ನು, ವಿಚಾರಸಂಕಿರಣಗಳನ್ನು, ಕಥಾಸ್ಪರ್ಧೆಗಳನ್ನು ಸಾಹಿತ್ಯ ಸಂಘವು ಏರ್ಪಡಿಸಿದೆ. ನಾಡಿನ ಹೆಸರಾಂತ ಸಾಹಿತಿಗಳನ್ನು ಕರೆಯಿಸಿ, ವಿದ್ಯಾರ್ಥಿಗಳಿಗೆ ಅವರ ಉಪನ್ಯಾಸಗಳನ್ನು ಕೇಳುವ ಅವಕಾಶ ಕಲ್ಪಿಸಿಕೊಟ್ಟಿದೆ. ವಿದ್ಯಾರ್ಥಿ ಕಥಾಗೋಷ್ಠಿ, ಕವಿಗೋಷ್ಠಿ, ಚರ್ಚಾಗೋಷ್ಠಿಗಳನ್ನು ಪ್ರತಿವರ್ಷವೂ ಹಮ್ಮಿಕೊಳ್ಳುತ್ತಾ ಬಂದಿದೆ. ಕರ್ನಾಟಕ ಸಾಹಿತ್ಯ ಅಕಾಡೆಮಿ ನೆರವಿನೊಂದಿಗೆ ಮಾಸ್ತಿಯವರ ಸಣ್ಣಕಥೆಗಳು–ವಿಚಾರಸಂಕಿರಣ, ಡಿವಿಜಿ ಶತಮಾನೋತ್ಸವ, ಕನ್ನಡ ಕಾದಂಬರಿಗೆ ನೂರುವರ್ಷ, ಕಾರಂತ ಜನ್ಮಶತಾಬ್ದಿ, ಸೇಡಿಯಾಪು ಸಾಹಿತ್ಯೋತ್ಸವ, ಭೈರಪ್ಪನವರ ಕಾದಂಬರಿಗಳ ಅಧ್ಯಯನ ಕಮ್ಮಟ, ಜಾನಪದ ವಸ್ತುಪ್ರದರ್ಶನ, ಜಾನಪದ ಕಲಾಪ್ರದರ್ಶನದ ಸ್ಪರ್ಧೆ, ಜಿಲ್ಲೆಯ ಶತಮಾನ ಸಾಹಿತ್ಯಾವಲೋಕನ ಮುಂತಾದ ಕಾರ್ಯಕ್ರಮಗಳು ನೆನಪಿನಲ್ಲಿ ಉಳಿಯುವಂತವು,"(ಸಂ: ಯು.ಎಸ್.ಐತಾಳ ಡಾ., 2003–04, ಪು–27) ಡಾ. ಯು.ಎಸ್. ಐತಾಳರ ಈ ಹೇಳಿಕೆಯು ಕಾಲೇಜಿನ ಸಾಹಿತ್ಯ ಚಟುವಟಿಕೆಯ ಸ್ವರೂಪ ಹಾಗೂ ಉದ್ದೇಶವನ್ನು ಸ್ಪಷ್ಟಪಡಿಸಿದೆ. ಸಾಹಿತ್ಯ ಚಟುವಟಿಕೆಯ ಜೊತೆಗೆ ಸಾಂಸ್ಕೃತಿಕ ಚಟುವಟಿಕೆಗಳಿಗೂ ಅವಕಾಶವನ್ನು ನೀಡುತ್ತಾ ಬಂದಿದ್ದು, ಈ ಚಟುವಟಿಕೆಗಳ ಯಶಸ್ಸಿಗೆ ಈಗಾಗಲೇ ಹೇಳಿದಂತೆ ವಿವಿಧ ವೇದಿಕೆಗಳು ಸಕ್ರಿಯವಾಗಿ ದುಡಿದಿವೆ. ನಾಟಕ ಎಂಬ ಅಭಿನಯಪ್ರಧಾನವಾದ ಸಾಂಸ್ಕೃತಿಕ ಚಟುವಟಿಕೆಗೆ ಕಾಲೇಜಿನಲ್ಲಿ ಕರ್ತವ್ಯ ನಿರ್ವಹಿಸಿದ ಎಲ್ಲ ಪ್ರಾಂಶುಪಾಲರು ಹಾಗೂ ಉಪನ್ಯಾಸಕರು ವಿಶೇಷ ಪ್ರೋತ್ಸಾಹವನ್ನು ನೀಡಿದ ಕಾರಣ ನಾಟಕಪಠ್ಯಗಳು ರಂಗದಲ್ಲಿ ಪ್ರದರ್ಶನ ಚಟುವಟಿಕೆಗಳಾಗಿ ಮೂಡಿಬಂದುವು. ವಿಶಿಷ್ಟ ಅಭಿವ್ಯಕ್ತಿಯ ಪ್ರಯೋಗಗಳಿಂದಾಗಿ ಕಾಲೇಜಿನ ಹೊರಗಿನ ಕಲಾಭಿಮಾನಿ ಸಹೃದಯಿಗಳಿಗೆ ಕಾಲೇಜು ಒಂದು ಸಾಂಸ್ಕೃತಿಕ ಕೇಂದ್ರವಾಯಿತು. ಕನ್ನಡ ಉಪನ್ಯಾಸಕರಾದ ಪ್ರೊ. ಸಿ. ಉಪೇಂದ್ರ ಸೋಮಯಾಜಿ, ಸಂಸ್ಕೃತ ಉಪನ್ಯಾಸಕರಾದ ಪ್ರೊ. ಎಚ್.ವಿ. ನರಸಿಂಹಮೂರ್ತಿಯವರು ಪರಂಪಾರಗತ ನಾಟಕ ಚಟುವಟಿಕೆಗಳಲ್ಲಿ ವಿದ್ಯಾರ್ಥಿಗಳನ್ನು ತೊಡಗಿಸಿದರೆ ಪ್ರೊ. ವಸಂತ ಬನ್ನಾಡಿ, ಪ್ರೊ. ಜಯಪ್ರಕಾಶ ಮಾವಿನಕುಳಿಯವರು ಹೊಸ ಅಲೆಯ ನೂತನ ಸಂವೇದನೆಯ ರಂಗ ಚಟುವಟಿಕೆಗಳಿಗೆ ವಿದ್ಯಾರ್ಥಿಗಳನ್ನು ಸಜ್ಜುಗೊಳಿಸಿದರು. ಇವರ ಪ್ರೇರಣೆ ಮತ್ತು ಪ್ರೋತ್ಸಾಹದಿಂದಾಗಿ ಕಾಲೇಜಿನಲ್ಲಿ 1979ರಲ್ಲಿಯೇ **'ಅಸಂಗತ'** ಎಂಬ ನಾಟಕವೇದಿಕೆಯು ಅಸ್ತಿತ್ವಕ್ಕೆ ಬಂದು ಈ ವೇದಿಕೆಯ ವತಿಯಿಂದ ಐದು ದಿನಗಳ ನಾಟಕೋತ್ಸವವು ಕರ್ನಾಟಕ ನಾಟಕ ಅಕಾಡೆಮಿಯ ಸಹಯೋಗದೊಂದಿಗೆ ಜರಗಿತು. ಈ ನಾಟಕೋತ್ಸವವು

ವಿದ್ಯಾರ್ಥಿಗಳಲ್ಲಿರುವ ರಂಗಪ್ರತಿಭೆಯನ್ನು ಹೊರತರುವಲ್ಲಿ ಪ್ರಮುಖ ಕಾರ್ಯಕ್ರಮವಾಯಿತು. ಈ ಎಲ್ಲ ಚಟುವಟಿಕೆಗಳ ಅಂತಿಮ ಪರಿಣಾಮವಾಗಿ 1997–98ರಲ್ಲಿ ರಂಗಶಿಕ್ಷಣ ತರಬೇತಿಗಾಗಿ **ರಂಗ ಅಧ್ಯಯನ ಕೇಂದ್ರವು** ಅಸ್ತಿತ್ವಕ್ಕೆ ಬಂದಿತು.

ಅ) **ಯಕ್ಷಗಾನ ಸಂಘ:** ಪ್ರದರ್ಶನ ಕಲೆಯನ್ನು ಹೆಚ್ಚು ಬಯಸುವ ಮತ್ತು ಯಕ್ಷಗಾನ ಕಲಾಮಾಧ್ಯಮದಲ್ಲಿ ಎಳೆಯ ವಯಸ್ಸಿನಿಂದಲೇ ತೊಡಗಿಸಿಕೊಳ್ಳುವ ಪ್ರವೃತ್ತಿ ಈ ಪರಿಸರದ ವಿದ್ಯಾರ್ಥಿಗಳಿಗೆ ಸಾಮಾನ್ಯ ಹವ್ಯಾಸವಾಗಿದೆ. ಇಂತಹ ವಿದ್ಯಾರ್ಥಿಗಳು ಕಾಲೇಜು ವಾರ್ಷಿಕೋತ್ಸವ ಸಂದರ್ಭದಲ್ಲಿ ಯಕ್ಷಗಾನ ಕಲಾಚಟುವಟಿಕೆಗೆ ಕಾಲೇಜು ವೇದಿಕೆಯನ್ನು ಬಳಸಿಕೊಂಡಿದ್ದಾರೆ. ವಿದ್ಯಾರ್ಥಿಗಳ ಕಲಾಸಕ್ತಿಯನ್ನು ಪ್ರಚೋದಿಸುವ ಸಲುವಾಗಿ 1976ರಲ್ಲಿ ಡಾ. ಶಾಂತಾರಾಮ್ ಅವರು ಪ್ರಾಂಶುಪಾಲರಾಗಿದ್ದಾಗ ಯಕ್ಷಗಾನಸಂಘವನ್ನು ಸ್ಥಾಪಿಸಲು ಮುಂದಾದರು. ಇದೇ ವೇದಿಕೆಯಿಂದ ಪ್ರತಿವರ್ಷ ನವೆಂಬರ್ ಒಂದರಂದು ಪ್ರಸಿದ್ಧ ಯಕ್ಷಗಾನ ಅರ್ಥಧಾರಿಗಳನ್ನು ಆಹ್ವಾನಿಸಿ, ತಾಳಮದ್ದಳೆ ಕಾರ್ಯಕ್ರಮವನ್ನು ಜರಗಿಸುವ ಪರಿಪಾಠವನ್ನು ರೂಢಿಗೆ ತಂದರು. ಈ ಕಾರ್ಯಕ್ರಮದ 20ನೇ ವರ್ಷದ ಸಂದರ್ಭ ಎಂದರೆ 1995ರಲ್ಲಿ 'ಯಕ್ಷ ವಿಂಶತಿ' ಎಂಬ ಕಾರ್ಯಕ್ರಮವನ್ನು ಹಮ್ಮಿಕೊಂಡು ಅದೇ ಹೆಸರಿನ ಸ್ಮರಣಸಂಪುಟವನ್ನು ಹೊರತರಲಾಗಿತ್ತು.

ಆ) **ಅಂತರಕಾಲೇಜು ಸಂಗೀತಸ್ಪರ್ಧೆ:** 1977ರಿಂದ ಕಾಲೇಜಿನ ಲಲಿತಕಲಾ ಸಂಘದ ವತಿಯಿಂದ ಡಾ. ಎ.ಎಸ್. ಭಂಡಾರ್ಕರರ ಹೆಸರಿನಲ್ಲಿ ಸ್ಥಾಪಕರ ದಿನಾಚರಣೆಯನ್ನು ಪ್ರತಿ ವರ್ಷ ಡಿಸೆಂಬರ್ ತಿಂಗಳಿನಲ್ಲಿ ಹಮ್ಮಿಕೊಂಡು ಬರಲಾಗುತ್ತಿದೆ. ಸ್ಥಾಪಕರ ದಿನಾಚರಣೆಯ ಅಂಗವಾಗಿ ಅಂತರ ಕಾಲೇಜು ಸಂಗೀತಸ್ಪರ್ಧೆಯನ್ನು ಏರ್ಪಡಿಸುತ್ತಾ ವಿಶ್ವವಿದ್ಯಾನಿಲಯ ಮಟ್ಟದಲ್ಲಿ ಸಂಗೀತಕ್ಷೇತ್ರದಲ್ಲಿ ಪ್ರತಿಭಾವಂತರಾದ ವಿದ್ಯಾರ್ಥಿಗಳನ್ನು ಪುರಸ್ಕರಿಸುವ ಹಾಗೂ ಆ ವಿದ್ಯಾರ್ಥಿ ಪ್ರತಿನಿಧಿಸುತ್ತಿರುವ ಕಾಲೇಜಿಗೆ ಪರ್ಯಾಯ ಫಲಕವನ್ನು ನೀಡುವ ಪರಂಪರೆಯನ್ನು ಮುಂದುವರಿಸಿಕೊಂಡು ಬರಲಾಗುತ್ತಿದೆ.

ಇ) **ರಂಗ ಅಧ್ಯಯನ ಕೇಂದ್ರ:** ಆಗಸ್ಟ್ 3–1997 ರಂದು ಅಸ್ತಿತ್ವಕ್ಕೆ ಬಂದ ಈ ಕೇಂದ್ರವು ಈ ಪರಿಸರದ ರಂಗಕರ್ಮಿ ಎಚ್. ಎನ್. ನಕ್ಕತ್ತಾಯರಿಂದ ಉದ್ಘಾಟಿಸಲ್ಪಟ್ಟಿತು. ಮಣಿಪಾಲ ಅಕಾಡೆಮಿ ಹಾಗೂ ಸ್ಥಳೀಯ ದಾನಿಗಳ ನೆರವಿನಿಂದ ರಂಗ ಅಧ್ಯಯನಕ್ಕಾಗಿ ಕಟ್ಟಿಸಲಾದ ಭವ್ಯ ಕಟ್ಟಡವು 28.02.1999 ರಂದು ಬಿ.ವಿ. ಕಾರಂತರಿಂದ ಉದ್ಘಾಟಿಸಲ್ಪಟ್ಟಿತು. ಅಂತಾರಾಷ್ಟ್ರೀಯ ರೋಟರಿ ದತ್ತಿನಿಧಿಯ ಹದಿನಾರು ಸಾವಿರ ಡಾಲರುಗಳ ಆರ್ಥಿಕ ನೆರವನ್ನು ಬಳಸಿಕೊಂಡು ಅಗತ್ಯ ರಂಗ ಪರಿಕರ ಸಲಕರಣೆಗಳನ್ನು ಖರೀದಿಸಿ, ಸುಸಜ್ಜಿತ ರಂಗ ಅಧ್ಯಯನ ಕೇಂದ್ರವನ್ನು ಕಾಲೇಜು ವಠಾರದಲ್ಲಿಯೇ ಸ್ಥಾಪಿಸಲಾಗಿದೆ. ಪ್ರೊ. ವಸಂತ ಬನ್ನಾಡಿ (ಸ್ಥಳೀಯ ಕಾಲೇಜಿನ ಉಪನ್ಯಾಸಕರು), ಪ್ರೊ. ಶಿವಾನಂದ ಕಾರಂತ, ಕೂರಾಡಿ ಸೀತಾರಾಮ ಶೆಟ್ಟಿ ತಮ್ಮ ಸ್ವ ಆಸಕ್ತಿಯಿಂದ ರಂಗ ಅಧ್ಯಯನ ಕೇಂದ್ರದ ವಿದ್ಯಾರ್ಥಿಗಳಿಗೆ ತಮ್ಮ ರಂಗಾನುಭವ ಮತ್ತು ವಿದ್ವತ್ತೆಯನ್ನು ಹಂಚಿಕೊಳ್ಳುತ್ತಿದ್ದಾರೆ. ನಾಟಕ ಕ್ಷೇತ್ರಗಳಲ್ಲಿ ಗುರುತಿಸಿಕೊಂಡ ತಜ್ಞ ಸಂಪನ್ಮೂಲ ಉಪನ್ಯಾಸಕರು ಪೂರ್ಣಕಾಲಿಕ ನೆಲೆಯಲ್ಲಿ ದುಡಿಯುವಂತಾದರೆ ರಂಗ ಅಧ್ಯಯನ ಕೇಂದ್ರದ ಉದ್ದೇಶವು ಈಡೇರಿದಂತಾಗುವುದು.

**ಕಾಲೇಜು ಪ್ರಕಟಿಸಿದ ಕೆಲವು ವಿಶೇಷ ಪ್ರಕಟನೆಗಳು ಅಥವಾ ಸಂಚಿಕೆಗಳು:** 20ನೇ ಶತಮಾನದ 38 ವರ್ಷಗಳಲ್ಲಿ ಕಾಲೇಜು ವಿವಿಧ ವಿಶೇಷ ಸಂಚಿಕೆ ಹಾಗೂ ವಾರ್ಷಿಕ ಸಂಚಿಕೆಗಳನ್ನು ಈ ಶೀರ್ಷಿಕೆಯಲ್ಲಿ ಚರ್ಚಿಸಬೇಕಾಗಿದೆ. ಕಾಲೇಜು ಪ್ರಕಟಿಸಿದ್ದು, ಈ ಸಂಚಿಕೆಗಳ ವೈಶಿಷ್ಟ್ಯಗಳನ್ನು ಸಂಕ್ಷಿಪ್ತವಾಗಿ ವಿವರಿಸುವುದು ಈ ಅಧ್ಯಯನಕ್ಕೆ ಪೂರಕ ಮತ್ತು ಅವಶ್ಯಕವಾಗಿದೆ.

1) **ದೀವಿಗೆ:** ಈ ಕೃತಿಯ ಮುಖ್ಯ ಸಂಪಾದಕರು ಆರ್. ರಾಮದೇವ ಶೆಣೈ ಹಾಗೂ ಸಹ ಸಂಪಾದಕರಾಗಿ ಎಚ್. ಶಾಂತಾನಂದ ಭಟ್, ಎಸ್. ಮುರಾರಿ ತೋಳ್ಪಾಡಿಯವರ ಹೆಸರು ಉಲ್ಲೇಖವಾಗಿರುತ್ತದೆ. ಗೋವಿಂದ ಪೈಯವರ ಸಂಸ್ಮರಣಾರ್ಥವಾಗಿ ಕಾಲೇಜು ಪ್ರಕಟಿಸಿದ ಈ ಸಂಪುಟವು ಕಂಬನಿ (ಶ್ರದ್ಧಾಂಜಲಿ ಕವಿತೆ), ನೆನಹುಗಳು, ವಿಮರ್ಶೆ, ಕಾಣಿಕೆ, ಪತ್ರಗಳು ಎಂದು 5 ವಿಭಾಗಗಳಲ್ಲಿ ವಿಸ್ತರಿಸಿಕೊಂಡ 300 ಪುಟದ ಕೃತಿಯಾಗಿರುತ್ತದೆ. ಪ್ರತಿಯೊಂದು ಶೀರ್ಷಿಕೆಯ ಅಡಿಯಲ್ಲಿ ಅಂದಿನ ಕನ್ನಡದ ಮೇರು ಕವಿಗಳೆಂದು ಗುರುತಿಸಿಕೊಂಡ ಕುವೆಂಪು, ಬೇಂದ್ರೆ, ಗೋಕಾಕ್, ಪು.ತಿ.ನ., ಕಣವಿ, ಎಕ್ಕುಂಡಿ, ಜಿ.ಪಿ.ರಾಜರತ್ನಂ, ಮಾಸ್ತಿ, ಕಾರಂತ ಮುಂತಾದ ಹಿರಿಯ ಕವಿಗಳು ಗೋವಿಂದ ಪೈಯವರ ಕೃತಿ ಮತ್ತು ಅವರ ಖಾಸಗೀ ಬದುಕಿನ ವಿವರಗಳನ್ನು ಓದುಗರೊಂದಿಗೆ ಹಂಚಿಕೊಂಡಿರುವುದನ್ನು ಗಮನಿಸುತ್ತೇವೆ.

**ದೀವಿಗೆ ಭಾಗ-2:** ಕಾಲೇಜಿನ ಇನ್ನೊಂದು ಪ್ರಕಟಿತ ಕೃತಿಯಾಗಿದ್ದು, ಭಾಗ ೧ ರ ಸಂಪಾದಕ ಮಂಡಳಿಯೇ ಈ ಕೃತಿಯನ್ನು ಹೊರತಂದಿರುವುದಾಗಿದೆ. ದಿ। ಪೈಯವರ ಪ್ರಕಟಿತ ಹಾಗೂ ಅಪ್ರಕಟಿತವಾಗಿ ಹಸ್ತಪ್ರತಿಗಳ ರೂಪದಲ್ಲಿದ್ದ ಸಾಹಿತ್ಯಕ ಬರಹಗಳನ್ನು ಈ ಸಂಪುಟದಲ್ಲಿ ಪ್ರಕಟಿಸಿರುವುದನ್ನು ಕಾಣಬಹುದಾಗಿದೆ.

2) **ಸಮರ್ಪಣೆ:** ಗೋವಿಂದ ಪೈಯವರು ತೀರಿದ ಮರುವರ್ಷ ಅವರ ಹೆಸರನ್ನೂ, ಅವರ ಕೃತಿ ವೈಶಿಷ್ಟ್ಯವನ್ನೂ ಮುಂದಿನ ತಲೆಮಾರಿಗೆ ವರ್ಗಾಯಿಸುವ ಪ್ರಯತ್ನವಾಗಿ ಅವರ ಕುರಿತಾಗಿ ಕಾಲೇಜು ಪ್ರಕಟಿಸಿದ ಗ್ರಂಥವೇ 'ಸಮರ್ಪಣೆ'. ಈ ಕೃತಿಯಲ್ಲಿ ಗೋವಿಂದ ಪೈಯವರು ಕವಿ ಮುದ್ದಣನ ಬಗ್ಗೆ ಬರೆದ ಒಂದು ಲೇಖನವೂ ಒಳಗೊಂಡಿರುತ್ತದೆ ಎನ್ನುವುದು ಈ ಕೃತಿಯ ವೈಶಿಷ್ಟ್ಯ.

3) **ಗೋವಿಂದ ಪೈಯವರ ಮೂರು ನಾಟಕಗಳು:** ರಾಷ್ಟ್ರಕವಿ ಗೋವಿಂದ ಪೈಯವರು ಬರೆದ ಮೂರು ಏಕಾಂಕ ನಾಟಕಗಳ ಕುರಿತು, 1967ರಲ್ಲಿ ಹಂ.ಪ. ನಾಗರಾಜಯ್ಯ ಅವರು ಈ ಕಾಲೇಜಿನಲ್ಲಿ ನೀಡಿದ ಉಪನ್ಯಾಸವನ್ನು ಕಾಲೇಜು ಕಿರು ಹೊತ್ತಗೆ ರೂಪದಲ್ಲಿ ಪ್ರಕಟಿಸಿರುತ್ತದೆ. ಉಪನ್ಯಾಸದ ಮೊದಲ ಭಾಗವು **ಹೆಬ್ಬೆರಳು** ನಾಟಕದ ಕುರಿತಾಗಿದ್ದು, ಇದು ಮಹಾಭಾರತದಿಂದ ಆಯ್ಕೆ ಮಾಡಿದ ಕಥಾ ಪ್ರಸಂಗವಾದರೆ, ಎರಡನೇ ಭಾಗವು **ಚಿತ್ರಭಾನು** ಎಂಬ ನಾಟಕದ ಕುರಿತ ಹಂಪನಾ ಅವರ ವಿವರಣೆಯಾಗಿದೆ. ಈ ನಾಟಕದಲ್ಲಿ ವೇಣುಗೋಪಾಲನೆಂಬ ತರುಣನು ತನ್ನ ವೃದ್ಧ ತಾಯಿಯನ್ನು ಮರೆತು, ದೇಶಕ್ಕಾಗಿ ಬ್ರಿಟೀಷರ ವಿರುದ್ಧ ಹೋರಾಡಿ, ದೇಶಪ್ರೇಮದ ಮುಂದೆ ತನ್ನನ್ನು ಪ್ರೀತಿಸುವ ಯುವತಿ ಜಾಹ್ನವಿಯನ್ನು ಅಗಲುವ ಕಥೆಯಾಗಿದೆ. ಹಂಪನಾ ಅವರು ಹೇಳುವಂತೆ "ಮಂಜೇಶ್ವರ ಗೋವಿಂದ ಪೈಯವರು ನಾಟಕಗಳನ್ನು ರಚಿಸುವುದರಲ್ಲಿಯೂ ಹೇಗೆ ಪರಿಣತರಾಗಿದ್ದಾರೆಂಬುದನ್ನೂ ಕನ್ನಡ ಭಾಷೆಯ ಮೇಲೆ ಕವಿಗೆ ಇದ್ದ ಪ್ರಭುತ್ವವನ್ನೂ ಈ ಮೂರು ನಾಟಕಗಳಲ್ಲಿ ಗುರುತಿಸಬಹುದು."(ಸಂ: ಶಾಂತಾರಾಮ್ ಎಚ್. ಡಾ।, 1997, ಮುನ್ನುಡಿಯ ಮಾತು)

4) **ರಂಗಶ್ರೀ:** ಈ ಕೃತಿಯು ನಾಟಕೋತ್ಸವದ ನೆನಪಿನ ಸಂಚಿಕೆ. ಕರ್ನಾಟಕ ನಾಟಕ ಅಕಾಡೆಮಿ ಬೆಂಗಳೂರು ಭಂಡಾರ್ಕಾರ್ಸ್ ಕಾಲೇಜು ನಾಟಕ ವೇದಿಕೆ ಅಸಂಗತದ ಆಶ್ರಯದಲ್ಲಿ ನಡೆಸಿದ ನಾಟಕೋತ್ಸವದ ನೆನಪಿನ ಸಂಚಿಕೆಯೇ 'ರಂಗಶ್ರೀ' ಎಂಬ ಕಿರು ಪುಸ್ತಕ. ಈ ಕೃತಿಯಲ್ಲಿ 'ನಿರ್ದೇಶಕನ ದೃಷ್ಟಿಯಲ್ಲಿ ನಾಟಕ'- ಎಂಬ ಶೀರ್ಷಿಕೆಯಲ್ಲಿ ನಾ. ದಾ. ಶೆಟ್ಟಿಯವರು ನೀಡಿದ

ಲೇಖನವು ರಂಗಾಭ್ಯಾಸಿಗಳೆಲ್ಲರಿಗೂ ಮಾರ್ಗದರ್ಶನಸೂತ್ರದಂತಿದೆ. ಅಧ್ಯಯನಾಸಕ್ತರಿಗೆ ಈ ಕೃತಿಯು ಉಪಯುಕ್ತ ಆಕರವಾಗಬಲ್ಲುದು.

5) **ಕುಂದದರ್ಶನ:** ಡಾ. ಶಾಂತಾರಾಮ್ ಅವರು ಕಾಲೇಜಿನ ಪ್ರಾಂಶುಪಾಲರಾಗಿದ್ದಾಗ 'ಕುಂದದರ್ಶನ' ಎಂಬ ಶೀರ್ಷಿಕೆಯಲ್ಲಿ ಒಂದು ಗ್ರಂಥವನ್ನು ಕಾಲೇಜಿನ ಮೂಲಕ ಪ್ರಕಟಿಸಿದರು. ಈ ಕೃತಿಗೆ ಮುನ್ನುಡಿ ಬರೆದ ಡಾ. ಶಿವರಾಮ ಕಾರಂತರು "ವಿಷಯದ ಅನುಕ್ರಮಣಿಕೆಯನ್ನು ಕಂಡಾಗ ಅದರ ವೈವಿಧ್ಯ ತನ್ನಂತೆಯೇ ಸೂಚನೆಯಾಗುತ್ತದೆ. ಇಲ್ಲಿಯ ಲೇಖನಗಳಲ್ಲಿ ಬರಹಗಾರರ ಉತ್ಸಾಹ ತುಂಬ ಕಾಣುತ್ತದೆ..."(ಸಂ: ನಾರಾಯಣ ಆಚಾರ್ಯ ಎ., 1994, ಪು-107) ಎಂದು ಕೃತಿಯ ಮೌಲ್ಯಮಾಪನ ಮಾಡಿರುತ್ತಾರೆ.

6) **ಕುಂದಾಪುರ ತಾಲೂಕು ಒಂದು ಅಧ್ಯಯನ:** ಕಾಲೇಜಿನಿಂದ ಈ ಗ್ರಂಥವು 1994ರಲ್ಲಿ ಪ್ರಕಟಗೊಂಡಿರುತ್ತದೆ. '19ನೆಯ ಶತಮಾನದಲ್ಲಿ ವ್ಯಾಪಾರ ಮತ್ತು ವಾಣಿಜ್ಯ' ಎಂಬೀ ಲೇಖನವು "ಈ ಪ್ರದೇಶವು ವಸಹಾತುಶಾಹಿ ಆಳ್ವಿಕೆಯ ಭಾರವನ್ನು ಎಷ್ಟರ ಮಟ್ಟಿಗೆ ಹೊರಲು ಶಕ್ತವಾಯಿತು ಎಂಬ ವಿಚಾರವನ್ನು ವಿಶದಪಡಿಸುತ್ತದೆ"(ಸಂ: ನಾರಾಯಣ ಆಚಾರ್ಯ ಎ, 1994, ಮುನ್ನುಡಿಯ ಮಾತು) ಎಂಬ ಈ ಹೇಳಿಕೆಯು ವಸಾಹತು ಕಾಲದ ಕುಂದಾಪುರ ತಾಲೂಕಿನ ಸಮಗ್ರ ಇತಿಹಾಸದ ಕುರಿತಂತೆ ವಿಶೇಷ ಮಾಹಿತಿಯನ್ನು ನೀಡುತ್ತದೆ ಎಂಬ ಅಂಶವನ್ನು ಎತ್ತಿ ಹಿಡಿದಿದೆ.

7) **ಯಕ್ಷ ವಿಂಶತಿ:** ಕಾಲೇಜಿನಿಂದ ಪ್ರಕಟಗೊಂಡ ಈ ಕೃತಿಯ ಗೌರವ ಸಂಪಾದಕರು ಪ್ರೊ. ಎ. ನಾರಾಯಣ ಆಚಾರ್ಯರು. ಸಂಪಾದಕರು ಡಾ. ಸಿ.ಪಿ. ಅತಿಕಾರಿ ಮತ್ತು ಎಚ್. ವಿ. ನರಸಿಂಹಮೂರ್ತಿಯವರು. 1976 ನವೆಂಬರ್ ಒಂದರಿಂದ ಮೊದಲ್ಗೊಂಡು 1995ರ ತನಕದ 20 ವರ್ಷ ಕಾಲೇಜು ತಾಳಮದ್ದಳೆಯ ಕೂಟವನ್ನು ನಿರ್ವಹಿಸಿಕೊಂಡು ಬಂದ ನೆನಪಿನ ಪ್ರಯುಕ್ತ ಪ್ರಕಟಿಸಿದ ಕೃತಿಯೇ 'ಯಕ್ಷವಿಂಶತಿ'. ಯಕ್ಷಗಾನ ಕ್ಷೇತ್ರಕ್ಕೆ ತಮ್ಮನ್ನು ಅರ್ಪಿಸಿಕೊಂಡ ಈ ಪರಿಸರದ ಕಲಾತಪಸ್ವಿಗಳಿಗೆ, ಅವರ ಸಿದ್ಧಿ ಸಾಧನೆಗಳಿಗೆ ಈ ವೇದಿಕೆ ಮೂಲಕ ನಮನ ಅರ್ಪಿಸಬೇಕೆಂಬುದೇ ಡಾ. ಶಾಂತಾರಾಮ ಅವರ ಆಶಯವಾಗಿತ್ತು.

**ಕಾಲೇಜಿನ ವಾರ್ಷಿಕ ಸಂಚಿಕೆಗಳು:**

ಕಾಲೇಜು ಆರಂಭಗೊಂಡ ವರ್ಷದಿಂದ (1963-64ನೇ ಶೈಕ್ಷಣಿಕ ವರ್ಷದಿಂದ) ನಿರಂತರವಾಗಿ ವಾರ್ಷಿಕ ಸಂಚಿಕೆಗಳು ಪ್ರಕಟಗೊಂಡಿವೆ. ಸಂಚಿಕೆಯು ಆಯಾ ಶೈಕ್ಷಣಿಕ ವರ್ಷದ ಶೈಕ್ಷಣಿಕ ಮತ್ತು ಸಾಂಸ್ಕೃತಿಕ ವರದಿಗಳ ದಾಖಲೆಗಳಲ್ಲದೇ ಸಾಹಿತ್ಯ ಚಟುವಟಿಕೆಗಳ ಮೌಲಿಕ ದಾಖಲೆಯೂ ಹೌದು. ಕಾಲೇಜು ಸಂಚಿಕೆಯ (1976-77) ಪ್ರಕಟಣೆಯ ಅರಿಕೆಯಲ್ಲಿ ಸಂಪಾದಕರು "ಕಾಲೇಜು ಮ್ಯಾಗಜ಼ಿನ್ ಒಮ್ಮೆ ನೋಡಿ ಬದಿಗಿರಿಸುವ ಸಂಪುಟವಾಗದೆ ಓದಿ ಮತ್ತೆ ಮನೆಯ ಪುಸ್ತಕಾಲಯದಲ್ಲಿ ತೆಗೆದಿರಿಸುವಂತಾಗಬೇಕೆಂಬ ಇಚ್ಛೆ ನಮ್ಮದು"(ಸಂ: ನಾವಡ ಎ.ವಿ., ಪ್ರೊ., 1976-77, ಪು-2) ಎಂದು ತಮ್ಮ ಉದ್ದೇಶವನ್ನು ಹೇಳಿಕೊಂಡಿದ್ದಾರೆ.

38 ವರ್ಷದ, 38 ಸಂಚಿಕೆಗಳಲ್ಲಿಯೂ ಕಥೆ, ಕವನ, ಸಾಂಸ್ಕೃತಿಕ ಮಹತ್ವವುಳ್ಳ ಪ್ರಬಂಧ, ವ್ಯಕ್ತಿ ಪರಿಚಯ, ವಿಮರ್ಶೆ, ಶಿಬಿರಾನುಭವ, ಕ್ಷೇತ್ರಕಾರ್ಯಾಧರಿತ ಸಂಶೋಧನಒಳನೋಟವನ್ನು ಹೊಂದಿದ ವಿವಿಧ ಶೀರ್ಷಿಕೆಯ ಲೇಖನಗಳು, ಜಾತಿ-ಜನಾಂಗದ ಅಧ್ಯಯನ, ಪರಿಸರದ ನಂಬಿಕೆ, ಆರಾಧನೆ, ಉತ್ಸವ, ಜನಪದ ಆಚರಣೆಗಳ ಕುರಿತ ಪ್ರಬಂಧಗಳು- ಹೀಗೆ ಎಲ್ಲ ಪ್ರಕಾರಗಳೂ ಒಳಗೊಂಡಿರುತ್ತವೆ. ಪ್ರಬಂಧದ ಅತಿವ್ಯಾಪ್ತಿಯನ್ನು ತಪ್ಪಿಸಲೋಸುಗ ಬೇರೆ ಬೇರೆ ಸಂಚಿಕೆಗಳಲ್ಲಿ ಪ್ರಕಟಗೊಂಡ ಮೇಲ್ಕಂಡ ಮಾದರಿ ಪ್ರಕಾರಗಳನ್ನು ಆಯ್ಕೆಮಾಡಿ, ಸಂಕ್ಷಿಪ್ತವಾಗಿ ಈ ಪ್ರಬಂಧದಲ್ಲಿ ಅಧ್ಯಯನ ವಿಷಯಕ್ಕೆ ಪೂರಕವಾಗಿ ವಿಶ್ಲೇಷಣೆಗೆ ಒಳಪಡಿಸಲಾಗಿದೆ.

**ಗದ್ಯ ಪ್ರಬಂಧಗಳು:** ಕಾಲೇಜು ವರ್ಷಂಪ್ರತಿ ಹೊರತರುತ್ತಿರುವ ಸಂಚಿಕೆಯಲ್ಲಿ ವಿವಿಧ ಮಾದರಿ ಮತ್ತು ಪ್ರಭೇದದ ಪ್ರಬಂಧಗಳು ಪ್ರಕಟವಾಗಿದ್ದು, ಈ ಗದ್ಯಪ್ರಬಂಧಗಳ ಮಾದರಿಗಳು ಈ ಕೆಳಗಿನಂತಿದೆ.

ಕಾಲೇಜಿನ ಪ್ರಥಮ ತಂಡದ ವಿದ್ಯಾರ್ಥಿನಿ 'ವೈದೇಹಿ' ಎಂಬ ಕಾವ್ಯನಾಮದಲ್ಲಿ ಇಂದು ಕನ್ನಡಿಗರಿಗೆ ಚಿರಪರಿಚಿತರಾದ ಕುಮಾರಿ ಜಾನಕಿ ಹೆಬ್ಬಾರ್ ಅವರ ಗದ್ಯ ಬರಹವು ಕಾಲೇಜಿನ ಪ್ರಥಮ ವಾರ್ಷಿಕ ಸಂಚಿಕೆಯಲ್ಲಿ (ಸಂಪುಟ-1, 1963-64, ಪು-83, ಪ್ರ.ಸಂ. ಕೆ.ಜಿ. ಶೆಣೈ) 'ಹೊಸವರುಷ, ಹೊಸವರುಷ, ಹೊಸತು ಹೊಸತು ತರುತಿದೆ' ಲಲಿತ ಪ್ರಬಂಧದ ಮಾದರಿಯಲ್ಲಿರುವ ಈ ಗದ್ಯ ಬರವಣಿಗೆಯು ವೈದೇಹಿಯವರ ಮುಂದಿನ ಬರಹಗಳಿಗೆ ಪೀಠಿಕೆ ಎಂಬ ರೀತಿಯಲ್ಲಿ ರಚನೆಗೊಂಡಿದೆ.

1965-66ನೇ ಶೈಕ್ಷಣಿಕ ವರ್ಷದ ಸಂಚಿಕೆಯಲ್ಲಿ'ನಾಗರಿಕತೆ ಮುನ್ನಡೆಯುತ್ತಿದೆಯೇ?' ಎಂಬ ಶೀರ್ಷಿಕೆಯಲ್ಲಿ ಕೆ. ನಾರಾಯಣ ಹೆಬ್ಬಾರ ಎಂಬ ಪ್ರಥಮ ಬಿ.ಎ. ಪದವಿ ವಿದ್ಯಾರ್ಥಿಯು 'ನಾಗರಿಕತೆ', 'ಸಂಸ್ಕೃತಿ' ಎಂಬ ಎರಡು ಶಬ್ದಗಳನ್ನು ವಿವರಿಸುತ್ತಾ, ನಾಗರಿಕತೆ ಮತ್ತು ಸಂಸ್ಕೃತಿ "ಪರಸ್ಪರ ಹೊಂದಿಕೊಂಡಿದ್ದರೆ ಮಾತ್ರ ಎರಡಕ್ಕೂ ಬೆಲೆಯಿದೆ. ಅವುಗಳನ್ನು ಒಂದುಗೂಡಿಸಿ ನಡೆಯಿಸುವುದು ಮಾನವನ ಆದ್ಯ ಕರ್ತವ್ಯ... ವಿಜ್ಞಾನದ ಪ್ರಗತಿಯಿಂದ ಕೇವಲ ಸುಖಸಾಧನಗಳು, ಭೋಗವಸ್ತುಗಳು ಹೆಚ್ಚಿ, ಸಂಸ್ಕೃತಿ ಹಿನ್ನೆಡೆಗೆ ಸಾಗುತ್ತಿವೆ"(ಸಂ: ಕೃಷ್ಣ ರಾವ್ ಟಿ. ಪ್ರೊ., 1965-66, ಪು-51) ಎಂಬು ನಿಲುವಿಗೆ ತಲುಪಿದ್ದಾನೆ. ವಿಜ್ಞಾನದ ಪ್ರಗತಿಯಲ್ಲಿ ನಾಗರಿಕತೆಯ ಹಿಮ್ಮುಖ ಚಲನೆಯನ್ನು ಗುರುತಿಸುವುದೇ ಈ ವೈಚಾರಿಕ ಪ್ರಬಂಧದ ಆಶಯ ಎನ್ನಬಹುದಾಗಿದೆ.

ಕಾಲೇಜು ಮಟ್ಟದಲ್ಲಿಯೇ ನಡೆದ ಕನ್ನಡ ಪ್ರಬಂಧ ಸ್ಪರ್ಧೆಯಲ್ಲಿ ಪ್ರಥಮ ಬಹುಮಾನ ಪಡೆದ 'ಸಾಹಿತ್ಯದಿಂದ ಹೃದಯ ಪರಿವರ್ತನೆ' ಎಂಬ ಪ್ರಬಂಧವಾಗಿದ್ದು, ಇದು ವಿನ್ನಿಬಾಲ್ಡ್ ಡಿಮೆಲ್ಲೋ ಎಂಬ ಪ್ರಥಮ ಬಿಕಾಂ ವಿದ್ಯಾರ್ಥಿನಿಯ ಪ್ರಬಂಧವಾಗಿ ಕಾಲೇಜು ವಾರ್ಷಿಕಾಂಕದಲ್ಲಿ ಮುದ್ರಣಗೊಂಡಿದೆ. ವಿದ್ಯಾರ್ಥಿ 'ಸಾಹಿತ್ಯದ ಶಕ್ತಿ ಮತ್ತು ಪರಿಣಾಮ'ಗಳ ಕುರಿತಂತೆ ಹೀಗೆ ಉಲ್ಲೇಖಿಸಿದ್ದಾಳೆ: "... ನಮ್ಮ ಹೃದಯದಲ್ಲಿ ನಾನಾ ರಸಗಳು ತಳಮಳಗುಟ್ಟುತ್ತವೆ. ನಾವು ಕವಿ ಕೃತಿಯಲ್ಲಿ ತಲ್ಲೀನರಾಗುತ್ತೇವೆ. ಅದೇ ಸಾಹಿತ್ಯ ಸೌಂದರ್ಯಾನುಭವ, ಅದೇ ಸಾಹಿತ್ಯಾನಂದ ವೈಭವ. ಆ ತನ್ಮಯತೆಯೇ ಮನಸ್ಸಿನ ಪರಿಪಾಕ. ಹೀಗೆ ಸಾಹಿತ್ಯ ಮಾನವನ ತತ್ತ್ವವಿಚಾರ ಪ್ರೇರಕವಾದುದು. ಆತನ ಹೃದಯವನ್ನು ಪರಿವರ್ತಿಸುವಂಥದ್ದು."(ಸಂ:

ಶೆಣೈ ಕೆ.ಜಿ. 1964-65, ಪು-51) ವಿದ್ಯಾರ್ಥಿನಿಯು ಈ ಹೇಳಿಕೆಯಲ್ಲಿ ಸಾಹಿತ್ಯದ ಅಂತಿಮ ಉದ್ದೇಶವನ್ನು ತನ್ನ ಪ್ರಬಂಧದಲ್ಲಿ ಸಾಕಾರಗೊಳಿಸಿದ್ದಾಳೆ.

ವಾರ್ಷಿಕ ಸಂಚಿಕೆ 1978-79ರಲ್ಲಿ ಕುವೆಂಪು ಅವರ ಜ್ಞಾನಪೀಠ ಪ್ರಶಸ್ತಿವಿಜೇತ 'ಶ್ರೀ ರಾಮಾಯಣದರ್ಶನಂ' ಕೃತಿಯ ಕುರಿತು ಪ್ರಥಮ ಬಿ.ಎ. ವಸಂತಿ ಇವರ ವಿಮರ್ಶಲೇಖನವು ಪ್ರಕಟಗೊಂಡಿದೆ. "ಈ ಯುಗದ ಅವಶ್ಯಕತೆಗಳಿಗನುಗುಣವಾಗಿ ಅನೇಕ ಬದಲಾವಣೆಗಳನ್ನು ಮಾಡಿಕೊಂಡು ಸಮಷ್ಟಿಪ್ರಜ್ಞೆಯ ಅಭಿವ್ಯಕ್ತಿಯಾಗಿ ಇದು ಅವತರಿಸುವಂತೆ ಮಾಡಿದ್ದಾರೆ" (ಸಂ: ಶಾಂತಾರಾಮ್ ಎಚ್. ಡಾ|, 1978-79, ಪು-9) ಎಂಬ ಅಭಿಪ್ರಾಯವು ವಿದ್ಯಾರ್ಥಿನಿಯ ಪ್ರೌಢ ಹೇಳಿಕೆಯಾಗಿದೆ.

ಜ್ಞಾನಪೀಠ ಪ್ರಶಸ್ತಿ ಪುರಸ್ಕೃತ ಕೃತಿ 'ಮೂಕಜ್ಜಿಯ ಕನಸುಗಳು ಒಂದು ಸಮೀಕ್ಷೆ' ಎಂಬ ಕಾದಂಬರಿಯ ಸಮೀಕ್ಷೆಯು ಶಿವಾನಂದ ಕಾವ್ರಾಡಿ ಎಂಬ ತೃತೀಯ ಬಿ.ಎ. ವಿದ್ಯಾರ್ಥಿಯ ಪ್ರಬಂಧವಾಗಿದ್ದು, ಇಲ್ಲಿ ಮೂಕಜ್ಜಿಯ ಕುರಿತಂತೆ ವಿದ್ಯಾರ್ಥಿಯ ಅಭಿಪ್ರಾಯ ಹೀಗೆ ಉಲ್ಲೇಖಗೊಂಡಿದೆ. "ಚಿಕ್ಕ ವಯಸ್ಸಿನಲ್ಲಿ ವಿಧವೆಯಾಗಿ ನಿಸರ್ಗಕ್ರಿಯೆಗಳಿಂದ ಧಾರ್ಮಿಕ ನಂಬಿಕೆಯ ಕಾರಣ ವಂಚಿತಳಾಗಿ ಸುಮಾರು 50ಕ್ಕೂ ಮಿಕ್ಕಿ ವರ್ಷ ಗೋಡೆ ಮಧ್ಯೆಯೇ ಇದ್ದ ಮೂಕಜ್ಜಿ ನಂತರ ಪಡೆದ ಅತೀಂದ್ರಿಯ ಶಕ್ತಿಯಿಂದಾಗಿ ಪ್ರಸಿದ್ಧಳಾಗುತ್ತಾಳೆ"(ಪೂರ್ವೋಕ್ತ, ಪು-17)ಎನ್ನುವುದನ್ನು ವಿದ್ಯಾರ್ಥಿ ಗುರುತಿಸಿದ್ದು, ಇದುವೇ ಕಾದಂಬರಿಯ ಆಶಯ ಎನ್ನುವುದನ್ನು ಅಲ್ಲಗಳೆಯಲಾಗದು.

1986-87ನೇ ಸಂಚಿಕೆಯ ಇನ್ನೊಂದು ಬಹುಮುಖ್ಯ ವಿಮರ್ಶಾ ಭಾಗವೇ ವ್ಯಾಸರಾಯ ಬಲ್ಲಾಳರ 'ಬಂಡಾಯ' ಕಾದಂಬರಿಗೆ ಸಂಬಂಧಿಸಿದ ವಿಮರ್ಶಾ ಪ್ರಬಂಧವಾಗಿದೆ. ಕಾದಂಬರಿಯಲ್ಲಿ ಎರಡು ಮುಖ್ಯ ಪಾತ್ರಗಳ ವ್ಯಕ್ತಿತ್ವವನ್ನು ವಿವಿಧ ಸಂಘಟನೆಗಳ ಹಿನ್ನೆಲೆಯಲ್ಲಿ ವರ್ಣಿಸಿರುವುದೇ ಕಾದಂಬರಿಯ ಒಟ್ಟಾರೆಯ ವಸ್ತುವಾಗಿದೆ ಎನ್ನುವುದನ್ನು ಗುರುತಿಸಿದ್ದಾನೆ. ಯಾವುದೇ ಪಾತ್ರವನ್ನು ಕಾದಂಬರಿಯಲ್ಲಿ ಸರಳರೇಖಾತ್ಮಕವಾದ ರೀತಿಯಲ್ಲಿ ಚಿತ್ರಿಸದೇ ಪಾತ್ರಗಳ ದ್ವಂದ್ವವನ್ನು, ಆ ಪಾತ್ರಗಳು ವಿವಿಧ ಸಂದರ್ಭಗಳಲ್ಲಿ ಎದುರಿಸುವ ಸಂಕಷ್ಟಗಳನ್ನು ಚಿತ್ರಿಸುವುದೆ ಕಾದಂಬರಿಯ ಸ್ವಾರಸ್ಯಪೂರ್ಣ ಸನ್ನಿವೇಶವಾಗಿದೆ ಎನ್ನುವುದನ್ನು ಕಂಡುಕೊಂಡಿದ್ದಾನೆ.

**ಸಂಚಿಕೆಯಲ್ಲಿ ಪ್ರಕಟಗೊಂಡ ಸಣ್ಣ ಕಥೆಗಳು:**

1964-65ನೇ ಶೈಕ್ಷಣಿಕ ಸಾಲಿನ ಸಂಚಿಕೆಯಲ್ಲಿ ಪಿ.ಯು.ಸಿ. ವಿದ್ಯಾರ್ಥಿ ಮಾಧುರಿ ಆಚಾರ್ಯ ಬರೆದ ಕಥೆ 'ಬಗೆಹರಿಯದ ಪ್ರಶ್ನೆ' ಹದಿ ಹರೆಯದ ವಯಸ್ಸಿನ ಯುವಕ ಯುವತಿಯರು ಓದಲೇ ಬೇಕಾದ ಕಥೆಯಾಗಿದೆ. ಮನೆಯವರೆಲ್ಲರ ಮನಸ್ಸನ್ನು ಒಲಿಸಿ, ವಿಮಲ ಎಂಬ ಶ್ರೀಮಂತ ಹುಡುಗಿ ಕಾಲೇಜನ್ನು ಸೇರುತ್ತಾಳೆ. ಕಾಲೇಜಿನಲ್ಲಿ ಗೆಳತಿಯಾಗಿ ಸಿಕ್ಕ ಕ್ಲಾರಾ ಎಂಬವಳ ಕಾರಣದಿಂದ ಭಿಕ್ಷುಕಿಯಾಗಿ ಮನೆಮನೆಗೆ ಹೋಗಿ, ಬೇಡಿ ತಿನ್ನುವ ದೌರ್ಭಾಗ್ಯ ಮುಂದೆ ವಿಮಲದಳಾಗುತ್ತದೆ. ಈ ಕಥಾವಸ್ತುವನ್ನು ತನ್ನದೇ ಆದ ತಂತ್ರ ಮತ್ತು ಸರಳವಾದ ಭಾಷೆಯಲ್ಲಿ, ಸಣ್ಣಕಥೆ ಎಂಬ ಮಾಧ್ಯಮದಲ್ಲಿ, ಮಾಧುರಿ ಆಚಾರ್ಯ ಅವರು ಕಲಾತ್ಮಕವಾಗಿ ನಿರೂಪಿಸಿದ್ದಾರೆ. ವಿಮಲ ಕಥೆಯ ಕೊನೆಯಲ್ಲಿ ಓದುಗರಿಗೆ ಕೇಳುವ ಪ್ರಶ್ನೆ "ಈಗ ನೀವೇ ಹೇಳಿ ಇದರಲ್ಲಿ ನಿಜವಾದ ತಪ್ಪುಗಾರರು ಯಾರು? ಇಪ್ಪತ್ತನೇ ಶತಮಾನದಲ್ಲಿ ಹುಟ್ಟಿ ನಾಗರಿಕಳಾಗಲು ಬಯಸುವ

ಯುವತಿಯೇ? ಅಥವಾ 20ನೇ ಶತಮಾನದಲ್ಲೂ ಕೂಡ 18ನೇ ಶತಮಾನದ ಪದ್ಧತಿಯನ್ನು ಆಚರಿಸಬಯಸುವ ತಂದೆಯೇ? ಅಥವಾ ಹೆಣ್ಣಿಗಾಗಿ ಇನ್ನೊಂದು ಹೆಣ್ಣಿನ ಸರ್ವನಾಶ ಬಯಸುವ ಹೆಣ್ಣೇ? ಅಥವಾ ತನ್ನ ತನ್ನ ಮಾಯದ ಬಲೆಯಿಂದ ಹೆಣ್ಣನ್ನು ತನ್ನಿಚ್ಛೆ ಬಂದಂತೆ ಕುಣಿಸುವ ಗಂಡೇ? ಯಾರು ನಿಜವಾದ ತಪ್ಪುಗಾರರು?"(ಸಂ: ಶೆಣೈ ಕೆ.ಜಿ., 1964-65, ಪು-33-34) ಎಂದು ಪ್ರಶ್ನಿಸುತ್ತಾರೆ. ಲೇಖಕಿಯ ಈ ಪ್ರಶ್ನೆ ಓದುಗರ ಮನಸ್ಸಿನಲ್ಲಿ ಬಗೆ ಬಗೆಯ ಪ್ರಶ್ನೆಗಳಾಗಿ ಕಾಡುವುದಕ್ಕೆ ತೊಡಗುತ್ತದೆ.

**'ಗೊಂದಲ'** 1999-2000ನೇ ಸಾಲಿನ ಶೈಕ್ಷಣಿಕ ಸಂಚಿಕೆಯಲ್ಲಿ ಪ್ರಕಟವಾದ ಕಥೆಯಾಗಿದೆ. ತೃತೀಯ ಬಿ.ಕಾಂ. ನಾಗರಾಜ್ ಆಚಾರ್ ಅವರ ಈ ಕಥೆಯಲ್ಲಿ ನಿರೂಪಕ ಕುಂದಾಪುರದಿಂದ ಉಡುಪಿಗೆ ಪ್ರಯಾಣಿಸುವ ಸಂದರ್ಭದಲ್ಲಿ ಸಹಪ್ರಯಾಣಿಕಳಾಗಿ ಮಗುವಿನೊಂದಿಗೆ ಬಸ್ಸೇರಿದ ಸ್ತ್ರೀಯೊಬ್ಬಳು ಕುಳಿತುಕೊಳ್ಳಲು ಸ್ಥಳವಿಲ್ಲದೇ ನಿಂತಿರುವಾಗ, ಮಗುವಿಗಾಗುವ ತೊಂದರೆಯನ್ನು ತಪ್ಪಿಸಬೇಕೆಂದು ಸೀಟು ಹಿಡಿದು ಕುಳಿತ ಸಹಪ್ರಯಾಣಿಕನಾದ ನಿರೂಪಕನ ಕೈಗೆ ಮಗುವನ್ನು ಕೊಡುತ್ತಾಳೆ. ಮಗುವನ್ನು ನೀಡಿದ ಆಕೆ ತನ್ನ ನಿಗದಿತ ಸ್ಥಳ ಬರುತ್ತಿದ್ದಂತೆಯೇ ಬಸ್ಸಿನಿಂದ ಇಳಿದುಹೋಗುತ್ತಾಳೆ. ಇಳಿಯುತ್ತಿರುವಾಗ ಆಕೆಯಲ್ಲಿ 'ಮಗು' ಎಂದೊಡನೆ ಯಾರದ್ದು? ಎಂದಾಗ? ನನ್ನ ಎದೆ 'ದಸಕ್ಕ್' ಎಂದಿತು. 'ಅಯ್ಯೋ ನೀವೇ ಕೊಟ್ಟಿರಲ್ಲ' ಎಂದಾಗ, "ನನಗೆ ಮದುವೆಯೇ ಆಗಲಿಲ್ಲ ಇನ್ನು ಈ ಮಗುವನ್ನು ಎಲ್ಲಿಂದ ಕೊಡಲಿ ಎಂದು ಕರಿಮಣಿ ಇಲ್ಲದಿರುವುದನ್ನು ತೋರಿಸಿದಳು"(ಸಂ: ಯು.ಎಸ್.ಐತಾಳ ಡಾ., 1999-2000, ಪು-228) ಪ್ರಕರಣ ಪೊಲೀಸ್ ಸ್ಟೇಷನ್‌ಗೂ ಹೋಯಿತು. ನಿರೂಪಕ ತನ್ನ ಅಸಹಾಯಕತೆಯನ್ನು ಪ್ರಕಟಿಸುತ್ತಿದ್ದಂತೆ ಮಗು ನಿರೂಪಕನನ್ನು 'ಅಪ್ಪಾ' ಎಂದು ಸಂಬೋಧಿಸುತ್ತದೆ. ಪೊಲೀಸರು ಮುಂದೇನೂ ವಿಚಾರಿಸದೇ ಮಗುವನ್ನು ಸೀದಾ ಮನೆಗೆ ಕೊಂಡುಹೋಗಿ ಎಂದಾಗ ಯಾವ ದಾರಿಯೂ ಕಾಣದೇ ನಿರೂಪಕ ಮನೆಗೆ ತರುತ್ತಾನೆ. ಮನೆಗೆ ಬಂದಾಗ ತಂದೆ, ನಿರೂಪಕನನ್ನು ದಿಟ್ಟಿಸುತ್ತಿದ್ದರು. ಅವರು ಕೇಳಿದ ಪ್ರಶ್ನೆಗಳಿಗೆ ಉತ್ತರಿಸದೇ ಚಡಪಡಿಸುತ್ತಾ ಇದ್ದಂತೆ, ಮಂಚದಿಂದ ಕೆಳಗೆ ಬಿದ್ದುಬಿಟ್ಟನು. ಆಗಲೇ ಎಚ್ಚರವಾದ ನಿರೂಪಕನಿಗೆ ತಾನು ಅನುಭವಿಸಿದ ಅಸಹಾಯಕತೆಯು ಕನಸಿನ ಪ್ರಪಂಚವು ಎಂದು ತಿಳಿಯುತ್ತದೆ. ಸಮಸ್ಯೆ ಪರಿಹಾರವಾದಂತಾಗಿ ಮನಸ್ಸು ನಿರಾಳವಾಯಿತು. 'ಆಧುನಿಕ ನಾಗರಿಕತೆಯು ಇಂದು ನಮ್ಮನ್ನು ಯಾವ ಹಂತಕ್ಕೆ ತಂದು ನಿಲ್ಲಿಸಿದೆ?' ಎಂಬ ಪ್ರಶ್ನೆಯನ್ನು ಓದುಗನು ಕೇಳಿಕೊಳ್ಳುವುದರೊಂದಿಗೆ ನಿರೂಪಕನಂತೆ ಆತನ ಅಂತರಂಗದಲ್ಲೂ ಒಂದು ರೀತಿಯ ಗೊಂದಲವು ಆರಂಭವಾಗುತ್ತದೆ ಎನ್ನುವುದೇ ಕಥೆಯ ಆಶಯವಾಗಿದೆ.

**ಸಂಚಿಕೆಯಲ್ಲಿ ಪ್ರಕಟಗೊಂಡ ಕವನಗಳು:** ಕಾಲೇಜಿನ ವಾರ್ಷಿಕ ಸಂಚಿಕೆಯ ಮೊದಲ ಸಂಪುಟದಿಂದಲೇ ವಿದ್ಯಾರ್ಥಿಗಳ ಕವನಗಳು ಪ್ರಕಟವಾಗಿರುವುದು ಕಂಡುಬರುತ್ತದೆಯಾದರೂ ಈ ವಿಭಾಗದಲ್ಲಿ ಶ್ರೇಷ್ಠ ಎಂಬುದಾಗಿ ಸಾಹಿತ್ಯಕ ಮಾನದಂಡದಿಂದ ಗುರುತಿಸುವ ಕವನಗಳಿಲ್ಲವೆಂದೇ ಹೇಳಬೇಕು. 1969-70ನೇ ಶೈಕ್ಷಣಿಕ ವರ್ಷದ ಸಂಚಿಕೆಯಲ್ಲಿ ಜೀವನದ ಸಂಕೀರ್ಣತೆಯನ್ನು 'ಜೀವನ...?' ಎಂಬ ಕವನದಲ್ಲಿ ಎರಡನೇ ಬಿ.ಎಸ್ಸಿ. ವಿದ್ಯಾರ್ಥಿ ಜಿ.ಕೆ. ಐತಾಳ್ ಹೀಗೆ ನಿರೂಪಿಸಿದ್ದಾರೆ.

"ಒಬ್ಬೊಬ್ಬ ಜನರಲ್ಲಿ ಒಂದೊಂದು ನೀತಿ । ಅದಕ್ಕಾಗಿಯೇ ಹೊಡೆದಾಟಗಳಾ ರೀತಿ" ಎಂದು ಉದ್ದರಿಸಿದ್ದಾರೆ. ಅದೇ ಕವನದಲ್ಲಿ ವಿಜ್ಞಾನದ ಯಂತ್ರನಾಗರಿಕತೆಯ ನಿರುದ್ಯೋಗಕ್ಕೆ ಬುನಾದಿಯನ್ನು ಹಾಕಿ ಬಡವರು ಬಡವರಾಗಿಯೇ ಉಳಿದಿರುವುದರ ಕುರಿತು

" ಬದುಕಿಗಾಗಿಯೇನು ಈ ವಿಜ್ಞಾನದ ಪ್ರಗತಿ । ಜನರಿಗಾಗಿಯಲ್ಲವೇ ಈ ಯಂತ್ರ ಪ್ರಗತಿ.

ಅಲ್ಲಿ ನಿರುದ್ಯೋಗ ಸಮಸ್ಯೆಗೊಂದು ಬುನಾದಿ । ಬಡವರಾದರು ಜನರು ಈ ವಿಜ್ಞಾನ ಯುಗದಿ" ಎಂಬುದಾಗಿ ಆತಂಕವನ್ನು ಹೀಗೆ ವ್ಯಕ್ತಪಡಿಸಿದ್ದಾರೆ. (ಸಂ: ಕೃಷ್ಣರಾವ್ ಟಿ. ಪ್ರೊ., 1969–70, ಪುಟ 16–)

**1969–70 ಶೈಕ್ಷಣಿಕ** ವರ್ಷದ ಸಂಚಿಕೆಯಲ್ಲಿ 'ಜೀವನ'ದ ಸಂಕೀರ್ಣತೆಯನ್ನು 1970–71ನೇ ಶೈಕ್ಷಣಿಕ ಸಾಲಿನ ಕಾಲೇಜು ಸಂಚಿಕೆಯ ಪುಟ ಸಂಖ್ಯೆ 11ರಲ್ಲಿ ಪ್ರಥಮ ಬಿ.ಕಾಂ. ತರಗತಿಯ ವಿದ್ಯಾರ್ಥಿ ದಿವಾಕರ ಶೆಟ್ಟಿ, ಕುಂದಗನ್ನಡ ಭಾಷೆಯ ಜಾನಪದ ಸೊಗಡನ್ನು ತ್ರಿಪದಿಯಲ್ಲಿ ನಿರೂಪಿಸಿದ ಬಗೆ ಹೀಗಿದೆ:

"ಎಳ್ಳುನೆಟ್ಟ ಗದ್ದೆಯಲ್ ಏನೆಲ್ಲ ನೆಡ್ಲಕ್ಕು
ಮೂಲಿಗೆ ಮಲ್ಲಿಗೆಯನೆ ನೆಡ್ಲಕ್ಕ್ । ತಮ್ಮಯ್ಯ
ಅಲ್ಲೀಗ್ ನಿನ್ನ ತಂಗೀನ್ ಕೊಡ್ಲಕ್ಕ್
ಹಿರಿಯಣ್ಣನ ಹೆಂಡ್ತಿ ಬಹು ಬಣ್ಣಗಾರ್ತಿ
ಸುಣ್ಣ ಬೇಡಿದರೂ ಕೊಡಲಿಲ್ಲ । ತಮ್ಮಯ್ಯ
ಚಿನ್ನವ ಬೇಡಿದರೆ ಕೊಡುವಳೇ"(ಸಂ: ಕೃಷ್ಣರಾವ್ ಟಿ., 1970–71, ಪು–11)

ಎಂದು ಕುಂದಗನ್ನಡದ ಶೈಲಿಯಲ್ಲಿ ಅತ್ತಿಗೆಯ ಸ್ವಾರ್ಥ ಮತ್ತು ಸಣ್ಣತನದ ಕುರಿತು ನಿರೂಪಿಸಿರುವುದನ್ನು ಕಾಣಬಹುದು.

**ಸಂದರ್ಶನ ಬರಹಗಳು:** ಕಾಲೇಜು ಸಂಚಿಕೆಯಲ್ಲಿ ಬಹುಮುಖ್ಯವೆಂದು ಗುರುತಿಸಬಹುದಾದ ಸಂದರ್ಶನ ಅಥವಾ ಕಲಾವಿದ–ಚಿಂತಕ, ಬರಹಗಾರರೊಂದಿಗೆ ನಡೆಸುವ ಮುಖಾಮುಖಿ ಸಂವಾದವು 1971–72ರಿಂದಲೇ ಪ್ರಕಟಗೊಳ್ಳುತ್ತಿರುವುದನ್ನು ಗಮನಿಸಬಹುದಾಗಿದೆ. ಈ ಮುಖಾಮುಖಿ ಚರ್ಚೆಯಲ್ಲಿ ಕಲಾವಿದರು ಕಲೆಯ ವಿಭಿನ್ನ ಆಯಾಮಗಳ ಕುರಿತು ತಮ್ಮದೇ ಆದ ಕೆಲವು ನಿರ್ದಿಷ್ಟವಾದ ಅಭಿಪ್ರಾಯಗಳನ್ನು ವ್ಯಕ್ತಪಡಿಸಿದ್ದಾರೆ. ಸಂಚಿಕೆಯ ಮೌಲ್ಯವನ್ನು ಮನಗಾಣುವುದಕ್ಕಾಗಿ ಕೆಲವೇ ಕೆಲವು ಸಂವಾದಗಳನ್ನು ಇಲ್ಲಿ ಉಲ್ಲೇಖಿಸಲಾಗಿದೆ.

1971–72ನೇ ವಾರ್ಷಿಕ ಸಂಚಿಕೆಯಲ್ಲಿ ದಾಖಲಾದಂತೆ ಎಚ್.ಎಲ್. ನಾಗರಾಜ್ ತೃತೀಯ ಬಿ.ಎಸ್ಸಿ. ವಿದ್ಯಾರ್ಥಿ ಬಡಗುತಿಟ್ಟಿನ ಪ್ರಸಿದ್ಧ ಭಾಗವತರಾಗಿದ್ದ ನಾರಣಪ್ಪ ಉಪ್ಪೂರ ಇವರಿಗೆ ಕೇಳಿದ ಪ್ರಶ್ನೆ "ನಿಮ್ಮ ದೃಷ್ಟಿಯಲ್ಲಿ ಯಕ್ಷಗಾನದ ಸುಧಾರಣೆಯನ್ನು ಹೇಗೆ ಮಾಡಬಹುದು?" ಇದಕ್ಕೆ ಶ್ರೀಯುತ ಉಪ್ಪೂರರು ಕೊಡುವ ಉತ್ತರ ಹೀಗಿದೆ: "ಯಕ್ಷಗಾನದ ಅವಧಿಯನ್ನು ಮೂರು–ನಾಲ್ಕು ಗಂಟೆಗಳಿಗೆ ಇಳಿಸಿ, ಕಥಾಭಾಗದ ಸ್ವಾರಸ್ಯಕರ ಪ್ರಸಂಗಗಳನ್ನು ತುಂಬಾ ಅಭ್ಯಾಸ ಮಾಡಿದಲ್ಲಿ ಸಕಲರ ಆದರಕ್ಕೆ ಪಾತ್ರವಾಗುವುದರಲ್ಲಿ ಸಂದೇಹವಿಲ್ಲ. ಇದನ್ನು ಹಳೆಯ ಸಂಪ್ರದಾಯದವರು ವಿರೋಧಿಸಬಹುದು. ಆದರೆ

ಈಗಿನ ಪರಿಸ್ಥಿತಿಯಲ್ಲಿ ಜನರಿಗೆ (ಪಟ್ಟಣಿಗರಿಗೆ) ಬೆಳಗಿನ ತನಕ ನೋಡಲು ಅವಕಾಶವಿಲ್ಲ. ಅದೇ ರೀತಿ ಕಲಾವಿದನು ಕೂಡಾ ರಾತ್ರಿ ಇಡೀ ತನ್ನ ಪಾತ್ರವನ್ನು ನಿರ್ವಹಿಸಲಾರ." (ಸಂ: ಪ್ರೊ. ಟಿ. ಕೃಷ್ಣರಾವ್, 1971–72, ಪುಟ–27) ಕಾಲಮಿತಿ ಯಕ್ಷಗಾನದ ಕುರಿತು ಗಂಭೀರ ಚರ್ಚೆಯಾಗುತ್ತಿರುವ ಈ ಸಂದರ್ಭದಲ್ಲಿ ನಾರಣಪ್ಪ ಉಪ್ಪೂರರು ಸುಮಾರು 45 ವರ್ಷಗಳ ಹಿಂದೆಯೇ ಇಂದಿನ ಸಮಸ್ಯೆಗಳಿಗೆ ಪರಿಣಾಮಕಾರಿಯಾಗಿ ಉತ್ತರಿಸಿರುವುದನ್ನು ಗಮನಿಸಬಹುದಾಗಿದೆ ಉಪ್ಪೂರರ ಅಭಿಪ್ರಾಯವನ್ನು ಬಹುತೇಕ ವ್ಯವಸಾಯಿ ಮೇಳಗಳು 2015–16ನೇ ವರ್ಷದಿಂದ ಅನುಷ್ಠಾನಕ್ಕೆ ತಂದಿವೆ.

ಶಿಕ್ಷಣ ವಿಷಯದ ಕುರಿತು ಕಾರಂತರೊಡನೆ ಅಂತಿಮ ತರಗತಿಯ ವಿದ್ಯಾರ್ಥಿ ಉಮೇಶ ಮಧ್ಯಸ್ಥ ಕೇಳುವ "ವಿದ್ಯಾರ್ಥಿಗಳ ಕಲಿಕೆಯಲ್ಲಿ ಶ್ರದ್ಧೆ ಕಡಿಮೆಯಾಗಲು ಕಾರಣವೇನು?" ಈ ಪ್ರಶ್ನೆಗೆ "ಶಾಲೆಗಳಲ್ಲಿ ಪಾಠ ಹೇಳುವುದಕ್ಕೆ ತೊಡಗುವಾಗ ಅಭಿರುಚಿ ಹುಟ್ಟಿಸದೇ ಇರುವಂಥ ಶಿಕ್ಷಣ ಕ್ರಮ ಇರುವುದು. ಅಭಿರುಚಿ ಬೆಳೆಸದೇ ಮನಸ್ಸು ಬೆಳೆಯಲಾರದು"(ಸಂ: ಪ್ರೊ. ಟಿ.ಕೃಷ್ಣರಾವ್, 1974–75, ಪು–67) ಎಂದು ಕಾರಂತರು ಉತ್ತರಿಸಿದ್ದಾರೆ. 1982–83ನೇ ಶೈಕ್ಷಣಿಕ ವರ್ಷದ ಅಂತಿಮ ಅಂತಿಮ ಬಿ.ಎ. ವಿದ್ಯಾರ್ಥಿನಿ ನಾಗರತ್ನ ಹೆಬ್ಬಾರ್ "ಕನ್ನಡದಲ್ಲಿ ಪಠ್ಯಪುಸ್ತಕವನ್ನು ಬರೆಯಲು ಏನಾದರೂ ಪ್ರೇರಣೆ ಇರಬೇಕಲ್ಲವೇ?" ಎಂಬ ಪ್ರಶ್ನೆಗೆ ಕೆ.ಎಲ್. ಕಾರಂತರು ನೀಡಿದ ಉತ್ತರ "ನಾನು ಕಲಿಸುವಾಗ ನನಗನ್ನಿಸಿತು, ಇಂಗ್ಲೀಷ್‌ನಲ್ಲಿ ಕಲಿಸುವುದಕ್ಕಿಂತ ಕನ್ನಡದಲ್ಲಿ ಕಲಿಸಿದರೆ ಚೆನ್ನಾಗಿ ಅರ್ಥ ಆಗುತ್ತೆ ಅಂತ. ಮೊತ್ತಮೊದಲಿಗೆ ಜಿಲ್ಲೆಯಲ್ಲೇ ಕನ್ನಡದಲ್ಲಿ ಪಾಠಮಾಡಿದವನು ನಾನು.... ಕೊನೆಯಲ್ಲಿ ಪಠ್ಯಪುಸ್ತಕ ಬರೆದೆ"(ಸಂ: ಪ್ರೊ.ಎ. ನಾರಾಯಣ ಆಚಾರ್ಯ, 1982–83, ಪು–54) ಎಂದು ಉತ್ತರಿಸಿದ್ದಾರೆ.

ಇದೇ ವಿಭಾಗದಲ್ಲಿ ಪ್ರಾಕ್ತನ ವಿದ್ಯಾರ್ಥಿಯೂ ಕಥೆಗಾರ್ತಿಯೂ ಆಗಿ ಗುರುತಿಸಿಕೊಂಡ ಮಿತ್ರಾ ವೆಂಕಟ್ರಾಜ್ ಅವರನ್ನು ಸಂದರ್ಶನದ ಸಂದರ್ಭದಲ್ಲಿ ವಿದ್ಯಾರ್ಥಿನಿ ಮೃಣಾಲಿನಿ ಕೇಳಿದ ಪ್ರಶ್ನೆ ಹೀಗಿದೆ: "ನಿಮ್ಮ ಸಾಹಿತ್ಯ ಬದುಕಿಗೆ ಪ್ರೇರಣೆ ಸ್ಫೂರ್ತಿ ಯಾರಿಂದ?" ಈ ಪ್ರಶ್ನೆಗೆ ಮಿತ್ರಾ ವೆಂಕಟ್ರಾಜ್ ಅವರು "ನಾನು ಹೈಸ್ಕೂಲಿನಲ್ಲಿರುವಾಗ ಕನ್ನಡ ಪಂಡಿತ ಶ್ರೀಯುತ ಸಂಜೀವ ಭಟ್ಟರು ಕನ್ನಡ ಪ್ರೀತಿಯನ್ನು ಹುಟ್ಟಿಸಿದವರು... ಮುಂದೆ ಕಾಲೇಜಿನಲ್ಲಿ ಕವಿ ಗುಂಡ್ಮಿ ಚಂದ್ರಶೇಖರ ಐತಾಳರು ಸಾಹಿತ್ಯದತ್ತ ಒಲವು ಹರಿಸಿದವರು"(ಸಂ: ನಾರಾಯಣ ಆಚಾರ್ಯ ಎ., ಪ್ರೊ. 1994–95, ಪು–106) ಎಂದು ಉತ್ತರಿಸಿದ್ದಾರೆ. "ಟಿ.ವಿ. ಮೊದಲಾದ ದೃಶ್ಯ ಮಾಧ್ಯಮಗಳು ನಮ್ಮ ಸಾಹಿತ್ಯಕೃಷಿ–ಓದು–ಬರಹ ಇತ್ಯಾದಿಗಳನ್ನು ಸೊರಗಿಸುತ್ತಿದೆಯೇ?" ಎಂಬ ಪ್ರಶ್ನೆಗೆ ಮಿತ್ರಾ ಅವರು "ತೀರಾ ನಿರಾಶೆಗೊಳ್ಳಬೇಕಾದ್ದಿಲ್ಲ ಎಂದು ನನ್ನ ಅನಿಸಿಕೆ. ರೇಡಿಯೋ ಬಂದಾಗಲೂ ಸಾಹಿತ್ಯದ ಕಥೆ ಮುಗಿಯಿತೆಂದೇ ಭಾವಿಸಿದ್ದರಂತೆ" ಎಂದು ತಮ್ಮ ನಿಲುವನ್ನು ನಿಸ್ಸಂಕೋಚವಾಗಿ ಮಂಡಿಸಿದ್ದಾರೆ.

ಕಾಲೇಜಿನ ಇನ್ನೋರ್ವ ಪ್ರಾಕ್ತನ ವಿದ್ಯಾರ್ಥಿ ಕಾದಂಬರಿಕಾರರಾಗಿ ಗುರುತಿಸಿಕೊಂಡ ವೈದ್ಯ ಎನ್. ಭಾಸ್ಕರ ಆಚಾರ್ಯ ಅವರಲ್ಲಿ ವಕ್ವಾಡಿ ಸತೀಶ ಕುಮಾರ್ ಶೆಟ್ಟಿ ಎಂಬ ವಿದ್ಯಾರ್ಥಿಯ "ನಿಮಗೆ ಸಾಹಿತ್ಯದಲ್ಲಿ ಒಲವು ಮೂಡಿದ್ದು ಯಾವಾಗ?–ಹೇಗೆ?" ಎಂಬ ಪ್ರಶ್ನೆಗೆ ಎನ್. ಭಾಸ್ಕರ ಆಚಾರ್ಯರು "ನಾನು 5–6ನೇ ತರಗತಿಯಲ್ಲಿರುವಾಗಲೇ ನನಗೆ ಸಾಹಿತ್ಯದಲ್ಲಿ ಒಲವು ಮೂಡಿತೆನ್ನಬಹುದು. ನನ್ನ ತಂದೆ ಸಾಹಿತ್ಯಪ್ರಿಯರು. ಕನ್ನಡ ಹಾಗೂ ಇಂಗ್ಲಿಷ್ ಪುಸ್ತಕಗಳ ಸಂಗ್ರಹವೇ ನಮ್ಮ ಮನೆಯಲ್ಲಿತ್ತು...

ಅವುಗಳನ್ನೆಲ್ಲ ಓದುವ ಅವಕಾಶ ಸಿಕ್ಕಿದ್ದರಿಂದ ನನಗೆ ಸಾಹಿತ್ಯದಲ್ಲಿ ಒಲವು ಮೂಡಿತೆನ್ನಬಹುದು"(ಸಂ: ನರಸಿಂಹಮೂರ್ತಿ ಎಚ್.ವಿ., ಡಾ. 1997–98, ಪು–169) ಎಂದು ಉತ್ತರಿಸಿದ್ದಾರೆ.

**ಸಂಚಿಕೆಯಲ್ಲಿ ದಾಖಲುಗೊಂಡ ವ್ಯಕ್ತಿ ಚಿತ್ರಣಗಳು:**

ಕಾಲೇಜು ಸಂಚಿಕೆಯಲ್ಲಿ ಪ್ರಕಟಗೊಂಡ ಇನ್ನೊಂದು ವಿಭಾಗ ವ್ಯಕ್ತಿ ಚಿತ್ರಣ ವಿಭಾಗ. 1988–89ನೇ ಸಂಚಿಕೆಯಲ್ಲಿ ಕಿರಣ್ ಶೇಟ್ ತೃತೀಯ ಬಿ.ಎಸ್ಸಿ. ವಿದ್ಯಾರ್ಥಿ ಆದರ್ಶ ಚಿತ್ರಕಲಾಧ್ಯಾಪಕ ಕೆ.ಎಂ. ಚಂದ್ರಶೇಖರ ಶೆಟ್ಟಿಯವರ ವ್ಯಕ್ತಿ ಚಿತ್ರಣವನ್ನು ನೀಡಿರುತ್ತಾರೆ. ಅದೇ ಸಂಚಿಕೆಯಲ್ಲಿ ಮಾನವತಾವಾದಿ ಹೋರಾಟಗಾರ ನೆಲ್ಸನ್ ಮಂಡೇಲಾ ಅವರು ಅನ್ಯಾಯದ ವಿರುದ್ಧ ಪ್ರತಿಭಟಿಸಿ, ಜೈಲುವಾಸ ಅನುಭವಿಸುತ್ತಿರುವ ಅವರ ಅಪೂರ್ವ ವ್ಯಕ್ತಿತ್ವ ಚಿತ್ರಣ, ತೃತೀಯ ಬಿ.ಎ. ವಿದ್ಯಾರ್ಥಿ ಕೆ. ವಿವೇಕ್ ಎಂಬ ವಿದ್ಯಾರ್ಥಿಯ ರಚನೆಯಾಗಿದೆ. ಸ್ವಾಮೀ ವಿವೇಕಾನಂದರು ಸಮಸ್ತ ಜಗತ್ತನ್ನೇ ತನ್ನೆಡೆಗೆ ಸೆಳೆದುಕೊಂಡ ವಿವರಗಳನ್ನು ವಿದ್ಯಾರ್ಥಿಯ ಮಾತಿನಲ್ಲಿಯೇ ಹೇಳುವುದಾದರೆ ಅವರು "ವಿಶ್ವವಿಜೇತ ವಿವೇಕಾನಂದರು ಮಾತ್ರವಲ್ಲದೇ ವಿಶ್ವಮಾನ್ಯರೂ ಹೌದು"(ಸಂ: ನಾರಾಯಣ ಆಚಾರ್ಯ ಎ. ಪ್ರೊ., 1985–86, ಪು–10–11) ಎಂದು ಅವರ ಸಾಧನೆಯ ಕುರಿತು ಸಂಕ್ಷಿಪ್ತ ವಿವರಣೆಯನ್ನು ಅವರ ವ್ಯಕ್ತಿಚಿತ್ರಣದಲ್ಲಿ ನಿರೂಪಿಸಲಾಗಿದೆ.

1993–94ರ ಸಂಚಿಕೆಯಲ್ಲಿ ಅಗಲಿದ ಜೀನಿಯಸ್ ಎ. ಕೆ. ರಾಮಾನುಜನ್ ಎಂಬ ಶೀರ್ಷಿಕೆಯಲ್ಲಿ ವಿದ್ಯಾರ್ಥಿ ಶ್ರೀನಿವಾಸ ಗಿಳಿಯಾರು ಇವರು–ಕಥೆಗಾರರೂ, ವಿಮರ್ಶಕರೂ, ಭಾಷಾಶಾಸ್ತ್ರಜ್ಞರೂ ಆಗಿದ್ದ ಪದ್ಮಶ್ರೀ ಪ್ರಶಸ್ತಿ ಪುರಸ್ಕೃತರಾದ ಎ. ಕೆ. ರಾಮಾನುಜನ್ ಅವರ ಸಾಹಿತ್ಯ–ದೃಷ್ಟಿಯನ್ನು ಕುರಿತಾಗಿ ಚರ್ಚಿಸಿದ್ದಾರೆ.

1997–98ನೇ ಸಾಲಿನ ಶೈಕ್ಷಣಿಕ ಸಂಚಿಕೆಯಲ್ಲಿ ದೇಶದ ಸ್ವಾತಂತ್ರ್ಯ ಹೋರಾಟಕ್ಕೆ ಕೊಡುಗೆ ನೀಡಿದ ಕುಂದಾಪುರ ತಾಲೂಕಿನ ಬಸ್ರೂರು ಗೋಪಾಲಕೃಷ್ಣ ಶೆಣೈ (1912–2000) ನಗರ ವೇಣುಗೋಪಾಲ ನಾಯಕ್ (1920–2004), ನೇರಂಬಳ್ಳಿ ಶೇಷಗಿರಿ ರಾವ್ (1917–2005), ತ್ರಾಸಿ ಪರಮೇಶ್ವರ ಹೆಬ್ಬಾರ್ (1915–2003) ಇವರುಗಳೆಲ್ಲರೂ ಸ್ವಾತಂತ್ರ್ಯ ಹೋರಾಟದ ಅನುಭವಗಳನ್ನು ಕಾಲೇಜು ಸಂಚಿಕೆ ದರ್ಶನದೊಂದಿಗೆ ಹಂಚಿಕೊಂಡಿದ್ದಾರೆ.

**ಪ್ರವಾಸಾನುಭವ:**

1985–86ರ ಸಂಚಿಕೆಯಲ್ಲಿ 'ಕಲ್ಕತ್ತಾ ಸುತ್ತಿ ಬಂದಾಗ', 'ನಾ ಕಂಡಂತೆ ವಿದೇಶ', ಎಂಬ ಎರಡು ಪ್ರವಾಸಾನುಭವಗಳನ್ನು ಈ ಅಧ್ಯಯನದಲ್ಲಿ ಸಂಕ್ಷಿಪ್ತವಾಗಿ ವಿಶ್ಲೇಷಿಸಲಾಗಿದೆ. 'ಕಲ್ಕತ್ತಾ ಸುತ್ತಿ ಬಂದಾಗ...' ಎಂಬ ದ್ವಿತೀಯ ಬಿ.ಕಾಂ. ತರಗತಿಯ ಮಂಜುನಾಥ್ ಚಾಂದ್ ತ್ರಾಸಿಯವರ ಪ್ರಬಂಧವಾಗಿದ್ದು, ಇಲ್ಲಿ ಕಲ್ಕತ್ತಾ ನಗರದ ಕುರಿತು ನೀಡುವ ಅನುಭವದ ವಿವರ ಹೀಗಿದೆ: "ಕಲ್ಕತ್ತಾ ಜನ ಮಾತನಾಡುವ ಭಾಷೆ ಬಂಗಾಳಿ. ಈ ಬಂಗಾಳಿಗಳು ಮಹಾಕೋಪಿಷ್ಠರಂತೆ ಕಾಣುತ್ತಾರೆ. ಇವರಲ್ಲಿ ಹಾಸ್ಪಿಟಾಲಿಟಿ ಕಡಿಮೆ. ಒಮ್ಮೊಮ್ಮೆ ಅವರ ಮಾತುಗಳು, ವರ್ತನೆ, ಹೆದರಿಕೆ ಹುಟ್ಟಿಸಿದರೆ, ಒಮ್ಮೊಮ್ಮೆ ಚೆನ್ನಾಗಿ ಮಾತನಾಡಿಸುತ್ತಾರೆ...."(ನಾರಾಯಣ ಅಚಾರ್ಯ ಎ. ಪ್ರೊ. 1985–86 ಪು10–11)

'ನಾ ಕಂಡ ವಿದೇಶ' ದ್ವಿತೀಯ ಬಿ.ಎ. ತರಗತಿಯ ಭಾಸ್ಕರ್ ಕಾಮತ್ ಎಂಬ ವಿದ್ಯಾರ್ಥಿಯ ಪ್ರಬಂಧವಾಗಿದ್ದು, ಇಲ್ಲಿ ತನ್ನ ವಿದೇಶದ ಪ್ರವಾಸಾನುಭವವನ್ನು ಆತ ಹೀಗೆ ನಿರೂಪಿಸುತ್ತಾನೆ. "ಕೆಲವರು ವಿದೇಶ ಅಂದ ಕೂಡಲೇ ಅಲ್ಲಿ ಹಣದ ಹೊಳೆಯೇ ಹರಿಯುತ್ತದೆ ಎಂಬ ಕುರುಡು ನಂಬಿಕೆಗೆ ಒಳಗಾಗಿದ್ದಾರೆ. ಆದರೆ ವಿದೇಶ ತಾಂತ್ರಿಕತೆಯಲ್ಲಿ ನಮಗಿಂತ ಮುಂದುವರಿದ ದೇಶವಾದರೂ ಅಲ್ಲಿಯ ಜನಜೀವನ ದುಸ್ತರವಾದದ್ದು. ನೆಮ್ಮದಿ ಇಲ್ಲದ್ದು ಎಂಬ ನಿಜ ಸಂಗತಿ ಅಲ್ಲಿಯೇ ನೆಲಸಿದ ಕೆಲವು ಭಾರತೀಯರಿಂದ ಕೇಳಿ ತಿಳಿದಾಗ ನಮ್ಮ ಆಶಾಗೋಪುರ ಕಳಚಿ ಬೀಳುವುದು ಖಂಡಿತ..."(ಸಂ: ನಾರಾಯಣ ಆಚಾರ್ಯ ಎ., 1985-86, ಪು-11) ತಾನು ಗಮನಿಸಿದ ವಿಷಯಗಳನ್ನು ಸಮರ್ಪಕ ಭಾಷೆಯಲ್ಲಿ ಸಂಚಿಕೆಯಲ್ಲಿ ದಾಖಲಿಸಿದ್ದಾನೆ ಎನ್ನುವುದೇ ಈ ಪ್ರಬಂಧದ ವೈಶಿಷ್ಟ್ಯವಾಗಿದೆ.

**ಸಂಚಿಕೆಯಲ್ಲಿ ದಾಖಲಾದ ಪ್ರಾದೇಶಿಕ ಸಂಸ್ಕೃತಿಯ ಸಮಗ್ರ ಅಧ್ಯಯನ:**

ಕುಂದಾಪುರ ತಾಲೂಕು ಪರಿಸರ ಪ್ರದೇಶ ವ್ಯಾಪ್ತಿಯ ವಿವಿಧ ಜನಜಾತಿಯ ಜನಾಂಗದ ಕುರಿತಾಗಿ ಬಹುಮುಖವಾಗಿ ಅಧ್ಯಯನ ಮಾಡಿದ ಏಕೈಕ ಕಾಲೇಜು ಭಂಡಾರ್ಕಾರ್ಸ್ ಕಾಲೇಜು ಎನ್ನಬಹುದಾಗಿದೆ. ಈ ಅಧ್ಯಯನ ಕಾರಣದಿಂದಾಗಿಯೇ ಕಾಲೇಜಿಗೆ ವಿಶ್ವವಿದ್ಯಾನಿಲಯ ಮಟ್ಟದ (ಮಂಗಳೂರು) ವಾರ್ಷಿಕ ಸಂಚಿಕೆ ಸ್ಪರ್ಧೆಯಲ್ಲಿ (1997-98) ಬಹುಮಾನಗಳಿಸಲು ಸಾಧ್ಯವಾಯಿತು. ಕಾಲೇಜಿನ ಸಂಚಿಕೆಯಲ್ಲಿ ಪ್ರಕಟಗೊಂಡ ಈ ಅಧ್ಯಯನ ವಿಭಾಗವು ಒಳಗೊಂಡ ಮುಖ್ಯ ಶೀರ್ಷಿಕೆಗಳನ್ನು ಈ ಕೆಳಗಿನಂತೆ ಹೆಸರಿಸಬಹುದಾಗಿದೆ.

ಅ) **ಜಾತಿ, ಜನಾಂಗ ಮನೆತನದ ಅಧ್ಯಯನ:** ಕುಡುಬಿ ಜನಾಂಗದ ಕುರಿತು: (ಸಂಚಿಕೆ 1974-75, 1988-89), ಹಸ್ಲ ಜನಾಂಗದ ಕುರಿತು (1982-83ರ ಸಂಚಿಕೆ), ಕೂಸಾಳು ಎಂಬ ಆದಿದ್ರಾವಡ ಜನಾಂಗದ ಕುರಿತು (1982-83ರ ಸಂಚಿಕೆ), ಹರೆಯ ಎಂಬ ಜನಾಂಗದ ಕುರಿತು (1983-84ರ ಸಂಚಿಕೆ), ಬಂಟ ಜನಾಂಗದ ಕುರಿತು (1975-76ರ ಸಂಚಿಕೆ), ಬ್ರಾಹ್ಮಣರ ಕುರಿತು (1996-97ರ ಸಂಚಿಕೆ), ಮುಸ್ಲಿಂ ಜನಾಂಗದ ಕುರಿತು (1998-99ರ ಸಂಚಿಕೆ), ಮೊಗವೀರರ ಜನಾಂಗದ ಕುರಿತು (1984-85ರ ಸಂಚಿಕೆ)-ಹೀಗೆ ವಿವಿಧ ಶೈಕ್ಷಣಿಕ ವರ್ಷದ ಸಂಚಿಕೆಗಳಲ್ಲಿ ಉಲ್ಲೇಖಗೊಂಡಿದೆ. ಸೌಕೂರು ಸೇರ್ವೆಗಾರರ ಮನೆತನ (1998-99ರ ಸಂಚಿಕೆ), ಕಟೀಲ್‌ಕಾರ್ ಮನೆತನದ ಕುರಿತು (1998-99ರ ಸಂಚಿಕೆ) ಹಲ್ಸ್‌ನಾಡು ಮನೆತನದ ಕುರಿತು (1994-95ರ ಸಂಚಿಕೆ) ವಿದ್ಯಾರ್ಥಿಗಳು ಕ್ಷೇತ್ರಕಾರ್ಯದ ಮೂಲಕ ವಿಷಯ ಸಂಗ್ರಹಿಸಿ ಸಂಕ್ಷಿಪ್ತವಾಗಿ ಪ್ರಕಟಿಸಿದ್ದಾರೆ.

ಆ) **ನಂಬಿಕೆ-ರೀತಿ-ರಿವಾಜು, ಸಂಪ್ರದಾಯ, ಜೀವನಾವರ್ತನ ಹಾಗೂ ವಾರ್ಷಿಕಾವರ್ತನ ಆಚರಣೆಗಳು:** 1988-89ರ ಸಂಚಿಕೆಯಲ್ಲಿ ಪರಿಶಿಷ್ಟ ಜನಾಂಗದ 'ಚುಣ್ಣ' ಆಚರಣೆಯ ಕುರಿತು, ಮರವಂತೆಯ 'ಆಭಾರಿ' ಆಚರಣೆಯ ಕುರಿತು, 1998-99ರ ಸಂಚಿಕೆಯಲ್ಲಿ ಮತ್ತು 1994-95ನೇ ಸಾಲಿನ ಸಂಚಿಕೆಯಲ್ಲಿ ವಿವಿಧ ನಂಬಿಕೆಗಳ ಕುರಿತಂತೆ ವಿಶೇಷವಾದ ಮಾಹಿತಿಗಳಿವೆ.

ಇ) **ದೇವರು ದೈವ ದೇವಸ್ಥಾನಗಳ ಕುರಿತು ನಡೆಸಿದ ಅಧ್ಯಯನಗಳು:** ಕುಂದಗನ್ನಡ ಪರಿಸರ ಪ್ರದೇಶ ವ್ಯಾಪ್ತಿಯ ದೇವಸ್ಥಾನ, ದೈವಸ್ಥಾನ, ಭೂತಸ್ಥಾನ, ಭಜನಾ ಮಂಡಳಿಗಳ ಕುರಿತು ಕ್ಷೇತ್ರಕಾರ್ಯದ ಮೂಲಕ ಸಂಗ್ರಹಿಸಿದ ಮಾಹಿತಿ ವಿವರಗಳನ್ನು ವಿದ್ಯಾರ್ಥಿಗಳು ಸಂಚಿಕೆಯಲ್ಲಿ ಪ್ರಕಟಗೊಳಿಸಿರುತ್ತಾರೆ. ಕುಂದಾಪುರದ ಪರಿಸರದ ಪ್ರಸಿದ್ಧ ಕ್ಷೇತ್ರಗಳೆಂದು ಗುರುತಿಸಲಾದ ದೇವಾಲಯಗಳ ಬಗೆಗೆ ಕಾಲೇಜಿನ ವಿಶೇಷ ಸಂಚಿಕೆ ಕುಂದದರ್ಶನ ಎಂಬ ಸಂಚಿಕೆಯಲ್ಲಿ (1977) 'ನಮ್ಮ ದೇವಾಲಯಗಳು'

ಎಂಬ ಶೀರ್ಷಿಕೆಯಲ್ಲಿ ಸಂಕ್ಷಿಪ್ತ ಮಾಹಿತಿ ಪ್ರಕಟಗೊಂಡಿವೆ. 1974–75ರ ಸಂಚಿಕೆಯಲ್ಲಿ 'ಬೈಂದೂರಿನ ಸೇನೇಶ್ವರ ದೇವಾಲಯ'ದ ಕುರಿತಂತೆಯೂ 1998–99ರ ಸಂಚಿಕೆಯಲ್ಲಿ 'ಕೆಂಚನೂರಿನ ದಶಭುಜ ಗಣಪತಿ ದೇವಸ್ಥಾನ'ದ ಕುರಿತಂತೆಯೂ, 1988–89 ರ ಸಂಚಿಕೆಯಲ್ಲಿ ಕುಂದಾಪುರದ 'ಬೊಬ್ಬರ್ಯ ಕಟ್ಟೆ'ಯ ಕುರಿತೂ, 1973–74ರ ಸಂಚಿಕೆಯಲ್ಲಿ ಮೆಕ್ಕೆಕಟ್ಟೆ 'ಉರು'ಗಳ ಕುರಿತಾಗಿಯೂ, 1984–85ರ ಸಂಚಿಕೆಯಲ್ಲಿ 'ಪ್ರಸಿದ್ಧ ನಾಗಕ್ಷೇತ್ರ ಕಾಳಾವರ' ಕುರಿತೂ ಮಾಹಿತಿಯು ಪ್ರಕಟಗೊಂಡಿದೆ.

ಪರಿಸರದ ಸಾಂಸ್ಕೃತಿಕ ವಿವರಗಳು ಕಾಲೇಜಿನ ವಾರ್ಷಿಕ ಸಂಚಿಕೆ ಹಾಗೂ ಇನ್ನಿತರ ವಿಶೇಷ ಸಂಚಿಕೆಗಳಲ್ಲಿ ಸಮಗ್ರವಾಗಿ ಅಭಿವ್ಯಕ್ತಗೊಂಡಿವೆ. ಆದರೆ ವರ್ತಮಾನದ ಜಾಗತೀಕರಣದ ಸಂದರ್ಭದಲ್ಲಿ ಸಾಂಸ್ಕೃತಿಕ ಪಲ್ಲಟಗಳು ಸಮಾಜದ ವಿವಿಧ ವರ್ಗದ ಜನಜಾತಿಯಲ್ಲಿ ಉಂಟುಮಾಡಿದ ತಲ್ಲಣಗಳೇನು? ಎಂಬ ಪ್ರಶ್ನೆಗೆ ಉತ್ತರವಿಲ್ಲದಿರುವುದರಿಂದ ಸಂಚಿಕೆಯ ಮಾಹಿತಿ ಪರಿಪೂರ್ಣ ಎಂಬಂತಿಲ್ಲ. ಅಂತೆಯೇ ಪರಿಸರದಲ್ಲಿ ಪ್ರತಿಷ್ಠಿತರೆಂದು ಗುರುತಿಸಿಕೊಂಡ ಖ್ಯಾತ ಮನೆತನಗಳು ವರ್ತಮಾನದಲ್ಲಿ ತಮ್ಮ ಪ್ರತಿಷ್ಠೆಯನ್ನು ಕಳೆದುಕೊಂಡ ಪರಿಯಿಂದಾಗಿ ಅವರು ಸಾಮಾಜಿಕ ಸ್ಥಾನಮಾನಕ್ಕಾಗಿ ಹೋರಾಡುವ ಬಗೆ ಯಾವ ರೀತಿಯದ್ದು, ಅವರ ಅಂತರಂಗದ ಇಂದಿನ ತೊಳಲಾಟವೇನು ಎಂಬ ಕುರಿತಂತೆಯೂ ಸಂಚಿಕೆಯಲ್ಲಿ ಯಾವುದೇ ಮಾಹಿತಿಗಳು ಕಂಡುಬರುವುದಿಲ್ಲ. ಈ ಕಾರಣಕ್ಕಾಗಿ ಸಂಚಿಕೆಯಲ್ಲಿ ಪ್ರಕಟಗೊಂಡ ಲಭ್ಯ ಮಾಹಿತಿಗಳು ಅಪೂರ್ಣವೆಂದೇ ಹೇಳಬೇಕಾದರೂ ವಿದ್ಯಾರ್ಥಿಗಳ ಪ್ರಯತ್ನ ಮೆಚ್ಚುವಂತಹದೇ ಆಗಿದೆ.

ಕಾಲೇಜಿನಲ್ಲಿ ನಡೆಯುವ ಸಂಗೀತೋತ್ಸವ, ಹರಿಕಥೆ (ಸ್ಥಾಪಕರ ದಿನಾಚರಣೆಯಂದು), ತಾಳಮದ್ದಳೆ (ರಾಜ್ಯೋತ್ಸವದಂದು), ಯಕ್ಷಗಾನ (ಕಾಲೇಜು ವಾರ್ಷಿಕೋತ್ಸವ ಹಾಗೂ ಪ್ರತಿಭಾ ದಿನಾಚರಣೆಯಂದು), ನಾಟಕ ಪ್ರದರ್ಶನ (ನಾಟಕೋತ್ಸವದಂದು), ಗಮಕ, ರಾಷ್ಟ್ರೀಯ ಸೇವಾ ಯೋಜನೆಯ ಕಾರ್ಯಕ್ರಮದ ಸಂದರ್ಭದಲ್ಲಿ ನಡೆಯುವ ವಿಶೇಷ ಚಟುವಟಿಕೆಗಳು, 40ರ ಉತ್ಸವ, ಸುವರ್ಣ ಮಹೋತ್ಸವ ಹಾಗೂ ಆ ಸಂದರ್ಭದ ಪ್ರಯುಕ್ತ ಕಾಲೇಜು ಹಮ್ಮಿಕೊಂಡ ವಿವಿಧ ಚಟುವಟಿಕೆಗಳು ಇವುಗಳೆಲ್ಲವೂ ಪ್ರದರ್ಶನ ಮಾದರಿಯ ಚಟುವಟಿಕೆಗಳಾಗಿ ತೋರಿಬರುತ್ತವೆ. ಈ ಕಾರಣಕ್ಕಾಗಿ 20ನೇ ಶತಮಾನದ ಕಾಲೇಜಿನ ಚಟುವಟಿಕೆಗಳನ್ನು **ಪ್ರದರ್ಶನಾತ್ಮಕ ಚಟುವಟಿಕೆ**ಗಳೆಂದೂ ಗುರುತಿಸಬಹುದಾಗಿದೆ. ಪ್ರದರ್ಶನದ ಉದ್ದೇಶ; ಸ್ಥಳೀಯ ಶಿಕ್ಷಣಾಸಕ್ತರಿಂದ ಮತ್ತು ಸಾಹಿತ್ಯಾಸಕ್ತರಿಂದ ಗುರುತಿಸಿಕೊಳ್ಳುವುದಿರಬಹುದು, ಶಿಕ್ಷಣ ಇಲಾಖೆ ಅಥವಾ ಕಾಲೇಜು ಆಡಳಿತದವರ್ಗ ಅಥವಾ ಯು.ಜಿ.ಸಿ.ಯಿಂದ ಮೆಚ್ಚುಗೆ ಪಡೆಯುವುದಕ್ಕಾಗಿ ಇರಬಹುದು. ಈ ಎರಡೂ ಉದ್ದೇಶಗಳಾಗಿರದೇ ಸ್ಪರ್ಧಾತ್ಮಕ ಜಗತ್ತಿನಲ್ಲಿ ತಮ್ಮ ಕಾಲೇಜಿನ ಕಡೆಗೆ ವಿದ್ಯಾರ್ಥಿಗಳ ರಕ್ಷಕರನ್ನು (ಹೆತ್ತವರನ್ನು) ಆಕರ್ಷಿಸುವ ಕಾರಣಕ್ಕಾಗಿರಬಹುದು. ಉದ್ದೇಶ ಏನೇ ಇದ್ದರೂ ವಿದ್ಯಾರ್ಥಿಗಳು ಈ ಚಟುವಟಿಕೆಗಳಿಂದ ಸಾಹಿತ್ಯಕವಾಗಿ, ಶೈಕ್ಷಣಿಕವಾಗಿ, ಔದ್ಯೋಗಿಕವಾಗಿ, ಸಾಮಾಜಿಕವಾಗಿ ಸೂಕ್ತ ಸ್ಥಾನಮಾನ ಮನ್ನಣೆ ಪಡೆದು ಸಮಾಜದಿಂದ ಗುರುತಿಸಿಕೊಂಡಿದ್ದಾರೆ. ಇದುವೇ ಈ ಚಟುವಟಿಕೆಗಳ ಒಟ್ಟಾರೆ ಪರಿಣಾಮಗಳು. ಪ್ರಸ್ತುತ ಅಧ್ಯಯನವು ಸಾಹಿತ್ಯ ವಿಷಯಕ್ಕೆ ಸಂಬಂಧಿಸಿದ ಪ್ರಯುಕ್ತ ಸಾಹಿತ್ಯ ಓದಿನ ಪರಿಣಾಮದಿಂದ ಸಾಧನೆ ಮಾಡಿದ ವಿದ್ಯಾರ್ಥಿಗಳ ಸಮಗ್ರ ಪಟ್ಟಿಯನ್ನು ಈ ಪ್ರಬಂಧದ ಕೊನೆಯ **ಅನುಬಂಧ ಸಂಖ್ಯೆ 9** ರಲ್ಲಿ ದಾಖಲಿಸಲಾಗಿದೆ.

# ಮಿಲಾಗ್ರಿಸ್ ಕಾಲೇಜು, ಕಲ್ಯಾಣಪುರ

ಉಡುಪಿ ಜಿಲ್ಲಾ ವ್ಯಾಪ್ತಿಯಲ್ಲಿ ಮಂಗಳೂರಿನ ಕೆಥೋಲಿಕ್ ಬೋರ್ಡ್ ಶಿಕ್ಷಣ ಮಂಡಳಿಯ ಆಡಳಿತಕ್ಕೊಳಪಟ್ಟ ಮೊದಲ ಪದವಿ ಕಾಲೇಜಾಗಿ ಮೈಸೂರು ವಿಶ್ವವಿದ್ಯಾನಿಲಯದ ಸಂಯೋಜನೆಗೊಳಗೊಂಡು ಈ ಕಾಲೇಜು 1967ರಲ್ಲಿ ಅಸ್ತಿತ್ವಕ್ಕೆ ಬಂದಿತು. ಎಂ.ಜಿ.ಎಂ. ಕಾಲೇಜಿನ ಇತಿಹಾಸ ಉಪನ್ಯಾಸಕರಾಗಿ ಕರ್ತವ್ಯ ನಿರ್ವಹಿಸುತ್ತಿದ್ದ ಪ್ರೊ. ಗುರುರಾಜ ಭಟ್ಟರು ಮಿಲಾಗ್ರಿಸ್ ಕಾಲೇಜಿನ ಆಡಳಿತ ಮಂಡಳಿಯ ಕೋರಿಕೆಯಂತೆ ಹೊಸದಾಗಿ ಆರಂಭಗೊಂಡ ಮಿಲಾಗ್ರಿಸ್ ಕಾಲೇಜಿನ ಪ್ರಾಂಶುಪಾಲರಾಗಿ ಜವಾಬ್ದಾರಿಯನ್ನು ಪ್ರೊ. ಗುರುರಾಜ ಭಟ್ಟರು ವಹಿಸಿಕೊಂಡರು.

20ನೇ ಶತಮಾನದ 34 ವರ್ಷಗಳಲ್ಲಿ ಈ ಕಾಲೇಜು ನಡೆಸಿದ ಸಾಹಿತ್ಯ ಚಟುವಟಿಕೆಗಳನ್ನು ಈ ಕೆಳಗಿನ ಶೀರ್ಷಿಕೆಗಳಲ್ಲಿ ಗುರುತಿಸಿ, ಚರ್ಚಿಸಲಾಗಿದೆ. ಅವುಗಳು ಹೀಗಿವೆ:

**) ಕಾಲೇಜು ಸಂಚಿಕೆಗಳಲ್ಲಿ (ಬೆಳ್ಳಿಹಬ್ಬದ ಸಂಚಿಕೆಯೂ ಸೇರಿದಂತೆ) ಲಭ್ಯವಾಗುವ ಸಾಹಿತ್ಯ ಚಟುವಟಿಕೆಗಳ ವಿವರಗಳು:**

1967–68ರಲ್ಲಿ ಪ್ರಾಂಶುಪಾಲರ ಜವಾಬ್ದಾರಿಯನ್ನು ಸ್ವೀಕರಿಸಿದ ಪ್ರೊ. ಪಿ. ಗುರುರಾಜ ಭಟ್ ಅವರು ತಮ್ಮ ಪಾಲಿನ ಜವಾಬ್ದಾರಿಯನ್ನು ಅತ್ಯಂತ ನಿಷ್ಠೆಯಿಂದಲೇ ನಿರ್ವಹಿಸಿಕೊಂಡು ಬಂದರು. ಸಾಹಿತ್ಯ–ಸಾಂಸ್ಕೃತಿಕ ಚಟುವಟಿಕೆಗಳಿಗೆ ಕಾಲೇಜಿನಲ್ಲಿ ಪಠ್ಯಚಟುವಟಿಕೆಗಳಷ್ಟೇ ಪ್ರಾಮುಖ್ಯವನ್ನು ನೀಡುವ ಪರಿಪಾಠಕ್ಕೆ ನಾಂದಿ ಹಾಕಿದರು. ಕಾಲೇಜಿನಲ್ಲಿ ವಿವಿಧ ವೇದಿಕೆಗಳ ಮತಿಯಿಂದ ನಡೆಸಲಾದ ವಿವಿಧ ಸಾಹಿತ್ಯಕಚಟುವಟಿಕೆಗಳ ವಿವರಗಳನ್ನು ಸಂಕ್ಷಿಪ್ತವಾಗಿ ಅನುಬಂಧದಲ್ಲಿ ಉಲ್ಲೇಖಿಸಲಾಗಿದೆ. ಈ ಚಟುವಟಿಕೆಗಳಿಂದ ಅವರಿಗಿರುವ ಸಾಹಿತ್ಯದ ಅಭಿರುಚಿ ಮತ್ತು ಕಾಳಜಿಯನ್ನು ಸೂಚಿಸುತ್ತದೆ. 1972–73ರಲ್ಲಿ ಕಾಲೇಜಿಗೆ ಭೇಟಿ ನೀಡಿದ ಡಾ. ಶಿವರಾಮ ಕಾರಂತರು ಸಾಹಿತ್ಯಸಂಘದ ವೇದಿಕೆಯಲ್ಲಿ ‘ಕಲೆಯ ಮೂಲಕ ಸಾಧಿಸಬೇಕಾದ ಅಂತಿಮ ಗುರಿ ಏನು? ಕಲೆಯ ಆಸ್ವಾದದ ಮೂಲಕ ಮನಸ್ಸು ತಲ್ಲಣಗಳಿಂದ ಮುಕ್ತವಾಗುವುದಕ್ಕೆ ಸಾಧ್ಯವೇ?’ ಎಂಬ ಪ್ರಶ್ನೆಗೆ ಉತ್ತರಿಸಿದರು. 1973–74ನೇ ಶೈಕ್ಷಣಿಕ ವರ್ಷದಲ್ಲೂ ಪ್ರಾಂಶುಪಾಲರು ಈ ಚರ್ಚಾಗೋಷ್ಠಿಯ ಪರಂಪರೆಯನ್ನು ಮುಂದುವರಿಸಿದ್ದರು. ಕಾಲೇಜಿನ ಪ್ರತಿಭಾದಿನಾಚರಣೆಗೆ ಅಧ್ಯಕ್ಷತೆ ವಹಿಸಲು ಮೈಸೂರಿನ ಪ್ರಾದೇಶಿಕ ಶಿಕ್ಷಣಕಾಲೇಜಿನ ಉಪನ್ಯಾಸಕರಾದ ನಾಗೇಶ್ ಸಂತ್ರಿಯವರು ಆಗಮಿಸಿದ್ದರು ಎಂಬ ವರದಿಯು 1973–74ನೇ ಶೈಕ್ಷಣಿಕ ವರ್ಷದ ವಾರ್ಷಿಕ ಸಂಚಿಕೆಯಲ್ಲಿ ಉಲ್ಲೇಖಗೊಂಡಿದೆ. ಆ ಶೈಕ್ಷಣಿಕ ವರ್ಷದ ಸಾಹಿತ್ಯಸಂಘವನ್ನು ಉದ್ಘಾಟಿಸುವುದಕ್ಕಾಗಿ ಖ್ಯಾತ ವಿದ್ವಾಂಸ ಬನ್ನಂಜೆ ಗೋವಿಂದಾಚಾರ್ಯರನ್ನು ಆಹ್ವಾನಿಸಲಾಗಿದ್ದು, ಶ್ರೀಯುತರು ಕನ್ನಡದ ಪ್ರಗತಿಶೀಲ ಕವಿ. ತ.ರಾ.ಸು. ಅವರ ಸಾಹಿತ್ಯ ಕೊಡುಗೆಗಳನ್ನು ವಿದ್ಯಾರ್ಥಿಗಳಿಗೆ ಅಂದು ಪರಿಚಯಿಸಿದ್ದರು.

ಕಾಲೇಜಿನ ಭಿತ್ತಿ ಫಲಕವನ್ನು ವಿದ್ಯಾರ್ಥಿಗಳು ಸದುಪಯೋಗಪಡಿಸಿಕೊಳ್ಳುತ್ತಿದ್ದ ಕುರಿತಂತೆ 1987–88ರ ವಾರ್ಷಿಕ ಸಂಚಿಕೆಯಲ್ಲಿ ವಿವರಗಳು ಹೀಗೆ ದಾಖಲುಗೊಂಡಿವೆ. ಮಂಗಳೂರು ಆಕಾಶವಾಣಿಯವರು ಏರ್ಪಡಿಸಿದ ರಸಪ್ರಶ್ನೆ ಕಾರ್ಯಕ್ರಮದಲ್ಲಿ ಕಾಲೇಜಿನ ವಿದ್ಯಾರ್ಥಿಗಳು ಭಾಗವಹಿಸಿದ್ದರು. 1988–89ನೇ ಶೈಕ್ಷಣಿಕ ಸಾಲಿನಲ್ಲಿ ಸಾಹಿತ್ಯ ಸಂಘವು ಜ್ಞಾನದ ಬರವಣಿಗೆ ಮತ್ತು ಭಾಷಣಗಳಿಗೆ ಹೆಚ್ಚಿನ ಆದ್ಯತೆ ನೀಡಿರುವುದನ್ನು ಗಮನಿಸಬಹುದಾಗಿದೆ. ದಿನಾಂಕ

28.09.1988ರಂದು ಶ್ರೀ ಎ. ಕೃಷ್ಣರಾವ್ ಎಕ್ಸ್ ಚೇರ್‌ಮೆನ್, ಸಿಂಡಿಕೇಟ್ ಬ್ಯಾಂಕ್ ಇವರಿಂದ 'ಸ್ವಾಮೀ ವಿವೇಕಾನಂದರು ಮತ್ತು ಶಿಕ್ಷಣ' ಎಂಬ ವಿಷಯದ ಕುರಿತಂತೆ ನಡೆದ ಉಪನ್ಯಾಸವು ಈ ಸಾಲಿನಲ್ಲಿ ಉಲ್ಲೇಖಿಸಬಹುದಾದ ಕಾರ್ಯಕ್ರಮವಾಗಿದೆ.

ಕಾಲೇಜಿನ ವಿದ್ಯಾರ್ಥಿಗಳ ಸಾಹಿತ್ಯ ಚಟುವಟಿಕೆಗಳಿಗೆ ಕಾಲೇಜಿನ ಭಿತ್ತಿ ಫಲಕ **'ಜ್ಞಾನಸುಧಾ'**ವು ಅವಕಾಶ ನೀಡುತ್ತಾ ಬಂದಿದ್ದು, 1991–92ನೇ ಶೈಕ್ಷಣಿಕ ಸಾಲಿನಲ್ಲಿ ಕನ್ನಡ ವಿಭಾಗದ ಮುಖ್ಯಸ್ಥರಾದ ಪ್ರೊ. ಮಹಾಲಕ್ಷ್ಮಿಯವರು ಇದರ ಸಂಚಾಲಕರಾಗಿ ಕಾರ್ಯನಿರ್ವಹಿಸಿದ್ದಾರೆ. ಅದೇ ಶೈಕ್ಷಣಿಕ ಸಾಲಿನಲ್ಲಿ ಕಾಲೇಜಿನಲ್ಲಿ ಮಹಿಳಾ ವೇದಿಕೆಯು ಸಾಹಿತ್ಯೇತರ ವಿಷಯಗಳಿಗೆ ಗಮನ ಕೊಟ್ಟಿರುವುದು ಬೆಳ್ಳಿಹಬ್ಬದ ಸಂಚಿಕೆಯಲ್ಲಿ ದಾಖಲಾಗಿದೆ. ಬೆಳ್ಳಿಹಬ್ಬಕ್ಕೆ ಸಂಬಂಧಿಸಿದಂತೆ ಸಾಹಿತ್ಯಸಂಘದ ವತಿಯಿಂದ ಕಮ್ಮಟವೊಂದನ್ನು ಹಮ್ಮಿಕೊಂಡಿದ್ದು, ಶ್ರೀ ಮುರಳೀಧರ ಉಪಾಧ್ಯಾಯ, ಮಹಾಬಲೇಶ್ವರ ರಾವ್ ಮತ್ತು ಡುಂಡಿರಾಜ್ ಅವರುಗಳು ಬರವಣಿಗೆಯ ಸ್ವರೂಪದ ಕುರಿತು ವಿದ್ಯಾರ್ಥಿಗಳಿಗೆ ಮಾಹಿತಿ ನೀಡಿದ್ದರು.

ರಜತೋತ್ಸವದ ಪ್ರಯುಕ್ತ ವಿದ್ಯಾರ್ಥಿಗಳನ್ನೇ ಗಮನದಲ್ಲಿರಿಸಿಕೊಂಡು ಏರ್ಪಡಿಸಲಾಗಿದ್ದ ವಿಚಾರಸಂಕಿರಣವು ದಾಖಲಿಸಬೇಕಾದ ಸಾಹಿತ್ಯ ಚಟುವಟಿಕೆಯಾಗಿದ್ದು, ವಿದ್ಯಾರ್ಥಿಗಳು ಇದರ ಪೂರ್ಣಪ್ರಯೋಜನ ಪಡೆದಿರುತ್ತಾರೆ. ಈ ಕಾರ್ಯಕ್ರಮದ ಸಂಪೂರ್ಣ ನಿರ್ವಹಣೆಯ ಜವಾಬ್ದಾರಿಯು ವಿದ್ಯಾರ್ಥಿಗಳದ್ದೇ ಆಗಿರುವುದು ಈ ವಿಚಾರಸಂಕಿರಣದ ಇನ್ನೊಂದು ವೈಶಿಷ್ಟ್ಯವಾಗಿದೆ.

**ವಿಚಾರ ಸಂಕಿರಣದ ಸಂಕ್ಷಿಪ್ತ ಅವಲೋಕನ:–**

ವಿಚಾರಸಂಕಿರಣವನ್ನು ಸಾಹಿತ್ಯಾಭಿಮಾನಿಗಳೂ ಹಿರಿಯರೂ ಆದ ಡಾ. ಎಚ್. ಶಾಂತಾರಾಮ್ ಅವರು ಉದ್ಘಾಟಿಸಿ ವಿದ್ಯಾರ್ಥಿಗಳನ್ನುದ್ದೇಶಿಸಿ ಮಾತಾಡುತ್ತ 'ಸಮಾಜಕ್ಕಾಗಿ ತಾವೇನು ಮಾಡಬಹುದು ಎಂಬುದನ್ನು ವಿದ್ಯಾರ್ಥಿಗಳು ಈ ಹಂತದಲ್ಲಿ ಯೋಚಿಸಬೇಕಾಗಿದೆ' ಎಂದು ವಿದ್ಯಾರ್ಥಿಗಳ ಚಿಂತನೆಗೆ ಅವಕಾಶ ಮಾಡಿಕೊಟ್ಟರು. ರಜತಮಹೋತ್ಸವದ ಮೊದಲ ಗೋಷ್ಠಿಯ ಸಂಪನ್ಮೂಲ ವ್ಯಕ್ತಿಯಾಗಿ ಉಪಸ್ಥಿತರಿದ್ದ ಪ್ರೊ. ಮುರಳೀಧರ ಉಪಾಧ್ಯರು 'ವಿದ್ಯಾರ್ಥಿಗಳ ಸಾಂಸ್ಕೃತಿಕ ರುಚಿಶುದ್ಧಿ'ಯೆಂಬ ಮೊದಲನೇ ಗೋಷ್ಠಿಯ ಆಶಯಭಾಷಣ ಮಾಡಿದರು. 'ಸಾಹಿತ್ಯ ಮತ್ತು ಪತ್ರಿಕೆ' ಎಂಬ ವಿಷಯವಾಗಿ ಉದ್ಯಾವರ ಮಾಧವ ಆಚಾರ್ಯರು ಉಪನ್ಯಾಸ ನೀಡಿದ್ದು, ವಿದ್ಯಾರ್ಥಿಗಳು ತಮ್ಮ ಮನಸ್ಸಿನ ಮೇಲೆ ಪರಿಣಾಮ ಬೀರುವ ವಿಚಾರಗಳನ್ನು ಓದುವುದು ಕಡಿಮೆ ಎನ್ನುವುದನ್ನು ತಮ್ಮ ಸಮೀಕ್ಷೆ ಮೂಲಕ ಶ್ರುತಪಡಿಸಿದರು. 'ವಿದ್ಯಾರ್ಥಿಗಳ ಸಾಂಸ್ಕೃತಿಕ ರುಚಿಶುದ್ಧಿಯಲ್ಲಿ ಕಲೆಯ ಪ್ರಾಮುಖ್ಯ ಏನು?' ಎಂಬ ವಿಷಯದ ಕುರಿತು ಈಶ್ವರಯ್ಯ ಅವರು ಮಾಹಿತಿ ನೀಡಿದರು. ವಿದ್ಯಾರ್ಥಿಗಳ ಸಾಂಸ್ಕೃತಿಕ ರುಚಿಶುದ್ಧಿಯಲ್ಲಿ ಯಕ್ಷಗಾನ ಮತ್ತು ನಾಟಕ ಮಾಡಬಹುದಾದ ಪರಿಣಾಮಗಳ ಕುರಿತಂತೆ ಶ್ರೀ ಎಂ. ಅನಂತಕೃಷ್ಣ ಹೆಬ್ಬಾರರು ಮತ್ತು ಕೆ. ಜಿ. ನಾರಾಯಣ ಅವರು ಉಪನ್ಯಾಸ ನೀಡಿದರು. ಗೋಷ್ಠಿಯ ಅಧ್ಯಕ್ಷರಾದ ಶ್ರೀ ಸುಬ್ರಾಯ ಚೊಕ್ಕಾಡಿಯವರು ಜಗತ್ತು ತನ್ನ ಸೂಕ್ಷ್ಮ ಸಂವೇದನಾಶೀಲತೆಯನ್ನು ದಿನದಿಂದ ದಿನಕ್ಕೆ ಕಳೆದುಕೊಳ್ಳುತ್ತಿರುವ ಬಗ್ಗೆ ತಿಳಿಸಿ, ಇದರಲ್ಲಿ ಆಧುನಿಕ ಸಿನೆಮಾ ಮತ್ತು ಟಿ.ವಿ.ಗಳ ಬಹುಮುಖ್ಯ ಪಾತ್ರವಿದೆ ಎಂದು ತಮ್ಮ ಅಭಿಪ್ರಾಯ ಮಂಡಿಸಿದರು.

'ಸ್ವತಂತ್ರ ಭಾರತದ ಸೌಹಾರ್ದತೆಯ ಪ್ರಯತ್ನ'ಗಳು ಎಂಬ ಎರಡನೆಯ ವಿಷಯದ ಗೋಷ್ಠಿಯಲ್ಲಿ ಶ್ರೀ ಬಿ. ಭಾಸ್ಕರ ರಾವ್ ಪ್ರಾಸ್ತಾವಿಕವಾಗಿ ತಮ್ಮ ಮಾತಿನಲ್ಲಿ, ಬಹುರೂಪಿ ಸಮಾಜದಲ್ಲಿ ರಾಜಕೀಯ ಲಾಭಕ್ಕಾಗಿ ಧಾರ್ಮಿಕ ದ್ವೇಷವನ್ನು ಬಿತ್ತುವ ಶಕ್ತಿಗಳ ಕುರಿತು ವಿದ್ಯಾರ್ಥಿಗಳು ಜಾಗೃತರಾಗಿರಬೇಕೆಂದು ವಿವರಿಸಿದರು. ಪಾಠಪಠ್ಯದಲ್ಲಿ ಚರಿತ್ರೆಯಲ್ಲಿ ಗತಿಸಿಹೋದ ಅರಸರುಗಳ ದಂಡಯಾತ್ರೆಗಳ ವಿವರಗಳ ಲಭ್ಯವಿರುತ್ತವೆಯೇ ಹೊರತು, ಅವರು ಜನಸಾಮಾನ್ಯರ ಬದುಕಿಗೆ ನೀಡಿದ ಕೊಡುಗೆ ಏನು? ಎಂಬ ಕುರಿತಂತೆ ಮಾಹಿತಿ ಸಿಗುವುದಿಲ್ಲ ಎಂದು ತಮ್ಮ ಅಭಿಪ್ರಾಯ ನಿರೂಪಿಸಿದರು. ಶ್ರೀ ಜಿ. ರಾಜಶೇಖರ್ ಅವರು 'ಕೋಮು ಸೌಹಾರ್ದ ಹದಗೆಡುವಲ್ಲಿ ಯಾರು ಕಾರಣರು–ಹೇಗೆ?' ಎಂಬ ಪ್ರಶ್ನೆಗೆ ಉತ್ತರಿಸಿದರು.

ಎರಡನೇ ದಿನದ ಗೋಷ್ಠಿಯ ಅಧ್ಯಕ್ಷರಾದ ಶ್ರೀ ಬಿ.ಎ. ವಿವೇಕ ರೈಯವರು "ಕೋಮುಭಾವನೆ–ಜಾತಿಭಾವನೆಯ ಕಡೆಗೆ ಮನಸ್ಸು ತಿರುಗಿಸದೆ ಪರಸ್ಪರ ಐಕ್ಯವನ್ನು ಬೆಸೆಯುವ ಪೋಷಕ ಅಂಶಗಳ ಕಡೆಗೆ ವಿದ್ಯಾರ್ಥಿಗಳು ಗಮನ ನೀಡಬೇಕು. ಇವುಗಳಲ್ಲಿ ಕ್ರೀಡೆ ಬಹಳ ಮುಖ್ಯ ಕೊಡುಗೆ ನೀಡಬಲ್ಲದು" ಎಂದು ತಮ್ಮ ಅಭಿಪ್ರಾಯವನ್ನು ವಿವರಿಸಿದರು.

**ಆ) ಧಾರ್ಮಿಕ ಮತ್ತು ನೈತಿಕ ಶಿಕ್ಷಣ ತರಬೇತಿ ಶಿಬಿರಗಳು:**

ಕಾಲೇಜಿನಲ್ಲಿ ಸಾಹಿತ್ಯಚಟುವಟಿಕೆಗಳು ವರ್ಷಂಪ್ರತಿಯೂ ನಡೆಯುತ್ತಾ ಬಂದಿದ್ದು, ಕಾಲೇಜು ಸಂಚಿಕೆಗಳಲ್ಲಿ ಆ ಕಾರ್ಯಕ್ರಮಗಳ ಉಲ್ಲೇಖಗಳು ಮಾತ್ರ ಸಿಗುತ್ತವೆ. ಆದರೆ ಸಂಪನ್ಮೂಲವ್ಯಕ್ತಿಗಳಾಗಿ ಆಗಮಿಸಿದ ಅತಿಥಿಗಳು ಪ್ರಸ್ತಾಪಿಸಿದ ವಿಚಾರಗಳನ್ನಾಗಲೀ, ಪ್ರತಿಪಾದಿಸಿದ ಸಾಹಿತ್ಯದ ನಿಲುವುಗಳನ್ನಾಗಲಿ ಸಂಚಿಕೆಗಳಲ್ಲಿ ದಾಖಲಿಸಿದ ಉದಾಹರಣೆಗಳು ಸಿಗುವುದಿಲ್ಲ.

**2) 20ನೇ ಶತಮಾನದ 34 ವರ್ಷದ ಸಾಹಿತ್ಯಚಟುವಟಿಕೆಗಳ ಕುರಿತಂತೆ ಉಲ್ಲೇಖಿಸಬಹುದಾದ ಒಟ್ಟಾರೆ ವೈಶಿಷ್ಟ್ಯಗಳು:**

20ನೇ ಶತಮಾನದ 34 ವರ್ಷದ ಕಾಲಾವಧಿಯಲ್ಲಿ ಕಾಲೇಜಿನ ಆಡಳಿತದ ಜವಾಬ್ದಾರಿಯನ್ನು ನಿರ್ವಹಿಸಿದ ಪ್ರಾಂಶುಪಾಲರ ಕಾಲಾವಧಿಯು ಈ ಕೆಳಗಂಡಂತಿದೆ.

| **ಕ್ರ.ಸಂ.** | **ಪ್ರಾಂಶುಪಾಲರ ಹೆಸರು** | **ಅವಧಿ** |
|---|---|---|
| 1. | ಡಾ. ಪಿ. ಗುರುರಾಜ ಭಟ್ | 12.06.1967 ರಿಂದ 15.11.1976 |
| 2. | ರೆ । ಫಾ। ಡಾ. ಪೀಟರ್ ಡಿ'ಸೋಜ | 16.01.1976 ರಿಮ್ದ 01.04.1982 |
| 3. | ರೆ । ಫಾ। ಲಾರೆನ್ಸ್ ಮೆಂಡೋನ್ಸಾ | 02.04.1982 ರಿಂದ 30.07.1990 |
| 4 | ರೆ । ಫಾ। ಜೆ.ಬಿ. ಡಿ'ಸೋಜ | 01.08.1990 ರಿಂದ 30.09.1997 |
| 5. | ರೆ । ಫಾ। ವೆಲೆರಿಯನ್ ಮೆಂಡೋನ್ಸಾ | 01.10.1997 ರಿಂದ 30.06.2003 |

20ನೇ ಶತಮಾನದ ಕಾಲಾವಧಿಯ 30 ವರ್ಷಗಳಲ್ಲಿ ಕಾಲೇಜು ಶೈಕ್ಷಣಿಕವಾಗಿ ಪ್ರಗತಿಯನ್ನು ಸಾಧಿಸಿರುವುದನ್ನು ಒಪ್ಪಿಕೊಳ್ಳಬಹುದಾದರೂ ಕನ್ನಡ ಸಾಹಿತ್ಯಚಟುವಟಿಕೆಗಳಿಗೆ ಸಂಬಂಧಿಸಿದಂತೆ ಕಾಲೇಜು ಏರುಗತಿಯ ಪ್ರಗತಿಯನ್ನು ಕಂಡಿಲ್ಲ.

ಕಾಲೇಜಿನಲ್ಲಿ ನಡೆದುಬಂದ ಒಟ್ಟಾರೆ ಸಾಹಿತ್ಯಚಟುವಟಿಗಳ ವೈಶಿಷ್ಟ್ಯಗಳನ್ನು ಈ ಕೆಳಗಿನಂತೆ ಒಂದೊಂದಾಗಿ ಉಲ್ಲೇಖಿಸಬಹುದಾಗಿದೆ.

ಅ) ಕಾಲೇಜಿನಲ್ಲಿ ಸಾಹಿತ್ಯ ಮತ್ತು ಸಾಹಿತ್ಯೇತರ ವಿಷಯಗಳಿಗೂ ಸಮಾನ ಪ್ರಾಶಸ್ತ್ಯವನ್ನು ನೀಡಲಾಗಿದೆ.

ಆ) 1979–80ನೇ ಶೈಕ್ಷಣಿಕ ವರ್ಷದಲ್ಲಿಯೇ 'ಯಕ್ಷಗಾನ ಸಂಘ' ಅಸ್ತಿತ್ವಕ್ಕೆ ಬಂದ ದಾಖಲೆ ಇದೆ. ಆದರೆ 1983–84ನೇ ವರ್ಷದಲ್ಲಿ ಯಕ್ಷಗಾನದ ಕುರಿತಂತೆ ಒಂದು ವಿಚಾರ ಸಂಕಿರಣವನ್ನು ಹೊರತುಪಡಿಸಿ, ಯಾವುದೇ ಯಕ್ಷಗಾನ ಚಟುವಟಿಕೆಯ ಕುರಿತಂತೆ ಕಾಲೇಜು ಸಂಚಿಕೆಯಲ್ಲಿ ದಾಖಲೆಗಳಿರುವುದಿಲ್ಲ.

ಇ) ಕಾಲೇಜಿನ ಬೆಳ್ಳಿ ಹಬ್ಬದ ಪ್ರಯುಕ್ತ ಕಾಲೇಜು ಪ್ರತ್ಯೇಕವಾಗಿ ಯಾವುದೇ ಸಂಚಿಕೆಯನ್ನು ಪ್ರಕಟಿಸದೇ ಆ ಶೈಕ್ಷಣಿಕ ವರ್ಷದ ಸಂಚಿಕೆಯಲ್ಲಿಯೇ (1991–92) ಬೆಳ್ಳಿಹಬ್ಬದ ವಿವರಗಳನ್ನು ಪ್ರಕಟಿಸಿರುತ್ತದೆ.

ಈ) ಕಾಲೇಜಿನ ಬೆಳ್ಳಿಹಬ್ಬದ ಪ್ರಯುಕ್ತವಾಗಿ ಹಮ್ಮಿಕೊಂಡ ಯೋಜನೆಗಳಲ್ಲಿ ಕನ್ನಡ ಸಾಹಿತ್ಯಕ್ಕೆ ಸಂಬಂಧಿಸಿದಂತೆ ಯಾವುದೇ ನೂತನ ಯೋಜನೆಗಳಿಲ್ಲ.

ಉ) ಕನ್ನಡ ಭಾಷೆ ಮತ್ತು ಸಂಸ್ಕೃತಿಯ ಕುರಿತಾದ ವಿಸ್ತೃತ ಅಧ್ಯಯನಕ್ಕೆ/ಉಪನ್ಯಾಸಕ್ಕೆ ಯಾವುದೇ ದತ್ತಿನಿಧಿಗಳಿಲ್ಲ.

ಊ) ಸ್ಥಳೀಯ ಭಾಷೆ–ಸಂಸ್ಕೃತಿ–ಜನಪದಕ್ಕೆ ಸಂಬಂಧಿಸಿದಂತೆ ಕಾಲೇಜಿನ ಸಂಚಿಕೆಯಲ್ಲಿ ಯಾವುದೇ ಸಂಶೋಧನಾತ್ಮಕ ಲೇಖನಗಳು ಪ್ರೊ. ಗುರುರಾಜ ಭಟ್ಟರ ಕಾಲಾನಂತರದಲ್ಲಿ ಪ್ರಕಟವಾದ ಕುರುಹುಗಳಿಲ್ಲ.

ಋ) ಧಾರ್ಮಿಕ ಹಾಗೂ ನೈತಿಕ ಶಿಕ್ಷಣ ಶಿಬಿರವನ್ನು 1990ರ ದಶಕದಿಂದ ನಡೆಸಿಕೊಂಡು ಬರುತ್ತಿದ್ದರೂ, ಇದು ಕ್ರೈಸ್ತೇತರ ವಿದ್ಯಾರ್ಥಿಗಳಿಗೆ ಮಾತ್ರವೇ ಇರುವ ಅವಕಾಶವೆನ್ನುವುದು ಪ್ರಾಂಶುಪಾಲರ ಅಸಮರ್ಪಕ ತೀರ್ಮಾನವಾಗಿದೆ.

**3) ಸ್ಥಾಪಕ ಪ್ರಾಂಶುಪಾಲರಾದ ಪ್ರೊ. ಪಿ. ಗುರುರಾಜ ಭಟ್ಟರು ಉಪನ್ಯಾಸಕರ ಹಾಗೂ ವಿದ್ಯಾರ್ಥಿಗಳ ವ್ಯಕ್ತಿತ್ವವನ್ನು ಪ್ರೇರೇಪಿಸಿದ ಬಗೆಗಳು:**

ಡಾ. ಭಟ್ಟರು ಇತಿಹಾಸಕ್ಕೆ ನೀಡಿದ ಕೊಡುಗೆ ಮತ್ತು ಆ ಮೂಲಕ ಅವಿಭಜಿತ ದ.ಕ. ಜಿಲ್ಲೆಯ ಇತಿಹಾಸದ ಬೇರುಗಳನ್ನು ತೋರಿಸಿದ ಬಗೆಯನ್ನು ದಿನಾಂಕ 31.08.1973ರ ಉದಯವಾಣಿ ಪತ್ರಿಕೆಯು ಸವಿಸ್ತಾರವಾಗಿ ಪ್ರಕಟಗೊಳಿಸಿದೆ. ಹಾಗೆಯೇ ಸೆಪ್ಟೆಂಬರ್ 1973ರ ನವಯುಗ ಸಂಚಿಕೆಯಲ್ಲಿಯೂ ಡಾ. ಗುರುರಾಜ ಭಟ್ಟರ ಸಂಶೋಧನೆಯ ಫಲಿತಗಳ ಕುರಿತಂತೆ ವಿಸ್ತೃತ ಲೇಖನಗಳು ಪ್ರಕಟಗೊಂಡಿವೆ. "ನನ್ನ ಜೀವನದಲ್ಲಿ ಗುರುರಾಜ ಭಟ್ಟರ ಪ್ರಭಾವ ತುಂಬಾ ಇವೆ. ನಾನು ಅವರನ್ನು ನನ್ನ ಜೀವನದ ಆದರ್ಶವ್ಯಕ್ತಿಯಾಗಿ ಸ್ವೀಕರಿಸಿದ್ದೆ. ನಾನು ಸುಮಾರು 29 ವರ್ಷಗಳ ಉಪನ್ಯಾಸಕ ಸೇವೆಯನ್ನು ಮಾಡಿ ನಿವೃತ್ತನಾಗಿದ್ದೇನೆ... ನಾನು ನನ್ನ ವೃತ್ತಿಯಲ್ಲಿ ಯಶಸ್ಸನ್ನು ಕಂಡಿದ್ದರೆ ಅದಕ್ಕೆ ಕಾರಣ ದಿವಂಗತರಾದ ಡಾ. ಪಿ. ಗುರುರಾಜ ಭಟ್ಟರು." (ಸಂ: ಮುರಳೀಧರ ಉಪಾಧ್ಯ ಹಿರಿಯಡ್ಕ ಪ್ರೊ., ಪಿ. ಪರಶುರಾಮ ಭಟ್ಟ, 2012, ಪು–214) ಗುರುರಾಜ ಭಟ್ಟರ ವ್ಯಕ್ತಿತ್ವದಿಂದ ಪ್ರಭಾವಿತರಾಗಿ ತಮ್ಮ ನಿವೃತ್ತಿಯವರೆಗೂ ಅವರ ಆದರ್ಶಗಳನ್ನೇ ಅನುಸರಿಸಿಕೊಂಡು ಬಂದ ಇತರ ಉಪನ್ಯಾಸಕರುಗಳೇ ಪ್ರೊ. ಟಿ.ಎಸ್. ರಾಜಗೋಪಾಲ್ (ಹಿಂದೀ ಭಾಷಾ ಉಪನ್ಯಾಸಕರು) ಡಾ. ಜೆರಾಲ್ಡ್ ಪಿಂಟೋ (ಭೌತಶಾಸ್ತ್ರ ಉಪನ್ಯಾಸಕರಾಗಿ ಕನ್ನಡ ಸಣ್ಣಕಥೆಯ ಪ್ರಕಾರದಲ್ಲಿ ಆಸಕ್ತಿಯನ್ನು ರೂಢಿಸಿಕೊಂಡವರು) ಕೆ. ಸುಬ್ರಹ್ಮಣ್ಯ ಕೆದ್ಲಾಯ (ಕನ್ನಡ

ಉಪನ್ಯಾಸಕರಾಗಿ ಕಾಲೇಜಿನ ರಂಗಚಟುವಟಿಕೆಗಳಿಗೆ ಸಂಬಂಧಿಸಿದ ಉಪನ್ಯಾಸವನ್ನು ವ್ಯವಸ್ಥೆಗೊಳಿಸುವಲ್ಲಿ ಮುತುವರ್ಜಿ ವಹಿಸಿದವರು) ಜಿ.ಎಸ್. ರಾಮಚಂದ್ರ (ಇತಿಹಾಸ ಉಪನ್ಯಾಸಕರಾಗಿ ಸಂಶೋಧನ ಚಟುವಟಿಕೆಗಳಲ್ಲಿ ತೊಡಗಿಕೊಂಡು ಸ್ವ-ಆಸಕ್ತಿಯಿಂದ 'ಶೃಂಗೇರಿ ಪರಿಸರದ ದಾಖಲುಗೊಳ್ಳದ ಸಣ್ಣಪುಟ್ಟ ಧಾರ್ಮಿಕ ಕೇಂದ್ರಗಳು' ಎಂಬ ವಿಷಯದ ಕುರಿತು ಅಧ್ಯಯನ ನಡೆಸಿದವರು) ನೇರಿ ಕರ್ನೇಲಿಯೋ (ಪ್ರೊ. ಗುರುರಾಜ ಭಟ್ಟರ ವಿದ್ಯಾರ್ಥಿಯಾಗಿ ಮುಂದೆ ಮಿಲಾಗ್ರಿಸ್ ಕಾಲೇಜಿನಲ್ಲಿಯೇ ಉಪನ್ಯಾಸಕರಾಗಿ ವೃತ್ತಿ ಜೀವನವನ್ನು ಆರಂಭಿಸಿ ಅನೇಕ ಕಿರು ಸಂಶೋಧನ ಪ್ರಬಂಧಗಳನ್ನು ಯು.ಜಿ.ಸಿ. ನೆರವಿನಿಂದ ಯಶಸ್ವಿಯಾಗಿ ಪೂರೈಸಿರುತ್ತಾರೆ). ಎಂ.ಜಾನಕಿ (ಗುರುರಾಜ ಭಟ್ಟರ ನೇರ ಶಿಷ್ಯೆಯಾಗಿ ಕಾಲೇಜಿನ ಎರಡನೇ ತಂಡದ ವಿದ್ಯಾರ್ಥಿನಿಯಾಗಿ ಕನ್ನಡದಲ್ಲಿ ಸ್ನಾತಕೋತ್ತರ ಪದವಿಯನ್ನು ಪೂರೈಸಿ, ಬ್ರಹ್ಮಾವರ ಎಸ್.ಎಂ.ಎಸ್. ಪದವಿಪೂರ್ವ ಕಾಲೇಜಿನಲ್ಲಿ ಉಪನ್ಯಾಸಕಿಯಾಗಿ ನಿವೃತ್ತರಾದರು), ಡಾ. ಮಾಲತಿ ಮೂರ್ತಿ (ಗುರುರಾಜ ಭಟ್ಟರ ಇತಿಹಾಸದ ವಿದ್ಯಾರ್ಥಿನಿಯಾಗಿ ಇತಿಹಾಸದಲ್ಲಿಯೇ ಉನ್ನತ ಶಿಕ್ಷಣವನ್ನು ಕೈಗೊಂಡು ಸಂಶೋಧನ ಪ್ರಬಂಧವನ್ನು ಮಂಡಿಸಿ, ಡಾಕ್ಟರೇಟ್ ಪದವಿಯನ್ನು ಪಡೆದು, ಕುಂದಾಪುರದ ಭಂಡಾರ್‌ಕಾರ್ಸ್ ಕಾಲೇಜು ಮತ್ತು ಎಂ.ಜಿ.ಎಂ. ಕಾಲೇಜಿನಲ್ಲಿ ಉಪನ್ಯಾಸಕಿಯಾಗಿ ಕರ್ತವ್ಯ ನಿರ್ವಹಿಸಿ, ಇತ್ತೀಚೆಗಷ್ಟೇ ಸೇವೆಯಿಂದ ನಿವೃತ್ತರಾದವರು). ಕೆ. ಶ್ರೀಧರ ಭಟ್ (ಮಿಲಾಗ್ರಿಸ್ ಕಾಲೇಜಿನಲ್ಲಿ ಪದವಿ ಶಿಕ್ಷಣವನ್ನು ಪೂರೈಸಿ, ಕಡಿಯಾಳಿ ಮತ್ತು ಪೆರ್ಡೂರಿನಲ್ಲಿ ಪ್ರೌಢಶಾಲಾಧ್ಯಾಪಕರಾಗಿ ಆಳುಪರ ಕಾಲದ ನಾಣ್ಯಗಳ ಕುರಿತು ಸ್ವಂತ ಆಸಕ್ತಿಯಿಂದ ಅಧ್ಯಯನ ನಡೆಸಿ, ತಮ್ಮ ವಿದ್ಯಾರ್ಥಿಗಳಿಗೂ ಇತಿಹಾಸದಲ್ಲಿ ಆಸಕ್ತಿ ಉಂಟಾಗುವಂತೆ ಪ್ರೇರೇಪಿಸಿದವರು) ತಮ್ಮ ಸಂಶೋಧನಾಸಕ್ತಿಗೆ ಪ್ರೊ. ಗುರುರಾಜ ಭಟ್ಟರೇ ಪ್ರೇರಣೆಯೆಂದು ಮೌಖಿಕ ಸಂದರ್ಶನದ ಸಂದರ್ಭದಲ್ಲಿ ಹೇಳಿಕೊಂಡಿದ್ದಾರೆ.

## ಶ್ರೀ ಶಾರದಾ ಕಾಲೇಜು, ಬಸ್ರೂರು

**ಕಾಲೇಜಿನ ಹಿನ್ನೆಲೆ:**

ಸಮಾಜದ ವಿವಿಧಕ್ಷೇತ್ರಗಳಲ್ಲಿ ಗುರುತಿಸಿಕೊಂಡ ಅನುಭವಿ ಗಣ್ಯರು 'ಶ್ರೀ ಶಾರದಾ ಕಾಲೇಜು ಟ್ರಸ್ಟ್' ಎಂಬ ನೋಂದಾಯಿತ ಸಂಸ್ಥೆಯನ್ನು ಹುಟ್ಟುಹಾಕಿಕೊಂಡು, 1972ರಲ್ಲಿ ಈ ಸಂಸ್ಥೆಯನ್ನು ಅಸ್ತಿತ್ವಕ್ಕೆ ತಂದರು. ಯಾವನೇ ಒಬ್ಬ ವ್ಯಕ್ತಿಗೆ ಸೇರಿದ ಸಂಘಟನೆಗೆ ಈ ಕಾಲೇಜು ಸಂಬಂಧಿಸಿದ್ದಲ್ಲ ಎಂಬುದೇ ಈ ಕಾಲೇಜಿನ ವಿಶೇಷತೆ. ಕುಂದಾಪುರ ತಾಲೂಕು ಕೇಂದ್ರದಲ್ಲಿ ಮಣಿಪಾಲ ಅಕಾಡೆಮಿಯ ಆಡಳಿತದಲ್ಲಿ ಆಗಲೇ ಕಾರ್ಯಾಚರಿಸುತ್ತಿರುವ ಒಂದು ಕಾಲೇಜು, ಸಮಗ್ರ ತಾಲೂಕಿನ ಪದವಿ ಶಿಕ್ಷಣಾಪೇಕ್ಷಿಗಳ ಬೇಡಿಕೆಯನ್ನು ಈಡೇರಿಸುವುದಕ್ಕೆ ಸಾಧ್ಯವಾಗದೇ ಹೋದಾಗ ಈ ಕಾಲೇಜು ಬಸ್ರೂರಿನಲ್ಲಿ ಅಸ್ತಿತ್ವಕ್ಕೆ ಬಂದಿತು. ಕಾಲೇಜಿನ ಸ್ಥಾಪಕ ಪ್ರಾಂಶುಪಾಲರೂ ಸೇರಿದಂತೆ ಅವರೊಂದಿಗೆ ಕೈಜೋಡಿಸಿದ ಪ್ರಾಧ್ಯಾಪಕರೆಲ್ಲರೂ ಕಾಲೇಜಿನ ಉನ್ನತಿಗಾಗಿ ಶ್ರಮಿಸಿದರು. ಈ ಅಧ್ಯಯನ ವಿಷಯವು ಸಾಹಿತ್ಯ ಚಟುವಟಿಕೆಗೆ ಸಂಬಂಧಿಸಿದ ಕಾರಣ, ಈ ಚಟುವಟಿಕೆಯ ಹಿಂದೆ ಶ್ರಮಿಸಿದ, ಕನ್ನಡ ಭಾಷೆ-ಸಾಹಿತ್ಯ-ಉಪನ್ಯಾಸಕರುಗಳ ಪರಿಶ್ರಮವನ್ನಷ್ಟೇ ಇಲ್ಲಿ ಉಲ್ಲೇಖಿಸಲಾಗಿದೆ. ಬೋಧನೆಯಲ್ಲಿ ನಿಷ್ಠೆ, ಶಿಷ್ಯಸಮೂಹದಲ್ಲಿ ವಾತ್ಸಲ್ಯವನ್ನು ಹೊಂದಿದ, ಕನ್ನಡ ಉಪನ್ಯಾಸಕ ಶ್ರೀ ಬಿ. ವಾಸುದೇವ ವರ್ಣರು, ಸಮರ್ಪಣಮನೋಭಾವದ ಜಾನಪದಕ್ಷೇತ್ರದಲ್ಲಿ ಅಧ್ಯಯನಾಸಕ್ತಿಯನ್ನು ರೂಢಿಸಿಕೊಂಡಿದ್ದ ಕನರಾಡಿ ವಾದಿರಾಜ ಭಟ್ಟರು,

ಯಕ್ಷಗಾನಕಲಾಪ್ರಕಾರದಲ್ಲಿ ವಿದ್ಯಾರ್ಥಿವೃಂದದ ಆಸಕ್ತಿಯನ್ನು ಪ್ರಚೋದಿಸಿದ ಪ್ರೊ। ಶ್ರೀಧರ ಉಪ್ಪೂರ ಇವರುಗಳ ಶ್ರಮ ಮತ್ತು ಕರ್ತವ್ಯನಿಷ್ಠೆಯು ವಿದ್ಯಾರ್ಥಿಗಳಲ್ಲಿ ಸಾಹಿತ್ಯಾಸಕ್ತಿಯನ್ನು ಪ್ರಚೋದಿಸಿತು.

ಕಾಲೇಜು ಆರಂಭಗೊಂಡ ವರ್ಷದಿಂದಲೇ ಕನ್ನಡ ಐಚ್ಛಿಕ ಪಠ್ಯವನ್ನು ಓದುವ ಅವಕಾಶವು ಇಲ್ಲಿಯ ವಿದ್ಯಾರ್ಥಿಗಳಿಗೆ ಲಭಿಸಿರುವುದು ಈ ಕಾಲೇಜಿನ ವಿಶೇಷತೆಯಾಗಿದೆ. ಶ್ರೀ ಶಾರದಾ ಕಾಲೇಜು ಬಸ್ರೂರು ಇಲ್ಲಿಯ ಸಾಹಿತ್ಯಚಟುವಟಿಕೆಗಳನ್ನು ಈ ಕೆಳಗಿನ ಶೀರ್ಷಿಕೆಗಳಲ್ಲಿ ಚರ್ಚಿಸಲಾಗಿದೆ.

**1) ಕಾಲೇಜಿನಲ್ಲಿ ವಿವಿಧ ವೇದಿಕೆಗಳ ಮೂಲಕ ನಡೆದ ಸಾಹಿತ್ಯ ಚಟುವಟಿಕೆಗಳು:**

**ಅ) ಬರಹ ಚಟುವಟಿಕೆಯ ವೇದಿಕೆಯಾಗಿ ರೂಪು ಪಡೆದ ಕಾಲೇಜು ವಾರ್ಷಿಕ ಸಂಚಿಕೆಗಳು:**

20ನೇ ಶತಮಾನದ 28 ವರ್ಷದ ಕಾಲಾವಧಿಯಲ್ಲಿ ಈ ಕಾಲೇಜು ಏರ್ಪಡಿಸಿದ ಸಾಹಿತ್ಯಚಟುವಟಿಕೆಗಳ ಮೂಲಕ ವಿದ್ಯಾರ್ಥಿಗಳಲ್ಲಿ ಸಾಹಿತ್ಯಾಸಕ್ತಿಯನ್ನು ಪ್ರಚೋದಿಸುವ ಏಕೈಕ ಗುರಿಯು ಇಲ್ಲಿಯ ಭಾಷಾ ಉಪನ್ಯಾಸಕರದ್ದಾಗಿದೆ. ಶಾರದಾ ಜಯಂತಿ, ನೈತಿಕ ಮತ್ತು ಆಧ್ಯಾತ್ಮಿಕ ಶಿಕ್ಷಣ ಶಿಬಿರ, ಮಹಿಳಾವೇದಿಕೆಯಿಂದ ಮಹಿಳಾಜಾಗೃತಿಗಾಗಿ ಉಪನ್ಯಾಸ ಕಾರ್ಯಕ್ರಮಗಳು ಹಾಗೂ ಸಂಪನ್ಮೂಲ ವ್ಯಕ್ತಿಗಳಿಂದ ವೈಚಾರಿಕಜಾಗೃತಿಗಾಗಿ ನಡೆಸಿದ ವಿಶೇಷೋಪನ್ಯಾಸ ಕಾರ್ಯಕ್ರಮಗಳು– ಇವನ್ನು ವರ್ಷಂಪ್ರತಿಯಂತೆ ಪರಂಪರೆಯ ಕಾರ್ಯಕ್ರಮವೆಂಬ ರೀತಿಯಲ್ಲಿ ಕಾಲೇಜು ನಿರಂತರವಾಗಿ ನಡೆಸಿಕೊಂಡು ಬಂದಿದೆ. ಜಿಲ್ಲೆಯ ಪ್ರಸಿದ್ಧ ಶಕ್ತಿ ದೇವಸ್ಥಾನವಾದ ಅಂಬಲಪಾಡಿ ಜನಾರ್ದನ ಹಾಗೂ ಮಹಾಕಾಳಿ ದೇಗುಲವು ನೀಡಿದ ನಿರಖಿ ಠೇವಣಿಯ ಹಣವನ್ನು 1999ರ ಲಾಗಾಯ್ತಿನಿಂದ ನೈತಿಕ–ಆಧ್ಯಾತ್ಮಿಕ ಶಿಕ್ಷಣ ಶಿಬಿರಕ್ಕಾಗಿ ಕಾಲೇಜು ಬಳಸಿಕೊಳ್ಳುತ್ತಿರುವ ಕುರಿತು, ಕಾಲೇಜು ಸಂಚಿಕೆಯಲ್ಲಿ ಉಲ್ಲೇಖವಿದೆ.

**ಅ) ಬರಹ ಚಟುವಟಿಕೆಯ ವೇದಿಕೆಯಾಗಿ ರೂಪು ಪಡೆದ ಕಾಲೇಜು ವಾರ್ಷಿಕ ಸಂಚಿಕೆಗಳು:** ಕಾಲೇಜು ಸ್ಥಾಪನೆಯ ವರ್ಷದಿಂದಲೇ ವಿದ್ಯಾರ್ಥಿಗಳ ಬರಹ ಚಟುವಟಿಕೆಗಳಿಗೆ ಆಸ್ಪದ ನೀಡುವುದಕ್ಕಾಗಿ ಸಂಚಿಕೆಯನ್ನು ಪ್ರಕಟಿಸುತ್ತಾ ಬಂದಿದೆ. ಕೆಲವು ವರ್ಷ ಸಂಚಿಕೆಯನ್ನು ಪ್ರಕಟಿಸಲು ಆರ್ಥಿಕ ಸಂಪನ್ಮೂಲವನ್ನು ಕ್ರೋಡೀಕರಿಸಲು ಅಸಾಧ್ಯವಾದಾಗ ಎರಡು ವರ್ಷಗಳ ಸಂಚಿಕೆಗಳನ್ನು ಒಟ್ಟಾಗಿ ಪ್ರಕಟಿಸಿದ ಉದಾಹರಣೆಗಳು ಇವೆ. 20ನೇ ಶತಮಾನದಲ್ಲಿ ಕಾಲೇಜು ಪ್ರಕಟಿಸಿದ ಪ್ರತಿಯೊಂದು ಸಂಚಿಕೆಯ ಶೀರ್ಷಿಕೆಯನ್ನು ಇಲ್ಲಿ ವಿವರಿಸುವುದು ಅಧ್ಯಯನ ವಿಷಯಕ್ಕೆ ಅವಶ್ಯವಿಲ್ಲದ ಕಾರಣ, ಮಾದರಿಗಾಗಿ ಕೆಲವು ಸಂಚಿಕೆಗಳ ಕೆಲವು ಶೀರ್ಷಿಕೆಗಳನ್ನಷ್ಟೇ ಇಲ್ಲಿ ವಿಶ್ಲೇಷಣೆಗೊಳಪಡಿಸಲಾಗಿದೆ. ಕಾಲೇಜಿನಿಂದ ಪ್ರಕಟವಾದ ಪ್ರತಿಯೊಂದು ಸಂಚಿಕೆಯಲ್ಲೂ ಕುಂದಗನ್ನಡ ಭಾಷೆಯ ಕಥೆ ಹಾಗೂ ಹಾಡುಗಳಿದ್ದು, ಈ ಎಲ್ಲ ಬರಹಗಳನ್ನು ವಿದ್ಯಾರ್ಥಿಗಳು ಕ್ಷೇತ್ರಕಾರ್ಯ ಮತ್ತು ಮೌಖಿಕ ಸಂದರ್ಶನದ ಮೂಲಕವೇ ಸಂಗ್ರಹಿಸಿದರೆಂಬುದು ಸಂಚಿಕೆಯಲ್ಲಿರುವ ಆಧಾರಗಳಿಂದ ತಿಳಿದುಬರುತ್ತದೆ.

ಶೈಕ್ಷಣಿಕ ವರ್ಷ 1987–88ನೇ ಸಂಚಿಕೆಯಲ್ಲಿ 'ಗಾದೆಗೊಂದು ಕಥೆ' ಎಂಬ ಶೀರ್ಷಿಕೆಯಲ್ಲಿ ಲತಾ ಎಂಬ ದ್ವಿತೀಯ ಬಿ.ಎ. ವಿದ್ಯಾರ್ಥಿನಿ, ಕುಂದಗನ್ನಡದ ಗಾದೆ ಹಾಗೂ ಆ ಗಾದೆಯ ಹಿಂದಿನ ಸ್ವಾರಸ್ಯಕರವಾದ ಕಥೆಯನ್ನು ನಿರೂಪಿಸಿರುವುದನ್ನು ಗಮನಿಸಬಹುದು. ಮಾದರಿಗಾಗಿ ಆ ಸಂಚಿಕೆಯಿಂದ ಆಯ್ದ ಒಂದು ಗಾದೆ ಹಾಗೂ ಆ ಗಾದೆಯ ಹಿಂದಿನ ಕಥೆಯನ್ನು ಸಂಕ್ಷಿಪ್ತವಾಗಿ ಸಂಚಿಕೆಯಲ್ಲಿದ್ದಂತೆಯೇ ಈಗೆ ದಾಖಲಿಸಲಾಗಿದೆ. ಗಾದೆ– "ಕಲ್ತ್ದ್ದ್ ಹೆಚ್ಚಾಯ್ತ್ ಕಾಲ್ ಮೇಲಾಯ್ತ್, ಗಾಳಿ ಬರ್ಕ್, ಮನಿಗ್

ಹೋಯ್ಕ್' ಈ ಗಾದೆಯ ಹಿಂದಿನ ಕಥೆ ಸಂಚಿಕೆಯಲ್ಲಿದ್ದಂತೆ-'ಒಂದೂರಂಗ್ ಒಬ್ಬ ಚೋಂಟ ಇದ್ದ, ಅವ್ನ ಒಂದ್ ಸೊನರ್ (ಸೊಂಟ ಕಾಲು) ಮುರ್ದಿತ್ತ್. ಅದ್ಕ್ ಮರ್ದ್ ಕಾಲನ್ ಕೂಡ್ಸಿತ್ತ್, ದಿನಾ ರೂಢಿಯಂಗೆ ಅವ ಒಂದ್ ದಿನು ಹೊತ್ತೋ ಹೋಪತ್ (ಸಂಜೆ) ಗಾಳಿ ನುಂಗುಕ್ (ವಾಯು ವಿಹಾರ) ಹೋತಿದ್ದ. ಆಗಳಿಕ್ (ಆವಾಗ) ಆ ದಾರಿಯಂಗ್ ಒಂದ್ ಮಾಯಿನ್‌ಮರ ಸಿಕ್ಕ್‌ತ್ತ್. ಅದರಂಗ್ ಗಳಿಗಳಿ ಮಾಯಿನ್ ಹಣ್ಣ್ ಇದ್ದಿತ್. ಅದನ್ ಕಂಡ್ ಮೋಂಟ್‌ನಿಗ್ ಬಾಯಂಗ್ ನೀರ್ ಬಿತ್ತ್, ಮತ್ತ್ ತಿನ್ಕಂಬ್ ಆಸಿ ಹೆಚ್ಚಾಯ್ತ್. ಅವ್ನಿಗ್ ಮರಹತ್ತುಕೆ ಎಂತೂ ಆತಿಲ್ಲೆ. ಕೊಡೀ ತುದಿಗ್ ಕಲ್ಲಾರೂ ಬಿಸಾಡ್ವ ಅಂದ್ರೆ ಆ ರಾಷ್ಟ್ರದಂಗೆ ಒಂದೇ ಒಂದು ಕಲ್ಲೂ ಇಲ್ಲೆ. ಆಗಳಿಕೆ ಅವ್ನ್ ಒಂದ್ ಆಲೋಚ್ನೆ ಮಾಡಿ, ತನ್ನ ಮರ್ದ್ ಕಾಲನ್ನೇ ತೆಗ್ದ್ ಅಡ್ಡ ಬಡ್ತಿಗಿ ಇಡ್ತ. ಆರ್ ಅವ್ನ್ ಪುಣ್ಯಕ್ಕೆ ಅದ್ ಮರ್ದಂಗೆ ಸಿಕ್ಕಿ ಬಿತ್ತ್. ಚೋಂಟಂಗೆ ಒಂದ್ ಬದಿಯಂಗೆ ಮಾಯ್ನ್ ಹಣ್ಣೂ ಇಲ್ಲೆ, ಒಂದ್ ಬದಿಯಂಗೆ ಮನಿಗ್ ಹೋಪ ಅಂದ್ರೆ ಮರದ್ ಕಾಲ್ ಮರ್ದ್ ಮೇಲ್ ಇತ್ತ್. ಇನ್ ಗಾಳಿ ಬಂದ್ ಮರ ಅಲ್ಲಾಡಿ, ಕಾಲ್ ಕೆಳಗ್ ಬೀಳ್ತ್ ಎಂದ್ ಕಂಡ್ ಜೋರಾಯ್ ಬಪ್ಪ ಗಾಳಿಗ್ ಕಾಯ್ತಾ ಕೂಕಂಡ. ಆಗಳಿಕ್ ಕತ್ಲಿ ಆತಾ ಬಂತ್. ಆ ದಾರಿಯಂಗ್ ಹೋಪರ್ ಮನಿಗ್ಹೋತಿಲ್ಯಾ ಎಂದ್ ಕೇಂಡ್ರೆ ಅದ್ಕ್ ಅವ ಹೀಂಗಂದ: "ಕಲ್ತ್‌ದ್ ಪೆಚ್ಚಾಯ್ತ್, ಕಾಲ್ ಮೇಲಾಯ್ತ್, ಗಾಳಿ ಬರ್‍ಕ್, ಮನಿಗ್ ಹೋಯ್ಕ್, ಅಲ್ಲಿಂದ ಈ ಮಾತ್ ಅಂಬ್‌ದ್ ಗಾದಿಯಾಯಿ ಎಲ್ಲರ ಬಾಯಂಗ್ ಬಂತ್"(ಸಂ: ಶಿವರಾಮ ಶೆಟ್ಟಿ ಎಸ್.ಪ್ರೊ., 1987-88, ಪು-22)- ಹೀಗೆ ಗಾದೆ ಹುಟ್ಟಿದ ಹಿನ್ನೆಲೆಯನ್ನು ಲತಾ ಶೆಟ್ಟಿ ಎಂಬ ವಿದ್ಯಾರ್ಥಿನಿ ನಿರೂಪಿಸಿದ್ದಾಳೆ. ಲತಾ ಶೆಟ್ಟಿಯವರು ತಾವು ಕಾಲೇಜಿನಲ್ಲಿ ಸಂಚಿಕೆಗಾಗಿ ಸಂಗ್ರಹಿಸಿದ ಈ ಗಾದೆ ಕಥೆಗಳನ್ನು ಕುಂದಾಪುರದ 'ಕುಂದ ಅಧ್ಯಯನ ಕೇಂದ್ರ'ದ ಮೂಲಕ 2002ರಲ್ಲಿ ಪ್ರಕಟಿಸಿದ್ದಾರೆ.

1993-94ನೇ ಶೈಕ್ಷಣಿಕ ವರ್ಷದ ಸಂಚಿಕೆಯಲ್ಲಿ ಪ್ರಥಮ ಬಿ.ಎ. ಪ್ರಮೋದ ಎಂಬ ವಿದ್ಯಾರ್ಥಿನಿ ಸಾಕು ನಾಯಿಯ ಕುರಿತು ಜನಪದರ ಬಾಯಿಯಲ್ಲಿ ಉಕ್ತವಾದ ತ್ರಿಪದಿಯನ್ನು ಹೀಗೆ ದಾಖಲಿಸಿದ್ದಾರೆ.

'ನಾಯಿಯ ಕೊರಳಿಗೆ ನಲ್ವತ್ತು ವರನ ಗೆಜ್ಜೆ

ಯಾರಯ್ಯ ನಾಯಿಗೆ ಹೊಡಿಬ್ಯಾಡಿ । ನನ್‌ಮಗು

ಹುಲಿಬ್ಯಾಟಿಗೆ ಹೋಪ ಕರಿನಾಯಿ'(ಸಂ: ಗಣಪಯ್ಯ ಶೆಟ್ಟಿ ಪ್ರೊ., 1993-94, ಪು-15)

(ಹೇಳಿದವರು: ಲಕ್ಷ್ಮೀ ಶೆಡ್ತಿ ಬಳ್ಕೂರು) ನಾಯಿಯನ್ನು ನನ್‌ಮಗು ಎಂದು ಹೇಳುವುದು; ಹುಲಿ ಬ್ಯಾಟಿಗೆ ಹೋಗುವ ವೀರ ನಾಯಿಯೆಂದು ಕೊಂಡಾಡುವುದು; ಅಂತಹ ನಾಯಿಯ ಕೊರಳಿಗೆ ನಲವತ್ತು ವರಹದ ಗೆಜ್ಜೆ ಮಾಡಿಸಿ ಹಾಕಿರುವೆ ಎಂದು ಹೇಳಿರುವ ಈ ಸೊಲ್ಲುಗಳು ನಿರೂಪಕನಿಗೆ ನಾಯಿಯ ಮೇಲಿರುವ ಪ್ರೀತಿಯನ್ನು ತೋರಿಸುತ್ತದೆ.

1996-97ನೇ ಸಂಚಿಕೆಯಲ್ಲಿ ಪ್ರಥಮ ಪಿಯುಸಿ ಕಲಾವಿಭಾಗದ ಅಕ್ಷತ ಶೆಟ್ಟಿಯವರ ಹನಿಗತೆ 'ಹರ್ಕಿ ಸಂದಾಯ' ಕಥೆಯಲ್ಲಿ ಗ್ರಾಮೀಣ ಪ್ರದೇಶದ ಶ್ರೀಸಾಮಾನ್ಯನೊಬ್ಬನ ಬುದ್ಧಿವಂತಿಕೆಯನ್ನು ತಿಳಿದುಕೊಳ್ಳಬಹುದಾಗಿದೆ.

**ಕಾರಂತರೊಡನೆ ಸಂದರ್ಶನ:** 1987-88ನೇ ಕಾಲೇಜಿನ ವಾರ್ಷಿಕ ಸಂಚಿಕೆಯಲ್ಲಿ ಸಾಹಿತ್ಯಸಂಘದ ವಿಶೇಷ ಕಾರ್ಯಕ್ರಮವಾಗಿ 'ಕಾಲೇಜು ಮತ್ತು ವಿದ್ಯಾರ್ಥಿಗಳು' ಎಂಬ ಶೀರ್ಷಿಕೆಯಡಿಯಲ್ಲಿ ಡಾ. ಶಿವರಾಮ ಕಾರಂತರೊಡನೆ ವಿದ್ಯಾರ್ಥಿಗಳ ಸಂದರ್ಶನ

ಎಂಬ ವಿಶಿಷ್ಟ ಕಾರ್ಯಕ್ರಮವನ್ನು ಸಂಯೋಜಿಸಲಾಗಿತ್ತು. ಅಂದಿನ ವಿದ್ಯಾರ್ಥಿ ಸಂದರ್ಶಕರಾಗಿ ಗಣೇಶ್ ಶೆಟ್ಟಿ ಅಂತಿಮ ಬಿ.ಕಾಂ., ದಿನಕರ ಶೆಟ್ಟಿ ಟಿ.ವಿ., ಸೀತಾರಾಮ ಭಟ್ ಅಂತಿಮ ಬಿ.ಕಾಂ. ಮತ್ತು ಅಂತಿಮ ಬಿ.ಎ. ತರಗತಿಯ ನಾಗರಾಜ ವೈದ್ಯ ಇವರುಗಳು ಕಾರಂತರೊಡನೆ ಮುಖಾಮುಖಿಯಾಗಿ ಚರ್ಚೆ ನಡೆಸಿದ್ದರು. ಅಂದಿನ ಕಾರ್ಯಕ್ರಮದಲ್ಲಿ ವಿದ್ಯಾರ್ಥಿಗಳು ಕೇಳಿದ ಪ್ರಶ್ನೆ ಹೀಗಿದೆ.

**ಪ್ರಶ್ನೆ: 1- ಕಾಲೇಜುಗಳಿಗೆ ಸ್ವಾಯತ್ತತೆ ಬೇಕೆ? ಬೇಕಾದಲ್ಲಿ ಏಕೆ ಬೇಕು?**

ಕಾರಂತರ ಉತ್ತರ- "ಕಾಲೇಜಿಗೆ ಸ್ವಾಯತ್ತತೆ ಬೇಕು-ಆಯಾ ಪ್ರದೇಶದ ಸಾಂಸ್ಕೃತಿಕ ಹಿನ್ನಲೆಯಲ್ಲಿ ಪಠ್ಯ ಪರಿಷ್ಕರಿಸಿಕೊಂಡು ಅಧ್ಯಯನ ಮಾಡಬೇಕೆಂಬ ಹಿನ್ನಲೆಯಲ್ಲಿ ಸ್ವಾಯತ್ತತೆ ಅವಶ್ಯಕ. ಸ್ವಾಯತ್ತತೆ ಎಂದರೆ ಇಷ್ಟಬಂದ ಹಾಗೆ ಶೈಕ್ಷಣಿಕ ವೇಳಾಪಟ್ಟಿ ತಯಾರಿಸಿಕೊಳ್ಳುವುದು ಎಂದರ್ಥವಲ್ಲ"(ಪೂರ್ವೋಕ್ತ., ಪು-10) ಎಂದು ಸ್ವಾಯತ್ತತೆಯ ಅರ್ಥವನ್ನು ವಿದ್ಯಾರ್ಥಿಗಳಿಗೆ ಮನವರಿಕೆ ಮಾಡಿದರು.

**1994-95ನೇ ಸಾಲಿನ ವೈದೇಹೀ ಸಾಹಿತ್ಯಗೋಷ್ಠಿ:** 1994-95 ನೇ ಸಾಲಿನಲ್ಲಿ ಅಂದರೆ ದಿನಾಂಕ 28.08.1994 ರಂದು ಕುಂದಾಪುರ ತಾಲೂಕು ಸಾಹಿತ್ಯ ಪರಿಷತ್ತಿನ ನೆರವಿನೊಂದಿಗೆ ವೈದೇಹಿ ಗೋಷ್ಠಿಯನ್ನು ಕಾಲೇಜಿನಲ್ಲಿ ಸಂಯೋಜಿಸಲಾಗಿತ್ತು. ಒಂದು ದಿನದ ಈ ಸಾಹಿತ್ಯಗೋಷ್ಠಿಯಲ್ಲಿ ವೈದೇಹಿಯವರ ಸಾಹಿತ್ಯ ಕೃತಿಗಳ ಕುರಿತಂತೆ ಉಪನ್ಯಾಸ ನೀಡಲು ಮೈಸೂರಿನಿಂದ ಖ್ಯಾತ ವಿಮರ್ಶಕಿ, ಲೇಖಕಿ, ಡಾ. ವಿಜಯಾ ದಬ್ಬೆ, ಸಾಗರದ ಟಿ.ಪಿ. ಅಶೋಕ, ಪುತ್ತೂರಿನಿಂದ ಲಕ್ಷ್ಮೀಶ ತೋಳ್ಪಾಡಿ, ಹೆಗ್ಗೋಡಿನಿಂದ ಕೆ.ಜಿ. ಕೃಷ್ಣಮೂರ್ತಿ, ಉಡುಪಿಯಿಂದ ಬನ್ನಂಜೆ ಗೋವಿಂದಾಚಾರ್ಯ ಮತ್ತು ಮುರಳೀಧರ ಉಪಾಧ್ಯ ಹಿರಿಯಡಕ ಇವರುಗಳು ಭಾಗವಹಿಸಿದ್ದಲ್ಲದೇ ಸಾಹಿತ್ಯ ಪರಿಷತ್ತಿನ ಪ್ರತಿನಿಧಿಯಾಗಿ ಹರಿಕೃಷ್ಣ ಪುನರೂರು ಅವರು ಮುಖ್ಯ ಅತಿಥಿಗಳಾಗಿ ಪಾಲ್ಗೊಂಡಿದ್ದರು. (ವಾರ್ಷಿಕ ಸಂಚಿಕೆ 1994-95, ಪುಟ-2, ಪ್ರ.ಸಂ. ಗಣಪಯ್ಯ ಶೆಟ್ಟಿ)

**ಶ್ರೀ ಶಾರದಾ ಕಾಲೇಜು ಬೆಳ್ಳಿಹಬ್ಬ 1996-97:** ಈ ಶೈಕ್ಷಣಿಕ ವರ್ಷಕ್ಕೆ ಕಾಲೇಜು ಯಶಸ್ವಿಯಾಗಿ 25 ವರ್ಷಗಳನ್ನು ಪೂರೈಸಿದ್ದು, ಈ ಶೈಕ್ಷಣಿಕ ವರ್ಷದಲ್ಲಿ ಕಾಲೇಜು ಬೆಳ್ಳಿಹಬ್ಬವನ್ನು ಆಚರಿಸಿಕೊಂಡಿತ್ತು. ಬೆಳ್ಳಿಹಬ್ಬದ ಪ್ರಯುಕ್ತವಾಗಿ ಕಾಲೇಜಿನಲ್ಲಿ ವಿವಿಧ ವಿಭಾಗಗಳು ತಮ್ಮವೇ ಆದ ವೈಶಿಷ್ಟ್ಯಪೂರ್ಣ ಕಾರ್ಯಕ್ರಮಗಳನ್ನು ಹಮ್ಮಿಕೊಂಡಿದ್ದು, ಕನ್ನಡ ವಿಭಾಗ-ಸಾಹಿತ್ಯಸಂಘ-ಯಕ್ಷಗಾನಸಂಘವು ಜಂಟಿಯಾಗಿ ಹಮ್ಮಿಕೊಂಡ ಕಾರ್ಯಕ್ರಮಗಳನ್ನಷ್ಟೇ ಇಲ್ಲಿ ಚರ್ಚಿಸಲಾಗಿದೆ.

ದಿನಾಂಕ 06.02.1997ರಂದು ಬೆಳ್ಳಿಹಬ್ಬದ ಪ್ರಯುಕ್ತ ಸಾಹಿತ್ಯಗೋಷ್ಠಿಯನ್ನು ಏಪಡಿಸಲಾಗಿದ್ದು, ವಿಶೇಷ ಉಪನ್ಯಾಸಕರಾಗಿ ಅಂಬಾತನಯ ಮುದ್ರಾಡಿ ಇವರು, **'ಮಹಾಭಾರತದ ಕರ್ಣ'** ಎಂಬ ವಿಷಯದ ಕುರಿತಾಗಿ ಉಪನ್ಯಾಸವನ್ನು ನೀಡಿದ್ದರು. ಪ್ರೊ। ಮುರಳೀಧರ ಉಪಾಧ್ಯ ಹಿರಿಯಡಕ ಇವರು ಕಾವ್ಯವಾಚನದೊಂದಿಗೆ ಕಾವ್ಯದ ಕುರಿತ 'ವಿಮರ್ಶಾತ್ಮಕ ವಿಶ್ಲೇಷಣೆ'ಯನ್ನು ನಡೆಸಿಕೊಟ್ಟಿದ್ದರು. ಅದೇ ದಿನ ಅಪರಾಹ್ನ 2.30 ರಿಂದ ಜಿಲ್ಲೆಯ ಖ್ಯಾತ ರಂಗಕರ್ಮಿ ಪ್ರೊ. ಉದ್ಯಾವರ ಮಾಧವ ಆಚಾರ್ಯರಿಂದ ಸಾಹಿತ್ಯ ಸಂವಾದ ಕಾರ್ಯಕ್ರಮವು ನಡೆಯಿತು. (ಪುಟ 6, ಸಂಪುಟ 14, ಸಂಚಿಕೆ 96-97)

ದಿನಾಂಕ 07.02.1997ರಂದು ಕಾಲೇಜಿನ ಯಕ್ಷಗಾನಸಂಘದ ವತಿಯಿಂದ ಖ್ಯಾತ ಯಕ್ಷಗಾನಕಲಾವಿದ ಪ್ರೊ. ಪ್ರಭಾಕರ ಜೋಷಿ ಅವರು 'ಭಾರತೀಯ ಪರಂಪರೆಯಲ್ಲಿ ಚಾರ್ವಾಕ ಸಿದ್ಧಾಂತ ಅಥವಾ ನಾಸ್ತಿಕವಾದ'ದ ಕುರಿತಂತೆ ಉಪನ್ಯಾಸ ನೀಡಿದ್ದರು. ಅಂದಿನ ಗೋಷ್ಠಿಯ ಅಧ್ಯಕ್ಷರಾಗಿದ್ದ ಶೇಣಿ ಗೋಪಾಲಕೃಷ್ಣ ಭಟ್ಟರು, ತಮ್ಮ ವಿದ್ವತ್ತಾಪೂರ್ಣ ಅಧ್ಯಕ್ಷೀಯ ನುಡಿಗಳಿಂದ ಕಾರ್ಯಕ್ರಮವನ್ನು ಯಶಸ್ವಿಗೊಳಿಸಿದ್ದರು. (ಪುಟ, 6 ಸಂಪುಟ 14, ಸಂಚಿಕೆ 96–97)

ಅದೇ ದಿನದ ಅಪರಾಹ್ನದ ಕಾರ್ಯಕ್ರಮದಲ್ಲಿ ಬಡಗುತಿಟ್ಟಿನ ಖ್ಯಾತ ಯಕ್ಷಗಾನ ಕಲಾವಿದ ಶಂಭು ಹೆಗಡೆಯವರಿಂದ ಯಕ್ಷಗಾನ ಪ್ರಾತ್ಯಕ್ಷಿಕೆ ಕಾರ್ಯಕ್ರಮವು ನಡೆದದ್ದಲ್ಲದೇ, 'ಯಕ್ಷಗಾನ ರಂಗಭೂಮಿ ಅಂದು–ಇಂದು ಮತ್ತು ಮುಂದು' ಎಂಬ ಕುರಿತು ವಿಚಾರಾತ್ಮಕವಾದ ಉಪನ್ಯಾಸ ನಡೆಯಿತು. ಸಭೆಯಲ್ಲಿದ್ದ ಯಕ್ಷಗಾನಪ್ರಿಯರ ಅನೇಕ ಪ್ರಶ್ನೆಗಳಿಗೆ ಶಂಭು ಹೆಗಡೆಯವರು ಅಂದು ಉತ್ತರಿಸಿದರು.

ದಿನಾಂಕ 27.02.1997ರಂದು ಬೆಳ್ಳಿಹಬ್ಬದ ಪ್ರಯುಕ್ತ ಮಂಗಳೂರು ವಿ.ವಿ. ಕನ್ನಡ ವಿಭಾಗದ ಅಧ್ಯಕ್ಷ ಡಾ. ಬಿ.ಎ. ವಿವೇಕ ರೈಯವರು **'ಬಸ್ರೂರು ಅಧ್ಯಯನ'** ಗ್ರಂಥವನ್ನು ಬಿಡುಗಡೆ ಮಾಡಿದರು. ಖ್ಯಾತ ಯಕ್ಷಗಾನತಜ್ಞ ಎಂ.ಎಂ. ಹೆಗ್ಡೆಯವರು ಮುಖ್ಯ ಅತಿಥಿಗಳಾಗಿ ಅಂದು ವೇದಿಕೆಯಲ್ಲಿ ಉಪಸ್ಥಿತರಿದ್ದರು.

**ಇ) ಕಾಲೇಜಿನ ಆಡಳಿತದ ವತಿಯಿಂದ ಪ್ರಕಟಿಸಲಾದ ಇತರ ಪ್ರಕಟನೆಗಳು:**

**) ಬಸ್ರೂರು ಒಂದು ಅಧ್ಯಯನ:** ಕಾಲೇಜಿನ ಬೆಳ್ಳಿಹಬ್ಬದ ನೆನಪಿನಲ್ಲಿ ಕಾಲೇಜಿನ ಆಡಳಿತದ ವತಿಯಿಂದ ಈ ಗ್ರಂಥವನ್ನು ಪ್ರಕಟಿಸಲಾಗಿದೆ. ಈ ಕೃತಿಗೆ ಮುನ್ನುಡಿ ಬರೆದ ಡಾ. ಬಿ. ಎ. ವಿವೇಕ ರೈಯವರು ಈ ಗ್ರಂಥದ ವೈಶಿಷ್ಟ್ಯವನ್ನು ಹೀಗೆ ಕಂಡುಕೊಂಡಿದ್ದಾರೆ: "ಇಡೀ ಗ್ರಂಥದೊಳಗೆ ನಾವು ಒಮ್ಮೆ ಪ್ರವಾಸ ಮಾಡಿದರೆ ಪುರಾಣದ ಜಗತ್ತಿನಿಂದ ತೊಡಗಿ, ಇತಿಹಾಸದ ಪ್ರಪಂಚದೊಳಗೆ ಸುದೀರ್ಘ ಪ್ರಯಾಣ ಮಾಡಿ, ಆಧುನಿಕ ಬಸ್ರೂರಿನಲ್ಲಿ ಸುತ್ತಾಡಿ, ಶಾರಾದಾ ಕಾಲೇಜಿನ ಪ್ರಾಂಗಣಕ್ಕೆ ತಲುಪುತ್ತೇವೆ..... ಬಸ್ರೂರು ಏನು ಆಗಿತ್ತು? ಈಗ ಏನು ಆಗಿದೆ? ಏನು ಆಗಬೇಕು ಎನ್ನುವುದನ್ನು ಈ ಗ್ರಂಥದ ಉದ್ದಕ್ಕೂ ಯೋಚಿಸಲಾಗಿದೆ. ಇಂತಹ ಯೋಚನೆಗಳೆಲ್ಲವೂ ಬಸ್ರೂರಿನಿಂದಲೇ ಬಂದವು. ಬಸ್ರೂರು ಪರಿಸರದಿಂದಲೇ ಹುಟ್ಟಿಕೊಂಡವು ಎನ್ನುವುದು ಈ ಗ್ರಂಥದ ಹೆಚ್ಚುಗಾರಿಕೆ."(ಸಂ: ಗಣಪಯ್ಯ ಶೆಟ್ಟಿ ಕೆ. ಪ್ರೊ., 1997, ಮುನ್ನುಡಿಯ ಮಾತು)

**) ವಿವೇಕಾನಂದರ ವಿಚಾರಧಾರೆ; ಸಮಕಾಲೀನ ಸಂವಾದ:** "ಸ್ವಾಮೀ ವಿವೇಕಾನಂದ ಅಧ್ಯಯನ ಕೇಂದ್ರದ ವತಿಯಿಂದ 2014ರ ಆಗಸ್ಟ್ 8 ರಂದು ಏರ್ಪಡಿಸಲಾದ 20ನೇ ಶತಮಾನದಲ್ಲಿ 'ಸ್ವಾಮೀ ವಿವೇಕಾನಂದ ಚಿಂತನೆಗಳ ಮಹತ್ವ' ಎಂಬ ಶೀರ್ಷಿಕೆಯಲ್ಲಿ ನಡೆದ ವಿಚಾರ ಸಂಕಿರಣದಲ್ಲಿ ಸಂಪನ್ಮೂಲ ವ್ಯಕ್ತಿಗಳು ಮಂಡಿಸಿದ ಪ್ರಬಂಧದ ಸಂಗ್ರಹ ಹಾಗೂ ಸಂವಾದದ ಮೂಲಕ ಕಂಡುಕೊಂಡ ಚಿಂತನೆಗಳನ್ನು ಸಂಗ್ರಹಿಸಿ, ಪುಸ್ತಕರೂಪದಲ್ಲಿ ಪ್ರಕಟಿಸಲಾಗಿದೆ." (ಸಂ: ರಾಧಾಕೃಷ್ಣ ಶೆಟ್ಟಿ ಕೆ. ಪ್ರೊ., 2015, ಸಂಪಾದಕೀಯ ಮಾತು) ಎಂಬುದಾಗಿ ಸಂಪಾದಕರು ಕೃತಿಯ ಆಶಯವನ್ನು ವಿವರಿಸಿದ್ದಾರೆ.

**) ಕರ್ನಾಟಕದ ರಾಜಕಾರಣ, ಸಾಹಿತ್ಯಕ–ಸಾಂಸ್ಕೃತಿಕ ಗ್ರಹಿಕೆಗಳು:** 'ಕರ್ನಾಟಕದ ರಾಜಕಾರಣ: ಸಾಹಿತ್ಯಕ–ಸಾಂಸ್ಕೃತಿಕ ಗ್ರಹಿಕೆಗಳು' ಎಂಬ ಪರಿಕಲ್ಪನೆಯಲ್ಲಿ ನಡೆದ ರಾಷ್ಟ್ರೀಯ ವಿಚಾರಸಂಕಿರಣದಲ್ಲಿ ಬೇರೆ ಬೇರೆ ಆಯಾಮಗಳಿಂದ ವಿದ್ವಾಂಸರು

ನಡೆಸಿದ ಚರ್ಚೆಗಳನ್ನು ಈ ಕೃತಿಯಲ್ಲಿ ದಾಖಲಿಸುವ ಮೂಲಕ ಕನ್ನಡ ಸಾಹಿತ್ಯದ ನಡೆಯಲ್ಲಿ ರಾಜಕೀಯ ಶಕ್ತಿಯು ಬೀರುವ ಪರಿಣಾಮ ಮತ್ತು ಪ್ರತಿಕ್ರಿಯೆಯನ್ನು ಗುರುತಿಸಲಾಗಿದೆ. ಇದು ಮುಂದಿನ ಕನ್ನಡ ಸಾಹಿತ್ಯ ಅಭ್ಯಾಸಿಗಳಿಗೆ ಅನೇಕ ರೀತಿಯಿಂದ ಉಪಯುಕ್ತ ಪಥ್ಯವಾಗಲಿದೆ ಎನ್ನುವುದಕ್ಕಾಗಿ ಇದನ್ನು ಕೃತಿರೂಪದಲ್ಲಿ ಸಂಸ್ಥೆಯು ಪ್ರಕಟಿಸಿದೆ.

**2) ಜಿಲ್ಲೆಯ ವಿವಿಧ ಕಾಲೇಜು-ಸಾಹಿತ್ಯ ವೇದಿಕೆಗಳಲ್ಲಿ ನಡೆದ ಸಾಹಿತ್ಯ ಚಟುವಟಿಕೆಗಳಲ್ಲಿ ಬಸ್ರೂರು ಕಾಲೇಜಿನ ವಿದ್ಯಾರ್ಥಿಗಳು ಪಾಲ್ಗೊಂಡ ಪ್ರಮುಖ ಸಾಹಿತ್ಯಕ ಚಟುವಟಿಕೆಗಳು:** ಕಾಲೇಜು ಪ್ರಾರಂಭವಾದ ವರ್ಷದಿಂದ ತೊಡಗಿ, 20ನೆಯ ಶತಮಾನದ ಕೊನೆಯ ತನಕ ಹಾಗೂ 21ನೇ ಶತಮಾನದಲ್ಲಿ ಇಂದಿನ ತನಕವೂ ಕಾಲೇಜು ವಿದ್ಯಾರ್ಥಿಗಳು ಅವಿಭಜಿತ ದ.ಕ. ಜಿಲ್ಲೆಯ ವಿವಿಧ ಸಾಹಿತ್ಯ ಸಂಘಟನೆಗಳು ನಡೆಸುವ ಸಾಹಿತ್ಯ ಸಾಂಸ್ಕೃತಿಕ ಸರ್ಧೆಗಳಲ್ಲಿ ಸಕ್ರಿಯವಾಗಿ ಪಾಲ್ಗೊಂಡು ತಮ್ಮ ವ್ಯಕ್ತಿಗತ ಪ್ರತಿಭೆಯನ್ನು ಮೆರೆಯಿಸಿ, ಕಾಲೇಜಿಗೆ ಗೌರವವನ್ನು ತಂದಿದ್ದಾರೆ. ಕನ್ನಡ ವಿಭಾಗದಿಂದ ನಿವೃತ್ತರಾದ ಡಾ. ಕನರಾಡಿಯವರು ಹಾಗೂ ಪ್ರೊ. ಶ್ರೀಧರ ಉಪ್ಪೂರ ಅವರು ಈ ಉದ್ದೇಶಕ್ಕಾಗಿಯೇ ಕಾಲೇಜಿನಲ್ಲಿ ನಿರಖು ಠೇವಣಿಯನ್ನು ಸ್ಥಾಪಿಸುವ ಮೂಲಕ ಅವರ ಸಾಹಿತ್ಯ ಕಾಳಜಿ ಮತ್ತು ಕಾಲೇಜಿನ ಅಭಿಮಾನ ಮತ್ತು ವಿದ್ಯಾರ್ಥಿ ವಾತ್ಸಲ್ಯವನ್ನು ಸಾಬೀತುಗೊಳಿಸಿದ್ದಾರೆ. 1990ರ ದಶಕದಿಂದ ಕನ್ನಡ ವಿಭಾಗದಲ್ಲಿ ದುಡಿಯುತ್ತಿರುವ ಡಾ. ಚಂದ್ರಾವತಿಯವರು ಇದೇ ಮಾರ್ಗದಲ್ಲಿ ಮುನ್ನಡೆಯುತ್ತಿದ್ದಾರೆ.

**3) ಕಾಲೇಜಿನ ಸಾಹಿತ್ಯ ಚಟುವಟಿಕೆಗಳು ವಿದ್ಯಾರ್ಥಿಗಳನ್ನು ಪ್ರೇರೇಪಿಸಿದ ಬಗೆ ಅಥವಾ ಕಾಲೇಜಿನ ಸಾಹಿತ್ಯಚಟುವಟಿಕೆಗಳು ವಿದ್ಯಾರ್ಥಿಗಳ ಭವಿಷ್ಯವನ್ನು ರೂಪಿಸಿದ ಬಗೆ:**

ಕನ್ನಡವನ್ನು ಐಚ್ಛಿಕ ವಿಷಯವಾಗಿ ಓದುವುದಕ್ಕೆ ಕಾಲೇಜು ಸ್ಥಾಪನೆಯ ಆರಂಭದಿಂದಲೇ ಅವಕಾಶವಿದ್ದ ಈ ಕಾಲೇಜಿನಲ್ಲಿ ಸ್ಥಳೀಯ ಭಾಷೆ ಹಾಗೂ ಸಂಸ್ಕೃತಿಯ ಅಧ್ಯಯನಕ್ಕೆ ವಿಶೇಷ ಪ್ರೋತ್ಸಾಹ ನೀಡುತ್ತಾ ಬರಲಾಗಿದೆ. ಈ ಪರಿಪಾಠವನ್ನು ಆರಂಭಿಸಿದವರು ಬಿ. ವಾಸುದೇವ ವರ್ಣರು ಎಂಬುದನ್ನು ಉಲ್ಲೇಖಿಸಲೇ ಬೇಕಾಗುತ್ತದೆ. ಈ ಪರಂಪರೆಯನ್ನು ಮುಂದುವರಿಸಿದ್ದು ಮಾತ್ರವಲ್ಲದೇ ಗಟ್ಟಿಗೊಳಿಸಿದ್ದು ಪ್ರೊ. ಕನರಾಡಿ ವಾದಿರಾಜ ಭಟ್ಟರು ಮತ್ತು ಡಾ. ಶ್ರೀಧರ ಉಪ್ಪೂರರು. ಇವರುಗಳ ಪರಿಶ್ರಮದಿಂದ ಕನ್ನಡ ಚಟುವಟಿಕೆಗಳು ಸಾಧಿಸಿದ ಅಂತಿಮ ಪರಿಣಾಮಗಳೇನು ಎಂಬ ಪ್ರಶ್ನೆಗೆ ಈ ಕೆಳಗಿನಂತೆ ಉತ್ತರವನ್ನು ಕಂಡುಕೊಳ್ಳಲಾಗಿದೆ.

ಕೇವಲ 28 ವರ್ಷಗಳಲ್ಲಿ ಈ ಕಾಲೇಜಿನ 25 ಮಂದಿ ವಿದ್ಯಾರ್ಥಿಗಳು ಕನ್ನಡ ಸಾಹಿತ್ಯದಲ್ಲಿ ಆಸಕ್ತಿಯನ್ನು ರೂಢಿಸಿಕೊಂಡು ಕೆಲವರು ಪ್ರೌಢಶಾಲೆಯಲ್ಲಿ ಕನ್ನಡ ಶಿಕ್ಷಕರಾಗಿದ್ದಾರೆ. ಏಳು ಮಂದಿ ವಿವಿಧ ವಿಶ್ವವಿದ್ಯಾನಿಲಯದಿಂದ ಡಾಕ್ಟರೇಟ್ ಪದವಿಯನ್ನು ಪಡೆದಿರುವುದು ಕಾಲೇಜಿನ ಕನ್ನಡ ವಿಭಾಗಕ್ಕೆ ಹೆಮ್ಮೆಯ ವಿಚಾರ. ಇವರೆಲ್ಲರುಗಳ ವಿವರಗಳನ್ನು ಈ ಪ್ರಬಂಧದ **ಅನುಬಂಧ ಸಂಖ್ಯೆ 10** ರಲ್ಲಿ ಉಲ್ಲೇಖಿಸಲಾಗಿದೆ. ಕಾಲೇಜು ವಿದ್ಯಾಭ್ಯಾಸದ ಅವಧಿಯಲ್ಲಿ ವಿವಿಧ ಸಾಹಿತ್ಯ ಮತ್ತು ಸಾಂಸ್ಕೃತಿಕ ಚಟುವಟಿಕೆಗಳಲ್ಲಿ ತೊಡಗಿಸಿಕೊಂಡ ಸಾಕಷ್ಟು ವಿದ್ಯಾರ್ಥಿಗಳು ತಮ್ಮೂರಿನ ಶಾರದೋತ್ಸವ, ಗಣೇಶೋತ್ಸವ ಮುಂತಾದ ಕಲಾವೇದಿಕೆ, ಸಂಘಟನೆಯಲ್ಲಿ ಪಾಲ್ಗೊಂಡು ತಮ್ಮ ಪ್ರತಿಭೆಯಿಂದಾಗಿ ಸಾರ್ವಜನಿಕವಾಗಿ ಗುರುತಿಸಿಕೊಂಡಿದ್ದಾರೆ ಎನ್ನುವುದೇ ಈ ಕಾಲೇಜಿಗೆ ಅಭಿಮಾನದ ಸಂಗತಿ.

# ಪೂರ್ಣಪ್ರಜ್ಞ ಸಂಧ್ಯಾ ಕಾಲೇಜು, ಉಡುಪಿ

ಉಡುಪಿ ಪರಿಸರದ ವಿವಿಧ ಔದ್ಯೋಗಿಕ (ಬ್ಯಾಂಕ್, ಎಲ್.ಐ.ಸಿ. ಹಾಗೂ ಇತರ ಖಾಸಗಿ ಘಟಕಗಳು) ಘಟಕಗಳ ನೌಕರರಲ್ಲಿ ಕುದುರಿದ ಉನ್ನತ ಶಿಕ್ಷಣಾಸಕ್ತಿಯನ್ನು ಈಡೇರಿಸುವುದಕ್ಕಾಗಿ ಸಾರ್ವಜನಿಕರ ಒತ್ತಾಯಕ್ಕೆ ಮಣಿದು ಪೂರ್ಣಪ್ರಜ್ಞ ಆಡಳಿತ ಮಂಡಳಿಯವರು 'ಪೂರ್ಣಪ್ರಜ್ಞ ಸಂಧ್ಯಾ ಕಾಲೇಜು' ಎಂಬ ಈ ಸಂಸ್ಥೆಯನ್ನು 1966ರಲ್ಲಿ ಅಸ್ತಿತ್ವಕ್ಕೆ ತಂದರು. 20ನೇ ಶತಮಾನದ ಕಾಲಾವಧಿಯಲ್ಲಿ ಈ ಕಾಲೇಜನ್ನು ಐವರು ಪ್ರಾಂಶುಪಾಲರು ಮುನ್ನಡೆಸಿಕೊಂಡು ಬಂದಿದ್ದರು. ಪ್ರೊ. ದಾಮೋದರ ಆಚಾರ್ಯರು ಸ್ಥಾಪಕ ಪ್ರಾಂಶುಪಾಲರಾಗಿ 1966 ರಿಂದ 1969 ರ ತನಕ 2 ಶೈಕ್ಷಣಿಕ ವರ್ಷಗಳ ಕಾಲ ಮುನ್ನಡೆಸಿ ಕಾಲೇಜಿಗೆ ವಿಶೇಷವಾದ ಶೈಕ್ಷಣಿಕ ಚೌಕಟ್ಟನ್ನೊದಗಿಸಿಕೊಟ್ಟರು. ಇತರ ಪೂರ್ಣಾವಧಿ ಕಾರ್ಯಾಚರಣೆಯ ಕಾಲೇಜುಗಳಂತೆ ಕಾರ್ಯನಿರ್ವಹಿಸುವುದಕ್ಕೆ ಸಮಯದ ಅಭಾವವಿರುವ ಕಾರಣ ಈ ಸಂಧ್ಯಾ ಕಾಲೇಜಿಗೆ ವಿಶೇಷವಾದ ಸಾಹಿತ್ಯ ಚಟುವಟಿಕೆಗಳನ್ನು ನಿರ್ವಹಿಸಿಕೊಂಡು ಬರುವುದಕ್ಕೆ ಸಾಧ್ಯವಾಗುವುದಿಲ್ಲ ಎನ್ನುವುದು ಇಲ್ಲಿ ಕರ್ತವ್ಯ ನಿರ್ವಹಿಸಿದ ಎಲ್ಲಾ ಪ್ರಾಂಶುಪಾಲರ ಅಭಿಪ್ರಾಯವಾಗಿದೆ.

ಯಾವುದೇ ಸಂಸ್ಥೆಯಲ್ಲಿ ಉದ್ಯೋಗದಲ್ಲಿದ್ದ ನೌಕರರು ಅಥವಾ ಇತರ ಪೂರ್ಣ ಪ್ರಮಾಣದ (ಡೇ ಕಾಲೇಜು) ಕಾಲೇಜುಗಳಲ್ಲಿ ಅಧ್ಯಯನಕ್ಕೆ ಅವಕಾಶ ಸಿಗದ ವಿದ್ಯಾರ್ಥಿಗಳು ತಮ್ಮ ದೈನಂದಿನ ಕಾರ್ಯಚಟುವಟಿಕೆಗಳನ್ನು ನಿಭಾಯಿಸುತ್ತಾ ಕಾಲೇಜು ವಿದ್ಯಾಭ್ಯಾಸದಲ್ಲಿ ತೊಡಗಿಸಿಕೊಳ್ಳುವುದು ಸಂಧ್ಯಾ ಕಾಲೇಜಿನ ವಿದ್ಯಾರ್ಥಿಗಳ ಸಾಮಾನ್ಯ ಸ್ವರೂಪವಾಗಿರುತ್ತದೆ. ಹೀಗಾಗಿ ಇಂತಹ ವಿದ್ಯಾರ್ಥಿಗಳಿಗೆ ಕಾಲೇಜಿನಲ್ಲಿ ಪೂರ್ಣ ಪ್ರಮಾಣದಲ್ಲಿ ಶೈಕ್ಷಣಿಕವಾಗಿ ತೊಡಗಿಕೊಳ್ಳುವುದು ಅಸಾಧ್ಯವಾದ ವಿಚಾರವಾಗಿರುತ್ತದೆ. ಕೇವಲ ಸಂಜೆಯ 4.00 ಗಂಟೆಯ ಅವಧಿಗಷ್ಟೇ ಕಾರ್ಯಾಚರಿಸುವ ಈ ಕಾಲೇಜಿನಲ್ಲಿ ವರ್ಷಂಪ್ರತಿ ವಾರ್ಷಿಕ ಸಂಚಿಕೆಯನ್ನು ಪ್ರಕಟಿಸುತ್ತಾ ಸಾಹಿತ್ಯ ಚಟುವಟಿಕೆಗಳಲ್ಲಿ ವಿದ್ಯಾರ್ಥಿಗಳನ್ನು ಪ್ರೇರೇಪಿಸುವ ಜವಾಬ್ದಾರಿಗೆ ತೊಡಗಿಸಿಕೊಂಡವರು ಸಂಧ್ಯಾ ಕಾಲೇಜಿನ ಕನ್ನಡ ಉಪನ್ಯಾಸಕರಾದ ಪ್ರೊ. ಮುರಳೀಧರ ಉಪಾಧ್ಯರು ಎನ್ನುವುದು ಉಲ್ಲೇಖಿಸಬೇಕಾದ ವಿಚಾರ. ಈ ಕಾಲೇಜಿನ ಸಾಹಿತ್ಯ ಚಟುವಟಿಕೆಗಳ ಹಿಂದೆ ಅವರ ಪರಿಶ್ರಮವಿರುವುದನ್ನು ಗುರುತಿಸಬಹುದಾಗಿದೆ.

**೧) ಸಾಹಿತ್ಯ ಚಟುವಟಿಕೆಗಳಿಗೆ ವಿಶೇಷ ಅವಕಾಶ:**

ಪಾಠ, ಪಠ್ಯ, ಬೋಧನೆ ಸಹಿತ ಎನ್.ಎಸ್.ಎಸ್. ಚಟುವಟಿಕೆಗಷ್ಟೇ ಅವಕಾಶ ನೀಡುತ್ತಿದ್ದ ಪೂರ್ಣಪ್ರಜ್ಞ ಸಂಧ್ಯಾ ಕಾಲೇಜು ಪ್ರೊ. ರಾಧಾಕೃಷ್ಣ ಆಚಾರ್ಯ ಅವರ ಕಾಲದಲ್ಲಿ (01.04.1993–31.03.1998) ಸಾಕಷ್ಟು ಸಾಹಿತ್ಯಚಟುವಟಿಕೆಗಳಿಗೂ ಅವಕಾಶ ನೀಡಿದ ಉಲ್ಲೇಖಗಳನ್ನು ಕಾಲೇಜು ಸಂಚಿಕೆಯ ವರದಿಯಿಂದ ಕಂಡುಕೊಳ್ಳಬಹುದಾಗಿದೆ. ದಿನಾಂಕ 18.12.1993ರಂದು 'ಹಾಸ್ಯಸಂಜೆ' ಎಂಬ ವಿನೂತನ ಕಾರ್ಯಕ್ರಮವನ್ನು ಸಂಯೋಜಿಸಲಾಗಿದ್ದು, ಕಾರ್ಯಕ್ರಮದ ಮುಖ್ಯ ಉಪನ್ಯಾಸಕರಾಗಿ ಕಾರ್ಪೊರೇಶನ್ ಬ್ಯಾಂಕ್‌ನ ಮೆನೇಜರ್ ಆಗಿ 'ಹನಿಗವನ'ದಲ್ಲಿ ಗುರುತಿಸಿಕೊಂಡ ಡುಂಡಿರಾಜ್ ಅವರು ಕಾರ್ಯಕ್ರಮವನ್ನು ನಡೆಸಿಕೊಟ್ಟರು. ದಿನಾಂಕ 03.12.1993 ರಂದು ಖ್ಯಾತ ಕನ್ನಡ ಮತ್ತು ಸಂಸ್ಕೃತ ವಿದ್ವಾನ್ ಪತ್ರಕರ್ತ ಬನ್ನಂಜೆ ಗೋವಿಂದಾಚಾರ್ಯ ಅವರು ಕಾಳಿದಾಸನ ನಾಟಕಗಳ ಕುರಿತು ಉಪನ್ಯಾಸ ನೀಡಿದರು ಎಂಬ ಉಲ್ಲೇಖ ಕಾಲೇಜು

ವಾರ್ಷಿಕ ಸಂಚಿಕೆಯಲ್ಲಿ ದಾಖಲಾಗಿದೆ. ಆ ಶೈಕ್ಷಣಿಕ ವರ್ಷದ ಕಾಲೇಜು ವಾರ್ಷಿಕೋತ್ಸವ ಸಮಾರಂಭಕ್ಕೆ ಖ್ಯಾತ ಸಾಹಿತಿ ಪ್ರೊ. ಯು.ಆರ್. ಅನಂತಮೂರ್ತಿ, ಚಿಂತಕ ಡಾ. ಮುರಾರಿ ಬಲ್ಲಾಳ್, ಸಮಾಜಶಾಸ್ತ್ರಜ್ಞ ಪ್ರೊ. ಶ್ರೀಪತಿ ತಂತ್ರಿ, ಕನ್ನಡ ವಿಶ್ವವಿದ್ಯಾನಿಲಯದ ಕುಲಪತಿ ಡಾ. ಚಂದ್ರಶೇಖರ ಕಂಬಾರ ಅವರು ಅತಿಥಿಗಳಾಗಿ ಆಗಮಿಸಿದ್ದು, ಅಂದಿನ ಸಮಾರಂಭವು ಸಾಹಿತ್ಯಗೋಷ್ಠಿಯಾಗಿಯೇ ಮಾರ್ಪಟ್ಟಿತ್ತು ಎನ್ನುವುದು ಉಲ್ಲೇಖನೀಯ ಅಂಶವಾಗಿದೆ.

ಅ) **ಸಂಚಿಕೆಯಲ್ಲಿ ಹೊಸತನ:** ಕಾಲೇಜು ವಾರ್ಷಿಕ ಸಂಚಿಕೆಯ 'ಸವಿನೆನಪು' ಮತ್ತು 'ಚಿಂತನ' ಶೀರ್ಷಿಕೆಯಲ್ಲಿ ದಿವಂಗತ ಸಾಹಿತಿ ಸರಸ್ವತಿ ಬಾಯಿ ರಾಜವಾಡೆಯವರ ಕುರಿತು, ವೈದೇಹಿಯವರು ತಮ್ಮ ನೆನಪಿನ ಮಾಹಿತಿಗಳನ್ನು ಹಂಚಿಕೊಂಡೆರೆ, ಕೆ.ವಿ. ಸುಬ್ಬಣ್ಣ ಅವರು ರಾಜವಾಡೆಯವರನ್ನು 'ಗಂಧರ್ವ ನಾಯಕಿ' ಎಂಬ ಶೀರ್ಷಿಕೆಯಡಿಯಲ್ಲಿ ಅವರ ವ್ಯಕ್ತಿತ್ವವನ್ನು ಸಂಕ್ಷಿಪ್ತವಾಗಿ ಓದುಗರೊಂದಿಗೆ ಹಂಚಿಕೊಂಡಿದ್ದಾರೆ. 'ಚಿಂತನ' ಎಂಬ ಶೀರ್ಷಿಕೆಯನ್ನು ಹೊಸದಾಗಿ ಉಲ್ಲೇಖಿಸಿದ್ದು ಅದರಡಿಯಲ್ಲಿ ಡಾ. ನಿ. ಮುರಾರಿ ಬಲ್ಲಾಳ್, ಎ. ವರದರಾಜ್ ಬಲ್ಲಾಳ್, ಬಿ.ಆರ್. ನಾಗೇಶ್, ಎಸ್. ಶ್ರೀಶ ಬಲ್ಲಾಳ್, ಡಾ. ಮಹಾಬಲೇಶ್ವರ ರಾವ್ ಅವರ ಮೌಲಿಕ ಬರಹಗಳು ಪ್ರಕಟಗೊಂಡಿವೆ. 'ಲೇಖನಗಳು' ಎಂಬ ಶೀರ್ಷಿಕೆಯಡಿಯಲ್ಲಿ ವಿವಿಧ ಕ್ಷೇತ್ರಗಳಲ್ಲಿ ಸಾಧನೆ ಮಾಡಿದ ತಜ್ಞರ ಲೇಖನಗಳಿವೆ.

ಆ) **ಕವನಗಳು:** ಈ ಶೀರ್ಷಿಕೆಯಲ್ಲಿ ವಿದ್ಯಾರ್ಥಿಗಳಿಂದ ಮಾತ್ರ ರಚಿತವಾದ ಕವನಗಳಿಗೆ ಅವಕಾಶ ಕೊಡದೇ ಕನ್ನಡ ಸಾಹಿತ್ಯ ಕ್ಷೇತ್ರದಲ್ಲಿ ಸಾಕಷ್ಟು ಹೆಸರು ಮಾಡಿ ಗುರುತಿಸಿಕೊಂಡ ಪಾ.ವೆಂ. ಅವರ ಕವನಗಳಿಗೂ ಶಾರದಾ ಬಿ. ಎಂಬವರ (ಪತ್ರಿಕೆಯಲ್ಲಿ ಗುರುತಿಸಿಕೊಂಡವರು) ಕವನಕ್ಕೂ ಸಂಚಿಕೆಯಲ್ಲಿ ಸ್ಥಳಾವಕಾಶವನ್ನು ಒದಗಿಸಿದೆ. ಹೀಗೆ ಸಂಚಿಕೆಯು ಹಿಂದಿನ ವರ್ಷದ ಹಳೆಯ ಮಾದರಿಯನ್ನು ಬಿಟ್ಟು, ಹೊಸ ದಾರಿಯಲ್ಲಿ ಮುನ್ನಡೆಯುತ್ತಾ ವಿದ್ಯಾರ್ಥಿಗಳನ್ನು ಸಾಹಿತ್ಯ ಚಟುವಟಿಕೆಯತ್ತ ಪ್ರೇರೇಪಿಸುವಲ್ಲಿ ಪ್ರಯತ್ನಿಸಿರುವುದನ್ನು ಗುರುತಿಸಬಹುದಾಗಿದೆ.

ಪ್ರೊ. ರಾಧಾಕೃಷ್ಣಾಚಾರ್ಯರ ನಿವೃತ್ತಿಯ ಅನಂತರ ಪ್ರಾಂಶುಪಾಲರಾಗಿ ಜವಾಬ್ದಾರಿ ಸ್ವೀಕರಿಸಿದ ಪ್ರೊ. ವಿ.ಜೆ. ಪ್ಯಾಟಿ ಅವರ ಕಾಲದಲ್ಲಿ ಕಾಲೇಜು ವಾರ್ಷಿಕ ಸಂಚಿಕೆಯು ಹಿಂದಿನ ಪ್ರಾಂಶುಪಾಲರ ಮಾರ್ಗದಲ್ಲಿಯೇ ಮುನ್ನಡೆಯಿತು ಎನ್ನುವುದನ್ನು ಗುರುತಿಸಬಹುದಾಗಿದೆ. ಸ್ಥಳೀಯ ಮತ್ತು ಹೊರಗಿನ ವಿದ್ವಾಂಸರ ಲೇಖನವನ್ನು ಕಾಲೇಜು ಸಂಚಿಕೆಯಲ್ಲಿ ಪ್ರಕಟಿಸಲಾಗಿದ್ದು, ಅದರ ಉದ್ದೇಶವನ್ನು ಸಂಪಾದಕೀಯದಲ್ಲಿ ಪ್ರಸ್ತಾಪಿಸಲಾಗಿದೆ. ಸ್ಥಳೀಯ ವಿದ್ವಾಂಸರ ಲೇಖನಗಳಲ್ಲಿ ಗಮನಿಸಬೇಕಾದ ಪ್ರಬಂಧ ಬಿ.ಆರ್. ನಾಗೇಶ್ ಅವರ 'ಗಿರೀಶ್ ಕಾರ್ನಾಡ್‌ರ ನಾಟಕಗಳು' ಎಂಬ ವಿಮರ್ಶಾ ಪ್ರಬಂಧವಾಗಿದೆ. ಗಿರೀಶ್ ಕಾರ್ನಾಡ್ ಅವರು ಬಳಸುವ ನಾಟಕದ ತಂತ್ರ, ಚರಿತ್ರೆ ಹಾಗೂ ಪುರಾಣವಸ್ತುಗಳನ್ನು ನಾಟಕದಲ್ಲಿ ನಿರೂಪಿಸುವ ರೀತಿ ಮತ್ತು ಅವುಗಳಿಗಿರುವ ಸಾಧ್ಯತೆಯ ಇತಿಮಿತಿಗಳೇನು? ಈ ಇತಿ-ಮಿತಿಗಳಿಂದಾಗಿ ಇಂತಹ ನಾಟಕಗಳು ಸಹೃದಯರಿಗೆ ನೀಡುವ ಹೊಸ ಅರ್ಥಗಳೇನು? ಎಂಬಿತ್ಯಾದಿ ಪ್ರಶ್ನೆಗಳಿಗೆ ಪ್ರಬಂಧದಲ್ಲಿ ಸಮಗ್ರ ಮಾಹಿತಿಯು ಲಭ್ಯವಾಗುತ್ತದೆ. ಇದೇ ಪ್ರಬಂಧದಲ್ಲಿ ಕಾರ್ನಾಡರ 'ನಾಗಮಂಡಲ' ನಾಟಕ ಮತ್ತು 'ತಲೆದಂಡ' ನಾಟಕದ ವಿಶಿಷ್ಟತೆಯನ್ನು ಬಿ.ಆರ್. ನಾಗೇಶ್ ಅವರು ವಿಶ್ಲೇಷಿಸಿರುವುದನ್ನು ಕಾಣಬಹುದಾಗಿದೆ.

**ಪೂರ್ಣಪ್ರಜ್ಞ ಸಂಧ್ಯಾ ಕಾಲೇಜಿನ ಸಾಹಿತ್ಯ ಚಟುವಟಿಕೆಗಳ ಪರಿಣಾಮಗಳು:** ಪೂರ್ಣಪ್ರಜ್ಞ ಸಂಧ್ಯಾ ಕಾಲೇಜಿನ ಸಾಹಿತ್ಯ ವೇದಿಕೆಯ ಮೂಲಕ ವಿವಿಧ ಕಾಲಘಟ್ಟದಲ್ಲಿ ನಡೆದ ಸಾಹಿತ್ಯ ಚಟುವಟಿಕೆಗಳಿಂದ ಸಾಹಿತ್ಯಾಸಕ್ತಿಯನ್ನು ರೂಢಿಸಿಕೊಂಡ ಅಲ್ಲಿಯ ವಿದ್ಯಾರ್ಥಿಗಳು ಮುಂದೆ ತಮ್ಮ ಸ್ವತಂತ್ರ ಬದುಕಿನಲ್ಲಿ ಸಾಹಿತ್ಯಕ್ಷೇತ್ರದಲ್ಲಿ ಗುರುತಿಸಿಕೊಂಡ ವಿವರಗಳನ್ನು ಈ ಪ್ರಬಂಧದ ಕೊನೆಯ ಅನುಬಂಧದಲ್ಲಿ ಸುದೀರ್ಘವಾಗಿ **ಅನುಬಂಧ ಸಂಖ್ಯೆ 11** ರಲ್ಲಿ ಉಲ್ಲೇಖಿಸಲಾಗಿದೆ.

~*~

## 20ನೇ ಶತಮಾನದ ಮೊದಲ ಹಂತದಲ್ಲಿ (1949 ರಿಂದ 1972) ಅಸ್ತಿತ್ವಕ್ಕೆ ಬಂದ ಖಾಸಗಿ ಕಾಲೇಜುಗಳ ಸಾಹಿತ್ಯಚಟುವಟಿಕೆಗಳ ಸಮಗ್ರ ವಿಶ್ಲೇಷಣೆ

ಜಿಲ್ಲೆಯಲ್ಲಿ ಮೊದಲ ಹಂತದಲ್ಲಿ ಅಸ್ತಿತ್ವಕ್ಕೆ ಬಂದ 6 ಖಾಸಗಿ ಪದವಿ ಕಾಲೇಜುಗಳಲ್ಲಿ ಎಂ.ಜಿ.ಎಂ. ಕಾಲೇಜು ಮೊದಲ ಕಾಲೇಜಾಗಿರುತ್ತದೆ. 20ನೇ ಶತಮಾನದ 50ರ ದಶಕದಲ್ಲಿ ಈ ಕಾಲೇಜು ಆರಂಭಗೊಂಡಿದ್ದು, ಆಂಗ್ಲ ಭಾಷೆ ಮತ್ತು ಸಾಹಿತ್ಯದಲ್ಲಿ ವಿಶೇಷ ಆಸಕ್ತಿ ಮತ್ತು ತಜ್ಞತೆಯನ್ನು ಹೊಂದಿದ ಪ್ರೊ. ಸುಂದರರಾಯರು ಪ್ರಾಂಶುಪಾಲರಾಗಿ ಜವಾಬ್ದಾರಿ ಸ್ವೀಕರಿಸಿ, ಕಾಲೇಜನ್ನು ಮುನ್ನಡೆಸಿದರು. ಸಾಹಿತ್ಯ ಹಾಗೂ ಲಲಿತಕಲೆಗಳಲ್ಲಿ ವಿಶೇಷ ಆಸಕ್ತಿ ಹೊಂದಿದ ಸುಂದರರಾಯರು ಈ ಕಾಲೇಜಿನಲ್ಲಿಯೂ ವಿದ್ಯಾರ್ಥಿಗಳು ಸಾಹಿತ್ಯ ಹಾಗೂ ಲಲಿತಕಲಾ ಚಟುವಟಿಕೆಗಳಲ್ಲಿ ಆಸಕ್ತಿಯಿಂದ ಭಾಗವಹಿಸುವಂತೆ ಪ್ರೇರಣೆ ನೀಡಿದರು. ಕಾಲೇಜು ಪ್ರಾರಂಭವಾದ ಎರಡನೇ ವರ್ಷಕ್ಕೇ ಕಾಲೇಜನ್ನು ಸೇರಿದ ಕು.ಶಿ. ಹರಿದಾಸ ಭಟ್ಟರೂ ಸ್ವತಃ ಸಾಹಿತ್ಯ, ಸಾಂಸ್ಕೃತಿಕ ಚಟುವಟಿಕೆಗಳಲ್ಲಿ ಆಸಕ್ತಿ ಹೊಂದಿದವರಾಗಿದ್ದು, ಅವರು ಕಡಿಯಾಳಿ ಪ್ರಾಥಮಿಕ ಶಾಲೆ, ಕ್ರಿಶ್ಚಿಯನ್ ಪ್ರೌಢಶಾಲೆಯಲ್ಲಿ ಅಧ್ಯಾಪಕರಾಗಿದ್ದ ಸಂದರ್ಭದಲ್ಲಿಯೇ ಈ ಕ್ಷೇತ್ರದಲ್ಲಿ ಸಾಕಷ್ಟು ಅನುಭವವನ್ನು ಹೊಂದಿದವರಾಗಿದ್ದರು. ಮುಂದೆ ಉಡುಪಿ ಕರ್ನಾಟಕ ಸಂಘದ ಓರ್ವ ಸಕ್ರಿಯ ಸದಸ್ಯನಾಗಿ ಅನೇಕ ಸಾಹಿತ್ಯ ಮತ್ತು ಸಾಂಸ್ಕೃತಿಕ ಚಟುವಟಿಕೆಗಳನ್ನು ನಿರ್ವಹಿಸಿದ ಅನುಭವವುಳ್ಳವರಾಗಿದ್ದರು. ಈ ಅನುಭವದ ಹಿನ್ನೆಲೆಯಲ್ಲಿ ಎಂ.ಜಿ.ಎಂ. ಕಾಲೇಜಿನ ಮೊದಲ ಪ್ರಾಂಶುಪಾಲರ ಬೆಂಬಲದೊಂದಿಗೆ ವಿವಿಧ ಸಾಹಿತ್ಯ ಮತ್ತು ಸಾಂಸ್ಕೃತಿಕ ಚಟುವಟಿಕೆಗಳಿಗೆ ಕಾಲೇಜಿನಲ್ಲಿ ಅವಕಾಶವನ್ನು ನೀಡುತ್ತಾ ಬಂದರು. 1964ರಲ್ಲಿ ಪ್ರೊ. ಕು.ಶಿ. ಹರಿದಾಸ ಭಟ್ಟರೇ ಪ್ರಾಂಶುಪಾಲರಾಗಿ ಜವಾಬ್ದಾರಿ ಸ್ವೀಕರಿಸಿದ ಅನಂತರ ಸಾಂಸ್ಕೃತಿಕ, ಸಾಹಿತ್ಯೋಪನ್ಯಾಸ ಚಟುವಟಿಕೆಯ ಹಂತದಿಂದ ಮುಂದುವರಿದು, ಸಾಹಿತ್ಯ ಚರ್ಚೆ, ಗೋಷ್ಠಿ, ಕಮ್ಮಟ, ಸಂವಾದ ಎಂಬಂತಹ ಬಗೆಬಗೆಯ ಸಾಹಿತ್ಯ ಚಟುವಟಿಕೆಗಳಿಗೆ ಅವಕಾಶ ಕಲ್ಪಿಸಿದರು. ಯಕ್ಷಗಾನದಂತಹ ಸಾಂಪ್ರದಾಯಿಕ ಕಲೆಯ ಕುರಿತಂತೆ ತರಬೇತಿ ನೀಡುವ ಸಂಸ್ಥೆಯೊಂದನ್ನು ಆಡಳಿತದ ಸಹಕಾರದಿಂದ ಕಾಲೇಜು ನಿವೇಶನದಲ್ಲಿಯೇ ಆರಂಭಿಸಿದರು. 'ಪ್ರಚಾರೋಪನ್ಯಾಸ ಮಾಲಿಕೆ' ಎಂಬ ಶೀರ್ಷಿಕೆಯಲ್ಲಿ ಸಾಹಿತ್ಯ ಕೃತಿಗಳ ಪ್ರಕಟನೆಗೂ ಮುಂದಾಗಿ, ಕನ್ನಡ ಕೃತಿಗಳು ಸುಲಭ ಲಭ್ಯವಾಗಿ ಜನಸಾಮಾನ್ಯರ ಕೈಗೆಟಕುವಂತೆ ನೋಡಿಕೊಂಡರು. ಉಡುಪಿಯ ಸಾಹಿತ್ಯಾಸಕ್ತರ ಸಹೃದಯರು ಕಾಲೇಜಿನ ವಿವಿಧ ಕಾಲೇಜಿನ ಚಟುವಟಿಕೆಗಳಲ್ಲಿ ಪಾಲ್ಗೊಳ್ಳುವಂತೆ ರವೀಂದ್ರ ಮಂಟಪ ಎಂಬ ವೇದಿಕೆಯಲ್ಲಿ ಶೈಕ್ಷಣಿಕ ವೇಳಾಪಟ್ಟಿಯ ಅನಂತರದಲ್ಲೇ ಅಂತಹ ಕಾರ್ಯಕ್ರಮಗಳನ್ನು ಸಂಯೋಜಿಸಿ, ಸಾರ್ವಜನಿಕರಿಗೂ ಕಾರ್ಯಕ್ರಮದಲ್ಲಿ ಪಾಲ್ಗೊಳ್ಳುವುದಕ್ಕೆ ಅವಕಾಶ ಮಾಡಿಕೊಟ್ಟರು.

ಕಾಲೇಜು ಅಸ್ತಿತ್ವಕ್ಕೆ ಬಂದ ಸ್ಥಳವು ಸೋದೆ ಮಠದಿಂದ ಉಚಿತವಾಗಿ ಪಡೆದ ಸ್ಥಳವಾಗಿದ್ದು, ಕಟ್ಟಡವು ವಿವಿಧ ವಿದ್ಯಾಭಿಮಾನಿ ಸಾರ್ವಜನಿಕರು, ಸಂಘ ಸಂಸ್ಥೆಗಳು ನೀಡಿದ ಉದಾರ ದೇಣಿಗೆಯಿಂದ ನಿರ್ಮಿಸಿದವುಗಳಾಗಿತ್ತು. ಉಪನ್ಯಾಸಕರ ವೇತನವನ್ನು ಸರಕಾರ ನೀಡುತ್ತಾ ಬಂದ ಕಾರಣ, ಕಾಲೇಜಿನ ಸಾಹಿತ್ಯ, ಸಾಂಸ್ಕೃತಿಕ ಚಟುವಟಿಕೆಗಳಿಗೆ ವಿದ್ಯಾರ್ಥಿಗಳು ನೀಡುತ್ತಿದ್ದ ಶುಲ್ಕದ ಒಂದಂಶವನ್ನಷ್ಟೇ ಬಳಸಿಕೊಂಡು ಪ್ರೊ. ಹರಿದಾಸ ಭಟ್ಟರು ಇಂತಹ ಚಟುವಟಿಕೆಗಳು ಕಾಲೇಜು ಆವರಣದಲ್ಲಿ ಸಾಂಗವಾಗಿ ನೆರವೇರುವಂತೆ ನೋಡಿಕೊಂಡರು. ಆಡಳಿತಕ್ಕೆ ವಿಶೇಷವಾದ ಯಾವುದೇ ಆರ್ಥಿಕ ಹೊರೆಯನ್ನು ಹೇರ್ಗಾಯಿಸದೇ ನಿರಂತರ ಕಾರ್ಯಕ್ರಮದ ಮೂಲಕ ಕಾಲೇಜು ವಿದ್ಯಾಭಿಮಾನಿಗಳಿಂದಲೂ, ಊರ–ಪರವೂರ ಸಾಹಿತ್ಯಾಭಿಮಾನಿಗಳಿಂದಲೂ ಮನ್ನಣೆಯನ್ನು ಗಳಿಸಿಕೊಂಡಿತು. ಇಂತಹ ಚಟುವಟಿಕೆಗಳಿಗೆ ಆಡಳಿತವು ಆರ್ಥಿಕ ಹೊರೆಯನ್ನು ಅಭಾಯಿಸುವ ಹೊಣೆ ಇರದಿದ್ದುದರಿಂದ ಕಾಲೇಜು ಆಡಳಿತ ಮಂಡಳಿಯು ಪ್ರಾಂಶುಪಾಲ ಪ್ರೊ. ಹರಿದಾಸ ಭಟ್ಟರನ್ನು ಮತ್ತಷ್ಟು ಪ್ರೋತ್ಸಾಹಿಸಿದರು.

ಪ್ರೊ. ಕು.ಶಿ. ಹರಿದಾಸ ಭಟ್ಟರು ಪ್ರಾಂಶುಪಾಲ ಹುದ್ದೆಯಿಂದ ನಿವೃತ್ತಿಗೊಂಡ ಅನಂತರ ಕಾಲೇಜು ಆವರಣದಲ್ಲಿ ತಾವೇ ಹುಟ್ಟುಹಾಕಿದ ಸಂಶೋಧನ ಕೇಂದ್ರದ ನಿರ್ದೇಶಕರಾಗಿ ಕಾಲೇಜು ಆಡಳಿತದ ಬೆಂಬಲದೊಂದಿಗೆ ಕರ್ನಾಟಕ ಸರಕಾರದ ಅನುದಾನವನ್ನು ಪಡೆದು, ತುಳು ನಿಘಂಟು ಯೋಜನೆಯನ್ನು ಹುಟ್ಟುಹಾಕಿ ಅದರ ಪ್ರಕಟನೆಗೆ ಮುಂದಾದರು. ಕೇಂದ್ರ–ರಾಜ್ಯ ಸಾಹಿತ್ಯ ಅಕಾಡೆಮಿಯ ಸಹಯೋಗದೊಂದಿಗೆ ವಿವಿಧ ಸಾಹಿತ್ಯ ಕಾರ್ಯಕ್ರಮಗಳನ್ನು ಸಂಯೋಜಿಸುತ್ತಾ ಮುಂದುವರಿದು, ಜಾನಪದ ಪ್ರದರ್ಶನ ಕಲೆಯ ಕುರಿತಾದ ಸಂಶೋಧನಾ ಚಟುವಟಿಕೆಯ ಕಡೆಗೆ ಗಮನಹರಿಸಿ, ಫೋರ್ಡ್ ಫೌಂಡೇಶನ್ ಅನುದಾನವನ್ನು ಪಡೆದು, ಈ ಚಟುವಟಿಕೆಯನ್ನು ಯಶಸ್ವಿಯಾಗಿ ಮುನ್ನಡೆಸಿದರು. ಹೀಗೆ ಸಾಹಿತ್ಯ ಚಟುವಟಿಕೆಯು ಎಂ.ಜಿ.ಎಂ. ಕಾಲೇಜು ಮತ್ತು ಆಡಳಿತಕ್ಕೆ ಸಾಕಷ್ಟು ಪ್ರಸಿದ್ಧಿಯನ್ನೂ, ಪ್ರಚಾರವನ್ನೂ ತಂದುಕೊಟ್ಟಿತು. ಈ ಪ್ರಸಿದ್ಧಿಗೆ ಪ್ರಚಾರ ನೀಡುವುದಕ್ಕೆ ಕಾಲೇಜಿನ ಆಡಳಿತವೇ ಹುಟ್ಟುಹಾಕಿದ್ದ ಮಣಿಪಾಲ ದಿನಪತ್ರಿಕೆ ಉದಯವಾಣಿಯು ಕಾಲಕಾಲಕ್ಕೆ ತನ್ನ ಕೊಡುಗೆಯನ್ನೂ ನೀಡಿತ್ತು. ಪ್ರೊ. ಹರಿದಾಸ ಭಟ್ಟರು ತಮ್ಮ ನಿವೃತ್ತಿಯ ತನಕ ಮೈಸೂರು ವಿಶ್ವವಿದ್ಯಾನಿಲಯದ ಸಹಕಾರವನ್ನು ಪಡೆದರೆ, ನಿವೃತ್ತಿಯ ಅನಂತರ ಗೋವಿಂದ ಪೈ ಸಂಶೋಧನ ಕೇಂದ್ರದ ಮೂಲಕ ನಡೆಸಿದ ಎಲ್ಲ ಸಾಹಿತ್ಯ ಚಟುವಟಿಕೆಗಳಿಗೆ ಮಂಗಳೂರು ವಿಶ್ವವಿದ್ಯಾನಿಲಯದ ಕನ್ನಡ ವಿಭಾಗದ ಸಹಕಾರವನ್ನು ಪಡೆದರು.

ಎಂ.ಜಿ.ಎಂ. ಕಾಲೇಜಿನ ಪ್ರಾಂಶುಪಾಲರ ಹುದ್ದೆಯಿಂದ ಪ್ರೊ. ಭಟ್ಟರು ನಿವೃತ್ತಿಹೊಂದಿದ ನಂತರ ಸೇವಾ ಹಿರಿತನವನ್ನಾಧರಿಸಿ, ಪ್ರಾಂಶುಪಾಲರ ಜವಾಬ್ದಾರಿಯನ್ನು ಸ್ವೀಕರಿಸಿದ ಉಪನ್ಯಾಸಕರು ಪ್ರಾಂಶುಪಾಲರಾಗಿ ಕು.ಶಿ. ಹರಿದಾಸ ಭಟ್ಟರು ಕಾಲೇಜಿನಲ್ಲಿ ಹುಟ್ಟುಹಾಕಿದ ಚಟುವಟಿಕೆಗಳನ್ನಷ್ಟೇ ಪರಂಪರೆ ಎಂಬಂತೆ ಮುಂದುವರಿಸಿಕೊಂಡು ಬಂದರೇ ಹೊರತು ಬೇರೆ ಯಾವುದೇ ಚಟುವಟಿಕೆಗಳನ್ನು ಹೊಸದಾಗಿ ಹುಟ್ಟು ಹಾಕುವುದಕ್ಕೆ ಮುಂದಾಗಲಿಲ್ಲ. ಈ ಕಾರಣಕ್ಕಾಗಿ ಈ ಕಾಲೇಜಿನ ಚಟುವಟಿಗಳನ್ನು ಪರಂಪರಾತ್ಮಕ ಚಟುವಟಿಕೆ ಎಂದು ಈ ಅಧ್ಯಯನದಲ್ಲಿ ಉಲ್ಲೇಖಿಸಲಾಗಿದೆ. ಕಾಲೇಜಿನ ಬೆಳ್ಳಿಹಬ್ಬ, ಚಿನ್ನದ ಹಬ್ಬ, ಎರಡೂ ದೊಡ್ಡಮಟ್ಟದ ಕಾರ್ಯಕ್ರಮಗಳು ಪ್ರೊ. ಕು.ಶಿ. ಅವರ ನಿರ್ದೇಶನ ಮತ್ತು ಮಾರ್ಗದರ್ಶನದಲ್ಲೇ ನಡೆದುವು. ಅವರ ಮಾರ್ಗದರ್ಶನದಲ್ಲಿ ಅವರ ಅನೇಕ ಶಿಷ್ಯರು ಸಾಹಿತ್ಯ ವಿಷಯದಲ್ಲಿ ಉನ್ನತ ಶಿಕ್ಷಣವನ್ನು ಪಡೆದು, 21ನೇ

ತಮಾನದಲ್ಲಿ ಉಡುಪಿ ಜಿಲ್ಲೆಯಾದ್ಯಂತ ಅನೇಕ ಕನ್ನಡ ಸಾಹಿತ್ಯ ಚಟುವಟಿಕೆಗಳಲ್ಲಿ ಮತ್ತು ಸಂಘಟನೆಗಳಲ್ಲಿ ೊಡಗಿಕೊಂಡಿರುವುದನ್ನು ಗಮನಿಸಲಾಗಿದೆ. ಇದರಲ್ಲಿ ಮೊದಲು ಉಲ್ಲೇಖಿಸಬೇಕಾದ ಹೆಸರು ಇತ್ತೀಚೆಗೆ ನಿಧನರಾದ ಜಯನಾಥ ಶೆಣೈ (2017) ಅವರದು.ಇದೇ ರೀತಿ ಕನ್ನಡ ಸಾಹಿತ್ಯಚಟುವಟಿಕೆಗಳಲ್ಲಿ ಗುರುತಿಸಿಕೊಂಡ ಪ್ರೊ. ಮುರಳೀಧರ ುಪಾಧ್ಯ ಹಿರಿಯಡಕ, ಡಾ. ಮಹಾಬಲೇಶ್ವರ ರಾವ್, ಡಾ. ಪಟ್ಟಾಭಿರಾಮ ಸೋಮಯಾಜಿ, ಡಾ. ಹಯವದನ ಉಪಾಧ್ಯ, ಡಾ. . ಭಾಸ್ಕರ ಮಯ್ಯ, ಎಸ್. ನಾರಾಯಣ ಮಡಿ, ಪ್ರೊ. ಎಂ.ಎಲ್. ಸಾಮಗ, ಎ. ಈಶ್ವರಯ್ಯ, (ತುಷಾರ ಸಂಪಾದಕರಾಗಿ ವೃತ್ತರಾದವರು) ಈ ಮುಂತಾದವರನ್ನು ಅವಶ್ಯ ಉಲ್ಲೇಖಿಸಲೇ ಬೇಕಾಗಿದೆ. ಬಿ.ವಿ. ಕೆದಿಲಾಯ (ಬೆಂಗಳೂರು) ಬಾಲಕೃಷ್ಣ ಾಮಗ (ದೆಹಲಿ), ಪಾಂಡೇಶ್ವರ ಚಂದ್ರಶೇಖರ ಚಡಗ (ಬೆಂಗಳೂರು) ಎನ್. ನಾರಾಯಣ ಬಲ್ಲಾಳ್ (ಬೆಂಗಳೂರು), ಡಾ. ್ಯಾಸರಾವ್ ನಿಂಜೂರು (ಮುಂಬಯಿ) ಈ ಮುಂತಾದವರು ಜಿಲ್ಲೆಯ ಹೊರಗೆ ಸಾಹಿತ್ಯ ಚಟುವಟಿಕೆಗಳಲ್ಲಿ ುರುತಿಸಿಕೊಂಡವರಾಗಿದ್ದಾರೆ. 21ನೇ ಶತಮಾನದ ಆರಂಭದಿಂದ ಜಾಗತೀಕರಣದ ಪರಿಣಾಮವಾಗಿ ವಾಣಿಜ್ಯ ಹಾಗೂ ಜ್ಞಾನ ವಿಷಯಗಳಿಗಿರುವ ಬೇಡಿಕೆಯ ಕಾರಣಗಳಿಂದ ಮಾನವಿಕ ವಿಷಯಗಳಿಗೆ ಸೇರ್ಪಡೆಗೊಳ್ಳುವ ವಿದ್ಯಾರ್ಥಿಗಳ ಂಖ್ಯೆಯಲ್ಲಿ ಇಳಿಕೆ ಕಂಡುಬಂದಿದ್ದು, ಕೇವಲ ನ್ಯಾಕ್ ಮೌಲ್ಯಮಾಪನಕ್ಕಷ್ಟೇ ಸೀಮಿತಗೊಂಡು ಸಾಹಿತ್ಯ ಚಟುವಟಿಕೆಗಳು ತ್ತೀಚಿನ ದಿನಗಳಲ್ಲಿ ನಿರ್ವಹಿಸಲ್ಪಡುತ್ತಿರುವುದನ್ನು ಈ ಅಧ್ಯಯನದ ಸಂದರ್ಭದಲ್ಲಿ ಕಂಡುಕೊಳ್ಳಲಾಗಿದೆ. ಪ್ರೊ. ಕು.ಶಿ. ರಿದಾಸ ಭಟ್ಟರ ಕಾಲಾನಂತರದಲ್ಲಿ ಕಾಲೇಜಿನಲ್ಲಿ ಸಾಹಿತ್ಯ ಚಟುವಟಿಕೆಗಳು ವಿರಳಗೊಂಡ ಕಾರಣ ಈ ಅವಧಿಯಲ್ಲಿ ಪದವಿ ುಗಿಸಿ ಹೊರಬಂದ ವಿದ್ಯಾರ್ಥಿಗಳು ಸಾಹಿತ್ಯ ಚಟುವಟಿಕೆಗಳಲ್ಲಿ ತೊಡಗಿರುವ ನಿದರ್ಶನಗಳು ವಿರಳವಾಗಿದೆ.

1949ರಲ್ಲಿ ಆರಂಭಗೊಂಡ ಈ ಕಾಲೇಜಿಗೆ 1977ರ ತನಕವೂ ಕಾಲೇಜಿನ ಸಮೀಪದ ಇಂದ್ರಾಳಿ, ಬುಡ್ನಾರು ಪ್ರದೇಶದ ಯಾವುದೇ ಪರಿಶಿಷ್ಟ ಜಾತಿ, ಪಂಗಡದ ವಿದ್ಯಾರ್ಥಿಗಳು ಸೇರ್ಪಡೆಯ ಅವಕಾಶ ಪಡೆದುಕೊಳ್ಳಲಿಲ್ಲ ಎಂಬುದು ಕಾಲೇಜು ಾಖಲೆಗಳಿಂದ ತಿಳಿದುಬರುತ್ತದೆ. 1973ರ ಭೂ ಮಸೂದೆಯ ಪರಿಣಾಮವಾಗಿ ಈ ಭಾಗದ ರೈತಾಪಿ ಜನರು ಉಡುಪಿ ಮಠಕ್ಕೆ ೇಣಿ ಸಲ್ಲಿಸಬೇಕಾದ ಅಗತ್ಯ ಇಲ್ಲದ ಕಾರಣ ಅನಂತರದಲ್ಲಷ್ಟೇ ಈ ಪರಿಸರದ ರೈತಾಪಿ ವರ್ಗದ ಮಕ್ಕಳು ಕಾಲೇಜು ಕ್ಷಣವನ್ನು ಪಡೆಯುವುವಂತಾಯಿತು ಎನ್ನುವುದನ್ನು ಈ ಅಧ್ಯಯನದಲ್ಲಿ ಗುರುತಿಸಲಾಗಿದೆ. ಕಾಲೇಜಿನ ಮುಂಭಾಗದ ಸುಮಾರು .00 ಎಕ್ರೆ ಸ್ಥಳವು ಪರಿಶಿಷ್ಟ ಜಾತಿ ಜನಾಂಗದವರ ಕಾಲನಿಯಾಗಿದ್ದು, ಈ ಕಾಲನಿಯ ಪರಿಶಿಷ್ಟ ವರ್ಗದ ಯಾವೊಬ್ಬ ದ್ಯಾರ್ಥಿಯೂ 1982ರ ವರೆಗೂ ಕಾಲೇಜು ಶಿಕ್ಷಣದ ಅವಕಾಶವನ್ನು ಪಡೆದುಕೊಳ್ಳಲಿಲ್ಲ. ಸಮೀಪದ ಬೋರ್ಡ್ ೈಸ್ಕೂಲಿನಲ್ಲಿ ಮೆಟ್ರಿಕ್ ಶಿಕ್ಷಣವನ್ನು ಪಡೆದ ಈ ವರ್ಗದ ಶಿಕ್ಷಿತರು ಪರಿಸರದ ಖಾಸಗಿ ಮತ್ತು ಅರೆ ಸರಕಾರಿ ಬ್ಯಾಂಕುಗಳಲ್ಲಿ ಡಿ' ದರ್ಜೆಯ ಹುದ್ದೆಯನ್ನು ಪಡೆಯುಷ್ಟರಲ್ಲೇ ತೃಪ್ತರಾದರು. ಕಾಲೇಜಿನ ಬೆಳ್ಳಿ ಹಬ್ಬದ ಪ್ರಯುಕ್ತ ವ್ಯವಸ್ಥೆಗೊಳಿಸಿದ ಸ್ತುಪ್ರದರ್ಶನದ ವೀಕ್ಷಣೆಗೆ ಈ ಜನಾಂಗದ ಶಾಲೆ ಬಿಟ್ಟ ವಿದ್ಯಾರ್ಥಿಗಳು ಪ್ರವೇಶ ನೀಡಿದ ಸಂದರ್ಭದಲ್ಲಿ ಕಾರ್ಯಕ್ರಮದ ್ಯವಸ್ಥೆಯನ್ನು ನೋಡಿಕೊಳ್ಳುವ ಸ್ವಯಂಸೇವಕರು ಅಲ್ಲಿಂದ ಬಲಾತ್ಕಾರವಾಗಿ ಹಿಂದಕ್ಕೆ ಕಳುಹಿಸಿದರು ಎಂಬ ನೋವಿನ ಂಗತಿಯನ್ನು ಅಂದು ಬಾಲಕರಾಗಿದ್ದ ಈಗ ಪ್ರೌಢರಾದ ಮಂದಿ ಇಂದಿಗೂ ನೆನಪಿಸಿಕೊಳ್ಳುತ್ತಾರೆ. ಒಟ್ಟಿನಲ್ಲಿ ಎಂ.ಜಿ.ಎಂ. ಾಲೇಜಿನ ಸಾಹಿತ್ಯಚಟುವಟಿಕೆ ಹಾಗೂ ಸಾಹಿತ್ಯಚಟುವಟಿಕೆಗಳಲ್ಲಿ ಒಳಗೊಂಡ ಎಲ್ಲ ಪಾಲುದಾರರೂ ಕೇವಲ

ಆರ್ಥಿಕವಾಗಿಯೂ, ಸಾಮಾಜಿಕವಾಗಿಯೂ ಬಲಿಷ್ಠ ವರ್ಗದವರೆನ್ನುವುದನ್ನು ಸಾಹಿತ್ಯಚಟುವಟಿಕೆಯ ಇತಿಹಾಸದ ಅಧ್ಯಯನದಿಂದ ಅರ್ಥೈಸಿಕೊಳ್ಳಬಹುದಾಗಿದೆ.

**ಶ್ರೀ ಭುವನೇಂದ್ರ ಕಾಲೇಜು ಕಾರ್ಕಳ:**

ಗೌಡ ಸಾರಸ್ವತ ಕುಲಬಾಂಧವರ ಶ್ರೀವೆಂಕಟರಮಣ ದೇಗುಲಕ್ಕೆ ಸೇರಿದ ಸ್ಥಳ ಮತ್ತು ಕಟ್ಟಡದಲ್ಲಿ ಸಾಂಪ್ರದಾಯಿಕ ಶಿಕ್ಷಣಕ್ಕೆ ಬರುವ ವಿದ್ಯಾರ್ಥಿಗಳ ಸಂಖ್ಯೆ ಸ್ಥಗಿತಗೊಂಡು ವಿದ್ಯಾಸಂಸ್ಥೆಯು ತನ್ನ ಶೈಕ್ಷಣಿಕ ಚಟುವಟಿಕೆಗಳಿಗೆ ಪೂರ್ಣವಿರಾಮ ನೀಡಿತು. ಇದೇ ಸ್ಥಳವನ್ನು ಮಣಿಪಾಲ ಅಕಾಡೆಮಿ ಸಂಸ್ಥೆಯು ಆಧುನಿಕ ಶಿಕ್ಷಣದ ಶ್ರೀ ಭುವನೇಂದ್ರ ಕಾಲೇಜಿನ ಸ್ಥಾಪನೆಗಾಗಿ ದೇಗುಲದ ಆಡಳಿತದ ವತಿಯಿಂದ ದಾನವಾಗಿ ಪಡೆಯಿತು. ಕಾಲೇಜು ಆರಂಭಗೊಂಡ ಎರಡನೇ ವರ್ಷದಲ್ಲಿಯೇ ಪ್ರೊ. ಎಂ. ರಾಮಚಂದ್ರ ಅವರು ಕನ್ನಡ ಉಪನ್ಯಾಸಕರಾಗಿ ಆಯ್ಕೆಗೊಂಡು ಕಾಲೇಜಿನಲ್ಲಿ ಸಾಹಿತ್ಯ ಸಂಘವನ್ನು ಸ್ಥಾಪಿಸಿ, ಈ ಸಂಘದ ಮೂಲಕ ಸಾಹಿತ್ಯ ಉಪನ್ಯಾಸ ಕಾರ್ಯಕ್ರಮಗಳನ್ನು ವಿಚಾರಗೋಷ್ಠಿಯನ್ನು ಹಮ್ಮಿಕೊಂಡು ವಿದ್ಯಾರ್ಥಿಗಳಲ್ಲಿ ಸಾಹಿತ್ಯಾಸಕ್ತಿಯನ್ನು ರೂಢಿಕೊಳ್ಳುವಂತೆ ಪ್ರೇರೇಪಿಸಿದರು. ರಾಜ್ಯದ ವಿವಿಧ ಭಾಗದ ಸಾಹಿತಿ/ಬರಹಗಾರರನ್ನು ಸಂಪನ್ಮೂಲ ವ್ಯಕ್ತಿಗಳಾಗಿ ಆಹ್ವಾನಿಸಿ, ವಿವಿಧ ವಿಷಯಗಳಲ್ಲಿ ಸಾಹಿತ್ಯಗೋಷ್ಠಿ, ಉಪನ್ಯಾಸ ಕಾರ್ಯಕ್ರಮಗಳನ್ನು ನಿರಂತರವಾಗಿ ವ್ಯವಸ್ಥೆಗೊಳಿಸಿದರು. ಸಾಹಿತ್ಯ ಉಪನ್ಯಾಸದ ವಿಷಯ ಹಾಗೂ ಸಂಯೋಜನ ಕ್ರಮದಲ್ಲೂ ಶಿಸ್ತುಬದ್ಧತೆಯನ್ನು ಕಾಪಾಡಿಕೊಂಡು ಬಂದ ರಾಮಚಂದ್ರರು ಸಾಹಿತ್ಯ ಕಾರ್ಯಕ್ರಮದ ಅಚ್ಚುಕಟ್ಟಿಗಾಗಿಯೂ ಕಾರ್ಕಳದಲ್ಲಿ ಮಾತ್ರವಲ್ಲ ಉಡುಪಿ ಜಿಲ್ಲೆಯಲ್ಲಿಯೇ ಗುರುತಿಸಿಕೊಂಡರು. ರಾಮಚಂದ್ರರ ಸಹೋದ್ಯೋಗಿ ಪ್ರೊ. ಚನ್ನಕೇಶವರ ಪೂರಕ ಸಹಕಾರ ಹಾಗೂ ಪ್ರಾಂಶುಪಾಲರಾಗಿದ್ದ ಪ್ರೊ. ದಾಮೋದರ ಕಿಣಿಯವರ ಬೆಂಬಲದಿಂದಾಗಿ ತನ್ನೆಲ್ಲಾ ಕಾರ್ಯಚಟುವಟಿಕೆಗಳನ್ನು ತನ್ನ ಸೇವೆಯ ಉದ್ದಕ್ಕೂ ಅಚ್ಚುಕಟ್ಟಾಗಿ ನಿರ್ವಹಿಸಿದ್ದರು. ವಿದ್ಯಾರ್ಥಿಗಳಲ್ಲಿ ಸಾಹಿತ್ಯ ಕೃತಿಯ ಸ್ವಾರಸ್ಯವನ್ನು ಮನಗಾಣಿಸುವುದಕ್ಕಾಗಿ ರಂಜನಾತ್ಮಕ ಚಟುವಟಿಕೆಗಳಿಗೆ ಹೆಚ್ಚಿನ ಆದ್ಯತೆ ನೀಡಿರುವುದು ರಾಮಚಂದ್ರರ ಸಾಹಿತ್ಯ ಚಟುವಟಿಕೆಯ ವೈಶಿಷ್ಟ್ಯವೆನ್ನಬಹುದಾಗಿದೆ. ಸೀಮಿತ ಸಂಖ್ಯೆಯಲ್ಲೇ ಸಂವಾದ ಕಾರ್ಯಕ್ರಮಗಳಿಗೆ ಅವಕಾಶ ನೀಡುತ್ತಾ ಸಾಹಿತ್ಯ ಕೃತಿಯ ಹೃದ್ಯ ಸಂಗತಿಗಳನ್ನು ವಿದ್ಯಾರ್ಥಿ ಮತ್ತು ಸಹೋದ್ಯೋಗಿ ವೃಂದಕ್ಕೆ ಸಂಪನ್ಮೂಲ ವ್ಯಕ್ತಿಗಳ ಮೂಲಕ ಸೋದಾರಣವಾಗಿ ವಿವರಿಸುತ್ತಾ, ವಿದ್ಯಾರ್ಥಿಗಳಲ್ಲಿ ಸಾಹಿತ್ಯಾಸಕ್ತಿಯನ್ನು ಪ್ರಚೋದಿಸುವುದೇ ಪ್ರೊ. ರಾಮಚಂದ್ರ ಅವರ ಮುಖ್ಯ ಉದ್ದೇಶವಾಗಿತ್ತು ಎನ್ನುವುದನ್ನು ಕಾಲೇಜಿನ ಸಾಹಿತ್ಯ ಚಟುವಟಿಕೆಗಳ ಅಧ್ಯಯನದಿಂದ ಮನಗಾಣಲಾಗಿದೆ.

ಕುವೆಂಪು ಒಬ್ಬರನ್ನು ಹೊರತುಪಡಿಸಿ, ಕರ್ನಾಟಕದ ಎಲ್ಲ ಸಾಹಿತಿ ಬರಹಗಾರರನ್ನು ಕಾಲೇಜಿಗೆ ಆಹ್ವಾನಿಸಿ, ವಿದ್ಯಾರ್ಥಿಗಳಿಗೆ ಸಾಹಿತ್ಯ ಚಟುವಟಿಕೆಯ ಮೂಲಕ ಸಾಹಿತ್ಯ ಪಥ್ಯದ ಸ್ವರೂಪ ಮತ್ತು ಉದ್ದೇಶವನ್ನು ತಿಳಿಸಿಕೊಟ್ಟರು. ಆದರೆ ವಾರ್ಷಿಕ ಸಂಚಿಕೆಯಲ್ಲಿ ಪ್ರಕಟವಾದ ವಿದ್ಯಾರ್ಥಿಗಳ ಲಿಖಿತ ಬರಹಗಳ ಮಟ್ಟ ಇತರ ಕಾಲೇಜುಗಳ ವಿದ್ಯಾರ್ಥಿಗಳ ಮಟ್ಟಕ್ಕೆ ಹೋಲಿಸಿದಾಗ ಕಳಪೆಯಾಗಿ ಕಂಡುಬರುತ್ತದೆ ಎನ್ನುವುದು ಈ ಕಾಲೇಜಿನ ಲಿಖಿತ ಚಟುವಟಿಕೆಯ ಬಗೆಗೆ ಉಲ್ಲೇಖಿಸಲೇಬೇಕಾದ ಅಂಶವಾಗಿದೆ. ಯಾವುದೇ ವರ್ಷದ ವಾರ್ಷಿಕ ಸಂಚಿಕೆಯಲ್ಲೂ ಕಾರ್ಕಳ ಪರಿಸರದ ಜಾನಪದ ಚಟುವಟಿಕೆಗಳ ವಿವರಗಳುಳ್ಳ ಕಥೆ, ಕವನ, ಆಚರಣೆಗಳ ಸಂಬಂಧಿತ ಲೇಖನಗಳು ಇಲ್ಲದಿರುವುದು ಈ ಕಾಲೇಜಿನ ಸಂಚಿಕೆಯ

ುರುತರವಾದ ಕೊರತೆ ಎನ್ನುವುದನ್ನು ಅಧ್ಯಯನದ ಸಂದರ್ಭದಲ್ಲಿ ಗಮನಿಸಲಾಗಿದೆ. ಸ್ಥಳೀಯ ಸಾಹಿತಿಗಳ ಕುರಿತಾದ ಯಾವುದೇ ವಿವರಗಳಾಗಲೀ ಅಥವಾ ಆ ಸಾಹಿತಿಗಳ ಉಪನ್ಯಾಸದ ವಿವರಗಳ ಕುರಿತಾಗಿಯಾಗಲೀ ಯಾವುದೇ ಮಾಹಿತಿಗಳು ಂಚಿಕೆಯ ಮೂಲಕ ಪ್ರಕಟಗೊಳ್ಳದಿರುವುದು ಈ ಕಾಲೇಜಿನ ವಾರ್ಷಿಕ ಸಂಚಿಕೆಯಲ್ಲಿ ಕಂಡುಬಂದ ಒಂದು ಕೊರತೆ ನ್ನುವುದನ್ನು ಅಧ್ಯಯನದಲ್ಲಿ ಕಂಡುಕೊಳ್ಳಲಾಗಿದೆ.

**ಂಡಾರ್ಕಾರ್ಸ್ ಕಾಲೇಜು ಕುಂದಾಪುರ:**

20ನೇ ಶತಮಾನದಲ್ಲಿ 37 ವರ್ಷಗಳ ಇತಿಹಾಸವುಳ್ಳ ಈ ಕಾಲೇಜು ಪ್ರಾರಂಭದಿಂದಲೂ ಸಾಹಿತ್ಯ ಚಟುವಟಿಕೆಗಳಿಗೆ ಶೇಷ ಪ್ರೋತ್ಸಾಹ ನೀಡುತ್ತಾ ಬಂದಿದೆ. ಯಡ್ತರೆ ಮಂಜಯ್ಯ ಶೆಟ್ಟಿಯವರು ಈ ಭಾಗದ ಶಾಸಕರಾಗಿದ್ದ ಸಂದರ್ಭದಲ್ಲಿ ಾಲೇಜಿಗೆ ಅವಶ್ಯವಾಗಿದ್ದ ಸರ್ಕಾರಿ ಸ್ಥಳವನ್ನು ಕಾಲೇಜಿನ ವಶಕ್ಕೆ ನೀಡುವಲ್ಲಿ ಬಹುಮುಖ್ಯ ಪಾತ್ರವನ್ನು ವಹಿಸಿದ್ದರು.

ಭಂಡಾರ್ಕರ್ ಎಂಬ ಗೌಡ ಸಾರಸ್ವತ ವೈದ್ಯರೊಬ್ಬರು ನೀಡಿದ ಬೃಹತ್ ಮೊತ್ತದ ಹಣಕಾಸು ಹಾಗೂ ಇದಕ್ಕೆ ೂರಕವಾಗಿ ಇನ್ನಿತರ ಖಾಸಗಿ ವ್ಯಕ್ತಿಗಳಿಂದ ದೊರೆತ ಹಣಕಾಸಿನ ನೆರವಿನಿಂದ ಕಾಲೇಜಿನ ಶೈಕ್ಷಣಿಕ ಅವಶ್ಯಕತೆಗಳು ಯಾಥಾಸಾಧ್ಯವಾಗಿ ಪೂರೈಸಲ್ಪಟ್ಟಿದ್ದವು.

ಕಾಲೇಜಿನಲ್ಲಿ ಸಾಹಿತ್ಯ ಚಟುವಟಿಕೆಗಳು ಚುರುಕುಗೊಂಡಲ್ಲಿ ಸಮಾಜದಿಂದ ಗುರುತಿಸಿಕೊಳ್ಳಲು ಸಾಧ್ಯ ಮತ್ತು ಮಾಜಕ್ಕೆ ಸಂಸ್ಥೆಯ ಬಗೆಗೆ ಸದಭಿಪ್ರಾಯವು ಸಂವಹನಗೊಳ್ಳುವುದು ಎಂಬ ಸತ್ಯವು ಎಂ.ಜಿ.ಎಂ. ಕಾಲೇಜಿನ ಸಾಹಿತ್ಯ ಟುವಟಿಕೆಗಳಿಂದ ಕಾಲೇಜು ಆಡಳಿತವು ಮತ್ತು ಅಲ್ಲಿನ ಪ್ರಾಂಶುಪಾಲರು ಅರ್ಥೈಸಿಕೊಂಡಿದ್ದರು. ಆದುದರಿಂದಲೇ ಶೈಕ್ಷಣಿಕ ತ್ಯಕ್ಕೆ ಪೂರಕವಾಗಿ ಕಾಲೇಜಿನಲ್ಲಿ ಸಾಕಷ್ಟು ಚಟುವಟಿಕೆಗಳಿಗೆ ಪ್ರಾಂಶುಪಾಲರು ಅವಕಾಶ ಮಾಡಿಕೊಟ್ಟರು ಮತ್ತು ಈ ಟುವಟಿಕೆಗಳಿಗೆ ಆಡಳಿತವು ಪೂರಕ ಬೆಂಬಲವನ್ನು ನೀಡಿತು. ಕಾಲೇಜಿಗೆ ಬೇಕಾದ ಸ್ಥಿರಸೊತ್ತು, ಸರಕಾರ ಹಾಗೂ ಾರ್ವಜನಿಕರಿಂದ ಲಭ್ಯವಾಗಿದ್ದು, ಉಪನ್ಯಾಸಕರ ವೇತನಕ್ಕೂ ಸರಕಾರಿ ಅನುದಾನವು ಲಭ್ಯವಾದ ಕಾರಣ ವಿದ್ಯಾರ್ಥಿಗಳಿಂದ ಂಗ್ರಹಿಸಿದ ಶುಲ್ಕದ ಕನಿಷ್ಠ 10%ನ್ನು ಸಾಹಿತ್ಯಚಟುವಟಿಕೆಗಳಿಗಾಗಿ ಕಾಲೇಜು ವಿನಿಯೋಗಿಸಿಕೊಂಡು ಬರುತ್ತಾ ತಾಲೂಕಿನ ಮುಖ್ಯ ಾಲೇಜಾಗಿ ಗುರುತಿಸಿಕೊಂಡಿತು.

ಕಾಲೇಜಿನ ಸಾಹಿತ್ಯ ಚಟುವಟಿಕೆಗಳಿಗೆ ಎರಡನೇ ಘಟ್ಟದಲ್ಲಿ (1975 ರಿಂದ) ಮಹತ್ವ ನೀಡಿದವರು ಡಾ. ಎಚ್. ಾಂತಾರಾಮ್ ಎಂಬ ವಿಚಾರವು ಕಾಲೇಜಿನ ಲಭ್ಯ ಸಂಚಿಕೆಗಳಿಂದ ತಿಳಿದುಬರುತ್ತದೆ. ಮಣಿಪಾಲ ವೈದ್ಯಕೀಯ ಕಾಲೇಜಿನಲ್ಲಿ ುಪನ್ಯಾಸಕರಾಗಿದ್ದ ಇವರನ್ನು ಆಡಳಿತವು ಪ್ರಾಂಶುಪಾಲರ ಜವಾಬ್ದಾರಿಯನ್ನು ನಿರ್ವಹಿಸುವಂತೆ ಭಂಡಾರ್‌ಕಾರ್ಸ್ ಕಾಲೇಜಿಗೆ ಳುಹಿಸಿದರು. ಪ್ರಾಂಶುಪಾಲರ ಜವಾಬ್ದಾರಿಯನ್ನು ನಿರ್ವಹಿಸುವ ಸಂದರ್ಭದಲ್ಲಿ ಕಾಲೇಜಿನ ಶೈಕ್ಷಣಿಕ ಚಟುವಟಿಕೆಗೆ ೂರಕವಾಗಿ ವಿವಿಧ ಬಗೆಯ ಸಾಹಿತ್ಯ ಚಟುವಟಿಕೆಗಳಿಗೆ ಅವಕಾಶ ನೀಡಿದರು. ಸಾಂಸ್ಕೃತಿಕ ಚಟುವಟಿಕೆಯ ಅಂಗವಾಗಿ ನಾಟಕ, ಕ್ಷಗಾನ, ಭಾವಗೀತೆ, ಭಕ್ತಿಗೀತೆ, ಹರಿಕಥೆ, ತಾಳಮದ್ದಳೆ ಮುಂತಾದ ಚಟುವಟಿಕೆಗಳಲ್ಲಿ ಸ್ವತಃ ಆಸಕ್ತರಾದ ಶಾಂತಾರಾಮ್ ವರು ಈ ಎಲ್ಲ ಕಾರ್ಯಕ್ರಮಗಳೂ ಕಾಲೇಜಲ್ಲಿ ವ್ಯವಸ್ಥಿತವಾಗಿ ನಿರ್ವಹಿಸುವಂತೆ ನೋಡಿಕೊಂಡರು. ಅದೇ ರೀತಿಯಲ್ಲಿ ಾಹಿತ್ಯ ಚಟುವಟಿಕೆಯ ಅಂಗವಾಗಿ ಸಾಹಿತ್ಯ ಉಪನ್ಯಾಸ, ಸಾಹಿತ್ಯಗೋಷ್ಠಿ, ಸಾಹಿತ್ಯಸಂವಾದ ಹಾಗೂ ವಾರ್ಷಿಕ ಸಂಚಿಕೆಗಳ

್ರಕಟಣೆ ಈ ಮುಂತಾದ ಭಿನ್ನ ಚಟುವಟಿಕೆಗಳು ಕ್ರಮವತ್ತಾಗಿ ನಿರ್ವಹಿಸುವುದಕ್ಕೆ ಅವಕಾಶ ಕಲ್ಪಿಸಿಕೊಟ್ಟರು. ಈ ತೆರನಾದ ಾಹಿತ್ಯಚಟುವಟಿಕೆಗಳ ಅಭಿವ್ಯಕ್ತಿಗೆ ಡಾ. ಶಾಂತಾರಾಮ್ ಅವರು ಆಸಕ್ತಿ ವಹಿಸುವದಕ್ಕೆ ಅವರ ಸ್ವಂತ ಆಸಕ್ತಿ ಮತ್ತು ಪ್ರವೃತ್ತಿ ಂದು ಕಾರಣವಾದರೆ, ಈ ಚಟುವಟಿಕೆಗಳ ಮುಖೇನ ಕಾಲೇಜಿನ ಖ್ಯಾತಿ ಮತ್ತು ಹಿರಿಮೆ ಹೆಚ್ಚುವುದು ಎಂಬ ಕಾರಣದಿಂದ ಂತಹ ಚಟುವಟಿಕೆಗಳಿಗೆ ಅವಕಾಶ ಕಲ್ಪಿಸಿದರು. ಈ ಕಾರಣದಿಂದಲೇ ಈ ಕಾಲೇಜಿನ ಚಟುವಟಿಕೆಯನ್ನು ಈ ಅಧ್ಯಯನದ ಂದರ್ಭದಲ್ಲಿ ಪ್ರದರ್ಶನಾತ್ಮಕ ಚಟುವಟಿಕೆ ಎಂದು ಗುರುತಿಸಲಾಗಿದೆ. ತಮ್ಮ ಜವಾಬ್ದಾರಿಯನ್ನು ಮುಗಿಸಿ, ಮುಂದಿನ ್ರಾಂಶುಪಾಲರಿಗೆ ತಮ್ಮ ಜವಾಬ್ದಾರಿಯನ್ನು ಹಸ್ತಾಂತರಿಸಿ, ತಾವು ಮಣಿಪಾಲದ ಎಲ್ಲಾ ಪದವಿ ಕಾಲೇಜಿನ ಉಸ್ತುವಾರಿ ಭಾಯಿಸುವ ಆಡಳಿತಾಧಿಕಾರಿಯಾಗಿ ಕರ್ತವ್ಯ ನಿರ್ವಹಿಸುವುದಕ್ಕೆ ತೊಡಗಿದರು. ತಮ್ಮ ಅಧಿಕಾರಾವಧಿಯಲ್ಲಿ ತಮ್ಮ ಅಧೀನದ ಲ್ಲ ಕಾಲೇಜಿನ ಪ್ರಾಂಶುಪಾಲರಿಗೂ ಇದೇ ಸೂತ್ರವನ್ನು ತಿಳಿಸಿಕೊಟ್ಟರು. ಈ ಸೂತ್ರದಂತೆ ಸಾರ್ವಜನಿಕ ವಿದ್ಯಾಭಿಮಾನಿ ಾನಿಗಳ ಆರ್ಥಿಕ ಸಹಕಾರದೊಂದಿಗೆ ಸಾಹಿತ್ಯಚಟುವಟಿಕೆಗಳನ್ನು ನಿರ್ವಹಿಸಿ, ಕಾಲೇಜು ಸಮಾಜದಿಂದ ಗುರುತಿಸಿಕೊಳ್ಳುವಂತೆ ್ರಮಿಸುವುದು, ಉಪನ್ಯಾಸಕವೃಂದದವರನ್ನು, ವಿದ್ಯಾರ್ಥಿಸಮೂಹವನ್ನು ಈ ತೆರನಾದ ಚಟುವಟಿಕೆಗಳಲ್ಲಿ ಭಾಗವಹಿಸುವಂತೆ ್ರೇರೇಪಿಸಬೇಕು ಎಂಬೀ ಧೋರಣೆಯನ್ನು ಸಾಕಾರಗೊಳ್ಳುವಂತೆ ನೋಡಿಕೊಂಡರು. ಆದರೆ ಕುಂದಾಪುರ ಮತ್ತು ಉಡುಪಿಯಲ್ಲಿ ದು ಯಶಸ್ಸು ಕಂಡಂತೆ ಉಳಿದೆಡೆಗಳಲ್ಲಿ ಯಶಸ್ಸು ಕಾಣಲಿಲ್ಲ.

**ೂರ್ಣಪ್ರಜ್ಞ ಕಾಲೇಜು ಉಡುಪಿ:**

ಉಡುಪಿ ಅದಮಾರು ಮಠದ ವಿಬುಧೇಶತೀರ್ಥ ಸ್ವಾಮೀಜಿಯವರು ಉಡುಪಿಯಿಂದ 25 ಕಿ.ಮೀ. ದೂರದ ಅದಮಾರಿನಲ್ಲಿ ಪ್ರೌಢಶಿಕ್ಷಣ ಸಂಸ್ಥೆಯನ್ನು ಸ್ಥಾಪಿಸಿ, ಯಶಸ್ವಿಯಾಗಿ ನಿರ್ವಹಿಸಿಕೊಂಡು ಬರುತ್ತಿದ್ದಾಗ 1960ರಲ್ಲಿ ಉಡುಪಿಯಲ್ಲಿ ಪದವಿ ಶಿಕ್ಷಣ ಸಂಸ್ಥೆಯ ಸ್ಥಾಪನೆಗೆ ಮುಂದಾದರು. ಸಮೀಪದಲ್ಲಿಯೇ ಎಂ.ಜಿ.ಎಂ. ಕಾಲೇಜು ಅಸ್ತಿತ್ವಕ್ಕೆ ಬಂದು ಕಷ್ಟು ಪ್ರಚಾರ ಮತ್ತು ಪ್ರಸಿದ್ಧಿಯನ್ನು ಪಡೆದಿದ್ದ ಸಂದರ್ಭದಲ್ಲಿ ಹೆಚ್ಚುತ್ತಿರುವ ಪದವಿ ಶಿಕ್ಷಣದ ಬೇಡಿಕೆಯನ್ನು ಪೂರೈಸಲು ್ವಾಮೀಜಿಯವರು ಈ ಪ್ರಯತ್ನಕ್ಕಿಳಿಯಬೇಕಾಯಿತು. ಅಷ್ಟಮಠದಲ್ಲೊಂದಾದ ಅದಮಾರು ಮಠದ ಸ್ವಾಮೀಜಿಯವರು ಾವುದೇ ಯೋಜನೆಯನ್ನು ಕೈಗೆತ್ತಿಕೊಂಡರೂ ತಮ್ಮ ಯೋಜನೆಗೆ ಕೆಲವು ವೈಶಿಷ್ಟ್ಯಗಳು ಇರುತ್ತಿದ್ದು, ಅವರದೇ ಆದ ದರ್ಶದ ಬದ್ಧತೆಯು ಅವರ ಕಾರ್ಯಚಟುವಟಿಕೆಗಳಿದ್ದವು. ಅವರ ಈ ಆದರ್ಶಗಳು ಪೂರ್ಣಪ್ರಜ್ಞ ಕಾಲೇಜು ಸ್ಥಾಪನೆಯ ಾರಂಭದ ಸಂದರ್ಭದಿಂದಲೇ ಗುರುತಿಸಬಹುದಾಗಿದೆ. ತಮ್ಮ ಆದರ್ಶ ಕಾರ್ಯಯೋಜನೆಗಾಗಿ ಈ ಕೆಳಗಿನ ಮುಖ್ಯ ಮೂರು ಂಶಗಳನ್ನು ಪರಿಪಾಲಿಸಿಕೊಂಡು ಬಂದರು ಎನ್ನುವುದನ್ನು ಈ ಕಾಲೇಜಿನ ಸಾಹಿತ್ಯ ಚಟುವಟಿಕೆಗಳ ಅಧ್ಯಯನದ ಸಂದರ್ಭದಲ್ಲಿ ುರುತಿಸಲಾಗಿದೆ.

1. ಭಾಷೆ–ಸಾಹಿತ್ಯ–ಸಂಸ್ಕೃತಿಯ ಕುರಿತಾಗಿ ವಿಶೇಷ ಆಸಕ್ತಿ ಮತ್ತು ಸಾಧನೆ ಮಾಡಿದ ತಜ್ಞರನ್ನೇ ಪ್ರಾಂಶುಪಾಲರನ್ನಾಗಿ ಆಯ್ಕೆ ಮಾಡಿರುವುದು.

2. ಉಪನ್ಯಾಸಕರು ಕೇವಲ ತರಗತಿ ಚಟುವಟಿಕೆಗಷ್ಟೇ ಬದ್ಧರಾಗದೆ, ಪಠ್ಯೇತರ ಚಟುವಟಿಕೆಗಳಲ್ಲಿ ಆಸಕ್ತಿ ಹೊಂದಿದವರಾಗಿದ್ದು, ತಮ್ಮ ಕಾರ್ಯಚಟುವಟಿಕೆಗಳಿಂದ ಸಮಾಜದಲ್ಲಿ ಗುರುತಿಸಿಕೊಳ್ಳತಕ್ಕದ್ದು ಹಾಗೂ ಆ ನಿಟ್ಟಿನಲ್ಲಿ ವಿದ್ಯಾರ್ಥಿಗಳನ್ನು ತರಬೇತಿಗೊಳಿಸುವುದು ಉಪನ್ಯಾಸಕರ ಜವಾಬ್ದಾರಿ ಎಂದು ತಿಳಿದಿರುವುದು.

3. ಆಧುನಿಕ ಶಿಕ್ಷಣದ ಕಾಲೇಜಾಗಿ ಅಸ್ತಿತ್ವಕ್ಕೆ ಬಂದ ಈ ಸಂಸ್ಥೆಯಲ್ಲಿ ವಿಜ್ಞಾನ ವಿಭಾಗ, ಆಂಗ್ಲಭಾಷಾ (ಐಚ್ಛಿಕ) ವಿಭಾಗ, ವ್ಯವಸ್ಥಾಪನಾ ವಿಭಾಗ ಎಂಬ ಮೂರು ನಿಕಾಯಗಳನ್ನು ಆರಂಭಿಸಬೇಕೆಂಬ ಉದ್ದೇಶವನ್ನು ಹೊಂದಿ, ಈ ಮೂರೂ ಉದ್ದೇಶಗಳನ್ನು ಹಂತಹಂತವಾಗಿ ಕಾರ್ಯರೂಪಕ್ಕೆ ತಂದರು.

ವಿದ್ಯಾರ್ಥಿ–ಉಪನ್ಯಾಸಕರು ಸಾರ್ವಜನಿಕರ ನಡುವೆ ಹೋಗುತ್ತಾ ತಮ್ಮ ಸಾಧನೆಯಿಂದಾಗಿ ಸಾರ್ವಜನಿಕರ ಗೌರವಕ್ಕೆ ಾತ್ರರಾಗಬೇಕೆನ್ನುವುದು ಸ್ವಾಮೀಜಿಯವರ ನಿಲುವಾಗಿದ್ದು, ಈ ನಿಲುವಿನಂತೆ ಉಡುಪಿಯ ಜನಸಮೂಹದಲ್ಲಿ ್ರಾಂಶುಪಾಲರು, ಉಪನ್ಯಾಸಕರು, ವಿದ್ಯಾರ್ಥಿಗಳು ತಮ್ಮ ಪ್ರತಿಭಾ ಸಾಮರ್ಥ್ಯದಿಂದಾಗಿ ಉಡುಪಿಯಲ್ಲಿ ಗುರುತಿಸಿಕೊಂಡು ಾಜ್ಯಮಟ್ಟದಲ್ಲೂ ಗುರುತಿಸಿಕೊಂಡರೆಂಬುದು ವಾಸ್ತವ ವಿಚಾರವಾಗಿದೆ. ಪ್ರೊ. ವಿ.ಎಂ. ಇನಾಂದಾರ್, ಪ್ರೊ. ಶಂಕರ ಮೊಕಾಶಿ ುಣೇಕರ್, ಪ್ರೊ. ಎಂ. ಗೋಪಾಲಕೃಷ್ಣ ಅಡಿಗ ಇವರುಗಳು ಸರದಿಯಂತೆ ಕಾಲೇಜಿನ ಪ್ರಾಂಶುಪಾಲರಾಗಿ ಕಾಲೇಜನ್ನು ುನ್ನಡೆಸಿದರು. ಸಾಹಿತ್ಯ ಚಟುವಟಿಕೆ, ಸಾಂಸ್ಕೃತಿಕ ಚಟುವಟಿಕೆಗೆ ಶೈಕ್ಷಣಿಕ ವೇಳಾಪಟ್ಟಿಯೊಂದಿಗೆ ಸಾಕಷ್ಟು ಅವಕಾಶವನ್ನು ೀಡುವುದು ಸ್ವಾಮೀಜಿಯವರ ಉದ್ದೇಶವಾಗಿದ್ದು, ಇದಕ್ಕಾಗಿ ಪ್ರತಿಭೆಯೊಂದನ್ನೇ ಮಾನದಂಡವನ್ನಾಗಿಟ್ಟು ಅಖಿಲ ಕರ್ನಾಟಕ ುಟ್ಟದಲ್ಲಿ ಉಪನ್ಯಾಸಕ ಅಭ್ಯರ್ಥಿಗಳನ್ನು ಶೋಧಿಸಿ, ಪ್ರಾಧ್ಯಾಪಕರನ್ನಾಗಿ ಆಯ್ಕೆಮಾಡಿಕೊಂಡರು. ಪ್ರೊ. ರಾಮದಾಸ್, ಪ್ರೊ. ಾದವಾಡ, ಪ್ರೊ. ಕಂಬಾರ, ಪ್ರೊ. ಎಂ. ರಾಜಗೋಪಾಲ ಆಚಾರ್ಯ, ಇವರುಗಳು ಕನ್ನಡ ಭಾಷೆಯಲ್ಲಿ ಹೆಸರು ಮಾಡಿ ುರುತಿಸಿಕೊಂಡವರಾಗಿದ್ದರು. ಸಾಹಿತ್ಯ ವಿಚಾರ ಚರ್ಚೆ, ಸಂವಾದ, ಕಮ್ಮಟ, ಕಥಾಸ್ಪರ್ಧೆ, ಭಾವಗೀತಾ ಸ್ಪರ್ಧೆ, ಚಿತ್ರನೋಡಿ ಥೆ ಬರೆಯುವ ಸ್ಪರ್ಧೆ, ಅಂತರ್‌ಕಾಲೇಜು ಮಟ್ಟದ ಸಾಹಿತ್ಯ ಸ್ಪರ್ಧೆಗಳಲ್ಲಿ ಭಾಗವಹಿಸುವುದು ಈ ಮುಂತಾದ ಸಾಹಿತ್ಯ ಟುವಟಿಕೆಗಳು ಕಾಲೇಜಿನ ವರ್ಷಂಪ್ರತಿ ಪಠ್ಯಪೂರಕ ಚಟುವಟಿಕೆಗಳೆನಿಸಿದವು ಎನ್ನುವುದನ್ನು ಈ ಅಧ್ಯಯನದಲ್ಲಿ ುರುತಿಸಲಾಗಿದೆ. ಪ್ರೊ. ಬಿ.ಆರ್. ನಾಗೇಶ್, ಪ್ರೊ. ನಟರಾಜ್ ದೀಕ್ಷಿತ್, ಡಾ. ಮಾಧವಿ ಭಂಡಾರಿ, ಇವರುಗಳು ನಾಟಕ ೇತ್ರದಲ್ಲಿ ಆಸಕ್ತಿ ಹೊಂದಿದವರಾಗಿದ್ದು, ವಿದ್ಯಾರ್ಥಿಗಳನ್ನು ಈ ಕ್ಷೇತ್ರಕ್ಕೆ ಪ್ರಚೋದಿಸಿದರು. ಕನ್ನಡ ಕಥನಕವನಗಳನ್ನು ರಂಗಕ್ಕೆ ಳವಡಿಸಿ, ಉಡುಪಿಯ ಜನಸಮೂಹದಿಂದ ಗುರುತಿಸಿಕೊಂಡವರು ಅರ್ಥಶಾಸ್ತ್ರ ಉಪನ್ಯಾಸಕರಾಗಿದ್ದ ಪ್ರೊ. ಉದ್ಯಾವರ ಾಧವ ಆಚಾರ್ಯರು ಸಂಸ್ಕೃತ ವಿಭಾಗದ ಡಿ.ಜಿ.ಹೆಗಡೆಯವರು ಯಕ್ಷಗಾನದಲ್ಲಿ ಗುರುತಿಸಿಕೊಂಡ ಕಲಾವಿದರಾಗಿದ್ದು, ುಕ್ಷಗಾನದ ರಂಗತಂತ್ರವನ್ನು ಆಧುನಿಕ ನಾಟಕ ರಂಗದಲ್ಲಿ ಬಳಸಬಹುದಾದ ಸಾಧ್ಯತೆಗಳಿವೆಯೇ ಎಂಬ ಚಿಂತನೆಯೊಂದಿಗೆ ರಸ್ಪರ ಕೊಡು ಕೊಳುವಿಕೆಯ ಬಗೆಗೆ ವಿದ್ಯಾರ್ಥಿಗಳನ್ನೂ, ಉಪನ್ಯಾಸಕರನ್ನು ಚಿಂತನೆಗೆ ಪ್ರಚೋದಿಸಿದರು. ಭೌತಶಾಸ್ತ್ರ ುಪನ್ಯಾಸಕರಾಗಿದ್ದ ಪ್ರೊ. ಚಂದ್ರಶೇಖರ ಶೆಟ್ಟಿಯವರು ಶುದ್ಧ ವಿಜ್ಞಾನದ 'ಸತ್ಯ' ಮತ್ತು ಕಲಾಕೃತಿಯೊಂದರಲ್ಲಿ ತಿಪಾದಿತವಾಗುವ ಸತ್ಯ ಇವುಗಳು ಪರಸ್ಪರ ಭಿನ್ನವಾಗಿರಲು ಸಾಧ್ಯವೇ? ಈ ಜಂಗಮಪ್ರಪಂಚದಲ್ಲಿ ಸತ್ಯ ಎನ್ನುವುದಿದೆಯೇ? ಂಬಿತ್ಯಾದಿ ವಿಚಾರಗಳ ಕುರಿತಾಗಿ ಕಾಲೇಜಿನ ಶೈಕ್ಷಣಿಕ ದಿನಗಳಲ್ಲಿ ವಿದ್ಯಾರ್ಥಿ ಉಪನ್ಯಾಸಕರು ಸಂಪನ್ಮೂಲ

ವ್ಯಕ್ತಿಗಳನ್ನೊಳಗೂಡಿ ಚರ್ಚಿಸುತ್ತಿದ್ದರು. ವಿದ್ಯಾರ್ಥಿಗಳ ಉಪನ್ಯಾಸಕರ , ಸಾಹಿತ್ಯ ಬರಹಗಳು ಕಾಲೇಜು ಸಂಚಿಕೆಯಲ್ಲೂ, ದಿನಪತ್ರಿಕೆಗಳಲ್ಲೂ ಸಾಹಿತ್ಯ ಅಂಕಣ ವಿಭಾಗದಲ್ಲಿ ರಾಜ್ಯ ಮಟ್ಟದ ವಿಶೇಷ ಪುರವಣಿ ವಿಭಾಗದಲ್ಲಿ ಪ್ರಕಟಗೊಂಡವು. ಇಂತಹ ಚಟುವಟಿಕೆಗಳ ಒಟ್ಟಾರೆ ಉದ್ದೇಶ ಸಹೃದಯನೋರ್ವನನ್ನು ಜಿಜ್ಞಾಸುವನ್ನಾಗಿಸುವುದು ಇದಕ್ಕೆ ಪೂರಕವಾಗಿ ಇಲ್ಲಿನ ಚಟುವಟಿಕೆಗಳನ್ನು ಚಿಂತನಾತ್ಮಕ ಚಟುವಟಿಕೆ ಎಂದು ಉಲ್ಲೇಖಿಸಬಹುದಾಗಿದೆ. ಇಂತಹ ಚಿಂತನಾತ್ಮಕ ಚಟುವಟಿಕೆಯ ಪರಿಣಾಮವಾಗಿ ತಮ್ಮ ಪದವಿ ಶಿಕ್ಷಣದ ಬಳಿಕ ಜಿಲ್ಲೆ ಮತ್ತು ರಾಜ್ಯ ಮಟ್ಟದಲ್ಲಿ ಗುರುತಿಸಿಕೊಂಡ ಸಾಧಕರ ಹೆಸರುಗಳನ್ನು ಹೀಗೆ ಪಟ್ಟಿ ಮಾಡಬಹುದಾಗಿದೆ. ಡಾ. ಆರ್ಕೆ ಮಣಿಪಾಲ್, ಡಾ. ಮುರಾರಿ ಬಲ್ಲಾಳ, ವಿನಯಾ ಪ್ರಸಾದ್ (ಸಿನಿಮಾ ನಟಿ), ಎಸ್. ಕೆ. ವಸಂತರಾಜ್, ವೀಣಾ ಬನ್ನಂಜೆ, ಡಾ. ಶ್ರೀಪಾದ ಭಟ್ಟ, ಡಾ. ವಾದಿರಾಜ ಭಟ್ಟ, ಡಾ. ಶ್ರೀಧರ ಉಪ್ಪೂರ, ಡಾ. ಸುಬ್ರಹ್ಮಣ್ಯ ಭಟ್ಟ ಇವರುಗಳು ರಾಜ್ಯಮಟ್ಟದಲ್ಲಿ ಗುರುತಿಸಿಕೊಂಡವರಾಗಿರುತ್ತಾರೆ.

ವಾರ್ಷಿಕ ಸಂಚಿಕೆಯಲ್ಲಿ ವಿದ್ಯಾರ್ಥಿಗಳು, ಕಥೆ, ಕವನಗಳಿಗೆ ಕೊಟ್ಟ ಪ್ರಾಮುಖ್ಯವನ್ನು ಜಾನಪದ ಸಾಹಿತ್ಯದ ಕುರಿತಂತೆ ನೀಡಿಲ್ಲ ಎನ್ನುವುದು ಸಂಚಿಕೆಯ ಒಂದು ಕೊರತೆಯಾದರೆ, ಬೆಳೆಯುತ್ತಿರುವ ಉಡುಪಿಯ ನಗರ ಸಮಸ್ಯೆಯ ಕುರಿತಾಗಿ ಸಂಚಿಕೆಯಲ್ಲಿ ಯಾವುದೇ ಸಮಾಜಶಾಸ್ತ್ರೀಯ ಬರಹಗಳಿಲ್ಲದಿರುವುದು ಸಂಚಿಕೆಯ ಒಂದು ಕೊರತೆ ಎನ್ನುವುದಾಗಿ ಗುರುತಿಸಲಗಿದೆ.

ಕಾಲೇಜು ಶಿಕ್ಷಣಕ್ಕೆ ಪ್ರವೇಶ ಪಡೆಯಲು ಆರ್ಥಿಕ ಅನುಕೂಲವಿಲ್ಲದ ಪ್ರತಿಭಾವಂತ ವಿದ್ಯಾರ್ಥಿಗಳಿಗೆ ತಮ್ಮ ಮಟ್ಟದ ಪರಿಸರದಲ್ಲಿ ಊಟ ಹಾಗೂ ವಸತಿ ಸೌಕರ್ಯವನ್ನು ನೀಡಿ, ಕಾಲೇಜು ಶಿಕ್ಷಣದ ಅವಕಾಶವನ್ನು ಕಲ್ಪಿಸಿದವರು ಅದಮಾರು ಮಠದ ವಿಬುಧೇಶತೀರ್ಥ ಸ್ವಾಮೀಜಿಯವರು. ಯಾವುದೇ ವ್ಯಾವಹಾರಿಕ ಚಮತ್ಕಾರವಾಗಲೀ, ಮಾರುಕಟ್ಟೆಯ ತಂತ್ರಜ್ಞಾನದ ಸೂತ್ರವನ್ನಾಗಲೀ, ಪ್ರಚಾರ ಮತ್ತು ಪ್ರಸಿದ್ಧಿಯ ಬಯಕೆ ಇಲ್ಲವೆ ಯಾವ ಪ್ರತಿಫಲಾಪೇಕ್ಷೆಯೂ ಇಲ್ಲದೆ ಅವರು ಶಿಕ್ಷಣಕ್ಕೆ ನೀಡಿದ ಕೊಡುಗೆಯ ಹಿಂದೆ ಪ್ರತಿಭೆಗೆ ಅವಕಾಶ ನೀಡಬೇಕೆಂಬ ಹಠ ಮತ್ತು ದೇಶ ಕಲ್ಯಾಣದ ಉದ್ದೇಶವಿತ್ತೆನ್ನುವುದು ಸ್ಪಷ್ಟವಾಗುತ್ತದೆ.

**ಮಿಲಾಗ್ರಿಸ್ ಕಾಲೇಜು ಕಲ್ಯಾಣಪುರ:**

ಏಕೀಕರಣ ಪೂರ್ವದಲ್ಲಿಯೇ ಪ್ರಾಥಮಿಕ ಹಾಗೂ ಪ್ರೌಢಶಿಕ್ಷಣ ಸಂಸ್ಥೆಗಳನ್ನು ಆರಂಭಿಸಿ, ಮುನ್ನಡೆಸಿಕೊಂಡು ಬಂದ ಈ ಆಡಳಿತವು ಉಡುಪಿಯಿಂದ 12 ಕಿ.ಮೀ. ದೂರದ ಕಲ್ಯಾಣಪುರದಲ್ಲಿ ಪದವಿ ಶಿಕ್ಷಣ ಕಾಲೇಜೊಂದನ್ನು 1967 ರಲ್ಲಿ ಆರಂಭಿಸಿದರು. ಎಂ.ಜಿ.ಎಂ. ಕಾಲೇಜಿನ ಇತಿಹಾಸ ಪ್ರಾಧ್ಯಾಪಕರಾದ ಪ್ರೊ. ಗುರುರಾಜ ಭಟ್ಟರನ್ನು ಆಡಳಿತವು ಪ್ರಾಂಶುಪಾಲರ ಹುದ್ದೆಗಾಗಿ ಆಯ್ಕೆ ಮಾಡಿರುವುದು ಈ ಕಾಲೇಜು ಆಡಳಿತದ ಸ್ಥಾಪನೆಯ ಹಿಂದಿನ ಆಡಳಿತದ ಮಹತ್ತರವಾದ ಆದರ್ಶವನ್ನು ಎತ್ತಿ ಹಿಡಿಯುವಂತಿದೆ. ಸ್ವತಃ ಸಂಸ್ಕೃತಿ ಚಿಂತಕರೂ, ಸಂಶೋಧಕರೂ ಆದ ಪ್ರೊ. ಗುರುರಾಜ ಭಟ್ಟರು ಪ್ರಾಂಶುಪಾಲರಾಗಿ ಇದೇ ಪ್ರವೃತ್ತಿಯಲ್ಲಿ ಮುಂದುವರಿದರು. ಕಾಲೇಜಿನ ತಮ್ಮ ಸಹೋದ್ಯೋಗಿ ಸ್ನೇಹಿತರು ಮತ್ತು ವಿದ್ಯಾರ್ಥಿಗಳಿಗೆ ಈ ಪ್ರವೃತ್ತಿಯನ್ನು ಮೈಗೂಡಿಸಿಕೊಳ್ಳುವುದಕ್ಕೆ ಪ್ರೇರಣೆ ಎಂಬಂತೆ ತಮ್ಮ ಕಾಲಾವಧಿಯಲ್ಲಿ ಪಠ್ಯಪೂರಕವಾದ ಸಾಂಸ್ಕೃತಿಕ ಚರ್ಚೆ-ಉಪನ್ಯಾಸ, ಸಂವಾದಗಳನ್ನು ಏರ್ಪಡಿಸುತ್ತಾ ಬಂದಿದ್ದರು. ಇವರ ಪ್ರೇರಣೆಯಿಂದಾಗಿ ಇವರ ಸಹೋದ್ಯೋಗಿ ಉಪನ್ಯಾಸಕವೃಂದದ ಅನೇಕರು ತಮ್ಮ ತಮ್ಮ ಕ್ಷೇತ್ರದಲ್ಲಿ ಸಂಶೋಧನೆಗೆ ಆಸಕ್ತಿಯನ್ನು ರೂಢಿಸಿಕೊಂಡರು. ಸ್ವತಃ

ಕೃತಿರಚನೆಗೂ ಮುಂದಾದರು. ಪ್ರಾಂಶುಪಾಲರಾಗಿ ಜವಾಬ್ದಾರಿಯನ್ನು ನಿರ್ವಹಿಸುತ್ತಿರುವಾಗಲೇ ಅಕಾಲ ಮರಣವನ್ನು ಹೊಂದಿದ ಪರಿಣಾಮವಾಗಿ ಈ ಕಾಲೇಜಿನ ಮೊದಲ ಶೈಕ್ಷಣಿಕ ಘಟ್ಟವು ಮುಗಿದು, ಸಾಹಿತ್ಯ, ಸಾಂಸ್ಕೃತಿಕ ವಿಚಾರಗಳ ಕುರಿತಾದ ಚರ್ಚೆ ಮತ್ತು ಸಂಶೋಧನಚಟುವಟಿಕೆಗಳು ಕೊನೆಗೊಂಡಿತೆನ್ನುವುದು ಈ ಅಧ್ಯಯನದ ಮೂಲಕ ಕಂಡುಕೊಂಡ ವಾಸ್ತವ ವಿಚಾರವಾಗಿದೆ.

**ಶ್ರೀ ಶಾರದಾ ಕಾಲೇಜು ಬಸ್ರೂರು:**

20ನೇ ಶತಮಾನದ ಉತ್ತರಾರ್ಧದಲ್ಲಿ 1972ರಲ್ಲಿ ಸ್ಥಾಪನೆಗೊಂಡ ಈ ಕಾಲೇಜು ಪ್ರಸ್ತುತ ಅಧ್ಯಯನದಲ್ಲಿ ಮೊದಲ ಘಟ್ಟದಲ್ಲಿ ಆರಂಭಗೊಂಡ ಕೊನೆಯ ಕಾಲೇಜು ಆಗಿರುತ್ತದೆ. ಕಾಲೇಜಿಗೆ ಸಂಬಂಧಪಟ್ಟಂತೆ ಕಾಲೇಜಿಗೆ ಸಂಯೋಜನೆ ನೀಡಲು ಬಂದ ಮೈಸೂರು ವಿಶ್ವವಿದ್ಯಾನಿಲಯದ ತಾಪಾಸಣೆ ಸಮಿತಿಯು ಕನ್ನಡ ಐಚ್ಛಿಕವನ್ನು ಆರಂಭಿಸಬೇಕೆಂಬ ಸೂಚನೆ ನೀಡಿದ ಕಾರಣ ಕಾಲೇಜು ಪ್ರಾರಂಭದ ವರ್ಷದಿಂದಲೇ ಕನ್ನಡ ಐಚ್ಛಿಕ ಬೋಧನೆಗೆ ಅವಕಾಶವನ್ನು ನೀಡಿತು. ಸ್ಥಳೀಯರಾದ ವಾಸುದೇವ ವರ್ಣ, ಕನರಾಡಿ ವಾದಿರಾಜ ಭಟ್ಟ ಹಾಗೂ ಶ್ರೀಧರ ಉಪ್ಪೂರ ಇವರುಗಳು ವಿಶೇಷ ಆಸಕ್ತಿಯಿಂದ ಕನ್ನಡ ವಿಭಾಗದಲ್ಲಿ ದುಡಿದು, ತಮ್ಮ ಶಿಷ್ಯವರ್ಗದವರಲ್ಲೂ ಕನ್ನಡಾಸಕ್ತಿಯನ್ನು ಪೋಷಿಸಿದರು. ವಾಸುದೇವ ವರ್ಣರು ಸಂಸ್ಕೃತ ಹಾಗೂ ಹಿಂದಿ ಭಾಷೆಯಲ್ಲಿ ಪ್ರೌಢಿಮೆಯನ್ನು ಹೊಂದಿದ್ದು, ಹಳಗನ್ನಡ ಸಾಹಿತ್ಯದಲ್ಲಿ ವಿಶೇಷ ಒಲವುಳ್ಳವರಾಗಿದ್ದರು. ವಿದ್ಯಾರ್ಥಿಗಳಿಗೆ ಹಳಗನ್ನಡ ಸಾಹಿತ್ಯದ ಕುರಿತಂತೆ ವಿಶೇಷ ಮಾರ್ಗದರ್ಶಕರಾಗಿದ್ದವರು ಪ್ರೊ. ಕನರಾಡಿ ವಾದಿರಾಜ ಭಟ್ಟರು. ಉಡುಪಿಯ ಪೂರ್ಣಪ್ರಜ್ಞ ಕಾಲೇಜಿನಲ್ಲಿ ಪದವಿ ಶಿಕ್ಷಣವನ್ನು ಪೂರೈಸಿದ್ದು, ಪ್ರೊ. ಎಂ. ರಾಜಗೋಪಾಲಾಚಾರ್ಯರ ಶಿಷ್ಯರಾಗಿ ಶಾಸ್ತ್ರ ಸಾಹಿತ್ಯ ಹಾಗೂ ನಡುಗನ್ನಡ ಸಾಹಿತ್ಯದಲ್ಲಿ ವಿಶೇಷ ಆಸಕ್ತಿಯನ್ನು ಹೊಂದಿದವರಾಗಿದ್ದರು. ಪ್ರೊ. ಶ್ರೀಧರ ಉಪ್ಪೂರ ಅವರು ಯಕ್ಷಗಾನ ಕಲೆಯ ಕುರಿತಂತೆ ವಿಶೇಷ ಆಸಕ್ತಿಯನ್ನು ಹೊಂದಿದವರಾಗಿದ್ದು, ಅವರ ತಂದೆ ಬಡಗುತಿಟ್ಟಿನ ಪ್ರಸಿದ್ಧ ಭಾಗವತರಾಗಿದ್ದ ಕಾರಣ ಸಹಜವಾಗಿಯೇ ಯಕ್ಷಗಾನ ಕಲೆಯ ಕುರಿತು ವಿಶೇಷ ಒಲವನ್ನು ರೂಢಿಸಿಕೊಂಡವರಾಗಿದ್ದರು. ಹೀಗೆ ವಿಭಾಗದ ಮೂವರು ವಿದ್ವಾಂಸರು ತಮ್ಮ ವಿದ್ವತ್ತೆಯ ಮೂಲಕ ಶಿಷ್ಯಸಮೂಹದಲ್ಲಿ ಕನ್ನಡ ವಿಶೇಷ ಸಾಹಿತ್ಯದ ಒಲವು ಒಡಮೂಡುವಂತೆ ಪ್ರೇರೇಪಿಸಿದರು.

ಪ್ರೊ. ಕನರಾಡಿ ವಾದಿರಾಜ ಭಟ್ಟ ಅವರು ಪೂರ್ಣಪ್ರಜ್ಞ ಕಾಲೇಜಿನ ವಿದ್ಯಾರ್ಥಿಯಾಗಿದ್ದು, ವಿದ್ಯಾರ್ಥಿ ದಿಸೆಯಲ್ಲೇ ಕಾಲೇಜಿನ ಸಂಚಿಕೆಯಲ್ಲಿ ತಮ್ಮ ಬರವಣಿಗೆಯ ಮೂಲಕ ಗುರುತಿಸಿಕೊಂಡವರಾಗಿದ್ದರು. ಕನ್ನಡದಲ್ಲಿ ಉನ್ನತ ಶಿಕ್ಷಣವನ್ನು ಪಡೆದು ಉದ್ಯೋಗಕ್ಕಾಗಿ ಶ್ರೀ ಶಾರದಾ ಕಾಲೇಜಿಗೆ ಸೇರ್ಪಡೆಗೊಂಡಾಗ ಅವರು ಕಾಲೇಜು ಪರಿಸರದ (ಕುಂದಗನ್ನಡ) ಜನಪದ ಭಾಷೆ–ಸಾಹಿತ್ಯದ ಕುರಿತು ವಿಶೇಷ ಕುತೂಹಲ ಹೊಂದಿದರು. ಸಂಶೋಧನಾತ್ಮಕ ದೃಷ್ಟಿಯಿಂದ ಈ ಸಾಹಿತ್ಯದ ಕುರಿತಾಗಿ ಆಸಕ್ತಿ ಹೊಂದಿ ಕ್ಷೇತ್ರಕಾರ್ಯದ ಮೂಲಕ ಸಾಹಿತ್ಯಸಂಗ್ರಹ ಮತ್ತು ಅಧ್ಯಯನಕ್ಕೆ ಆರಂಭಿಸಿದರು. ತಮ್ಮ ಸ್ವಂತ ಆಸಕ್ತಿಯಿಂದ ಅಧ್ಯಯನ ಮಾಡುತ್ತಾ ತಮ್ಮ ಶಿಷ್ಯವರ್ಗಕ್ಕೂ ಈ ಜನಪದ ಸಾಹಿತ್ಯದ ಸೊಗಸು–ವೈಶಿಷ್ಟ್ಯವನ್ನು ಮನಗಾಣಿಸಿ ಅವರನ್ನೂ ಈ ಕ್ಷೇತ್ರದಲ್ಲಿ ಸಂಶೋಧನಾತ್ಮಕ ದೃಷ್ಟಿಯಿಂದ ಅಧ್ಯಯನಕ್ಕೆ ಪ್ರೇರೇಪಿಸಿದರು. ಈ ಪ್ರೇರಣೆಯಿಂದಾಗಿ ಇಲ್ಲಿಯ

ವಿದ್ಯಾರ್ಥಿಗಳು ಕ್ಷೇತ್ರಕಾರ್ಯ ಮೂಲಕ ಸಂಗ್ರಹಿಸಿದ ಜನಪದ ಸಾಹಿತ್ಯದ ವಿವಿಧ ಪ್ರಕಾರಗಳು ಕಾಲೇಜು ವಾರ್ಷಿಕ ಸಂಚಿಕೆಗಳ ಪ್ರಕಟಗೊಂಡಿರುವುದನ್ನು ಗಮನಿಸಬಹುದಾಗಿದೆ.

ಕನ್ನಡ ಐಚ್ಛಿಕ ವಿಷಯದ ಪಠ್ಯವನ್ನು ಅಳವಡಿಸಿಕೊಂಡ ಕಾರಣ ಪ್ರಾಂಶುಪಾಲರ ಬೆಂಬಲದೊಂದಿಗೆ ಮತ್ತು ಕಾಲೇಜು ಆಡಳಿತದ ಪೂರಕ ಸಹಕಾರದೊಂದಿಗೆ ಕನ್ನಡ ಸಾಹಿತ್ಯಚಟುವಟಿಕೆಗಳನ್ನು ನಿರ್ವಹಿಸಿಕೊಂಡು ಬಂದಿರುವುದಕ್ಕೆ ಕಾಲೇಜಿನಲ್ಲಿ ಲಭ್ಯವಿರುವ ವಾರ್ಷಿಕ ಸಂಚಿಕೆಗಳು ಆಧಾರವನ್ನು ಒದಗಿಸುತ್ತವೆ. ಕಾಲೇಜಿನಿಂದ ಪದವಿ ಪಡೆದ ವಿದ್ಯಾರ್ಥಿಗಳಲ್ಲಿ ಹಲವರು ಕನ್ನಡ ಸಾಹಿತ್ಯದಲ್ಲಿ ಉನ್ನತ ಶಿಕ್ಷಣವನ್ನು ಪಡೆದರು. ಕೆಲವಾರು ವಿದ್ಯಾರ್ಥಿಗಳು ಸಂಶೋಧನ ಪ್ರಬಂಧಗಳನ್ನು ಮಂಡಿಸಿ, ಡಾಕ್ಟರೇಟ್ ಪದವಿಯನ್ನು ಪಡೆದುಕೊಂಡು, ರಾಜ್ಯದ ಬೇರೆ ಬೇರೆ ಶಿಕ್ಷಣ ಸಂಸ್ಥೆಗಳಲ್ಲಿ ಉಪನ್ಯಾಸಕರಾಗಿ ದುಡಿಯುತ್ತಿದ್ದಾರೆ; ಸಂಶೋಧನ ಲೇಖನಗಳನ್ನು ಪ್ರಕಟಿಸುತ್ತಿದ್ದಾರೆ. 20ನೇ ಶತಮಾನದ 28 ವರ್ಷದ ಇತಿಹಾಸದಲ್ಲಿ 6 ಮಂದಿ ವಿದ್ಯಾರ್ಥಿಗಳು ಸಂಶೋಧನ ಪ್ರೌಢಪ್ರಬಂಧವನ್ನು ರಚಿಸಿ, ಡಾಕ್ಟರೇಟ್ ಪದವಿಯನ್ನು ಪಡೆದಿರುವುದಕ್ಕೆ ಈ ವಿದ್ಯಾರ್ಥಿಗಳಿಗೆ ಈ ಸಂಸ್ಥೆಯಲ್ಲಿ ಸಿಕ್ಕ ಪ್ರೇರಣೆ ಎನ್ನುವುದನ್ನು ಸಂದರ್ಶನದ ಸಂದರ್ಭದಲ್ಲಿ ಹೇಳಿಕೊಂಡಿದ್ದಾರೆ. ಈ ದೃಷ್ಟಿಯಲ್ಲಿ ಇಲ್ಲಿಯ ಕನ್ನಡ ಸಾಹಿತ್ಯಚಟುವಟಿಕೆಗಳನ್ನು **'ಪ್ರೇರಣಾತ್ಮಕ ಚಟುವಟಿಕೆಗಳು'** ಎಂದು ಗುರುತಿಸಲಾಗಿದೆ. ಕನ್ನಡ ಉಪನ್ಯಾಸಕರ ಸಮರ್ಪಣ ಮನೋಭಾವದ ಸೇವೆಯಿಂದ ಪ್ರೇರಣೆ ಪಡೆದು, ವಿದ್ಯಾರ್ಥಿಗಳಲ್ಲಿ ಕೆಲವರು ಕನ್ನಡ ಶಿಕ್ಷಕರಾಗಿ, ರಾಜ್ಯದ ವಿವಿಧಭಾಗಗಳಲ್ಲಿ ಕನ್ನಡ ಶಿಕ್ಷಕರಾಗಿ ಸೇವೆ ಸಲ್ಲಿಸುತ್ತಿದ್ದಾರೆ.

**20ನೇ ಶತಮಾನದ 2ನೇ ಹಂತದ ಕಾಲೇಜುಗಳ ಸಾಹಿತ್ಯ ಚಟುವಟಿಕೆಗಳ ವಿಶ್ಲೇಷಣೆ:**

20ನೇ ಶತಮಾನದ 2ನೇ ಹಂತದಲ್ಲಿ ಒಟ್ಟು ಒಂಬತ್ತು ಕಾಲೇಜುಗಳು ಅಸ್ತಿತ್ವಕ್ಕೆ ಬಂದಿದ್ದು, ಇವುಗಳಲ್ಲಿ ನಾಲ್ಕು ಕಾಲೇಜುಗಳು ಅನುದಾನಸಂಹಿತೆಗೊಳಪಟ್ಟ ಕಾಲೇಜುಗಳಾಗಿವೆ. ಅನುದಾನ ಸಂಹಿತೆಗೊಳಪಟ್ಟ ಕಾಲೇಜುಗಳೆಂದರೆ: ಎಂ.ಎಸ್.ಆರ್.ಎಸ್. ಕಾಲೇಜು ಶಿರ್ವ, ಸೈಂಟ್ ಮೇರಿಸ್ ಕಾಲೇಜು ಶಿರ್ವ, ಎಸ್.ಎಂ.ಎಸ್. ಕಾಲೇಜು ಬ್ರಹ್ಮಾವರ, ಕ್ರಾಸ್‌ಲ್ಯಾಂಡ್ ಕಾಲೇಜು ಬ್ರಹ್ಮಾವರ ಎಂಬೀ ಕಾಲೇಜುಗಳಾಗಿವೆ. ಇನ್ನುಳಿದ 6 ಕಾಲೇಜುಗಳಿಗೆ ಸರಕಾರದ ಯಾವುದೇ ಆರ್ಥಿಕ ಸಹಕಾರವಿಲ್ಲದೆ ವೇತನ ಹಾಗೂ ಇನ್ನಿತರ ವ್ಯವಸ್ಥಾಪನಾ ಖರ್ಚುಗಳನ್ನು ಆಡಳಿತವೇ ಭರಿಸಬೇಕಾದ ಕಾರಣ ಈ ಕಾಲೇಜುಗಳಲ್ಲಿ 20ನೇ ಶತಮಾನದ ಮೊದಲ ಹಂತದ ಕಾಲೇಜುಗಳು ನಿರ್ವಹಿಸಿದ ಸಾಹಿತ್ಯ ಚಟುವಟಿಕೆಗಳನ್ನು ನಿರ್ವಹಿಸುವುದಕ್ಕೆ ಸಾಧ್ಯವಾಗಿರುವುದಿಲ್ಲ ಎನ್ನುವುದನ್ನು ಅಧ್ಯಯನದ ಮೂಲಕ ಕಂಡುಕೊಳ್ಳಲಾಗಿದೆ.

**ಎಂ.ಎಸ್. ಆರ್.ಎಸ್. ಕಾಲೇಜು, ಶಿರ್ವ:** 1980ರಲ್ಲಿ ಸ್ಥಾಪನೆಗೊಂಡ ಈ ಖಾಸಗಿ ಕಾಲೇಜಿಗೆ, ಖ್ಯಾತ ಕವಿ–ವಿಮರ್ಶಕ–ಚಿಂತಕ ಎಂ.ಎನ್. ಜೈಪ್ರಕಾಶ್ ಅವರು ಕನ್ನಡ ಉಪನ್ಯಾಸಕರಾಗಿ ಸೇವೆಗೆ ಸೇರ್ಪಡೆಗೊಂಡು ಕಾಲೇಜಿನಲ್ಲಿ ಸಾಕಷ್ಟು ಸಾಹಿತ್ಯಕ ಚಟುವಟಿಕೆಗಳನ್ನು ನಿರ್ವಹಿಸಿದ್ದರು. 1984ರಲ್ಲಿ ಅವರ ಅಕಾಲ ನಿಧನಾನಂತರ ಕಾಲೇಜಿನ ಆಂಗ್ಲಭಾಷಾ ಉಪನ್ಯಾಸಕರ ಕನ್ನಡ ಭಾಷಾಭಿಮಾನದ ಕಾರಣದಿಂದ ಕಾಲೇಜಿನಲ್ಲಿ ಕನ್ನಡ ಸಾಹಿತ್ಯಚಟುವಟಿಕೆಗಳು ನಡೆದಂತೆ ನ್ಯಾಕ್ ವರದಿಯಲ್ಲಿ ಉಲ್ಲೇಖಗಳಿವೆ.

‘ಅನು ಬೆಳ್ಳೆ’ ಎಂಬ ಕಾವ್ಯನಾಮದಿಂದ ಕನ್ನಡ ಕಾದಂಬರಿ ಕ್ಷೇತ್ರಕ್ಕೆ ಪ್ರವೇಶಿಸಿದ ರಾಘವೇಂದ್ರ ಬಿ. ರಾವ್ ಈ ಕಾಲೇಜಿನ (1991) ಬಿ.ಕಾಂ. ವಿದ್ಯಾರ್ಥಿಯಾಗಿದ್ದು, ಇಷ್ಟರಲ್ಲೇ 40 ಕಾದಂಬರಿ 2 ವ್ಯಕ್ತಿಚಿತ್ರಣ, 8 ಕಥಾಸಂಕಲನಗಳನ್ನು ಹೊರ ತಂದಿರುತ್ತಾರೆ. ‘ಮಂಗಳ’ ಎಂಬ ವಾರಪತ್ರಿಕೆಯಲ್ಲಿ ಇವರ ‘ಮನಸ್ಮಿತ್’ ಎಂಬ ಕಾದಂಬರಿಯು ಧಾರಾವಾಹಿಯಾಗಿ ಪ್ರಕಟಗೊಂಡಿರುತ್ತದೆ. ಇದೇ ಕಾಲೇಜಿನಲ್ಲಿ 1989ರಲ್ಲಿ ಪದವಿ ಮುಗಿಸಿದ ಹೆನ್ರಿ ಫೆರ್ನಾಲ್ ಎಂಬ ವಿದ್ಯಾರ್ಥಿ ‘ಡೈಜಿ ವರ್ಲ್ಡ್’ಎಂಬ ಅಂತರ್ಜಾಲ ಪತ್ರಿಕೆಯಲ್ಲಿ ಸುದ್ದಿ ಸಂಪಾದಕನಾಗಿ ತೊಡಗಿಸಿಕೊಂಡಿರುವುದನ್ನು ಇಲ್ಲಿ ಉಲ್ಲೇಖಿಸಬಹುದಾಗಿದೆ. ಅಂತೆಯೇ ಮುದರಂಗಡಿಯ ಸತೀಶ ಶೆಟ್ಟಿ ಮತ್ತು ವೇಣುಗೋಪಾಲ ಶೆಟ್ಟಿ ಎಂಬಿಬ್ಬರು ಮುಂಬೈ ಕನ್ನಡ ಪತ್ರಿಕೆಯಲ್ಲಿ ತಮ್ಮ ಸೃಜನಶೀಲ ಪ್ರತಿಭೆಯನ್ನು ಅಭಿವ್ಯಂಜಿಸುತ್ತಿದ್ದಾರೆಂದು ಕಾಲೇಜಿನ ಪ್ರಾಕ್ತನ ವಿದ್ಯಾರ್ಥಿಗಳು ಹೇಳಿಕೊಂಡಿದ್ದಾರೆ.

**ಸೈಂಟ್ ಮೇರಿಸ್ ಕಾಲೇಜು, ಶಿರ್ವ:**

1980ರಲ್ಲಿ ಮಂಗಳೂರು ವಿ.ವಿ.ದ ಸಂಯೋಜನೆಯೊಂದಿಗೆ ಆರಂಭಗೊಂಡ ಈ ಕಾಲೇಜು 1986ರಲ್ಲಿ ಕರ್ನಾಟಕ ಸರಕಾರದ ಅನುದಾನಕ್ಕೊಳಪಟ್ಟಿದೆ. ಕಾಲೇಜು ಸ್ಥಾಪನೆಯಾದ ಪ್ರಾರಂಭದ ವರ್ಷದಿಂದಲೇ ಕನ್ನಡವನ್ನು ಭಾಷಾ ವಿಷಯವಾಗಿ ಓದುವ ಅವಕಾಶವನ್ನು ಕಲ್ಪಿಸಲಾಗಿದ್ದು, ಪ್ರೊ. ಭವಾನಿಶಂಕರ್ ಅವರು ಕನ್ನಡ ವಿಭಾಗದ ಮುಖ್ಯಸ್ಥರಾಗಿ ಕನ್ನಡ ಸಾಹಿತ್ಯ ಚಟುವಟಿಕೆಗಳನ್ನು ಯಶಸ್ವಿಯಾಗಿ ನಿರ್ವಹಿಸಿದರು. ಕಾಲೇಜು ನಿರ್ವಹಿಸಿಕೊಂಡು ಬಂದ ಸಾಹಿತ್ಯಚಟುವಟಿಕೆಗಳ ಸಮಗ್ರ ವರದಿಯು (1987 ರಿಂದ) ಕಾಲೇಜು ಪ್ರಕಟಿಸಿದ ವಾರ್ಷಿಕ ಸಂಚಿಕೆಗಳಲ್ಲಿ ಲಭ್ಯವಾಗುತ್ತವೆ.

**ಕ್ರಿ.ಶ. 1981 ರಿಂದ 2000ದ ನಡುವಿನ ಅವಧಿಯಲ್ಲಿ ಕಾಲೇಜು ನಡೆಸಿದ ಸಾಹಿತ್ಯ ಚಟುವಟಿಕೆಗಳ ಸಂಕ್ಷಿಪ್ತ ವಿವರಗಳು:**

ಸೀಮಿತ ಪುಟಸಂಖ್ಯೆಯಲ್ಲಿ ಪ್ರಕಟವಾಗುತ್ತಿದ್ದ ಕಾಲೇಜಿನ ಸಂಚಿಕೆಯಲ್ಲಿ ಕನ್ನಡ ವಿಭಾಗದ ಎಲ್ಲ ಕಾರ್ಯಚಟುವಟಿಕೆಗಳು ಲಭ್ಯವಾಗುವುದಿಲ್ಲ. ಕನ್ನಡ ವಿಭಾಗವು ಕೈಬರಹದಲ್ಲಿ ದಾಖಲಿಸಿದ (ಹಸ್ತಪ್ರತಿ) ಸಂಚಿಕೆಯಲ್ಲಿ ಉಲ್ಲೇಖಗೊಂಡ ಕನ್ನಡ ವಿಭಾಗದ ಕಾರ್ಯಚಟುವಟಿಕೆಗಳನ್ನು ಈ ಕೆಳಗಿನಂತೆ ವಿಶ್ಲೇಷಿಸಲಾಗಿದೆ.

ದಿನಾಂಕ 05.07.1992ರಲ್ಲಿ ದಾಖಲಿಸಿದಂತೆ ಮಂಗಳೂರು ಆಕಾಶವಾಣಿಯ ಕಾರ್ಯಕ್ರಮ ಸಂಯೋಜಕರಾದ ಅಬ್ದುಲ್ ರಹಿಮಾನ್ ಪಾಶಾ ಅವರು ‘ಸಿನಿಮಾ ಒಂದು ದೃಶ್ಯಕಲೆ’ ಎಂಬ ವಿಷಯದ ಕುರಿತಂತೆ ಉಪನ್ಯಾಸ ನೀಡಿದ್ದರು. 1999ನೇ ಶೈಕ್ಷಣಿಕ ವರ್ಷದಲ್ಲಿ ಕನ್ನಡದ ಹೆಸರಾಂತ ಸಣ್ಣಕಥೆಗಾರರಾದ ಶಾಂತಾರಾಮ ಸೋಮಯಾಜಿಯವರು ಕನ್ನಡ ಸಣ್ಣಕಥಾ ಕಲಾಪ್ರಕಾರದಲ್ಲಿ ಪಾತ್ರಚಿತ್ರಣ ಅಭಿವ್ಯಕ್ತಿ ಪಡೆದುಕೊಳ್ಳುವ ಬಗೆ ಹೇಗೆ? ಕಥೆಯ ಆರಂಭ ಮತ್ತು ಮುಕ್ತಾಯಕ್ಕಿರುವ ಸಾಮಾನ್ಯ ಲಕ್ಷಣ ಮತ್ತು ಸಂಬಂಧಗಳೇನು? ಎಂಬ ವಿಷಯದ ಕುರಿತು ಉಪನ್ಯಾಸ ನಡೆಸಿಕೊಟ್ಟರು ಎಂಬ ವರದಿಯು ಸಂಚಿಕೆಯಲ್ಲಿ ದಾಖಲುಗೊಂಡಿದೆ.

ಕ್ರಿ.ಶ. 2000 ಆಗಸ್ಟ್ 8 ರಂದು ಮುದರಂಗಡಿ ಪದವಿಪೂರ್ವ ಕಾಲೇಜಿನ ಆಂಗ್ಲ ಭಾಷಾ ಉಪನ್ಯಾಸಕರಾದ ಪ್ರೊ. ಜನಾರ್ದನ ಭಟ್ ಅವರು ‘ಕವನ ಓದುವ ಬಗೆ’ ಎಂಬ ವಿಷಯದ ಕುರಿತಂತೆ ಒಂದು ದಿನದ ಕಾರ್ಯಾಗಾರವನ್ನು ನಡೆಸಿಕೊಟ್ಟರೆಂಬ ಮಾಹಿತಿಯು ಕಾಲೇಜು ಸಂಚಿಕೆಯಲ್ಲಿ ಲಭ್ಯವಾಗಿದೆ. ಕಾಲೇಜು ವಾರ್ಷಿಕ ಸಂಚಿಕೆಯು 1987ರಿಂದಲೇ

ಮುದ್ರಣಗೊಂಡು ಪ್ರಕಟಗೊಳ್ಳುವುದಕ್ಕೆ ಆರಂಭವಾಗಿ ಬಹುತೇಕ ವಿದ್ಯಾರ್ಥಿಗಳಿಗೆ ಲಿಖಿತ ಚಟುವಟಿಕೆಗಳಲ್ಲಿ ಅವಕಾಶ ನೀಡಬೇಕೆಂಬ ಉದ್ದೇಶದಿಂದ ಪ್ರತಿಯೋರ್ವ ವಿದ್ಯಾರ್ಥಿಗೂ ಸೀಮಿತ ಪುಟದ ಅವಕಾಶ ನೀಡಲಾಗಿತ್ತೆಂಬ ಹೇಳಿಕೆಯು ಸಂಪಾದಕೀಯದಲ್ಲಿ ಉಲ್ಲೇಖಗೊಂಡಿದೆ.

**ವಾರ್ಷಿಕ ಸಂಚಿಕೆಗಳಲ್ಲಿ ಪ್ರಕಟಗೊಂಡ ಸಾಹಿತ್ಯಕ ಬರಹಗಳ ಸಂಕ್ಷಿಪ್ತ ವಿಶ್ಲೇಷಣೆ:**

1980ರಲ್ಲಿ ಆರಂಭಗೊಂಡ ಈ ಕಾಲೇಜಿನ ವಾರ್ಷಿಕ ಸಂಚಿಕೆಯ ಪ್ರಥಮಸಂಪುಟವು 1987ರಲ್ಲಿ ಪ್ರಕಟಗೊಂಡಿರುತ್ತದೆ. 1987ರಿಂದ ಕ್ರಿ.ಶ. 2000ದ ತನಕ ನಿರಂತರವಾಗಿ ಸಂಚಿಕೆಗಳು ಪ್ರಕಟಗೊಳ್ಳುತ್ತಲೇ ಬಂದಿವೆ. ಆರಂಭದ ಸಂಚಿಕೆಯಿಂದಲೇ ಕನ್ನಡ ಸಾಹಿತ್ಯಕ ಬರಹಗಳಿಗೆ ಸ್ಥಳಾವಕಾಶ ನೀಡಿರುವ ಕುರಿತಂತೆ ಲಭ್ಯ ಸಂಚಿಕೆಯಿಂದ ತಿಳಿದುಬರುತ್ತದೆ. 1990ರ ವಾರ್ಷಿಕ ಸಂಚಿಕೆಗಳಿಂದ 'ಮೌಲ್ಯಮಾಪನ' ಶೀರ್ಷಿಕೆಯಲ್ಲಿ ವಸಂತಿ ಶೆಣೈ ಎಂಬ ಪ್ರಥಮ ಬಿ.ಕಾಂ. ವಿದ್ಯಾರ್ಥಿನಿಯ ಕವನ ಹೀಗೆ ಆರಂಭಗೊಳ್ಳುತ್ತದೆ.

'ವರ್ಷವಿಡೀ ಕಲಿತ ವಿಷಯ । ಬರೆದೆ ಹೆದರಿ ಮೂರು ಗಂಟೆಯ ಅವಧಿಯಲಿ ।

ಬರೆದೆ ಏನನ್ನೋ । ಹೊಸ ಹೊಸ ಹಾಳೆಯಲಿ ।

............................................................

ಕಾಯುವೆ, ಬರುವ, ಸಂಪ್ಲಿಮೆಂಟರಿಯ ವರೆಗೆ । ಹೆದರದೆ ಹೋಗುವೆ ।

ಏಕೆ ಗೊತ್ತೆ......? ನೀವು ಇದ್ದೀರಿ ನನ್ನ ಜೊತೆಗೇ'(ಸಂ: ಫಾ ಎ. ಕ್ಯಾಸ್ಟಲಿನೊ, 1989–90, ಪು–67)

ಎಂಬ ಒಕ್ಕಣೆಯಲ್ಲಿ ಕವನವು ಮುಕ್ತಾಯಗೊಳ್ಳುತ್ತದೆ.

ಕಾಲೇಜು ಸಂಚಿಕೆಯಲ್ಲಿ ಇಂತಹ ಕವನ, ಕಥೆ, ಹನಿಗವನಗಳು ಸಾಕಷ್ಟು ಪ್ರಕಟಗೊಂಡಿದ್ದರೂ ಈ ಸಂಶೋಧನಾ ಪ್ರಬಂಧದ ವ್ಯಾಪ್ತಿಯಲ್ಲಿ ಆ ವಿಷಯಗಳ ಕುರಿತಾಗಿ ಸಮಗ್ರ ವಿಶ್ಲೇಷಣೆ ಸಾಧ್ಯವಾಗುವುದಿಲ್ಲ. ಕಾಲೇಜು ಸಂಚಿಕೆಗಾಗಿ ಕಥೆ, ಕವನ, ಲೇಖನಗಳನ್ನು ಬರೆದ ಪ್ರತಿಭಾವಂತ ವಿದ್ಯಾರ್ಥಿಗಳು ತಮ್ಮ ಪದವಿಯ ಅನಂತರದಲ್ಲೂ ಸೃಜನಶೀಲ ಚಟುವಟಿಕೆಗಳಲ್ಲಿ ತೊಡಗಿಕೊಂಡು ಸಾಹಿತ್ಯಾಸಕ್ತರ ಗಮನ ಸೆಳೆದಿರುತ್ತಾರೆ.

**ಎಸ್.ಎಂ.ಎಸ್. ಕಾಲೇಜು, ಬ್ರಹ್ಮಾವರ:**

ಉಡುಪಿ ಜಿಲ್ಲೆಯಲ್ಲಿ ಕ್ರಿ.ಶ. 1979 ರಿಂದ 2000ದ ವರೆಗಿನ ಅವಧಿಯಲ್ಲಿ ಅಸ್ತಿತ್ವಕ್ಕೆ ಬಂದ 2ನೇ ಹಂತದ ಕಾಲೇಜುಗಳಲ್ಲಿ ಅತಿಮುಖ್ಯವಾಗಿ ಗುರುತಿಸಿಕೊಂಡ ಕಾಲೇಜು, 'ಎಸ್.ಎಂ.ಎಸ್. ಕಾಲೇಜು, ಬ್ರಹ್ಮಾವರ' ಎನ್ನುವ ಸಂಸ್ಥೆಯಾಗಿದೆ. ಈ ಸಂಸ್ಥೆಯ ಸಾಹಿತ್ಯ ಚಟುವಟಿಕೆಗಳನ್ನು ಈ ಕೆಳಗಿನ ವಿಶೇಷ ಶೀರ್ಷಿಕೆಯಲ್ಲಿ ಅಧ್ಯಯನ ಮಾಡಲಾಗಿದೆ.

**ಅ) ಸಾಹಿತ್ಯ ಸಂಘದ ಚಟುವಟಿಕೆಗಳು:**

ಕಾಲೇಜಿನ ಸಾಹಿತ್ಯ ಸಂಘವು ಸಾಹಿತ್ಯಚಟುವಟಿಕೆಗಳನ್ನು ನಿರ್ವಹಿಸುವ ಜವಾಬ್ದಾರಿಯನ್ನು ಹೊಂದಿದ್ದು, ಭಾಷಾ ಉಪನ್ಯಾಸಕರು ಈ ವೇದಿಕೆಯ ಸಂಚಾಲಕರಾಗಿರುತ್ತಾರೆ.

**ಸಂಸ್ಮರಣ ಉಪನ್ಯಾಸಗಳು:**

ಕಾಲೇಜಿನ ಆಡಳಿತ ಮಂಡಳಿಯ ಓರ್ವ ಸಕ್ರಿಯ ಸದಸ್ಯರಾಗಿ ಕಾಲೇಜಿನ ಎಲ್ಲಾ ಚಟುವಟಿಕೆಗಳಿಗೆ ಉತ್ತೇಜನ ನೀಡುತ್ತಾ, ಕಾಲೇಜಿನ ಶೈಕ್ಷಣಿಕ ಪ್ರಗತಿ ಮತ್ತು ವಿಕಸನಕ್ಕೆ ಕಾರಣರಾದವರು ರೆ। ಫಾ। ಕೆ. ಕುರಿಯಾಕೋಸ್ ಅವರು. ಇವರ ನಿಧನಾನಂತರ ಅವರ ಹೆಸರಿನಲ್ಲಿ ಒಂದು ಉಪನ್ಯಾಸ ಕಾರ್ಯಕ್ರಮವನ್ನು ಹಮ್ಮಿಕೊಂಡ ಕುರಿತಂತೆ ವರದಿಗಳು ಕಾಲೇಜು ವಾರ್ಷಿಕ ಸಂಚಿಕೆಯಲ್ಲಿ ಲಭ್ಯವಾಗುತ್ತದೆ. ಕಾಲೇಜಿನ ಪ್ರಾಂಶುಪಾಲರಾಗಿ ಸೇವೆಯಲ್ಲಿರುವಾಗಲೇ ನಿಧನರಾದ ಡಾ. ಬಿ. ವಸಂತ ಶೆಟ್ಟಿಯವರ ಸಂಸ್ಮರಣ ಉಪನ್ಯಾಸವೂ 1998 ರಿಂದ ನಡೆದುಕೊಂಡು ಬರುತ್ತಿದೆ.

**ಕಾಲೇಜು ವಾರ್ಷಿಕ ಸಂಚಿಕೆಗಳು:**

ಸಾಹಿತ್ಯ ಚಟುವಟಿಕೆಗಳ ವಿವರಗಳ ಕುರಿತಂತೆ ಸೂಕ್ತ ಮಾಹಿತಿಯು ಕಾಲೇಜು ವಾರ್ಷಿಕ ಸಂಚಿಕೆಗಳಲ್ಲಿ ಲಭ್ಯವಿದೆ. ಕಾಲೇಜು ಆರಂಭವಾದ ವರ್ಷದಿಂದಲೂ ವರ್ಷಂಪ್ರತಿ ಕಾಲೇಜು ಸಂಚಿಕೆಯು ಪ್ರಕಟವಾಗುತ್ತಿದ್ದು, ಈ ಸಂಚಿಕೆಯು ಕೇವಲ 60 ರಿಂದ 70 ಪುಟದ ಮಿತಿಗೊಳಪಟ್ಟಿದ್ದು, ಅಲ್ಲಿಯ ಸಾಹಿತ್ಯ ಲೇಖನಗಳು ವಿದ್ಯಾರ್ಥಿ ಮಟ್ಟದ ಸಾಮಾನ್ಯ ಬರಹಗಳೇ ಆಗಿದ್ದು, ಯಾವ ಉತ್ಕೃಷ್ಟವಾದ ಸಾಹಿತ್ಯ ಸತ್ವವುಳ್ಳ ಬರಹಗಳು ಕಂಡುಬರುವುದಿಲ್ಲ. ಲಿಖಿತ ಚಟುವಟಿಕೆಗಳು ಸತ್ವರಹಿತವಾಗಿದ್ದರೂ, ಸತ್ವಪೂರ್ಣವಾದ ಮೌಲಿಕವಾದ, ಮೌಖಿಕ ಸಾಹಿತ್ಯ ಚಟುವಟಿಕೆಗಳು (ಉಪನ್ಯಾಸ, ಗೋಷ್ಠಿ, ಕಮ್ಮಟ) ವರ್ಷಂಪ್ರತಿ ನಡೆದುಕೊಂಡು ಬಂದಿರುವುದನ್ನು ಕಾಲೇಜು ಸಂಚಿಕೆಯ ದಾಖಲೆಗಳಿಂದ ತಿಳಿಯಬಹುದಾಗಿದೆ.

**ಸಾಹಿತ್ಯ ಚಟುವಟಿಕೆಗಳ ನಿರ್ವಹಣೆಗೆ ಕೂಡಿ ಬಂದ ಕಾರಣಗಳು ಅಥವಾ ಪ್ರೇರಣೆಗಳು:**

**ಸ್ಥಾಪಕ ಪ್ರಾಂಶುಪಾಲರಾದ ಮ್ಯಾಥ್ಯೂ ಸಿ. ನೈನಾನ್ ಅವರ ಶೈಕ್ಷಣಿಕ ಕಾಳಜಿ:**

ಸ್ಥಾಪಕ ಪ್ರಾಂಶುಪಾಲರಾಗಿದ್ದ ಮ್ಯಾಥ್ಯೂ ಸಿ. ನೈನಾನ್ ಅವರು ಆಂಗ್ಲಭಾಷಾ ಉಪನ್ಯಾಸಕರಾಗಿ ಕಾಲೇಜಿನಲ್ಲಿ ಕನ್ನಡ ಸಾಹಿತ್ಯ ಹಾಗೂ ಭಾಷೆ-ಸಂಸ್ಕೃತಿಯ ಚಟುವಟಿಕೆಗಳಿಗೆ ವಿಶೇಷ ಪ್ರೋತ್ಸಾಹ ನೀಡಿದ ಪರಿಣಾಮವಾಗಿ ಸಾಹಿತ್ಯಚಟುವಟಿಕೆಗಳಿಗೆ ಕಾಲೇಜಿನಲ್ಲಿ ಅವಕಾಶ ದೊರೆಯಿತು.

**ಸ್ಥಳೀಯ ಸಂಸ್ಕೃತಿ-ಇತಿಹಾಸದ ಕುರಿತು ವಿಶೇಷ ಅಧ್ಯಯನ ನಡೆಸಿದ ಉಪನ್ಯಾಸಕ/ಪ್ರಾಂಶುಪಾಲರಾದ ಬಿ. ವಸಂತ ಶೆಟ್ಟಿಯವರ ಪ್ರೋತ್ಸಾಹ:**

ಎಸ್.ಎಮ್.ಎಸ್. ಪದವಿಪೂರ್ವ ಕಾಲೇಜಿನಿಂದ ಪದೋನ್ನತಿಯನ್ನು ಪಡೆದು, ಪ್ರೊ. ಬಿ. ವಸಂತ ಶೆಟ್ಟಿಯವರು ಪದವಿ ಕಾಲೇಜನ್ನು ಸೇರಿದರು ಉಪನ್ಯಾಸಕರಾಗಿ ವಸಂತ ಶೆಟ್ಟಿಯವರು ಕಾಲೇಜಿನಲ್ಲಿ ಪ್ರಾಚ್ಯವಸ್ತುವಿಷಯವನ್ನು ಐಚ್ಛಿಕ ವಿಷಯವಾಗಿ ಓದುವುದಕ್ಕೆ ಅವಕಾಶ ಕಲ್ಪಿಸಲು ಪ್ರಾಂಶುಪಾಲರನ್ನು ಒಪ್ಪಿಸಿದರು. ವಸಂತ ಶೆಟ್ಟಿಯವರೇ ಮುಂದೆ ಪ್ರಾಂಶುಪಾಲರಾಗಿ ಸಾಹಿತ್ಯಚಟುವಟಿಕೆಗಳಿಗೆ ವಿಶೇಷ ಪ್ರೋತ್ಸಾಹವನ್ನು ನೀಡಿದರು.

**ವಿಶೇಷ ಸಾಹಿತ್ಯಾಸಕ್ತಿಯನ್ನು ಮೈಗೂಡಿಸಿಕೊಂಡ ಪ್ರೊ. ಕೆ. ಜಿ. ನಾರಾಯಣ:** ಕಾಲೇಜು ಸ್ಥಾಪನೆಯ ವರ್ಷದಲ್ಲಿ ಕಾಲೇಜಿಗೆ ಕನ್ನಡ ಉಪನ್ಯಾಸಕರಾಗಿ ಸೇರ್ಪಡೆಗೊಂಡ ಪ್ರೊ. ಕೆ.ಜಿ. ನಾರಾಯಣ ಅವರು ಯಕ್ಷಗಾನ, ಸಂಗೀತ, ನಾಟಕ ಮುಂತಾದ ಪ್ರದರ್ಶನ ಕಲೆಗಳಲ್ಲಿ ಎಳವೆಯಿಂದಲೇ ಆಸಕ್ತಿಯನ್ನು ರೂಢಿಸಿಕೊಂಡು ಬಂದವರು. ಶಿವಮೊಗ್ಗ ಜಿಲ್ಲೆಯ ಹೆಗ್ಗೋಡಿನ

ಸಮೀಪದ ‘ಪುರಪ್ಪೆಮನೆ’ ಇವರ ಹುಟ್ಟೂರಾಗಿದ್ದು, ವಿದ್ಯಾರ್ಥಿ ದೆಸೆಯಿಂದಲೇ ‘ನೀನಾಸಂ’ ಸಾಂಸ್ಕೃತಿಕ ಕೇಂದ್ರದ ಜೊತೆ ಒಡನಾಡಿಕೊಂಡಿದ್ದವರು. ‘ನೀನಾಸಂ’ ಸಂಸ್ಥೆಯ ಸಂಸ್ಥಾಪಕ ಹಾಗೂ ಖ್ಯಾತ ರಂಗದಿಗ್ಗಜ ಕೆ.ವಿ. ಸುಬ್ಬಣ್ಣ ಅವರ ಮಾರ್ಗದರ್ಶನ ಮತ್ತು ನಿರ್ದೇಶನದಲ್ಲಿಯೇ ತಮ್ಮ ಕಲಾಜೀವನಕ್ಕೆ ನಿರ್ದಿಷ್ಟಸ್ವರೂಪವನ್ನೂ ನಿಲುವನ್ನೂ ಪಡೆದುಕೊಂಡವರು. ಇವರು ಎಸ್.ಎಮ್.ಎಸ್. ಕಾಲೇಜಿನಲ್ಲಿ ತಮ್ಮ ವೃತ್ತಿ ಜೀವನವನ್ನು ಮೊದಲು ಮಾಡಿದ ಲಾಗಾಯ್ತಿನಿಂದ ಎಸ್.ಎಮ್.ಎಸ್. ಪದವಿ ಕಾಲೇಜಿಗೆ ನೀನಾಸಂ ಕಲಾವಿದರೆಲ್ಲರ ನಂಟು ಬೆಳೆಯಿತು. ಈ ನಂಟಿನ ಕಾರಣದಿಂದಾಗಿ ಕಾಲೇಜಿನ ಸಾಹಿತ್ಯಚಟುವಟಿಕೆಗಳಿಗೆ ಟಿ. ಪಿ. ಅಶೋಕ, ಪ್ರಸನ್ನ, ಅಕ್ಷರ, ಕೆ. ಜಿ. ಕೃಷ್ಣಮೂರ್ತಿ ಮುಂತಾದ ಕಲಾವಿದರು ನಿತ್ಯ ಅತಿಥಿಗಳಾಗುವ ಅವಕಾಶ ಲಭಿಸಿತು.

**ಎಸ್.ಎಂ.ಎಸ್. ಸಾಹಿತ್ಯಚಟುವಟಿಕೆಗಳ ಪರಿಣಾಮಗಳು:**

ಕಾಲೇಜಿನ ಶೈಕ್ಷಣಿಕ ಪಠ್ಯಕ್ಕೆ ಪೂರಕವಾಗಿ ಸಾಹಿತ್ಯಕ ಮತ್ತು ಸಾಂಸ್ಕೃತಿಕ ಚಟುವಟಿಕೆಗಳು ನಿರಂತರವಾಗಿ ನಡೆಯುತ್ತಾ ಬಂದುವು. ವಿವಿಧ ವೇದಿಕೆಗಳಲ್ಲಿ ವಿದ್ಯಾರ್ಥಿಗಳು ಈ ಚಟುವಟಿಕೆಗಳಲ್ಲಿ ಸಕ್ರಿಯರಾದರು. ಈ ಚಟುವಟಿಕೆಗಳು ಇಲ್ಲಿಯ ಪದವಿ ವಿದ್ಯಾರ್ಥಿಗಳ ಬದುಕಿನ ಮೇಲೆ ಪರಿಣಾಮವನ್ನುಂಟುಮಾಡಿದ ಕಾರಣ ಸಾಹಿತ್ಯ-ಸೃಜನಶೀಲ ಚಟುವಟಿಕೆಗಳಲ್ಲಿ ತೊಡಗಿಕೊಂಡ ಕೆಲವು ವಿದ್ಯಾರ್ಥಿಗಳ ಹೆಸರು ಹಾಗೂ ಅವರ ಕ್ಷೇತ್ರವನ್ನು ಈ ಪ್ರಬಂಧ ಕೊನೆಯ **ಅನುಬಂಧ ಸಂಖ್ಯೆ 12** ರಲ್ಲಿ ಉಲ್ಲೇಖಿಸಲಾಗಿದೆ.

ಎರಡನೇ ಘಟ್ಟದಲ್ಲ ಅಸ್ತಿತ್ವಕ್ಕೆ ಬಂದ 6 ಕಾಲೇಜುಗಳ ಹೆಸರುಗಳು ಈ ಕೆಳಗಿನಂತಿದ್ದು, ಇಲ್ಲಿ ಮೂರು ಕಾಲೇಜುಗಳಲ್ಲಿ ವಾರ್ಷಿಕ ಸಂಚಿಕೆ ಪ್ರಕಟಗೊಳ್ಳುತ್ತಿದ್ದರೂ ಆ ಪ್ರಕಟಗೊಂಡ ಬರಹಗಳೆಲ್ಲವೂ ಸಾಹಿತ್ಯೇತರ ವಿಚಾರಗಳಿಗೆ ಪ್ರಾಮುಖ್ಯವನ್ನು ಕೊಟ್ಟ ಕಾರಣ ಆ ವಾರ್ಷಿಕ ಸಂಚಿಕೆಗಳ ಕುರಿತಾಗಿ ಇಲ್ಲಿ ವಿಶ್ಲೇಷಣೆ ನಡೆಸಲಾಗಿಲ್ಲ.

1. ಶಂಕರ ಅಡ್ಯಂತಾಯ ಮೆಮೋರಿಯಲ್ ಕಾಲೇಜು ನಿಟ್ಟೆ-1987
2. ಕ್ರಾಸ್‌ಲ್ಯಾಂಡ್ ಕಾಲೇಜು ಬ್ರಹ್ಮಾವರ-1988
3. ಎಸ್.ವಿ.ಟಿ. ಮಹಿಳಾ ಪದವಿ ಕಾಲೇಜು ಕಾರ್ಕಳ-1988
4. ಉಪೇಂದ್ರ ಪೈ ಮೆಮೋರಿಯಲ್ ಕಾಲೇಜು, ಕುಂಜಿಬೆಟ್ಟು, ಉಡುಪಿ-1991
5. ಬಿ.ಕೆ. ಶೆಟ್ಟಿ ಮೆಮೋರಿಯಲ್ ಕಾಲೇಜು, ಕೊಕ್ಕರ್ಣೆ-1992
6. ಬಿ.ಕೆ. ಹೆಗ್ಡೆ ಮೆಮೋರಿಯಲ್ ಕಾಲೇಜು, ಕುಂದಾಪುರ-1993

ಈ ಮೇಲಿನ 6 ಕಾಲೇಜುಗಳಲ್ಲಿ ಕ್ರಾಸ್‌ಲ್ಯಾಂಡ್ ಕಾಲೇಜು ಒಂದನ್ನು ಹೊರತುಪಡಿಸಿ, ಉಳಿದೆಲ್ಲಾ ಕಾಲೇಜುಗಳು ಅನುದಾನರಹಿತ ಕಾಲೇಜುಗಳಾಗಿರುತ್ತವೆ. ಈ ಮೇಲ್ಕಂಡ ಆರೂ ಕಾಲೇಜುಗಳು ಸಾಹಿತ್ಯಚಟುವಟಿಕೆಗಳಿಗೆ ಪ್ರಾಮುಖ್ಯವನ್ನು ನೀಡಿದ ದಾಖಲೆಗಳು ಕಂಡುಬರುವುದಿಲ್ಲ.

**ಎರಡನೇ ಹಂತದಲ್ಲಿ ಆರಂಭಗೊಂಡ ಕಾಲೇಜುಗಳಲ್ಲಿ ನಡೆದ (20ನೇ ಶತಮಾನದ) ಸಾಹಿತ್ಯ ಚಟುವಟಿಕೆಗಳ ಸಂಕ್ಷಿಪ್ತ ವಿಶ್ಲೇಷಣೆ:**

ಸೈಂಟ್ ಮೇರೀಸ್ ಕಾಲೇಜು ಶಿರ್ವ, ಎಂ.ಎಸ್.ಆರ್.ಎಸ್. ಕಾಲೇಜು ಶಿರ್ವ, ಎಸ್.ಎಮ್.ಎಸ್. ಬ್ರಹ್ಮಾವರ ಈ ಮೂರು ಕಾಲೇಜುಗಳು 5 ವರ್ಷ ಅನುದಾನರಹಿತ ನೆಲೆಯಲ್ಲಿ ಕಾರ್ಯನಿರ್ವಹಿಸಿ, 5 ವರ್ಷದ ಅನಂತರದಲ್ಲಷ್ಟೇ ಸರಕಾರದ ಅನುದಾನವನ್ನು ಪಡೆದುವು. ಈ ಮೂರೂ ಕಾಲೇಜಿನ ಆಡಳಿತವರ್ಗಗಳು ಸಾಕಷ್ಟು ಸ್ಥಳವನ್ನು ಹೊಂದಿದ್ದು, ಏಕೀಕರಣ ಪೂರ್ವದಿಂದಲೇ ಪ್ರಾಥಮಿಕ ಹಾಗೂ ಪ್ರೌಢಶಿಕ್ಷಣ ಸಂಸ್ಥೆಗಳನ್ನು ನಡೆಸಿಕೊಂಡು ಬಂದಿರುತ್ತವೆ. ಈ ಸಂಸ್ಥೆಗಳು 1970ರ ದಶಕದಲ್ಲಿಯೇ ಪದವಿಪೂರ್ವ ಕಾಲೇಜುಗಳನ್ನು ಪ್ರಾರಂಭಿಸಿದ್ದವು. ಈ ಪದವಿಪೂರ್ವ ಕಾಲೇಜಿನಿಂದ ಪಿ.ಯು.ಸಿ. ಉತ್ತೀರ್ಣರಾದ ವಿದ್ಯಾರ್ಥಿಗಳು ದೂರದ ಊರುಗಳಿಗೆ ತೆರಳಿ ಕಾಲೇಜು ಶಿಕ್ಷಣವನ್ನು ಪಡೆಯುತ್ತಿದ್ದಾಗ ತಾವೇ ಏಕೆ ಪದವಿ ಶಿಕ್ಷಣ ಸಂಸ್ಥೆಯನ್ನು ಆರಂಭಿಸಬಾರದು? ಎಂಬ ಪ್ರಶ್ನೆ ಹಾಕಿಕೊಂಡು ಪದವಿ ಶಿಕ್ಷಣಸಂಸ್ಥೆಗಳನ್ನು ಆರಂಭಿಸುವುದಕ್ಕೆ ಮುಂದಾದರು. ಈ ಸಂಸ್ಥೆಗಳಲ್ಲಿ ನಡೆದ ಸಾಹಿತ್ಯಚಟುವಟಿಕೆಗಳನ್ನು ಕ್ರಮವತ್ತಾಗಿ ಈ ಕೆಳಗಿನಂತೆ ವಿಶ್ಲೇಷಿಸಲಾಗಿದೆ.

ಕಾಲೇಜು ಆಡಳಿತವು 5 ವರ್ಷಗಳ ಉಪನ್ಯಾಸಕರ ವೇತನಕ್ಕಾಗಿ ಅಪಾರ ಮೊತ್ತದ ಹಣವನ್ನು ವ್ಯಯಿಸಿದ್ದರು. 5 ವರ್ಷದ ಅನಂತರದಲ್ಲಿ (ವೇತನಾನುದಾನಕ್ಕೆ ಒಳಪಟ್ಟ ನಂತರ) ತಮ್ಮ ಆರ್ಥಿಕ ಸಂಪನ್ಮೂಲವನ್ನು ಕಾಲೇಜಿನ ಒಟ್ಟಾರೆ ಚಟುವಟಿಕೆಗಳಿಗೆ ಬಳಸಿಕೊಳ್ಳುವುದೇ ಅವರ ಮುಖ್ಯ ಉದ್ದೇಶವಾಗಿತ್ತೇ ಹೊರತು, ಸಾಹಿತ್ಯಚಟುವಟಿಕೆಗಳಿಗಾಗಿ ವ್ಯಯಿಸುವುದು ಅನಿವಾರ್ಯವಾಗಿರಲಿಲ್ಲ. ಆದರೆ ಎರಡನೇ ಹಂತದ ಕಾಲೇಜಿನಲ್ಲಿ ಸಾಹಿತ್ಯಚಟುವಟಿಕೆಗಳಿಗೆ ಸ್ವಲ್ಪಮಟ್ಟಿನ ಅವಕಾಶವನ್ನು ನೀಡಿದವರು ಬ್ರಹ್ಮಾವರ ಎಸ್.ಎಂ.ಎಸ್. ಕಾಲೇಜು ಎನ್ನುವುದು ಅಲ್ಲಿಯ ಸಂಚಿಕೆಗಳಲ್ಲಿ ಉಲ್ಲೇಖಗೊಂಡ ದಾಖಲೆಗಳಿಂದ ತಿಳಿದುಬರುತ್ತದೆ. ಈ ಅವಕಾಶಕ್ಕೆ ಆಂಗ್ಲ ಭಾಷಾ ವಿಷಯದಲ್ಲಿ ಉನ್ನತಶಿಕ್ಷಣವನ್ನು ಹೊಂದಿದ ಮ್ಯಾಥ್ಯು ಸಿ. ನೈನಾನ್ ಅವರು. ಪ್ರಾಂಶುಪಾಲರಾಗಿ ಜವಾಬ್ದಾರಿಯನ್ನು ಸ್ವೀಕರಿಸಿರುವುದು ಮೊದಲ ಕಾರಣವಾಗಿದೆ. ಎರಡನೆಯದಾಗಿ 'ಹೆಗ್ಗೋಡು' ಎಂಬ ಸಾಹಿತ್ಯಕ್ಷೇತ್ರದಲ್ಲಿ ಆಗಲೇ ಗುರುತಿಸಿಕೊಂಡ, ಆ ಕೇಂದ್ರದೊಂದಿಗೆ ಸಂಪರ್ಕ ಹೊಂದಿದ ಪ್ರೊ. ಕೆ. ಜಿ. ನಾರಾಯಣ ಅವರು ಕನ್ನಡ ಉಪನ್ಯಾಸಕರಾಗಿ ಸೇರ್ಪಡೆಗೊಂಡ ಕಾರಣದಿಂದಾಗಿ ಕಾಲೇಜಿನಲ್ಲಿ ಸಾಹಿತ್ಯಚಟುವಟಿಕೆಗಳಿಗೆ ಸಾಕಷ್ಟು ಅವಕಾಶಗಳು ದೊರೆತವು. ಅಲ್ಲಿಯ ಸಾಹಿತ್ಯಚಟುವಟಿಕೆಗಳು ಸ್ವರೂಪ ಮತ್ತು ಸಂಖ್ಯೆಯು ಮಿತಿಗೊಳಪಟ್ಟಿರುವ ಕಾರಣ ಪರಿಣಾಮಗಳು ಕೂಡ ಮಿತವಾಗಿಯೇ ಇವೆ ಎನ್ನುವುದನ್ನು ಗುರುತಿಸಬಹುದಾಗಿದೆ.

ಎರಡನೇ ಹಂತದ ಎರಡನೇ ಕಾಲೇಜಾಗಿ ಸೈಂಟ್ ಮೇರಿಸ್ ಕಾಲೇಜು ಶಿರ್ವ ಇದನ್ನು ಗುರುತಿಸಲಾಗಿದ್ದು, ಸಾಹಿತ್ಯ ಚಟುವಟಿಕೆಗಳ ದೃಷ್ಟಿಯಿಂದಲೂ ಎರಡನೇ ಹಂತದಲ್ಲಿದೆ. ಇಲ್ಲಿನ ಕನ್ನಡ ವಿಭಾಗವನ್ನು ಮುನ್ನಡೆಸಿದ ಪ್ರೊ. ಭವಾನಿ ಶಂಕರ್ ಅವರ ವಿಶೇಷ ಮುತುವರ್ಜಿಯಿಂದ 20ನೇ ಶತಮಾನದ ಕಾಲಾವಧಿಯಲ್ಲಿ ಕಾಲೇಜು ಮಟ್ಟಕ್ಕೇ ಸೀಮಿತಗೊಂಡು ಸಾಹಿತ್ಯಚಟುವಟಿಕೆಗಳು ನಡೆದಿರುವುದನ್ನು ಕಾಲೇಜು ವಾರ್ಷಿಕ ಸಂಚಿಕೆಯ ದಾಖಲೆಯಿಂದ ತಿಳಿದುಬರುತ್ತವೆ.

ಈ ಹಂತದ ಮೂರನೇ ಕಾಲೇಜು ಎಂದು ಗುರುತಿಸಬಹುದಾದ ಎಂ.ಎಸ್.ಆರ್.ಎಸ್. ಕಾಲೇಜು ಶಿರ್ವ ಇಲ್ಲಿನ ಕನ್ನಡ ವಿಭಾಗಕ್ಕೆ ಎಂ.ಎಸ್. ಜಯಪ್ರಕಾಶ ಎಂಬವರು ಸೇರ್ಪಡೆಗೊಂಡು ತಮ್ಮ ಚಟುವಟಿಕೆಯಿಂದ ಗುರುತಿಸಿಗೊಂಡ ಕೆಲವೇ

ಸಮಯದಲ್ಲಿ ಅಕಾಲನಿಧನರಾದ ಪ್ರಯುಕ್ತ ಇಲ್ಲಿನ ಸಾಹಿತ್ಯಚಟುವಟಿಕೆಗಳು ಪೂರ್ಣ ಸ್ತಬ್ಧಗೊಂಡುವು ಕಾಲೇಜು ಆಡಳಿತವು ಇಂತಹ ಚಟುವಟಿಕೆಗಳ ಕುರಿತಾಗಿ ಯಾವುದೇ ಆಸಕ್ತಿ ಇರದ ಕಾರಣ, ಮುಂದಿನ ಉಪನ್ಯಾಸಕರು ಸಾಹಿತ್ಯಚಟುವಟಿಕೆಗಳಿಗಾಗಿ ಮುಂದೆ ಹೋಗುವ ಅವಕಾಶ ಇಲ್ಲದೆ ಚಟುವಟಿಕೆಗಳು ಸ್ಥಗಿತಗೊಂಡುವು ಎನ್ನುವುದನ್ನು ಈ ಅಧ್ಯಯನದಲ್ಲಿ ಕಂಡುಕೊಳ್ಳಲಾಗಿದೆ.

ಮೂರನೇ ಹಂತದಲ್ಲಿ ಬಂದ ಖಾಸಗಿ ಕಾಲೇಜುಗಳು ಸಂಪೂರ್ಣ ಅನುದಾನರಹಿತ ನೆಲೆಯಲ್ಲಿ ಸ್ಥಾಪನೆಗೊಂಡ ಕಾರಣ ಕಾಲೇಜಿನ ಮೂಲಭೂತ ಅವಶ್ಯಕತೆಯಾದ ಕಟ್ಟಡ, ವೇತನಾನುದಾನವನ್ನು ವ್ಯವಸ್ಥೆಗೊಳಿಸುವುದು ಆಡಳಿತ ಮಂಡಳಿಗೆ ಅತ್ಯಂತ ತ್ರಾಸದಾಯಕವಾದ ಪ್ರಯುಕ್ತ ಯಾವುದೇ ಸಾಹಿತ್ಯಚಟುವಟಿಕೆಗಳಿಗೆ ಮುಂದಾಗಿಲ್ಲ ಎನ್ನುವುದನ್ನು ಈ ಅಧ್ಯಯನದಲ್ಲಿ ಕಂಡುಕೊಳ್ಳಲಾಗಿದೆ. ಸಾಹಿತ್ಯಚಟುವಟಿಕೆಗಳಿಗಿಂತ ಪದವಿ ಶಿಕ್ಷಣವನ್ನು ಪೂರೈಸುವ ಸಂದರ್ಭದಲ್ಲಿ ಉದ್ಯೋಗಕ್ಕೆ ಬೇಕಾದ ತರಬೇತಿಗೆ ಆದ್ಯತೆ ನೀಡಬೇಕು ಎಂಬುದು ಹಾಗೂ ಕಟ್ಟಡ ಮತ್ತಿತರ ಅಗತ್ಯ ಸೌಲಭ್ಯಕ್ಕಾಗಿ ಹಣದ ಅವಶ್ಯಕತೆ ಇದೆಯೇ? ಇದ್ದಲ್ಲಿ ಅದನ್ನು ಕ್ರೋಢೀಕರಿಸುವ ಬಗೆ ಹೇಗೆ? ಎಂಬ ವಿಚಾರದ ಕುರಿತು ಆಡಳಿತ ಮಂಡಳಿ ಕಾರ್ಯಪ್ರವೃತ್ತರಾಗಿದ್ದು, ಸಾಹಿತ್ಯಚಟುವಟಿಕೆಗಳ ಕುರಿತಂತೆ ನಿರಾಸಕ್ತಿ ಹೊಂದಿರುವುದನ್ನು ಈ ಅಧ್ಯಯನದಲ್ಲಿ ಗುರುತಿಸಲಾಗಿದೆ.

**ವೃತ್ತಿ ಶಿಕ್ಷಣಸಂಸ್ಥೆಗಳಲ್ಲಿ ನಡೆದ ಸಾಹಿತ್ಯ ಚಟುವಟಿಕೆಗಳ ಸಂಕ್ಷಿಪ್ತ ಅವಲೋಕನ:**

ನೇರವಾಗಿ ನಿರ್ದಿಷ್ಟ ವೃತ್ತಿಕೌಶಲದ ಕುರಿತು ಶಿಕ್ಷಣ ನೀಡುವ ಕಾಲೇಜುಗಳೇ ವೃತ್ತಿಶಿಕ್ಷಣ ಸಂಸ್ಥೆಗಳು. ಇಂತಹ ವೃತ್ತಿಪರ ಶಿಕ್ಷಣಸಂಸ್ಥೆಗಳ ಕನ್ನಡ ಸಾಹಿತ್ಯ ಚಟುವಟಿಕೆಗಳನ್ನು ಸಂಕ್ಷಿಪ್ತವಾಗಿ ಅವಲೋಕಿಸುವುದು ಈ ಅಧ್ಯಯನಕ್ಕೆ ಪೂರಕ ವಿಷಯವಾಗಿರುತ್ತದೆ. ಈ ದೃಷ್ಟಿಯಿಂದ ಉಡುಪಿ ಜಿಲ್ಲೆಯಲ್ಲಿ 20ನೇ ಶತಮಾನದ ಹೊತ್ತಿಗೆ ಅಸ್ತಿತ್ವದಲ್ಲಿದ್ದ ವೃತ್ತಿಪರ ಶಿಕ್ಷಣ ಸಂಸ್ಥೆಗಳ ಸಾಹಿತ್ಯ ಚಟುವಟಿಕೆಗಳನ್ನು ವಿಶ್ಲೇಷಣೆಗೊಳಪಡಿಸಿ, ಅದರ ಪರಿಣಾಮಗಳನ್ನು ಅಧ್ಯಯನದೃಷ್ಟಿಯಿಂದ ಗುರುತಿಸಬೇಕಾಗಿದೆ.

**ಡಾ. ಟಿ. ಎಂ. ಎ. ಪೈ ಶಿಕ್ಷಣ ಕಾಲೇಜು, ಉಡುಪಿ:**

ಮಣಿಪಾಲ ಶಿಕ್ಷಣಸಂಸ್ಥೆಗಳ ಸಂಸ್ಥಾಪಕರಾದ ಡಾ। ಮಾಧವ ಪೈ ಅವರು 1965ರಲ್ಲಿಈ ಸಂಸ್ಥೆಯನ್ನು ಆರಂಭಿಸಿದರು.

ಇಪ್ಪತ್ತನೇ ಶತಮಾನದ ಕಾಲಾವಧಿಯಲ್ಲಿ ಕರ್ತವ್ಯ ನಿರ್ವಹಿಸಿದ ಕಾಲೇಜಿನ ಪ್ರಾಂಶುಪಾಲರ ಅನುಕ್ರಮಣಿಕೆಯ ವಿವರಗಳು ಈ ಕೆಳಗಿನಂತಿವೆ:

1. ಪ್ರೊ. ಜಿ.ಎಸ್. ಆಂಚನ್ ಎಂ.ಎ. ಲಿಟ್: 03.06.1965 ರಿಂದ 31.06.1968
2. ಪ್ರೊ. ಕೆ. ಆರ್. ಹಂದೆ., ಎಂ.ಎ. ಎಂ.ಇಡಿ: 01.06.1968 ರಿಂದ 31.05.1980
3. ಪ್ರೊ. ಓ. ವಿಶ್ವನಾಥ ಎಂ.ಎ. ಎಂ.ಇಡಿ. 01.06.1980 ರಿಂದ 14.08.1989
4. ಡಾ. ಬಿ.ಎಲ್. ಶಂಕರನಾರಾಯಣ ಎಂ.ಎಸ್ಸಿ., ಎಂ.ಇಡಿ., ಪಿಹೆಚ್.ಡಿ. ಎ.ಐ.ಇ. (Lond): 15.08.1989 ರಿಂದ 31.10.1992
5. ಪ್ರೊ. ಎ. ಮಹಾಬಲೇಶ್ವರ ಹೆಬ್ಬಾರ್ 01.11.1992 ರಿಂದ 31.08.1995

6. ಡಾ. ಮಹಾಬಲೇಶ್ವರ ರಾವ್–28.09.1998 ರಿಂದ ಈ ತನಕವೂ ಪ್ರಾಂಶುಪಾಲರಾಗಿ ಕರ್ತವ್ಯದಲ್ಲಿ ಮುಂದುವರಿಯುತ್ತಿದ್ದಾರೆ.

ಶಿಕ್ಷಣ ಕಾಲೇಜಿನ ಎಡೆಬಿಡದ ಪಾಠಪಠ್ಯ ನಿಯೋಜಿತ ಕಾರ್ಯಚಟುವಟಿಕೆ ಮತ್ತು ಪ್ರಾಯೋಗಿಕ ತರಬೇತಿಗಳ ನಡುವೆಯೂ ಕಾಲೇಜಿನಲ್ಲಿ ಸಾಹಿತ್ಯ ಚಟುವಟಿಕೆಗಳಿಗೆ ಅವಕಾಶವನ್ನು ನೀಡಲಾಗುತ್ತಿದ್ದು ಈ ಚಟುವಟಿಕೆಗಳನ್ನು ಈ ಕೆಳಗಿನ ಶೀರ್ಷಿಕೆಗಳಲ್ಲಿ ಚರ್ಚಿಸಬಹುದಾಗಿದೆ.

**ಕಾಲೇಜು ವಾರ್ಷಿಕ ಸಂಚಿಕೆಗಳು:** ಕಾಲೇಜು ಆರಂಭವಾದಂದಿನಿಂದ ಕಾಲೇಜು ವಾರ್ಷಿಕ ಸಂಚಿಕೆಯನ್ನು ವರ್ಷಂಪ್ರತಿ ಪ್ರಕಟಿಸಿಕೊಂಡು ಬಂದಿರುವುದಾಗಿ 2014ರಲ್ಲಿ ಕಾರ್ಯನಿರ್ವಹಿಸುತ್ತಿರುವ ಪ್ರಾಂಶುಪಾಲರಾದ ಪ್ರೊ. ಮಹಾಬಲೇಶ್ವರ ರಾವ್ ಅವರು ಮೌಖಿಕ ಸಂದರ್ಶನದ ಸಂದರ್ಭದಲ್ಲಿ ಹೇಳಿದ್ದಾರೆ. ಸಂಚಿಕೆಯ ಸಾಹಿತ್ಯಕ ಮಟ್ಟ ಮತ್ತು ಸ್ವರೂಪವನ್ನು ನಿರೂಪಿಸುವ ಉದ್ದೇಶದಿಂದ ಕೆಲವೇ ಆಯ್ದ ಸಂಚಿಕೆಗಳ ಮುಖ್ಯ ಶೀರ್ಷಿಕೆಗಳನ್ನಷ್ಟೇ ಇಲ್ಲಿ ವಿಶ್ಲೇಷಿಸಲಾಗಿದೆ.

ಕಾಲೇಜಿನ ದಶಮಾನೋತ್ಸವದ ಸಂದರ್ಭದಲ್ಲಿ ಪ್ರಕಟಿಸಿದ ದಶಮಾನೋತ್ಸವ ಸಂಚಿಕೆಯಲ್ಲಿ (1976–77ನೇ ಸಂಚಿಕೆ) ಹಿಂದಿನ ಸಂಚಿಕೆಯಲ್ಲಿ ಅತ್ಯುತ್ತಮವೆಂದು ಕಂಡುಕೊಂಡ ಕೆಲವು ಶೀರ್ಷಿಕೆಗಳನ್ನು ಈ ಸಂಚಿಕೆಯಲ್ಲಿ ಪುನರಪಿ ಮುದ್ರಿಸಿರುವುದು ತಿಳಿದುಬಂದಿದ್ದು, ಅದರಿಂದ ಆಯ್ದುಕೊಂಡ ಕೆಲವು ಲೇಖನಗಳನ್ನಷ್ಟೇ ವಿಶ್ಲೇಷಿಸಲಾಗಿದೆ.

ಸಂಚಿಕೆಯಲ್ಲಿ ಕನ್ನಡ ವಿಭಾಗದಲ್ಲಿ 15 ವಿವಿಧ ಶೀರ್ಷಿಕೆಗಳಿದ್ದು ಇದರಲ್ಲಿ 14 ಶೀರ್ಷಿಕೆಗಳು ಶಿಕ್ಷಣಕ್ಕೆ ಸಂಬಂಧಿಸಿದ್ದೇ ಆಗಿರುತ್ತದೆ. 15 ನೇ ಕ್ರಮಸಂಖ್ಯೆಯಲ್ಲಿ 'ಕವನಗಳು' ಎಂಬ ಶೀರ್ಷಿಕೆಯಲ್ಲಿ ವಿದ್ಯಾರ್ಥಿಶಿಕ್ಷಕರ ಕವನಗಳು ಪ್ರಕಟವಾಗಿವೆ. ಪ್ರಕಟಿತ ಕವನಗಳಲ್ಲಿ ವಿದ್ಯಾರ್ಥಿಶಿಕ್ಷಕ ವೇಣುಗೋಪಾಲ ಅಗ್ನಿಹೋತ್ರಿ ಅವರ 'ಕಾಲಹರಣ' ಕವನದ ಕುರಿತು ಎರಡು ಕಾರಣಕ್ಕಾಗಿ ವಿಶ್ಲೇಷಣೆ ಮಾಡಲೇಬೇಕಾಗಿದೆ. ಕವನದ ಆರಂಭ ಹೀಗಿದೆ:

'ಪಾಠವ ಕಲಿಸುವೆನೆಂದು । ಕ್ಲಾಸಲಿ ಹುಡುಗರ ನಗಿಸಿ ।

ಕಾಲವ ಕಳೆವವರೆಲ್ಲಾ । ಅಧ್ಯಾಪಕರೇ? ಪ್ರಾಧ್ಯಾಪಕರೇ?'(ಸಂ: ಕೆ.ಆರ್. ಹಂದೆ. ಪ್ರೊ. 1976–77, ಪು–19)

ವಿದ್ಯಾರ್ಥಿಶಿಕ್ಷಕ ಕಾಲಹರಣ ಕವನದಲ್ಲಿ ಬೇಜವಾಬ್ದಾರಿ ಅಧ್ಯಾಪಕರ ಚಿತ್ರಣವನ್ನು ನಿರೂಪಿಸುವ ಪ್ರಯತ್ನವನ್ನು ಕಾಣಬಹುದಾಗಿದೆ.

ಶಿಕ್ಷಣ ಕಾಲೇಜಿನ 26ನೇ ಸಂಪುಟವಾಗಿ 1991ರಲ್ಲಿ ಡಾ. ಬಿ.ಎಲ್. ಶಂಕರನಾರಾಯಣ ಅವರು ಡಾ. ಟಿ. ಎಂ. ಎ. ಪೈ ಶಿಕ್ಷಣ ಕಾಲೇಜಿನ ಬೆಳ್ಳಿಹಬ್ಬದ ಸಂಸ್ಮರಣಸಂಪುಟವನ್ನು ಪ್ರಕಟಿಸಿರುತ್ತಾರೆ. ದಶಮಾನೋತ್ಸವದ ಸಂಪುಟದಿಂದ ಬೆಳ್ಳಿ ಹಬ್ಬದ ತನಕದ ಕಾಲೇಜಿನಿಂದ ಪ್ರಕಟಗೊಂಡ, ಕಾಲೇಜಿನ ಬೇರೆ ಬೇರೆ ವರ್ಷದ ವಿದ್ಯಾರ್ಥಿಗಳು ಆಯಾ ವರ್ಷದ ಸಂಚಿಕೆಯಲ್ಲಿ ಪ್ರಕಟಿಸಿದ ಕವನ–ಲೇಖನಗಳನ್ನು ಪುನರಾವರ್ತನೆಯಾಗಿ ಪ್ರಕಟಿಸಿರುವುದನ್ನು ಕಾಣುತ್ತೇವೆ. ಕೆಲವು ಮಾದರಿ ಕವನ–ಕಥೆ, ಲೇಖನಗಳನ್ನು ಈ ಕೆಳಗೆ ವಿಶ್ಲೇಷಣೆಗೊಳಪಡಿಸಲಾಗಿದೆ.

**ಉಪಾಧ್ಯಾಯರಾಗಲು ತರಬೇತಿ ಏಕೆ?** ಎಂಬ ಪ್ರಶ್ನೆಗೆ 1974ನೇ ಶೈಕ್ಷಣಿಕ ಸಾಲಿನಲ್ಲಿ ಬಿ.ಎಡ್. ವಿದ್ಯಾರ್ಥಿಯಾಗಿದ್ದ ಮಹಾಬಲೇಶ್ವರ ರಾವ್ ಅವರು ನೀಡುವ ಉತ್ತರ ಹೀಗಿದೆ: "ಓರ್ವ ವ್ಯಕ್ತಿ ಅಧ್ಯಾಪಕನಾದರೆ ಅವನು ವಿದ್ಯಾರ್ಥಿಗಳ ಮಾನಸಿಕ,

ಬೌದ್ಧಿಕ, ಭಾವನಾತ್ಮಕ ಸಾಮಾಜಿಕ ಅಂಶಗಳನ್ನು ಬೆಳೆಸಲು ಪ್ರಯತ್ನಿಸಬೇಕಾಗುತ್ತದೆ. ಅಧ್ಯಾಪಕನೆಂದರೆ ತರಗತಿಯಲ್ಲಿ ಏನೋ ನಾಲ್ಕು ಮಾತನಾಡಿ ಹಿಂತಿರುಗುವವನಲ್ಲ. ಇಲ್ಲಿ ಅವನು ಪ್ರತಿಯೊಬ್ಬ ವಿದ್ಯಾರ್ಥಿಯ ವ್ಯಕ್ತಿತ್ವದ ವಿಕಸನಕ್ಕಾಗಿ ದುಡಿಯುವವನು. ಆದ್ದರಿಂದ ಅವನಿಗೆ ತರಬೇತಿ ಅಗತ್ಯ."(ಸಂ: ಶಂಕರನಾರಾಯಣ ಬಿ.ಎಲ್., 1991, ಪು–30) ಈ ತರಬೇತಿಯ ಭಾಗವಾಗಿ ಆತ ಕಲಿಕೆ ಎಂದರೇನು? ಪ್ರಶ್ನೆಗಳನ್ನು ಕೇಳಬೇಕಾದ ಕ್ರಮ ಹೇಗೆ? ಮೌಲ್ಯಮಾಪನ ಎಂದರೇನು? ಎಂಬಿತ್ಯಾದಿ ವಿಚಾರಗಳ ಕುರಿತು ಸಮಗ್ರವಾದ ತಿಳುವಳಿಕೆಯನ್ನು ಹೊಂದಿರಬೇಕು ಎಂದು ವಿವರಿಸಿದ್ದಾರೆ.

**ಸಂಚಿಕೆಯಲ್ಲಿ ಪ್ರಕಟಗೊಂಡ ಮುಖ್ಯ ಕವನಗಳು:**

ಆರ್. ಕೆ. ಮಣಿಪಾಲ ಎಂಬ ಹೆಸರಿನಲ್ಲಿ (1980 ರ ದಶಕದಿಂದ) ಗುರುತಿಸಿಕೊಂಡ ಮತ್ತು ಮಣಿಪಾಲ ಪದವಿಪೂರ್ವ ಕಾಲೇಜಿನಲ್ಲಿ ಕನ್ನಡ ಪ್ರಾಧ್ಯಾಪಕರಾಗಿದ್ದ ಆರ್ಕೆಯವರು 1975ರಲ್ಲಿ ಟಿ.ಎಂ.ಎ. ಪೈ ಶಿಕ್ಷಣ ಕಾಲೇಜಿನ ವಿದ್ಯಾರ್ಥಿಯಾಗಿದ್ದಾಗ ಕಾಲೇಜು ವಾರ್ಷಿಕ ಸಂಚಿಕೆಗೆ ಬರೆದ ಕವನವೇ 'ನಮ್ಮ ನಿಮ್ಮ ಅವರು.' ಇಲ್ಲಿ 'ಅವರು' ಎಂಬ 'ಸರ್ವನಾಮ'ದಲ್ಲಿ ಯಾರನ್ನು ಕುರಿತು ಸಂಬೋಧಿಸಿದ್ದಾರೆ? ಎಂಬ ಪ್ರಶ್ನೆಗೆ ಕವನವು ಸೂಚ್ಯವಾಗಿ ಉತ್ತರವನ್ನು ನೀಡುತ್ತಾ ಮುಂದುವರಿಯುತ್ತದೆ.

'ಇವರು ನಮ್ಮವರು । ಅಂದರೆ ನಿಮ್ಮವರು

..............। ಕರೆಯದೆ ಸಾಕ್ಷಾತ್ಕಾರವಾಗಬಲ್ಲವರು

...........। ಅನಿಕೇತನಚೇತನರು

ಸ್ವಾತಂತ್ರ್ಯದ ಕೇತನರು!'(ಪೂರ್ವೋಕ್ತ, ಪು–3)

ಎಂದು ವಿವರಿಸಿ, ಆ ಅನಿಕೇತನಚೇತನರೇ 'ಮನೆ ಇಲ್ಲದವರು' ಎಂಬುದನ್ನು ಓದುಗರಿಗೆ ಮನವರಿಕೆ ಮಾಡಿಕೊಡುತ್ತಾರೆ.

**ಭಾರತ ದರ್ಶನ:** 1983ನೇ ಶೈಕ್ಷಣಿಕ ವರ್ಷದ ವಿದ್ಯಾರ್ಥಿ ಶ್ರೀನಿವಾಸ ಎಂಬ ವಿದ್ಯಾರ್ಥಿಯ ಈ ಕವನದಲ್ಲಿ ಸಮಗ್ರ ಭಾರತದ ವರ್ತಮಾನದ ಕಾಲಾವಧಿಯ ವಿಭಿನ್ನ ವಯೋಮಾನದ ಜನಸಮೂಹದ ಅನಾಗರಿಕ ಚೇಷ್ಟೆಯು ಸಿನಿಮಾ ನೋಡಲು ತೆರಳಿದ ಸಂದರ್ಭ–ಚಿತ್ರಮಂದಿರದಲ್ಲಿ ಅನಾವರಣಗೊಳ್ಳುವ ಪರಿಯನ್ನು ಕವನದಲ್ಲಿ ಒಡಮೂಡಿಸಲಾಗಿದೆ. ಸಿನೆಮಾ ನೋಡುತ್ತಿದ್ದಂತೆ ಎಲ್ಲ ಮೈಮರೆತು ನಾನಾ ರೀತಿಯಲ್ಲಿ ತನ್ನ ವ್ಯಕ್ತಿತ್ವವನ್ನು ಪ್ರದರ್ಶಿಸಿದರು. ಇದರ ಅಂತಿಮ ಪರಿಣಾಮವಾಗಿ ಕವಿಯ ಕೊನೆಯ ಸಾಲುಗಳು ಹೀಗೆ ಬಂದಿವೆ.

'ಎಷ್ಟು ಜನ ಸಿನೆಮಾ ನೋಡಿದರೋ । ನನಗೆ ತಿಳಿಯಲಿಲ್ಲ

ನಾನು ಮಾತ್ರ । ಸಮಗ್ರ ಭಾರತವನ್ನೇ ಕಂಡೆ । ಚಿತ್ರಮಂದಿರದೊಳಗೆ'-

ಎಂದು ಕವನವು ಮುಕ್ತಾಯವಾಗಿದೆ– ಈ ಹೇಳಿಕೆಯಲ್ಲಿ ಸಿನೆಮಾ ನೋಡಲು ಬಂದ ಯುವಕರು ಚಿತ್ರಮಂದಿರದೊಳಗೆ ವರ್ತಿಸಿದ ಅನಾಗರಿಕ ಚೇಷ್ಟೆಯನ್ನು ವಿದ್ಯಾರ್ಥಿ ಕವಿ ಮೇಲಿನ ಕವನದಲ್ಲಿ ನಿರೂಪಿಸಿರುವುದನ್ನು ಕಾಣುತ್ತೇವೆ. (ಪೂರ್ವೋಕ್ತ, ಪುಟ–7)

ಮಾಧವ ಪೈ ಶಿಕ್ಷಣ ಕಾಲೇಜಿನ ಬೆಳ್ಳಿಹಬ್ಬದ ಸಂಚಿಕೆಯನ್ನು ಸಾಹಿತ್ಯದ ಮಾನದಂಡದಿಂದ ಮೌಲ್ಯಮಾಪನ ಮಾಡಿದಾಗ ಸಂಚಿಕೆಯ ಮಟ್ಟ ಕಳಪೆ ಎನ್ನಬಹುದು. ಕಾರಣ ಪ್ರಕಟವಾದ ಯಾವುದೇ ಕಥೆ ಮತ್ತು ಕವನದಲ್ಲಿ ಕಲಾತ್ಮಕತೆ ಇಲ್ಲದಿರುವುದು. ವಿಷಯವೈವಿಧ್ಯಕ್ಕೆ ಆಸ್ಪದ ನೀಡದಿರುವುದು ಎಂದರೆ ಜಾನಪದ, ಸಂಸ್ಕೃತಿ, ಪ್ರವಾಸ ಬರಹಗಳು, ಶಿಬಿರಾನುಭವಗಳು ಇಂತಹ ಶೀರ್ಷಿಕೆಗಳಿಗೆ ಅವಕಾಶವಿಲ್ಲದಿರುವುದರಿಂದ ಪ್ರಕಟನೆಗಾಗಿ ಪ್ರಕಟನೆ ಎಂಬಂತೆ ಸಾಮಾನ್ಯ ಸಂಕಲನವೆನ್ನಬಹುದಾಗಿದೆ.

**ಪ್ರೊ. ಮಹಾಬಲೇಶ್ವರ ಹೆಬ್ಬಾರ್ ಅವರ ಸಂಪಾದಕತ್ವದಲ್ಲಿ ಪ್ರಕಟವಾದ ವಾರ್ಷಿಕ ಸಂಚಿಕೆ:**

ಕಾಲೇಜಿನ 32ನೇ ಸಂಪುಟವು 1997ರಲ್ಲಿ ಪ್ರಕಟವಾಗಿದ್ದು ಈ ಸಂಚಿಕೆಯ ಪ್ರಧಾನ ಸಂಪಾದಕರಾಗಿ ಪ್ರೊ. ಎ. ಮಹಾಬಲೇಶ್ವರ ಹೆಬ್ಬಾರ್ ಅವರು ಹಾಗೂ ಕಾರ್ಯನಿರ್ವಹಾಕ ಸಂಪಾದಕರಾಗಿ ಡಾ. ಮಹಾಬಲೇಶ್ವರ ರಾವ್ ಅವರು ಕರ್ತವ್ಯ ನಿರ್ವಹಿಸಿದ್ದರು. ಸಂಪಾದಕೀಯ ನುಡಿಯಲ್ಲಿ ಸಂಚಿಕೆಯನ್ನು ಕುರಿತು "ಶಿಕ್ಷಕಭಿತ್ತಿಪತ್ರಿಕೆ ಹಾಗೂ ಶಿಕ್ಷಕ ವಾರ್ಷಿಕ ಸಂಚಿಕೆ ಒಂದು ಸಂಯುಕ್ತ ವಿದ್ಯಾರ್ಥಿವೇದಿಕೆಯಾಗಿ ರೂಪುಗೊಂಡಿದೆ. ಈ ವೇದಿಕೆಯಲ್ಲಿ ವ್ಯಕ್ತವಾಗಿರುವ ಪ್ರಬಂಧಗಳು ಉತ್ಕೃಷ್ಟವೆಂದು ನಾವು ಭ್ರಮಿಸಿಲ್ಲ" ಎಂದು ಸಂಚಿಕೆಯ ಪ್ರಕಟಿತ ಬರಹಗಳ ಕುರಿತು ತಮ್ಮ ಅಭಿಪ್ರಾಯವನ್ನು ಹೇಳಿಕೊಂಡಿದ್ದಾರೆ. (ಸಂಪಾದಕೀಯ ನುಡಿ, ಪ್ರಧಾನ ಸಂಪಾದಕರು–ಪ್ರೊ. ಎ. ಮಹಾಬಲೇಶ್ವರ ಹೆಬ್ಬಾರ್, ಸಂಚಿಕೆ 1997 ಸಂಪುಟ–32) ಎಂದಿದ್ದಾರೆ.

ಸಂಚಿಕೆಯ ಕನ್ನಡ ವಿಭಾಗದಲ್ಲಿ 'ಕವನ' ಹಾಗೂ 'ಲೇಖನ'ಗಳು ಎಂಬ ಎರಡು ಮುಖ್ಯ ಶೀರ್ಷಿಕೆಗಳಿದ್ದು, ಮೊದಲ ಶೀರ್ಷಿಕೆಯಡಿಯಲ್ಲಿ 9 ಕವನಗಳಿವೆ. 10ನೇ ಕವನದ ಶೀರ್ಷಿಕೆಯು ಕಾಲೇಜು ವಾರ್ಷಿಕೋತ್ಸವದ ಕವನರಚನಾ ಸ್ಪರ್ಧೆಗಾಗಿ ರಚಿಸಿದ ಕವನವಾಗಿದ್ದು ಇದರಲ್ಲಿ ಆಯ್ದ 5 ಮಂದಿ ಶಿಕ್ಷಕ ವಿದ್ಯಾರ್ಥಿಗಳ ಕವನವನ್ನು ಸಂಚಿಕೆಯಲ್ಲಿ ಪ್ರಕಟಿಸಲಾಗಿದೆ.

ಈ ಕವನಗಳಲ್ಲಿ ಅತಿಮುಖ್ಯ ಹಾಗೂ ಸಾಹಿತ್ಯಸತ್ವವುಳ್ಳ ಕವನವೆಂದು 'ಓ ಮಾತೆ' ಎಂಬ ಶೀರ್ಷಿಕೆಯಲ್ಲಿ ಮದರ್ ಥೆರೆಸಾ ಅವರ ಕುರಿತು, ಸುಮಾ ಎಂಬ ಶಿಕ್ಷಕವಿದ್ಯಾರ್ಥಿನಿ ಬರೆದ ಕವನವನ್ನು ಗುರುತಿಸಬಹುದಾಗಿದೆ. ಮದರ್ ಥೆರೆಸಾ ವಿಶ್ವಚೇತನವಾಗಿ ರೂಪುಗೊಂಡ ಬಗೆಯನ್ನು ಹಾಗೂ ಅವರ ಅಗಲಿಕೆಯ ನೋವನ್ನು ಹೀಗೆ ನಿರೂಪಿಸಿದ್ದಾರೆ:

'ವಿಶ್ವಮಾತೆಯು ನೀನು ವಿಶ್ವಚೇತನವು ನೀನು । ನಿನ್ನೊಡಲಲಿಹುದು ಸವಿಜೇನು

............। ಓ ಮಾತೆ ಮತ್ತೊಮ್ಮೆ ನೀ ಮರಳಿ ಬಾ ।' (ಸಂ: ಮಹಾಬಲೇಶ್ವರ ಹೆಬ್ಬಾರ ಎ. ಪ್ರೊ., 1997, ಪು–6)

ಎಂದು ಆಕೆಯನ್ನು ಮತ್ತೊಮ್ಮೆ ಹುಟ್ಟಿ ಬರುವಂತೆ ಆಹ್ವಾನಿಸುತ್ತಾ ಕವನ ರಚನೆಯಾಗಿದೆ.

ಲೇಖನವಿಭಾಗದಲ್ಲಿ 7 ಗದ್ಯಗಳಿದ್ದು ಆ ಲೇಖನಗಳೂ ಶಿಕ್ಷಣಕ್ಕೆ ಸಂಬಂಧಿಸಿದ್ದಾಗಿವೆ. 'ಮಕ್ಕಳಿಗೆ ಟ್ಯೂಶನ್ ಅಗತ್ಯವೇ?' ಎನ್ನುವ ಲೇಖನವು ಸರಿತಾ ಎಂಬ ಶಿಕ್ಷಕ ವಿದ್ಯಾರ್ಥಿಯ ರಚನೆಯಾಗಿದೆ.

**ಡಾ. ಮಹಾಬಲೇಶ್ವರ ರಾವ್** ಅವರು 1998–99ನೇ ಶೈಕ್ಷಣಿಕ ವರ್ಷದಿಂದ ಪ್ರಾಂಶುಪಾಲರಾಗಿ ಜವಾಬ್ದಾರಿಯನ್ನು ಸ್ವೀಕರಿಸಿ, ಕಾಲೇಜಿನ ಸಂಚಿಕೆ ಹಾಗೂ ವಿಶೇಷ ವಾರ್ಷಿಕ ಶಿಬಿರಕ್ಕೆ ಹೊಸ ವಿನ್ಯಾಸವನ್ನು ನೀಡುವುದರೊಂದಿಗೆ ಸಾಹಿತ್ಯ ಚಟುವಟಿಕೆಗಳಿಗೆ ವಿಶೇಷ ಪ್ರೋತ್ಸಾಹ ನೀಡಿದರು.

**ಮುಖ್ಯ ಸಂಪಾದಕರಾಗಿ ವಾರ್ಷಿಕ ಸಂಚಿಕೆಯ ಸ್ವರೂಪದಲ್ಲಿ ಮಾಡಿದ ಮಾರ್ಪಾಟುಗಳು:**

1) ಬಿ.ಎಡ್. ಶಿಕ್ಷಣ ಮುಗಿಸಿ ಹೊರ ತೆರಳುತ್ತಿರುವ ವಿದ್ಯಾರ್ಥಿಗಳ ಭಾವಚಿತ್ರ ಸಹಿತ ವಿಳಾಸಪಟ್ಟಿಯನ್ನು ನೀಡಿರುವುದು.
2) ಆ ಶೈಕ್ಷಣಿಕ ವರ್ಷದಲ್ಲಿ ನಡೆಸಿದ ಸಾಹಿತ್ಯ–ಶೈಕ್ಷಣಿಕ–ಸಾಂಸ್ಕೃತಿಕ ಚಟುವಟಿಕೆಗಳ ಭಾವಚಿತ್ರ ಪ್ರಕಟನೆಗೆ ಅವಕಾಶವನ್ನು ನೀಡಿರುವುದು.
3) ಶೈಕ್ಷಣಿಕ–ಸಾಹಿತ್ಯಚಟುವಟಿಕೆಗಳ ಕುರಿತಂತೆ ದಿನಪತ್ರಿಕೆಗಳಲ್ಲಿ ಪ್ರಕಟಿಸುವ ಸುದ್ದಿಯನ್ನು ಕಾಲೇಜು–ಸಂಚಿಕೆಯಲ್ಲಿ ಯಥಾವತ್ತಾಗಿ ಪ್ರಕಟಿಸಿರುವುದು.

**ವಾರ್ಷಿಕ ಸಂಚಿಕೆಯ ಸತ್ವ:** ಸಂಚಿಕೆಯ ಕನ್ನಡ ವಿಭಾಗದ 'ಕೃತಿಲೋಕ' ಎಂಬ ಶೀರ್ಷಿಕೆಯಲ್ಲಿ 20 ವಿವಿಧ ಶೀರ್ಷಿಕೆಗಳಿದ್ದು ಅವುಗಳಲ್ಲಿ 13 ಕವನಗಳು ಹಾಗೂ (ಎರಡು ಚುಟುಕುಗಳೂ ಸೇರಿ) ಗದ್ಯ ಬರಹಗಳಿವೆ. 7 ಗದ್ಯ ಬರಹಗಳಲ್ಲಿ ಒಂದು ಕಥೆ, 2 ವೈಚಾರಿಕ ಲೇಖನ ಮತ್ತು 4 ಪ್ರಬಂಧಗಳು ಶುದ್ಧ ಶೈಕ್ಷಣಿಕ ಪ್ರಬಂಧಗಳಾಗಿವೆ.

ಒಟ್ಟಿನಲ್ಲಿ ಸಂಚಿಕೆಯಲ್ಲಿ ಪ್ರಕಟಗೊಂಡ ಯಾವುದೇ ಸಾಹಿತ್ಯ ಬರಹಗಳು ಕಲಾತ್ಮಕತೆಯ ದೃಷ್ಟಿಯಿಂದ ಶ್ರೇಷ್ಠವಲ್ಲವಾದರೂ ವೈಚಾರಿಕ ಬರಹವು ಓದುಗರಿಗೆ ಸಮಕಾಲೀನ ಸಮಸ್ಯೆಯ ಕುರಿತು ಚಿಂತನೆಯನ್ನು ಪ್ರೇರೇಪಿಸುವಲ್ಲಿ ಸಫಲವಾಗಿದೆ ಎನ್ನಬಹುದು.

**ಕ್ರಿ.ಶ. 2000ನೇ ಶೈಕ್ಷಣಿಕ ವರ್ಷದ ಸಂಚಿಕೆ:** (20ನೇ ಶತಮಾನದ ಕೊನೆಯ ಸಂಚಿಕೆ)

1999ನೇ ಸಾಲಿನ ಸಂಚಿಕೆಯು ಇನ್ನಷ್ಟು ವೈಶಿಷ್ಟ್ಯಗಳನ್ನು ಮೈಗೂಡಿಸಿಕೊಂಡ ಸಂಚಿಕೆಯಾಗಿದ್ದು, ಈ ಶೈಕ್ಷಣಿಕ ಸಾಲಿನಲ್ಲಿ ಕಾಲೇಜಿಗೆ ಭೇಟಿ ನೀಡಿದ ಸಂಪನ್ಮೂಲವ್ಯಕ್ತಿಗಳು ನಡೆಸಿಕೊಟ್ಟ ಕಾರ್ಯಕ್ರಮಗಳಲ್ಲಿ ಬಹಳಷ್ಟು ಕಾರ್ಯಕ್ರಮಗಳು ಸಾಹಿತ್ಯಕ ಉಪನ್ಯಾಸಗಳೇ ಆಗಿದ್ದುವು ಎನ್ನುವುದಕ್ಕೆ ಈ ಸಂಚಿಕೆಯಲ್ಲಿ ಉಲ್ಲೇಖಗಳು ದೊರಕುತ್ತವೆ.

ಸಂಚಿಕೆಯಲ್ಲಿ ಪ್ರಕಟಗೊಂಡ ಸಾಹಿತ್ಯಕ ಬರಹಗಳ ಸತ್ವ ಮತ್ತು ಕಲಾತ್ಮಕತೆ ತೀರಾ ಸಾಮಾನ್ಯವಾಗಿವೆ ಎಂಬ ಅಭಿಪ್ರಾಯವು ಮುಖ್ಯ ಸಂಪಾದಕರದ್ದಾಗಿದೆ. "ಶಿಕ್ಷಣ ಕಾಲೇಜುಗಳಿಗೆ ತಮ್ಮದೇ ಆದ ಮಿತಿಗಳಿವೆ. ಹಾಗಾಗಿ ಸರ್ವಾಂಗ ಸುಂದರ, ಸರ್ವಗುಣಶ್ರೇಷ್ಠ ಸಂಚಿಕೆ ಹೊರತರಲು ಸಾಧ್ಯವಾಗಲಾರದು" (ಸಂಚಿಕೆ 2000 ಸಂಪುಟ 35 ಸಂಪಾದಕೀಯ ನುಡಿ. ಮು. ಸಂ. ಡಾ. ಮಹಾಬಲೇಶ್ವರ ರಾವ್) ಎಂದಿದ್ದಾರೆ. ಕ್ರಿ.ಶ. 2000ನೇ ಶೈಕ್ಷಣಿಕ ವರ್ಷದಲ್ಲಿ ನಡೆದ ಸಾಹಿತ್ಯ ಚಟುವಟಿಕೆಗಳ ವಿಷಯಗಳ ಕುರಿತು ವಿವಿಧ ದಿನಪತ್ರಿಕೆಗಳಲ್ಲಿ ವರದಿಯಾದ ಸುದ್ದಿಗಳು ಕಾಲೇಜು ಸಂಚಿಕೆ ಸಂಪುಟ 35ರಲ್ಲಿ ಹೀಗೆ ದಾಖಲುಗೊಂಡಿರುತ್ತದೆ. ಅವುಗಳಲ್ಲಿ ಈ ಕೆಳಗಿನ ನಾಲ್ಕು ಕಾರ್ಯಕ್ರಮಗಳನ್ನು ಸಾಹಿತ್ಯ ಚಟುವಟಿಕೆಗಳ ಕಾರ್ಯಕ್ರಗಳೆನ್ನುವುದಕ್ಕಾಗಿ ಉಲ್ಲೇಖಿಸಬೇಕಾಗಿದೆ.

| ಕ್ರ.ಸಂ. | ಕಾರ್ಯಕ್ರಮದ ವಿವರ | ವರದಿ ಪ್ರಕಟಗೊಂಡ ದಿನಾಂಕ ಹಾಗೂ ಪ್ರಕಟಗೊಂಡ ಪತ್ರಿಕೆ | ಸಂಪನ್ಮೂಲ ವ್ಯಕ್ತಿ |
|---|---|---|---|
| 1. | ವೈದೇಹಿಯವರ 'ಹಕ್ಕಿಹಾಡು' ಪ್ರದರ್ಶನ | ಡಿಸೆಂಬರ್ 2 1999 | ಕಿನ್ನರ ಮೇಳ– ತುಮರಿ ನಿರ್ದೇಶಕ: ಕೆ.ಜಿ. ಕೃಷ್ಣಮೂರ್ತಿ |
| 2. | ಗೀತಗಾಯನ ಕಾರ್ಯಕ್ರಮ | ಉದಯವಾಣಿ–ಡಿ. 9–1999 | ಶ್ರೀ ಎಚ್. ಚಂದ್ರಶೇಖರ ಕೆದ್ಲಾಯ |
| 3. | ಉತ್ತಮ ಸಾಹಿತ್ಯ ಶ್ರೇಷ್ಠ ಶಿಕ್ಷಕರಿಂದ ಸಾಧ್ಯ. ಕುವೆಂಪು, ಬೇಂದ್ರೆ, ವಿ.ಸೀ. ಕಣವಿ, ಕು.ಶಿ.ಯವರ ಮಾದರಿ | ಉದಯವಾಣಿ ಫೆ. 24 2000 ಉದಾಹರಣೆ | ಕೆ.ಆರ್. ಹಂದೆ ನಿರ್ದೇಶಕರು, ಡಾ। ಟಿ.ಎಂ.ಎ.ಪೈ ಮಾನವ ಸಂಪದಭಿವೃದ್ಧಿ ಕೇಂದ್ರ ನಿರ್ದೇಶಕರು. |
| 4. | ಸಂಗೀತ ಅರ್ಥೈಸುವುದಕ್ಕಿಂತ ಅನುಭವಿಸಲು ಯತ್ನಿಸಿ. | ಉದಯವಾಣಿ ಎಪ್ರಿಲ್ 27, 2000 | ಕಲಾವಿಮರ್ಶಕ ಪತ್ರಕರ್ತ, ಎ. ಈಶ್ವರಯ್ಯ |

**ವಾರ್ಷಿಕ ವಿಶೇಷ ಶಿಬಿರದ ಸಾಹಿತ್ಯಚಟುವಟಿಕೆಗಳು:** ಶಿಕ್ಷಕವಿದ್ಯಾರ್ಥಿಗಳ ವ್ಯಕ್ತಿತ್ವವಿಕಸನದ ದೃಷ್ಟಿಯಿಂದ ನಾಲ್ಕು ದಿನದ ವಿಶೇಷ ವಾರ್ಷಿಕಶಿಬಿರವು ಬಿ.ಎಡ್. ಶಿಕ್ಷಣದ ಪಾಠಪಠ್ಯದಲ್ಲಿ ಅಳವಡಿಸಿರುತ್ತಾರೆ. ಡಾ. ಮಹಾಬಲೇಶ್ವರ ರಾವ್ ಅವರು ಪ್ರಾಂಶುಪಾಲರಾಗಿ ಕಾಲೇಜಿನ ಜವಾಬ್ದಾರಿಯನ್ನು ವಹಿಸಿಕೊಂಡ ವರ್ಷದಿಂದಲೇ ಈ ಶಿಬಿರಕ್ಕೆ ಸಾಹಿತ್ಯದ ಲೇಪವನ್ನು ನೀಡಿದರೆನ್ನುವುದು ಗುರುತಿಸಬೇಕಾದ ಅಂಶ. ಶಿಬಿರ ಸಂದರ್ಭದಲ್ಲಿ ಸಾಹಿತ್ಯ, ಕಲೆ, ಸಂಸ್ಕೃತಿಗೆ ಸಂಬಂಧಿಸಿದ ವಿಷಯಗಳ ಕುರಿತಾಗಿ ಸಂಪನ್ಮೂಲ ವ್ಯಕ್ತಿಗಳಿಂದ ಉಪನ್ಯಾಸ–ಮುಖಾಮುಖಿ ಚರ್ಚೆಯನ್ನು ಹಮ್ಮಿಕೊಂಡು, ಶಿಬಿರಕ್ಕೆ ಹೊಸ ವಿನ್ಯಾಸವನ್ನು ನೀಡಿದರು.

**ನುಡಿ/ಸಂಸ್ಮರಣಾ ಕಾರ್ಯಕ್ರಮ:** ಕನ್ನಡ ವಿದ್ಯಾರ್ಥಿಗಳು ಪಾಕ್ಷಿಕವಾಗಿ ಸಭೆ ಸೇರಿ, ಸಾಹಿತ್ಯ ಹಾಗೂ ವಿಚಾರಗಳನ್ನು ಮಂಥನ ಮಾಡುವ ಮತ್ತು ಸಮುದಾಯದಲ್ಲಿರುವ ಸಾಹಿತಿಗಳ ನುಡಿಗಳನ್ನು ಕೇಳುವ ಉದ್ದೇಶದಿಂದ ಹುಟ್ಟಿಕೊಂಡ ಸಂಘಟನೆಯೇ 'ನುಡಿ'ಎಂಬ ಸಂಘಟನೆಯಾಗಿದೆ. ಈ ಸಂಘಟನೆಯನ್ನು 1998ನೇ ಶೈಕ್ಷಣಿಕ ವರ್ಷದಲ್ಲಿ ಪ್ರಾರಂಭಿಸಿದ ಕುರಿತಂತೆ 1998ನೇ ಸಾಲಿನ ವಾರ್ಷಿಕ ಸಂಚಿಕೆಯಲ್ಲಿ ಉಲ್ಲೇಖವಿದೆ. ಆರ್ಥಿಕ ಸಂಪನ್ಮೂಲದ ಕೊರತೆಯಿಂದಾಗಿ 1999ರ ಅನಂತರ 'ನುಡಿ' ಎಂಬ ಕಾಲೇಜು ಮೌಖಿಕ ಚಟುವಟಿಕೆಯು ಭಿತ್ತಿಪತ್ರಿಕೆ ವಿನ್ಯಾಸದಲ್ಲಿ ಲಿಖಿತ ಚಟುವಟಿಕೆಯಾಗಿ ಪರಿವರ್ತನೆ ಹೊಂದಿತು.

**ಕಾಲೇಜು ವಾರ್ಷಿಕೋತ್ಸವ ಪ್ರಯುಕ್ತ ನಡೆಸುವ ಸಾಹಿತ್ಯ ಚಟುವಟಿಕೆ ಮತ್ತು ವಾರ್ಷಿಕೋತ್ಸವದಂದು ನಡೆಯುವ ಉಪನ್ಯಾಸ ಕಾರ್ಯಕ್ರಮಗಳು:**

ವರ್ಷಂಪ್ರತಿ ನಡೆಯುವ ಕಾಲೇಜು ವಾರ್ಷಿಕೋತ್ಸವ ಸಮಾರಂಭಕ್ಕೆ ಸಾಹಿತ್ಯಕ್ಷೇತ್ರದಲ್ಲಿ ಗುರುತಿಸಿಕೊಂಡ ಗಣ್ಯ ಸಂಪನ್ಮೂಲ ಅತಿಥಿಗಳನ್ನು ಕಾಲೇಜಿಗೆ ಆಹ್ವಾನಿಸಿ, ಉಪನ್ಯಾಸ ಏರ್ಪಡಿಸುವ ಹೊಸ ಪರಂಪರೆಯನ್ನು ಪ್ರಾಂಶುಪಾಲರಾದ ಮಹಾಬಲೇಶ್ವರ ಹೆಬ್ಬಾರ್‌ರವರು ರೂಢಿಗೆ ತಂದಿದ್ದು, ಈ ಪರಂಪರೆಯನ್ನು ಮುಂದಿನ ಪ್ರಾಂಶುಪಾಲರಾದ ಡಾ. ಮಹಾಬಲೇಶ್ವರ ರಾವ್‌ರವರು ಮುಂದುವರಿಸಿಕೊಂಡು ಬಂದರು.

**ಉಪನ್ಯಾಸಕರ ವ್ಯಕ್ತಿಗತ ಚಟುವಟಿಕೆಗಳು**: ಉಡುಪಿ ಶಿಕ್ಷಣ ಕಾಲೇಜಿನ 20ನೇ ಶತಮಾನದ ಶೈಕ್ಷಣಿಕ ಚಟುವಟಿಕೆಗಳ ಅವಲೋಕನದ ಸಂದರ್ಭದಲ್ಲಿ ಮುಖ್ಯವಾಗಿ ಸಾಹಿತ್ಯ ದೃಷ್ಟಿಯಿಂದ ಗಮನಿಸಿದಾಗ ವ್ಯಕ್ತಿಗಳೆಂದರೆ ಪ್ರೊ. ಕೆ. ರಾಮಕೃಷ್ಣ ಹಂದೆ ಹಾಗೂ ಡಾ. ಮಹಾಬಲೇಶ್ವರ ರಾವ್ ಮುಖ್ಯರಾಗುತ್ತಾರೆ. ಅವರ ಸಮಗ್ರ ಕೃತಿಗಳನ್ನು ಇಲ್ಲಿ ಉಲ್ಲೇಖಿಸುವುದು ಈ ಅಧ್ಯಯನಕ್ಕೆ ಅವಶ್ಯವಲ್ಲ ಎಂಬ ಕಾರಣಕ್ಕಾಗಿ ದಾಖಲಿಸಿರುವುದಿಲ್ಲ.

**ಉಡುಪಿ ಶಿಕ್ಷಣ ತರಬೇತಿ ಕಾಲೇಜಿನ (ಡಾ। ಟಿ.ಎಂ.ಎ.ಪೈ. ಶಿಕ್ಷಣ ಕಾಲೇಜಿನ) ಕಾರ್ಯಚಟುವಟಿಕೆಗಳ ಸಾಹಿತ್ಯಕ ಪರಿಣಾಮಗಳು:**

ಸಾಹಿತ್ಯಾಸಕ್ತಿಯನ್ನು ಮೈಗೂಡಿಸಿಕೊಂಡು ಶಿಕ್ಷಕರಾಗಿ ಸೇವೆಸಲ್ಲಿಸುತ್ತಿರುವ ಅದೆಷ್ಟೋ ಮಂದಿ ಈ ಸಂಸ್ಥೆಯಲ್ಲಿ ತರಬೇತಿಯನ್ನು ಪಡೆದು, ತಮ್ಮ ಸಾಹಿತ್ಯ ಚಟುವಟಿಕೆಯನ್ನು ಇನ್ನಷ್ಟು ಆಸಕ್ತಿಯಿಂದ ಮುಂದುವರಿಸಿದರು. ಇಂಥ ಸಾಲಿನಲ್ಲಿ ಹೆಸರಿಸಬೇಕಾದ ಮೊದಲ ಮಾದರಿ ಹೆಸರು ದಿ। ವಿಶ್ವಂಭರ ಉಪಾಧ್ಯಾಯ ಅವರದು.

ಸಂಸ್ಥೆಯಲ್ಲಿ ತರಬೇತಿ ಪಡೆದು ಪ್ರೌಢಶಾಲಾಶಿಕ್ಷಕರಾಗಿಯೋ ಪದವಿಪೂರ್ವ ಕಾಲೇಜಿನಲ್ಲಿ ಉಪನ್ಯಾಸಕರಾಗಿಯೋ ತಮ್ಮ ಸಾಹಿತ್ಯಚಟುವಟಿಕೆಗಳನ್ನು ಮುಂದುವರಿಸಿಕೊಂಡು ಬಂದ ಅನೇಕರು ಜಿಲ್ಲೆ ಮತ್ತು ರಾಜ್ಯದಾದ್ಯಂತ ಇಂದು ಉದ್ಯೋಗನಿರತರಾಗಿದ್ದಾರೆ. ಈ ಸಂದರ್ಭದಲ್ಲಿ ಮೊದಲು ಉಲ್ಲೇಖಿಸಬೇಕಾದ ಹೆಸರೇ ಡಾ. ಮಹಾಬಲೇಶ್ವರ ರಾಯರದು. ಇವರು ತರಬೇತಿ ಪಡೆದ ಸಂಸ್ಥೆಯಲ್ಲಿಯೇ ಉಪನ್ಯಾಸಕರಾಗಿ, ಪ್ರಾಂಶುಪಾಲರಾಗಿ ಇಂದು ಸಂಸ್ಥೆಯನ್ನು ಮುನ್ನಡೆಸುತ್ತಿದ್ದಾರೆ. ಪದವಿಪೂರ್ವ ಕಾಲೇಜಿಗಳಲ್ಲಿ ಸೇವೆಯಲ್ಲಿರುತ್ತಾ, ಸಾಹಿತ್ಯಚಟುವಟಿಕೆಗಳಲ್ಲಿ ತೊಡಗಿಕೊಂಡ ಬಹುಮಂದಿ ಶಿಕ್ಷಕರು ಸಂಸ್ಥೆಗೆ ಅಭಿಮಾನ ಮತ್ತು ಹೆಮ್ಮೆಯ ವಿದ್ಯಾರ್ಥಿಗಳೆನಿಸಿದ್ದಾರೆ. ಅವರೆಲ್ಲರ ಸಾಹಿತ್ಯ ಕೊಡುಗೆಗಳನ್ನು ಇಲ್ಲಿ ಚರ್ಚಿಸುವುದು ಪ್ರಬಂಧದ ವ್ಯಾಪ್ತಿಯ ಎಲ್ಲೆ ಮೀರಿದ ವಿಷಯವೆನ್ನುವ ಕಾರಣದಿಂದ ಕೆಲವು ಕೆಲವು ಸಾಧಕರ ಹೆಸರು ಮತ್ತು ಅವರ ಕ್ಷೇತ್ರವನ್ನು ಈ ಪ್ರಬಂಧದ ಕೊನೆಯ **ಅನುಬಂಧ ಸಂಖ್ಯೆ 13** ರಲ್ಲಿ ಉಲ್ಲೇಖಿಸಲಾಗಿದೆ.

**ಉಡುಪಿ ಆಯುರ್ವೇದ ಕಾಲೇಜು:**

'ಕರ್ನಾಟಕ ಆಯುರ್ವೇದ ಸೇವಾ ಸಂಘ' ಎಂಬ ನೋಂದಾಯಿತ ಸಂಸ್ಥೆಯ ಅಡಿಯಲ್ಲಿ ಪಾಂಗಾಳ ಲಕ್ಷ್ಮೀನಾರಾಯಣ ನಾಯಕರ ನೇತೃತ್ವದಲ್ಲಿ 1958ರಲ್ಲಿ ಈ ಕಾಲೇಜು ಅಸ್ತಿತ್ವಕ್ಕೆ ಬಂದಿತು. 1961ರಲ್ಲಿ ಲಕ್ಷ್ಮೀನಾರಾಯಣ ನಾಯಕ್ ಅವರ ನಿಧನಾನಂತರ ಕಾಲೇಜನ್ನು ಮುನ್ನಡೆಸಿಕೊಂಡು ಹೋಗುವುದು ಅಂದಿನ ಕಾಲೇಜು ಆಡಳಿತಕ್ಕೆ ಕಷ್ಟಸಾಧ್ಯವಾಯಿತು. ಉಡುಪಿ ಶ್ರೀ ಪೇಜಾವರ ಮಠದ ವಿಶೇಷ ಪ್ರೋತ್ಸಾಹ ಮತ್ತು ಸ್ಥಳೀಯ ವಿದ್ಯಾಭಿಮಾನಿಗಳ ಸಹಕಾರದಿಂದ 1979ರ ವರೆಗೂ ಕಾಲೇಜು ಮುನ್ನಡೆದುಕೊಂಡು ಬಂತು. 1979 ಅಕ್ಟೋಬರ್ 26 ರಂದು ಕಾಲೇಜಿನ ಉನ್ನತ ಭವಿಷ್ಯದ ದೃಷ್ಟಿಯಿಂದ ಶ್ರೀ ಧರ್ಮಸ್ಥಳ ಮಂಜುನಾಥೇಶ್ವರ ಎಜುಕೇಶನಲ್ ಟ್ರಸ್ಟ್ (ರಿ.) ಎಂಬ ಸಂಸ್ಥೆಗೆ ಕಾಲೇಜು ಹಸ್ತಾಂತರಿಸಲ್ಪಟ್ಟಿತು.

1961 ರಿಂದಲೇ ಕಾಲೇಜು ವಾರ್ಷಿಕ ಸಂಚಿಕೆಯನ್ನು ಪ್ರಕಟಿಸುತ್ತಾ ಬಂದಿದ್ದು, ಈ ಕುರಿತಂತೆ ಕಾಲೇಜಿನ 25ನೇ ವರ್ಷದ 1983ರ ಬೆಳ್ಳಿಹಬ್ಬದ ಸಂಚಿಕೆಯಲ್ಲಿ ವರದಿಗಳಿವೆ. ಇದೇ ಕಾಲೇಜಿನ ಪ್ರಾಕ್ತನ ವಿದ್ಯಾರ್ಥಿಯಾಗಿದ್ದ ಡಾ। ನಾ. ಮೊಗಸಾಲೆ ಅವರು ಕಾಲೇಜು ವಾರ್ಷಿಕ ಸಂಚಿಕೆಯಲ್ಲಿ ಕವನವೊಂದನ್ನು ಪ್ರಕಟಿಸಿರುವುದನ್ನು ತಮ್ಮ ಆತ್ಮಚರಿತ್ರೆಯಲ್ಲಿ

ಉಲ್ಲೇಖಿಸಿದ್ದಾರೆ (ನೋಡಿ ಬಯಲ ಬೆಟ್ಟ ಪುಟ 240) ಕಾಲೇಜು ಬಾಡಿಗೆ ಕಟ್ಟಡದಿಂದ ಸ್ವಂತ ಕಟ್ಟಡಕ್ಕೆ ಹಾಗೂ ಹೊಸ ಆಡಳಿತಕ್ಕೆ ವರ್ಗಾವಣೆಗೊಳ್ಳುವ ಸಂದರ್ಭದಲ್ಲಿ ಹಿಂದಿನ ವಿದ್ಯಾರ್ಥಿಗಳು ತಾವು ಕೈಬರಹದಲ್ಲಿ ಪ್ರಕಟಿಸುತ್ತಿದ್ದ ಸಂಚಿಕೆಗಳು ಹೊಸ ಆಡಳಿತಕ್ಕೆ ಲಭ್ಯವಾಗದ ಕಾರಣ ಗ್ರಂಥಾಲಯದಲ್ಲಿ ಹಿಂದಿನ ಸಂಚಿಕೆಗಳು ಕಂಡುಬರುವುದಿಲ್ಲ. ಆದರೆ 1983ರಲ್ಲಿ ಪ್ರಕಟಗೊಂಡ ಬೆಳ್ಳಿಹಬ್ಬದ ಸಂಚಿಕೆಯು ಸುದೀರ್ಘ 25 ವರ್ಷದ ಸಾಹಿತ್ಯಕ ಸಾಧನೆಯನ್ನು ಬಿಂಬಿಸುತ್ತಿದೆ. ಆ ಸಂಚಿಕೆಯಲ್ಲಿ ಉಲ್ಲೇಖವಿದ್ದಂತೆ 1970–71ನೇ ಶೈಕ್ಷಣಿಕ ವರ್ಷದಿಂದ ರಾಜ್ಯದಾದ್ಯಂತ ಒಂದೇ ಮಾದರಿಯ ಶೈಕ್ಷಣಿಕ ಪಠ್ಯವು ಜಾರಿಗೊಂಡು ವಿದ್ಯಾರ್ಥಿಗಳು ಸಾಹಿತ್ಯಾಸಕ್ತಿಯನ್ನು ರೂಢಿಸಿಕೊಂಡಿದ್ದರೆಂಬ ವರದಿ ಕಾಲೇಜಿನ ಬೆಳ್ಳಿಹಬ್ಬದ ಸಂಚಿಕೆಯಲ್ಲಿ ದಾಖಲಾಗಿರುತ್ತದೆ. ಕೇವಲ ವಿಶ್ವವಿದ್ಯಾನಿಲಯದ ಸಂಯೋಜಿತ ಕಾಲೇಜುಗಳ ಸಾಹಿತ್ಯಕ ಚಟುವಟಿಕೆ ಮಾತ್ರವಲ್ಲದೆ ಉಡುಪಿಯ ಸಾರ್ವಜನಿಕ ವೇದಿಕೆಯ ವತಿಯಿಂದ ನಡೆಯುವ ಸಾಹಿತ್ಯಕ ಸ್ಪರ್ಧೆಗಳಲ್ಲೂ ವಿದ್ಯಾರ್ಥಿಗಳು ಭಾಗವಹಿಸುತ್ತಿದ್ದರೆಂಬ ವರದಿ ಬೆಳ್ಳಿಹಬ್ಬದ ಸಂಚಿಕೆಯಪುಟಸಂಖ್ಯೆ 10, 11ರಲ್ಲಿ ಉಲ್ಲೇಖಗಳಿವೆ.

1992ರಿಂದ ಕಾಲೇಜು ರಾಜೀವಗಾಂಧಿ ವಿಶ್ವವಿದ್ಯಾನಿಲಯದ ಸಂಯೋಜನೆಗೊಳಪಟ್ಟು ವಿದ್ಯಾರ್ಥಿಗಳ ಪ್ರವೇಶಾತಿಯು ಪ್ರವೇಶಪರೀಕ್ಷೆಯ ಹಿನ್ನೆಲೆಯಲ್ಲಿ ನಡೆಯತೊಡಗಿದ ಅನಂತರ ಕಾಲೇಜಿನಲ್ಲಿ ಕನ್ನಡ ಸಾಹಿತ್ಯಚಟುವಟಿಕೆಗಳು ವಿರಳವಾಗಿ ನಡೆಯತೊಡದುವು ಎನ್ನುವುದು ಕಾಲೇಜಿನ ಪ್ರಾಕ್ತನ ವಿದ್ಯಾರ್ಥಿ, ಮಂಗಳೂರು ವಿಶ್ವವಿದ್ಯಾನಿಲಯದ ಸಂಯೋಜನೆಯ ಕೊನೆಯ ತಂಡದ ವಿದ್ಯಾರ್ಥಿ ಡಾ. ಪ್ರಸನ್ನ ಮೊಗಸಾಲೆಯವರ ಅಭಿಪ್ರಾಯವಾಗಿದೆ. ತಮ್ಮ ಅವಧಿಯ ತನಕವೂ ತುಳು ನಾಟಕ, ಕನ್ನಡ ಭಾವಗೀತೆ, ಕನ್ನಡ ಸಣ್ಣಕಥಾ ಸ್ಪರ್ಧೆಗಳನ್ನು ಕಾಲೇಜು ವಾರ್ಷಿಕೋತ್ಸವ ಪ್ರಯುಕ್ತ ನಡೆಸಿಕೊಂಡು ಬರುತ್ತಿದ್ದು, ವಾರ್ಷಿಕ ಸಂಚಿಕೆಯನ್ನು ವರ್ಷಂಪ್ರತಿ ಪ್ರಕಟಿಸಿರುವುದಿಲ್ಲ ಎಂಬ ಹೇಳಿಕೆಯನ್ನು ಮೌಖಿಕ ಸಂದರ್ಶನದಲ್ಲಿ ಹೇಳಿದ್ದಾರೆ. ಅಖಿಲಭಾರತ ವ್ಯಾಪ್ತಿಯಿಂದ ವಿದ್ಯಾರ್ಥಿಗಳ ಸೇರ್ಪಡೆ, ಆಂಗ್ಲ ಮಾಧ್ಯಮದಿಂದಲೇ ಪಿಯುಸಿ ವರೆಗಿನ ಶಿಕ್ಷಣವನ್ನು ಮುಗಿಸಿಬಂದ ವಿದ್ಯಾರ್ಥಿಗಳು ಬಿ.ಎ.ಎಮ್.ಎಸ್. ಪದವಿಗೆ ಸೇರ್ಪಡೆಗೊಂಡ ಅನಂತರ ಯಾವುದೇ ಕನ್ನಡ ಸಾಹಿತ್ಯಚಟುವಟಿಗಳಲ್ಲಿ ಭಾಗವಹಿಸುವ ಆಸಕ್ತಿಯನ್ನು ತೋರಿಸುತ್ತಿರಲಿಲ್ಲ ಎನ್ನುವುದು ಕಾಸರಗೋಡು ಮುಳ್ಳೇರಿಯಾದಲ್ಲಿ ವೈದ್ಯಕೀಯ ವೃತ್ತಿಯಲ್ಲಿ ನಿರತರಾದ ಕಾಲೇಜಿನ ಪ್ರಾಕ್ತನ ವಿದ್ಯಾರ್ಥಿ ಡಾ। ನರೇಶ್ ಅವರ ಹೇಳಿಕೆಯಾಗಿದೆ.

**ಉಡುಪಿ ಆಯುರ್ವೇದ ಕಾಲೇಜಿನ ಸಾಹಿತ್ಯ ಚಟುವಟಿಕೆಯ ಪರಿಣಾಮಗಳು:**

**ಉಡುಪಿ ಆಯುರ್ವೇದ ಕಾಲೇಜಿನ ಹೆಮ್ಮೆಯ ವಿದ್ಯಾರ್ಥಿಗಳು:**

ಉಡುಪಿ ಆಯುರ್ವೇದ ಕಾಲೇಜಿನ ಖ್ಯಾತಿಯನ್ನು ಹೆಚ್ಚಿಸಿದ ಮೂವರು ವಿದ್ಯಾರ್ಥಿಗಳನ್ನು ಈ ಕಾಲೇಜಿನ ಚಟುವಟಿಕೆಯ ಸಂದರ್ಭದಲ್ಲಿ ಸ್ಮರಿಸಲೇ ಬೇಕಾಗಿದೆ. ಅವರುಗಳೇ ಡಾ. ನಾ. ಮೊಗಸಾಲೆ, ಡಾ. ಮೋಹನ್ ಆಳ್ವ, ಡಾ. ನಡಿಬೈಲು ಉದಯಶಂಕರ.

**ಡಾ. ನಾ. ಮೊಗಸಾಲೆ:** ಇಂದಿನ ಕೇರಳ ರಾಜ್ಯಕ್ಕೆ ಸೇರಿರುವ ಕಾಸರಗೋಡು ತಾಲೂಕಿನ ಕೋಳ್ಯೂರು ಸಮೀಪದ ನಾರಾಯಣ ಮೊಗಸಾಲೆಯವರು ಉಡುಪಿಗೆ ಬಂದು ಆಯುರ್ವೇದ ಕಾಲೇಜನ್ನು ಸೇರಿ, ಉಡುಪಿ ಪೇಟೆಯ ಮಧ್ಯಭಾಗದಲ್ಲಿದ್ದ ಶ್ರೀಕೃಷ್ಣ ಮಠದಲ್ಲಿ ವಾಸ್ತವ್ಯವಿದ್ದು, 1961ರಿಂದ 1965ರ ತನಕ ಆಯುರ್ವೇದ ಕಾಲೇಜಿನಲ್ಲಿ ವೈದ್ಯಕೀಯ ವ್ಯಾಸಂಗ ಮಾಡಿದರು. ಈ ಅವಧಿಯಲ್ಲಿ ಉಡುಪಿಯ ಪೇಟೆಯಲ್ಲಿ ಅಲ್ಲಲ್ಲಿ ನಡೆಯುವ ಸಾಹಿತ್ಯಚಟುವಟಿಕೆಗಳಲ್ಲಿ ಭಾಗವಹಿಸುತ್ತ ಬರವಣಿಗೆಯ

ಹವ್ಯಾಸವನ್ನು ರೂಢಿಸಿಕೊಂಡು ಬಂದರು. ತಮ್ಮ ಸೃಷ್ಟಿಶೀಲ ಚಟುವಟಿಕೆಗಳಿಂದ ಕಾಲೇಜಿನಲ್ಲಿ ಮತ್ತು ಉಡುಪಿಯ ಪೇಟೆಯ ಪರಿಸರದಲ್ಲಿ ಆಗಲೇ ಓರ್ವ ಕವಿ ಎಂದು ಗುರುತಿಸಿಕೊಂಡರು.

ತಮ್ಮ ವೈದ್ಯಕೀಯ ಪದವಿಯ ನಂತರ ಕಾರ್ಕಳ ತಾಲೂಕಿನ ಕಾಂತಾವರವನ್ನು ತಮ್ಮ ಕಾರ್ಯಕ್ಷೇತ್ರವನ್ನಾಗಿ ಮಾಡಿಕೊಂಡು ಅಲ್ಲಿ ಕನ್ನಡ ಸಂಘವನ್ನು ಹುಟ್ಟುಹಾಕಿ ಶಿಕ್ಷಣ ಸಂಸ್ಥೆಗಳಲ್ಲಿ ನಡೆಯುವಂತೆ ಸಾಹಿತ್ಯ ಚಟುವಟಿಕೆಗಳನ್ನು ಆ ಸಂಘದ ಮೂಲಕ ನಿರ್ವಹಿಸಿಕೊಂಡು ಬಂದರು. ಮತ್ತು ಇಂದಿಗೂ ಈ ಚಟುವಟಿಕೆಗಳನ್ನು ನಿರ್ವಹಿಸಿಕೊಂಡು ಬರುತ್ತಲೇ ಇದ್ದಾರೆ. ಕೇವಲ ಕನ್ನಡ ಸಂಘದ ಚಟುವಟಿಕೆಗಳು ಮಾತ್ರವಲ್ಲದೆ ಸ್ವತಃ ತಾನೂ ಕೂಡ ಕನ್ನಡದಲ್ಲಿ ಸಣ್ಣಕಥೆ, ಕಾದಂಬರಿ, ಕವನ, ಮೂರೂ ಪ್ರಕಾರಗಳಲ್ಲಿಯೂ ತಮ್ಮ ಅನುಭವಗಳಿಗೆ ಕಲಾತ್ಮಕ ರೂಪ ನೀಡಿದರು. ಈ ತನಕ 15 ಕಾದಂಬರಿ, 7 ಕವನ ಸಂಕಲನ, 3 ಕಥಾಸಂಕಲನ, 6 ವೈದ್ಯಕೀಯ ಕೃತಿಗಳನ್ನು ಹಾಗೂ ಇತ್ತೀಚೆಗೆ ತಮ್ಮ ಆತ್ಮವೃತ್ತಾಂತ 'ಬಯಲಬೆಟ್ಟ' ಎಂಬ ತಮ್ಮ ಜೀವನಾನುಭವವನ್ನೂ ಪ್ರಕಟಿಸಿರುತ್ತಾರೆ. ಉತ್ತರ ಕನ್ನಡ ಜಿಲ್ಲೆಯ ಕನ್ನಡ ಜನಾಂತರಂಗ ಪತ್ರಿಕೆ ಮತ್ತು ಮಂಗಳೂರಿನ ಕರಾವಳಿ ಪತ್ರಿಕೆಗಳಲ್ಲಿ 'ಆರೋಗ್ಯಸಲಹೆ' ಎಂಬ ಜನಪ್ರಿಯ ಅಂಕಣ ಬರಹವನ್ನು 1997ರಿಂದ 2005ರ ತನಕ ನಿರ್ವಹಿಸಿಕೊಂಡು ಬಂದಿದ್ದಾರೆ. ಇವರು ಹುಟ್ಟು ಹಾಕಿದ ಕಾಂತಾವರ ಕನ್ನಡ ಸಂಘದ ಕುರಿತು 'ಸಾಂಸ್ಥಿಕ ರಚನೆಯಲ್ಲಿ ಒಡಮೂಡಿದ ಕನ್ನಡ ಸಾಹಿತ್ಯ ಚಟುವಟಿಕೆಗಳು ಎಂಬ ಪ್ರತ್ಯೇಕ ಶೀರ್ಷಿಕೆಯಡಿಯಲ್ಲಿ ಚರ್ಚಿಸಾಗಿದೆ.

**ಡಾ. ಎಂ. ಮೋಹನ ಆಳ್ವ:** ದ.ಕ. ಜಿಲ್ಲೆಯ ಮೂಡಬಿದಿರೆ ಸಮೀಪದ ಮಿಜಾರಿನಲ್ಲಿ ಜನಿಸಿ, ಪಿ.ಯು.ಸಿ. ಶಿಕ್ಷಣವನ್ನು ಕಾರ್ಕಳದ ಭುವನೇಂದ್ರ ಕಾಲೇಜಿನಲ್ಲಿ ಪೂರೈಸಿ, ಉಡುಪಿಯ ಆಯುರ್ವೇದ ಕಾಲೇಜಿನಲ್ಲಿ ವೈದ್ಯಕೀಯ ಪದವಿಯನ್ನು ಪಡೆದರು. ಕಾಲೇಜಿನಲ್ಲಿರುವಾಗಲೇ ಸಾಹಿತ್ಯ ಮತ್ತು ಸಾಹಿತ್ಯಕ್ಕೆ ಪೂರಕವಾಗಿ ಸಾಂಸ್ಕೃತಿಕ ಚಟುವಟಿಕೆಗಳಲ್ಲಿ ವಿಶೇಷ ಆಸಕ್ತಿಯನ್ನು ರೂಢಿಸಿಕೊಂಡಿದ್ದರು. ತಮ್ಮ ವೈದ್ಯಕೀಯ ಪದವಿಯ ಅನಂತರ 'ಆಳ್ವಾಸ್ ಫಾರ್ಮಸಿ', ಎಂಬ ಔಷಧ ಘಟಕವನ್ನು ಆರಂಭಿಸಿ, ತಮ್ಮ ಹೆಲ್ತ್ ಸೆಂಟರ್‌ನ ಮೂಲಕ ವೃತ್ತಿ ಜೀವನಕ್ಕೆ ತೊಡಗಿದರು. ಕನ್ನಡ ನುಡಿ ಮತ್ತು ಸಂಸ್ಕೃತಿಯ ಕುರಿತಂತೆ ವಿಶೇಷ ಅಭಿಮಾನವನ್ನೂ, ಆದರವನ್ನು ಹೊಂದಿದವರಾಗಿದ್ದು, 1995ರಲ್ಲಿ ಆರಂಭಿಸಿದ ಆಳ್ವಾಸ್ ಎಜುಕೇಶನಲ್ ಟ್ರಸ್ಟ್ ಮೂಲಕ ಸ್ಥಾಪಿಸಿದ ಶಿಕ್ಷಣ ಸಂಸ್ಥೆಗಳ ಆಶ್ರಯದಲ್ಲಿ ಆಳ್ವಾಸ್ ನುಡಿಸಿರಿ ಮತ್ತು ಆಳ್ವಾಸ್ ವಿರಾಸತ್ ಎಂಬ ಸಾಂಸ್ಕೃತಿಕ ಹಬ್ಬವನ್ನು 1997 ರಿಂದ ಮೊದಲ್ಗೊಂಡು ಈ ತನಕವೂ ನಡೆಸಿಕೊಂಡು ಬರುತ್ತಿದ್ದಾರೆ. ಕನ್ನಡ ಸಾಹಿತ್ಯಕೃತಿಗಳ ಅಂತರಂಗದಲ್ಲಡಗಿದ ಸಾಂಸ್ಕೃತಿಕ ಮಹತ್ವವನ್ನು ಸಮಕಾಲೀನ ಯುಗಧರ್ಮದ ವೈಚಾರಿಕ ಮೌಲ್ಯದೊಂದಿಗೆ ಮುಖಾಮುಖಿಗೊಳಿಸುವುದೇ 'ನುಡಿಸಿರಿ' ಎಂಬ ಸಾಹಿತ್ಯ ಹಬ್ಬದ ಮುಖ್ಯ ಉದ್ದೇಶವಾಗಿದೆ. ಇದರಂತೆಯೇ ಅಖಿಲಭಾರತ ಮಟ್ಟದ ರಂಗಕಲೆಗಳ ಪ್ರದರ್ಶನದ ಮೂಲಕ ಸಾಂಸ್ಕೃತಿಕ ವಿಭಿನ್ನತೆಗಳೆಂದು ಕಂಡುಬಂದ ವಿವಿಧ ಪ್ರದರ್ಶನ ಕಲೆಗಳೊಳಗಿನ ಪರಸ್ಪರ ಸಮಾನ ಆಶಯವನ್ನು ಗುರುತಿಸುವುದು ಮತ್ತು ಭಾರತೀಯ ಚಿಂತನ ಕ್ರಮದ ಹಿಂದಿನ ವಿಶಿಷ್ಟತೆಯನ್ನು ಮನಗಾಣಿಸುವುದೇ 'ವಿರಾಸತ್' ಚಟುವಟಿಕೆಯ ಹಿಂದಿನ ಆಶಯವಾಗಿದೆ.

**ನಡಿಬೈಲು ಉದಯಶಂಕರ:** 1980-85ರ ದಶಕದಲ್ಲಿ ಉಡುಪಿ ಆಯುರ್ವೇದ ಕಾಲೇಜಿನ ವಿದ್ಯಾರ್ಥಿಯಾಗಿ ಪ್ರಸ್ತುತ ಮಡಿಕೇರಿಯಲ್ಲಿ ವೈದ್ಯಕೀಯ ವೃತ್ತಿಯಲ್ಲಿ ತೊಡಗಿಕೊಂಡ ಡಾ. ಉದಯ ಶಂಕರ ಅವರು ತಮ್ಮ ವೃತ್ತಿಜೀವನದ ಅನುಭವದ ಹಿನ್ನೆಲೆಯಲ್ಲಿ ಕನ್ನಡ ಕೃತಿಗಳನ್ನು ರಚಿಸಿ, ಕನ್ನಡಿಗರಿಗೆ ಚಿರಪರಿಚಿತರೆನಿಸಿಕೊಂಡಿದ್ದಾರೆ. ಆಯುರ್ವೇದ ವೈದ್ಯಕೀಯ ವಿದ್ಯಾರ್ಥಿಗಳಾಗಿ ಎರಡು ಪಠ್ಯಕೃತಿಗಳೂ ಸೇರಿದಂತೆ ಇವರು ರಚಿಸಿದ ಕನ್ನಡ ಕೃತಿಗಳ ಹೆಸರುಗಳು ಹೀಗಿವೆ. 1) ಮೂಲಿಕೆಗಳ ಮಾಯಾಲೋಕ 2) ಹಸಿ ಮದ್ದು-ಖುಷಿ ಮದ್ದು 3) ಸ್ವಾಸ್ಥ್ಯ ಸಂಪದ 4) ನಿಂಬೆಯನ್ನು ನಂಬಿ, 5) ತುಳಸಿ, 6) ಮಧುಮೇಹಕ್ಕೆ ಆಯುರ್ವೇದ ಚಿಕಿತ್ಸೆ 7) ರಕ್ತದ ಕಲೆ. 8) ಬದುಕಿಗೆ ಬೇಕು ಬೇವು 9) ನಿನ್ನೆದುರಲ್ಲಿ ಸಂಜೀವಿನಿ ಇತ್ಯಾದಿ. ಈ ಎಲ್ಲಾ ವೈದ್ಯಕೀಯ ಕೃತಿಗಳು ಹೆಚ್ಚಿನ ಎಲ್ಲಾ ಪುಸ್ತಕದಂಗಡಿಗಳಲ್ಲಿ ಲಭ್ಯವಿರುತ್ತವೆ. ಹೀಗೆ ವೈದ್ಯ ಸಾಹಿತ್ಯ ಕೃತಿಗಳನ್ನು ಜನಸಾಮಾನ್ಯರು ಅರ್ಥೈಸಿಕೊಳ್ಳುವ ಸರಳ ಕನ್ನಡ ಭಾಷೆಯಲ್ಲಿ ನೀಡಿರುವುದು ಇವರ ವೈದ್ಯಕೀಯ ಜ್ಞಾನದ ಮತ್ತು ಕನ್ನಡ ಭಾಷೆ ಮತ್ತು ಸಾಹಿತ್ಯದ ಕುರಿತು ಇವರಿಗಿರುವ ಅಭಿಮಾನವನ್ನು ಸೂಚಿಸುತ್ತದೆ.

**ಮಣಿಪಾಲ ತಾಂತ್ರಿಕ ಶಿಕ್ಷಣ, ಸಂಸ್ಥೆ:**

ವೃತ್ತಿಪರ ಶಿಕ್ಷಣಸಂಸ್ಥೆಯಾದ ಮಣಿಪಾಲ ತಾಂತ್ರಿಕ ಶಿಕ್ಷಣಸಂಸ್ಥೆಯಲ್ಲಿ ಸಾಹಿತ್ಯ ಚಟುವಟಿಕೆಯನ್ನು ಆರಂಭಿಸಿದವರೇ ಅಲ್ಲಿನ ಮೆಕ್ಯಾನಿಕಲ್ ವಿಭಾಗದ ಉಪನ್ಯಾಸಕರಾದ ಬಾ.ನಾ. ಶಾಂತಪ್ರಿಯ ಅವರು. ಸಾಹಿತ್ಯದ ಮೇಲಿನ ವಿಶೇಷ ಅಭಿರುಚಿಯಿಂದಾಗಿ ತಮ್ಮದೇ ಸ್ನೇಹಿತರ ಸಂಘವೊಂದನ್ನು 'ಕನ್ನಡ ಸಂಘ' ಎಂಬ ಹೆಸರಿನಲ್ಲಿ ಒಗ್ಗೂಡಿಸಿಕೊಂಡು 1991 ರಿಂದ ಕಾಲೇಜಿನಲ್ಲಿ ಕನ್ನಡ ಸಾಹಿತ್ಯ ಚಟುವಟಿಕೆಗಳನ್ನು ಆರಂಭಿಸಿದರು. ತಾಂತ್ರಿಕಶಿಕ್ಷಣ ವಿದ್ಯಾರ್ಥಿಗಳಿಗೆ ಭಾಷಾ ಬೋಧನೆಯ (ಸಾಹಿತ್ಯ ಪಾಠದ) ಅವಕಾಶ ಇಲ್ಲದೇ ಹೋದರೂ ಕಾಲೇಜಿನ ಆಸಕ್ತ ಸಿಬ್ಬಂದಿವರ್ಗದವರಲ್ಲಿ ಸಾಹಿತ್ಯಾಭಿರುಚಿಯನ್ನು ಒಡಮೂಡಿಸುವುದಕ್ಕಾಗಿ ಶಾಂತಪ್ರಿಯರು ಕನ್ನಡಸಂಘವನ್ನು ಸ್ಥಾಪಿಸಿದರು. ಕಾಲೇಜಿನ ವಿಭಾಗದಿಂದಾಗಲೀ ಆಡಳಿತದಿಂದಾಗಲೀ ಯಾವುದೇ ಆರ್ಥಿಕ ಸಹಾಯವನ್ನು ಬಯಸದೆ ಸ್ನೇಹಿತರೇ ಚಂದಾ ಎತ್ತಿ, ಈ ಸಂಘದ ಮೂಲಕ ಸಾಹಿತ್ಯ ಚಟುವಟಿಕೆಗಳನ್ನು ಆರಂಭಿಸಿದರು. ಇವರ ಚಟುವಟಿಕೆಯ ಕುರಿತಾಗಿ ಕೇಳಿ ತಿಳಿದ ಸಮೀಪದ ವೈದ್ಯಕೀಯ ಕಾಲೇಜಿನ (ಕೆ.ಎಂ.ಸಿ.) ಸಾಹಿತ್ಯಾಸಕ್ತ ವೈದ್ಯರು ಶಾಂತಪ್ರಿಯರ ಕಾರ್ಯಕ್ರಮಗಳಲ್ಲಿ ಭಾಗವಹಿಸುವುದಕ್ಕೆ ತೊಡಗಿದರು.

**ಕನ್ನಡ ಸಂಘದಲ್ಲಿ ತೊಡಗಿಕೊಂಡ ಮುಖ್ಯ ಉಪನ್ಯಾಸಕರು:** ಪ್ರೊ. ನಾರಾಯಣ (ರಸಾಯನಶಾಸ್ತ್ರ ವಿಭಾಗ), ಮುರಳೀಧರ ನಕ್ಷತ್ರಿ, ನಿರಂಜನ್ ಚಿಪ್ಳೂಂಕರ್ (ಮೆಕ್ಯಾನಿಕಲ್ ವಿಭಾಗ), ಕಿಶೋರ್ ಬಾಗಲೋಡಿ, ಕೆ.ಕೆ. ಕಮಲಾಕ್ಷ, ಸುಧಾಕರ ಕೆ., (ಗಣಿತಶಾಸ್ತ್ರ ವಿಭಾಗ) ಎಸ್.ವಿ. ಉದಯ ಕುಮಾರ್ ಶೆಟ್ಟಿ (ಸಿವಿಲ್ ವಿಭಾಗ).

**ಸಂಯೋಜಿಸಿದ ಕಾರ್ಯಕ್ರಮಗಳು:**

ತಾಂತ್ರಿಕ ಶಿಕ್ಷಣಸಂಸ್ಥೆಯ ಕನ್ನಡಸಂಘವು ನಿರ್ವಹಿಸಿದ ಸಾಹಿತ್ಯ ಚಟುವಟಿಕೆಗಳ ಕುರಿತು ಯಾವುದೇ ಪುಸ್ತಕ ರೂಪದ ಕೃತಿಗಳಿಗಳಿಲ್ಲದೇ ಹೋದರೂ ಬಾ.ನಾ. ಶಾಂತಪ್ರಿಯರ ಬಳಿ ಇರುವ ಪತ್ರಿಕಾವರದಿ ಹಾಗೂ ಕಾರ್ಕಳ ವೆಂಕಟರಮಣ ಮಹಿಳಾ ಕಾಲೇಜಿನ ವಾರ್ಷಿಕ ಸಂಚಿಕೆಯಲ್ಲಿ ಲಭ್ಯವಾಗುವ ವರದಿಗಳಲ್ಲಿ ತಾಂತ್ರಿಕ ಶಿಕ್ಷಣ ಕಾಲೇಜಿನ ಸಾಹಿತ್ಯ ಚಟುವಟಿಕೆಗಳ ಸಂಕ್ಷಿಪ್ತ ಮಾಹಿತಿ ದೊರೆಯುತ್ತದೆ. ಬಾ.ನಾ. ಶಾಂತಪ್ರಿಯರಲ್ಲಿ ಇರುವ ದಿನಪತ್ರಿಕೆಯ (ಉದಯವಾಣಿ) ವರದಿಗಳಲ್ಲಿ

ಉಲ್ಲೇಖಿಗೊಂಡಂತೆ ಸಾಹಿತ್ಯೋಪನ್ಯಾಸವನ್ನೂ, ವಿದ್ಯಾರ್ಥಿಗಳಿಗಾಗಿ ಪ್ರಬಂಧಸ್ಪರ್ಧೆಯನ್ನೂ, ಪದಬಂಧ ಸ್ಪರ್ಧೆಯನ್ನೂ, ರಸಪ್ರಶ್ನೆ ಕಾರ್ಯಕ್ರಮವನ್ನೂ ಹಮ್ಮಿಕೊಂಡು ವಿಜೇತ ವಿದ್ಯಾರ್ಥಿಗಳಿಗೆ ಕಾಲೇಜಿನ ಮೆಕ್ಯಾನಿಕಲ್ ವಿಭಾಗದಿಂದಲೇ ರಚಿಸಿದ ಕನ್ನಡ ಅಂಕೆಗಳುಳ್ಳ ಗಡಿಯಾರವನ್ನು ಬಹುಮಾನವಾಗಿ ನೀಡುತ್ತಿದ್ದರು. ಮಂಗಳೂರು ವಿಶ್ವವಿದ್ಯಾನಿಲಯ ವ್ಯಾಪ್ತಿಯ ಪದವಿ ಕಾಲೇಜು ಮಟ್ಟದ ವಿದ್ಯಾರ್ಥಿಗಳಿಗಾಗಿ ಈ ಮೇಲ್ಕಂಡ ಸ್ಪರ್ಧೆಗಳನ್ನು ನಿರಂತರ ನಾಲ್ಕು ವರ್ಷಗಳ ಕಾಲ ನಿರ್ವಹಿಸಿಕೊಂಡು ಬಂದಿದ್ದರೆಂಬುದು ಬಾ.ನಾ. ಶಾಂತಪ್ರಿಯರ ಮೌಖಿಕ ಹೇಳಿಕೆಯಾಗಿದೆ.

**ಸಾಹಿತ್ಯೋಪನ್ಯಾಸ:** ಕನ್ನಡಸಂಘದ ವತಿಯಿಂದ ನಡೆಯುವ ಸಾಹಿತ್ಯೋಪನ್ಯಾಸ ಕಾರ್ಯಕ್ರಮವನ್ನು ನಿರ್ವಹಿಸಲು ಡಾ. ಶಿವರಾಮ ಕಾರಂತರು ಎರಡು ಬಾರಿ ಕಾಲೇಜಿನ ಮೆಕ್ಯಾನಿಕಲ್ ವಿಭಾಗಗಕ್ಕೆ ಆಹ್ವಾನಿತರಾಗಿದ್ದು, ತಮ್ಮ ಮೊದಲ ಉಪನ್ಯಾಸದಲ್ಲಿ ಕನ್ನಡದಲ್ಲಿ 'ವಿಜ್ಞಾನಸಾಹಿತ್ಯದ ಪಾರಿಭಾಷಿಕ ಪದಗಳನ್ನು ಸೃಜಿಸುವಲ್ಲಿ ಎದುರಾಗುವ ಸಮಸ್ಯೆಗಳು' ಎಂಬ ಕುರಿತು ಉಪನ್ಯಾಸ ನೀಡಿದ್ದರು. ಎರಡನೇ ಬಾರಿ 'ಕನ್ನಡ ಅನುವಾದ ಸಮಸ್ಯೆಯ ಸವಾಲುಗಳು' ಎಂಬ ಕುರಿತು ಉಪನ್ಯಾಸ ನೀಡಿದ್ದರು. ಈ ಕಾರ್ಯಕ್ರಮವನ್ನು ವಿಭಾಗದ ಆಸಕ್ತ ಉಪನ್ಯಾಸಕರೇ ಸಂಯೋಜಿಸಿಕೊಂಡು ಬರುತ್ತಿರುವರೆಂಬ ವಿಷಯ ತಿಳಿದ ಶಿವರಾಮ ಕಾರಂತರು ಸಂಘಕ್ಕೆ ಶುಭ ಹಾರೈಸಿ, ಯಾವುದೇ ಸಂಭಾವನೆ ಸ್ವೀಕರಿಸದೇ ಉಪನ್ಯಾಸಕರ ಪ್ರಯತ್ನವನ್ನು ಶ್ಲಾಘಿಸಿದರು ಎಂದು ಬಾ.ನಾ. ಶಾಂತಪ್ರಿಯರು ಕನ್ನಡ ಸಂಘದ ನೆನಪನ್ನು ಮೌಖಿಕ ಸಂದರ್ಶನದಲ್ಲಿ ಹಂಚಿಕೊಂಡಿದ್ದಾರೆ.

**ಸಾಹಿತ್ಯಚಟುವಟಿಕೆಯ ಸಾಧಿತ ಪರಿಣಾಮಗಳು:** ಕೇವಲ ನಾಲ್ಕು ವರ್ಷವಷ್ಟೇ ವಿಭಾಗದ ಮುಖ್ಯಸ್ಥರು ಮತ್ತು ಪ್ರಾಂಶುಪಾಲರ ಅನುಮತಿಯಿಂದ ಕಾಲೇಜಿನಲ್ಲಿ ಕನ್ನಡ ಸಂಘದ ಚಟುವಟಿಕೆಗಳು ನಡೆಯುವಂತಾಯಿತು. ಮುಂದೆ ಕನ್ನಡೇತರ ವಿದ್ಯಾರ್ಥಿಗಳು ತಂದೊಡ್ಡಿದ ಆಡಳಿತಾತ್ಮಕ ಸಮಸ್ಯೆಯಿಂದಾಗಿ ಈ ಚಟುವಟಿಕೆಗಳು ನಿಂತುಹೋದುವು. ನಾಲ್ಕು ವರ್ಷದ ಸಂದರ್ಭದಲ್ಲಿ ಸಂಪನ್ಮೂಲವ್ಯಕ್ತಿಗಳಾಗಿ ಆಗಮಿಸಿದ ಆಕಾಶವಾಣಿ ಕಾರ್ಯಕ್ರಮ ಸಂಯೋಜಕರಾದ ಡಾ. ವಸಂತ ಕುಮಾರ್ ಪೆರ್ಲ ಅವರು ಮಂಗಳೂರು ವಿಶ್ವವಿದ್ಯಾನಿಲಯದ ಸಂಯೋಜಿತ ಕಾಲೇಜುಗಳ ವಿದ್ಯಾರ್ಥಿ ಬಳಗದ ಸಾಹಿತ್ಯಕ ಶಕ್ತಿ, ಭಾಷಾ ಸಾಮರ್ಥ್ಯ, ಅಭಿವ್ಯಕ್ತಿಯ ರೀತಿ ಮುಂತಾದ ಪ್ರತಿಭೆಯನ್ನು ಗಮನಿಸಿ, ಕನ್ನಡಸಂಘದ ಸ್ಪರ್ಧೆಗಳಲ್ಲಿ ವಿಜೇತರಾದ ವಿದ್ಯಾರ್ಥಿಗಳಿಗೆ ಆಕಾಶವಾಣಿಯ ಕಾರ್ಯಕ್ರಮಗಳಲ್ಲೂ ಅವಕಾಶ ಮಾಡಿಕೊಟ್ಟರು. ಕನ್ನಡಸಂಘದ ಕಾರ್ಯಕ್ರಮಕ್ಕೆ ಆಗಮಿಸುತ್ತಿದ್ದ ಸ್ಥಳೀಯ ಪತ್ರಿಕೆಯ ಸಂಪಾದಕರಾದ ಶ್ರೀ ಈಶ್ವರಯ್ಯ, ಶ್ರೀ ಸಂತೋಷ್ ಕುಮಾರ್ ಗುಲ್ವಾಡಿಯವರು ತಾಂತ್ರಿಕ ಶಿಕ್ಷಣ ಕಾಲೇಜಿನ ಉಪನ್ಯಾಸಕರ ಸಾಹಿತ್ಯಾಸಕ್ತಿಯನ್ನು ಗಮನಿಸಿ, ತಮ್ಮ ಪತ್ರಿಕೆಯ ಮೂಲಕ ಅವರ ಲಿಖಿತ ಚಟುವಟಿಕೆಗಳನ್ನು ಅಭಿವ್ಯಂಜಿಸುವುದಕ್ಕೆ ಅವಕಾಶವನ್ನು ಮಾಡಿಕೊಟ್ಟರು. ಯಕ್ಷಗಾನಕಲೆಯಲ್ಲಿ ವಿಶೇಷ ಆಸಕ್ತರಾದ ಎಸ್.ವಿ. ಉದಯ ಕುಮಾರ್ ಶೆಟ್ಟಿಯವರ ಪ್ರತಿಭೆಯನ್ನು ಮನಗಂಡು, ಉದಯವಾಣಿ ಪತ್ರಿಕೆಯಲ್ಲಿ ನಿತ್ಯಾನಂದ ಪಡ್ರೆಯವರು ಅವರ ಕುರಿತಾಗಿ ವಿಶೇಷ ಮಾಹಿತಿಯುಳ್ಳ ಲೇಖನವನ್ನು ನೀಡಿದರು. ಇದರಿಂದಾಗಿ ಉದಯ ಕುಮಾರ್ ಶೆಟ್ಟಿಯವರ ಯಕ್ಷಗಾನ ಕಲೆಯ ಪ್ರತಿಭೆಯನ್ನು ಜಿಲ್ಲೆಯ ಜನ ಸುಲಭದಲ್ಲಿ ಗುರುತಿಸುವಂತಾಯಿತು.

**ವೈಕುಂಠ ಬಾಳಿಗಾ ಕಾನೂನು ಕಾಲೇಜು, ಉಡುಪಿ:**

1957ರಲ್ಲಿ ಮಣಿಪಾಲ ಅಕಾಡೆಮಿಯ ವತಿಯಿಂದ ಆರಂಭಿಸಲಾದ ಈ ಕಾಲೇಜು 1987ರ ತನಕವೂ ಉಡುಪಿ ನಗರದಲ್ಲಿದ್ದು, 1987ರಲ್ಲಿ ಎಂ.ಜಿ.ಎಂ. ಕಾಲೇಜಿನ ಸಮೀಪದ ಈಗಿನ ಕಟ್ಟಡಕ್ಕೆ ವರ್ಗಾವಣೆಗೊಂಡಿತು. ಆರಂಭದ 20 ವರ್ಷ (1957–87) ಕಾಲೇಜು ಯಾವುದೇ ಸಂಚಿಕೆಯನ್ನು ಪ್ರಕಟಿಸಿದ ದಾಖಲೆಗಳು ಕಂಡುಬರುವುದಿಲ್ಲ. ಕಾಲೇಜು ಈಗ ಇರುವ ಕಟ್ಟಡಕ್ಕೆ ಸ್ಥಳಾಂತರಗೊಂಡ ಅನಂತರ ಎರಡು ವರ್ಷಗಳಿಗೊಮ್ಮೆ ಅಥವಾ ಮೂರು ವರ್ಷಗಳಿಗೊಮ್ಮೆ ಸಂಚಿಕೆಯನ್ನು ಪ್ರಕಟಿಸುವ ವ್ಯವಸ್ಥೆಯನ್ನು ರೂಢಿಸಿಕೊಂಡಿದೆ.

ಕನ್ನಡ ಭಾಷಾಜ್ಞಾನವಿರದ ವಿದ್ಯಾರ್ಥಿಗಳು ಗಣನೀಯ ಪ್ರಮಾಣದಲ್ಲಿ ಕಾಲೇಜಿನಲ್ಲಿ ಪ್ರವೇಶ ಪಡೆಯುವುದು, ಕನ್ನಡ ಭಾಷಾಬೋಧನೆಗೆ ಅವಕಾಶ ಇಲ್ಲದಿರುವುದು, ಆಂಗ್ಲಭಾಷಾಮಾಧ್ಯಮವೇ ಬೋಧನಾಮಾಧ್ಯಮವಾಗಿರುವುದು ಈ ಎಲ್ಲಾ ಕಾರಣಗಳಿಂದಾಗಿ ಕನ್ನಡ ಸಾಹಿತ್ಯ ಚಟುವಟಿಕೆಗಳಿಗೆ ಕಾನೂನು ಕಾಲೇಜಿನಲ್ಲಿ ಪೂರಕ ವೇದಿಕೆ ನಿರ್ಮಾಣಗೊಂಡಿಲ್ಲ ಎನ್ನುವುದು ಸಂಚಿಕೆಯಿಂದ ತಿಳಿದುಬರುವ ವಿಷಯವಾಗಿದೆ.

**ವಾರ್ಷಿಕ ಸಂಚಿಕೆಯಲ್ಲಿ ಪ್ರಕಟಗೊಂಡ ಕೆಲವು ಮಾದರಿ ಸಾಹಿತ್ಯಕ ಬರಹಗಳು:**

1977–78ನೇ ಶೈಕ್ಷಣಿಕ ವರ್ಷದಿಂದ ಸಂಚಿಕೆಯು ಪ್ರಕಟಗೊಳ್ಳುವುದಕ್ಕೆ ತೊಡಗಿದ್ದು, ಹನಿಗವನ ಹಾಗೂ ವೈಚಾರಿಕ ಲೇಖನ ಮತ್ತು ಸಣ್ಣ ಕಥೆಯ ಪ್ರಕಾರಕ್ಕೆ ಸೇರಿಸಬಹುದಾದ ಕೆಲವು ಪ್ರಬಂಧಗಳಿದ್ದು, ಸಾಹಿತ್ಯಕ ಸತ್ವವುಳ್ಳ ಮತ್ತು ಮೌಲಿಕವಾದ ಬರಹಗಳನ್ನು ಸಂಚಿಕೆ ಒಳಗೊಂಡಿರುವುದಿಲ್ಲವೆನ್ನುವುದನ್ನು ಪ್ರಕಟಿತ ಸಂಚಿಕೆಯ ಬರಹಗಳಿಂದ ತಿಳಿಯಬಹುದಾಗಿದೆ. ಎಲ್ಲಾ ಸಂಚಿಕೆಗಳಲ್ಲೂ ವಿರಳವಾಗಿ ಕೆಲವೇ ಕೆಲವು ಸಾಹಿತ್ಯಕ ಮೌಲ್ಯ ಮತ್ತು ಸತ್ವವುಳ್ಳ ಬರಹಗಳಿದ್ದು, ಅವುಗಳನ್ನು ಮಾದರಿಗಾಗಿ ಇಲ್ಲಿ ವಿಶ್ಲೇಷಣೆಗಾಗಿ ಆಯ್ಕೆ ಮಾಡಿಕೊಳ್ಳಲಾಗಿದೆ.

1977–78ನೇ ಸಂಚಿಕೆಯಲ್ಲಿ ಅಶೋಕ್ ಕುಮಾರ್ ಗುಲ್ವಾಡಿ ಎಂಬ ಕಾನೂನು ಕಾಲೇಜಿನ ಉಪನ್ಯಾಸಕರ ಕವನವು ಪ್ರಕಟಗೊಂಡಿದ್ದು, ಕವನದ ಶೀರ್ಷಿಕೆ 'ಅರಿಯದಾ ಅವಳಂತರಂಗ' ಎಂಬುದಾಗಿದೆ. ಸಂಸಾರದ ಮುಖ್ಯ ಪಾತ್ರಗಳಾದ ಗಂಡು ಹೆಣ್ಣಿನ ಪರಸ್ಪರ ಹೊಯ್ದಾಟವನ್ನು ಇಲ್ಲಿ ಚಿತ್ರಿಸಲಾಗಿದ್ದು, ಇಬ್ಬರದೂ ಇಲ್ಲಿ ವಿಫಲಪ್ರಯತ್ನ ಎನ್ನುವುದು ಕವಿಯ ನಿಲುವು. 'ಅವಳಿಷ್ಟದಿಂದ ನಡೆದುಕೊಂಡರೆ ನಾ ಭಯಗ್ರಸ್ತ'ನೆಂಬ ಭೀತಿ ಗಂಡನಿಗಾದರೆ, ಅದೇ ಗಂಡನಿಗೆ ಕೆಲವೊಮ್ಮೆ 'ಅವಳ ಬೇಡಿಕೆ ಈಡೇರಿಸಿಲ್ಲವೆಂದಾದರೆ ನಾ ರೋಗಗ್ರಸ್ತ' ಎಂಬ ಅಳುಕು ಮನಸ್ಸನ್ನು ಕೊರೆಯುತ್ತಿರುತ್ತದೆ. ಕೊನೆಗೂ 'ಯಾರು ಮೋಸಹೋದೆವೋ ನಮ್ಮಿಬ್ಬರೊಳಗೆ' ಎಂಬ ಸಂಶಯ ಇಬ್ಬರಲ್ಲೂ ಉಳಿದುಬಿಡುತ್ತದೆ ಎಂಬುದೇ ಕವಿಯ ನಿಲುವಾಗಿದೆ. (ಸಂಚಿಕೆ 1977–78) ಇದೇ ಸಂಚಿಕೆಯ ಪುಟ ಸಂಖ್ಯೆ 11ರಲ್ಲಿ 'ಜಾತಿ–ಒಂದು ವಿವೇಚನೆ' ಎಂಬ ವೈಚಾರಿಕ ಪ್ರಬಂಧದಲ್ಲಿ ಜಾತಿ ಆಧಾರಿತ ಮೀಸಲಾತಿ ಧೋರಣೆಯಿಂದ ಜಾತಿ ಎಂಬ ಅನಿಷ್ಟಪದ್ಧತಿ ಮತ್ತಷ್ಟು ಭದ್ರವಾಗಿ ಬೇರೂರುತ್ತಿದೆ ಎನ್ನುತ್ತಾ ಪರಮಹಂಸ ಎಂಬ ಮೊದಲನೇ ಎಲ್.ಎಲ್.ಬಿ. ವಿದ್ಯಾರ್ಥಿಯು 'ಎಲ್ಲ ಜಾತಿಗಳನ್ನು ಸಮಾನವಾಗಿ ಪರಿಗಣಿಸಲಿ.

ಕೆಲಸನೀಡುವಾಗ, ಸ್ಕಾಲರ್‌ಶಿಪ್ ನೀಡುವಾಗ... ಜಾತಿಯನ್ನು ಪರಿಗಣಿಸದೆ ಆರ್ಥಿಕವಾಗಿ ಹಿಂದುಳಿದವರಿಗೆ ಇಂತಹ ಸೌಲಭ್ಯಗಳಲ್ಲಿ ಪ್ರಾಶಸ್ತ್ಯನೀಡಲಿ' ಎಂದು ತನ್ನದೇ ಆದ ಸಲಹೆ ನೀಡಿದ್ದಾನೆ.

1984–85 ರಿಂದ 1986–87ನೇ ಸಾಲಿನ ಮೂರು ಶೈಕ್ಷಣಿಕ ವರ್ಷದ ಚಟುವಟಿಕೆಗಳನ್ನು ಒಂದೇ ಸಂಚಿಕೆಯಲ್ಲಿ ದಾಖಲಿಸಿದ್ದು, '21ನೇ ಶತಮಾನದತ್ತ ಭಾರತ' ಎಂಬ ಯಜ್ಞೇಶ್ವರ ಟಿ. ಡಿ. ಎಂಬ ಪ್ರಥಮ ಕಾನೂನು ಪದವಿಯ ವಿದ್ಯಾರ್ಥಿಯ ಪ್ರಬಂಧವನ್ನು ಇಲ್ಲಿ ವಿಶ್ಲೇಷಣೆಗೆ ಆಯ್ಕೆ ಮಾಡಿಕೊಳ್ಳಲಾಗಿದೆ. ಆತನ ಅಭಿಪ್ರಾಯದಂತೆ ಭಾರತದಲ್ಲಿ ಮಿತಿಮೀರುತ್ತಿರುವ ಜನಸಂಖ್ಯೆಯೇ ಎಲ್ಲ ಸಾಮಾಜಿಕ ಸಮಸ್ಯೆಗಳಿಗೂ ಕಾರಣವಾಗಿ, ಸರಕಾರದ ಪ್ರಗತಿಪರ ಯೋಜನೆಗಳೂ ಫಲಪ್ರದವಾಗದೇ ವಿಫಲವಾಗುತ್ತಿದೆ ಎನ್ನುವುದೇ ಆತನ ಪ್ರಬಂಧದ ಅಂತಿಮ ಆಶಯವಾಗಿದೆ. 1998–99ನೇ ಸಾಲಿನ ಸಂಚಿಕೆಯಲ್ಲಿ ನಾಲ್ಕನೇ ಎಲ್.ಎಲ್.ಬಿ. ತರಗತಿಯ ವಿದ್ಯಾರ್ಥಿ ಪ್ರದೀಪ್ ಕುಮಾರ್ ಶೆಟ್ಟಿಯವರ 'ಕೋರಿಕೆ' ಕವನದ ಸ್ವಾರಸ್ಯ ಹೀಗಿದೆ:

ಗೆಳತಿ ಎಂದಾಗುವೆ ನೀ । ನನ್ನ ಬಾಳ ಸಂಗಾತಿ ।

ಎಂದೆಂದಿಗೂ ನೀ ಹಾಡದಿರು । ನನ್ನ ಬಾಳಿಗೆ ಸಂಕ್ರಾಂತಿ ।

ಎಂದು ಪ್ರೇಯಸಿಯಲ್ಲಿ ತನ್ನ ಕೋರಿಕೆಯನ್ನಿಟ್ಟಿದ್ದಾನೆ. ಕಾನೂನು ವಿದ್ಯಾರ್ಥಿ ಸಂಕ್ರಾಂತಿ ಎಂಬ ಶಬ್ದಕ್ಕೆ 'ಹೊಸತನ' ಅಥವಾ 'ಬದಲಾವಣೆ' ಎಂಬ ಅರ್ಥವನ್ನು ಕೊಡದೆ 'ಸಂಕ್ರಾಂತಿ' ಎಂಬ ಶಬ್ದಕ್ಕೆ ಬದಲಾಗು ಎನ್ನುವ ಅರ್ಥವನ್ನಷ್ಟೇ ನೀಡಿ, ನನ್ನೊಂದಿಗಿನ ನಿಲುವನ್ನು ಬದಲಾಯಿಸದಿರು ಎಂಬ ಆಶಯದಲ್ಲಿ ತನ್ನ ಪ್ರೇಯಸಿಯನ್ನು ವಿನಂತಿಸುವ ಧ್ವನಿಯನ್ನು ಮೇಲಿನ ಕವನದಲ್ಲಿ ಅರ್ಥೈಸಬಹುದಾಗಿದೆ. ಇದೇ ಸಂಚಿಕೆಯಲ್ಲಿ ಕಾಲೇಜಿನ ಅಂಶಕಾಲಿಕ ಉಪನ್ಯಾಸಕರಾದ ಶಿರ್ತಾಡಿ ವಿಲಿಯಂ ಪಿಂಟೋ ಅವರ ಪ್ರಬಂಧ 'ಕಾನೂನು ಮತ್ತು ಸಮಾಜ' ಎಂಬ ವೈಚಾರಿಕ ಪ್ರಬಂಧವನ್ನು ಓದುಗರು ಗಮನಿಸಲೇಬೇಕಾಗಿದೆ.

1999–2000ನೇ ಶೈಕ್ಷಣಿಕ ವರ್ಷದ ಸಂಚಿಕೆಯಲ್ಲಿ ಉಲ್ಲೇಖಿಸಬೇಕಾದ ಮುಖ್ಯ ಕವನ ದ್ವಿತೀಯ ಎಲ್.ಎಲ್.ಬಿ. ವಿದ್ಯಾರ್ಥಿ ಎಚ್. ಪವನ್ ಶೆಟ್ಟಿಯವರ 'ಶತಮಾನದ ವ್ಯಕ್ತಿ' ಎಂಬ ಕವನವಾಗಿದೆ. ಇಲ್ಲಿ ಕವಿ ರಾಷ್ಟ್ರಪಿತ ಮಹಾತ್ಮಾ ಗಾಂಧೀಜಿಯವರ ವ್ಯಕ್ತಿತ್ವವು ಮುಂದಿನ ತಲೆಮಾರನ್ನು ಪ್ರಭಾವಿಸಿರುವ ಬಗೆಯನ್ನು ಹೀಗೆ ನಿರೂಪಿಸಿದ್ದಾನೆ. 'ನಿನ್ನ ಜೀವನವು ಕೋಟಿ ತರಹದ ರೂಪದರ್ಶಿ । ನೀನಾದೆ ಹೊಸ ಸಹಸ್ರಮಾನದ ಮಾರ್ಗದರ್ಶಿ ।

ನಿನ್ನನ್ನು ಅರಿತವನೇ ನಿಜವಾದ ರಾಜರ್ಷಿ' ।'(ಸಂ: ಎಂ.ಎಸ್. ನಾಡಿಗ್ ಪ್ರೊ. 1999–2000, ಪು–17) ಎಂದು ಮುಕ್ತಾಯಗೊಂಡಿದೆ.

'ನಾವು ಮತ್ತು ನಮ್ಮ ಮನಸ್ಸು' ಎಂಬ ವೈಚಾರಿಕ ಪ್ರಬಂಧವೊಂದು ತೃತೀಯ ಎಲ್.ಎಲ್.ಬಿ. ವಿದ್ಯಾರ್ಥಿ ರವೀಶ್ ಕುಮಾರ್ ಅವರಿಂದ ರಚಿತವಾಗಿದ್ದು, ಈ ಪ್ರಬಂಧದ ಪ್ರತಿ ವಾಕ್ಯದಲ್ಲೂ ಮನಃಶಾಸ್ತ್ರದ ಸಿದ್ಧಾಂತ ಮತ್ತು ತತ್ತ್ವಗಳು ಒಳಗೊಂಡಿರುವುದನ್ನು ಕಾಣಬಹುದಾಗಿದೆ. ಉದಾ: ಎಲ್ಲಿ "ಸೌಂದರ್ಯವಿರುತ್ತದೋ ಅಲ್ಲಿಯೇ ಭಯಾನಕತೆಯೂ ಇರುತ್ತದೆ. ಹಾಗಾಗಿ ಮನಸ್ಸಿನಿಂದ ನಮಗಾಗುವ ಉಪಕಾರದಂತೆ ಅಪಕಾರವೂ ಬೇಕಾದಷ್ಟಿರುತ್ತದೆ. ನಮ್ಮ ದೇಹದಂತೆ ನಮ್ಮ

ಮನಸ್ಸಿನಲ್ಲೂ ಅನೇಕ ನ್ಯೂನತೆಗಳಿವೆ. ನಮ್ಮ ಮನಸ್ಸು, ಕೆಲವರನ್ನು ಅತಿಯಾಗಿ ಪ್ರೀತಿಸುತ್ತದೆ. ಮತ್ತೆ ಕೆಲವರನ್ನು ಅನಾವಶ್ಯಕವಾಗಿ ದ್ವೇಷಿಸುತ್ತದೆ. ನನಗೆ ಸಿಗದ್ದು, ಇತರರಿಗೆ ಸಿಕ್ಕಾಗ ನಮ್ಮ ಮನಸ್ಸಿಗಾಗುವ ಅಸೂಯೆ ಅಷ್ಟಿಷ್ಟಲ್ಲ. ದುರಾಸೆಯೂ ಕೂಡ, ಮನಸ್ಸಿನ ನ್ಯೂನತೆಗಳಲ್ಲಿ ಮುಖ್ಯವಾದುದು"(ಪೂರ್ವೋಕ್ತ,ಪು-59)

**ಉಡುಪಿ ಕಾನೂನು ಕಾಲೇಜು ಅಥವಾ ವೈಕುಂಠ ಬಾಳಿಗಾ ಕಾನೂನು ಕಾಲೇಜಿನ ಸಾಹಿತ್ಯ ಕೊಡುಗೆಗಳು:**

ಉಡುಪಿ ಕಾನೂನು ಕಾಲೇಜಿನಲ್ಲಿ ಕಾನೂನು ಪದವಿ ಮುಗಿಸಿ, ಸಾಹಿತ್ಯ ಕ್ಷೇತ್ರವನ್ನು ಪ್ರವೇಶಿಸಿ, ಕನ್ನಡ ಸಾಹಿತ್ಯ ಕ್ಷೇತ್ರಕ್ಕೆ ತನ್ನದೇ ಆದ ಕೊಡುಗೆಯನ್ನು ನೀಡಿದವರು ಕುಂದಾಪುರದ ಹಿರಿಯ ವಕೀಲರು ಮತ್ತು ಉಡುಪಿ ತಾಲೂಕು ಸಾಹಿತ್ಯ ಪರಿಷತ್ತಿನ ಮಾಜಿ ಅಧ್ಯಕ್ಷರಾದ ಎ.ಎಸ್.ಎನ್. ಹೆಬ್ಬಾರರು. 1963 ರಿಂದ ನ್ಯಾಯವಾದಿಯಾಗಿ ವೃತ್ತಿನಿರತರಾಗಿದ್ದು, ಸ್ವತಃ ಕವಿ, ಲೇಖಕ, ಪತ್ರಕರ್ತ, ಸಾಹಿತಿಯಾದ ಶ್ರೀ ಹೆಬ್ಬಾರ್ ರೋಟರಿ ಕುರಿತು ಕವನ, ಪ್ರಹಸನ ರಚಿಸಿ, ಅಭಿನಯಿಸಿ, ಮೆಚ್ಚುಗೆ ಪಡೆದವರು. 1967ರಲ್ಲಿ ರೋಟರಿ ಸೇರಿದಂದಿನಿಂದ ರೋಟರಿ ವೇದಿಕೆಯಲ್ಲಿ ಕನ್ನಡ ಭಾಷೆಯಲ್ಲಿ ಮಾತನಾಡಿ, ಕನ್ನಡ ಭಾಷೆಯ ಕಂಪು ಹಾಗೂ ಸೊಗಡನ್ನು ರೋಟರಿ ಸದಸ್ಯರಿಗೆ ಮನಗಾಣಿಸಿದವರು. ಪ್ರಸ್ತುತ ಕಾರ್ಯದರ್ಶಿಯಾಗಿ ಕನ್ನಡ ಸಂಘದ ಮೂಲಕ ವಿವಿಧ ಸಾಹಿತ್ಯಕ ಚಟುವಟಿಕೆಗಳನ್ನು ನಿರೂಪಿಸುತ್ತಾ ಕುಂದಾಪುರ ಪರಿಸರದ ಕನ್ನಡ ಸಾಹಿತ್ಯಾಭಿಮಾನಿಗಳಲ್ಲಿ ವಿಶೇಷವಾಗಿ ಗುರುತಿಸಿಕೊಂಡವರು. ಸಾಹಿತ್ಯ ಕ್ಷೇತ್ರದಲ್ಲಿ ತೊಡಗಿಕೊಂಡ ವಿದ್ಯಾರ್ಥಿಗಳ ವಿವರಗಳನ್ನು ಪ್ರಬಂಧದ ಕೊನೆಯ ಅನುಬಂಧದಲ್ಲಿ **ಅನುಬಂಧ ಸಂಖ್ಯೆ 13** ರಲ್ಲಿ ನೀಡಲಾಗಿದೆ.

**ವೃತ್ತಿಪರ ಶಿಕ್ಷಣ ಕಾಲೇಜುಗಳ ಸಾಹಿತ್ಯ ಚಟುವಟಿಕೆಗಳ ಸಂಕ್ಷಿಪ್ತ ಅವಲೋಕನ:**

20ನೇ ಶತಮಾನದ ಉತ್ತರಾರ್ಧದಲ್ಲಿ ಮುಖ್ಯವಾಗಿ ಮಣಿಪಾಲ ವೈದ್ಯಕೀಯ ಕಾಲೇಜು ಸೇರಿದಂತೆ ಉಡುಪಿ ಜಿಲ್ಲೆಯಲ್ಲಿ ಒಟ್ಟು 5 ವೃತ್ತಿಪರ ಕಾಲೇಜುಗಳು ಅಸ್ತಿತ್ವಕ್ಕೆ ಬಂದಿರುತ್ತವೆ. ಈ ಐದೂ ಕಾಲೇಜುಗಳಲ್ಲಿ ಶಿಕ್ಷಣ ಪದವಿ (ಬಿ.ಎಡ್) ಕಾಲೇಜನ್ನು ಹೊರತುಪಡಿಸಿದರೆ ಉಳಿದ ನಾಲ್ಕು ಕಾಲೇಜುಗಳಲ್ಲಿ ಕನ್ನಡವನ್ನು ಭಾಷಾ ಪಠ್ಯವಿಷಯವಾಗಿ ಓದುವ ಅವಕಾಶಗಳಿಲ್ಲ. ಬಿ.ಎಡ್. ಅಥವಾ ಶಿಕ್ಷಣ ಕಾಲೇಜಿನಲ್ಲಿ ಕನ್ನಡ ಭಾಷೆ-ಸಾಹಿತ್ಯ ಪಠ್ಯ ವಿಷಯವಾಗಿದ್ದು, ಕನ್ನಡ ಸಾಹಿತ್ಯ ಚಟುವಟಿಕೆಗಳಿಗೆ ವೃತ್ತಿ ಶಿಕ್ಷಣದ ಮಿತಿಯಲ್ಲಿ ಸಾಕಷ್ಟು ಚಟುವಟಿಕೆಗಳನ್ನು ನಿರ್ವಹಿಸಿರುವುದಕ್ಕೆ ಆ ಕಾಲೇಜಿನ ಸಂಚಿಕೆಗಳಲ್ಲಿ ವಿವರಗಳು ದೊರೆಯುತ್ತವೆ. ಕಾಲೇಜಿಗೆ ಹೊಂದಿಕೊಂಡೇ ಆಡಳಿತದ ವತಿಯಿಂದ ಮಾನವ ಸಂಪನ್ಮೂಲ ಕೇಂದ್ರವೆಂಬ ಘಟಕವೂ ಅಸ್ತಿತ್ವಕ್ಕೆ ಬಂದಿರುವುದು ಗುರುತಿಸಬೇಕಾದ ಅಂಶವಾಗಿರುತ್ತದೆ.

ಕನ್ನಡ ಭಾಷೆ ಮತ್ತು ಸಾಹಿತ್ಯದ ಕುರಿತಂತೆ ವಿದ್ಯಾರ್ಥಿಯ ಅಭಿರುಚಿಯು ಮೊಳಕೆಯೊಡೆಯುವುದು ವಿಶೇಷವಾಗಿ ಪ್ರೌಢಶಾಲಾ ಅಧ್ಯಾಪಕರ ಕನ್ನಡ ಬೋಧನೆಯಿಂದ ಎಂಬ ವಿಚಾರವು ಜಿಲ್ಲೆಯ ಸಾಹಿತಿಗಳು ತಮ್ಮ ವ್ಯಕ್ತಿಗತ ಜೀವನವಿವರಗಳನ್ನು ದಾಖಲಿಸುವ ಸಂದರ್ಭದಲ್ಲಿ ಪ್ರಸ್ತಾವಿಸಿರುವುದು ಕಂಡುಬರುತ್ತದೆ. ಈ ದೃಷ್ಟಿಯಿಂದ ಕನ್ನಡ ಭಾಷೆ ಮತ್ತು ಸಾಹಿತ್ಯದಲ್ಲಿ ಪ್ರೌಢಶಾಲಾ ಹಂತದ ವಿದ್ಯಾರ್ಥಿಗಳಿಗೆ ಅಭಿರುಚಿಯನ್ನು ಹುಟ್ಟಿಸಲು ಶಿಕ್ಷಕರು ಯಾವ ಬೋಧನತಂತ್ರವನ್ನು ರೂಪಿಸಿಕೊಳ್ಳಬೇಕು ಎಂಬ ಕುರಿತಾಗಿ ಕಾಲೇಜು 20ನೇ ಶತಮಾನದ ಸಂದರ್ಭದಲ್ಲಿ ಯಾವುದೇ ವಿಚಾರ ಸಂಕಿರಣಗಳನ್ನು

ನಡೆಸಿದ ಕುರಿತಂತೆ ದಾಖಲೆಗಳಿರುವುದಿಲ್ಲ. ಈ ದೃಷ್ಟಿಯಿಂದ ಶಿಕ್ಷಣ ಕಾಲೇಜಿನ ಸಾಹಿತ್ಯ ಚಟುವಟಿಕೆಯಲ್ಲಿ ಇದೊಂದು ಗುರುತರವಾದ ಲೋಪವಾಗಿದೆ ಎನ್ನುವುದನ್ನು ಈ ಅಧ್ಯಯನದ ಸಂದರ್ಭದಲ್ಲಿ ಕಂಡುಕೊಳ್ಳಲಾಗಿದೆ.

ಎರಡನೆಯದಾಗಿ ಶಿಕ್ಷಣ ಮಾಧ್ಯಮ ಹಾಗೂ ಪ್ರೌಢಶಾಲಾ ಮಟ್ಟದಲ್ಲಿ ವಿದ್ಯಾರ್ಥಿ ಅಭ್ಯಾಸ ಮಾಡಬೇಕಾದ ಭಾಷೆಗಳು ಎಷ್ಟಿರಬೇಕು? ಭಾಷಾ ಮಾಧ್ಯಮ ಹಾಗೂ ವಿದ್ಯಾರ್ಥಿಯ ಅಭಿವ್ಯಕ್ತಿಯ ಸಾಮರ್ಥ್ಯದ ನಡುವಿನ ಸಂಬಂಧಗಳೇನು? ಎಂಬಿತ್ಯಾದಿ ವಿಚಾರಗಳ ಕುರಿತಾಗಿ 20ನೇ ಶತಮಾನದ ಉತ್ತರಾರ್ಧದಲ್ಲಿ ಶಿಕ್ಷಣತಜ್ಞರು, ಸಾಹಿತಿಗಳು ಹಾಗೂ ಭಾಷಾಶಾಸ್ತ್ರಜ್ಞರು ನಿರಂತರ ಚರ್ಚೆ ನಡೆಸಿರುತ್ತಾರೆ. ಈ ಚರ್ಚೆಯ ಕುರಿತಂತೆ ಜಿಲ್ಲೆಯ ಶಿಕ್ಷಣ ಕಾಲೇಜಿನಲ್ಲಿ ಯಾವುದೇ ಕಮ್ಮಟ, ವಿಚಾರಸಂಕಿರಣ, ಚರ್ಚೆಗಳು ನಡೆದ ದಾಖಲೆಗಳು ಲಭ್ಯವಾಗುವುದಿಲ್ಲ. ಸರಕಾರದ ಮಾಧ್ಯಮ ನೀತಿಯನ್ನು ಪ್ರಶ್ನಿಸಿ, ಖಾಸಗಿ ಆಡಳಿತ ಮಂಡಳಿಯವರು ನ್ಯಾಯಕ್ಕಾಗಿ ನ್ಯಾಯಾಲಯವನ್ನೂ ಪ್ರವೇಶಿಸಿದ್ದಾರೆ. ಇಂತಹ ಜ್ವಲಂತಸಮಸ್ಯೆಯ ಕುರಿತಂತೆ ಜಿಲ್ಲೆಯ ಶಿಕ್ಷಣಕಾಲೇಜಿನಲ್ಲಿ ಯಾವುದೇ ಚರ್ಚೆ ನಡೆದ ದಾಖಲೆಗಳು ಇಲ್ಲದಿರುವುದು ಶಿಕ್ಷಣ ಕಾಲೇಜಿನ ಸಾಹಿತ್ಯಚಟುವಟಿಕೆಯಲ್ಲಿ ಕಂಡುಬರುವ ನ್ಯೂನತೆ ಎಂದು ಈ ಅಧ್ಯಯನದ ಸಂದರ್ಭದಲ್ಲಿ ಗಮನಿಸಲಾಗಿದೆ. ಶಿಕ್ಷಣ ಕಾಲೇಜಿನ ಉಪನ್ಯಾಸಕರು ತಮ್ಮ ಪ್ರಚಲಿತ ವಿದ್ಯಮಾನದ ವಿಷಯದ ಕುರಿತು ಉಪನ್ಯಾಸ-ಗೋಷ್ಠಿ ನಡೆಸಿದಲ್ಲಿ ಸಮಾಜದ ಸಮಕಾಲೀನ ಜ್ವಲಂತಪ್ರಶ್ನೆಗಳ ಕುರಿತು ಕಾಳಜಿ ವಹಿಸಿದಂತಾಗುತ್ತದೆ. ಸಮಾಜಕ್ಕೆ ನಿರ್ದಿಷ್ಟ ನಿಲುವನ್ನು ಸಂವಹನ ಮಾಡಿದಂತಾಗುತ್ತದೆ. ಕೇವಲ ತಮ್ಮ ತಮ್ಮ ಆಸಕ್ತಿ ಕ್ಷೇತ್ರದಲ್ಲೇ ಚರ್ಚೆ-ಗೋಷ್ಠಿ, ಕಮ್ಮಟಗಳು ನಡೆದಲ್ಲಿ ಸಮಕಾಲೀನ ಸಮಸ್ಯೆಗೆ ಸ್ಪಂದಿಸಿದಂತಾಗುವುದಿಲ್ಲ ಎನ್ನುವುದನ್ನು ಈ ಅಧ್ಯಯನದಲ್ಲಿ ಕಂಡುಕೊಳ್ಳಲಾಗಿದೆ.

ಉಡುಪಿ ಜಿಲ್ಲೆಯಲ್ಲಿ ಎರಡು ವೈದ್ಯಕೀಯ ಕಾಲೇಜುಗಳು ಅಸ್ತಿತ್ವದಲ್ಲಿದ್ದು ಈ ಎರಡೂ ವೈದ್ಯಕೀಯ ಮಹಾವಿದ್ಯಾಲಯದಲ್ಲಿ ವಿದ್ಯಾರ್ಥಿಗಳಿಗೆ ಕನ್ನಡ ಭಾಷೆ-ಸಾಹಿತ್ಯವನ್ನು ಓದುವ ಅವಕಾಶವಿಲ್ಲ. ಆದರೆ ಮಣಿಪಾಲ ವೈದ್ಯಕೀಯ ಕಾಲೇಜಿನ ಉಪನ್ಯಾಸಕರು ಕನ್ನಡ ಭಾಷೆಯ ಪರಿಚಯವಿರುವ ವಿದ್ಯಾರ್ಥಿಗಳೊಂದಿಗೆ ಲಲಿತಕಲಾ ಸಂಘದ ಮೂಲಕ ಕನ್ನಡ ಸಾಂಸ್ಕೃತಿಕ ಚಟುವಟಿಕೆಗಳಿಗೆ ಅವಕಾಶಕೊಟ್ಟ ಉಲ್ಲೇಖಗಳು ದಾಖಲೆಗಳಲ್ಲಿ ಲಭ್ಯವಿದೆ. ಆದರೆ ಯಾವುದೇ ಸಾಹಿತ್ಯ ಚಟುವಟಿಕೆಗಳು ನಡೆದ ಉಲ್ಲೇಖಗಳು ಮಣಿಪಾಲ ವೈದ್ಯಕೀಯ ಕಾಲೇಜಿನಿಂದ ಲಭ್ಯವಾಗುವುದಿಲ್ಲ. ವೈದ್ಯಕೀಯ ಕಾಲೇಜಿನ ಉಪನ್ಯಾಸಕರಾಗಿದ್ದ ದಿ। ಡಾ. ಕೊಪ್ಪೀಕಾರ್ ಅವರು ತಮ್ಮ ಸ್ವಂತ ಖರ್ಚಿನಿಂದ ಕಾಲೇಜಿನ ನಿವೇಶನದಲ್ಲಿ ಅವಿಭಜಿತ ದ.ಕ. ಜಿಲ್ಲಾ ಕಾಲೇಜು ವಿದ್ಯಾರ್ಥಿಗಳಿಗಾಗಿ ಜಿಲ್ಲಾ ಮಟ್ಟದ ನಾಟಕ ಸ್ಪರ್ಧೆಯನ್ನು ಏರ್ಪಡಿಸಿದ ಉಲ್ಲೇಖಗಳಿದ್ದು, ಆ ಕಾಲದ ಕನ್ನಡಬಲ್ಲ ವೈದ್ಯಕೀಯ ವಿದ್ಯಾರ್ಥಿಗಳಿಗೆ ಕನ್ನಡ ಸಾಂಸ್ಕೃತಿಕ ಕಾರ್ಯಕ್ರಮಗಳಲ್ಲಿ ಪಾಲ್ಗೊಳ್ಳುವುದಕ್ಕೆ ಇದೊಂದು ಅಪೂರ್ವ ಅವಕಾಶವಾಗಿತ್ತು ಎನ್ನುವುದು ಕಾಲೇಜಿನ ಪ್ರಾಕ್ತನ ವಿದ್ಯಾರ್ಥಿಗಳ ಹೇಳಿಕೆಯಾಗಿರುತ್ತದೆ. ವೈದ್ಯ ವಿದ್ಯಾರ್ಥಿಗಳು ಹೊರರೋಗಿಗಳ ತಪಾಸಣೆ ನಡೆಸಬೇಕಾದ ಅನಿವಾರ್ಯತೆ ಇರುವ ಕಾರಣ ಸ್ಥಳೀಯ ಭಾಷೆಯನ್ನು ಕಲಿಯುವ ಅವಶ್ಯಕತೆ ಇದ್ದು, ಈ ಕುರಿತಂತೆ ಕಾಲೇಜು ಕನ್ನಡ ಭಾಷಾ ಕಮ್ಮಟವನ್ನಾಗಲೀ, ದೇಹದ ಅಂಗಾಂಗಗಳಿಗೆ ಸಂಬಂಧಿಸಿದ, ಕಾಯಿಲೆಗೆ ಸಂಬಂಧಿಸಿದ ಸಮಾನಾರ್ಥಕ ಶಬ್ದಗಳ ಬಗೆಗೆ ಯಾವುದೇ ಚರ್ಚೆಗಳು ನಡೆದಿರುವ ಉಲ್ಲೇಖಗಳಿಲ್ಲ ಎನ್ನುವುದನ್ನು ಅಧ್ಯಯನದಲ್ಲಿ ಕಂಡುಕೊಳ್ಳಲಾಗಿದೆ. ತಾಂತ್ರಿಕ ಶಿಕ್ಷಣ ಕಾಲೇಜಿನಲ್ಲಿ ಕನ್ನಡ ಸಾಹಿತ್ಯದ ಕುರಿತಂತೆ ಬಹಳಷ್ಟು ಉತ್ಸಾಹಿ

ಉಪನ್ಯಾಸಕರು ಮತ್ತು ವಿದ್ಯಾರ್ಥಿಗಳು ಕನ್ನಡ ಸಾಹಿತ್ಯದ ಕುರಿತು ಆಸಕ್ತರಾಗಿದ್ದರೂ ಕಾಲೇಜಿನ ವತಿಯಿಂದ ಯಾವುದೇ ವ್ಯವಸ್ಥಿತ ಸಾಹಿತ್ಯ ಚಟುವಟಿಕೆಗಳು ನಡೆದುಬಂದಿಲ್ಲ ಎನ್ನುವುದನ್ನು ಕಂಡುಕೊಳ್ಳಲಾಗಿದೆ. ಕಾಲೇಜು ಆಡಳಿತವು ಕನ್ನಡ ಭಾಷಾ-ಸಾಹಿತ್ಯ ವಿಚಾರದಲ್ಲಿ ಆಸಕ್ತಿ ವಹಿಸದಾಗ, ಉಪನ್ಯಾಸಕರು ಕನ್ನಡ ಸಾಹಿತ್ಯ ಚಟುವಟಿಕೆಗಳನ್ನು ನಿರ್ವಹಿಸಿಕೊಂಡು ಬರುವುದಕ್ಕೆ ಸಾಧ್ಯವಿಲ್ಲ.

ಜಿಲ್ಲೆಯ ಇನ್ನೊಂದು ವೈದ್ಯಕೀಯ ಕಾಲೇಜು ಉಡುಪಿ ಆಯುರ್ವೇದ ಕಾಲೇಜೆಂಬ ಖಾಸಗಿ ಆಡಳಿತಕ್ಕೊಳಪಟ್ಟ ಕಾಲೇಜಾಗಿರುತ್ತದೆ. ಅವಿಭಜಿತ ದ.ಕ. ಜಿಲ್ಲೆಯ ವಿದ್ಯಾರ್ಥಿಗಳೇ ಪ್ರವೇಶ ಪಡೆದುಕೊಳ್ಳುತ್ತಿದ್ದ (20ನೇ ಶತಮಾನದಲ್ಲಿ) ಈ ಕಾಲೇಜಿನ ವಿದ್ಯಾರ್ಥಿಗಳು ಸಂಸ್ಕೃತಭಾಷೆಯನ್ನು ಒಂದು ವಿಷಯವಾಗಿ ಓದಬೇಕಾಗಿತ್ತು ಎಂಬ ವಿಚಾರ ಕಾಲೇಜಿನ ವಾರ್ಷಿಕ ಸಂಚಿಕೆಯಿಂದ ತಿಳಿದುಬರುತ್ತದೆ. ಕನ್ನಡ ಸಾಹಿತ್ಯಚಟುವಟಿಕೆಗಳಲ್ಲಿ ವಿದ್ಯಾರ್ಥಿಗಳು ವಿಶೇಷ ಆಸಕ್ತಿಯನ್ನು ಹೊಂದಿದ್ದು, ಪರಿಸರದ ಸಾಹಿತ್ಯಚಟುವಟಿಕೆಗಳಲ್ಲಿ ಮತ್ತು ಸಾಂಸ್ಕೃತಿಕ ಚಟುವಟಿಕೆಗಳಲ್ಲಿ ಭಾಗವಹಿಸುತ್ತಿದ್ದ ಬಗ್ಗೆ ಉಲ್ಲೇಖಗಳು ಸಿಕ್ಕಿವೆ. ದೇಸೀಯ ಔಷಧಪದ್ಧತಿ ಅಥವಾ ನಾಟಿ ಔಷಧ ಕ್ರಮ, ಜನಪದ ಸಾಹಿತ್ಯದಲ್ಲಿ ಬರುವ ಗಿಡಮೂಲಿಕೆ, ಔಷಧ ವಿಧಾನ, ಎಂಬೀ ವಿಚಾರಗಳ ಕುರಿತಾಗಿಯೂ ಜನಪದ ಕಥೆಯಲ್ಲಿ ಬರುವ ಔಷಧ ಉಲ್ಲೇಖಗಳ ಕುರಿತಾಗಿಯೂ ವೈದ್ಯ ವಿದ್ಯಾರ್ಥಿಗಳಿಗೆ ವಿವಿಧ ಕಾರ್ಯಾಗಾರ, ಕಮ್ಮಟ, ಗೋಷ್ಠಿಯ ಮೂಲಕ ಮಾಹಿತಿ ಮತ್ತು ತರಬೇತಿ ನೀಡುವ ಅವಕಾಶಗಳು ಸಾಕಷ್ಟು ಇದ್ದಾಗ್ಯೂ ಈ ಕಾಲೇಜಿನಲ್ಲಿ ಅಂತಹ ಚಟುವಟಿಕೆಗಳಿಗೆ ಅವಕಾಶ ನೀಡಿಲ್ಲ ಎನ್ನುವುದನ್ನು ಕಾಲೇಜಿನ ಸಾಹಿತ್ಯಚಟುವಟಿಕೆಗಳ ಅಧ್ಯಯನದ ಸಂದರ್ಭದಲ್ಲಿ ಕಂಡುಕೊಳ್ಳಲಾಗಿದೆ.

ವೃತ್ತಿಪರ ಶಿಕ್ಷಣ ಕಾಲೇಜಿನಲ್ಲಿ ಉಡುಪಿ ಜಿಲ್ಲೆಯ ಅತಿಮುಖ್ಯ ಕಾಲೇಜೆಂದು ಗುರುತಿಸಿಕೊಂಡ ಕಾನೂನು ಕಾಲೇಜು 20ನೇ ಶತಮಾನದ ಉತ್ತರಾರ್ಧದಲ್ಲಿ ಅಸ್ತಿತ್ವಕ್ಕೆ ಬಂದಿರುತ್ತದೆ. ಕನ್ನಡ ಭಾಷೆ-ಸಾಹಿತ್ಯದ ಅಧ್ಯಯನ ಈ ಕಾಲೇಜಿನಲ್ಲಿ ಪಠ್ಯವಿಷಯವಾಗಿ ಅಧ್ಯಯನ ಮಾಡುವ ಅವಕಾಶ ಇರುವುದಿಲ್ಲ ಎನ್ನುವುದು ಈ ವ್ಯಾಸಂಗದ ಶೈಕ್ಷಣಿಕ ಪಠ್ಯದ ಒಂದು ಕೊರತೆಯೂ ಹೌದು. ಸ್ಥಳೀಯ ನ್ಯಾಯಾಲಯದಲ್ಲಿ ಕನ್ನಡ ಭಾಷೆಯಲ್ಲಿ ನ್ಯಾಯವಾದಿಗಳು ವಾದ-ವಿವಾದ ನಡೆಸುವ-ಕಕ್ಷಿಗಾರರನ್ನು ವಿಚಾರಿಸುವ, ಸಾಕ್ಷಿ ತೆಗೆದುಕೊಳ್ಳುವ ಸಂದರ್ಭದಲ್ಲಿ ಕನ್ನಡ ಭಾಷೆಯ ವ್ಯವಹಾರವು ನ್ಯಾಯಾಲಯದಲ್ಲಿ ಚಾಲ್ತಿಯಲ್ಲಿರುವುದು ಕಂಡುಬರುತ್ತದೆ. ಕನ್ನಡ ಭಾಷೆಯಲ್ಲಿರುವ ದಾಖಲೆಗಳನ್ನು ನ್ಯಾಯವಾದಿಗಳು ಅಪೂರ್ವ ದಾಖಲೆಗಳಾಗಿ ಅದೆಷ್ಟೋ ಸಂದರ್ಭದಲ್ಲಿ ತಮ್ಮ ನ್ಯಾಯಪರತೆಯನ್ನು ಎತ್ತಿಹಿಡಿಯುವ ಸಂದರ್ಭದಲ್ಲಿ ನ್ಯಾಯಾಲಯಕ್ಕೆ ಹಾಜರುಪಡಿಸುವ ಸಂದರ್ಭಗಳೂ ಇವೆ. ಆದರೆ ನ್ಯಾಯವಾದಿಗಳು ತಮ್ಮ ಕಾನೂನು ಕಾಲೇಜಿನ ವ್ಯಾಸಂಗದ ಸಂದರ್ಭದಲ್ಲಿ ಕನ್ನಡ ಭಾಷಾ ತಿಳುವಳಿಕೆಗಾಗಿ ಕನ್ನಡ ಭಾಷಾಬೋಧನೆಯ ಅವಕಾಶದಿಂದ ವಂಚಿತರಾಗಿರುವುದನ್ನು ಈ ಅಧ್ಯಯನದಲ್ಲಿ ಕಂಡುಕೊಳ್ಳಲಾಗಿದೆ. ಕನ್ನಡ ಭಾಷಾಬೋಧನೆಯ ಅವಶ್ಯಕತೆ ಅತ್ಯವಶ್ಯಕವಾಗಿ ಇದ್ದೂ ಕೂಡ ಕಾನೂನು ಕಾಲೇಜಿನಲ್ಲಿ ಈ ತನಕ ಕನ್ನಡಪಠ್ಯಗಳ ಬೋಧನೆಗೆ ಅವಕಾಶ ಕಲ್ಪಿಸದಿರುವುದು ಪಠ್ಯವ್ಯವಸ್ಥೆಯ ಬಹುದೊಡ್ಡ ಕೊರತೆ ಮತ್ತು ದೋಷ ಎನ್ನುವುದನ್ನು ಈ ಅಧ್ಯಯನದಲ್ಲಿ ಕಂಡುಕೊಳ್ಳಲಾಗಿದೆ. ನ್ಯಾಯವಾದಿಯಾಗಿ ವೃತ್ತಿಜೀವನಕ್ಕೆ ಕಾಲಿಟ್ಟ ಓರ್ವ ವಿದ್ಯಾರ್ಥಿಯು ಕಕ್ಷಿದಾರನ ಮೂಲಕ ವಿವಿಧ ಬಗೆಯ ಜೀವನಾನುಭವಗಳ ಕುರಿತಂತೆ ಮಾಹಿತಿ ಪಡೆಯುತ್ತಾನೆ. ಕನ್ನಡ ಭಾಷೆಯಲ್ಲಿ ಸ್ವಲ್ಪ ಮಟ್ಟಿನ ಹಿಡಿತವಿದ್ದಲ್ಲಿ ಈ

ಅನುಭವವನ್ನೇ ಕಥೆ, ಕವನ, ನಾಟಕ ಮುಂತಾದ ಪ್ರಕಾರಗಳಲ್ಲಿ ಪ್ರಕಟಿಸುವುದಕ್ಕೆ ಸಾಧ್ಯವಿರುತ್ತಿತ್ತು ಎನ್ನುವುದು ಹಿರಿಯ ನ್ಯಾಯವಾದಿ ಮಾಧವ ಆಚಾರ್ಯರ ಅಭಿಪ್ರಾಯವಾಗಿದೆ. ಆದರೆ ಕಾನೂನು ಕಾಲೇಜಿನಲ್ಲಿ ವೃತ್ತಿ ತಾಂತ್ರಿಕತೆಗೇ ಒತ್ತು ನೀಡುತ್ತಾರೆ ಹೊರತು, ಭಾಷಾಕೌಶಲಕ್ಕೆ ಪ್ರಾಮುಖ್ಯ ನೀಡುತ್ತಿಲ್ಲ. ಇದರಿಂದಾಗಿ ಕಾನೂನು ಶಿಕ್ಷಣದ ಸಂದರ್ಭದಲ್ಲಿ ವಿದ್ಯಾರ್ಥಿಗಳು ಆಂಗ್ಲಭಾಷೆಯಲ್ಲೇ ತಮ್ಮ ಪ್ರಾವೀಣ್ಯ ಮತ್ತು ನೈಪುಣ್ಯ ಸಾಧಿಸಬಯಸುತ್ತಾರೆನ್ನುವುದು ವಾಸ್ತವ ವಿಚಾರವಾಗಿದೆ. ಇಷ್ಟಾಗಿಯೂ ಪದವಿ ಶಿಕ್ಷಣದ ವರೆಗಿನ ಮತ್ತು ಇನ್ನು ಕೆಲವರು ಪದವಿಪೂರ್ವ ಶಿಕ್ಷಣದ ಹಂತದಲ್ಲಿ ಭಾಷಾಉಪನ್ಯಾಸಕರ ಮೂಲಕ ದೊರೆತ ಮಾರ್ಗದರ್ಶನದಿಂದ ಕನ್ನಡ ಸಾಹಿತ್ಯದಲ್ಲಿ ಒಂದಷ್ಟು ಚಟುವಟಿಕೆಗಳನ್ನು ನಿರ್ವಹಿಸಿಕೊಂಡು ಬರುವುದು ಕಂಡುಬರುತ್ತದೆ.

**1980–2000ರ ಅವಧಿಯಲ್ಲಿ ಉಡುಪಿ ಜಿಲ್ಲಾ ವ್ಯಾಪ್ತಿಯಲ್ಲಿ ಅಸ್ತಿತ್ವಕ್ಕೆ ಬಂದ ಸರಕಾರಿ ಪ್ರಥಮದರ್ಜೆ ಕಾಲೇಜುಗಳ ಸಾಹಿತ್ಯ ಚಟುವಟಿಕೆಗಳ ವಿವರಗಗಳು:**

**ಕಾಲೇಜುಗಳ ಹಿನ್ನೆಲೆ:** ಉಡುಪಿ ಜಿಲ್ಲಾ ವ್ಯಾಪ್ತಿಯೊಳಗೆ 1980 ರಿಂದ 2000 ಇಸವಿಯ ನಡುವಿನ ಅವಧಿಯೊಳಗೆ ಏಳು ಕಾಲೇಜುಗಳು ಕರ್ನಾಟಕ ಸರಕಾರದ ವತಿಯಿಂದ ಸ್ಥಾಪನೆಗೊಂಡುವು. 20ನೇ ಶತಮಾನದ ಎರಡನೇ ಕಾಲಘಟ್ಟದಲ್ಲಿ ಅಸ್ತಿತ್ವಕ್ಕೆ ಬಂದ ಖಾಸಗಿ ಕಾಲೇಜುಗಳು ಅನುದಾನರಹಿತ ನೆಲೆಯಲ್ಲಿ ಸ್ಥಾಪಿಸಲ್ಪಟ್ಟು ಈ ಖಾಸಗಿ ಆಡಳಿತ ಸಂಸ್ಥೆಗಳು ವಿದ್ಯಾರ್ಥಿಗಳಿಗೆ ದುಬಾರಿ ಪ್ರವೇಶಶುಲ್ಕವನ್ನು ನಿಗದಿಗೊಳಿಸಿದ ಕಾರಣ, ಕೆಳಮಧ್ಯಮವರ್ಗದ ವಿದ್ಯಾರ್ಥಿಗಳಿಗೆ ಕಾಲೇಜು ಪ್ರವೇಶ (ಉನ್ನತ ಶಿಕ್ಷಣ)ವು ಕಷ್ಟಸಾಧ್ಯವಾಯಿತು. ಈ ವಿಚಾರವನ್ನು ಮನಗಂಡ ಸರಕಾರವು ಸುಲಭ ಪ್ರವೇಶಶುಲ್ಕದಲ್ಲಿ ಉನ್ನತ ಶಿಕ್ಷಣವನ್ನು ನೀಡುವ ಗುರಿಯೊಂದಿಗೆ ಜಿಲ್ಲೆಯ ವಿವಿಧೆಡೆಗಳಲ್ಲಿ ಕಾಲೇಜನ್ನು ಸ್ಥಾಪಿಸಿತು. ಆ ಕಾಲೇಜಿನ ಹೆಸರುಗಳುಗಳು ಹೀಗಿವೆ: **1) ಸರಕಾರಿ ಪ್ರಥಮದರ್ಜೆ ಕಾಲೇಜು, ಹೆಬ್ರಿ (1981) 2) ಸ.ಪ್ರ.ದ.ಕಾ. ಬೈಂದೂರು (1983) 3) ಸ.ಪ್ರ.ದ.ಕಾ. ಶಂಕರನಾರಾಯಣ (1991) 4) ಮಂಜುನಾಥ ಪೈ ಸ.ಪ್ರ.ದ.ಕಾ. ಕಾರ್ಕಳ (1991) 5) ಸ.ಪ್ರ.ದ.ಕಾ. ಕಾಪು (1992) 6) ಸ.ಪ್ರ.ದ.ಕಾ. ಉಡುಪಿ (1993) 7) ಸ.ಪ್ರ.ದ.ಕಾ. ಬಾರಕೂರು (1998).**

**ಸರಕಾರಿ ಪ್ರಥಮದರ್ಜೆ ಕಾಲೇಜುಗಳ ಸಾಹಿತ್ಯ ಚಟುವಟಿಕೆಗಳು:**

ಸರಕಾರವು ಕಾಲೇಜನ್ನು ಸ್ಥಾಪಿಸಿಯೂ ಕಾಲೇಜಿಗೆ ಅವಶ್ಯವಾಗಿ ಬೇಕಾದ ಅಗತ್ಯ ಮೂಲಸೌಕರ್ಯಗಳನ್ನು ನೀಡದೇ ಹೋದುದರಿಂದ ಗ್ರಾಮೀಣ ಪ್ರದೇಶದ ಪ್ರತಿಭಾವಂತ ವಿದ್ಯಾರ್ಥಿಗಳಿಗೆ ನಗರ ಪ್ರದೇಶದ ಖಾಸಗಿ ಕಾಲೇಜುಗಳಲ್ಲಿ ಸಿಗುವ ಪಠ್ಯೇತರ ಚಟುವಟಿಕೆಗಳ ವಿಪುಲ ಅವಕಾಶಗಳು ಲಭಿಸದೇ ಹೋದವು. ಮಿತವಾದ ಸಂಪನ್ಮೂಲ ಮತ್ತು ಮತ್ತಿತರ ಅನೇಕ ಮೂಲಭೂತ ಸೌಕರ್ಯಗಳ ಕೊರತೆಯ ನಡುವೆಯೂ ಉಡುಪಿ ಜಿಲ್ಲೆಯ ಎರಡು ಕಾಲೇಜುಗಳು ಖಾಸಗಿ ಕಾಲೇಜುಗಳ ಮಟ್ಟದಲ್ಲಿ ಸಾಹಿತ್ಯ ಚಟುವಟಿಕೆಗಳನ್ನು ನಿರ್ವಹಿಸಿಕೊಂಡು ಬಂದಿವೆ ಎನ್ನುವುದು ಉಲ್ಲೇಖಿಸಬೇಕಾದ ಅಂಶ. ಹೀಗೆ ಸಾಹಿತ್ಯ ಚಟುವಟಿಕೆಗಳನ್ನು ನಿರ್ವಹಿಸಲು ಮುಖ್ಯ ಕಾರಣ ಭಾಷಾ ಉಪನ್ಯಾಸಕರೇ ಪ್ರಾಂಶುಪಾಲರಾಗಿ ಜವಾಬ್ದಾರಿ ನಿರ್ವಹಿಸಿದ್ದಾಗಿದೆ. ಅವರು ವಿದ್ಯಾರ್ಥಿಗಳನ್ನು ಸಾಹಿತ್ಯಚಟುವಟಿಕೆಯತ್ತ ಪ್ರೇರೇಪಿಸಿ, ಲಿಖಿತಚಟುವಟಿಕೆ ಹಾಗೂ ಮೌಖಿಕಚಟುವಟಿಕೆಗಳಿಗೆ ಅವಕಾಶ

ನೀಡಿದರು. ಮಂಜುನಾಥ ಪೈ ಸರಕಾರಿ ಪ್ರಥಮದರ್ಜೆ ಕಾಲೇಜು ಕಾರ್ಕಳ ಹಾಗೂ ಸರಕಾರಿ ಪ್ರಥಮದರ್ಜೆ ಕಾಲೇಜು ಉಡುಪಿ ಎಂಬ ಈ ಎರಡು ಕಾಲೇಜುಗಳು ಹಾಗೆ ಉಲ್ಲೇಖಿಸಬೇಕಾದವಾಗಿವೆ.

**1. ಮಂಜುನಾಥ ಪೈ ಸರಕಾರಿ ಪ್ರಥಮದರ್ಜೆ ಕಾಲೇಜು, ಕಾರ್ಕಳ:** 1991ರಲ್ಲಿ ಆರಂಭಗೊಂಡ ಈ ಕಾಲೇಜಿನಲ್ಲಿ ವರ್ಷಂಪ್ರತಿ ಕಾಲೇಜು ಸಂಚಿಕೆಯನ್ನು ಹೊರತರಲಿಲ್ಲವಾದರೂ 1991-96ರ ತನಕ 5 ವರ್ಷ ಅವಧಿಯಲ್ಲಿ ವಿದ್ಯಾರ್ಥಿಗಳು ಸ್ವಂತವಾಗಿ ರಚಿಸಿದ ಸಾಹಿತ್ಯ ಬರಹಗಳನ್ನು 1995-96ನೇ ಸಾಲಿನ ವಾರ್ಷಿಕ ಸಂಚಿಕೆಯಾಗಿ ಪ್ರಕಟಿಸಲಾಗಿದೆ. ಶ್ರೀ ಎಸ್. ಕೇಶವನ್ ಪೋತಿ ಅವರು ಪ್ರಾಂಶುಪಾಲರಾಗಿ ಕಾಲೇಜಿನ ಸಂಚಿಕೆಯ ಜವಾಬ್ದಾರಿಯನ್ನು ಯಶಸ್ವಿಯಾಗಿ ನಿಭಾಯಿಸಿರುವುದು ಸಂಚಿಕೆಯ ಅವಲೋಕನದಿಂದ ತಿಳಿದುಕೊಳ್ಳಬಹುದಾಗಿದೆ. ವರ್ಷಂಪ್ರತಿಯಾಗಿ ಸಂಪ್ರದಾಯದಂತೆ ನಡೆಯುವ ಯಾವುದೇ ಸಾಹಿತ್ಯ ಚಟುವಟಿಕೆಗಳನ್ನು ಕಾಲೇಜು ನಡೆಸಿಕೊಂಡು ಬಂದ ದಾಖಲೆಗಳಿರುವುದಿಲ್ಲ. ಆದರೆ ಸಂಚಿಕೆಗಾಗಿ ವಿದ್ಯಾರ್ಥಿಗಳು ರಚಿಸಿದ ಕವನಗಳು ಬಹುತೇಕ ಕಾವ್ಯಾತ್ಮಕವಾಗಿಯೂ, ಕಲಾತ್ಮಕವಾಗಿಯೂ ಸೃಜಿಸಲ್ಪಟ್ಟ ರಚನೆಗಳೆನ್ನುವುದಕ್ಕೆ ಈ ಕೆಳಗಿನ ಕೆಲವು ಕವನಗಳನ್ನು ಉದಾಹರಣೆಗಾಗಿ ಉಲ್ಲೇಖಿಸಬಹುದಾಗಿದೆ.

'ಬಹುರೂಪಿ ನೆನಪು' ಎಂಬ ಹೆಸರಿನ ಕವನವು ದ್ವಿತೀಯ ಬಿ.ಬಿ.ಎಂ. ವಿದ್ಯಾರ್ಥಿಯ ರಚನೆಯಾಗಿದ್ದು, ಕಹಿ ನೆನಪುಗಳು ಕವಿ ಹೃದಯವನ್ನು ಇರಿಯುವ ಬಗೆಯನ್ನು ಹೀಗೆ ಚಿತ್ರಿಸುತ್ತಾನೆ.

'ನೆನಪೇ। ನೀನು ಮುಳ್ಳಲ್ಲ । ಆದರೂ ಎದೆಯ ಚುಚ್ಚುತ್ತೀ....। ........ ।

ನೆನಪೇ ನಿನಗೆ ಹೃದಯವಿಲ್ಲ । ಆದರೂ ಎದೆಯೊಳಗೆ ಸದಾ ಅಡಗಿರುತ್ತೀ......।'(ಸಂ: ಕೇಶವನ್ ಪೋತಿ ಎಸ್. ಪ್ರೊ. 1992-93, ಪು-12) ಎಂದು ನಿರೂಪಿಸಿದ್ದಾನೆ.

1995-96ನೇ ಸಾಲಿನ ಶೈಕ್ಷಣಿಕ ವರ್ಷದ ವಿದ್ಯಾರ್ಥಿ ದಿನೇಶ್ ದೇವಾಡಿಗ ಅವರ 'ನೀರಿಗಾಗಿ ಪಯಣ' ಎಂಬ ಕವನದಲ್ಲಿ ಭೂಮಿ ಮತ್ತು ಹೆಣ್ಣನ್ನು ಅಭೇದವಾಗಿ ಚಿತ್ರಿಸಿ ಹೆಣ್ಣಿನ (ಭೂಮಿಯ) ನೀರಿನ ಬಯಕೆಯನ್ನು ಹೀಗೆ ಚಿತ್ರಿಸಿದ್ದಾನೆ:-

'ಬಿಸಿಲ ಬೇಗೆಗೆ ಒಣಗಿ ಭೂಮಿ । ಬಿರುಕು ಬಿಟ್ಟು ನೀರು ಹೀರಿ,

ದುಃಖಿತಪ್ತ ಭೂಮಿ ತಾಯಿ । ಅಳುತಲಿಹಳು ಕಣ್ಣೀರು ಹರಿಸಿ'(ಸಂ: ಕೇಶವನ್ ಪೋತಿ ಕೆ. ಪ್ರೊ., 1995-96, ಪು-52)

ನೀರಿನ ಪಸೆ ಆರಿದ ಭೂತಾಯಿಯ ಮೈ ಪಸೆ ಆರಿದೆ-ಹಾಗಾಗಿ ದೇಹ ಸೊರಗಿ ಬಿರುಕು ಬಿಟ್ಟಿದೆ. ಇದಕ್ಕಾಗಿಯೇ ಕಣ್ಣೀರು ಹರಿಸುತ್ತಿದ್ದಾಳೆ ಎಂಬ ಚಿತ್ರಣ ಕವನದಲ್ಲಿದೆ.

1998-99ನೇ ಸಾಲಿನ ಸಂಚಿಕೆಯಲ್ಲಿ 'ಪರಿವರ್ತನೆ' ಎಂಬ ಶೀರ್ಷಿಕೆಯಲ್ಲಿ ರಾಜೇಶ್ ಎಂಬ ಪ್ರಥಮ ಬಿ.ಬಿ.ಎಂ. ವಿದ್ಯಾರ್ಥಿಯೋರ್ವ ಪ್ರಬಂಧವನ್ನು ಸತ್ಯಕಥೆಯನ್ನಾಧರಿಸಿ ಬರೆದಿರುತ್ತಾನೆ. ಆದರೆ ಪ್ರಬಂಧಕ್ಕೆ ನಿರ್ದಿಷ್ಟ ತಂತ್ರವೊಂದು ಇಲ್ಲದ ಕಾರಣ ಘಟನೆಯು ಪ್ರಬಂಧವಾಗಿಯೇ ಉಳಿದು ಕಥೆಯಾಗಿ ಪರಿವರ್ತನೆಗೊಳ್ಳುವುದರಲ್ಲಿ ವಿಫಲವಾಗುತ್ತದೆ.

1999-2000ನೇ ಸಾಲಿನ ವಾರ್ಷಿಕ ಸಂಚಿಕೆಯಲ್ಲಿ 1998-99ನೇ ಶೈಕ್ಷಣಿಕ ಸಾಲಿನ ವರದಿ ಹಾಗೂ ವಾರ್ಷಿಕ ಚಟುವಟಿಕೆಗಳ ವಿವರಗಳನ್ನು ಸೇರಿಸಿ ಒಂದು ಸಂಚಿಕೆಯನ್ನಾಗಿ 3ನೇ ಸಂಪುಟವಾಗಿ ಹೊರತರಲಾಗಿದೆ. ವರ್ಷಂಪ್ರತಿ

ಸಂಚಿಕೆಯನ್ನು ಹೊರತರಲು ಆರ್ಥಿಕ ಸಂಪನ್ಮೂಲಗಳಿಲ್ಲದ ಕಾರಣ ಹೀಗೆ 2 ವರ್ಷದ ಶೈಕ್ಷಣಿಕ ಚಟುವಟಿಕೆಗಳನ್ನು ಒಂದೇ ಸಂಚಿಕೆಯಲ್ಲಿ ಹೊಂದಿಸಿರುವುದು ಕಂಡು ಬರುತ್ತದೆ. ಎರಡು ವರ್ಷದ ಅವಧಿಯಲ್ಲಿ ಸಾಹಿತ್ಯ ಚಟುವಟಿಕೆಯಾಗಿ ಯಾವುದೇ ಗೋಷ್ಠಿ, ಕಮ್ಮಟ-ಕಾರ್ಯಾಗಾರಗಳು ನಡೆದ ದಾಖಲೆಗಳು ಕಂಡುಬರುವುದಿಲ್ಲ. ಕೇವಲ ವಿದ್ಯಾರ್ಥಿ ವಿದ್ಯಾರ್ಥಿನಿಯರ ಸಣ್ಣಕಥೆ, ಕವನ, ಲಘುಪ್ರಬಂಧಗಳಷ್ಟೇ... ಸಂಚಿಕೆಯ ಸಾಹಿತ್ಯ ಹೂರಣವಾಗಿದೆ.

1999–2000ನೇ ಸಾಲಿನ ಸಂಚಿಕೆಯಲ್ಲಿ ಪ್ರಕಟವಾದ ದ್ವಿತೀಯ ಬಿ.ಬಿ.ಎಂ. ಪದವಿ ವಿದ್ಯಾರ್ಥಿ, ರಮ್ಯಾ ಆರ್. ಅವರ ಪ್ರಬಂಧ 'ಉನ್ನತ ಶಿಕ್ಷಣದಲ್ಲಿ ಮಾನವ ಹಕ್ಕುಗಳ ಪಾಲನೆ' ಎಂಬ ಲೇಖನವು ಸಂಚಿಕೆಯ ಮೌಲ್ಯವನ್ನು ಹೆಚ್ಚಿಸಿದೆ. 'ಉನ್ನತ ಶಿಕ್ಷಣದ ಅವಕಾಶವು ಸಾಮಾನ್ಯರ ಪಾಲಿಗೆ ಸುಲಭವಾಗಿ ಕೈಗೆಟುಕುವಲ್ಲಿ ಮಾನವ ಹಕ್ಕುಗಳ ಆಯೋಗದ ಜವಾಬ್ದಾರಿಯ ಸ್ವರೂಪವನ್ನು ವಿವರಿಸುತ್ತದೆ' ಎನ್ನುವುದೇ ಪ್ರಸ್ತುತ ಪ್ರಬಂಧದ ಉದ್ದೇಶವಾಗಿದೆ.

ಸರಕಾರಿ ಕಾಲೇಜುಗಳ ಗುಂಪಿನಲ್ಲಿ ಶೈಕ್ಷಣಿಕವಾಗಿ ತನ್ನ ಮೊದಲ ಸ್ಥಾನವನ್ನುಳಿಸಿಕೊಂಡ ಕಾರ್ಕಳದ ಮಂಜುನಾಥ ಪೈ ಸರಕಾರಿ ಪ್ರಥಮದರ್ಜೆ ಕಾಲೇಜಿನ ಎರಡು ಮೂರು ವರ್ಷದ ಸಾಧನೆಯನ್ನು ಒಂದು ಸಂಚಿಕೆಯಲ್ಲಿ ಕ್ರೋಢೀಕರಿಸುವ ಸಾಹಸಕ್ಕಾಗಿ ಸುದೀರ್ಘ ಒಂಬತ್ತು ವರ್ಷದ ಸಂಚಿಕೆಯ ಸಂಪಾದಕರಾದ (ಆಂಗ್ಲಭಾಷಾ ಉಪನ್ಯಾಸಕರಾದ) ಪ್ರೊ. ಕೇಶವನ್ ಪೋತಿಯವರ ಪ್ರಯತ್ನವನ್ನು ಗುರುತಿಸಲೇಬೇಕು.

**2. ಸರಕಾರಿ ಪ್ರಥಮದರ್ಜೆ ಕಾಲೇಜು ಉಡುಪಿ:**

1993–94ನೇ ಶೈಕ್ಷಣಿಕ ವರ್ಷದಲ್ಲಿ ಆರಂಭಗೊಂಡ ಈ ಕಾಲೇಜು, 1995–96ನೇ ಶೈಕ್ಷಣಿಕ ವರ್ಷದಲ್ಲಿ ತನ್ನ ಮೊದಲ ಸಂಚಿಕೆ ಪ್ರಕಟಿಸಿತು. "ಕಾಲೇಜಿನಲ್ಲಿ ಚಾಲ್ತಿಗೆ ತಂದ ಭಿತ್ತಿಪತ್ರಿಕೆಯಲ್ಲಿ ವಿದ್ಯಾರ್ಥಿ–ವಿದ್ಯಾರ್ಥಿನಿಯರ ಬರಹಗಳಿಗೆ ಅವಕಾಶ ದೊರೆತು, ನಮ್ಮ ಕಾಲೇಜಿನ ಯುವ ಬರಹಗಾರ-ಬರಹಗಾರ್ತಿಯರಿಗೆ ಬರವಣಿಗೆಯಲ್ಲಿ ಅಭ್ಯಾಸಕ್ಕನುಕೂಲವಾಗಿ ಅವರ ಬರಹಗಳ ಪರಿಚಯವು ಕಾಲೇಜಿನ ಎಲ್ಲರಿಗೆ ಆಗುವಂತಾಯಿತು."(ಸಂ: ಪಾದೇಕಲ್ಲು ವಿಷ್ಣು ಭಟ್ಟ, 1995–96, ಸಂಪಾದಕೀಯ) ಎಂಬ ಹೇಳಿಕೆಯು ಸಂಚಿಕೆಯ ಬರಹಗಳಿಗೆ ಭಿತ್ತಿಪತ್ರಿಕೆಯು ನೆಲೆಯೊನ್ನದಗಿಸಿದ ಮಾಹಿತಿ ದೊರೆಯುತ್ತದೆ. ಕಾಲೇಜಿನ ಪ್ರಾಂಶುಪಾಲರೂ, ಸಂಚಿಕೆಯ ಪ್ರಧಾನಸಂಪಾದಕರೂ, ಆಂಗ್ಲಭಾಷಾ ವಿದ್ವಾಂಸರೂ ಆಗಿದ್ದ ಪ್ರೊ. ಕೆ.ಸಿ. ಕೇಶವ ರಾವ್ ಅವರು Principal's Massage ಎಂಬ ಆಂಗ್ಲಭಾಷಾ ಲೇಖನವು ದೇವರು–ಧರ್ಮ–ನೈತಿಕತೆ–ಪ್ರಜಾಪ್ರಭುತ್ವ–ಮಾನವೀಯತೆ ಎಂಬ ವಿಚಾರಗಳ ಕುರಿತು ಸುದೀರ್ಘ ಪ್ರಬಂಧವಾಗಿ ಪ್ರಕಟಗೊಂಡಿದೆ.

ಕಾಲೇಜಿನ ಪ್ರಥಮ ಸಂಚಿಕೆಯಲ್ಲಿ ಮುದ್ರಣವಾದ ವಾರ್ಷಿಕ ವರದಿಯಲ್ಲಿ ಕಾಲೇಜಿನ ಉಪನ್ಯಾಸಕರ ಮಾಹಿತಿ, ವಿದ್ಯಾರ್ಥಿಗಳ ಸಂಖ್ಯೆ, ಎನ್.ಎಸ್.ಎಸ್. ಚಟುವಟಿಕೆಯ ವರದಿ, ಶೈಕ್ಷಣಿಕ ಪ್ರವಾಸದ ವಿವರಗಳಿದ್ದು, ಸಂಚಿಕೆಯು ಕೇವಲ ಸಾಹಿತ್ಯ ಕಾರ್ಯಕ್ರಮಗಳ ವಿವರಗಳನ್ನಷ್ಟೇ ಹೊಂದಿರುವುದಿಲ್ಲ ಎನ್ನುವುದು ಗಮನಿಸಬೇಕಾದ ವಿಚಾರವೇ ಆಗಿದೆ. ಎರಡು ವರ್ಷ ಕಾಲೇಜಿನ ಪ್ರಾಂಶುಪಾಲರಾಗಿ ಕರ್ತವ್ಯ ನಿರ್ವಹಿಸಿದ ಸ್ಥಾಪಕ ಪ್ರಾಂಶುಪಾಲರಾಗಿದ್ದ ಪ್ರೊ. ವಿಷ್ಣು ಭಟ್ಟರು 'ನಡೆದು

ಬಂದ ದಾರಿ' ಎಂಬ ಶೀರ್ಷಿಕೆಯಲ್ಲಿ ಕಾಲೇಜು ನೆಲೆ ಕಂಡುಕೊಳ್ಳಲು ಪ್ರಾಂಶುಪಾಲರು ಮತ್ತು ಅಭಿವೃದ್ಧಿ ಸಮಿತಿ ಸದಸ್ಯರು ಪಟ್ಟ ಪಾಡೆಲ್ಲವನ್ನೂ ಸುದೀರ್ಘವಾಗಿ ನಿರೂಪಿಸಿದ್ದಾರೆ.

ಕನ್ನಡ ವಿಭಾಗದಲ್ಲಿ ತೃತೀಯ ಬಿ.ಕಾಂ. ವಿದ್ಯಾರ್ಥಿಯ ಲೇಖನ 'ಶಿಕ್ಷಣ ಏಕೆ'? ಸಮಸ್ಯೆಯನ್ನು ವಿಶ್ಲೇಷಿಸಿದ ರೀತಿ ಕೇವಲ ಸರಳಸಮಸ್ಯೆಯನ್ನು ಎತ್ತಿಹೇಳುವ ಪ್ರಯತ್ನವಾಗಿರದೆ ಸಮಸ್ಯೆಯ ಮೂಲವನ್ನು ಶೋಧಿಸಿ, ಅದಕ್ಕೆ ಕಂಡುಕೊಳ್ಳಬೇಕಾದ ಪರಿಹಾರಮಾರ್ಗಗಳ ದಾರಿಯ ಬಗೆಗೂ ವಿವಿಧ ಆಲೋಚನೆಗಳು ಲೇಖನದಲ್ಲಿ ಒಡಮೂಡಿರುವುದನ್ನು ಗಮನಿಸಬಹುದಾಗಿದೆ.'ಭಾರತೀಯರು ಪ್ರಜಾಸತ್ತೆಗೆ ಅರ್ಹರೇ'? ಎಂಬ ಲೇಖನವನ್ನು ದ್ವಿತೀಯ ಬಿ.ಎ. ತರಗತಿಯ ಭಾರತಿ ಎಂಬ ವಿದ್ಯಾರ್ಥಿನಿ ಮತದಾರರು ವಿದ್ಯಾವಂತರಾಗಿ ಜ್ಞಾನಿಗಳಾಗಿದ್ದಲ್ಲಿ ಪ್ರಜಾಪ್ರಭುತ್ವಕ್ಕೆ ಅರ್ಥ ಬರುತ್ತದೆ ಎನ್ನುವುದನ್ನು ಕಂಡುಕೊಂಡಿದ್ದಾಳೆ. (ಭಾರತೀಯರು ಪ್ರಜಾಸತ್ತೆಗೆ ಅರ್ಹರೇ-ಲೇ.ಶೀ. ಸಂಚಿಕೆ-1995-96 ಭಾರತಿ ದ್ವಿ.ಬಿ.ಎ. ಪುಟ-27) **'ವಿಜ್ಞಾನ ಮತ್ತು ಧರ್ಮ'**: ವಿಜ್ಞಾನವು ತರ್ಕದ ಮೇಲೆ ನಿಂತಿದ್ದು, ಜ್ಞಾನದ ಬೆಳಕಿನಲ್ಲಿ ಕಂಡುಕೊಂಡ ವಿಚಾರಗಳು ವಿಜ್ಞಾನದ ವಿಷಯಗಳಾಗಿರುತ್ತದೆ. ಇವು ಧರ್ಮಗ್ರಂಥದ ವಿಚಾರಗಳಿಗೆ ವಿರೋಧವಾಗುವ ಸಂದರ್ಭಗಳೂ ಎದುರಾಗುವುದುಂಟು. ಆದ್ದರಿಂದ ವಿಜ್ಞಾನದ ತತ್ವಗಳನ್ನು ಧರ್ಮದ ಲೇಪನದಿಂದ ಸ್ವೀಕರಿಸಬೇಕು, ಹಾಗಿದ್ದಲ್ಲಿ ಮಾತ್ರ ಮಾನವನ ಮೃಗೀಯ ಗುಣಗಳು ನಾಶವಾಗುತ್ತದೆ ಎನ್ನುವ ಸಂದೇಶವನ್ನು ಪ್ರಥಮ ಬಿ.ಕಾಂ. ತರಗತಿಯ ಕೃಷ್ಣಮೂರ್ತಿ ಎಂಬ ವಿದ್ಯಾರ್ಥಿಯು 'ವಿಜ್ಞಾನ ಮತ್ತು ಧರ್ಮ' ಎಂಬ ಶೀರ್ಷಿಕೆಯಲ್ಲಿ ಸಂಚಿಕೆಯಲ್ಲಿ ಅಭಿವ್ಯಂಜಿಸಿರುವುದನ್ನು ಗಮನಿಸಬಹುದಾಗಿದೆ.

ವಿದ್ಯಾರ್ಥಿಗಳು ಮಂಡಿಸುವ ವಿಷಯಗಳಲ್ಲಿ ಸ್ಪಷ್ಟತೆ, ಅನುಭವಕ್ಕೆ ಯುಕ್ತವಾದ ಭಾಷೆ, ಮಿತವಾದ ಪುಟಗಳ ಪರಿಮಿತಿಯಿದ್ದರೂ ವಿಶ್ವವಿದ್ಯಾನಿಲಯ ಮಟ್ಟದ ಸ್ಪರ್ಧೆಯಲ್ಲಿ ಈ ಸಂಚಿಕೆಯು ಸ್ಪರ್ಧಿಸಿ, ಎರಡನೇ ಬಹುಮಾನವನ್ನು ಪಡೆಯುವಲ್ಲಿ ಯಶಸ್ವಿಯಾಗಿದೆ. ವಿಶ್ವವಿದ್ಯಾನಿಲಯ ಮಟ್ಟದ ಸ್ಪರ್ಧೆಯಲ್ಲಿ ಇತಿಹಾಸವುಳ್ಳ ಅನೇಕ ಕಾಲೇಜುಗಳನ್ನು ಹಿಂದಕ್ಕೆ ತಳ್ಳಿ, ಹೊಸ ಸರಕಾರಿ ಕಾಲೇಜೊಂದು ಬಹುಮಾನ ಗಿಟ್ಟಿಸಿಕೊಳ್ಳುವ ಮೂಲಕ ಇತಿಹಾಸವನ್ನೇ ನಿರ್ಮಿಸಿದೆ.

ಇನ್ನುಳಿದ ಮೂರು ಸರಕಾರಿ ಕಾಲೇಜುಗಳಲ್ಲಿ ನಡೆದ ಸಾಹಿತ್ಯ ಚಟುವಟಿಕೆಯ ಕುರಿತಂತೆ ಯಾವುದೇ ಅಧಿಕೃತ ಸಂಚಿಕೆಗಳು ಲಭ್ಯವಾಗಿಲ್ಲ. ಆ ಕಾಲೇಜುಗಳಲ್ಲಿ ಕರ್ತವ್ಯ ನಿರ್ವಹಿಸಿದ ಭಾಷಾ ಉಪನ್ಯಾಸಕರು ಕಾಲೇಜು ಮಟ್ಟದಲ್ಲಿ ಮೌಖಿಕ ಸಾಹಿತ್ಯ ಚಟುವಟಿಕೆಗಳನ್ನು ನಡೆಸಿರುವ ಕುರಿತಂತೆ ಮಾಹಿತಿ ನೀಡುತ್ತಾರಾದರೂ ಈ ಮಾಹಿತಿಗೆ ಪೂರಕವಾದ ಆಧಾರಗಳಿರುವುದಿಲ್ಲ. ಸರಕಾರಿ ಪ್ರಥಮ ದರ್ಜೆ ಕಾಲೇಜು ಬೈಂದೂರು ಇಲ್ಲಿ ಕಾಲೇಜಿನ ಸ್ಥಾಪಕ ಪ್ರಾಂಶುಪಾಲರಾದ ರಘುರಾಮ ಶೆಟ್ಟಿಯವರು ಕಾಲೇಜು ವಾರ್ಷಿಕ ಸಂಚಿಕೆಯನ್ನು ಪ್ರಕಟಿಸುವ ಪರಂಪರೆಗೆ ನಾಂದಿ ಹಾಡಿದ ಕುರಿತು ಕಾಲೇಜಿನಲ್ಲಿ ಲಭ್ಯವಾದ ವಾರ್ಷಿಕ ಸಂಚಿಕೆಯೇ ಆಧಾರವಾಗಿದೆ. ಆದರೆ ಸಂಚಿಕೆಯ ಬರಹಗಳೆಲ್ಲವೂ ಕೇವಲ ಪ್ರೌಢಶಾಲಾ ವಿದ್ಯಾರ್ಥಿ ಮಟ್ಟದ ಸಾಮಾನ್ಯ ಲಲಿತ ಪ್ರಬಂಧಗಳೇ ಆಗಿವೆ ಎಂಬುದನ್ನು ಗುರುತಿಸಲಾಗಿದೆ. ಸರಕಾರಿ ಪ್ರಥಮದರ್ಜೆ ಕಾಲೇಜು ಶಂಕರನಾರಾಯಣ ಇಲ್ಲಿ ಮೌಖಿಕ ಸಾಹಿತ್ಯ ಚಟುವಟಿಕೆಗಳು ಸಾಕಷ್ಟು ನಡೆಯುತ್ತಿದ್ದರೂ ಸಂಪನ್ಮೂಲಗಳ ಕೊರತೆಯಿಂದ ಸಂಚಿಕೆಯನ್ನು ಪ್ರಕಟಿಸುವ ಪ್ರಯತ್ನಕ್ಕೆ ಕೈಹಾಕಿಲ್ಲ ಎನ್ನುವುದನ್ನು ಸ್ಥಾಪಕ ಪ್ರಾಂಶುಪಾಲರು ಹೇಳಿಕೊಂಡಿದ್ದಾರೆ. ಶತಮಾನದ

ಕೊನೆಯ (20ನೇ) ವರ್ಷ ಎಂದರೆ 1999-2000ದಲ್ಲಿ ಕನ್ನಡ ಉಪನ್ಯಾಸಕರಾಗಿದ್ದ ಡಾ. ಗಣನಾಥ ಎಕ್ಕಾರು ಅವರು ಸಂಚಿಕೆಯೊಂದನ್ನು ಪ್ರಕಟಿಸಿರುವುದಾಗಿ ಹೇಳಿಕೊಂಡರೂ ಕಾಲೇಜಿನಲ್ಲಿ ಆ ಸಂಚಿಕೆಯು ಲಭ್ಯವಾಗಿಲ್ಲ.

**ಸರಕಾರಿ ಕಾಲೇಜಿನ ಸಾಹಿತ್ಯಚಟುವಟಿಕೆಗಳ ಪರಿಣಾಮಗಳು:**

1980 ರಿಂದ ಕ್ರಿ.ಶ. 2000ದ ವರೆಗೆ ಅಸ್ತಿತ್ವಕ್ಕೆ ಬಂದ ಮೇಲ್ಕಂಡ ಕಾಲೇಜುಗಳಲ್ಲಿ ನಡೆದ ಸಾಹಿತ್ಯ ಚಟುವಟಿಕೆಗಳ ಪರಿಣಾಮಗಳು ತೀರಾ ಅತೃಪ್ತಿದಾಯಕ ಮತ್ತು ನಿರಾಶಾದಾಯಕಾಗಿರುತ್ತದೆ. ಅರ್ಥಾತ್ ಇಲ್ಲಿಯ ಸಾಹಿತ್ಯ ಚಟುವಟಿಕೆಗಳ ಪರಿಣಾಮ ಅಥವಾ ಪ್ರೇರಣೆಯಿಂದ ಸಾಹಿತ್ಯ ಜಗತ್ತನ್ನು ಪ್ರವೇಶಿಸಿದ ವಿದ್ಯಾರ್ಥಿ ವಿದ್ಯಾರ್ಥಿನಿಯರು ಯಾರು? ಎಂಬ ಪ್ರಶ್ನೆಗೆ ಉತ್ತರವೇ ಸಿಗುವುದಿಲ್ಲ. ಕಾರ್ಕಳದ ಮಂಜುನಾಥ ಪೈ ಪ್ರಥಮ ದರ್ಜೆ ಕಾಲೇಜಿನಲ್ಲಿ ಕಾಲೇಜು ಸಂಚಿಕೆಯ ಪ್ರಕಟನೆ ಹಾಗೂ ಸಾಹಿತ್ಯಚಟುವಟಿಕೆಗಳ ನಿರ್ವಹಣೆ ವ್ಯವಸ್ಥಿತವಾಗಿಯೂ, ಶಿಸ್ತುಬದ್ಧವಾಗಿಯೂ ನಡೆದಿರುವುದು ಅಲ್ಲಿನ ವಾರ್ಷಿಕ ಸಂಚಿಕೆಯಿಂದ ತಿಳಿದು ಬರುತ್ತದೆ. ಆದರೆ ಪದವಿ ವ್ಯಾಸಂಗದ ಅನಂತರ ಸಾಹಿತ್ಯಕ್ಷೇತ್ರಕ್ಕೆ ಪ್ರವೇಶಕೊಟ್ಟ ವಿದ್ಯಾರ್ಥಿಗಳ ಉದಾಹರಣೆಗಳು ಕಂಡುಬರುತ್ತಿಲ್ಲ. ಕಾಪು ಪ್ರಥಮದರ್ಜೆ ಕಾಲೇಜಿನ ಸ್ಥಿತಿಯೂ ಇದಕ್ಕಿಂತ ಭಿನ್ನವಾಗಿಲ್ಲ. ಉಡುಪಿ ಸರಕಾರಿ ಕಾಲೇಜಿನ ಇಬ್ಬರು ವಿದ್ಯಾರ್ಥಿಗಳು 'ಉಡುಪಿ ಮಿತ್ರ' 'ವಾರ್ತಾಭಾರತಿ' ಎಂಬ ಪತ್ರಿಕೆಯಲ್ಲಿ ಕಂಪ್ಯೂಟರ್ ವಿಭಾಗವನ್ನು ನೋಡಿಕೊಳ್ಳುತ್ತಿದ್ದಾರೆ ಹೊರತು ಯಾವುದೇ ಸೃಷ್ಟಿಶೀಲ ಚಟುವಟಿಕೆಗಳಲ್ಲಿ ತೊಡಗಿಕೊಂಡ ದಾಖಲೆಗಳಿಲ್ಲ. ಏನಿದ್ದರೂ ಆರ್ಥಿಕ ಸಂಪನ್ಮೂಲದ ಕೊರತೆ, ಸಮರ್ಪಣಾ ಮನೋಭಾವದ ಮತ್ತು ಸಾಹಿತ್ಯಾಸಕ್ತಿಯುಳ್ಳ ಪ್ರಾಂಶುಪಾಲರ ಹಾಗೂ ಉಪನ್ಯಾಸಕರ ಅಲಭ್ಯತೆ, ಸೂಕ್ತ ಸಭಾಭವನದ ಕೊರತೆಯಿಂದಾಗಿ ಸರಕಾರಿ ಕಾಲೇಜುಗಳು ಸಾಹಿತ್ಯ ಚಟುವಟಿಕೆಗಳಲ್ಲಿ ಹಿಂದುಳಿದಿವೆ ಎನ್ನುವುದು ವಾಸ್ತವ ವಿಚಾರವಾಗಿದೆ.

~*~

# ಅಧ್ಯಾಯ–4

# ಧಾರ್ಮಿಕಶ್ರದ್ಧಾಕೇಂದ್ರಗಳ (ಮಠ–ಮಂದಿರ–ದೇವಸ್ಥಾನ) ಸಾಹಿತ್ಯಚಟುವಟಿಕೆಗಳು

# ಅಧ್ಯಾಯ-4
# ಧಾರ್ಮಿಕಶ್ರದ್ಧಾಕೇಂದ್ರಗಳ (ಮಠ-ಮಂದಿರ-ದೇವಸ್ಥಾನ) ಸಾಹಿತ್ಯಚಟುವಟಿಕೆಗಳು

**ಪ್ರಸ್ತಾವನೆ:-**

"ಬಹುಮಂದಿಯ ದೈವಭಕ್ತಿ ಕೇವಲ ದೈವಭೀತಿ. ಎಷ್ಟೋ ಜನಕ್ಕೆ ದೇವಸ್ಥಾನ ಒಂದು ಅಂಗಡಿ; ಅಲ್ಲಿ ದೇವರೊಂದಿಗೆ ವ್ಯಾಪಾರ..... ಒಂದು ಮಹಾಸೌಂದರ್ಯವನ್ನು ನೋಡಿದಾಗ ನಮ್ಮ ಮನಸ್ಸು ಹೇಗೆ ಬೆರಗುಪಡುತ್ತದೆಯೋ ದೇವರನ್ನು ಧ್ಯಾನಿಸಿದಾಗ ನಮ್ಮ ಮನಸ್ಸು ಬೇರೆ ಯಾವುದನ್ನೂ ನೆನೆಯದೇ ಆನಂದವನ್ನನುಭವಿಸಿ, ಆ ನಿರ್ಮಲವಾದ ಆನಂದವಲ್ಲಿಯೇ ಕಲೆತು ಹೋದರೆ ಆ ಮನಸ್ಸಿನದು ನಿಜವಾದ ಭಕ್ತಿ. ಇಂಥ ಭಕ್ತಿ ಸುಲಭವಲ್ಲ. ಯಾರಿಗೂ ಎಲ್ಲಿಯೂ ಸುಲಭವಲ್ಲ ಅದು ಬಹಳ ದಿನಗಳ ಅಭ್ಯಾಸದಿಂದ ಬರತಕ್ಕದ್ದು. ಅದಕ್ಕೆ ಬೇಕಾದದ್ದು ನಿಜವಾದ ವೈರಾಗ್ಯ, ವಿವೇಕ ಮತ್ತು ಧರ್ಮಚರ್ಯೆ."(ಲೇ: ಡಿ.ವಿ.ಜಿ., 1967, ಪುಟ-59-62) ಧರ್ಮದ ಹೆಸರಿನಲ್ಲಿ ಚರಿತ್ರೆಯುದ್ದಕ್ಕೂ ಯುದ್ಧ, ಗಲಭೆ, ಘರ್ಷಣೆಗಳು ನಡೆಯುತ್ತಲೇ ಬಂದಿದೆ. ಭಾರತವೂ ಇದಕ್ಕೆ ಹೊರತಲ್ಲ. ದೇಶದುದ್ದಕ್ಕೂ ಧರ್ಮದ ಕುರಿತಂತೆ ಪರಸ್ಪರ ಸ್ಪರ್ಧೆ, ಧಾರ್ಮಿಕ ಅಸಹಿಷ್ಣುತೆಗಳು 20ನೇ ಶತಮಾನದ ಮೊದಲ ದಶಕದಿಂದಲೇ ನಿಧಾನವಾಗಿ ಚುರುಕುಗೊಳ್ಳುತ್ತಿರುವುದನ್ನು ಗಮನಿಸಿದ ಧರ್ಮಸ್ಥಳದ ಹಿಂದಿನ ಧರ್ಮಾಧಿಕಾರಿಗಳಾದ ಶ್ರೀ ಡಿ. ಮಂಜಯ್ಯ ಹೆಗ್ಗಡೆಯವರು 20ನೇ ಶತಮಾನದ ಮೂರನೇ ದಶಕದಲ್ಲಿ ಧಾರ್ಮಿಕ ಸಮ್ಮೇಳನವನ್ನು ಶ್ರೀಕ್ಷೇತ್ರದಲ್ಲಿ ಏರ್ಪಡಿಸುವ ಯೋಜನೆಗೆ ಮುಂದಾದರು. ವಿವಿಧ ಮತೀಯರಲ್ಲಿ ಪರಸ್ಪರ ಪ್ರೀತಿ, ವಿಶ್ವಾಸ, ನಂಬಿಕೆಗಳನ್ನು ಬೆಳೆಸುವ ಹೊಸ ಪರಂಪರೆಗೆ ಈ ಸಮ್ಮೇಳನದ ಮೂಲಕ ನಾಂದಿ ಹಾಡಿದರು. ಇದರಲ್ಲಿ ಯಶಸ್ಸನ್ನು ಕಂಡ ಮಂಜಯ್ಯ ಹೆಗ್ಗಡೆಯವರು ಮರುವರ್ಷವೇ ಸಾಹಿತ್ಯ ಸಮ್ಮೇಳನಕ್ಕೂ ವೇದಿಕೆ ನಿರ್ಮಿಸಿ, ಇನ್ನೊಂದು ಪರಂಪರೆಗೆ ಚಾಲನೆ ನೀಡಿದರು. ಅವಿಭಜಿತ ದ.ಕ. ಜಿಲ್ಲೆಯಲ್ಲಿ ಮಳೆಗಾಲದ ಎರಡು ತಿಂಗಳುಗಳ ಕಾಲ ಗಮಕ, ಪುರಾಣವಾಚನ-ಹರಿಕಥೆ ಎಂಬಿತ್ಯಾದಿ ಕಾರ್ಯಕ್ರಮಗಳು ಬಹಳ ಹಿಂದಿನಿಂದಲೂ ನಡೆದುಕೊಂಡು ಬರುತ್ತಿದ್ದರೂ ದೇವಸ್ಥಾನದ ಅಂಗಣದಲ್ಲಿ ವೇದಿಕೆ ನಿರ್ಮಿಸಿ, ಧಾರ್ಮಿಕ ಚಟುವಟಿಕೆಗಳಿಗೆ ಚಾಲನೆ ನೀಡಿದ ಮೊದಲ ಸಂಸ್ಥೆಯೇ ಶ್ರೀ ಧರ್ಮಸ್ಥಳದ ದೇಗುಲ ಎನ್ನುವುದು ಮೊದಲಾಗಿ ದಾಖಲಿಸಬೇಕಾದುದು ಇಲ್ಲಿ ಪ್ರಸ್ತುತವಾಗಿದೆ. (ಈ ಕುರಿತು ವಿವರಗಳನ್ನು ಪ್ರಕಾಶ ವಾರಪತ್ರಿಕೆ 13ನೇ ಸಂಪುಟದ 18.12.1956ರ 19ನೇ ಸಂಚಿಕೆಯಲ್ಲಿ ಪ್ರಕಟಗೊಂಡ 'ಶ್ರೀ ಧರ್ಮಸ್ಥಳ ಕ್ಷೇತ್ರದಲ್ಲಿ ಸರ್ವಧರ್ಮ ಸಮ್ಮೇಳನ' ಎಂಬ ಬೈಕಾಡಿ ವೆಂಕಟಕೃಷ್ಣರಾಯರ ಲೇಖನದಲ್ಲಿ ಗಮನಿಸಬಹುದಾಗಿದೆ).

ಬ್ರಿಟೀಷ್ ಆಡಳಿತದ ವಸಾಹತುಷಾಹಿ ವ್ಯವಸ್ಥೆಯು ಜಿಲ್ಲೆಯಲ್ಲಿ ಭದ್ರಗೊಳ್ಳುತ್ತಿದ್ದಂತೆಯೇ ದೇವಸ್ಥಾನದ ಜವಾಬ್ದಾರಿಯ ವ್ಯಾಪ್ತಿಯು ಸಂಕುಚಿತಗೊಳ್ಳುವುದಕ್ಕೆ ತೊಡಗಿತು. ನ್ಯಾಯತೀರ್ಮಾನ ಆಧುನಿಕ ನ್ಯಾಯಾಲಯಗಳಿಗೂ, ವಿದ್ಯಾಭ್ಯಾಸವು ಶಾಲೆಗಗಳಿಗೂ, ಸಾಂಸ್ಕೃತಿಕ ಕಾರ್ಯಕ್ರಮಗಳು ಶಾಲಾ ಆವರಣಕ್ಕೂ ವರ್ಗಾವಣೆಗೊಂಡಂತೆ ದೇವಸ್ಥಾನದ ಜವಾಬ್ದಾರಿಯು ಧಾರ್ಮಿಕ ವಿಧಿಗಳಿಗಷ್ಟೇ ಸೀಮಿತಗೊಂಡು, ಆರ್ಥಿಕ ಶಕ್ತಿಯು ಕುಂದಿತು. "ಬ್ರಿಟೀಷರು ಆಳುತ್ತಿದ್ದಾಗಲೇ

ಹಿಂದೂ ರಿಲೀಜಿಯಸ್ ಏಂಡ್ ಚಾರಿಟೇಬಲ್ ಎಂಡೋಮೆಂಟ್ ಆಕ್ಟ್ (HR & CE Act) ಹಂತಹಂತವಾಗಿ ಜಾರಿಗೆ ಬಂದಿದ್ದು, ಸರಕಾರದಿಂದ ತಸ್ತೀಕು ಸಿಗುತ್ತಿರುವ ಎಲ್ಲ ದೇವಸ್ಥಾನಗಳೂ ಸಹಜವಾಗಿಯೇ ಸರಕಾರದ ಅಧೀನವಾಗಿತ್ತು."(ಸಂ: ಅಡ್ಯನಡ್ಕ ಕೃಷ್ಣ ಭಟ್, 1975, ಪುಟ-177) ದೇವಸ್ಥಾನದ ಆರ್ಥಿಕಗಳಿಕೆಯ ಮೂಲಗಳು ಕಳೆದುಹೋಗುತ್ತಿದ್ದಂತೆ ದೇವಸ್ಥಾನದ ಪರಿಚಾರಕರಾದ ವಾಲಗದವರು, ದೇವದಾಸಿಯರು, ಮಾಲೆಯವರು, ಪಾಟಾಳಿಯವರು, ದೀವಟಿಕೆಯವರು, ಮಡಿವಾಳರು ದೇವಸ್ಥಾನದ ತಮ್ಮ ವಂಶಪಾರಂಪರ್ಯ ವೃತ್ತಿಗೆ ವಿದಾಯವನ್ನು ಹೇಳಿ, ಜೀವನಾವಲಂಬನೆಗಾಗಿ ಬೇರೆ ದಾರಿಯನ್ನು ಕಂಡುಕೊಂಡರು. ವಸಾಹತುಪೂರ್ವ ಕಾಲದಲ್ಲಿ ದೇವಸ್ಥಾನವು ಆರ್ಥಿಕವಾಗಿ ಸುಭದ್ರವಾಗಿದ್ದು, ಈ ಕುರಿತಂತೆ ಖ್ಯಾತ ಅರ್ಥಶಸ್ತ್ರಜ್ಞ ಎ. ಅಪ್ಪಾದೊರೈ ಅವರು ತಮ್ಮ Economic conditions in Southern India –I (Pp 274-301) ಕೃತಿಯಲ್ಲಿ ಉಲ್ಲೇಖಿಸಿರುವುದನ್ನು ಡಾ. ಚಿದಾನಂದಮೂರ್ತಿಯವರು ತಮ್ಮ ಸಂಶೋಧನ ಗ್ರಂಥದಲ್ಲಿ ಪ್ರಸ್ತಾಪಿಸಿದ್ದಾರೆ. (ಕನ್ನಡ ಶಾಸನಗಳ ಸಾಂಸ್ಕೃತಿಕ ಅಧ್ಯಯನ ಪುಟ-202-203)

**ದೇವಸ್ಥಾನಗಳು ಸಾಹಿತ್ಯಚಟುವಟಿಕೆಗಳಿಗೆ ಸ್ಪಂದಿಸಿದ ಬಗೆ:-** ದೇವಸ್ಥಾನದ ಇತಿಹಾಸ, ಕಟ್ಟಡದ ವಾಸ್ತುಶೈಲಿ, ಮೂರ್ತಿಶಿಲ್ಪದ ಕುರಿತಂತೆ ಜಿಲ್ಲೆಯ ಖ್ಯಾತ ಇತಿಹಾಸತಜ್ಞರಾಗಿದ್ದ ದಿ। ಪ್ರೊ. ಗುರುರಾಜ ಭಟ್ಟ ಅವರು ಆಳವಾದ ಅಧ್ಯಯನವನ್ನು ನಡೆಸಿರುತ್ತಾರೆ. ತುಳುನಾಡು ಅಥವಾ ಅವಿಭಜಿತ ದ.ಕ. ಜಿಲ್ಲೆಯ ಇತಿಹಾಸವನ್ನು ಅಭ್ಯಾಸಮಾಡುವ ವಿದ್ಯಾರ್ಥಿಗೆ ಅವರ Antiquities of South Kanara (1969) ಮತ್ತು Studies in Tuluva History and Culture (1975) ಕೃತಿಗಳೆರಡೂ ಅಮೂಲ್ಯ ಮಾರ್ಗದರ್ಶಕ ಗ್ರಂಥಗಳಾಗಿವೆ. ಅಂಬಲಪಾಡಿಯ ಇತಿಹಾಸ, ಮಂದರ್ತಿಯ ಸಮೀಕ್ಷೆ, ಉಡುಪಿಯ ಇತಿಹಾಸ, ತುಳುನಾಡಿನ ಸಪ್ತಕ್ಷೇತ್ರಗಳು- ಈ ಕೃತಿಗಳು ದೇವಸ್ಥಾನಗಳ ಕುರಿತಂತೆ ಅವರು ನಡೆಸಿದ ಅಧ್ಯಯನ ಕೃತಿಗಳಾಗಿವೆ. ದೇವಾಲಯಗಳ ಪ್ರಾಚೀನ ಇತಿಹಾಸದ ಕುರಿತಂತೆ ಸಾಕಷ್ಟು ಗ್ರಂಥಗಳು ಈಗಾಗಲೇ ಪ್ರಕಟಗೊಂಡಿದ್ದರೂ, 20ನೇ ಶತಮಾನದ ಕಾಲಾವಧಿಯಲ್ಲಿ ದೇವಸ್ಥಾನದ ಆಶ್ರಯದಲ್ಲಿ ನಡೆದ, ಸಾಹಿತ್ಯಚಟುವಟಿಕೆಗಳ ಕುರಿತಾಗಿ ಯಾವ ಅಧ್ಯಯನವೂ ಈತನಕ ನಡೆದಿಲ್ಲ. ಜಿಲ್ಲೆಯ ಕೆಲವು ದೇವಸ್ಥಾನಗಳ ಇತಿಹಾಸ ಮತ್ತು ಅವುಗಳ ಆಶ್ರಯದಲ್ಲಿ ನಡೆಯುವ ಸಂಕ್ಷಿಪ್ತ ಚಟುವಟಿಕೆಗಳ ಕುರಿತಂತೆ (ಸಾಹಿತ್ಯವೂ ಸೇರಿದಂತೆ) ಶಿಕ್ಷಣಸಂಸ್ಥೆಗಳ ವಾರ್ಷಿಕ ಸಂಚಿಕೆಗಳಲ್ಲಿ, ದಿನಪತ್ರಿಕೆಯ ವಿಶೇಷಸಂಚಿಕೆಗಳಲ್ಲಿ ಯುವಕಮಂಡಲದ ಸ್ಮರಣಸಂಚಿಕೆಗಳಲ್ಲಿ, ದೇಗುಲದ ಚಟುವಟಿಕೆಗಳ ಬಗೆಗೆ ಸಂಕ್ಷಿಪ್ತ ವರದಿರೂಪದ ದಾಖಲೆಗಳು ಲಭ್ಯವಾಗುತ್ತವೆ. ಇವುಗಳನ್ನು ಹೊರತುಪಡಿಸಿದರೆ ದೇವಸ್ಥಾನಗಳ ಸಾಹಿತ್ಯ ಚಟುವಟಿಕೆಯನ್ನೇ ಒಂದು ಅಧ್ಯಯನ ವಿಷಯವಾಗಿ ಎತ್ತಿಕೊಂಡು ಅಧ್ಯಯನ ನಡೆಸಿದ ದಾಖಲೆಗಳಿಲ್ಲ. (ಧರ್ಮಸ್ಥಳದ ದೇವಾಲಯದ ವತಿಯಿಂದ ನಡೆಯುವ ಚಟುವಟಿಕೆಗಳನ್ನು ಮುಖ್ಯವಾಗಿರಿಸಿಕೊಂಡು ಡಾ. ಬಿ.ಪಿ. ಸಂಪತ್ ಕುಮಾರ್ ಅವರು ಅಧ್ಯಯನ ನಡೆಸಿರುತ್ತಾರಾದರೂ ಅದು ಕೇವಲ ಧರ್ಮಸ್ಥಳ ಕ್ಷೇತ್ರಕ್ಕೆ ಮಾತ್ರ ಸಂಬಂಧಿಸಿದ ಅಧ್ಯಯನವಾಗಿದೆ. ಪ್ರೊ. ಎಂ. ಆರ್. ಹೆಗಡೆಯವರು ಉಡುಪಿ ಅಷ್ಟಮಠಗಳು ಆರ್ಥಿಕ ಚಟುವಟಿಕೆಯಲ್ಲಿ ತೊಡಗಿಕೊಂಡ ಬಗೆ ಎಂಬ ಕುರಿತಾಗಿ ಅಧ್ಯಯನ ನಡೆಸಿ, ಪ್ರೌಢಪ್ರಬಂಧವನ್ನು ರಚಿಸಿರುತ್ತಾರಾದರೂ ಇಲ್ಲಿ ಸಾಹಿತ್ಯ ಚಟುವಟಿಕೆಗಳ ಕೊಡುಗೆಗಳ ಕುರಿತು ಅಧ್ಯಯನ ನಡೆಸಿಲ್ಲ)

ಮೇಲ್ಕಂಡ ಚಟುವಟಿಕೆಗಳನ್ನು ಹೊರತುಪಡಿಸಿದರೆ ದೇವಾಲಯದ ಸಾಹಿತ್ಯ ಚಟುವಟಿಕೆಗಳನ್ನೇ ಕುರಿತಾದ ಯಾವ ಅಧ್ಯಯನ ನಡೆದ ದಾಖಲೆಗಳು ಸಿಗುವುದಿಲ್ಲ. 20ನೇ ಶತಮಾನದ ಕೊನೆಯ ದಶಕ (ಕ್ರಿ.ಶ. 2000) ದಲ್ಲಿ 'ದಕ್ಷಿಣಕನ್ನಡ ಜಿಲ್ಲೆಯ ದೇವಾಲಯಗಳು' ಎಂಬ ಹೆಸರಿನ ವಿಸ್ತೃತ ಮಾಹಿತಿಯ ಪುಸ್ತಕವೊಂದು ಅಂಬಲಪಾಡಿ ದೇಗುಲದ ವತಿಯಿಂದ ಪ್ರಕಾಶಿತಗೊಂಡಿದೆ. ಇದು ಪ್ರೊ. ಮುರಳೀಧರ ಉಪಾಧ್ಯ ಹಿರಿಯಡಕ, ಡಾ. ಪಿ.ಎನ್. ನರಸಿಂಹಮೂರ್ತಿಯವರ ಸಂಪಾದಕತ್ವದಲ್ಲಿ ಪ್ರಕಟಗೊಂಡಿರುತ್ತದೆ. ಈ ಕೃತಿಯು ಅವಿಭಜಿತ ದ.ಕ. ಜಿಲ್ಲೆಯ ದೇಗುಲಗಳ ವಿಳಾಸವನ್ನಷ್ಟೇ ನೀಡುತ್ತದೆಯೇ ಹೊರತು, ಅಲ್ಲಿ ನಡೆಯುವ ಧಾರ್ಮಿಕೇತರ ಚಟುವಟಿಕೆಗಳ ಬಗ್ಗೆ ಮಾಹಿತಿ ನೀಡುವುದಿಲ್ಲ. ಅಂತೆಯೇ ಕುಂದಾಪುರ ಪರಿಸರದ ದೇವಾಲಯಗಳ ಕುರಿತು, ಶ್ರೀಯುತ ಉಪ್ಪುಂದ ಚಂದ್ರಶೇಖರ ಹೊಳ್ಳರು 'ಕುಂದನಾಡಿನ ದೇವಾಲಯಗಳು' ಎಂಬ ಹೆಸರಿನಲ್ಲಿ ಕಿರು ಹೊತ್ತಿಗೆಯನ್ನು ಈಗಾಗಲೇ (2001) ಪ್ರಕಟಿಸಿರುತ್ತಾರೆ. ಕುಂದಾಪುರ ತಾಲೂಕಿನ ಎಲ್ಲ ದೇಗುಲಗಳ ಮಾಹಿತಿ ಇಲ್ಲಿ ಲಭ್ಯವಾಗುವುದಿಲ್ಲವಾದರೂ, ಹಲವು ದೇವಾಲಯಗಳ ಸಹಿತ ದೈವದ ಮನೆಯನ್ನೂ ತಮ್ಮ ಕೃತಿಯಲ್ಲಿ ಸೇರಿಸಿಕೊಂಡಿರುವುದು ಈ ಕೃತಿಯ ವಿಶೇಷತೆಯಾಗಿದೆ. ಉಡುಪಿ ಜಿಲ್ಲೆಯ ದೇಗುಲಗಳ ಸಾಹಿತ್ಯಚಟುವಟಿಕೆಗಳ ಕುರಿತಾಗಿ, ಅಭ್ಯಾಸ ಮಾಡುವವರಿಗೆ ಇದನ್ನು ಒಂದು ಪರಾಮರ್ಶನ ಗ್ರಂಥವೆಂದು ಪರಿಗಣಿಸಬಹುದು.

ದೇಗುಲದ (ಅವಿಭಜಿತ ದ.ಕ. ಜಿಲ್ಲೆಯ) ಸಾಹಿತ್ಯಚಟುವಟಿಕೆಗಳ ಕಿರು ಮಾಹಿತಿಯನ್ನು ನೀಡುವ ಇನ್ನೊಂದು ಕೃತಿಯೇ 'ದಕ್ಷಿಣದ ಸಿರಿನಾಡು' ಎಂಬ ಕೃತಿ. ಮೈಸೂರಿನ ಡಾ. ಕೆ. ಅನಂತರಾಮು ಅವರು 1996ರಲ್ಲಿ ಈ ಕೃತಿಯನ್ನು ಪ್ರಕಟಪಡಿಸಿರುತ್ತಾರೆ. ಉಡುಪಿಯ ಅಷ್ಟಮಠಗಳು ಮತ್ತು ಇಲ್ಲಿಯ ಚಟುವಟಿಕೆಗಳಿಗೆ ಸಂಬಂಧಿಸಿದಂತೆ ಸಾಕಷ್ಟು ಗ್ರಂಥಗಳೂ, ಪರ್ಯಾಯ ಸ್ಮರಣಸಂಚಿಕೆಗಳೂ ಪ್ರಕಟಗೊಂಡಿದ್ದರೂ, ಈ ಕೃತಿಗಳು ಕೇವಲ ಅಷ್ಟಮಠದ ಚಟುವಟಿಕೆಗಳಿಗಷ್ಟೇ ಸೀಮಿತಗೊಂಡಿದೆ.

ದೇವರ ಮೇಲಿನ ನಂಬಿಕೆಯ ಹಿನ್ನೆಲೆಯಲ್ಲಿ ದೇವಸ್ಥಾನದ ರಚನೆಯು ರೂಪುಗೊಂಡಿರುತ್ತದೆ. ದೇವರ ಕುರಿತಾಗಿ ಪುರಾಣದ ಹಿನ್ನೆಲೆಯ ಕಥೆಗಳಿಗಳಿಗನುಗುಣವಾಗಿ ಆಗಮೋಕ್ತ ರೀತಿಯಲ್ಲಿ ದೇವಸ್ಥಾನದ ವಾಸ್ತುರಚನೆಯ ವಿನ್ಯಾಸವಿರುತ್ತದೆ. ಪ್ರಾಚೀನ ಕರ್ನಾಟಕದ ಯಾವುದೇ ದೇವಸ್ಥಾನವು ಕೇವಲ ಪೂಜೆ–ದೀಪ–ಅಭಿಷೇಕ–ರಥೋತ್ಸವಗಳೆಂಬ ಸೀಮಿತ ಆಚರಣೆಗೊಳಪಟ್ಟಿರಲಿಲ್ಲ. ಧಾರ್ಮಿಕ ಭಾವನೆಯನ್ನು ಆಸ್ತಿಕ ಭಕ್ತನಲ್ಲಿ ಉದ್ದೀಪಿಸಿ, ಆತನನ್ನು ಧರ್ಮಪ್ರಜ್ಞೆಯುಳ್ಳ ಸಾಮಾಜಿಕನನ್ನಾಗಿಸುವುದೇ ದೇವಸ್ಥಾನದ ಗುರಿಯಾಗಿತ್ತು. ಡಾ. ಚಿದಾನಂದಮೂರ್ತಿಯವರು 'ಕನ್ನಡ ಶಾಸನಗಳ ಸಾಂಸ್ಕೃತಿಕ ಅಧ್ಯಯನ'ದಲ್ಲಿ ದೇವಸ್ಥಾನ ಒಂದು ಸಾಮಾಜಿಕ ಸಂಸ್ಥೆ ಎಂಬ ಶೀರ್ಷಿಕೆಯಲ್ಲಿ ದೇವಸ್ಥಾನದ ಶೈಕ್ಷಣಿಕ ಜವಾಬ್ದಾರಿ, ನ್ಯಾಯ ತೀರ್ಮಾನದ ಪಾತ್ರ, ಆರ್ಥಿಕ ಚಟುವಟಿಕೆಗಳ ತಾಣ ಎಂಬ ವಿವಿಧ ವಿಷಯಗಳನ್ನು ಸುದೀರ್ಘವಾಗಿ ಚರ್ಚಿಸಿ, "ಅಂತಿಮವಾಗಿ ಶ್ರೀಮಂತರ ಐಶ್ವರ್ಯವು ಬಡವರ ಕಡೆಗೆ ಹರಿಯುವಂತೆ ಮಾಡಿರುವುದರಲ್ಲಿ ದೇವಸ್ಥಾನದ ಪಾತ್ರವು ಅಗಾಧವಾದುದು"(ಲೇ: ಚಿದಾನಂದಮೂರ್ತಿ, 1979, ಪುಟ–204) ಎಂದಿದ್ದಾರೆ. ದೇವಸ್ಥಾನವು ಬಹು ಆಯಾಮದ ಪಾತ್ರವನ್ನು ನಿರ್ವಹಿಸುವಾಗ ಅದರ ಆಡಳಿತ ವ್ಯವಸ್ಥೆಯಾಗಲೀ, ಸಂಘಟನೆಯಾಗಲೀ ಕಾಲಕಾಲಕ್ಕೆ ತಮ್ಮ ರೀತಿ–ನೀತಿ–ಸೂತ್ರಗಳನ್ನು ಬದಲಾಯಿಸಿಕೊಂಡು

ಸಮಾಜಮುಖಿಯಾಗಿ ವರ್ತಮಾನದ ವಿದ್ಯಮಾನಗಳಿಗೆ ಪೂರಕವಾಗಿ ಸ್ಪಂದಿಸುವುದು ಅವಶ್ಯವಾಗುತ್ತದೆ. ಚಿದಾನಂದಮೂರ್ತಿಯವರ ಮಾತಿನಲ್ಲಿಯೇ ಉಲ್ಲೇಖಿಸುವುದಾದರೆ "ಯಾವುದೇ ಸಂಸ್ಥೆಯಾಗಲೀ ಅದು ಉಳಿಯಬೇಕಾದರೆ ಕಾಲದಿಂದ ಕಾಲಕ್ಕೆ ಬೇರೆ ಬೇರೆ ಪರಿಸರಗಳಿಗೆ ಹೊಂದಿಕೊಳ್ಳಬೇಕಾಗುತ್ತದೆ. ಸಮಾಜವು ಬೇರೆಯಾದಂತೆ ಅದೂ ಕೂಡ ಬದಲಾಯಿಸಬೇಕಾಗುತ್ತದೆ. ಏಕೆಂದರೆ ಸಂಸ್ಥೆಯೆನ್ನುವುದು ಸಮಾಜದ ವ್ಯಕ್ತಿಗಳು ಸೇರಿ ರೂಪಿಸಿರುವಂತಹುದು ತಾನೆ? ಕರ್ನಾಟಕದ ದೇವಸ್ಥಾನದ ಇತಿಹಾಸದಲ್ಲೂ ಈ ಪರಿವರ್ತನೆಯನ್ನು ಕಾಣುತ್ತೇವೆ"(ಪೂರ್ವೋಕ್ತ, ಪು–204) ಎಂದಿದ್ದಾರೆ. ಮೇಲಿನ ಹೇಳಿಕೆಯನ್ನು ಉಡುಪಿ ಜಿಲ್ಲೆಯ ದೇವಸ್ಥಾನಗಳಿಗೂ ಅನ್ವಯಿಸಬಹುದಾಗಿದೆಯೇ? ಅನ್ವಯಿಸಬಹುದಾದಲ್ಲಿ ಅದು ಯಾವ ದೇವಸ್ಥಾನಗಳು? ಕಾಲಕಾಲಕ್ಕೆ ತಮ್ಮ ದೃಷ್ಟಿಧೋರಣೆಯಲ್ಲಿ ಬದಲಾವಣೆ ಮಾಡಿಕೊಂಡು ಧಾರ್ಮಿಕೇತರ ಚಟುವಟಿಕೆಗಾಗಿ ದೇವಸ್ಥಾನದ ವೇದಿಕೆಯನ್ನು ಅಲ್ಲಿಯ ಆಡಳಿತವು ಬಿಟ್ಟುಕೊಟ್ಟಿದೆಯೇ? ಬಿಟ್ಟುಕೊಟ್ಟಲ್ಲಿ ಅದರ ಹಿಂದಿನ ಉದ್ದೇಶವೇನು? ಆ ಚಟುವಟಿಕೆಗಳ ಫಲಾನುಭವಿಗಳಾಗಿ ಬಂದ ಸಹೃದಯರು ಯಾರು? ಇದರ ಪರಿಣಾಮಗಳೇನು? ಎಂಬ ವಿಷಯದ ಕುರಿತಂತೆ ಪ್ರಸ್ತುತ ಅಧ್ಯಾಯದಲ್ಲಿ ಚರ್ಚಿಸಬೇಕಾಗಿದೆ. ಶ್ರೀಯುತ ಉಪ್ಪುಂದ ಚಂದ್ರಶೇಖರ ಹೊಳ್ಳರು 'ಕುಂದನಾಡಿನ ದೇವಸ್ಥಾನಗಳು' ಎಂಬ ಕೃತಿಗಾಗಿ ಕ್ಷೇತ್ರಕಾರ್ಯವನ್ನು ಕೈಗೊಂಡು ಕೃತಿ ರಚಿಸಿ, ತಮ್ಮ ಕೃತಿಯ ಪ್ರಸ್ತಾವನೆಯಲ್ಲಿ ಮೇಲಿನ ಆಶಯವನ್ನೇ ಹೀಗೆ ಉಲ್ಲೇಖಿಸಿದ್ದಾರೆ: "ದೇವಸ್ಥಾನಗಳು ಮುಖ್ಯವಾಗಿ ವ್ಯಕ್ತಿಯ ಆಂತರಿಕ ಸಂಸ್ಕಾರಕ್ಕೆ ಪ್ರೇರಣಾ ಶಕ್ತಿಯಾಗಬೇಕು. ಹೊರಗಡೆ ಪ್ರಪಂಚದ ವ್ಯಾವಹಾರಿಕತನ, ಸೋಗಲಾಡಿತನ, ನಾಟಕೀಯತೆ, ಭೌತಿಕವೈಭವ, ದೈಹಿಕ ಸುಖಸಾಧನೆಗಳಿಗೆ ಮಾರುಹೋಗದೇ, ತ್ಯಾಗ, ಸಾಧನೆ, ಧ್ಯಾನ, ಸರ್ವಜೀವಿಗಳ ಹಿತಸಾಧನೆಯಾಗುವಂತಿರಬೇಕು"(ಲೇ: ಉಪ್ಪುಂದ ಚಂದ್ರಶೇಖರ ಹೊಳ್ಳ, 2001, ಪು–13) ಎಂದಿದ್ದಾರೆ. ಈ ಹಿತ ಸಾಧಿಸುವ ಬಗೆ ಹೇಗೆ? ಎನ್ನುವುದನ್ನು ವಿವರಿಸುತ್ತಾ, "ದೇವಸ್ಥಾನಗಳು ಶ್ರದ್ಧಾಕೇಂದ್ರಗಳು ಬರೀ ಆರಾಧನಾ ಸ್ಥಳ ಮಾತ್ರವಾಗುಳಿಯದೇ ವ್ಯಕ್ತಿಯ ಸಮಗ್ರ ಬೆಳವಣಿಗೆಗೆ ಪೂರಕವಾಗುವಂತೆ ವಿವಿಧ **ಸಾಹಿತ್ಯಕ, ಸಾಂಸ್ಕೃತಿಕ, ಕ್ರೀಡೆ, ಕಲೆಗಳ ಪೋಷಣೆಗೈಯ್ಯುವಂತಾಗಲು ಶ್ರಮಿಸಬೇಕು**"(ಪೂರ್ವೋಕ್ತ, ಪು–81) ಎಂದಿದ್ದಾರೆ. ಆದರೆ ಹೊಳ್ಳರು ದೇವಸ್ಥಾನದ ಪಟ್ಟಿಯನ್ನು ಕೊಡುವಷ್ಟರಲ್ಲಿ ಮಾತ್ರ ಶ್ರಮವಹಿಸಿದರೇ ಹೊರತು, ತಮ್ಮ ಕೃತಿಯಲ್ಲಿ ಹೇಳಿದ ಆಶಯವನ್ನು ಈಡೇರಿಸುವಲ್ಲಿ ಹೆಚ್ಚು ಪ್ರಯತ್ನಿಸಿದಂತೆ ಕಾಣುವುದಿಲ್ಲ. ಪ್ರಸ್ತುತ ಈ ಅಧ್ಯಯನದಲ್ಲಿ ಹೊಳ್ಳರ ಮೇಲ್ಕಂಡ ಆಶಯಕ್ಕೆ ಬದ್ಧವಾಗಿ ಅಧ್ಯಯನ ನಡೆಸಬೇಕಾಗಿದೆ.

ಮುರಳೀಧರ ಉಪಾಧ್ಯ ಹಿರಿಯಡಕ ಹಾಗು ಡಾ. ಪಿ. ಎನ್. ನರಸಿಂಹಮೂರ್ತಿಯವರು ಸಂಪಾದಿಸಿದ 'ದಕ್ಷಿಣ ಕನ್ನಡದ ದೇವಾಲಯಗಳು' ಎಂಬ ಗ್ರಂಥದಲ್ಲಿ ನೀಡಿದ ಅಂಕಿ ಅಂಶಗಳಂತೆ ಉಡುಪಿ ಜಿಲ್ಲೆಯ ಒಟ್ಟು ದೇವಸ್ಥಾನಗಳು ಉಡುಪಿ (ತಾಲೂಕು) 158, ಕುಂದಾಪುರ (ತಾ।) 78, ಕಾರ್ಕಳ (ತಾ।) 95 ಅಂದರೆ ಒಟ್ಟು 331. ಇವುಗಳಲ್ಲಿ ಗೌಡ ಸಾರಸ್ವತ ಸಮುದಾಯ ಅಥವಾ ಜನಾಂಗಕ್ಕೆ ಸೇರಿದ ದೇವಸ್ಥಾನಗಳ ವಿವರಗಳು ಹೀಗಿವೆ. ಉಡುಪಿ (ತಾ।) 17 + ಕಾರ್ಕಳ (ತಾ।) 8 + (1 ಮೂಡಬಿದಿರೆ ಹೋಬಳಿಗೆ ಸೇರಿದೆ) = 9 + ಕುಂದಾಪುರ (ತಾ।) = 12 ಅಂದರೆ ಒಟ್ಟು 37.

ವಿವಿಧ ಜಾತಿ ಪಂಗಡಗಳಿಗೆ ಸೇರಿದ ದೇವಾಲಯಗಳು ಉಡುಪಿ (ತಾ।) = 8 + ಕಾರ್ಕಳ (ತಾ)=8, ಕುಂದಾಪುರ (ತಾ।)= 9., ಒಟ್ಟು= 25.

ಜಿಲ್ಲೆಯಲ್ಲಿರುವ ದೇವಸ್ಥಾನಗಳು ನಿರ್ವಹಿಸುವ ಧಾರ್ಮಿಕ, ಸಾಂಸ್ಕೃತಿಕ, ಸಾಹಿತ್ಯಚಟುವಟಿಕೆಗಳ ಒಟ್ಟು ಕಾರ್ಯಕ್ರಮಗಳನ್ನು ಲಕ್ಷಿಸಿ, ದೇವಸ್ಥಾನಗಳನ್ನು ಈ ಕೆಳಗಿನಂತೆ ವಿಂಗಡಿಸಬಹುದಾಗಿದೆ.

1. ಕೇವಲ ಧಾರ್ಮಿಕ ಚಟುವಟಿಕೆಗಳಿಗೆ ಸೀಮಿತವಾದ ದೇವಾಲಯಗಳು.
2. ಧಾರ್ಮಿಕ ಚಟುವಟಿಕೆಗಳ ಸಹಿತ ಸಾಂಸ್ಕೃತಿಕ, ಶೈಕ್ಷಣಿಕ ಚಟುವಟಿಕೆಗೆ ಅವಕಾಶ ನೀಡುವ ದೇವಾಲಯಗಳು.
3. ಧಾರ್ಮಿಕ ಚಟುವಟಿಕೆಯೊಂದಿಗೆ ಸಾಂಸ್ಕೃತಿಕ, ಸಾಹಿತ್ಯಕ, ಶೈಕ್ಷಣಿಕ ಚಟುವಟಿಕೆಗಳ ಸಹಿತ, ಇತರ ಸಾಮಾಜಿಕ ಚಟುವಟಿಕೆಗಳಲ್ಲಿಯೂ ಗುರುತಿಸಿಕೊಂಡ ದೇವಾಲಯಗಳು.
4. ಜಾತೀಯ ಹಿತಕ್ಕೆ ಬದ್ಧವಾದ ದೇವಾಲಯಗಳು.
5. ಸ್ವಜಾತಿಯ ಸಾಂಸ್ಕೃತಿಯ ಮಹತ್ವವನ್ನು ಮನಗಾಣಿಸುವುದಕ್ಕೆ ಬದ್ಧವಾದ ಜನಾಂಗೀಯ ದೇವಸ್ಥಾನಗಳು.

1. **ಧಾರ್ಮಿಕ ಚಟುವಟಿಕೆಗಳಿಗೇ ಸಮರ್ಪಿಸಿಕೊಂಡ ದೇವಾಲಯಗಳು:** ಜಿಲ್ಲೆಯಲ್ಲಿರುವ 331 ದೇವಸ್ಥಾನಗಳಲ್ಲಿ ಬಹುತೇಕ ಸಾರ್ವಜನಿಕ ದೇವಾಲಯಗಳು (ಧಾರ್ಮಿಕ ದತ್ತಿ ಇಲಾಖೆಯ ಅಧೀನಕ್ಕೊಳಪಟ್ಟ ದೇವಾಲಯಗಳು) ಹಾಗೂ ಕೆಲವೊಂದು ಜಾತೀಯ ದೇವಸ್ಥಾನಗಳು ಕೇವಲ ಧಾರ್ಮಿಕ ಚಟುವಟಿಕೆಗಳಿಗೇ ಸೀಮಿತಗೊಂಡಿದ್ದು, ಯಾವುದೇ ಸಾಹಿತ್ಯಕ, ಸಾಂಸ್ಕೃತಿಕ ಚಟುವಟಿಕೆಗಳಲ್ಲಿ ಅವುಗಳು ಗುರುತಿಸಿಕೊಂಡಿಲ್ಲ. ಧಾರ್ಮಿಕ ದತ್ತಿ ಇಲಾಖೆಯ ನೇರ ಆಡಳಿತಕ್ಕೊಳಪಟ್ಟ ಇಂತಹ ದೇವಸ್ಥಾನಗಳು ವಾರ್ಷಿಕ ಹತ್ತು ಲಕ್ಷಕ್ಕೂ ಮೇಲ್ಪಟ್ಟು ಆದಾಯವನ್ನು ಹೊಂದಿದ್ದು, 'ಎ'ದರ್ಜೆಯಲ್ಲಿ ಗುರುತಿಸಿಕೊಂಡಿದ್ದರೂ ದೇವಸ್ಥಾನದ ಆವರಣದೊಳಗೆ ಯಾವುದೇ ಧಾರ್ಮಿಕೇತರ ಚಟುವಟಿಕೆಗಳಿಗೆ ಆಸ್ಪದವಿಲ್ಲದಿರುವುದು ಕಂಡುಬರುತ್ತದೆ. ಧರ್ಮದರ್ಶಿಗಳಾಗಿ ಜವಾಬ್ದಾರಿ ಹೊಂದಿದ ಆಡಳಿತಗಾರರಿಗೆ, ಸಾಹಿತ್ಯ, ಸಾಂಸ್ಕೃತಿಕ ಚಟುವಟಿಕೆಗಳಲ್ಲಿ ಆಸಕ್ತಿ ಇಲ್ಲದಿರುವುದು ಹಾಗೂ ಇಲಾಖೆಯ ವರಿಷ್ಠ ಅಧಿಕಾರಿಗಳನ್ನು ಈ ಕುರಿತಂತೆ ಒಪ್ಪಿಸುವ ಮತ್ತು ಕಾರ್ಯಕ್ರಮಗಳ ಅವಶ್ಯಕತೆಯ ಕುರಿತು ಮನಗಾಣಿಸುವ ಶ್ರಮ ತೆಗೆದುಕೊಳ್ಳುವುದಕ್ಕೆ ಇರುವ ಹಿಂಜರಿಕೆ ಮತ್ತು ಅಸಡ್ಡೆಗಳೇ ಇದಕ್ಕೆ ಮುಖ್ಯ ಕಾರಣಗಳಾಗಿರುತ್ತವೆ.

**1. ಆದಾಯವಿದ್ದೂ ಸಾಹಿತ್ಯ, ಸಾಂಸ್ಕೃತಿಕ ಚಟುವಟಿಕೆಗಳಲ್ಲಿ ತೊಡಗಿಸಿಕೊಳ್ಳದ ದೇವಸ್ಥಾನಗಳ ಹೆಸರುಗಳು ಹೀಗಿವೆ:**

1) ಮಹಿಷಮರ್ದಿನಿ ದೇವಸ್ಥಾನ, ನೀಲಾವರ. 2) ಅನಂತಪದ್ಮನಾಭ ದೇವಸ್ಥಾನ, ಪೆರ್ಡೂರು, 3) ವೀರಭದ್ರ ದೇವಸ್ಥಾನ, ಒರಿಯಡಕ, 4) ಸೇನೇಶ್ವರ ದೇವಸ್ಥಾನ, ಬೈಂದೂರು, 5) ಶ್ರೀ ದುರ್ಗಾಪರಮೇಶ್ವರೀ ದೇವಸ್ಥಾನ, ಸೌಕೂರು 6) ಶ್ರೀ ಶಂಕರನಾರಾಯಣ ದೇವಸ್ಥಾನ, ಶಂಕರನಾರಾಯಣ, 7) ಶ್ರೀ ಬ್ರಹ್ಮಲಿಂಗೇಶ್ವರ ದೇವಸ್ಥಾನ, ಮಾರಣಕಟ್ಟೆ, 8) ಶ್ರೀ ಸುಬ್ರಹ್ಮಣ್ಯ ದೇವಾಲಯ, ಕುಂದಾವರ 9) ಶ್ರೀ ಮಹಾಲಿಂಗೇಶ್ವರ ದೇವಸ್ಥಾನ, ಕೆರ್ವಾಸೆ 10) ಶ್ರೀ ಜಲದುರ್ಗಾ ದೇವಸ್ಥಾನ, ತೆಳ್ಳಾರು-ದುರ್ಗ, 11) ಉಗ್ರನರಸಿಂಹ ದೇವಸ್ಥಾನ, ಸಾಲಿಗ್ರಾಮ.

**2) ಧಾರ್ಮಿಕ ಚಟುವಟಿಕೆ ಸಹಿತ ಸಾಂಸ್ಕೃತಿಕ, ಶೈಕ್ಷಣಿಕ ಚಟುವಟಿಕೆಗಳಿಗೆ ಅವಕಾಶ ನೀಡುವ ದೇವಾಲಯಗಳು:** ಈ ವಿಭಾಗದಲ್ಲಿ ಸೇರಿರುವ ಸಾರ್ವಜನಿಕ ದೇವಸ್ಥಾನಗಳ ಹೆಸರುಗಳು ಹೀಗಿವೆ: 1) ಶ್ರೀ ದುರ್ಗಾಪರಮೇಶ್ವರೀ ದೇವಸ್ಥಾನ, ಮಂದಾರ್ತಿ, 2) ಶ್ರೀ ಮೂಕಾಂಬಿಕಾ ದೇವಸ್ಥಾನ, ಕೊಲ್ಲೂರು 3) ಶ್ರೀ ಬ್ರಾಹ್ಮೀ ದುರ್ಗಾಪರಮೇಶ್ವರೀ ದೇವಸ್ಥಾನ, ಕಮಲಶಿಲೆ 4) ಶ್ರೀ ಕುಂದೇಶ್ವರ ದೇವಸ್ಥಾನ, ಕುಂದಾಪುರ 5) ಶ್ರೀ ವಿನಾಯಕ ದೇವಸ್ಥಾನ, ಆನೆಗುಡ್ಡೆ 6) ಶ್ರೀ ಹಿರೇ ಮಹಾಲಿಂಗೇಶ್ವರ ದೇವಸ್ಥಾನ, ಕೋಟ 7) ಶ್ರೀ ದುರ್ಗಾಪರಮೇಶ್ವರೀ ದೇವಸ್ಥಾನ, ಉಪ್ಪುಂದ. 8) ಶ್ರೀ ಕೋಟಿಲಿಂಗೇಶ್ವರ ದೇವಸ್ಥಾನ, ಕೋಟೇಶ್ವರ.

ಶ್ರೀ ದುರ್ಗಾಪರಮೇಶ್ವರಿ ದೇವಸ್ಥಾನ ಮಂದಾರ್ತಿ, ಶ್ರೀ ಮುಕಾಂಬಿಕಾ ದೇವಸ್ಥಾನ ಕೊಲ್ಲೂರು ಹಾಗೂ ಬ್ರಾಹ್ಮೀ ಶ್ರೀ ದುರ್ಗಾಪರಮೇಶ್ವರಿ ದೇವಸ್ಥಾನ ಕಮಲಶಿಲೆ–ಈ ದೇವಸ್ಥಾನಗಳು ಸಾಂಸ್ಕೃತಿಕ, ಶೈಕ್ಷಣಿಕ ಚಟುವಟಿಕೆಗಳಿಗೆ 20ನೇ ಶತಮಾನದ ಉತ್ತರಾರ್ಧದಲ್ಲಿ ಸಾಕಷ್ಟು ಅವಕಾಶಗಳನ್ನು ನೀಡುತ್ತಾ ಬಂದಿದೆ. ಧಾರ್ಮಿಕದತ್ತಿ ಆಯುಕ್ತರ ಅಧೀನಕ್ಕೊಳಪಟ್ಟ ದೇವಸ್ಥಾನಗಳಾಗಿದ್ದು, ಧರ್ಮದರ್ಶಿ ಮಂಡಳಿಯ ಸದಸ್ಯರು ಈ ಚಟುವಟಿಕೆಗಳಿಗೆ ಅನುಮೋದನೆ ಪಡೆಯುವಲ್ಲಿ ಯಶಸ್ವಿಯಾಗಿರುತ್ತಾರೆ. ಕೊಲ್ಲೂರು ದೇಗುಲವು ಕೊಲ್ಲೂರಿನಲ್ಲೇ ಪ್ರಾಥಮಿಕ, ಪ್ರೌಢ, ಪದವಿಪೂರ್ವ ಶಿಕ್ಷಣಸಂಸ್ಥೆಗಳನ್ನು ನಡೆಸುತ್ತಾ ಬಂದಿರುವುದಲ್ಲದೆ ಸನಿಹದ ಗ್ರಾಮದಲ್ಲೂ ಪ್ರೌಢಶಾಲೆಯನ್ನು ತೆರೆದು, ಯಶಸ್ವಿಯಾಗಿ ನಡೆಸಿಕೊಂಡು ಬರುತ್ತಿದೆ. ಕಾಲೇಜು ವಿದ್ಯಾರ್ಥಿಗಳಿಗೆ ಮಧ್ಯಾಹ್ನದ ಊಟದ ವ್ಯವಸ್ಥೆಯನ್ನು ದೇಗುಲದ ವತಿಯಿಂದ 1995ರಿಂದಲೇ ವ್ಯವಸ್ಥೆ ಮಾಡಿದೆ. ಮಂದಾರ್ತಿ ಹಾಗೂ ಕಮಲಶಿಲೆ ದೇವಸ್ಥಾನಗಳಿಗೂ ಮೇಲಿನ ಹೇಳಿಕೆಯು ನೇರವಾಗಿ ಅನ್ವಯಿಸುತ್ತದೆ. ಈ ದೇವಸ್ಥಾನಗಳ ಶೈಕ್ಷಣಿಕ ಸವಲತ್ತನ್ನು ಸದುಪಯೋಗಪಡಿಸಿಕೊಂಡ ಅಸಂಖ್ಯಾತ ವಿದ್ಯಾರ್ಥಿಗಳು ಇಂದು ರಾಜ್ಯದಾದ್ಯಂತ ವಿವಿಧ ಹುದ್ದೆಗಳಲ್ಲಿ ತಮ್ಮ ಸ್ವತಂತ್ರ ಜೀವನವನ್ನು ಸಂತೃಪ್ತಿಯಿಂದ ಮುನ್ನಡೆಸುತ್ತಿದ್ದಾರೆನ್ನುವುದು ದೇವಸ್ಥಾನಕ್ಕೆ ಹೆಮ್ಮೆಯ ವಿಚಾರವಾಗಿದೆ.

ಇದೇ ಸಾಲಿನಲ್ಲಿ ಬರುವ ಇನ್ನೊಂದು ದೇವಾಲಯವೇ ಕುಂದಾಪುರದ ಕುಂದೇಶ್ವರ ದೇವಾಲಯ. ಗರ್ಭಗುಡಿಯಲ್ಲಿ ನಿತ್ಯಪೂಜೆಯು ಶಿವಲಿಂಗಕ್ಕಾದರೂ ಕೇವಲ ಶಿವರಾತ್ರಿ ಉತ್ಸವ ಮಾತ್ರವಲ್ಲದೇ ಧಾರ್ಮಿಕವಾಗಿ ಅತಿ ಮುಖ್ಯವಾದ ಹಬ್ಬಗಳಾದ ಚೌತಿ, ನವರಾತ್ರಿ, ಯುಗಾದಿ, ಪರ್ವಗಳನ್ನು ಸ್ಥಳೀಯ ಕಲಾವಿದರ ಮತ್ತು ಆಸ್ತಿಕರ ಪ್ರೋತ್ಸಾಹದಿಂದ ವಿವಿಧ ಸಾಂಸ್ಕೃತಿಕ ಚಟುವಟಿಕೆಗಳೊಂದಿಗೆ ನಿರ್ವಹಿಸಿಕೊಂಡು ಬರುತ್ತಿದ್ದಾರೆ. ಕುಂದಾಪುರ ಕನ್ನಡಸಂಘದ ಅನೇಕ ಕಾರ್ಯಕ್ರಮಗಳಿಗೂ ಉಚಿತವಾಗಿ ದೇವಸ್ಥಾನವು ಸ್ಥಳಾವಕಾಶವನ್ನೊದಗಿಸುತ್ತಾ ಬಂದಿದೆ.

ಆನೆಗುಡ್ಡೆ ವಿನಾಯಕ ದೇವಸ್ಥಾನವು 2004ರ ತನಕ ಧಾರ್ಮಿಕ ದತ್ತಿ ಆಯುಕ್ತರ ಅಧೀನಕ್ಕೊಳಪಟ್ಟ ಸಾರ್ವಜನಿಕ ದೇವಾಲಯವಾಗಿದ್ದು, ವರ್ಷಂಪ್ರತಿ ಶೈಕ್ಷಣಿಕ ಹಾಗೂ ಸಾಂಸ್ಕೃತಿಕ ಚಟುವಟಿಕೆಗಳಿಗಾಗಿ ದೇವಾಲಯದ ಆದಾಯದ ಶೇ.15 ರಷ್ಟು ಮೊತ್ತವನ್ನು ವಿನಿಯೋಗಿಸುತ್ತಾ ಬಂದಿರುವ ವಿಚಾರ ಅಲ್ಲಿನ ಆಡಿಟ್ ವರದಿಯಿಂದ ತಿಳಿದುಬರುತ್ತದೆ. ಕನರಾಡಿ ವಾದಿರಾಜ ಭಟ್ ಅವರ 'ಶ್ರೀರಂಗೋಲಿ' ಕೃತಿಯು ಈ ದೇವಾಲಯದ ವತಿಯಿಂದಲೇ ಮುದ್ರಣಗೊಂಡಿರುತ್ತದೆ. ವಿಶ್ವಂಭರ ಉಪಾಧ್ಯಾಯರ ಅನೇಕ ಸಾಹಿತ್ಯಚಟುವಟಿಕೆಗಳಿಗೆ ದೇವಸ್ಥಾನವು ಅವಕಾಶವನ್ನು ಒದಗಿಸಿಕೊಟ್ಟಿತ್ತು. ಗಮಕ, ಯಕ್ಷಗಾನ,

ತಾಳಮದ್ದಳೆ, ಭರತನಾಟ್ಯ, ಹರಿಕೀರ್ತನೆ ಮುಂತಾದ ಚಟುವಟಿಕೆಗಳನ್ನು ದೇವಸ್ಥಾನವು ನಿರ್ವಹಿಸಿಕೊಂಡು ಬಂದಿರುವುದಕ್ಕೆ ಅಲ್ಲಿನ ಆಡಿಟ್ ರಿಪೋರ್ಟುಗಳಲ್ಲಿ ದಾಖಲೆಗಳು ಲಭ್ಯವಾಗುತ್ತವೆ.

ಹಿರೇ ಮಹಾಲಿಂಗೇಶ್ವರ ದೇವಸ್ಥಾನ ಕೋಟ, ದೊಡ್ಡ ಪ್ರಾಂಗಣವನ್ನು ಹೊಂದಿದ ಈ ಪರಿಸರದ ಮುಖ್ಯ ದೇವಸ್ಥಾನವಾಗಿದೆ. ಕಳೆದ ಶತಮಾನದ (20ನೇ) ಮೊದಲ ಬೋರ್ಡ್ ಪ್ರಾಥಮಿಕ ಶಾಲೆ (1906) ಇದೇ ದೇವಸ್ಥಾನದ ಹೆಬ್ಬಾಗಿಲಿನಲ್ಲಿ ಆರಂಭಗೊಂಡು ಮುಂದೆ ಸ್ವಂತ ಕಟ್ಟಡಕ್ಕೆ ವರ್ಗಾವಣೆಗೊಂಡಿತ್ತು. ಅದೇ ರೀತಿ ಇಂದು ಕಾರ್ಯನಿರ್ವಹಿಸುತ್ತಿರುವ ಶಾಂಭವೀ ಪ್ರಾಥಮಿಕ ಶಾಲೆಯು ಆರಂಭದಲ್ಲಿ ಇದೇ ದೇಗುಲದ ಹೆಬ್ಬಾಗಿಲಿನಲ್ಲಿ ಕಾರ್ಯನಿರ್ವಹಿಸಿತ್ತು. ತದನಂತರ ವಿವೇಕ ಪ್ರೌಢಶಾಲೆಯ ಶೈಕ್ಷಣಿಕಚಟುವಟಿಕೆಗಳಿಗೆ ಈ ದೇಗುಲವು ಸ್ಥಳ ನೀಡಿತು. (ವಿವರಗಳಿಗೆ ಕೋ.ಲ. ಕಾರಂತರ 'ನೆನಪಿನಂಗಳದಲ್ಲಿ ಮುಸ್ಸಂಜೆ ಹೊತ್ತು' ಪುಟ-17, ಸಂಪಾದಕರು: ವೈದೇಹಿ ಈ ಕೃತಿಯನ್ನು ಗಮನಿಸಬಹುದು.) 1975ರಲ್ಲಿ ಪುನಃ ಇದೇ ಹಿರೇ ಮಹಾಲಿಂಗೇಶ್ವರ ಪೌಳಿಯು (ಹೆಬ್ಬಾಗಿಲು) ನಾರಣಪ್ಪ ಉಪ್ಪೂರರ ನಿರ್ದೇಶನದ ಯಕ್ಷಗಾನ ತರಬೇತಿ ಶಾಲೆಯಾಗಿ ಸುಮಾರು 14 ವರ್ಷಗಳ ಕಾಲ ಕಾರ್ಯನಿರ್ವಹಿಸಿತ್ತು. ಕೋಟ ಮಿತ್ರ ಮಂಡಳಿಯ ಅನೇಕ ಚಟುವಟಿಕೆಗಳಿಗೆ ದೇವಸ್ಥಾನದ ವೇದಿಕೆಯು ಬಳಕೆಯಾದ ಕುರಿತಂತೆ ಸಾಕಷ್ಟು ಛಾಯಾಚಿತ್ರಗಳು ಮಿತ್ರಮಂಡಳಿಯ ಸದಸ್ಯರಲ್ಲಿ ಲಭ್ಯವಿವೆ.

ಉಪ್ಪುಂದ ಶ್ರೀ ದುರ್ಗಾಪರಮೇಶ್ವರೀ ದೇವಸ್ಥಾನದ ಕುರಿತಂತೆ 'ಉಪ್ಪುಂದ ಶ್ರೀ ದುರ್ಗಾಪರಮೇಶ್ವರೀ ದೇವಸ್ಥಾನ ಒಂದು ಅಧ್ಯಯನ' ಎಂಬ ಕೃತಿಯನ್ನು ಶ್ರೀ ಉಪ್ಪುಂದ ಚಂದ್ರಶೇಖರ ಹೊಳ್ಳ ಅವರು ಹೊರತಂದಿದ್ದು, ಕೃತಿಯಲ್ಲಿ ದೇಗುಲದಲ್ಲಿ ವರ್ಷಂಪ್ರತಿ ನಡೆಯುವ ವಿವಿಧ ಧಾರ್ಮಿಕ ಉತ್ಸವಗಳು, ಆ ಉತ್ಸವಗಳ ಹಿಂದೆ ಇರುವ ಧಾರ್ಮಿಕ ಆಚರಣೆಗಳನ್ನು ಸಮಗ್ರವಾಗಿ ವಿವರಿಸಿದ್ದಾರೆ. 1930ರಲ್ಲಿ ಹೆಣ್ಣುಮಕ್ಕಳಿಗಾಗಿ ಆರಂಭವಾದ ಸರಕಾರದ ಕಿರಿಯ ಪ್ರಾಥಮಿಕ ಶಾಲೆಯು ಮೊದಲು ಇದೇ ದೇವಳದ ಹೆಬ್ಬಾಗಿಲಿನಲ್ಲಿ ಕಾರ್ಯನಿರ್ವಹಿಸಿತ್ತು. ಹಾಗೆಯೇ ಪ್ರೌಢಶಾಲೆ ಮಂಜೂರಾದಾಗಲೂ ಆ ಶಾಲೆಗೂ ಇದೇ ಪೌಳಿಯು ಆಸರೆಯನ್ನೊದಗಿಸಿತ್ತು. ಕೇವಲ ಶೈಕ್ಷಣಿಕವಾಗಿ ಮಾತ್ರವಲ್ಲದೆ 'ದೇವಳದ ಹೆಬ್ಬಾಗಿಲು' ಊರಿನವರಿಗೆ ಬಹು ಆಕರ್ಷಣೆಯ ಕೇಂದ್ರವೆನಿಸಿ, ಯಾವಾಗಲೂ ಸಾಂಸ್ಕೃತಿಕ ಚಟುವಟಿಕೆಗಳಿಂದ ಕೂಡಿರುತ್ತಿತ್ತು. "ಗಣೇಶೋತ್ಸವ ಸಮಿತಿ, ಶಾರದೋತ್ಸವ ಸಮಿತಿಯ ಸದಸ್ಯರ ಚಟುವಟಿಕೆಗಳಿಗೆ ತಾಯಿಯ ಮಡಿಲಿದ್ದಂತೆ... ಒಮ್ಮೆ 1992ರ ಮುಸ್ಲಿಂ ಸಹೋದರರ ಧಾರ್ಮಿಕ ಕಟ್ಟಡಕ್ಕೆ ಧಕ್ಕೆಯಾದಾಗ ಅವರು ಅವರ ನಮಾಜಿಗೆ ಈ ದೇವಸ್ಥಾನದ ಜಗುಲಿಯನ್ನು ಬಳಸುವಂತೆ ಹಿಂದೂ ಬಂಧುಗಳು ಆಹ್ವಾನಿಸಿದ್ದು, ಈ ಊರಿನ ಮತೀಯ ಸಾಮರಸ್ಯಕ್ಕೆ ಹೆಗ್ಗುರುತುಗಾಗಿದೆ. ಶ್ರೀ ದೇವಿಯು ಇಡೀ ಊರಿನ ದೇವಿ; ಅಮ್ಮ! ಆಕೆಗೆ ಅವ ಬೇರೆ, ಇವ ಬೇರೆ ಎಂದಿಲ್ಲ"(ಲೇ: ಉಪ್ಪುಂದ ಚಂದ್ರಶೇಖರ ಹೊಳ್ಳ, 2009, ಪು-73) ಎಂಬ ಉಲ್ಲೇಖವು-ದೇವಸ್ಥಾನವು ಗ್ರಾಮದಲ್ಲಿ ಹೇಗೆ ಮತ್ತು ಏಕೆ? ಮಹತ್ವ ಪಡೆದಿದೆ ಎಂಬ ಉತ್ತರವನ್ನು ನೀಡುತ್ತಿದೆ.

ಧಾರ್ಮಿಕವಾಗಿ, ಸಾಂಸ್ಕೃತಿಕವಾಗಿ, ಸಾಹಿತ್ಯಕವಾಗಿ ವಿಶೇಷವಾಗಿ ಹೆಸರು ಮಾಡಿದ ಉಡುಪಿ ಜಿಲ್ಲೆಯ ಕೋಟೇಶ್ವರದ ಪ್ರಸಿದ್ಧ ದೇವಸ್ಥಾನವೇ ಕೋಟಿಲಿಂಗೇಶ್ವರ ದೇವಸ್ಥಾನ. ಈ ದೇವಸ್ಥಾನವು 1943ರಲ್ಲಿ ಅಸ್ತಿತ್ವಕ್ಕೆ ಬಂದ ಇಲ್ಲಿಯ ಸರಸ್ವತಿ ಕಲಾ

ಸೇವಾ ಸಂಘ, 1932ರಲ್ಲಿ ಅಸ್ತಿತ್ವಕ್ಕೆ ಬಂದಿದ್ದ ಕೋಟಿಲಿಂಗೇಶ್ವರ ನಾಟಕ ಕಂಪೆನಿ, ಈ ಎರಡೂ ಸಂಸ್ಥೆಗಳಿಗೆ ವಿಶೇಷ ಬೆಂಬಲ ಹಾಗೂ ಪ್ರೋತ್ಸಾಹವನ್ನು ನೀಡಿತ್ತು. ನಾಟಕದ ರಂಗಸಜ್ಜಿಕೆ, ಪರಿಕರಗಳಿಗೆ ದೇವಸ್ಥಾನವೇ ಆಶ್ರಯವಾಗಿತ್ತು. ಇಲ್ಲಿನ ಅನುಭವಗಳಿಂದ ಬೆಳೆದು, ಸಾಹಿತ್ಯ ಕ್ಷೇತ್ರಕ್ಕೆ ಕಾಲಿಟ್ಟ ಅನೇಕ ವಿದ್ವಾಂಸರು ಕರ್ನಾಟಕದಾದ್ಯಂತ ಇಂದು ಗುರುತಿಸಿಕೊಂಡಿದ್ದಾರೆ. (ವಿವರಗಳಿಗಾಗಿ ಶ್ರೀ ಕ್ಷೇತ್ರ ಕೋಟೇಶ್ವರ, ಲೇ: ಕೆ.ಎನ್. ಉಡುಪ, ಪುಟ ಸಂಖ್ಯೆ: 160ನ್ನು ಗಮನಿಸಬಹುದು) ಈ ಪರಿಸರದಲ್ಲಿ ಹುಟ್ಟಿ, ಶಿಕ್ಷಣ ಪಡೆದು, ಇಲ್ಲಿಯ ಅನುಭವಗಳನ್ನೇ ತಮ್ಮ ಸಾಹಿತ್ಯಕೃತಿಗಳಲ್ಲಿ ದುಡಿಸಿಕೊಂಡು ರಾಜ್ಯ ಮಟ್ಟದಲ್ಲಿ ಗುರುತಿಸಿಕೊಂಡ ಕಾದಂಬರಿಕಾರ ಹಾಗೂ ಸಣ್ಣಕಥೆಗಾರ ಶ್ರೀ ಜಿ.ಕೆ. ಐತಾಳರು "ದೇವಸ್ಥಾನದ ರಥಬೀದಿಯ ಅನುಭವವೇ ನನ್ನನ್ನು ಈ ಎತ್ತರಕ್ಕೆ ಬೆಳೆಸಿದೆ" ಎಂದು ತಮ್ಮ ನೆನಪನ್ನು ಮೌಖಿಕ ಸಂದರ್ಶನದ ಸಂದರ್ಭದಲ್ಲಿ ಹಂಚಿಕೊಂಡಿದ್ದಾರೆ.

3) **ಧಾರ್ಮಿಕ, ಸಾಂಸ್ಕೃತಿಕ, ಶೈಕ್ಷಣಿಕ ಸಹಿತ ಸಾಹಿತ್ಯಕ ಮತ್ತು ಇತರ ಸಾಮಾಜಿಕ ಚಟುವಟಿಕೆಗಳೊಂದಿಗೆ ಗುರುತಿಸಿಕೊಂಡ ದೇವಸ್ಥಾನಗಳ ಹೆಸರುಗಳು ಹೀಗಿವೆ:** 1) ಶ್ರೀ ಜನಾರ್ದನ ಮತ್ತು ಮಹಾಕಾಳಿ ದೇವಸ್ಥಾನ, ಅಂಬಲಪಾಡಿ 2) ಶ್ರೀ ವಿಶ್ವೇಶ್ವರ ದೇವಸ್ಥಾನ, ಎಲ್ಲೂರು 3) ಶ್ರೀ ಸಿದ್ಧಿವಿನಾಯಕ ದೇವಸ್ಥಾನ, ಹಟ್ಟಿಯಂಗಡಿ 4) ಶ್ರೀಕೃಷ್ಣ ಮಠ/ದೇವಸ್ಥಾನ, ಉಡುಪಿ-ಈ ನಾಲ್ಕು ದೇವಾಲಯಗಳನ್ನು ಈ ಶೀರ್ಷಿಕೆಯಲ್ಲಿ ಉಲ್ಲೇಖಿಸಬಹುದಾಗಿದೆ.

**ಅಂಬಲಪಾಡಿ ದೇವಸ್ಥಾನ:** ವಾರೀಸು ಹಕ್ಕಿನ ವ್ಯಾಪ್ತಿಯಲ್ಲಿ ಬರುವ ಅಂಬಲಪಾಡಿ ದೇವಾಲಯದ ಮುಖ್ಯ ಆಡಳಿತಗಾರರು ಬಲ್ಲಾಳ ಮನೆತನದವರಾಗಿರುತ್ತಾರೆ. ಧಾರ್ಮಿಕ ಮತ್ತು ದತ್ತಿ ಇಲಾಖೆಯ ಅಧೀನಕ್ಕೊಳಪಟ್ಟ ಈ ದೇವಾಲಯವು ಸರಕಾರದ ಇಲಾಖೆಯಿಂದ ಸಾಕಷ್ಟು ಆಡಳಿತಾತ್ಮಕ ಆಕ್ಷೇಪಗಳ ನಡುವೆಯೂ ಸಾಹಿತ್ಯಕ, ಸಾಂಸ್ಕೃತಿಕ, ಸಾಮಾಜಿಕ ಜಾಗೃತಿಯ ವಿವಿಧ ಕಾರ್ಯಚಟುವಟಿಕೆಗಳನ್ನು ಹಮ್ಮಿಕೊಂಡು, 20ನೇ ಶತಮಾನದ ಉತ್ತರಾರ್ಧದಲ್ಲಿ ಉಡುಪಿ ಜಿಲ್ಲೆಯ ಸಾಹಿತ್ಯ ಅಭಿಮಾನಿಗಳ ವಿಶೇಷ ಅಭಿನಂದನೆಗೆ ಪಾತ್ರವಾಗಿದೆ. ಪುಸ್ತಕಪ್ರಕಟನೆ, ಸಾಹಿತ್ಯಗೋಷ್ಠಿಗೆ ಆರ್ಥಿಕ ಸಹಕಾರ, ದೇವಸ್ಥಾನದಲ್ಲಿ ಹಮ್ಮಿಕೊಳ್ಳುವ ಸಾಹಿತ್ಯ ಚಟುವಟಿಕೆಗಳಿಗೆ ಉಚಿತ ಸಭಾಭವನ ಹಾಗೂ ಮತ್ತಿತರ ಸಹಕಾರ (ಆಸನ, ವೇದಿಕೆ, ಬೆಳಕು, ಊಟೋಪಚಾರ ಇತ್ಯಾದಿ, ಇತ್ಯಾದಿ)ಗಳನ್ನು ನೀಡುವುದರಲ್ಲಿ ಮೂಂಚೂಣಿಯಲ್ಲಿ ನಿಂತಿದೆ. ದೇವಸ್ಥಾನದ ಒಟ್ಟು ಆದಾಯದಲ್ಲಿ ಶೇ. 15ರಷ್ಟು ಮೊತ್ತವನ್ನು ಸಾರ್ವಜನಿಕರ ಅನುಕೂಲಕ್ಕಾಗಿ ವಿನಿಯೋಗಿಸಬೇಕೆಂಬ ಇಲಾಖೆಯ ನಿಯಮಾವಳಿಯಂತೆ ಈ ಮೊತ್ತದಲ್ಲಿ ಬಹು ಅಂಶವನ್ನು ದೇಗುಲವು ಸಾಹಿತ್ಯ ಚಟುವಟಿಕೆಗಳಿಗಾಗಿ ವಿನಿಯೋಗಿಸಿಕೊಂಡು ಬಂದಿದೆ.

ಈ ದೇವಸ್ಥಾನದ ಇನ್ನೊಂದು ಶೈಕ್ಷಣಿಕ ಚಟುವಟಿಕೆಯಾಗಿ ಗುರುತಿಸಬೇಕಾದುದೆಂದರೆ ಜಿಲ್ಲೆಯ ಮುಖ್ಯ ಕಾಲೇಜುಗಳೆಂದು ಗುರುತಿಸಿಕೊಂಡ, ಕನ್ನಡ ಸಾಹಿತ್ಯ ಚಟುವಟಿಕೆಗಳಿಗೆ ವಿಶೇಷ ಪ್ರೋತ್ಸಾಹ ನೀಡುವ ಕಾಲೇಜುಗಳಲ್ಲಿ ದೇವಸ್ಥಾನದ ವತಿಯಿಂದ ನಿರ್ದಿಷ್ಟ ಮೊತ್ತದ ನಿರಖು ಠೇವಣಿಯನ್ನಿಟ್ಟು ಆ ಮೊತ್ತದ ಬಡ್ಡಿಯಲ್ಲಿ ವರ್ಷಂಪ್ರತಿ ಸಾಹಿತ್ಯಚಟುವಟಿಕೆಗಳನ್ನು ನಿರ್ವಹಿಸಿಕೊಂಡು ಬರುವುದಕ್ಕೆ ಪ್ರೋತ್ಸಾಹ ನೀಡಿರುವುದು. ಹೀಗೆ ಧನ ಸಹಾಯ ಪಡೆದ ಕಾಲೇಜುಗಳ ಹೆಸರುಗಳು ಹೀಗಿವೆ: ಎಂ.ಜಿ.ಎಂ. ಕಾಲೇಜು, ಉಡುಪಿ, ಪೂರ್ಣಪ್ರಜ್ಞ ಕಾಲೇಜು, ಉಡುಪಿ, ಎಸ್.ಎಮ್.ಎಸ್. ಕಾಲೇಜು, ಬ್ರಹ್ಮಾವರ, ಭಂಡಾರ್‌ಕಾರ್ಸ್ ಕಾಲೇಜು, ಕುಂದಾಪುರ, ಶ್ರೀ ಶಾರದಾ ಕಾಲೇಜು, ಬಸ್ರೂರು

(ಈ ಕುರಿತ ಮಾಹಿತಿ ಆಯಾ ಕಾಲೇಜುಗಳ ವಾರ್ಷಿಕ ಸಂಚಿಕೆಗಳಲ್ಲಿ ಲಭ್ಯವಾಗಿವೆ).

ಹಣಕಾಸಿನ ಸಮಸ್ಯೆಯಿಂದ ಪ್ರಕಟಗೊಳ್ಳದೇ ಉಳಿದಿರುವ ಅದೆಷ್ಟೋ ಸಂಶೋಧನಗ್ರಂಥಗಳು ಪ್ರಕಟಗೊಳ್ಳುವುದಕ್ಕೆ ಹಿಂದಿನ ಧರ್ಮದರ್ಶಿಗಳಾದ ದಿ। ಅಣ್ಣಾಜಿ ಬಲ್ಲಾಳ ಅವರು ಆರ್ಥಿಕ ಸಹಾಯವನ್ನು ನೀಡಿದ ನಿದರ್ಶನಗಳಿವೆ. ಬರಹಗಾರರಿಗೆ ಮಾತ್ರವಲ್ಲದೆ ಸಾಹಿತ್ಯಸಂಸ್ಥೆಗಳಿಗೂ ಆರ್ಥಿಕಸಹಕಾರದೊಂದಿಗೆ ಸಾಹಿತ್ಯ ಚಟುವಟಿಕೆಗಳಿಗೆ ಪ್ರೋತ್ಸಾಹ ನೀಡುತ್ತಿದ್ದರು. ಸಾಹಿತ್ಯ, ಸಾಂಸ್ಕೃತಿಕ ಚಟುವಟಿಕೆಗಳು ಸಮಾಜದ ಸ್ವಾಸ್ಥ್ಯವನ್ನು ವೃದ್ಧಿಸುತ್ತವೆ ಎಂಬ ಧೋರಣೆಯೇ ಈ ತೆರನಾದ ಸಾಹಿತ್ಯಚಟುವಟಿಕೆಗಳ ಪ್ರೋತ್ಸಾಹಕ್ಕೆ ಕಾರಣವಾಗಿವೆ. 'ದ.ಕ. ಜಿಲ್ಲೆಯ ದೇವಾಲಯಗಳು' ಎಂಬ ಗ್ರಂಥವನ್ನು ಕರ್ನಾಟಕ ಸರಕಾರದ ಧಾರ್ಮಿಕ ದತ್ತಿ ಇಲಾಖೆಯ ಅನುದಾನದ ಕೃಪೆಯಿಂದ ದೇವಸ್ಥಾನದ ವತಿಯಿಂದ ಪ್ರಕಟಗೊಳಿಸಿದ್ದು, "ಮುಂದಿನ ಅಧ್ಯಯನ, ಸಂಶೋಧನೆ ಹಾಗೂ ಸಂರಕ್ಷಣೆ ಯೋಜನೆಗಳಿಗೆ ಪ್ರೇರಣೆ ನೀಡಬಲ್ಲ ಗ್ರಂಥ" ಎಂಬ ಆಶಯದ ನುಡಿಯಲ್ಲಿ ಸಾಂಸ್ಕೃತಿಕ ಕಾಳಜಿ, ಸಾಹಿತ್ಯಕ ಪ್ರೀತಿ, ಸಂಶೋಧನೆ ಬಗೆಗೆ ಅವರಿಗಿದ್ದ ಒಲವು ಎದ್ದು ಕಾಣುತ್ತದೆ.

**ಎಲ್ಲೂರು ವಿಶ್ವನಾಥ ದೇವಸ್ಥಾನ:** ಇದು ಕರ್ನಾಟಕ ಸರಕಾರದ ಧಾರ್ಮಿಕ ದತ್ತಿ ಇಲಾಖೆಯ ಆಯುಕ್ತರ ಆಡಳಿತಕ್ಕೊಳಪಟ್ಟಿದ್ದರೂ ದೇವಸ್ಥಾನದ ಆದಾಯದಿಂದ ಯಾವುದೇ ಹಣಕಾಸನ್ನು ನಿರೀಕ್ಷಿಸದೇ ಸ್ಥಳೀಯ ಯುವಕಮಂಡಲದ ಮತ್ತು ಧರ್ಮದರ್ಶಿಗಳ ಜಂಟಿಕೂಡುವಿಕೆಯಲ್ಲಿ ವಿವಿಧ ಕಾರ್ಯಕ್ರಮಗಳನ್ನು ವರ್ಷದುದ್ದಕ್ಕೂ ನಿರ್ವಹಿಸಿಕೊಂಡು ಬರುವ ಉಡುಪಿ ಜಿಲ್ಲೆಯ ಪ್ರಮುಖ ದೇವಸ್ಥಾನವಾಗಿದೆ. ಕೇವಲ ಸಾಹಿತ್ಯ ಮತ್ತು ಸಾಂಸ್ಕೃತಿಕ ಚಟುವಟಿಕೆಗಳು ಮಾತ್ರವಲ್ಲದೆ ಕ್ರೀಡೆ ಮತ್ತು ಆರೋಗ್ಯಕ್ಕೆ ಸಂಬಂಧಿಸಿದ ವಿವಿಧ ಕಾರ್ಯಕ್ರಮಗಳಿಗೂ ದೇವಸ್ಥಾನವು ವೇದಿಕೆಯಾಗಿದೆ ಎನ್ನುವುದು ದೇವಸ್ಥಾನದ ಕಛೇರಿಯಲ್ಲಿ ಲಭ್ಯವಾಗುವ ಕರಪತ್ರ ಮತ್ತು ಆಮಂತ್ರಣ ಪತ್ರಗಳಿಂದ ತಿಳಿದುಬರುತ್ತದೆ. ಈ ದೇವಸ್ಥಾನದ ಬಿಂಬ ಮತ್ತು ಕಟ್ಟಡದ ವಾಸ್ತುರಚನೆಯ ಕುರಿತು 1973ರಲ್ಲಿ ಆಳವಾಗಿ ಅಧ್ಯಯನ ನಡೆಸಿದ ಪ್ರೊ. ಗುರುರಾಜ ಭಟ್ ಅವರು ತಮ್ಮ ಅಧ್ಯಯನದಲ್ಲಿ ಗುರುತಿಸಿದಂತೆ "ಎಲ್ಲೂರು ವಿಶ್ವನಾಥ ದೇವಾಲಯವು ಕ್ರಿ.ಶ. 11ನೇ ಶತಮಾನದಷ್ಟಾದರೂ ಪ್ರಾಚೀನವಿರಬಹುದು. ಕುಂದ ಹೆಗ್ಗಡೆಯೇ ಈ ದೇವಸ್ಥಾನದ ಮುಖ್ಯ ಆಡಳಿತಗಾರನಾಗಿದ್ದ ಅಥವಾ ಅವನ ಕೈಕೆಳಗೆ ಬಂದಿತ್ತು" ಎಂಬ ವಿಚಾರವನ್ನು ನವಯುಗ ಪತ್ರಿಕೆಯ ಸಂಪುಟ 52, ಸಂಚಿಕೆ 29ರಲ್ಲಿ (ದಿನಾಂಕ 22.03.1973ರ) ದಾಖಲಿಸಿದ್ದಾರೆ.

ಧಾರ್ಮಿಕ ಚೌಕಟ್ಟಿನ ಸೀಮಿತ ಪರಿಧಿಯೊಳಗೆ ತಮ್ಮ ಕಾರ್ಯಚಟುವಟಿಕೆಗಳನ್ನು ಮಿತಗೊಳಿಸಿಕೊಳ್ಳದೆ ದೇವಸ್ಥಾನವು ಸರ್ವ ಜನರ–ಜನಾಂಗದ ಐಹಿಕ ಸುಖದ ಅಭ್ಯುದಯಕ್ಕಾಗಿ ಹೋರಾಡುತ್ತಿರುವ ಸಾಮಾಜಿಕ ಕಳಕಳಿಯುಳ್ಳ ಒಂದು ಪ್ರಗತಿಪರ ಸಂಸ್ಥೆಯಾಗಿ ತನ್ನ ಕಾರ್ಯಕ್ಷೇತ್ರವನ್ನು ವಿಸ್ತರಿಸಿಕೊಂಡಿದೆ ಎಂಬೀ ವಿಚಾರವನ್ನು ಅಧ್ಯಯನದಲ್ಲಿ ಗುರುತಿಸಲಾಗಿದೆ. ಆಡಳಿತ ಧರ್ಮದರ್ಶಿಯಾಗಿರುವ ಸದಸ್ಯರು ಸಾಹಿತ್ಯಾಸಕ್ತಿ ಉಳ್ಳವರೂ, ಸಾಂಸ್ಕೃತಿಕ ಕಾರ್ಯಕ್ರಮಗಳಲ್ಲಿ ಅಭಿರುಚಿಯುಳ್ಳವರೂ ಆಗಿದ್ದು, ದೇವಸ್ಥಾನದ ವೇದಿಕೆಯಲ್ಲಿ ಸಾಹಿತ್ಯ ಚಟುವಟಿಕೆಗಳಿಗೆ ಅನುವು ಮಾಡಿಕೊಡುತ್ತಿದ್ದಾರೆ. ಧರ್ಮದರ್ಶಿಗಳ ಸಾಹಿತ್ಯಾಸಕ್ತಿಯಿಂದಾಗಿಯೇ ಸ್ಥಳೀಯ ಯುವಕಮಂಡಲದ ಸದಸ್ಯರು ದೇವಸ್ಥಾನದಲ್ಲಿ ಸಾಂಸ್ಕೃತಿಕ ಚಟುವಟಿಕೆಗಳನ್ನು ನಡೆಸಲು ಉತ್ಸುಕರಾಗಿರುತ್ತಾರೆ ಎನ್ನುವುದನ್ನು ಅಧ್ಯಯನದ ಮೂಲಕ ಕಂಡುಕೊಳ್ಳಲಾಗಿದೆ.

**ಹಟ್ಟಿಯಂಗಡಿ ಶ್ರೀ ಸಿದ್ಧಿವಿನಾಯಕ ದೇವಸ್ಥಾನ:** ವಾರೀಸುಹಕ್ಕಿನ ದೇವಸ್ಥಾನದ ವರ್ಗವಿಭಾಗದಲ್ಲಿ ಸೇರ್ಪಡೆಗೊಂಡ ಈ ದೇವಸ್ಥಾನವು ಕುಂದಾಪುರ ಪರಿಸರದಲ್ಲಿಯೇ ಮಾತ್ರವಲ್ಲದೆ ಉಡುಪಿ ಜಿಲ್ಲೆಯಲ್ಲಿಯೇ ಸಾಹಿತ್ಯ ಚಟುವಟಿಕೆಗಳಿಗೆ ಗರಿಷ್ಠ ಪ್ರಾಮುಖ್ಯವನ್ನು ನೀಡುತ್ತಾ ಬಂದ ದೇಗುಲವಾಗಿದೆ. ಆಡಳಿತ ಧರ್ಮದರ್ಶಿಯವರು ಸಾಹಿತ್ಯವಿಷಯಗಳಲ್ಲಿ ಆಸಕ್ತರೆಂದಾದಲ್ಲಿ ದೇವಸ್ಥಾನದಂತಹ ಧಾರ್ಮಿಕ ಆವರಣವನ್ನು ಸಾಹಿತ್ಯಚಟುವಟಿಕೆಗಳಿಗೆ ಹೇಗೆ ಬಳಸಿಕೊಳ್ಳಬಹುದೆಂಬುದಕ್ಕೆ ಹಟ್ಟಿಯಂಗಡಿ ಸಿದ್ಧಿವಿನಾಯಕ ದೇವಸ್ಥಾನವು ಅಪೂರ್ವನಿದರ್ಶನವೆನ್ನಬಹುದು.

ಕೇವಲ ಸಾಂಸ್ಕೃತಿಕ ಚಟುವಟಿಕೆಗಳಿಗಾಗಿಯೇ ದೇವಸ್ಥಾನದ ವೇದಿಕೆಯು ಮೀಸಲಾಗಿರದೆ ಉನ್ನತಶಿಕ್ಷಣ ಸಂಸ್ಥೆಗಳಲ್ಲಿ ನಡೆಯುವ ಸಾಹಿತ್ಯಗೋಷ್ಠಿ, ಸಂವಾದ, ಚರ್ಚೆ, ಕಮ್ಮಟಗಳಿಗೆ ದೇಗುಲವು ಅವಕಾಶವನ್ನು ಕೊಟ್ಟಿದೆ. ಈ ಕಮ್ಮಟಗಳ ನಿರ್ವಹಣೆಗಾಗಿ ಜಿಲ್ಲೆಯಿಂದ ಮತ್ತು ಜಿಲ್ಲೆಯ ಹೊರಗಿನಿಂದ ಸಂಪನ್ಮೂಲವ್ಯಕ್ತಿಗಳು ಆಗಮಿಸಿ, ವಿದ್ವತ್ಪೂರ್ಣ ಉಪನ್ಯಾಸಗಳನ್ನು ನಡೆಸಿಕೊಟ್ಟ ಬಗೆಗೂ, ಸಂವಾದ-ಚರ್ಚೆಗಳಲ್ಲಿ ಪಾಲ್ಗೊಂಡ ಬಗೆಗೂ ದೇವಸ್ಥಾನದಲ್ಲಿ ದಾಖಲೆಗಳಿವೆ. ದೇವಸ್ಥಾನದ ದಾಖಲೆಗಳಿಂದ ಲಭ್ಯವಾಗುವಂತೆ ಇಲ್ಲಿಯ ಪ್ರಮುಖ ಸಾಹಿತ್ಯ ಚಟುವಟಿಗಳನ್ನು ಹೀಗೆ ಸಂಗ್ರಹಿಸಬಹುದಾಗಿದೆ:

1) **ಸಾರ್ಥಕ ಕಮ್ಮಟ:-** ದಿನಾಂಕ 14.11.1992 ರಂದು 'ಉದಯವಾಣಿ' ಪತ್ರಿಕೆಯ ವರದಿ, ಪುಟ 8-9, ವಿಷಯ: 'ಬಡಗುತಿಟ್ಟು ಯಕ್ಷಗಾನ ಸ್ತ್ರೀವೇಷ ಪರಿಕಲ್ಪನೆ'. ಭಾಗವಹಿಸಿದ ಸಂಪನ್ಮೂಲ ವ್ಯಕ್ತಿಗಳು: ಸ್ತ್ರೀವೇಷಧಾರಿ ಅರಾಟೆ ಮಂಜುನಾಥ, ಶ್ರೀಧರ ಹಂದೆ ಕೋಟ, ಎಂ. ಪ್ರಭಾಕರ ಜೋಷಿ, ಹಿರಿಯಡ್ಕ ಗೋಪಾಲ ರಾವ್, ಸುಬ್ಬಣ್ಣ ಭಟ್ ಬ್ರಹ್ಮಾವರ, ಡಾ. ವೈ. ಚಂದ್ರಶೇಖರ ಶೆಟ್ಟಿ (ಪ್ರಸಂಗಕರ್ತರು), ರಾಘವ ನಂಬಿಯಾರ್, ಪ್ರೊ. ಬಿ.ಎ. ವಿವೇಕ ರೈ, ಪ್ರೊ. ಎ.ವಿ. ನಾವಡ, ಪೂರಕಸಹಕಾರ : ಕರ್ನಾಟಕ ಜಾನಪದ ಅಕಾಡೆಮಿ ಹಾಗೂ ಉಡುಪಿಯ ಪ್ರಾದೇಶಿಕ ರಂಗ ಕಲೆಗಳ ಅಧ್ಯಯನ ಕೇಂದ್ರ ಹಾಗೂ ಯಕ್ಷಗಾನ ಕೇಂದ್ರ, ಉಡುಪಿ

2) ದಿನಾಂಕ 07.09.1992 ರಂದು 'ಕುಂದಪ್ರಭ' ಪತ್ರಿಕೆಯಲ್ಲಿ ಹಟ್ಟಿಯಂಗಡಿ ದೇವಸ್ಥಾನವು ಸಾಹಿತ್ಯ ಮತ್ತು ಸಾಂಸ್ಕೃತಿಕ ಚಟುವಟಿಕೆಗಳಿಗೆ ನೀಡುತ್ತಿರುವ ಪ್ರಾಮುಖ್ಯದ ಬಗೆಗೆ ಸುದೀರ್ಘ ಲೇಖನವು ಪ್ರಕಟಗೊಂಡಿದ್ದು, ಲೇಖನವು ಕೆ. ಕುಮಾರಸ್ವಾಮಿ ಎಂಬ ಲೇಖಕರು ನೀಡಿರುವ ವರದಿಯಾಗಿರುತ್ತದೆ.

3) ದಿನಾಂಕ 27.02.1997 ರಂದು ವಿದ್ವಾನ್ ಪೆರ್ಲ ಕೃಷ್ಣ ಭಟ್ ಅವರು ಮಹಾಭಾರತದ ಕುರಿತಂತೆ ಪ್ರವಚನ ನೀಡಿದ ವರದಿಯು ದೇವಸ್ಥಾನದ ಚಿಂತನಕೊಠಡಿಯ ಸಂಗ್ರಹದಲ್ಲಿದೆ.

4) ದಿನಾಂಕ: 31.05.1991 ರಂದು ಉದಯವಾಣಿಯಲ್ಲಿ ಪ್ರಕಟಗೊಂಡ ಆಮಂತ್ರಣ ಪತ್ರಿಕೆಯ ದಾಖಲೆಯಂತೆ ವಾರ್ಷಿಕೋತ್ಸವದ ಪ್ರಯುಕ್ತ 'ಸಂತ ಭದ್ರಗಿರಿ ಅಚ್ಯುತದಾಸ'ರಿಂದ, 01.06.1991ರಂದು ಹರಿಕಥೆ ಕಾರ್ಯಕ್ರಮ ನಡೆಯಲಿರುವ ಕುರಿತು ಉಲ್ಲೇಖವಿದೆ.

5) ದಿನಾಂಕ 06.05.1988 ರಂದು ದೇವಸ್ಥಾನದ ವತಿಯಿಂದ ಶಂಕರಜಯಂತಿ ಕಾರ್ಯಕ್ರಮದ ಪ್ರಯುಕ್ತ ಶ್ರೀ ಎಂ. ಪ್ರಭಾಕರ ಜೋಷಿ (ಯಕ್ಷಗಾನ ವಿದ್ವಾಂಸ) ಅವರ 'ಶಂಕರತತ್ತ್ವ'ದ ಕುರಿತು ಉಪನ್ಯಾಸ ನೀಡಿದರೆಂಬ ವರದಿಯು ಪತ್ರಿಕೆಯಲ್ಲಿ ಪ್ರಕಟಗೊಂಡಿದೆ.

6) ದಿನಾಂಕ 17.09.1994 ರಂದು ಉದಯವಾಣಿ ಪತ್ರಿಕೆಯ ವರದಿಯಲ್ಲಿ ಗಣೇಶಚತುರ್ಥಿಯ ಕಾರ್ಯಕ್ರಮದ ಅಂಗವಾಗಿ ಯಕ್ಷಗಾನ ಕಲಾವಿದ ಚಿಟ್ಟಾಣಿ ರಾಮಚಂದ್ರ ಹೆಗಡೆಯವರಿಗೆ ನೀಡಿದ ಸನ್ಮಾನದ ವರದಿಯು ಪ್ರಕಟಗೊಂಡಿರುತ್ತದೆ.

1985ರ ಲಾಗಾಯ್ತಿನಿಂದ ವಿವಿಧ ದಿನಪತ್ರಿಕೆಗಳಲ್ಲಿ ದೇವಸ್ಥಾನದ ಚಟುವಟಿಕೆಗಳ ವರದಿಗಳು, ದಾಖಲೆಗಳು ಲಭ್ಯವಾಗುತ್ತಿದ್ದು, ಇದು ಮುಂದಿನ ತಲೆಮಾರಿನ ಅಭ್ಯಾಸಿಗಳಿಗೆ ಆಕರವಾಗಬೇಕೆಂಬ ಕಳಕಳಿಯು ಅವರಿಗಿದೆ ಎನ್ನುವುದನ್ನು ಸೂಚಿಸುತ್ತದೆ. "ಜಿಲ್ಲಾ ಕೇಂದ್ರವಾದ ಉಡುಪಿಯಿಂದ 45 ಕಿ.ಮೀ. ಹಾಗೂ ತಾಲೂಕು ಕೇಂದ್ರ ಕುಂದಾಪುರದಿಂದ ಈಶಾನ್ಯಕ್ಕೆ ಎಂಟು ಕಿ.ಮೀ. ದೂರದಲ್ಲಿರುವ ಹಟ್ಟಿಯಂಗಡಿಗೆ ಈಗ ಒಳ್ಳೆಯ ದಾರಿಯಿದೆ... ಪ್ರಕೃತಿಯ ಸುಂದರ ಪ್ರಶಾಂತ ಮಡಿಲಿನಲ್ಲಿರುವ ಈ ಊರಿನ ಪ್ರಮುಖ ಆಕರ್ಷಣೆ ಶ್ರೀ ಸಿದ್ಧಿವಿನಾಯಕ. ಈ ದೇವಾಲಯ ಇಲ್ಲಿ ಇಲ್ಲದೇ ಹೋಗಿದ್ದರೆ ಪ್ರಾಯಶಃ ಹಟ್ಟಿಯಂಗಡಿ ಮರೆತುಹೋದ ಊರುಗಳ ಸಾಲಿಗೆ ಸೇರಿ ಶತಮಾನಗಳೇ ಉರುಳುತ್ತಿದ್ದವು."(ಲೇ: ನರಸಿಂಹಮೂರ್ತಿ ಪಿ.ಎನ್.ಡಾ. 2002, ಪು-6)

**4) ಜಾತೀಯ ಹಿತಕ್ಕೆ ಬದ್ಧವಾಗಿ-ಧಾರ್ಮಿಕ, ಶೈಕ್ಷಣಿಕ, ಸಾಂಸ್ಕೃತಿಕ ಚಟುವಟಿಕೆಗಳಲ್ಲಿ ತೊಡಗಿಕೊಂಡ ದೇವಾಲಯಗಳು:**

1) ಶ್ರೀ ಮಹಾಲಕ್ಷ್ಮೀ ದೇವಸ್ಥಾನ, ಉಚ್ಚಿಲ 2) ಶ್ರೀ ಕಾಳಿಕಾಂಬಾ ದೇವಸ್ಥಾನ, ಬಾರಕೂರು 3) ಶ್ರೀ ನಾಗೇಶ್ವರ ದೇವಸ್ಥಾನ, ಕಚ್ಚೂರು 4) ಶ್ರೀ ವೇಣುಗೋಪಾಲ ದೇವಸ್ಥಾನ ಮೂಡುಕೇರಿ, ಬಾರಕೂರು 5) ಶ್ರೀ ವಿಶ್ವನಾಥ ದೇವಸ್ಥಾನ, ಕಟಪಾಡಿ 6) ಶ್ರೀ ದುರ್ಗಾಪರಮೇಶ್ವರೀ ದೇವಸ್ಥಾನ, ಬಂಟಕಲ್ಲು 7) ಶ್ರೀ ವೀರಭದ್ರ ದೇವಸ್ಥಾನ ಕಿನ್ನಿಮೂಲ್ಕಿ.

**ಶ್ರೀ ಮಹಾಲಕ್ಷ್ಮೀ ದೇವಸ್ಥಾನ ಉಚ್ಚಿಲ:** ಇದು-ಮೊಗವೀರ ಜನಾಂಗದ ಜಾತೀಯ ದೇವಸ್ಥಾನ, ದೇವಸ್ಥಾನದ ವತಿಯಿಂದ ಶಿಕ್ಷಣಸಂಸ್ಥೆಗಳನ್ನು ನಡೆಸುತ್ತಾ ಅದೇ ಶಿಕ್ಷಣಸಂಸ್ಥೆಯ ವಿದ್ಯಾರ್ಥಿಗಳಿಗೆ ದೇವಸ್ಥಾನದ ವತಿಯಿಂದ ನಾಟಕ ತರಬೇತಿ, ಯಕ್ಷಗಾನ ತರಬೇತಿ ಮುಂತಾದ ಸಾಂಸ್ಕೃತಿಕ ಕಾರ್ಯಕ್ರಮಗಳಿಗೆ ಪ್ರಾಶಸ್ತ್ಯ ನೀಡುತ್ತಾ ಬರುತ್ತಿರುವುದನ್ನು ದೇವಸ್ಥಾನದ ವ್ಯವಸ್ಥಾಪನಸಮಿತಿಯವರು ತಿಳಿಸಿರುತ್ತಾರೆ.

**ಕಾಳಿಕಾಂಬಾ ದೇವಸ್ಥಾನ ಬಾರ್ಕೂರು:** ವಿಶ್ವಕರ್ಮ ಜನಾಂಗದ ಆರಾಧನಾ ಕೇಂದ್ರವಾಗಿದ್ದು, ಈ ದೇಗುಲದ ಗರ್ಭಗುಡಿಯ ಜಿಂಬದ ಶಿಲ್ಪವನ್ನಾಧರಿಸಿ, ದೇವಸ್ಥಾನವು ಕ್ರಿ.ಶ. ಸುಮಾರು 1400ರಲ್ಲಿ ರಚಿತಗೊಂಡಿರುವುದೆಂದು ಇತಿಹಾಸತಜ್ಞರು ಕಾಲ ನಿರ್ಧರಿಸಿರುತ್ತಾರೆ. ದೇವಸ್ಥಾನದ ವತಿಯಿಂದ ಯಾವುದೇ ಲೌಕಿಕ ಶಿಕ್ಷಣ ಸಂಸ್ಥೆಗಳು ನಡೆಸಿಕೊಂಡು ಬರುವುದಿಲ್ಲವಾದರೂ ಆಗಮಿಕ ಶಿಕ್ಷಣಕ್ಕೆ ಸಂಬಂಧಿಸಿದ ತರಗತಿಗಳನ್ನು (ವೈದಿಕಪೂಜಾಶಾಸ್ತ್ರ, ಜ್ಯೋತಿಃಶಾಸ್ತ್ರ ಇತ್ಯಾದಿ, ಇತ್ಯಾದಿ) ನಡೆಸಿಕೊಂಡು ಬರುವುದಾಗಿ ವ್ಯವಸ್ಥಾಪನಸಮಿತಿಯವರು ಮೌಖಿಕ ಸಂದರ್ಶನದ ಸಂದರ್ಭದಲ್ಲಿ ಹೇಳಿಕೊಂಡಿದ್ದಾರೆ.

**ಶ್ರೀ ನಾಗೇಶ್ವರ ದೇವಸ್ಥಾನ ಕಚ್ಚೂರು:**-ಭಂಡಾರಿ ಸಮಾಜಬಾಂಧವರ ಆರಾಧನಾ ಕೇಂದ್ರವಾಗಿದ್ದು, ಈ ದೇಗುಲದ ಪುನರುತ್ಥಾನ ಹಾಗೂ ಜೀರ್ಣೋದ್ಧಾರ ಪ್ರಕ್ರಿಯೆಗಳು 1988ರಲ್ಲಿ ಆರಂಭಗೊಂಡು ಕೇವಲ ನಾಲ್ಕು ವರ್ಷಗಳಲ್ಲಿ ಸುಸಜ್ಜಿತ ದೇವಾಲಯವು ನಿರ್ಮಾಣಗೊಂಡಿತು. 1988ರಿಂದಲೇ 'ಕಚ್ಚೂರುವಾಣಿ' ಎಂಬ ಮಾಸಪತ್ರಿಕೆಯನ್ನು ದೇವಸ್ಥಾನದ ವತಿಯಿಂದಲೇ ಆರಂಭಿಸಿ, ಜನಾಂಗದ ಆಸ್ತಿಕಭಕ್ತರಿಗೆ ವಿತರಿಸುವ ವ್ಯವಸ್ಥೆ ದೇಗುಲದ ವತಿಯಿಂದ ನಡೆದುಕೊಂಡು ಬರುತ್ತಿದೆ. "ಭಂಡಾರಿ ಸಮಾಜದ ಎಲ್ಲಾ ಸಂಘಟನೆಗಳು ಶ್ರೀ ನಾಗೇಶ್ವರ ದೇಗುಲದ ಜೊತೆಜೊತೆಗೆ ಭಂಡಾರಿ ಸಮಾಜದ ಅಭಿವೃದ್ಧಿಯತ್ತ

ವಿಶೇಷ ಗಮನ ನೀಡಬೇಕಿದೆ. ಜನೋಪಯೋಗಿ ಕಾರ್ಯಕ್ರಮದ ಮೂಲಕ ಆರ್ಥಿಕವಾಗಿ ಕೆಳಸ್ತರದಲ್ಲಿರುವವರ ಆರೋಗ್ಯ ಮತ್ತು ಶಿಕ್ಷಣ ವಂಚಿತ ಕುಟುಂಬಗಳ ಆಸರೆಯಾಗಿ ನಿಲ್ಲಬೇಕಿದೆ. ಈ ಮೂಲಕ ಎಲ್ಲರಿಗೂ ಮಾದರಿಯಾಗಬೇಕಾಗಿದೆ."(ಸಂ: ಶ್ರೀಧರ ಭಂಡಾರಿ, 2015, ಸಂಪುಟ–17) ಈ ಹೇಳಿಕೆಯು ಸಮಾಜದ ಧ್ಯೇಯ ಧೋರಣೆಯನ್ನು, ಪತ್ರಿಕೆಯ ಅವಶ್ಯಕತೆಯನ್ನು ಸ್ಪಷ್ಟವಾಗಿ ಧ್ವನಿಸುತ್ತಿದೆ. 'ಶ್ರೀ ಕ್ಷೇತ್ರ ಕಚ್ಚೂರು ನಾಗೇಶ್ವರ ಮಹಿಮಾ' ಎಂಬ ಸ್ಥಳಚರಿತ್ರೆಯ ಕುರಿತು ಮಾಹಿತಿ ನೀಡುವ ಕಿರು ಹೊತ್ತಗೆಯನ್ನು ದೇವಸ್ಥಾನವು ಪ್ರಕಟಿಸಿದ್ದು, ಈ ಕೃತಿಯ ಲೇಖಕರಾದ ಅನಂತರಾಮ ಬಂಗಾಡಿಯವರು "ಸಮಾಜಬಾಂಧವರ ಕುಲದೇವರಾದ ಈ ನಾಗೇಶ್ವರನ ಪುಣ್ಯಚರಿತ್ರೆಯನ್ನು ಭಕ್ತ–ಬಾಂಧವರು ಅರಿಯುವ ಸದುದ್ದೇಶದಿಂದ ಇದನ್ನು ಸಂಗ್ರಹಿಸಿ, ಬರೆದಿರುತ್ತೇನೆ" ಎಂದು ತಮ್ಮ ಉದ್ದೇಶವನ್ನು ಹೇಳಿಕೊಂಡಿದ್ದಾರೆ.

**ಶ್ರೀ ವೇಣುಗೋಪಾಲಕೃಷ್ಣ ದೇವಸ್ಥಾನ ಮೂಡುಕೇರಿ, ಬಾರಕೂರು:** ಬಾರಕೂರಿನ ಶ್ರೀ ವೇಣುಗೋಪಾಲಕೃಷ್ಣ ದೇವಸ್ಥಾನವು ಸೋಮಕ್ಷತ್ರಿಯ ಜನಾಂಗದ ಆಡಳಿತಕ್ಕೊಳಪಟ್ಟಿದ್ದು, ಈ ಜನಾಂಗದ ಕುಲದೇವರು ಗೋಪಾಲಕೃಷ್ಣನಾಗಿರುತ್ತಾನೆ. ಈ ಸಮಾಜಬಾಂಧವರು 1927ರಷ್ಟು ಹಿಂದೆಯೇ ಗೋಪಾಲಕೃಷ್ಣ ಯುವಕಸಂಘ ಎಂಬ ಹೆಸರಿನಲ್ಲಿ ಒಕ್ಕೂಟವನ್ನು ರಚಿಸಿ, ಕಾರ್ಯಚಟುವಟಿಕೆಯನ್ನಾರಂಭಿಸಿದರೂ ಮುಂದೆ ಜನಾಂಗದವರ ನಿರ್ಲಕ್ಷ್ಯದಿಂದಾಗಿ ಸಂಘವು ನಿಷ್ಕ್ರಿಯಗೊಂಡಿತೆಂದು ತಿಳಿದುಬರುತ್ತದೆ. 1976ರಲ್ಲಿ ಜನಾಂಗವು ತಮ್ಮ ಸಂಘಟನೆಯ ಚಟುವಟಿಕೆಗಳಿಗೆ 25 ವರ್ಷ ಪೂರ್ಣಗೊಂಡ ಸಂದರ್ಭದಲ್ಲಿ 'ರಜತಾಂಜಲಿ'ಎಂಬ ಸ್ಮರಣಸಂಚಿಕೆಯನ್ನು ಪ್ರಕಟಿಸಿರುತ್ತಾರೆ. ಸ್ಮರಣಸಂಚಿಕೆಯ ಸಂಪಾದಕೀಯದಲ್ಲಿ ಸಂಚಿಕೆಯ ಸಂಪಾದಕರಾದ ದಿ। ಕೆ. ಆನಂದ ಗಾಣಿಗ ಅವರು "ಸಮಾಜದ ಯುವ ಪೀಳಿಗೆಯು ಶೈಕ್ಷಣಿಕ ರಂಗದಲ್ಲಿ ಮುಂದುವರಿಯಬೇಕಾದುದು ಆದ್ಯತೆಯ ಅವಶ್ಯಕತೆಯೆಂದು ಸಂಘ ಭಾವಿಸಿದೆ. ಶೈಕ್ಷಣಿಕವಾಗಿ ಮುಂದುವರಿದರೆ ಮಾತ್ರ ಸಮಾಜ ಇನ್ನುಳಿದ ರಂಗಗಳಲ್ಲಿ ಪ್ರಗತಿಗೊಳಿಸಲು ಸಾಧ್ಯ"(ಸಂ: ಆನಂದ ಗಾಣಿಗ ಕೆ., 1976, ಸಂಪಾದಕೀಯ) ಎಂದು ಕಂಡುಕೊಂಡು, ಇದಕ್ಕೆ ಪೂರಕವಾದ ಯೋಜನೆಗಳನ್ನು ಸಂಘವು ಹಾಕಿಕೊಳ್ಳಬೇಕಾಗಿದೆ ಎಂದು ಕರೆಕೊಟ್ಟಿದ್ದಾರೆ.

ಸಂಘವು ಹಾಕಿಕೊಂಡ ಯೋಜನೆಯಂತೆ ಸಮಾಜಬಾಂಧವರ ಸುದ್ದಿ–ಸಮಾಚಾರಗಳನ್ನು ಬಿತ್ತರಿಸಲು 'ಸಂಪರ್ಕಸುಧಾ' ಎಂಬ ಪತ್ರಿಕೆ, ವಿದ್ಯಾರ್ಥಿಗಳಿಗೆ ವಿದ್ಯಾರ್ಥಿವೇತನ ಮತ್ತು ಆ ಪತ್ರಿಕೆಯಲ್ಲಿ ಸಮಾಜಬಾಂಧವರ ಸೃಜನಚಟುವಟಿಕೆಗಳಿಗೆ ಅವಕಾಶ ಕಲ್ಪಿಸಿ, ಅವರ ಪ್ರತಿಭೆಯನ್ನು ಗುರುತಿಸುವ ಕಾರ್ಯಯೋಜನೆಗೆ ಸಂಘವು ಮುಂದಾಗುತ್ತಿದೆ. ಜನಾಂಗದ ಶೈಕ್ಷಣಿಕ ಉನ್ನತಿಯನ್ನು ಸಾಧಿಸುವುದಕ್ಕಾಗಿ ದಿನಾಂಕ 07.11.1993 ರಂದು 'ವೇಣುಗೋಪಾಲ ಎಜ್ಯುಕೇಶನಲ್ ಸೊಸೈಟಿ' ಎಂಬ ಸಂಸ್ಥೆಯನ್ನು ಸ್ಥಾಪಿಸಿ, ನೋಂದಾಯಿಸಿ, ಆ ಮೂಲಕ ಜನಾಂಗದ ಆಢ್ಯರಿಂದ ಆರ್ಥಿಕ ಸಂಪನ್ಮೂಲಗಳನ್ನು ಸಂಗ್ರಹಿಸಿ, ವಿದ್ಯಾರ್ಥಿವೇತನವನ್ನು ವಿತರಿಸುತ್ತಿದ್ದಾರೆ. ಸ್ಥಳೀಯ ಪದವಿ ಕಾಲೇಜಿನ ವಿದ್ಯಾರ್ಥಿಗಳಿಗೆ 1998ರಿಂದಲೇ ಮಧ್ಯಾಹ್ನದ ಊಟದ ವ್ಯವಸ್ಥೆಯನ್ನು ಮಾಡಿಕೊಂಡು ಬರುತ್ತಿದ್ದಾರೆ.

**ಶ್ರೀ ದುರ್ಗಾಪರಮೇಶ್ವರಿ ದೇವಸ್ಥಾನ ಬಂಟಕಲ್ಲು:** ರಾಜಾಪುರ ಸಾರಸ್ವತ ಬ್ರಾಹ್ಮಣರ ಕುಲಬಾಂಧವರ ಆಡಳಿತಕ್ಕೊಳಪಟ್ಟ ಈ ದೇವಾಲಯವು ಬಂಟಕಲ್ಲಿನಲ್ಲಿ 1942ರಲ್ಲಿ ನಿರ್ಮಾಣಗೊಂಡಿತು. "1956ರಲ್ಲಿ ರಾಷ್ಟ್ರಕವಿ ದಿವಂಗತ ಮಂಜೇಶ್ವರ ಗೋವಿಂದ

ಪೈಗಳ ಉಪಸ್ಥಿತಿಯಲ್ಲಿ ಅಖಿಲಭಾರತ ರಾಜಾಪುರ ಸಾರಸ್ವತ ಸಮ್ಮೇಳನವು ಈ ಕ್ಷೇತ್ರದಲ್ಲಿ ಜರುಗಿದ್ದು, ಈ ಕ್ಷೇತ್ರದ ಇತಿಹಾಸದಲ್ಲಿ ದೊಡ್ಡ ಮೈಲಿಗಲ್ಲು" ಎಂಬ ಉಲ್ಲೇಖವು 'ಸಂಪೂರ್ಣಾನಂದ' ಎಂಬ ದೇವಸ್ಥಾನದ ವತಿಯಿಂದ ಪ್ರಕಟಗೊಂಡ ಸ್ಮರಣಸಂಚಿಕೆಯಲ್ಲಿ ಉಲ್ಲೇಖಗೊಂಡಿದೆ. ದೇಗುಲ ಸ್ಥಾಪನೆಯ ಪೂರ್ವದಲ್ಲಿಯೇ (1926ರಲ್ಲಿ) ಶಿಕ್ಷಣಕ್ಕಾಗಿ ಪ್ರಾಥಮಿಕಶಾಲೆಯ ಸ್ಥಾಪನೆಗೆ ಸ್ಥಳೀಯ ಜಾತೀಯ ಮುಖಂಡರು ಶ್ರಮಿಸಿದ್ದು, 1948ರಲ್ಲಿ ಈ ಶಾಲೆಯನ್ನು ದೇಗುಲದ ಆಡಳಿತಕ್ಕೆ ವರ್ಗಾಯಿಸಿದ ಉಲ್ಲೇಖವು ಇದೇ ಸಂಚಿಕೆಯಲ್ಲಿ ದಾಖಲುಗೊಂಡಿದೆ. 2000ನೇ ಇಸ್ವಿಯಿಂದ ದೇವಾಲಯದ ವತಿಯಿಂದ ಕನ್ನಡಸಾಹಿತ್ಯದ ಗ್ರಂಥಗಳನ್ನೊಳಗೊಂಡ ಗ್ರಂಥಾಲಯದ ವ್ಯವಸ್ಥೆಯಾಗಿದ್ದು, ಸಾಹಿತ್ಯಾಸಕ್ತರ ಪಾಲಿಗೆ ದೇವಸ್ಥಾನದ ವಿಶೇಷಕೊಡುಗೆಯಾಗಿದೆ.

ದೇವಾಲಯದ ಆಶ್ರಯದಲ್ಲಿ ಇಲ್ಲಿಯ ಪ್ರಾಥಮಿಕ ಶಾಲೆಯು ಕಾರ್ಯನಿರ್ವಹಿಸುತ್ತಿರುವುದರಿಂದ ಶಾಲಾ ವತಿಯಿಂದ ನಡೆಯುವ ವಿವಿಧ ಸಾಂಸ್ಕೃತಿಕ ಚಟುವಟಿಕೆಗಳಿಗೆ ಹಾಗೂ ವರ್ಷಾವಧಿಯಲ್ಲಿ ಆಚರಿಸುವ ವಿವಿಧ ಶೈಕ್ಷಣಿಕ ಕಾರ್ಯಕ್ರಮಗಳಿಗೆ ದೇಗುಲದ ವತಿಯಿಂದ ವಿಶೇಷಸಹಕಾರ ದೊರೆಯುತ್ತಿರುವುದರಿಂದ ಇತರ ಕನ್ನಡ ಮಾಧ್ಯಮ ಶಾಲೆಗಳಂತೆ ಈ ಶಾಲೆಯಲ್ಲಿ ವಿದ್ಯಾರ್ಥಿಗಳ ಸಂಖ್ಯೆಯಲ್ಲಿ ಇಳಿಕೆಯಾಗಿಲ್ಲ ಎನ್ನುವುದು ದೇಗುಲದ ಆಡಳಿತ ಮಂಡಳಿಯವರ ಮತ್ತು ಮುಖ್ಯೋಪಾಧ್ಯಾಯರ ಅಭಿಪ್ರಾಯವಾಗಿದೆ.

ಬಂಟಕಲ್ಲು ಶ್ರೀ ದುರ್ಗಾಪರಮೇಶ್ವರೀ ದೇವಸ್ಥಾನವೊಂದನ್ನು ಹೊರತುಪಡಿಸಿ, ಇತರೆಲ್ಲ ಜಾತೀಯ ದೇವಸ್ಥಾನಗಳು ಜಾತಿಯ ಹಿತಾಸಕ್ತಿಯನ್ನು ಕಾಪಾಡಿಕೊಳ್ಳುವುದಕ್ಕಾಗಿ ಮತ್ತು ತಮ್ಮ ಸಾಂಸ್ಕೃತಿಕವೈಶಿಷ್ಟ್ಯವನ್ನು, ಅನನ್ಯತೆಯನ್ನು, ಅಸ್ಮಿತೆಯನ್ನು ಉಳಿಸಿಕೊಂಡು ಸರಕಾರಿ ಮಟ್ಟದಲ್ಲಿ ತಮ್ಮ ಪ್ರಾಬಲ್ಯವನ್ನು ಮೆರೆಯಿಸುವುದೇ ಅವುಗಳ ಪ್ರಧಾನ ಉದ್ದೇಶವಾಗಿರುತ್ತದೆ. ಈ ಸೀಮಿತ ಧೋರಣೆಯಿಂದ ಹೊರತಾದ ಕಾರ್ಯಚಟುವಟಿಕೆಗಳನ್ನು ಬಂಟಕಲ್ಲು ಶ್ರೀ ದುರ್ಗಾಪರಮೇಶ್ವರೀ ದೇವಸ್ಥಾನದಲ್ಲಿ ಗಮನಿಸಬಹುದಾಗಿದೆ.

**ಶೆಟ್ಟಿಗಾರ–ಪದ್ಮಶಾಲಿ ಸಮಾಜ ಬಾಂಧವರ ದೇವಸ್ಥಾನ:**

**ಶ್ರೀ ವೀರಭದ್ರ ಶಾಂತಿದುರ್ಗಾ, ಮಹಾಗಣಪತಿ ದೇವಸ್ಥಾನ, ಕಿನ್ನಿಮೂಲ್ಕಿ ಉಡುಪಿ; ಸಾಂಸ್ಕೃತಿಕ ಸಾಹಿತ್ಯ ಚಟುವಟಿಕೆಗಳ ಸಂಕ್ಷಿಪ್ತ ಇತಿಹಾಸ:**

ದೇವಸ್ಥಾನದ ವತಿಯಿಂದ ಕ್ರಿ.ಶ. 2000ದಲ್ಲಿ ಪ್ರಕಟಿಸಿದ 'ಸಂಸ್ಮರಣಿಕಾ' ಎಂಬ ಸ್ಮರಣಸಂಚಿಕೆಯಲ್ಲಿ ಉಡುಪಿ ಜಿಲ್ಲೆಯ ಪದ್ಮಶಾಲಿ ಸಮಾಜವು ಕಿನ್ನಿಮೂಲ್ಕಿ ಶ್ರೀ ವೀರಭದ್ರ ದೇವಸ್ಥಾನವನ್ನು ಧಾರ್ಮಿಕ ಕೇಂದ್ರವಾಗಿ ಬೆಳೆಸುತ್ತ ಜನಾಂಗವು ಸಾಂಸ್ಕೃತಿಕವಾಗಿ ಶೈಕ್ಷಣಿಕವಾಗಿ ಹಂತಹಂತವಾಗಿ ಪ್ರಗತಿಯನ್ನು ಸಾಧಿಸಿದ ಬಗೆಯನ್ನು ದಾಖಲಿಸಿದೆ.

"ಇಪ್ಪತ್ತನೇ ಶತಮಾನದುದ್ದಕ್ಕೂ ದೇವಸ್ಥಾನದಲ್ಲಿ ಬೇರೆ ಬೇರೆ ವರ್ಷಗಳಲ್ಲಿ ನಡೆದ ಧಾರ್ಮಿಕ, ಸಾಹಿತ್ಯಕ ಹಾಗೂ ಸಾಂಸ್ಕೃತಿಕ ಚಟುವಟಿಕೆಗಳ ಇತಿಹಾಸವನ್ನು ಸಂಕ್ಷಿಪ್ತವಾಗಿ ದಾಖಲಿಸಲಾಗಿದೆ. 1948ರಲ್ಲಿ ಮೊದಲ ಬಾರಿಗೆ 'ಜೀವನ ಸಂಸಾರ', 1949ರಲ್ಲಿ 'ವ್ಯಭಿಚಾರಿಣಿ ಯಾರು?' ಹಾಗೂ 1950ರಲ್ಲಿ 'ಸತೀಧರ್ಮ' ಪೂರ್ಣಪ್ರಮಾಣದ ನಾಟಕಗಳ ಪ್ರದರ್ಶನಕ್ಕೆ ಕಾರಣವಾಗಿ ಸಾಕಷ್ಟು ಪರಿಣಿತ ತರುಣಸಮೂಹ ನಿರ್ಮಾಣಕ್ಕೂ ಸಹಾಯಕವಾಯಿತು. ಅಂತೆಯೇ ಭವಿಷ್ಯದ

ರಚನಾತ್ಮಕ ಮತ್ತು ಧನಾತ್ಮಕ ಬೆಳವಣಿಗೆಗೆ ಚಿಂತನಾಮನೋಭಾವದ ವ್ಯಕ್ತಿಸಮೂಹವನ್ನೂ ಕೂಡ ಸೃಷ್ಟಿಸಿತು"(ಸಂ: ಆನಂದ ಪದ್ಮಶಾಲಿ ಕೆ., 2000, ಪು-49) ಎಂದಿದ್ದಾರೆ. **'ಪದ್ಮಸಂಸ್ಮರಣಿಕಾ-2000'** ಎಂಬೀ ಗ್ರಂಥದಲ್ಲಿ ಬೆಂಗಳೂರಿನ ಆನಂದ ಪದ್ಮಶಾಲಿಯವರು ಇಂತಹ ಸಾಂಸ್ಕೃತಿಕ ಕಾರ್ಯಕ್ರಮಗಳಲ್ಲಿ ಜನಾಂಗದ ತರುಣರು ಭಾಗವಹಿಸುವುದರಿಂದಾಗಿ ಅವರಲ್ಲಿ ಚಿಂತನಾತ್ಮಕ ದೃಷ್ಟಿಕೋನಗಳು ವಿಕಾಸಗೊಳ್ಳುತ್ತದೆ ಎಂದು ತಮ್ಮ ಮೇಲಿನ ಹೇಳಿಕೆಯಲ್ಲಿ ಅಭಿಪ್ರಾಯಪಡುತ್ತಾರೆ.

ಜನಾಂಗವು ಶೈಕ್ಷಣಿಕ ಜಾಗೃತಿಯನ್ನು ಹೊಂದಿದ ಪ್ರಯುಕ್ತ ಸಮಾಜಭಾಂದವರಿಂದ ದಿನಾಂಕ 01.06.1997ರಲ್ಲಿ 'ಪುಸ್ತಕ ವಿತರಣೆಯ ಬೆಳ್ಳಿಹಬ್ಬ'ವನ್ನು ದೇಗುಲದ ಪರಿಸರದಲ್ಲಿ ಆಚರಿಸಲಾಯಿತು. ದೇಗುಲದಲ್ಲಿ ಸಮಾಜಬಾಂಧವರಿಂದ ಜನಾಂಗದ ವಿವಿಧಕಾರ್ಯಕ್ರಮಗಳಿಂದ ಹಬ್ಬದ ಜಾಗೃತಿಯಿಂದಾಗಿ ಪದ್ಮಶಾಲಿ ವಿದ್ಯಾರ್ಥಿಗಳು ಶೈಕ್ಷಣಿಕವಾಗಿ ಮುಂದುವರಿಯುತ್ತಿದ್ದಾರೆ. ತುಳು-ಕನ್ನಡ ಭಾಷೆಯನ್ನು ತಿಳಿದ ಸಮಾಜಬಾಂಧವರು ಈ ಭಾಷೆಯಲ್ಲಿ ಸಾಹಿತ್ಯಲೋಕಕ್ಕೆ ಮೌಲಿಕವಾದ ಕೃತಿಗಳನ್ನು ನೀಡುತ್ತಾ ಕಲೆಯ ಭಿನ್ನಭಿನ್ನ ಪ್ರಕಾರಗಳಲ್ಲಿ ತೊಡಗಿಸಿಕೊಳ್ಳುತ್ತಿದ್ದಾರೆ.

**1. ಸ್ವಜಾತಿ ಬಾಂಧವರ ಸಾಂಸ್ಕೃತಿಕ ಮಹತ್ವವನ್ನು ಮನಗಾಣಿಸುವುದಕ್ಕೆ ಬದ್ಧವಾದ ಜನಾಂಗೀಯ ದೇವಸ್ಥಾನಗಳು:**

ಉಡುಪಿ ಜಿಲ್ಲೆಯಾದ್ಯಂತ ಗೌಡಸಾರಸ್ವತ ಜನಾಂಗದಿಂದ ಆರಾಧಿಸಿಕೊಂಡು ಬರುವ ಆರಾಧನಾ ಕೇಂದ್ರಗಳನ್ನು ಶ್ರೀ ವೆಂಕಟರಮಣ ದೇವಸ್ಥಾನ, ಶ್ರೀ ಲಕ್ಷ್ಮೀವೆಂಕಟರಮಣ ದೇವಸ್ಥಾನ, ಶ್ರೀ ಮಹಾಲಸಾ ನಾರಾಯಣೀ ದೇವಸ್ಥಾನ ಎಂಬ ವಿವಿಧ ಹೆಸರುಗಳಿಂದ ಕರೆಯಲ್ಪಡುತ್ತವೆ. 'ಗೌಡಸಾರಸ್ವತ ಬ್ರಾಹ್ಮಣಸಮಾಜ ಹಿತರಕ್ಷಣಾ ವೇದಿಕೆ' ಜನವರಿ 2014ರಂದು ಚೇಂಪಿ ರಾಮಚಂದ್ರ ಭಟ್ ಅವರ ಸಂಪಾದಕತ್ವದಲ್ಲಿ ಪ್ರಕಟಿಸಿದ 'ಅನಂತ ಸೌರಭ' ಎಂಬ ಕೃತಿಯಲ್ಲಿ ಉಡುಪಿ ಜಿಲ್ಲೆಯಲ್ಲಿರುವ ಒಟ್ಟು ಗೌಡ ಸಾರಸ್ವತ ಜನಾಂಗದ ಆಡಳಿತಕ್ಕೊಳಪಟ್ಟ 81 ದೇವಸ್ಥಾನಗಳ ಸಮಗ್ರ ವಿವರಗಳಿವೆ. ಈ ದೇವಸ್ಥಾನಗಳಲ್ಲಿ ನಡೆಯುವ ಒಟ್ಟಾರೆ ವಾರ್ಷಿಕ ಚಟುವಟಿಕೆಗಳ ದೃಷ್ಟಿಯಿಂದ ಈ ದೇವಾಲಯಗಳನ್ನು ಮೂರು ವಿಭಾಗಗಳಾಗಿ ವಿಂಗಡಿಸಲಾಗಿದೆ.

**ಅ) ಧಾರ್ಮಿಕ ವಿಧಿ ಆಚರಣೆ ಹಾಗೂ ಉಪನ್ಯಾಸಕ್ಕೆ ಬದ್ಧವಾದ ದೇಗುಲಗಳು ಮತ್ತು ಮಂದಿರಗಳು:**

ಈ ಮಾದರಿಯ ದೇವಾಲಯ ಅಥವಾ ಮಂದಿರಗಳಲ್ಲಿ ಆಗಮೋಕ್ತ ರೀತಿಯಲ್ಲಿ ದೇವಸ್ಥಾನದ ಪೂಜಾಕ್ರಮಗಳು ಜರಗುತ್ತದಲ್ಲದೆ ವಿಶೇಷ ಪರ್ವದಿನಗಳಲ್ಲಿ ಧಾರ್ಮಿಕಕ್ಷೇತ್ರದಲ್ಲಿ ಸಾಕಷ್ಟು ತಜ್ಞತೆ ಇರುವ ಸಂಪನ್ಮೂಲ ವ್ಯಕ್ತಿಗಳಿಂದ ಉಪನ್ಯಾಸ ಕಾರ್ಯಕ್ರಮಗಳು ಏರ್ಪಡುತ್ತವೆ. ಜಿಲ್ಲೆಯಲ್ಲಿರುವ 89% ದೇವಸ್ಥಾನ ಮತ್ತು ಮಂದಿರಗಳು ಈ ವ್ಯಾಪ್ತಿಯೊಳಗೇ ಬರುತ್ತವೆ.

**ಆ) ಧಾರ್ಮಿಕ ವಿಧಿ ಆಚರಣೆಯೊಂದಿಗೆ, ಸಾಂಸ್ಕೃತಿಕ ಚಟುವಟಿಕೆಗೆ ಬದ್ಧವಾದ ದೇವಸ್ಥಾನಗಳು:**

ದೇಗುಲದ ವಾರ್ಷಿಕಾವರ್ತನದ ಧಾರ್ಮಿಕ ಚಟುವಟಿಕೆಗಳ ಜೊತೆಜೊತೆಯಲ್ಲಿಯೇ ಸಾಂಸ್ಕೃತಿಕ ಕಾರ್ಯಕ್ರಮಗಳಿಗೂ ಈ ವಿಭಾಗದ ದೇಗುಲದಲ್ಲಿ ಅವಕಾಶವಿರುತ್ತವೆ. ಈ ದೇವಾಲಯಗಳ ಹೆಸರುಗಳು ಹೀಗಿವೆ: 1) ಲಕ್ಷ್ಮೀವೆಂಕಟರಮಣ ದೇವಸ್ಥಾನ, ಪಡುಬಿದ್ರೆ. 2) ಲಕ್ಷ್ಮೀವೆಂಕಟೇಶ ದೇವಸ್ಥಾನ, ಉಡುಪಿ 3) ಗೀತಾಮಂದಿರ, ಮಣಿಪಾಲ 4) ಕಾಶೀಮಠ

ಹೆಮ್ಮಾಡಿ, 5) ಹಳೇ ಮಾರಿಯಮ್ಮ ದೇವಸ್ಥಾನ, ಕಾಪು 6) ಶ್ರೀ ಪಟ್ಟಾಭಿರಾಮಚಂದ್ರ ದೇವಸ್ಥಾನ, ಕೋಟೇಶ್ವರ 7) ಶ್ರೀ ಲಕ್ಷ್ಮೀವೆಂಕಟರಮಣ ದೇವಸ್ಥಾನ ಬ್ರಹ್ಮಾವರ.

**ಇ) ಧಾರ್ಮಿಕ, ಸಾಂಸ್ಕೃತಿಕ, ಸಾಹಿತ್ಯಕ ಹಾಗೂ ಶೈಕ್ಷಣಿಕ ಚಟುವಟಿಕೆಗಳಿಗೆ ಬದ್ಧವಾದ ದೇವಾಲಯಗಳು:**

1) ಶ್ರೀ ವೆಂಕಟರಮಣ ದೇವಸ್ಥಾನ, ಕುಂದಾಪುರ, 2) ಶ್ರೀ ಭುವನೇಂದ್ರ ಬಾಲಕಾಶ್ರಮ, ಬಸ್ರೂರು, 3) ಶ್ರೀ ವೆಂಕಟರಮಣ ದೇವಸ್ಥಾನ, ಕಾರ್ಕಳ, 4) ಮಲ್ಯರಮಠ ಶ್ರೀ ಲಕ್ಷ್ಮೀವೆಂಕಟರಮಣ ದೇವಸ್ಥಾನ, ಗಂಗೊಳ್ಳಿ.

**ಶ್ರೀ ವೆಂಕಟರಮಣ ದೇವಸ್ಥಾನ ಕುಂದಾಪುರ:** ಕುಂದಾಪುರ ಪೇಟೆಯ ಮುಖ್ಯ ಬೀದಿಯಲ್ಲಿರುವ ಈಗಿನ ಬಸ್ ನಿಲ್ದಾಣದ ಪಕ್ಕದಲ್ಲಿಯೇ ಇರುವ ಈ ದೇವಾಲಯದಲ್ಲಿಯೂ ವರ್ಷಾವಧಿಯಲ್ಲಿ ಬರುವ ವಿವಿಧ ಹಬ್ಬಗಳನ್ನು ಅರ್ಥವತ್ತಾಗಿ ಆಚರಿಸಿ, ಜನಾಂಗಕ್ಕೆ ಸೇರಿದ ಭಕ್ತಸಮೂಹಕ್ಕೆ ಆ ಪರ್ವಗಳ ಸಾಂಸ್ಕೃತಿಕ ಮಹತ್ವವನ್ನು ಮನಗಾಣಿಸುವುದು ಅವರ ಮೊದಲ ಉದ್ದೇಶವಾಗಿರುತ್ತದೆ. ಈ ದೇಗುಲದ ಆಡಳಿತ ಧರ್ಮದರ್ಶಿಯಾಗಿ 1979ರಲ್ಲಿ ಅಧಿಕಾರ ವಹಿಸಿಕೊಂಡ ರಘುರಾಮ ಪೈ ಅವರು ಧಾರ್ಮಿಕ ಚಟುವಟಿಕೆಗಳನ್ನು ನಿರ್ವಹಿಸುವುದರ ಜೊತೆಗೆ ಸಾಂಸ್ಕೃತಿಕ ಚಟುವಟಿಕೆಗಳಿಗೆ ವಿಶೇಷ ಅವಕಾಶವನ್ನು ನೀಡುವುದಕ್ಕೆ ತೊಡಗಿದರು. ಇದಕ್ಕೆ ಅವಶ್ಯವಾಗಿ ಬೇಕಾದ ಸಭಾಮಂಟಪವನ್ನು ವಿಸ್ತರಿಸಿದರು. 1991ರಲ್ಲಿ ರಾಧಾಕೃಷ್ಣ ಶೆಣೈ ಅವರು ಆಡಳಿತ ಧರ್ಮದರ್ಶಿಯಾಗಿ ಆಯ್ಕೆಯಾದ ಅನಂತರ ಶೈಕ್ಷಣಿಕ ಯೋಜನೆಗಳನ್ನು ವಿಸ್ತರಿಸಿದರು. ಕೌಶಲ್ಯಶಿಕ್ಷಣ, ನೀತಿಶಿಕ್ಷಣ, ಸಾಂಸ್ಕೃತಿಕಶಿಕ್ಷಣ ಎಂಬ ಮೂರು ವಿಧದ ಶಿಕ್ಷಣಕ್ಕೆ ದೇವಸ್ಥಾನದಲ್ಲಿ ಅವಕಾಶ ನೀಡುತ್ತಾ ಜನಾಂಗದ ವಿದ್ಯಾರ್ಥಿಗಳಿಗೆ ಭಾರತೀಯ ಸಂಸ್ಕೃತಿಯ ವೈಶಿಷ್ಟ್ಯವನ್ನು ಮನಗಾಣಿಸುವುದರೊಂದಿಗೆ ಜನಾಂಗದ ಪ್ರತಿಯೋರ್ವ ವಿದ್ಯಾರ್ಥಿಯನ್ನು ಸುಸಂಸ್ಕೃತನನ್ನಾಗಿ ರೂಪಿಸುವುದು ತಮ್ಮ ಗುರಿ ಎಂದು ತಮ್ಮ ಯೋಜನೆಯನ್ನು ಮೌಖಿಕ ಸಂದರ್ಶನದ ಸಂದರ್ಭದಲ್ಲಿ ಹೇಳಿಕೊಂಡಿದ್ದಾರೆ. ಕೌಶಲಶಿಕ್ಷಣಕ್ಕಾಗಿ ಕಸೂತಿ ಹಾಗೂ ಕಂಪ್ಯೂಟರ್ ಶಿಕ್ಷಣ, ನೀತಿ ಶಿಕ್ಷಣಕ್ಕಾಗಿ ಪುರಾಣ ಹಾಗೂ ಧಾರ್ಮಿಕಗ್ರಂಥಗಳ ಕುರಿತು ಉಪನ್ಯಾಸ, ಕನ್ನಡ-ಭಾಷೆ ಸಾಹಿತ್ಯದ ಅರಿವನ್ನು ಮೂಡಿಸುವುದಕ್ಕಾಗಿ-ಕನ್ನಡ ಸಾಹಿತ್ಯದ ಕುರಿತು ಉಪನ್ಯಾಸದ ಯೋಜನೆಗಳನ್ನು ಹಮ್ಮಿಕೊಂಡು ಬರುತ್ತಿದ್ದಾರೆ. ಕನ್ನಡ ವಾಕ್ಯಶುದ್ಧತೆಗಾಗಿ ಕನ್ನಡ ಪ್ರಬಂಧ ರಚನೆ, ಕನ್ನಡ ಸಾಹಿತ್ಯದ ಕುರಿತು ವಿವಿಧ ಸ್ಪರ್ಧೆಗಳನ್ನು ನಡೆಸಿ, ವಿಜೇತ ವಿದ್ಯಾರ್ಥಿಗಳಿಗೆ ಬಹುಮಾನ ನೀಡುವುದು ಅವರ ಸಾಹಿತ್ಯ ಚಟುವಟಿಕೆಯ ಕಾರ್ಯಕ್ರಮಗಳಲ್ಲಿ ಮುಖ್ಯವಾಗಿವೆ. ಆಂಗ್ಲಭಾಷಾಜ್ಞಾನ, ಕೌಶಲಶಿಕ್ಷಣ, ವ್ಯವಹಾರ ನಿರ್ವಹಣೆಯಲ್ಲಿ ಯಶಸ್ಸನ್ನು ಕಾಣಲು, ಸುಸಂಸ್ಕೃತ ನಾಗರಿಕನಾಗಿ ರೂಪುಗೊಳ್ಳಲು 'ಸಾಹಿತ್ಯೋಪನ್ಯಾಸ-ಚಟುವಟಿಕೆ' ಎನ್ನುವುದು ರಾಧಾಕೃಷ್ಣ ಶೆಣೈ ಅವರ ಧೋರಣೆಯಾಗಿದೆ. ಅವರ ಈ ಎಲ್ಲಾ ವಿಚಾರಗಳನ್ನು ಮೌಖಿಕ ಸಂದರ್ಶನದಲ್ಲಿ ಹೇಳಿಕೊಂಡಿರುವುದಲ್ಲದೆ ಈ ಎಲ್ಲಾ ಯೋಜನೆಗಳು ದಿನಾಂಕ 21.04.2012ರ ಉದಯವಾಣಿ ಪತ್ರಿಕೆಯ ಕುಂದಾಪುರ ಆವೃತ್ತಿಯ ವಿಶೇಷ ಪುರವಣಿಯಲ್ಲಿ ಕೆ. ವಾಗೀಶ್ ಭಟ್ ಅವರ ಲೇಖನದಲ್ಲಿ ಪ್ರಕಟಗೊಂಡಿವೆ.

**ಭುವನೇಂದ್ರ ಬಾಲಕಾಶ್ರಮ, ಬಸ್ರೂರು:** ಬಸ್ರೂರಿನ ಶ್ರೀ ಶಾರದಾ ಕಾಲೇಜಿನ ನಿವೇಶನದ ಸನಿಹದಲ್ಲಿಯೇ ಗೌಡ ಸಾರಸ್ವತ ಜನಾಂಗಕ್ಕೆ ಸೇರಿದ ಶ್ರೀ ಕಾಶಿಮಠ ಪರಿಸರದಲ್ಲಿಯೇ ಕ್ರಿ.ಶ. 1965ರಲ್ಲಿ ಸುಧೀಂದ್ರತೀರ್ಥ ಶ್ರೀಪಾದಂಗಳವರು ಈ ಬಾಲಕಾಶ್ರಮವನ್ನು ಸ್ಥಾಪಿಸಿದರು. 8 ರಿಂದ 16 ವರ್ಷದೊಳಗಿನ ಬಾಲಕರಿಗೆ ಉಚಿತ ಪ್ರಾಥಮಿಕ, ಪ್ರೌಢಶಿಕ್ಷಣವನ್ನು ನೀಡುವ

ವ್ಯವಸ್ಥೆಯೊಂದಿಗೆ ಆಶ್ರಮದಲ್ಲಿ ನೈತಿಕ ಹಾಗೂ ಧಾರ್ಮಿಕಶಿಕ್ಷಣಕ್ಕೂ ವಿಶೇಷ ಪ್ರಾಶಸ್ತ್ಯ ನೀಡುತ್ತಿದ್ದಾರೆ. ಈ ಆಶ್ರಮದಲ್ಲಿ ಲೌಕಿಕಶಿಕ್ಷಣವನ್ನು, ನೈತಿಕಶಿಕ್ಷಣವನ್ನು ಪಡೆದುಕೊಂಡು ಬದುಕಿನ ಬೇರೆ ಬೇರೆ ಕ್ಷೇತ್ರಗಳಲ್ಲಿ ಯಶಸ್ವೀ ಜೀವನ ನಡೆಸುವ ಜನಾಂಗದ ಮಂದಿ ದೇಶದ ಬೇರೆ ಬೇರೆ ಕಡೆಗಳಲ್ಲಿದ್ದಾರೆ. ಸಂಸ್ಥೆಯ ಹಳೆ ವಿದ್ಯಾರ್ಥಿಗಳು 2012ರಲ್ಲಿ 'ಸಾಂದೀಪನಿ' ಎಂಬ ಸ್ಮರಣಸಂಚಿಕೆಯನ್ನು ಹೊರತಂದಿದ್ದು, ಅದರಲ್ಲಿ ಆಶ್ರಮವಾಸಿಗಳಾಗಿ ಯಶಸ್ವೀ ಜೀವನ ನಡೆಸುವ ಹಳೆ ವಿದ್ಯಾರ್ಥಿಗಳ ಸುಧೀರ್ಘ ಪಟ್ಟಿ ಇದೆ. ವಕ್ವಾಡಿ ಪ್ರೌಢಶಾಲೆಯ ಅಧ್ಯಾಪಕ ಶ್ರೀ ದಿನೇಶ್ ಪ್ರಭು ಅವರು ಆಶ್ರಮವಾಸದ ಜೀವನದಿಂದ ತಮ್ಮ ಬದುಕಿಗಾದ ಲಾಭವನ್ನು ಸಂಚಿಕೆಯ ಪುಟ ಸಂಖ್ಯೆ 31ರಲ್ಲಿ ಹೇಳಿಕೊಂಡಿದ್ದಾರೆ.

**ವೆಂಕಟರಮಣ ದೇವಸ್ಥಾನ ಕಾರ್ಕಳ:** ಜನಾಂಗದ ಸದಸ್ಯರಿಗೆ ಸಾಂಸ್ಕೃತಿಕ ಮಹತ್ವವನ್ನು ಮನಗಾಣಿಸುವುದರೊಂದಿಗೆ -20ನೇ ಶತಮಾನದ ಆರಂಭದಿಂದಲೇ ದೇಗುಲವು ಶೈಕ್ಷಣಿಕ ಚಟುವಟಿಕೆಗಳಿಗೂ ಮುಂದಾಗಿದೆ. ಈ ದೇಗುಲದ ವತಿಯಿಂದ ನಡೆಯುತ್ತಿದ್ದ ಭುವನೇಂದ್ರ ಸಂಸ್ಕೃತಪಾಠಶಾಲೆಗೆ 1960ರಲ್ಲಿ ವಿದ್ಯಾರ್ಥಿಗಳ ಸೇರ್ಪಡೆ ಇಲ್ಲದಿರುವುದರಿಂದ ಆಧುನಿಕ ಉನ್ನತಶಿಕ್ಷಣ ಸಂಸ್ಥೆಗೆ ಅವಕಾಶ ಮಾಡಿಕೊಡುವುದಕ್ಕಾಗಿ ದೇಗುಲದ ಆಡಳಿತವು ಈ ನಿವೇಶನವನ್ನು ಡಾ। ಮಾಧವ ಪೈ ಅವರಿಗೊಪ್ಪಿಸಿದರು. ದೇವಸ್ಥಾನದ ನೇರ ಆಡಳಿತಕ್ಕೊಳಪಟ್ಟು ಪ್ರಾಥಮಿಕ ಪ್ರೌಢ, ಪದವಿಪೂರ್ವ ಕಾಲೇಜುಗಳಿದ್ದು 1991 ರಲ್ಲಿ ವಿದ್ಯಾರ್ಥಿನಿಯರಿಗಾಗಿ ಪದವಿಶಿಕ್ಷಣ ಕಾಲೇಜನ್ನೂ ಪ್ರಾರಂಭಿಸಲಾಯಿತು. ಈ ಕಾಲೇಜಿನ ಸಾಹಿತ್ಯ ಚಟುವಟಿಕೆಗಳು, ವರದಿಗಳು, ವಾರ್ಷಿಕಸಂಚಿಕೆಗಳಲ್ಲಿ ದಾಖಲಾಗಿರುತ್ತವೆ. ಎಳವೆಯಿಂದಲೇ ಈ ದೇವಸ್ಥಾನದ ವಾರ್ಷಿಕ/ಸಾಂಸ್ಕೃತಿಕ/ಸಾಹಿತ್ಯಕ ಚಟುವಟಿಕೆಗಳಿಂದ ಸಾಕಷ್ಟು ಅನುಭವವನ್ನು ಪಡೆದ ಉದಯವಾಣಿ ದಿನಪತ್ರಿಕೆಯ ಉಪಸಂಪಾದಕ ರಾಘವ ನಂಬಿಯಾರ್‌ರವರು "ಈ ದೃಷ್ಟಿಯಲ್ಲಿ ನನ್ನನ್ನು ಭಾಗ್ಯಶಾಲಿ ಎಂದು ಹೇಳಬಹುದು ನನಗೆ ಈ ಬಾಲ್ಯದ ಅಮೂಲ್ಯ ಅವಧಿಯನ್ನು ಕಾಣುವ ಅವಕಾಶವಾದುದು ಕಾರ್ಕಳ ಪೇಟೆಯಲ್ಲಿ"(ಸಂ:ರವೀಂದ್ರ ಭಟ್ ಕೆ., 2014,ಪು-73) ಎಂದು ತಮ್ಮ ಬಾಲ್ಯದ ದಿನಗಳನ್ನು ಸ್ಮರಿಸಿಕೊಂಡಿದ್ದಾರೆ. **ಮಲ್ಯರಮಠ ಶ್ರೀ ವೆಂಕಟರಮಣ ದೇವಸ್ಥಾನ, ಗಂಗೊಳ್ಳಿ:**

ಶ್ರೀ ನಾರಾಯಣ ಮಲ್ಯರೆಂಬ ಆಸ್ತಿಕಭಕ್ತರೊಬ್ಬರು ಕ್ರಿ.ಶ. 1668ರಲ್ಲಿ ಈ ಮಠದ ವ್ಯಾಪ್ತಿಯಲ್ಲಿ ಬರುವ ಶ್ರೀ ವೆಂಕಟರಮಣ ದೇವಸ್ಥಾನವನ್ನು ಸ್ಥಾಪಿಸಿದರೆಂದು ದೇವಸ್ಥಾನದ ಆಡಳಿತ ಸಮಿತಿಯವರು ಮಾಹಿತಿ ನೀಡಿರುತ್ತಾರೆ. ಗಂಗೊಳ್ಳಿಯ ಸರಹದ್ದಿನ ಗೌಡ ಸಾರಸ್ವತರ ಅತಿ ಮುಖ್ಯ ದೇವಸ್ಥಾನವೆಂದು ಗುರುತಿಸಿಕೊಂಡ ಈ ದೇವಸ್ಥಾನವು ಧಾರ್ಮಿಕ ಸಹಿತ, ಸಾಂಸ್ಕೃತಿಕ, ಸಾಹಿತ್ಯ ಚಟುವಟಿಕೆಗಳನ್ನು ನಿರ್ವಹಿಸಿಕೊಂಡು ಬರುತ್ತಿದೆ. ಚಾತುರ್ಮಾಸ ಅವಧಿಯ ಅಖಂಡ ಭಜನಾ ಕಾರ್ಯಕ್ರಮವನ್ನು ಆಧುನಿಕ ತಂತ್ರಜ್ಞಾನಗಳಾದ ಸಿ.ಡಿ.ಯಲ್ಲಿ ದಾಖಲಿಸುವುದು ಹಾಗೂ ಪೆನ್‌ಡ್ರೈವ್ ಮೂಲಕ ಚಟುವಟಿಕೆಯನ್ನು ದಾಖಲಿಸಿ ಹೊರದೇಶದಲ್ಲಿರುವ ಆಸ್ತಿಕರಿಗೂ ಇದರ ಮಾಹಿತಿಯನ್ನು ತಲುಪಿಸುವುದು ಈ ಮುಂತಾದ ಚಟುವಟಿಕೆಗಳಲ್ಲಿ ಜಿ.ಎಸ್.ಬಿ. ಯುವಕರು ಕಾರ್ಯನಿರತರಾಗಿರುತ್ತಾರೆ. ದೇವಸ್ಥಾನವನ್ನು ತಮ್ಮ ಚಟುವಟಿಕೆಯ ಕೇಂದ್ರವನ್ನಾಗಿ ಮಾಡಿಕೊಂಡು ಸಾಂಸ್ಕೃತಿಕ ಹಾಗೂ ಸಾಹಿತ್ಯ ಚಟುವಟಿಕೆಗಳ ಕುರಿತು ಚರ್ಚಿಸಲು 'ನಿನಾದ' ಎಂಬ ಸಂಸ್ಥೆಯನ್ನು ಹುಟ್ಟುಹಾಕಿಕೊಂಡಿದ್ದಾರೆ. ದೇವಸ್ಥಾನದ ವತಿಯಿಂದ ನಿರ್ವಹಿಸುವ ಎಲ್ಲಾ ಧಾರ್ಮಿಕೇತರ ಚಟುವಟಿಕೆಗಳು ನಿನಾದದಿಂದಲೇ ನಿರ್ವಹಿಸಲ್ಪಡುತ್ತವೆ. ಈ ಎಲ್ಲಾ ಚಟುವಟಿಕೆಗಳ ಯಶಸ್ವೀನಿರ್ವಹಣೆಗೆ ನಿರಂತರ ವಿದ್ಯುತ್‌ಸಂಪರ್ಕ ಅವಶ್ಯಕವಾದ ಕಾರಣ

ಕ್ರಿಯಾಶೀಲ ಜಿ.ಎಸ್.ಬಿ. ಯುವಸಂಘಟನೆಯು 1.25ಲಕ್ಷ ರೂಪಾಯಿ ಮೌಲ್ಯದ ಜನರೇಟರನ್ನು ಖರೀದಿಸಿ, ಅದನ್ನು ಶ್ರೀ ದೇವಳಕ್ಕೆ ಸಮರ್ಪಿಸಿದೆ ಎಂಬ ಉಲ್ಲೇಖವು ದಿನಾಂಕ 12.05.2012ರ ಉದಯವಾಣಿ ದಿನಪತ್ರಿಕೆಯ 'ಕುಂದಾಪುರ ವಿಶೇಷ ಆವೃತ್ತಿ'ಯಲ್ಲಿದೆ. ಈ ವಿವರಗಳು 'ನಿನಾದ' ಜಿ.ಎಸ್.ಬಿ. ಸಮಾಜದ ಧಾರ್ಮಿಕ ಪ್ರಜ್ಞೆಯ ಪ್ರತಿರೂಪ ಎಂಬ ಲೇಖನದಲ್ಲಿ ಪ್ರಕಟಗೊಂಡಿರುತ್ತದೆ. ನಿನಾದ ಸಂಸ್ಥೆಯು ಕ್ರಿ.ಶ. 2000 ದಿಂದ ಜನಾಂಗದ ವಿದ್ಯಾರ್ಥಿಗಳ ಕೈಬರಹದ ಸಂಚಿಕೆಯನ್ನು ಪ್ರಕಟಿಸುತ್ತಿದ್ದು, ಸಂಸ್ಥೆಯ ವತಿಯಿಂದ ನಡೆಸಿದ ಶೈಕ್ಷಣಿಕ ಮತ್ತು ಸಾಹಿತ್ಯ ಚಟುವಟಿಕೆಗಳ ವಿವರಗಳನ್ನು ಸಮಗ್ರವಾಗಿ ನೀಡುವ 'ಜ್ಞಾನಾಮೃತ' ಎಂಬ ವಿಶೇಷ ಸಂಚಿಕೆಯನ್ನು 2012ರಲ್ಲಿ ಪ್ರಕಟಿಸಿದೆ.

**ಅಷ್ಟಮಠಗಳ ಸಾಹಿತ್ಯ ಚಟುವಟಿಕೆಗಳು:** 20ನೇ ಶತಮಾನದ ಪೂರ್ವಾರ್ಧದ ತನಕ ಧಾರ್ಮಿಕ ಕಾರಣಗಳಿಗಾಗಿ ಮಹತ್ವವನ್ನು ಪಡೆದುಕೊಂಡ ಉಡುಪಿಯು ಕರ್ನಾಟಕ ಹಾಗೂ ದಕ್ಷಿಣ ಭಾರತದಲ್ಲಿ ಪ್ರಮುಖ ಕ್ಷೇತ್ರವಾಗಿ ಗುರುತಿಸಿಕೊಳ್ಳಲು ಇಲ್ಲಿಯ ಶ್ರೀ ಕೃಷ್ಣ ದೇವಸ್ಥಾನ ಹಾಗೂ ಈ ದೇವಸ್ಥಾನಕ್ಕೆ ಹೊಂದಿಕೊಂಡ ಎಂಟು ಮಠಗಳೇ ಕಾರಣವಾಗಿದೆ ಎನ್ನುವುದರಲ್ಲಿ ಯಾವುದೇ ಸಂದೇಹ ಇಲ್ಲ. ದ್ವೈತಸಿದ್ಧಾಂತದ ತತ್ತ್ವಪ್ರತಿಪಾದಕರಾದ ಆಚಾರ್ಯ ಮಧ್ವರು ಎಂಟು ಮಂದಿ ಶಿಷ್ಯರನ್ನು 'ಎಂಟು ಮಠ'ಗಳಲ್ಲಿ ನಿಯೋಜಿಸಿ ಆ ಮಠಗಳ ಮೂಲಕ ತಮ್ಮ ಸಿದ್ಧಾಂತ ಮತ್ತು ತತ್ವಗಳನ್ನು ಪ್ರಚಾರ ಮಾಡಲು ಒಂದು ವ್ಯವಸ್ಥೆಯನ್ನು ಜಾರಿಗೆ ತಂದರು. ಆ ಮಠದ ಹೆಸರುಗಳು–ಕಾಣಿಯೂರು ಮಠ, ಸೋದೆ ಮಠ, ಪುತ್ತಿಗೆ ಮಠ, ಅದಮಾರು ಮಠ, ಪೇಜಾವರ ಮಠ, ಪಲಿಮಾರು ಮಠ, ಕೃಷ್ಣಾಪುರ ಮಠ ಮತ್ತು ಶೀರೂರು ಮಠ ಎಂಬ ಎಂಟು ಊರುಗಳ ಹೆಸರಿನೊಂದಿಗೆ ಸಮೀಕರಣಗೊಂಡಿದೆ.

ಮಧ್ವಾಚಾರ್ಯರ ಸಿದ್ಧಾಂತ ತತ್ವಗಳನ್ನು ದೇಶದ ಉದ್ದಗಲಕ್ಕೂ ತಮ್ಮದೇ ಆದ ರೀತಿಯಲ್ಲಿ ಪ್ರಚಾರ ಮಾಡುತ್ತಾ ತಮಗೆ ಪ್ರಾಪ್ತವಾಗುವ ಎರಡು ವರ್ಷ ಕಾಲದ ಅವಕಾಶದಲ್ಲಿ ಆಯಾ ಮಠಕ್ಕೆ ಸಂಬಂಧಿತ ಸ್ವಾಮೀಜಿಯವರು ತಮ್ಮ ಸರದಿಯ 'ಶ್ರೀಕೃಷ್ಣ ಪೂಜಾದೀಕ್ಷೆ'ಯನ್ನು ನಿರ್ವಹಿಸಿಕೊಂಡು ಬರುತ್ತಾರೆ. ಶ್ರೀಕೃಷ್ಣದೇವಸ್ಥಾನದ ಪೂಜಾವಿಧಿಗಳಿಗೆ ಚ್ಯುತಿ ಬಾರದಂತೆ ಶ್ರೀಕೃಷ್ಣಮಠದ ಪರಂಪರೆ ಮತ್ತು ಪೂಜಾಪದ್ಧತಿಗಳನ್ನು ಉಳಿಸಿಕೊಂಡು ಹೋಗುವುದು, ಪೂಜಾದೀಕ್ಷೆಗೆ ಬದ್ಧರಾದ ಯತಿಗಳ ಜವಾಬ್ದಾರಿಯಾಗಿರುತ್ತದೆ. ಪೂಜಾದೀಕ್ಷೆಗೆ ಬದ್ಧರಾಗಿ ಸರ್ವಜ್ಞಪೀಠವನ್ನೇರುವ ವಿಶಿಷ್ಟ ಉತ್ಸಾಹವೇ 'ಪರ್ಯಾಯ ಉತ್ಸವ' ಎಂಬ ಹೆಸರಿನಲ್ಲಿ ಕಳೆದ ಸುಮಾರು ನಾಲ್ಕುನೂರು ವರ್ಷಗಳಿಂದ (ವಾದಿರಾಜರ ಕಾಲದಿಂದ) ನಡೆದುಕೊಂಡು ಬರುತ್ತಿದೆ. ಪರ್ಯಾಯಮಹೋತ್ಸವವು ಅತ್ಯಂತವೈಭವದಿಂದ ನಡೆಯುವ ಧಾರ್ಮಿಕ ಉತ್ಸವವಾಗಿದ್ದು, ಅತ್ಯಂತ ಪ್ರೇಕ್ಷಣೀಯವಾಗಿರುವುದು (ಉಡುಪಿ ಪರ್ಯಾಯ ವಿಶೇಷಾಂಕ ಪತ್ರಿಕೆ–ಸುದರ್ಶನ ವಾರಪತ್ರಿಕೆ ಸಂಪುಟ –9– ಸಂಚಿಕೆ 22–24). ಪೂಜೆ–ಅರ್ಚನೆ–ಧಾರ್ಮಿಕ ಉಪನ್ಯಾಸ–ಧಾರ್ಮಿಕ ಕಾರ್ಯಕ್ರಮಗಳನ್ನು ತಮ್ಮದೇ ಆದ ತತ್ವಸಿದ್ಧಾಂತದ ಚೌಕಟ್ಟಿನಲ್ಲಿ ನಡೆಸಿಕೊಂಡು ಬರುವ ಈ ಮಠಗಳು ಸುಮಾರು 1960 ರಿಂದೀಚೆಗೆ ಪರ್ಯಾಯ ಪೀಠವನ್ನೇರಿದ ಯತಿಶ್ರೇಷ್ಠರು ಕನ್ನಡ ಸಾಹಿತ್ಯ, ಚಟುವಟಿಕೆಗಳಿಗೂ ತಮ್ಮ ದ್ವೈತಸಿದ್ಧಾಂತದ ಚೌಕಟ್ಟಿನಲ್ಲಿ ಅವಕಾಶ ನೀಡುವುದಕ್ಕೆ ತೊಡಗಿದರು. ಶ್ರೀಕೃಷ್ಣಮಠದ ಪರಿಸರದಲ್ಲಿ 20ನೇ ಶತಮಾನದ ಪೂರ್ವಾರ್ಧದಲ್ಲಿ ಯಾವುದೇ ಕನ್ನಡ ಸಾಹಿತ್ಯ ಚಟುವಟಿಕೆಗಳಿಗೆ ಅವಕಾಶ ನೀಡಿದ

ನಿದರ್ಶನಗಳು ಕಂಡುಬರುವುದಿಲ್ಲ. ಪ್ರತಿಯೊಂದು ಮಠದ ಆರ್ಥಿಕ ಗಳಿಕೆಯ ಮೂಲವು ಮಿತವಾಗಿರುವ ಕಾರಣ 14 ವರ್ಷಗಳಿಗೊಮ್ಮೆ ಸರದಿಯಂತೆ ಬರುವ ಪರ್ಯಾಯಕ್ಕೆ ಸಂಬಂಧಿಸಿದ ಧಾರ್ಮಿಕ ಚಟುವಟಿಕೆಗಳ ನಿರ್ವಹಣೆಗೆ ಅವರ ಆರ್ಥಿಕ ಆದಾಯ ಸೀಮಿತಗೊಳ್ಳುತ್ತಿತ್ತು. ಎರಡನೆಯದಾಗಿ ಸಂಸ್ಕೃತಕಾವ್ಯಗಳ ಹಿನ್ನೆಲೆಯಲ್ಲಿ ಸಾಹಿತ್ಯವನ್ನು ಅರ್ಥೈಸಿಕೊಂಡ ಸ್ವಾಮೀಜಿಗಳಿಗೆ ಆಧುನಿಕ ಕನ್ನಡ ಸಾಹಿತ್ಯಪ್ರಕಾರಗಳ ವಿವಿಧ ಚಟುವಟಿಕೆಗಳಿಗೆ ಮಠದ ಧಾರ್ಮಿಕ ವೇದಿಕೆಯಲ್ಲಿ ಅವಕಾಶ ಕಲ್ಪಿಸುವುದು ತಮ್ಮ ತಾತ್ತ್ವಿಕ ಧೋರಣೆಗೆ ಸಮಂಜಸವಲ್ಲ ಎಂಬ ಅಭಿಪ್ರಾಯವಿದ್ದ ಕಾರಣ ಕನ್ನಡ ಸಾಹಿತ್ಯಚಟುವಟಿಕೆಗಳಿಗೆ (20ನೇ ಶತಮಾನದ ಪೂರ್ವಾರ್ಧದವರೆಗೆ ಎಂದರೆ 1950ರ ತನಕ) ಅವಕಾಶ ನೀಡಿರುವುದು ಕಂಡುಬರುವುದಿಲ್ಲ.

**ಪಲಿಮಾರುಮಠದ ಸಾಹಿತ್ಯ ಚಟುವಟಿಕೆಯ ಸಂಕ್ಷಿಪ್ತ ವಿವರಗಳು:-**

ಭಂಡಾರಕೇರಿಮಠದ ಯತಿಪರಂಪರೆಯಲ್ಲಿ 32ನೆಯ ಹೆಸರು 'ವಿದ್ಯಾಮಾನ್ಯತೀರ್ಥರದು'. ಪಲಿಮಾರುಮಠದ 29ನೇ ಯತಿಗಳಾಗಿ ಆ ಮಠದ ಪೀಠಾಧಿಕಾರವನ್ನು ಸ್ವೀಕರಿಸಿ ತಮ್ಮ ಜೀವಿತಾವಧಿಯಲ್ಲಿ ಎರಡು ಪರ್ಯಾಯಗಳನ್ನು ಯಶಸ್ವಿಯಾಗಿ ನಡೆಸಿರುತ್ತಾರೆ. ಇವರು 'ಕನ್ನಡ ಸಾಹಿತ್ಯಕ್ಷೇತ್ರ'ಕ್ಕೂ ಮಠದ ಪರಂಪರೆಯ ಮಿತಿಯಲ್ಲಿ ತಮ್ಮದೇ ಆದ ಕೊಡುಗೆಯನ್ನು ನೀಡಿರುವುದನ್ನು ಉಲ್ಲೇಖಿಸಲೇ ಬೇಕಾಗುತ್ತದೆ.

**ಪುಸ್ತಕಪ್ರಕಾಶನ:-** ಮಧ್ವಾಚಾರ್ಯರ 'ಸರ್ವಮೂಲ'ಗ್ರಂಥಗಳು ಸುಲಭಲಭ್ಯವಾಗುವಂತೆ ಕ್ರಮ ಕೈಗೊಂಡು, ಅದಕ್ಕೆ ತಮ್ಮದೇ ಆದ ವ್ಯಾಖ್ಯಾನ ಅಥವಾ ಟೀಕೆಗಳನ್ನು ಬರೆದು, ಜಿಜ್ಞಾಸುಗಳ ಆಸಕ್ತಿಯನ್ನು ಪ್ರಚೋದಿಸಿದರು. ಈ ಗ್ರಂಥಗಳ ಮುದ್ರಣಕ್ಕಾಗಿ 1969ರಲ್ಲಿ ತಮ್ಮ ಮಠದಲ್ಲಿಯೇ 'ಧರ್ಮಬೋಧ' ಎಂಬ ಮುದ್ರಣಾಲಯವನ್ನು ಆರಂಭಿಸಿದರು. ಇದೇ ಮುದ್ರಣಾಲಯದಿಂದ ವಿಷ್ಣುಸಹಸ್ರನಾಮದ ಅರ್ಥ ಮತ್ತು ವ್ಯಾಖ್ಯಾನಸಹಿತ ಕೃತಿಯನ್ನು ನಾಲ್ಕು ಸಂಪುಟಗಳಲ್ಲಿ ಪ್ರಕಟಪಡಿಸಿದರು. ಸಾಮಾನ್ಯಜನತೆಯ ಧಾರ್ಮಿಕ ತಿಳುವಳಿಕೆಗಾಗಿ ಪುಟ್ಟ-ಪುಟ್ಟ ಕನ್ನಡದ ಕೃತಿಗಳನ್ನು ತಾವೇ ಬರೆದರು. (ಅಮೃತ ಸಂಚಿಕೆ, ಲೇ: ಸನಾತನ ಧರ್ಮರಕ್ಷಕ, ಪು.ಸಂ. 163, ಸಂಪಾದಕರು-ಕೊರ್ಲಹಳ್ಳಿ ವೆಂಕಟೇಶಾಚಾರ್ಯ ಪ್ರ.ಮು. 2001)

**ಮಠದಿಂದ ಪ್ರಕಟವಾದ ಕೃತಿಗಳು:-** ಸುಮಾರು 20ಕ್ಕೂ ಹೆಚ್ಚು ಕೃತಿಗಳನ್ನು ಶ್ರೀಮಠದ ವತಿಯಿಂದ ಪ್ರಕಟಿಸಲಾಗಿದ್ದು, ಈ ಪುಸ್ತಕಗಳ ಪಟ್ಟಿಯು 'ಸತ್ಯಸಂಕಲ್ಪ' ಎಂಬ ಶ್ರೀಮಠದ ವತಿಯಿಂದ ಪ್ರಕಟಿತವಾದ ಸ್ಮರಣಸಂಚಿಕೆಯಲ್ಲಿ ಲಭ್ಯವಾಗುತ್ತದೆ.

**ಧಾರ್ಮಿಕ ಉಪನ್ಯಾಸಗಳು:-** ಮಧ್ವಸಿದ್ಧಾಂತದ ಚೌಕಟ್ಟಿನಲ್ಲಿ ವೈದಿಕಸಿದ್ಧಾಂತ, ಭಾಗವತ, ರಾಮಾಯಣ, ಮಹಾಭಾರತಕ್ಕೆ ಸಂಬಂಧಿಸಿ ನಾಡಿನ ಖ್ಯಾತವಿದ್ವಾಂಸರಿಂದ ಧಾರ್ಮಿಕ ಉಪನ್ಯಾಸಗಳನ್ನು ಏರ್ಪಡಿಸುವುದು ಮಠದ ಮುಖ್ಯಚಟುವಟಿಕೆ ಎಂದು ಗುರುತಿಸಬಹುದಾಗಿದೆ. 'ನಿರಂತರಜ್ಞಾನಯಜ್ಞ' ಎಂಬ ಶೀರ್ಷಿಕೆಯಡಿಯಲ್ಲಿ ಪ್ರತಿನಿತ್ಯವೂ ಉಪನ್ಯಾಸ ಏರ್ಪಡಿಸುವ ಪರಿಪಾಠವನ್ನು ಆರಂಭಿಸಿದವರು ವಿದ್ಯಾಮಾನ್ಯತೀರ್ಥರು. ಒಟ್ಟಾರೆ ಕನ್ನಡ ನಾಡಿನ ಸಾಹಿತ್ಯ-ಸಂಸ್ಕೃತಿಕ ಉನ್ನತಿಗೆ ತಮ್ಮದೇ ಆದ ಕೊಡುಗೆಯ ಮೂಲಕ ಜನಮನದಲ್ಲಿ ಶಾಶ್ವತವಾದ ಛಾಪು ಮೂಡಿಸಿದ್ದಾರೆ.

**ಪಲಿಮಾರುಮಠದ ಮೂಲಕ ಕನ್ನಡಭಾಷೆ -ಸಾಹಿತ್ಯಕ್ಕೆ ಸಂದ ಕೊಡುಗೆಗಳು:-** ಭಂಡಾರಕೇರಿಮಠದ ಯತಿಶ್ರೇಷ್ಠರಾದ ವಿದ್ಯಾಮಾನ್ಯತೀರ್ಥರು ಪಲಿಮಾರು ಮಠದ ಯತಿಗಳಾಗಿ ಜವಾಬ್ದಾರಿ ನಿರ್ವಹಿಸಬೇಕಾದ ಪ್ರಯುಕ್ತ ವಿನೂತನ

ಪರಂಪರೆಯೊಂದು ಸೃಷ್ಟಿಯಾಯಿತು. ಹೀಗೆ ಪಟ್ಟಕ್ಕೆ ಬಂದ ಪಲಿಮಾರು ಮಠದ ಯತಿಶ್ರೇಷ್ಠರಾದ ವಿದ್ಯಾಮಾನ್ಯರು ಶ್ರೀಕೃಷ್ಣಪೂಜಾದೀಕ್ಷೆಯ ಎರಡು ಅವಕಾಶವನ್ನು ಪಡೆದರು.

ಮಧ್ವಸಿದ್ಧಾಂತದ ಹಿನ್ನಲೆಯಲ್ಲಿ ಧಾರ್ಮಿಕಗೋಷ್ಠಿ-ಪ್ರವಚನ-ಕೃತಿ ಪ್ರಕಟಣೆ ಇವು ಪರ್ಯಾಯ ಅವಧಿಯ ಮುಖ್ಯ ಚಟುವಟಿಕೆಗಳಾಗಿವೆ. ಕನ್ನಡ ಸಾಹಿತ್ಯ ಮತ್ತು ಭಾಷೆಯ ದೃಷ್ಟಿಯಿಂದ ಉಲ್ಲೇಖಿಸಲಾಗುವ ಚಟುವಟಿಕೆ ಅಲ್ಲ. ಸ್ವಾಮೀಜಿಯವರು ಬರೆದ 'ಆಚಾರ್ಯಮಧ್ವ' ಮತ್ತು 'ಮಧ್ವರಾಮಾಯಣ' ಎಂಬ ಎರಡು ಕೃತಿಗಳನ್ನು ಬನ್ನಂಜೆ ಗೋವಿಂದಾಚಾರ್ಯರು ಪ್ರೌಢಶಾಲಾವಿದ್ಯಾರ್ಥಿಗಳಿಗಾಗಿ ಕನ್ನಡಕ್ಕೆ ಅನುವಾದಿಸಿದ್ದಾರೆ. ಸ್ವಾಮೀಜಿಯವರ 'ಹರಿತತ್ತ್ವವಿವೇಕ'ವೂ ಧಾರ್ಮಿಕದೃಷ್ಟಿಯುಳ್ಳ ಗ್ರಂಥವೇ ಆಗಿದ್ದು, ತಾತ್ತ್ವಿಕಜಿಜ್ಞಾಸೆಯಲ್ಲಿ ಆಸಕ್ತರಿಗಷ್ಟೇ ಮುಖ್ಯವೆನಿಸುವ ಗ್ರಂಥವಾಗಿದೆ. ಜ್ಞಾನಯಜ್ಞದ 'ಪ್ರವಚನಮಾಲಿಕೆ'ಯಲ್ಲಿ ಧಾರ್ಮಿಕವಿಷಯಗಳಿಗೆ ಪ್ರಾಮುಖ್ಯವನ್ನು ನೀಡಿರುವುದನ್ನು ಗಮನಿಸಬಹುದಾಗಿದೆ.

**ಕೃಷ್ಣಾಪುರ ಮಠ:**

ಉಡುಪಿಯ ಶ್ರೀಕೃಷ್ಣಮಠಕ್ಕೆ ಸಂಬಂಧಿಸಿ ಉಲ್ಲೇಖಿಸುವುದಾದರೆ ಅಷ್ಟಮಠಗಳ ಪರಂಪರೆಯಲ್ಲಿ ಬರುವ ಶ್ರೀ ಕೃಷ್ಣಾಪುರಮಠವು 20ನೇ ಶತಮಾನದ ಕಾಲಾವಧಿಯಲ್ಲಿ ಕನ್ನಡ ಸಾಹಿತ್ಯ ಚಟುವಟಿಕೆಗಳಿಗೆ ಯಾವುದೇ ಅವಕಾಶವನ್ನು ನೀಡಿರುವುದಿಲ್ಲ. ಕನ್ನಡ ವಾರಪತ್ರಿಕೆ 'ಸುದರ್ಶನ' ಪರ್ಯಾಯ ವಿಶೇಷಾಂಕ, ಸಂಪುಟ–9, ಸಂಚಿಕೆ–22–24ರ (ದಿನಾಂಕ 16.01.1960) ಶೀರ್ಷಿಕೆ 'ಪರ್ಯಾಯಪೀಠವನ್ನು ಬಿಟ್ಟೇಳಲಿರುವ ಶ್ರೀಗಳವರು' ಎಂಬ ಲೇಖನದಲ್ಲಿ ಶ್ರೀಮಠದ ಸ್ವಾಮೀಜಿಯವರ ಧಾರ್ಮಿಕ ಚಟುವಟಿಕೆಗಳ ವಿವರಗಳು ಹೀಗೆ ಉಲ್ಲೇಖಗೊಂಡಿದೆ. "ಶ್ರೀಕೃಷ್ಣಾಪುರಮಠದ ಶ್ರೀಮದ್ವಿದ್ಯಾರತ್ನತೀರ್ಥ ಶ್ರೀಪಾದಂಗಳವರು ಇದೇ ತಾರೀಕು 18 ರಂದು ಮುಂಜಾನೆ ಶ್ರೀಕೃಷ್ಣಮಠದ ಪರ್ಯಾಯ ಪೀಠಾಧಿಕಾರವನ್ನು ಬಿಟ್ಟುಕೊಡುವರು. ಈ ಎರಡೂ ವರ್ಷಗಳಲ್ಲಿ ಶ್ರೀ ಶ್ರೀಗಳವರು ಸರ್ವಜ್ಞಸಿಂಹಾಸನದಲ್ಲಿ ವಿರಾಜಮಾನರಾಗಿದ್ದುಕೊಂಡು ಶ್ರೀಕೃಷ್ಣಮಠದ ಸರ್ವಸಂಪ್ರದಾಯಗಳನ್ನು ನ್ಯೂನಾತಿರೇಕಗಳಿಲ್ಲದಂತೆ ಅತ್ಯಂತ ವಿಜೃಂಭಣೆಯಿಂದ ಅತ್ಯಂತವ್ಯವಸ್ಥೆಯಿಂದ ಜರುಗಿಸಿ, ಸರ್ವರ ಶ್ಲಾಘನೆ ಪಡೆದಿರುತ್ತಾರೆ... 1942–43ರಲ್ಲಿ ಪ್ರಥಮ ಪರ್ಯಾಯವನ್ನು ಬಹು ಯಶಸ್ವಿಯಾಗಿ ನಿರ್ವಹಿಸಿದ್ದರು.... ಸಪ್ತೋತ್ಸವ, ಲಕ್ಷದೀಪೋತ್ಸವ, ಶ್ರೀಕೃಷ್ಣಜನ್ಮಾಷ್ಟಮೀ ಉತ್ಸವ, ಮಧ್ವನವಮಿ ಮುಂತಾದ ವಿಶೇಷ ಉತ್ಸವಗಳನ್ನೂ ನಿತ್ಯಪೂಜಾದಿಗಳನ್ನೂ ಯಶಸ್ವಿಯಾಗಿ ಜರಗಿಸಿರುತ್ತಾರೆ" ಎಂಬ ವರದಿಯು ಪ್ರಕಟಗೊಂಡಿದೆ. ಪ್ರಸ್ತುತ ಶ್ರೀ ಕೃಷ್ಣಾಪುರದ ಸ್ವಾಮೀಜಿಯವರಾದ ಶ್ರೀ ಶ್ರೀ ವಿದ್ಯಾಸಾಗರತೀರ್ಥ ಇವರು ತಮ್ಮ ಹಿಂದಿನ ಹಿರಿಯ ಸ್ವಾಮೀಜಿಯವರ ಮಾರ್ಗದಲ್ಲೇ ಮುಂದುವರಿಯುತ್ತಿದ್ದಾರೆ. ಪ್ರಸ್ತುತ ಅಧ್ಯಯನದ ಸಂದರ್ಭದಲ್ಲಿ ಶ್ರೀ ಶ್ರೀ ವಿದ್ಯಾಸಾಗರತೀರ್ಥ ಸ್ವಾಮೀಜಿಯವರನ್ನು ಭೇಟಿಯಾಗಿ ತಾವೂ ಕೂಡ ತಮ್ಮ ಪರ್ಯಾಯಾವಧಿಯಲ್ಲಿ ಸಾಹಿತ್ಯ ಚಟುವಟಿಕೆಗಳಿಗೆ ಯಾವುದೇ ಪ್ರಾಮುಖ್ಯವಾಗಲೀ, ಅವಕಾಶವಾಗಲೀ ನೀಡದಿರಲು ಕಾರಣವೇನು? ಎಂಬ ಪ್ರಶ್ನೆಗೆ ಸ್ವಾಮೀಜಿಯವರು ಹೀಗೆ ಉತ್ತರಿಸಿದರು. "ಮಠದ ಪರಂಪರೆಯಂತೆ ಆಚರಿಸಿಕೊಂಡು ಬರಲೇಬೇಕಾದ ಧಾರ್ಮಿಕ ಚಟುವಟಿಕೆಗಳನ್ನು ವಿಧಿವತ್ತಾಗಿ ನಿರ್ವಹಿಸಿದಲ್ಲಿ (ಸಾಹಿತ್ಯವೂ ಸೇರಿದಂತೆ) ಯಾವುದೇ ಧಾರ್ಮಿಕೇತರ ಚಟುವಟಿಕೆಗಳನ್ನು ನಿರ್ವಹಿಸುವುದಕ್ಕೆ ಅವಕಾಶಗಳಿರುವುದಿಲ್ಲ.

ಸಾಂಸ್ಕೃತಿಕ ಚಟುವಟಿಕೆಗಳನ್ನು ನಿರ್ವಹಿಸುತ್ತೇವೆಂದು ತಾವಾಗಿ ಮುಂದೆ ಬಂದ ತಂಡಗಳಿಗೆ ಪರ್ಯಾಯಾವಧಿಯಲ್ಲಿ ಮಠದ ವತಿಯಿಂದ ಅವಕಾಶ ಮಾಡಿಕೊಡುತ್ತಿದ್ದೇವೆ. ಪರ್ಯಾಯದ ಅನಂತರ ಮುಂದಿನ ಪರ್ಯಾಯದ ನಿರ್ವಹಣೆಗೆ ಅವಶ್ಯ ಸಂಪನ್ಮೂಲಗಳನ್ನು ಸಂಗ್ರಹಿಸುವ ಮತ್ತು ಮಠಕ್ಕೆ ಸೇರಿದ ಸ್ಥಿರಾಸ್ತಿಗಳಿಗೆ ಸಂಬಂಧಿಸಿದ ತಕರಾರುಗಳನ್ನು ಬಗೆಹರಿಸುವುದರಲ್ಲೇ ಸಮಯ ಕಳೆಯುತ್ತದೆ. ಹೀಗಾಗಿ ಸಾಹಿತ್ಯ ಚಟುವಟಿಕೆಯಂತಹ ಕಾರ್ಯಕ್ರಮಗಳು ನಮ್ಮ ಮಠದಿಂದ ಸಾಧ್ಯವಾಗುತ್ತಿಲ್ಲ" ಎಂದು ನೇರವಾಗಿಯೇ ಉತ್ತರಿಸಿದ್ದಾರೆ.

**ಲಿಖಿತ ಚಟುವಟಿಕೆ:**

ಆಸ್ತಿಕಭಾವದ ಮೂಲಸ್ಥಾಯಿಯಾದ ಭಕ್ತಿಯನ್ನು ಪ್ರಚೋದಿಸುವ ಲೇಖನಗಳನ್ನು ಪ್ರಕಟಿಸುವ ಸಂಚಿಕೆಯಾಗಿ 'ಪ್ರಕಾಶಿನೀಸಾಂಸ್ಕೃತಿಕ ಮಾಸಪತ್ರಿಕೆ'ಯು 1942ರಿಂದ ಶ್ರೀಮಠವು ಪ್ರಕಟಗೊಳಿಸಿದ್ದು, 1979ರ ತನಕವೂ ಈ ಪತ್ರಿಕೆ ಪ್ರಕಟವಾಗುತ್ತಿತ್ತು ಎಂಬುದಾಗಿ ಮಠದಲ್ಲಿರುವ ಅಧಿಕೃತ ದಾಖಲೆಗಳಿಂದ ತಿಳಿದುಬರುತ್ತದೆ. ಈ ಹೇಳಿಕೆಗೆ ಪೂರಕವೆಂಬಂತೆ 1968ರ ಜನವರಿ ಸಂಚಿಕೆ 1 ಮಠದಲ್ಲಿರುವ ಸಂಚಿಕೆ ಪರಾಮರ್ಶನಕ್ಕಾಗಿ ಸ್ವಾಮೀಜಿಯವರಿಂದ ಲಭ್ಯವಾಗಿದೆ.

**ಅದಮಾರುಮಠದ ಕನ್ನಡ ಸಾಹಿತ್ಯ ಚಟುವಟಿಕೆಗಳು:** 20ನೇ ಶತಮಾನದ ಉತ್ತರಾರ್ಧದ ಅವಧಿಯಲ್ಲಿ ಎರಡು ಪರ್ಯಾಯಗಳನ್ನು ನಿರ್ವಹಿಸಿದ ಅದಮಾರುಮಠದ ಹಿರಿಯ ಯತಿ ವಿಬುಧೇಶತೀರ್ಥರನ್ನು ಕುರಿತು ಅವರ ಶಿಷ್ಯರಾದ ಕಿರಿಯ ಸ್ವಾಮೀಜಿ ಶ್ರೀ ಶ್ರೀ ವಿಶ್ವಪ್ರಿಯತೀರ್ಥರು "ಯಾವುದೇ ಕೀರ್ತಿಯ ಆಸೆಯಿಂದ ಕೆಲಸ ಮಾಡುವ ವ್ಯಕ್ತಿ ಶ್ರೀಗಳಲ್ಲ. ಮಾಡುವ ಪ್ರತಿಯೊಂದು ಕೆಲಸವೂ ಪುನಃ ಪುನಃ ಮೆಲುಕು ಹಾಕುವಂತಹದ್ದು" ಎಂದು ಹೇಳಿಕೊಂಡಿದ್ದಾರೆ (ಕೃತಿ: ಶ್ರೀ ವಿಬುಧೇಶ ತೀರ್ಥರು, ಸಾಧನೆಗಳ ಸಮೂಹಶೋಧ, ಸಂಪಾದಕರು ಶ್ರೀ ಟಿ. ದೇವದಾಸ್, ಮುರಳೀಧರ ಉಪಾಧ್ಯ ಹಿರಿಯಡ್ಕ, ಲೇ.ಶಿ. ನನ್ನ ಗುರು ಶ್ರೀ ವಿಬುಧೇಶತೀರ್ಥರು, ಪುಟ-4). ವಿಬುಧೇಶತೀರ್ಥರ ಪರ್ಯಾಯಾವಧಿಕಾಲದ ಧಾರ್ಮಿಕ, ಸಾಂಸ್ಕೃತಿಕ ಕಾರ್ಯಕ್ರಮದ ಕುರಿತು ಶ್ರೀ ಎ. ವರದರಾಜ ಬಲ್ಲಾಳ ಅವರು ಹೀಗೆ ಉಲ್ಲೇಖಿಸುತ್ತಾರೆ. "ವಸಂತ ಮಹಲ್‌ನಲ್ಲಿ ನಡೆಸಲಾಗುವ ವಿವಿಧ ಸಾಂಸ್ಕೃತಿಕ, ಧಾರ್ಮಿಕ ಭಾಷಣಮಾಲೆಗಳು ಚಂದ್ರಶಾಲೆಯಲ್ಲಿ ನಡೆಸಲಾಗುವ ವಿಶೇಷ ಪುರಾಣ ಪ್ರವಚನಗಳು, ವಿಶೇಷಸಂದರ್ಭಗಳಲ್ಲಿ ನಡೆಸಲಾಗುವ ಹರಿಕಥೆ, ನಾಟ್ಯ, ಸಂಗೀತ, ಯಕ್ಷಗಾನ ಮೊದಲಾದ ಕಾರ್ಯಕ್ರಮಗಳು, ಮಧ್ವನವಮಿಯಂಥ ದಿನಗಳಲ್ಲಿ ಜರಗುವ ವಿದ್ವತ್‌ಸಭೆಗಳು ಇವೆಲ್ಲವೂ ಉಡುಪಿಯ ಪರ್ಯಾಯದ ನಿತ್ಯೋತ್ಸವದ ಸಮಾರಂಭಗಳು... ವಿಬುಧೇಶತೀರ್ಥರ ಪರ್ಯಾಯದ ದಿನಗಳು ಇಂತಹ ಕಾರ್ಯಕ್ರಮಗಳಿಂದ ತುಂಬಿರುತ್ತಿದ್ದವು. (ಕೃತಿ: ಪೂರ್ವೋಕ್ತ, ಪುಟ ಸಂಖ್ಯೆ: 37, ಲೇ: ಶ್ರೀ ಎ. ವರದರಾಜ ಬಲ್ಲಾಳ) ಎಂದಿದ್ದಾರೆ. ಆಧುನಿಕತೆಗೆ, ವೈಜ್ಞಾನಿಕಮನೋಭಾವನೆಗೆ ಪ್ರೋತ್ಸಾಹ ನೀಡುವ, ಆಂಗ್ಲಶಿಕ್ಷಣಕ್ಕೆ ವಿಶೇಷಮಹತ್ವ ನೀಡುವ ಸ್ವಾಮೀಜಿಯವರು ತಾವು ಸ್ಥಾಪಿಸಿದ ಪೂರ್ಣಪ್ರಜ್ಞ ವಿದ್ಯಾಸಂಸ್ಥೆಯಲ್ಲಿ ಕನ್ನಡ/ಆಂಗ್ಲ ಸಾಹಿತ್ಯಚಟುವಟಿಕೆಗಳಿಗೆ ವಿಪುಲ ಅವಕಾಶ ಮತ್ತು ಉತ್ತೇಜನವನ್ನು ನೀಡಿದ್ದರೂ, ಮಠದ ವ್ಯಾಪ್ತಿಯಲ್ಲಿ ಕನ್ನಡ ಸಾಹಿತ್ಯಕ್ಷೇತ್ರಕ್ಕೆ ನೀಡಿದ ಕೊಡುಗೆ ಗೌಣವೆಂದೇ ಹೇಳಬೇಕು.

**ಸೋದೆಮಠದ ಕನ್ನಡ ಸಾಹಿತ್ಯ ಚಟುವಟಿಕೆಗಳ ಕುರಿತಂತೆ ಒಂದು ಅವಲೋಕನ:** 19ನೇ ಶತಮಾನದ ಕೊನೆಯ ಹೊತ್ತಿಗೆ ಸೋದೆಮಠದ ಯತಿಗಳಾಗಿ ಶ್ರೀಮಠದ ಅಧಿಕಾರದಲ್ಲಿದ್ದ ವಿಶ್ವಾಧೀಶತೀರ್ಥರು ತಮ್ಮ ಮಠದ ಜವಾಬ್ದಾರಿಯನ್ನು

ಬಾಲಸನ್ಯಾಸಿಯಾದ ಶ್ರೀ ವಿಶ್ವೇಂದ್ರತೀರ್ಥರಿಗೆ ಕ್ರಿ.ಶ. 1897ರಲ್ಲಿ ಹಸ್ತಾಂತರಿಸಿದರು. ಸೋದೆಮಠದ ಜವಾಬ್ದಾರಿಯನ್ನು ಯಶಸ್ವಿಯಾಗಿ ನಿರ್ವಹಿಸಿದ ಶ್ರೀ ವಿಶ್ವೇಂದ್ರತೀರ್ಥರು 1932ರಲ್ಲಿ ತಮ್ಮ ಮೂರನೆಯ ಪರ್ಯಾಯವನ್ನು ಯಶಸ್ವಿಯಾಗಿ ಮುಗಿಸಿ, ಅಪಾರ ಲೌಕಿಕ ಮತ್ತು ಆಗಮಿಕ ಅನುಭವಗಳಿಂದ ಶ್ರೀಮಂತರಾಗಿದ್ದರು.

ನಾಡಿನ ಅಭಿವೃದ್ಧಿಗೆ ಶಿಕ್ಷಣದ ಅವಶ್ಯಕತೆಯನ್ನು ಮನಗಂಡು, ಬಾಜಕ ಸಮೀಪದ ಇನ್ನಂಜೆಯಲ್ಲಿ ಪ್ರೌಢಶಾಲೆಯೊಂದನ್ನು ಆರಂಭಿಸಿದರು. (1943 ಜೂನ್) ತಮ್ಮ ಜವಾಬ್ದಾರಿಯನ್ನು ಪರಂಪರೆಗನುಗುಣವಾಗಿ ನಡೆಸಿಕೊಂಡು ಹೋಗಲು ಅದೇ ವರ್ಷ ಜುಲೈ ತಿಂಗಳಲ್ಲಿ ವಿಶ್ವೋತ್ತಮತೀರ್ಥರಿಗೆ ಸನ್ಯಾಸದೀಕ್ಷೆಯನ್ನಿತ್ತು, ಸೆಪ್ಟೆಂಬರ್ ತಿಂಗಳಿನಲ್ಲಿ ಇಹಲೋಕವನ್ನು ತ್ಯಜಿಸಿದರು. ತಮ್ಮೆಲ್ಲಾ ಜವಾಬ್ದಾರಿಯನ್ನು ಅತ್ಯಂತನಿಷ್ಠೆಯಿಂದ ಒಂದು ಕ್ರಮದಲ್ಲಿ ನಿಭಾಯಿಸಿಕೊಂಡು ಬಂದು, ಸಾರ್ವಜನಿಕರ ಚರ್ಚೆಗೆ, 'ವಸ್ತುವಿಷಯ'ವಾಗುವುದಕ್ಕೆ ಆಸ್ಪದ ನೀಡದೆ ಲೌಕಿಕ-ಆಗಮಿಕ ಬದುಕನ್ನು ನಿಷ್ಠೆಯಿಂದ ನಿಭಾಯಿಸಿ, ತಮ್ಮ ಯತಿಜೀವನಕ್ಕೆ ಅನಿರೀಕ್ಷಿತ ವಿದಾಯವನ್ನು ಹೇಳಿದರು. ಅವರ ಆಯುರ್ವೇದ ವೈದ್ಯಶಾಸ್ತ್ರದ ಜ್ಞಾನದ ಕುರಿತಾಗಿ ಡಾ. ಶ್ರೀನಿವಾಸ ಹಾವನೂರರು "ಭವವೈದ್ಯಕೀಯದ ಜೊತೆಗೆ ಶ್ರೀಗಳವರು ದೈಹಿಕವೈದ್ಯಕೀಯವನ್ನು ಬಲ್ಲವರಾಗಿದ್ದರು. ಅರ್ಥಾತ್ ಆಯುರ್ವೇದ ರೀತ್ಯಾ ದಿನಾಲೂ ರೋಗಿಗಳಿಗೆ ಔಷಧ ವಿಧಾನವನ್ನು ಸೂಚಿಸುತ್ತಿದ್ದರು"(ಸಂ: ಶ್ರೀನಿವಾಸ ಹಾವನೂರ ಡಾ., 2001, ಪು-11) ಎಂದು ಉಲ್ಲೇಖಿಸಿದ್ದಾರೆ. ಸೋದೆಮಠದ ಪರಂಪರೆಯಲ್ಲಿ ವಾದಿರಾಜರ ಅನಂತರ 20ನೇ ಶತಮಾನದಲ್ಲಿ ಸರಳಗನ್ನಡದ ಸುಲಭ ದೇಸೀ ಶೈಲಿಯಲ್ಲಿ ಕೀರ್ತನೆಯನ್ನು ರಚಿಸಿದವರೇ ಶ್ರೀ ವಿಶ್ವೇಂದ್ರತೀರ್ಥರು. ನಾಲ್ಕು ಪಾದಗಳ (ಚತುಷ್ಪಾದ) 45 ಬಿಡಿ ಬಿಡಿ ಕೀರ್ತನೆಯುಳ್ಳ 'ರಾಜೇಶಹಯಮುಖ'ವೆಂಬ ಅಂಕಿತದಲ್ಲಿ 'ಕೀರ್ತನಮಂಜರಿ' ಎಂಬ ಹೆಸರಿನಲ್ಲಿ ರಚನೆಗೊಂಡ ಕೃತಿಯು ಕೀರ್ತನಸಾಹಿತ್ಯ ಪ್ರಕಾರಕ್ಕೆ ಬಹುಮುಖ್ಯವಾದ ಕೊಡುಗೆ ಎನ್ನಬಹುದಾಗಿದೆ.

**ಕೀರ್ತನಮಂಜರಿಯ ಶೈಲಿ:-** ಪ್ರತಿ ಕೀರ್ತನೆಯ ಆರಂಭದ 2 ಅಥವಾ 3 ಸಾಲುಗಳು 'ಪಲ್ಲವಿ'ಯಾಗಿದ್ದು ಮುಂದೆ 2 ಅಥವಾ ಒಂದು ಸಾಲು/ಚರಣಗಳಲ್ಲಿ ಪ್ರತಿಪಾದಿತ ಹೇಳಿಕೆಯು ಮುಂದುವರಿಯುತ್ತದೆ. ಅಪ್ಪಟ ಕನ್ನಡ ಛಂದಸ್ಸಿನಲ್ಲಿಯೇ ರಚಿತವಾದ ಇಲ್ಲಿಯ ಪ್ರತಿಯೊಂದು ಕೀರ್ತನೆಯಲ್ಲಿ ಭಾಗವತ-ಮಹಾಭಾರತ-ಪೌರಾಣಿಕ ಕಥೆಯ ಘಟನೆಗಳನ್ನು ಶ್ರೀಕೃಷ್ಣನ ಅತಿಶಯವಾದ ಮಹಿಮೆಯೊಂದಿಗೆ ವ್ಯಾಜೋಕ್ತಿ, ಚತುರೋಕ್ತಿ, ಸಹಿತ ನಿಂದಾಸ್ತುತಿಯ ಶೈಲಿಯಲ್ಲಿ ತಮ್ಮ ವಿಚಾರಗಳನ್ನು ನಿರೂಪಿಸಿದ್ದಾರೆ.

ಶ್ರೀ ವಿಶ್ವೇಂದ್ರತೀರ್ಥ ಶ್ರೀಪಾದರು ಇಪ್ಪತ್ತನೇ ಶತಮಾನದ ಕನ್ನಡ ಸಾಹಿತ್ಯ ಚಟುವಟಿಕೆಯ ಕುರಿತಂತೆ ಕನ್ನಡ ಸಾಹಿತ್ಯದ ಕೀರ್ತನ ಪರಂಪರೆಗೆ ವಾದಿರಾಜರ ಮಾದರಿಯಲ್ಲಿ ತಮ್ಮದೇ ಆದ ಕಿರುಕೊಡುಗೆಯನ್ನು ನೀಡಿದರು. "ಶ್ರೀಪಾದರು 'ಶ್ರೀಮಧ್ವಸಿದ್ಧಾಂತಬೋಧಿನೀ' ಎಂಬ ಸಂಸ್ಥೆಯನ್ನು ಸ್ಥಾಪಿಸಿ, 'ಯುಕ್ತಿಮಲ್ಲಿಕಾ' ಹೆಸರಿನಲ್ಲಿ ಉಪನ್ಯಾಸಮಾಲಿಕೆಯನ್ನು ನಿಯಮಿತವಾಗಿ ನಡೆಸಿದ್ದರು. ಅದಕ್ಕಾಗಿ ಹೊರಗಿನಿಂದ ವಿದ್ವಾಂಸರನ್ನು ಆಮಂತ್ರಿಸುವ ಪರಿಪಾಠವನ್ನು ರೂಢಿಸಿಕೊಂಡರು. ಈ ಉಪನ್ಯಾಸಗಳಿಗೆ ಶ್ರೀ ಅನಂತೇಶ್ವರ ದೇವಾಲಯದ ಪ್ರಾಂಗಣವೇ ವೇದಿಕೆಯಾಗಿ ಮಾರ್ಪಟ್ಟಿತು."(ಪೂರ್ವೋಕ್ತ, ಪು-10)

ಇಹಬದುಕಿನ ಅಂತ್ಯಕಾಲಕ್ಕೆ ಕೇವಲ 35 ದಿನಗಳು ಉಳಿಯುತ್ತಿದ್ದಂತೆ ಮಠದ ಜವಾಬ್ದಾರಿಯನ್ನು ಕಿರಿಯ ಯತಿಗಳಾದ ಶ್ರೀ ವಿಶ್ವೋತ್ತಮತೀರ್ಥರಿಗೆ ಒಪ್ಪಿಸಿದರು.

**ವಿಶ್ವೋತ್ತಮತೀರ್ಥರ 20ನೇ ಶತಮಾನದ ಕನ್ನಡ ಸಾಹಿತ್ಯದ ಚಟುವಟಿಕೆಗಳು:**

ಮಾಧ್ವಪರಂಪರೆಯ ಸೋದೆಮಠದ 35ನೆಯ ಯತಿಗಳಾಗಿ ಶ್ರೀ ವಿಶ್ವೇಂದ್ರತೀರ್ಥರಿಂದ ಸನ್ಯಾಸದೀಕ್ಷೆಯೊಂದಿಗೆ ಯತಿಪೀಠವನ್ನಲಂಕರಿಸಿದ ಶ್ರೀಪಾದರು ಸುಮಾರು 20ನೇ ಶತಮಾನದಲ್ಲಿ ಮೂರು ಪರ್ಯಾಯಗಳನ್ನು ಯಶಸ್ವಿಯಾಗಿ ಮುಗಿಸಿದ್ದರು. ಮಧ್ವಸಿದ್ಧಾಂತ ಮತ್ತು ಶ್ರೀಕೃಷ್ಣಭಕ್ತಿಗೆ ತಮ್ಮನ್ನು ಸಂಪೂರ್ಣವಾಗಿ ತೊಡಗಿಸಿಕೊಂಡ ಶ್ರೀಪಾದರು ಹೆಚ್ಚು ಮಾತನಾಡದೆ ಸದಾ ತಮ್ಮಂತರಂಗದಲ್ಲಿ ಸದಾಕಾಲವೂ ಶ್ರೀಕೃಷ್ಣಮಂತ್ರ ಜಪವನ್ನು ಮೌನವಾಗಿ ಉಚ್ಚರಿಸುತ್ತಲೇ ಇದ್ದ ಓರ್ವ ಸಾತ್ವಿಕ ಸನ್ಯಾಸಿಯಾಗಿ ಜೀವನವನ್ನು ನಡೆಸಿದವರು. ಇಂದಿನ ಮಣಿಪಾಲದ ನಿರ್ಮಾತೃ ಎನಿಸಿದ ಡಾ. ಮಾಧವ ಪೈ ಅವರಿಗೆ ಅವರು ಸ್ಥಾಪಿಸಬಯಸುವ ಮಹಾತ್ಮಾ ಗಾಂಧಿ ಮೆಮೋರಿಯಲ್ ಕಾಲೇಜಿಗಾಗಿ ಸಂಪೂರ್ಣ ಸಗ್ರಿ ಗುಡ್ಡೆಯನ್ನು ದಾನರೂಪದಲ್ಲಿ ನೀಡದೇ ಹೋಗಿದ್ದರೆ ಎಂ.ಜಿ.ಎಂ. ಕಾಲೇಜಿನ ಮುಂದಿನ ಇತರ ಹತ್ತಾರು ಕಾಲೇಜುಗಳ ಸ್ಥಾಪನೆ ಸಾಧ್ಯವಾಗುತ್ತಿರಲಿಲ್ಲ.

**ಗ್ರಂಥಪ್ರಕಟನೆ ಮತ್ತು ಪ್ರಕಾಶನ:**

'ವೈದಿಕಗ್ರಂಥಪ್ರಕಾಶನ'ಎಂಬ ಪ್ರಕಾಶನಸಂಸ್ಥೆಯನ್ನು ಆರಂಭಿಸಿ, ಮಠದ ಆರ್ಥಿಕಸಂಪನ್ಮೂಲದ ನೆರವಿನಿಂದ ಪ್ರಕಟಿಸಿದ ಕನ್ನಡದ ಧಾರ್ಮಿಕಗ್ರಂಥಗಳನ್ನು ಹೀಗೆ ಉಲ್ಲೇಖಿಸಬಹುದಾಗಿದೆ.

1. ಶ್ರೀಮದ್ವಿಶ್ವೋತ್ತಮತೀರ್ಥಸ್ತುತಿರತ್ನಾವಲಿ ಮೂಲ ಮತ್ತು ಅನುವಾದ. ಪ್ರಕಾಶನ: ಶ್ರೀ ಭಾವಿಸಮೀರ ತತ್ವಪ್ರಸಾರಣ ಪ್ರತಿಷ್ಠಾನ, ಶ್ರೀ ಸೋದೆ ವಾದಿರಾಜ ಮಠ, ಉಡುಪಿ
2. ಶ್ರೀಮದಾನಂದತೀರ್ಥ ಭಗವತ್ಪಾದಾಚಾರ್ಯರು ರಚಿಸಿದ ಶ್ರೀ ಮನ್ಮಹಾಭಾರತತಾತ್ಪರ್ಯನಿರ್ಣಯದಲ್ಲಿರುವ ವ್ಯಾಸಾವತಾರಕಥಾ. ಶ್ರೀಮದ್ಭಾವಿಸಮೀರ ವಾದಿರಾಜಗುರು ಸಾರ್ವಭೌಮರು ರಚಿಸಿದ ಭಾಪ್ರಕಾಶಿಕಾಟೀಕಾಸಹಿತ–ಕನ್ನಡ ಅನುವಾದ ಸಹಿತ. ಅನುವಾದಕರು–ವ್ಯಾಸದಾಸ, ಉಡುಪಿ–ಪ್ರಕಾಶಕರು– ವೈದಿಕಗ್ರಂಥಪ್ರಕಾಶನ, ಸೋದೆ ವಾದಿರಾಜಮಠ, ಉಡುಪಿ
3. ಶ್ರೀ ಸೋದೇಶ–ಕ್ಷೇತ್ರದರ್ಶನ, ಸಂಪಾದಕರು– ಡಾ। ಗುರುರಾಜ ಕೃ. ನಿಪ್ಪಾಣಿ, ಬಳ್ಳಾರಿ. ಪ್ರಕಾಶನ– ಭಾವಿಸಮೀರ ತತ್ವಪ್ರಸಾರಣಾ ಪ್ರತಿಷ್ಠಾನ, ಶ್ರೀ ಸೋದೆ ವಾದಿರಾಜಮಠ, ಉಡುಪಿ

ಹೀಗೆ ಉಲ್ಲೇಖಿಸುವುದಾದಲ್ಲಿ ಇನ್ನೂ ಸುಮಾರು ಇಪ್ಪತ್ತಕ್ಕೂ ಹೆಚ್ಚಿನ ಗ್ರಂಥಗಳನ್ನು ಉಲ್ಲೇಖಿಸಬಹುದಾಗಿದೆ. ಆದರೆ ಶುದ್ಧ ಧಾರ್ಮಿಕಗ್ರಂಥಗಳಾದ ಈ ಪಟ್ಟಿಯು ಇಲ್ಲಿ ಅನವಶ್ಯಕವೆಂದು ಬಗೆದು, ಅವರ ಧಾರ್ಮಿಕ ಚಟುವಟಿಕೆಯ ಅವರ ಆಸಕ್ತಿಯ ಬಗೆಯನ್ನು ಉಲ್ಲೇಖಿಸುವುದಕ್ಕಾಗಿ ಮಾತ್ರ ಮೇಲಿನ ಪಟ್ಟಿಯನ್ನು ನೀಡಲಾಗಿದೆ.

**ಪುತ್ತಿಗೆಮಠದ ಕನ್ನಡ ಸಾಹಿತ್ಯ ಚಟುವಟಿಕೆಗಳು:**

ಪುತ್ತಿಗೆ ಮಠ ಎಂದಾಕ್ಷಣ ಮೊತ್ತಮೊದಲು ನೆನಪಿಗೆ ಬರುವ ಹೆಸರೇ 'ಶ್ರೀ ಸುಧೀಂದ್ರತೀರ್ಥ' ಯತಿವರೇಣ್ಯರದ್ದಾಗಿದೆ. ಇವರು ತಮ್ಮ ಸರಳ ನಡೆ–ನುಡಿಗಳಿಂದ ಉಳಿದೆಲ್ಲಾ ಮಠಗಳ ಸ್ವಾಮೀಜಿಯವರಿಗೆ

ಮಾರ್ಗದರ್ಶಕರಾಗಿ ಬದುಕಿದವರು. ಶ್ರೀ ಸುಧೀಂದ್ರತೀರ್ಥರ ಶಿಷ್ಯರಾಗಿ ಪುತ್ತಿಗೆ ಮಠಕ್ಕೆ 29ನೇ ಯತಿಗಳಾಗಿ ದೀಕ್ಷೆ ಪಡೆದವರೇ 'ಸುಜ್ಞಾನೇಂದ್ರತೀರ್ಥ'ರು. ಮಾಧ್ವತತ್ವಜ್ಞರೂ ಅಲ್ಲದೇ ಆಯುರ್ವೇದ ಪಂಡಿತರೂ ಆಗಿದ್ದು, ಇವರಿಂದ ಶುಶ್ರೂಷೆಗೊಳಗಾದ ಅನೇಕರು ಇಂದಿಗೂ ಅವರ ಹೆಸರನ್ನು ಸ್ಮರಿಸುತ್ತಾರೆ.

**ಸುಗುಣೇಂದ್ರತೀರ್ಥ ಶ್ರೀಪಾದರು:-** ಸುಜ್ಞಾನೇಂದ್ರತೀರ್ಥರ ಶಿಷ್ಯರಾಗಿ ಪುತ್ತಿಗೆ ಮಠದ 30ನೇ ಯತಿಗಳಾಗಿ ಪೀಠಕ್ಕೆ ಬಂದವರು 'ಸುಗುಣೇಂದ್ರತೀರ್ಥರು'. ಅಷ್ಟಮಠಗಳಲ್ಲಿ ಆರ್ಥಿಕವಾಗಿ ಅತ್ಯಂತ ಹಿಂದುಳಿದ ಮಠ ಎಂದು ಗುರುತಿಸಲ್ಪಟ್ಟ ಈ ಮಠಕ್ಕೆ ಆರ್ಥಿಕಚೈತನ್ಯವನ್ನು ನೀಡಿದ್ದಲ್ಲದೆ ತಮ್ಮ ನಿರಂತರ ಬೌದ್ಧಿಕ ಚಟುವಟಿಕೆಗಳಿಂದ ಮಾಧ್ವತತ್ವವನ್ನು ದೇಶದ ಗಡಿಯಾಚೆಗೂ ವಿಸ್ತರಿಸಿದ ಕೀರ್ತಿ ಸುಗುಣೇಂದ್ರತೀರ್ಥ ಶ್ರೀಪಾದರಿಗೆ ಸಲ್ಲುತ್ತದೆ.

ಆಧುನಿಕ ಕಾಲದಲ್ಲಿ ವರ್ತಮಾನಪತ್ರಿಕೆ, ವಾರಪತ್ರಿಕೆಗಳಿಗೆ ಯಾವ ಕೊರತೆಯೂ ಇಲ್ಲ ಎನ್ನುವ ಮಾತು ನಿಜವಾದರೂ ಜನರಿಗೆ ಸದಭಿರುಚಿಯನ್ನುಂಟುಮಾಡುವ ಒಳ್ಳೆಯ ಸಂಸ್ಕಾರವನ್ನುಂಟುಮಾಡುವ ಪತ್ರಿಕೆಗಳು ವಿರಳ. "ಕೀಳು ಅಭಿರುಚಿಯನ್ನು ಹಬ್ಬಿಸುತ್ತಾ, ಧರ್ಮನಿರಪೇಕ್ಷೆಯ ಸೋಗಿನಲ್ಲಿ ತಮ್ಮ ಸನಾತನಧರ್ಮವನ್ನು ಪರೋಕ್ಷವಾಗಿ ಅವಹೇಳನ ಮಾಡುವ ಪತ್ರಿಕೆ ಸಾಕಷ್ಟಿವೆ. ಈ ವಿಷಯವನ್ನು ಮನಗಂಡ ಶ್ರೀಪಾದರು ಧಾರ್ಮಿಕ, ಆಧ್ಯಾತ್ಮಿಕ, ಸಾಂಸ್ಕೃತಿಕ ವಿಷಯಗಳಲ್ಲಿ ಸದಭಿರುಚಿಯನ್ನುಂಟುಮಾಡಿ, ಒಳ್ಳೆಯ ಮಾರ್ಗದರ್ಶನ ಮಾಡಲು 'ಸುಗುಣಮಾಲಾ' ಎಂಬ ಕನ್ನಡ ಮಾಸಪತ್ರಿಕೆಯನ್ನು 1986 ಜನವರಿಯಲ್ಲಿ ಪ್ರಾರಂಭಿಸಿದರು. ಈ ಪತ್ರಿಕೆ ಜನರ ಮೆಚ್ಚುಗೆಯನ್ನು ಪಡೆದು ಈಗ ಹತ್ತು ಸಾವಿರಕ್ಕೂ ಹೆಚ್ಚು ಚಂದಾದಾರರನ್ನು ಹೊಂದಿರುವುದು ಹೆಮ್ಮೆಪಡುವ ಸಂಗತಿ."(ಸಂ: ಸುಗುಣೇಂದ್ರತೀರ್ಥ ಶ್ರೀಪಾದರು, 1992, ಸಂಪಾದಕೀಯ) ಎಂ. ರಾಜಗೋಪಾಲ ಆಚಾರ್ಯರು ಈ ಪತ್ರಿಕೆಯ ಆರಂಭ ಕಾಲದಿಂದ ಅವರ ಜೀವಿತಾವಧಿಯವರೆಗೂ ಪತ್ರಿಕೆಯ ಮುಖ್ಯಸಂಪಾದಕರಾಗಿದ್ದರು. ಪತ್ರಿಕೆಯ ಸಂಪಾದಕೀಯಭಾಗವನ್ನು ಸುಗುಣೇಂದ್ರತೀರ್ಥರು ಬರೆಯುತ್ತಿದ್ದು, ಉತ್ತಮದರ್ಜೆಯ ಕಾಗದ, ಬಹು ಬಣ್ಣದ ಛಾಯಾಚಿತ್ರಗಳಿಂದ ಪತ್ರಿಕೆಯು ಹೊರನೋಟದಿಂದಲೂ ಆಕರ್ಷಕವಾಗಿದ್ದು, ಓದುಗರ ಗಮನಸೆಳೆಯುತ್ತದೆ

"ಹಿಂದೂಧರ್ಮದ ಹಿರಿಮೆಯನ್ನು ಬೋಧಿಸುವ 'ನಮಸ್ಕಾರ', 'ತುಳಸೀ ಪೂಜೆ', 'ವಿಜಯದಶಮಿ' 'ಶ್ರೀಕೃಷ್ಣ ಸಂದೇಶ', 'ದೇಶಪ್ರೇಮ-ದೇವಪ್ರೇಮ' 'ಪರಿಮಳ ಸ್ವಾಮಿಗಳು' ಇವೇ ಮೊದಲಾದ ಕಿರುಹೊತ್ತಗೆಗಳನ್ನು ಬರೆದು ಪ್ರಕಟಿಸಿದ್ದಾರೆ. ಆಗಾಗ್ಗೆ ಉದಯವಾಣಿ, ತರಂಗ, ಸಂಯುಕ್ತ ಕರ್ನಾಟಕ ಮೊದಲಾದ ಪತ್ರಿಕೆಗಳಲ್ಲೂ ಶ್ರೀಪಾದರ ಲೇಖನಗಳು ಪ್ರಕಟವಾಗಿವೆ."(ಪೂರ್ವೋಕ್ತ, ಪು-35)

'ಗೀತಾಧ್ಯಾಯ ಭಾವಪರಿಚಯ' ಎಂಬ ಶ್ರೀಪಾದರ ಕೃತಿಯು ಭಗವದ್ಗೀತೆಯ ಕುರಿತಂತೆ 'ತಾತ್ವಿಕಜಿಜ್ಞಾಸೆ'ಯ ಒಂದು ಪಥ್ಯವಾಗಿದ್ದು, ಇಲ್ಲಿ ಜಿಜ್ಞಾಸೆಯ ಸ್ವರೂಪದ ಮಾದರಿಗಾಗಿ ಒಂದು ಪ್ರಕರಣವನ್ನು ಹೀಗೆ ಉಲ್ಲೇಖಿಸಬಹುದು.

ಗುರುಗಳಾದ ದ್ರೋಣ, ಭೀಷ್ಮಾದಿಗಳನ್ನು ಯುದ್ಧದಲ್ಲಿ ಹೇಗೆ ಎದುರಿಸಲಿ? ಎಂಬ ಆತಂಕ ಹಾಗೂ ಕಳವಳಕ್ಕೆ ಗುರಿಯಾದ ಅರ್ಜುನನಿಗೆ ಕೃಷ್ಣನ ಉತ್ತರ ಹೀಗಿದೆ:

"ಹಣ್ಣು ಹಣ್ಣು ಮುದಿಗಳಾದ ಅವರೇ ನಿರ್ಮೋಹಕರಾಗಿ ಕವಚ ಬಿಗಿದು ನ್ಯಾಯದ ವಿರುದ್ಧ ತಮ್ಮ ಮರಿಮಕ್ಕಳ ವಿರುದ್ಧ ಹೆದೆಯೇರಿಸಿ ಬಂದಿದ್ದಾರೆಂದರೆ ಅವರಲ್ಲಿ ಲಘುತ್ವವಿರಬೇಕು ಹೊರತು ಗುರುತ್ವವೆಲ್ಲಿ?..... ಸಾಮಾನ್ಯವಾಗಿ ಗುರುಗಳಿಗೆ ಶಿಷ್ಯರ ಮೇಲೆ ಮೋಹ, ಶಿಷ್ಯರಿಗೆ ಗುರುಭಕ್ತಿ. ಹೀಗಿದ್ದಲ್ಲಿ ನಿನ್ನ ಮೋಹಕ್ಕೊಂದು ವ್ಯಾವಹಾರಿಕ ನೆಲೆಯಿರುತ್ತಿತ್ತು. ಅದು ಬಿಟ್ಟು ನೀನಿಗ ಮೋಹವಿಲ್ಲದ ಗುರುಗಳ ಮೇಲೆ ಗುರುಮೋಹ. ಈ ಮೋಹವೇ ದುಃಖಕ್ಕೆ ಮೂಲ. ಅದರಲ್ಲೂ ಮೋಹವಿಲ್ಲದವರನ್ನು ಮೋಹಿಸುವುದು ಮಹಾಯಾತನೆ. ಏಕಮುಖ ಪ್ರೀತಿ–ಮೋಹಗಳು ದುಃಖಕ್ಕೆ ಕಾರಣ; ಅತ್ಯಂತ ಶೋಚನೀಯ! ನಿರ್ಮೋಹರನ್ನು ಮೋಹಿಸುವವ ನಿರ್ನಾಮವಾಗುತ್ತಾನೆ."(ಸಂ: ಶ್ರೀ ಸುಗುಣೇಂದ್ರತೀರ್ಥ ಸ್ವಾಮೀಜಿ, 2001, ಪು–17–18) ಇದು ಸುಗುಣೇಂದ್ರರ ವ್ಯಾಖ್ಯಾನ. ಧಾರ್ಮಿಕ ಗ್ರಂಥದ ತಾತ್ವಿಕತೆಯನ್ನು ಅತ್ಯಂತಲೌಕಿಕವಾಗಿ ವ್ಯಾಖ್ಯಾನಿಸುವ ಅದಮ್ಯಪ್ರತಿಭೆ ಶ್ರೀಪಾದರದ್ದಾಗಿದೆ.

**ಕಾಣಿಯೂರುಮಠದ ವತಿಯಿಂದ ನಡೆದ 20ನೇ ಶತಮಾನದ ಕನ್ನಡ ಸಾಹಿತ್ಯ ಚಟುವಟಿಕೆಗಳ ಒಂದು ಅವಲೋಕನ:**

ಕಾಣಿಯೂರುಮಠದ ವಿದ್ಯಾನಿಧಿತೀರ್ಥರೆಂಬ ಯತಿಗಳು ಇಪ್ಪತ್ತನೇ ಶತಮಾನದ ಆರಂಭ ಎಂದರೆ 1902ರಲ್ಲಿ (ಪೂರ್ವಾಶ್ರಮದಲ್ಲಿ ತಮ್ಮ ಕುಟುಂಬಿಕನಾಗಿದ್ದ) ನಾರಾಯಣ ಎಂಬ ಬ್ರಾಹ್ಮಣವಟುವಿಗೆ ಮಂತ್ರೋಪದೇಶಪೂರ್ವಕ ಅನುಗ್ರಹಿಸಿ ಕಿರಿಯ ಯತಿಯಾಗಿ ಸನ್ಯಾಸದೀಕ್ಷೆಯನ್ನು ನೀಡಿ ಶ್ರೀ ಶ್ರೀ ವಿದ್ಯಾಸಮುದ್ರತೀರ್ಥರೆಂಬ ಹೆಸರನ್ನಿತ್ತರು. ವಿದ್ಯಾಸಮುದ್ರತೀರ್ಥರೆಂಬ ಯತಿಗಳ ಕುರಿತು ಹೇಳುವುದಾದರೆ "ಸರಳಜೀವನ ಅವರದು. ಈಗಿನ ವಿಜ್ಞಾನದ ಗೊಡವೆಯು ಅವರಿಗಿರಲಿಲ್ಲ. ವಿದ್ಯುತ್ ದೀಪ, ಬ್ಯಾಟರಿದೀಪಗಳನ್ನು ಅಶುದ್ಧವೆಂದು ಪರಿಗಣಿಸುತ್ತಿದ್ದರು. ರೇಡಿಯೋ, ಸಿನೆಮಾ ಇವುಗಳ ಕಲ್ಪನೆಯೂ ಅವರಿಗಿರಲಿಲ್ಲ. ಆಧ್ಯಾತ್ಮಿಕಜೀವನವೇ ಅವರದು."(ಸಂ: ರಾಘವೇಂದ್ರ ಉಪಾಧ್ಯಾಯ ಸಗ್ರಿ, ರಾಘವೇಂದ್ರ ಪುರಾಣಿಕ ಕುಂಭಾಸಿ., 2000, ಪು–24) ತಮ್ಮ ಯತಿಜೀವನದ 40 ವರ್ಷದ ಅನಂತರ ಅಂದರೆ ಕ್ರಿ.ಶ. 5–5–1942ರ ಶುಭದಿನದಂದು ಪೂರ್ವಾಶ್ರಮದ ಸಹೋದರರಾಗಿದ್ದ ಶ್ರೀ ಅನಂತಕೃಷ್ಣಾಚಾರ್ಯರ ದ್ವಿತೀಯ ಪುತ್ರ ನರಹರಿಯೆಂಬ ವಟುವಿಗೆ ಸನ್ಯಾಸದೀಕ್ಷೆಯನ್ನಿತ್ತು, ವಿದ್ಯಾವಾರಿನಿಧಿತೀರ್ಥರೆಂಬ ಹೆಸರನ್ನಿತ್ತರು.

**ಶ್ರೀ ವಿದ್ಯಾವಾರಿನಿಧಿತೀರ್ಥರ ನೆನಪು:** ಕಾಣಿಯೂರು ಮಠದ ಯತಿಪರಂಪರೆಯಲ್ಲಿ 28ನೇ ಯತಿಗಳಾಗಿ ವಿದ್ಯಾಸಮುದ್ರತೀರ್ಥರಿಂದ ಯತಿದೀಕ್ಷೆಯನ್ನು ಪಡೆದ ಕಿರಿಯ ಸ್ವಾಮೀಜಿಯವರು ಗುರುಗಳ ಮಾರ್ಗದರ್ಶನದಂತೆ ಯತಿಧರ್ಮಕ್ಕೆ ಚ್ಯುತಿ ಬರದಂತೆ ಧಾರ್ಮಿಕ ಶಾಸ್ತ್ರಗ್ರಂಥಗಳ ಅಭ್ಯಾಸದೊಂದಿಗೆ ಹಿರಿಯ ಯತಿಗಳ ಸೇವೆ ಮಾಡುತ್ತಾ ಆಧ್ಯಾತ್ಮಿಕಜ್ಞಾನವನ್ನು ಪಡೆದು ಪ್ರಬುದ್ಧತೆಯನ್ನು ಗಳಿಸಿದರು. ದಿನಾಂಕ 26.01.1964ರಂದು ಗುರುಗಳಾದ ವಿದ್ಯಾಸಮುದ್ರತೀರ್ಥರು ಇಹಲೋಕವನ್ನು ತ್ಯಜಿಸಿದ ಅನಂತರ ಕಿರಿಯ ಶ್ರೀಪಾದರಾದ ಶ್ರೀ ವಿದ್ಯಾವಾರಿನಿಧಿತೀರ್ಥರು ಕಾಣಿಯೂರು ಮಠದ ಪೀಠಾಧಿಪತಿಗಳಾಗಿ ಅಧಿಕಾರ ಸ್ವೀಕರಿಸಿದರು.

**ಗುರುಸ್ಮರಣೆಗಾಗಿ ಕರ್ತವ್ಯಬದ್ಧರಾದವರು:** 60ರ ದಶಕದಲ್ಲಿ ತಮ್ಮ ಮೊದಲ ಪರ್ಯಾಯವನ್ನು ಯಶಸ್ವಿಯಾಗಿ ಮುಗಿಸಿದ ಶ್ರೀಪಾದರು ತಮ್ಮ ಯಶಸ್ಸಿಗೆ ಗುರುಗಳಾದ ವಿದ್ಯಾಸಮುದ್ರತೀರ್ಥರೇ ಕಾರಣವೆಂದು ತಿಳಿದರು. ಈ ಗುರುಭಕ್ತಿಯ ಪ್ರತೀಕವಾಗಿ ಕಿದಿಯೂರಿನಲ್ಲಿ ಒಂದು ಪ್ರೌಢಶಾಲೆಯನ್ನು ಮಠದ ವತಿಯಿಂದ ಸ್ವೀಕರಿಸಿ, ಆ ಸಂಸ್ಥೆಯ ಉಜ್ವಲ ಭವಿಷ್ಯಕ್ಕೆ ಕಾರಣರಾದರು.

**ಕಿರಿಯಯತಿಗಳ ನೇಮಕ:** ತಮ್ಮ ದೈಹಿಕಶಕ್ತಿ ದಿನದಿಂದ ದಿನಕ್ಕೆ ಕುಂದುತ್ತಿರುವುದನ್ನು ಮನಗಂಡ ಯತಿಗಳು ತಮ್ಮ ಪೂರ್ವಾಶ್ರಮದ ಸಹೋದರರಾದ ರಘುಪತಿ ಆಚಾರ್ಯರ ದ್ವಿತೀಯ ಪುತ್ರ ಕೃಷ್ಣರಾಜ ಎಂಬ ವಟುವಿಗೆ ದಿನಾಂಕ 06.05.1992ರಂದು ಸನ್ಯಾಸದೀಕ್ಷೆಯನ್ನು ನೀಡಿ ಶ್ರೀ ವಿದ್ಯಾವಲ್ಲಭತೀರ್ಥ ಎಂಬ ಹೆಸರನ್ನಿತ್ತರು. ತಮ್ಮ ಮಠದ ವತಿಯಿಂದಲೇ ಅವರಿಗೆ ಮಾಧ್ವತತ್ವಪರಂಪರೆಯ ಶಿಕ್ಷಣದ ಏರ್ಪಾಟನ್ನೂ ಮಾಡಿದರು.

**ಶ್ರೀಮಠದ ಸಾಹಿತ್ಯ ಚಟುವಟಿಕೆಗಳು:–** 20ನೇ ಶತಮಾನದ ಕೊನೆಯ ಪರ್ಯಾಯದ ಜವಾಬ್ದಾರಿಯನ್ನು ಕಾಣಿಯೂರು ಮಠದ ಹಿರಿಯ ಯತಿಗಳಾದ ಶ್ರೀ ವಿಶ್ವವಾರಿನಿಧಿತೀರ್ಥರು ಮತ್ತು ಕಿರಿಯ ಯತಿಗಳಾಗಿದ್ದ ಶ್ರೀ ವಿಶ್ವವಲ್ಲಭತೀರ್ಥರು ಸಮಾನವಾಗಿ ಹಂಚಿಕೊಳ್ಳಬೇಕಾದ ಸಂದರ್ಭ ಬಂದೊದಗಿ ಅದನ್ನು ಯಶಸ್ವಿಯಾಗಿ ಮುಗಿಸಿದರು. ಅದ್ದೂರಿಯ ಪ್ರಚಾರ ಬಯಸದೆ ಬಹಿರಂಗವೈಭವಕ್ಕೂ ಅವಕಾಶ ನೀಡದೆ ಸಾಂಪ್ರದಾಯಿಕ ಪೂಜಾವಿಧಿಗಳಿಗೆ ಚ್ಯುತಿ ಇಲ್ಲದೆ ಮಠದ ಸಂಪ್ರದಾಯಕ್ಕನುಸರಿಸಿ ಕರ್ತವ್ಯ ನಿರ್ವಹಿಸಿದ್ದರು. ಕಾಣಿಯೂರು ಮಠದಲ್ಲಿ 20ನೇ ಶತಮಾನದ ಕಾಲಾವಧಿಯಲ್ಲಿ ಅಧಿಕಾರವನ್ನು ನಡೆಸಿದ ಯತಿಶ್ರೇಷ್ಠರು ಉಳಿದ ಮಠದ ಯತಿವರ್ಯರು ನಡೆಸಿಕೊಂಡು ಬಂದ ಧಾರ್ಮಿಕ, ಸಾಂಸ್ಕೃತಿಕ, ಸಾಹಿತ್ಯದಚಟುವಟಿಕೆಗಳಿಗೆ ಯಾವುದೇ ರೀತಿಯಲ್ಲಿ ಕಡಿಮೆ ಇಲ್ಲದಂತೆ ಪ್ರೋತ್ಸಾಹ ಮತ್ತು ಅವಕಾಶವನ್ನು ನೀಡಿದರು. ಆರ್ಥಿಕವಾಗಿ ಸಶಕ್ತರಾಗಿಲ್ಲದೇ ಇದ್ದರೂ ಸಾಹಿತ್ಯಕ ಚಟುವಟಿಕೆಗಳಿಗೆ ಅವಕಾಶ ನೀಡುವುದಕ್ಕಾಗಿ ಸ್ಥಳೀಯ ಸಂಪನ್ಮೂಲ ವ್ಯಕ್ತಿಗಳನ್ನು ಸಮರ್ಪಕವಾಗಿ ಬಳಸಿಕೊಂಡಿದ್ದರು. ಈ ಚಟುವಟಿಕೆಗಳಲ್ಲಿ ಹೆಸರಿಸಬೇಕಾದುದು ಹರಿಕಥೆ, ಮಹಾಭಾರತ, ಭಾಗವತಪ್ರವಚನ, ಸಾಂಸ್ಕೃತಿಕ ಚಟುವಟಿಕೆಗಳು ಮತ್ತು ಸಾಹಿತ್ಯಚಟುವಟಿಕೆಗಳು. 20ನೇ ಶತಮಾನದ ಅಂತ್ಯದಲ್ಲಿ ತಮ್ಮ ಸರದಿಯ ಪರ್ಯಾಯದಲ್ಲಿ ಈಗಿನ ಪೀಠಾಧಿಪತಿಗಳಾಗಿದ್ದ ವಿಶ್ವವಲ್ಲಭತೀರ್ಥರ ಸಾಹಿತ್ಯಚಟುವಟಿಕೆಗಳ ವಿವರಗಳನ್ನು ಕಾಣಿಯೂರುಮಠದ ಪರ್ಯಾಯ ಸ್ಮರಣಸಂಚಿಕೆ ಪುಟ–50 ರಿಂದ 54 ರಲ್ಲಿ ಸುದೀರ್ಘವಾಗಿ ದಾಖಲುಗೊಂಡಿರುತ್ತದೆ. (ವಿದ್ಯಾಸಮುದ್ರ ಸ್ಮರಣಸಂಚಿಕೆ, ಸಂಪಾದಕರು ಸಗ್ರಿ ರಾಘವೇಂದ್ರ ಉಪಾಧ್ಯಾಯ, ಕುಂಭಾಸಿ ರಾಘವೇಂದ್ರ ಪುರಾಣಿಕ)

ದಿನಾಂಕ 05.01.2000 ಮತ್ತು ದಿನಾಂಕ 06.01.2000ದ ದಾಸಸಾಹಿತ್ಯಗೋಷ್ಠಿ ವಿಶಿಷ್ಟವಾದ ಚಟುವಟಿಕೆಯಾಗಿತ್ತು. ಈ ವಿಶಿಷ್ಟತೆಗೆ ಕಾರಣ ಅಂದಿನ ಗೋಷ್ಠಿಯಲ್ಲಿ ಕನಕದಾಸರ ಕುರಿತು ಉಪನ್ಯಾಸ ನೀಡಿದ ಡಾ. ಅರಳು ಮಲ್ಲಿಗೆ ಪಾರ್ಥಸಾರಥಿ ಮತ್ತು 'ಹೆಳವನಕಟ್ಟೆ ಗಿರಿಯಮ್ಮ', 'ಹರಪನಹಳ್ಳಿ ಭೀಮವ್ವ' ಇವರ ಕುರಿತು ಪ್ರಬಂಧ ಮಂಡಿಸಿದ ಶ್ರೀಮತಿ ರಾಜಮ್ಮ ಮತ್ತು ಡಾ। ಟಿ.ಎನ್. ನಾಗರತ್ನ ಇವರುಗಳ ಪ್ರಬಂಧವಿಷಯವು ಸ್ವಾರಸ್ಯಪೂರ್ಣವೂ ಸಮಯೋಚಿತವೂ ಆಗಿದ್ದುದಾಗಿತ್ತು. ಮಾಧ್ವಚೌಕಟ್ಟಿನಲ್ಲಿರುವ ದಾಸತತ್ವದ ಹಿನ್ನೆಲೆಯಲ್ಲಿ ನಿರೂಪಿಸಲಾದ 'ಸ್ತ್ರೀ' ಸ್ಥಾನಮಾನವನ್ನು ಖಂಡಿಸಿ, ಸಮಕಾಲೀನ ಜಗತ್ತಿನ ಹಿನ್ನಲೆಯಲ್ಲಿ ಸ್ತ್ರೀಸ್ವಾತಂತ್ರ್ಯದ ನಿಲುವನ್ನು ಯತಿಗಳ ಉಪಸ್ಥಿತಿಯಲ್ಲಿ ಎತ್ತಿಹಿಡಿದಿರುವುದೇ ಗೋಷ್ಠಿಯ ವೈಶಿಷ್ಟ್ಯವಾಗಿತ್ತು. ಗೋಷ್ಠಿಯ ಅಧ್ಯಕ್ಷರಾದ ಖ್ಯಾತವಿದ್ವಾಂಸರೂ, ಮಾಧ್ವತತ್ವದ ಪಂಡಿತರೂ ಆಗಿದ್ದ ಡಾ. ಪ್ರಭಂಜನಾಚಾರ್ಯರು; ಶ್ರೀಮತಿ ರಾಜಲಕ್ಷ್ಮಿಯವರ ನಿಲುವನ್ನು ಅನುಮೋದಿಸಿದ್ದು, ಗೋಷ್ಠಿಯಲ್ಲಿ ಉಪಸ್ಥಿತರಿದ್ದ ಎಲ್ಲಾ ಮಾಧ್ವಪರ ವೈಚಾರಿಕರಿಗೆ ಇಷ್ಟವಾಗದೇ ಇದ್ದರೂ ವೈಚಾರಿಕ ಜಿಜ್ಞಾಸುಗಳಿಗೆ ಸಂತಸದ ಕ್ಷಣವಾಗಿತ್ತು.

ಈ ತೆರನಾದ ಸಾಹಿತ್ಯ ಚರ್ಚೆಯನ್ನು ಮಠದ ಸರಹದ್ದಿನಲ್ಲಿ ಯಾವತ್ತೂ ಹಮ್ಮಿಕೊಳ್ಳುತ್ತಾ, ಸಹೃದಯ ಜಿಜ್ಞಾಸುಗಳ ಚಿಂತನೆಯನ್ನು ಪ್ರಚೋದಿಸುವ ಕೈಂಕರ್ಯಗಳಿಗೆ ಪೀಠಾಧಿಪತಿಗಳಾದ ಯತಿಶ್ರೇಷ್ಠರು ಬದ್ಧರಾಗಬೇಕೆಂಬುದೇ ಸಾಹಿತ್ಯಾಸಕ್ತರ ಆಶಯವಾಗಿರುತ್ತದೆ.

**ಪೇಜಾವರ ಅಧೋಕ್ಷಜಮಠದ ಸಾಹಿತ್ಯ ಚಟುವಟಿಕೆಗಳು:** ಪೇಜಾವರಮಠಕ್ಕೆ 32ನೇ ಯತಿಯಾಗಿ ಅಧಿಕಾರ ಸ್ವೀಕರಿಸಿದ ಶ್ರೀ ವಿಶ್ವಮಾನ್ಯತೀರ್ಥರು ಕೇವಲ ಒಂದು ಪರ್ಯಾಯವನ್ನಷ್ಟೇ ಮುಗಿಸಿ, ಇಹಲೋಕವನ್ನು ತ್ಯಜಿಸಿದರು. ತದನಂತರದಲ್ಲಿ ಭಂಡಾರಕೇರಿ ಮಠದ ಪೀಠಾಧಿಪತಿಗಳಾದ ವಿದ್ಯಾಮಾನ್ಯತೀರ್ಥರ ಶಿಷ್ಯರಾದ ಶ್ರೀ ವಿಶ್ವೇಶತೀರ್ಥರು ಪೇಜಾವರಮಠದ 33ನೇ ಯತಿಗಳಾಗಿ ಅಧಿಕಾರಕ್ಕೆ ಬಂದರು. ಕೇವಲ ಇಪ್ಪತ್ತು ವರ್ಷದ ವಯಸ್ಸಿನ ಕಿರಿಯ ಯತಿಯಾಗಿ 1952ನೆಯ ಜನವರಿ 18ರಂದು ಮೊದಲ ಪರ್ಯಾಯ ಪೀಠವನ್ನೇರಿದರು. ಪ್ರಥಮ ಪರ್ಯಾಯ ಕಾಲದಲ್ಲಿ ಪೇಜಾವರ ಶ್ರೀಗಳು ಮಾಡಿದ ಮುಖ್ಯ ಕಾರ್ಯಕ್ರಮಗಳಲ್ಲಿ 'ಅಖಿಲಭಾರತ ಮಾಧ್ವತತ್ತ್ವಜ್ಞಾನ' ಸಮ್ಮೇಳನವು ಒಂದಾಗಿದೆ. ಕೇವಲ ಪರ್ಯಾಯ ಕಾಲದಲ್ಲಿ ಮಾತ್ರವಲ್ಲದೆ ಪರ್ಯಾಯ ಪೀಠದಿಂದ ಇಳಿದ ಅನಂತರದಲ್ಲೂ "ದೇಶದ ವಿವಿಧೆಡೆಗಳಲ್ಲಿ ಸಮ್ಮೇಳನ-ಉತ್ಸವ-ಗೋಷ್ಠಿ-ಪುಸ್ತಕ ಬಿಡುಗಡೆ ಮುಂತಾದ ಸಾಹಿತ್ಯಚಟುವಟಿಕೆಗಳಲ್ಲಿ ನಿರಂತರವಾಗಿ ತಮ್ಮನ್ನು ತಾವು ತೊಡಗಿಸಿಕೊಂಡವರು."(ಸಂ: ಹೆರಂಜೆ ಕೃಷ್ಣ ಭಟ್ಟ ಪ್ರೊ., 1999, ಪು-388)

**ಗ್ರಂಥಪ್ರಕಾಶನ-ಪತ್ರಿಕಾ ಪ್ರಕಾಶನ:-**

"ಪೇಜಾವರಶ್ರೀಗಳ ಬಹುಮುಖ್ಯ ಚಟುವಟಿಕೆಗಳಲ್ಲಿ ಗ್ರಂಥಪ್ರಕಾಶನವೂ ಒಂದಾಗಿದೆ. ಮಧ್ವಾಚಾರ್ಯರಿಂದ ನೇರ ಪಾಠ ಕೇಳಿಸಿಕೊಂಡ ಪಲಿಮಾರು ಮಠದ ಮೂಲ ಯತಿಗಳಾದ ಹೃಷೀಕೇಶತೀರ್ಥರು ಮಧ್ವಾಚಾರ್ಯರಿಂದ ಕಂಠೋಕ್ತವಾಗಿ ಕೇಳಿಸಿಕೊಂಡ ಪಾಠದ ವಿವರಗಳನ್ನು ತಮ್ಮ ಕೈಬರಹದಲ್ಲಿ ಬರೆದಿಟ್ಟದ್ದು, ಇದನ್ನು ಸರ್ವಮೂಲಗ್ರಂಥಗಳೆಂದು ಕರೆಯಲಾಗುತ್ತದೆ. ಪೇಜಾವರಶ್ರೀಗಳವರು ಪ್ರಯತ್ನಮಾಡಿ ಭಂಡಾರಕೇರಿ ಶ್ರೀ ಪಾದಂಗಳವರ ಸಹಾಯದಿಂದ ಹಾಗೂ ಗದುಗಿನ ಕೆ. ನಾರಾಯಣರಾಯರ ಆರ್ಥಿಕ ನೆರವಿನಿಂದ ಹೃಷೀಕೇಶತೀರ್ಥರ ಪಾಠಾಂತರವನ್ನು ಪ್ರಪ್ರಥಮವಾಗಿ ಉಡುಪಿಯಲ್ಲಿ ಪ್ರಕಾಶನಪಡಿಸಿದರು, ಹಾಗೂ ಆಚಾರ್ಯರ ದಶಪ್ರಕರಣಗಳೆಂದು ಪ್ರಸಿದ್ಧವಾದ ಹತ್ತು ಮುತ್ತಿನಂತಹ ಗ್ರಂಥಗಳನ್ನು ಬೇರೆ ಬೇರೆ ವ್ಯಾಖ್ಯಾನ ವಿವರಣೆಗಳೊಂದಿಗೆ ಪ್ರಕಾಶನಪಡಿಸಿದರು."(ಪೂರ್ವೋಕ್ತ., ಪು-402)

**ಮಧ್ವರ ಮೂಲಗ್ರಂಥ ಕನ್ನಡಕ್ಕೆ:-** ಆಚಾರ್ಯಮಧ್ವರ ಸಂಸ್ಕೃತಗ್ರಂಥಗಳ ಸೈದ್ಧಾಂತಿಕತತ್ವಗಳು ಜನಸಾಮಾನ್ಯರಿಗೆ ಸಲಭವಾಗಿ ತಿಳಿಯಬೇಕೆಂಬ ಅಪೇಕ್ಷೆಯಿಂದ ಈ ಗ್ರಂಥಗಳನ್ನು ತಜ್ಞಪಂಡಿತರ ನೆರವಿನಿಂದ ಕನ್ನಡಕ್ಕೆ ಅನುವಾದವನ್ನು ಮಾಡಿಸಿ, 'ಮಾಧ್ವಮಂಡಳಿ'ಯ ವತಿಯಿಂದ ಪ್ರಕಟಿಸಿದ್ದಾರೆ. ಇದೇ ಸಾಲಿನಲ್ಲಿ ಹೆಸರಿಸಬೇಕಾದ ಅವರದೇ ಕನ್ನಡ ಕೃತಿ 'ಗೀತಾಸಾರೋದ್ಧಾರ'ವನ್ನು ಉಲ್ಲೇಖಿಸಬಹುದಾಗಿದೆ.

**ಪತ್ರಿಕಾಪ್ರಪಂಚಕ್ಕೆ ನೀಡಿದ ಕೊಡುಗೆ:-** ಮಾಧ್ವಮಹಾಮಂಡಳಿಯ ವೈಚಾರಿಕ ಚಿಂತನೆಯನ್ನು ಪ್ರತಿಯೊಬ್ಬ ಮಾಧ್ವನಿಗೂ ತಿಳಿಯಪಡಿಸಲೋಸುಗ ತತ್ತ್ವವಾದ ಎಂಬ ಪತ್ರಿಕೆಯನ್ನು 35 ವರ್ಷದಿಂದ ನಡೆಸಿಕೊಂಡು ಬರುತ್ತಿದ್ದಾರೆ. ತಮ್ಮ ಒಟ್ಟಾರೆ

ಚಟುವಟಿಕೆಗಳಲ್ಲಿ ಗ್ರಂಥಪ್ರಕಾಶನ ಚಟುವಟಿಕೆಯೂ ಒಂದಾದ ಕಾರಣ ಇದಕ್ಕಾಗಿ ಪ್ರತ್ಯೇಕವಾದ 'ಆನಂದತೀರ್ಥಪ್ರತಿಷ್ಠಾನ' ಎಂಬ ಪ್ರಕಾಶನಸಂಸ್ಥೆಯನ್ನು ಆರಂಭಿಸಿ, ಇದರ ಮೂಲಕ ಜನಸಾಮಾನ್ಯರಿಗೆ ಬೇಕಾಗುವ 'ಆಚಾರ-ವಿಚಾರ' ಎಂಬ ಪತ್ರಿಕೆಯನ್ನೂ ಧಾರ್ಮಿಕಗ್ರಂಥಗಳನ್ನೂ ಪ್ರಕಟಿಸುವ ಯೋಜನೆಗೆ ನೆರವು ನೀಡುತ್ತಾ ಬಂದಿರುವರು.

**ಸಾಂಸ್ಕೃತಿಕ ಕಾಳಜಿ:** ಅವರ ಸಾಂಸ್ಕೃತಿಕ ಕಾಳಜಿಯ ಬಗೆಯನ್ನು ಅವರ ಮೊದಲ ಪರ್ಯಾಯದ ಸಂದರ್ಭದಲ್ಲಿಯೇ ಗುರುತಿಸಲಾಗಿದೆ. ಈ ಕುರಿತಂತೆ ಪೇಜಾವರೇ ಶ್ರೀಗಳೇ ಹೇಳಿಕೊಂಡ ಒಂದು ಘಟನೆ ಹೀಗಿದೆ. 1953ರಲ್ಲಿ ತಮ್ಮ ಮೊದಲ ಪರ್ಯಾಯದ ಸಂದರ್ಭದಲ್ಲಿ ಹಮ್ಮಿಕೊಂಡ ಮಾಧ್ವತತ್ತ್ವಜ್ಞಾನಸಮ್ಮೇಳನದ ಸಂದರ್ಭದಲ್ಲಿ ಯಕ್ಷಗಾನ ಕಲಾಪ್ರದರ್ಶನಕ್ಕೆ ಅವಕಾಶ ನೀಡಬೇಕೆಂದು ಕುರಿಯ ವಿಠಲ ಶಾಸ್ತ್ರಿಗಳು ಕೇಳಿಕೊಂಡ ಮೇರೆಗೆ ರಾತ್ರಿಕಾಲದಲ್ಲಿ ಸಮ್ಮೇಳನ ಉದ್ಘಾಟನೆಗೊಂಡ ವೇದಿಕೆಯಲ್ಲಿ ಅವಕಾಶ ನೀಡುವುದಕ್ಕೆ ಸ್ವಾಮೀಜಿಯವರು ಒಪ್ಪಿಕೊಳ್ಳುತ್ತಾರೆ. "ಆದರೆ ಸ್ವಾಗತ ಸಮಿತಿಯವರು ಇದಕ್ಕೆ ಒಪ್ಪಲಿಲ್ಲ. ಇಂಥ ಭವ್ಯಸಮಾರಂಭದಲ್ಲಿ ಇಷ್ಟು ಸುಂದರವಾಗಿ ನಿರ್ಮಿಸಿದ ಸಭಾಂಗಣ ಹಾಗೂ ವೇದಿಕೆಯಲ್ಲಿ ಈ ಗ್ರಾಮ್ಯ ಕಲೆಯಾದ ಯಕ್ಷಗಾನವನ್ನು ಪ್ರದರ್ಶಿಸುವುದು ಎಷ್ಟು ಮಾತ್ರಕ್ಕೂ ಶೋಭಿಸುವುದಿಲ್ಲವೆಂದು ಅವರೆಲ್ಲರೂ ಪ್ರತಿಭಟಿಸಿದರು. ನನಗೂ ಆಗ ಚಿಕ್ಕವಯಸ್ಸು, ಹೀಗೆ ಅವರ ಒತ್ತಡಕ್ಕೆ ಮಣಿದು, ಉಪಾಯವಿಲ್ಲದೇ ಕೃಷ್ಣಮಠದ ವಸಂತಮಹಲ್‌ನಲ್ಲಿ ಈ ಕಾರ್ಯಕ್ರಮವನ್ನು ನಡೆಸಿದೆ... ನಾನು ವ್ಯಥೆಪಟ್ಟೆ, ನಮ್ಮ ಜಾನಪದ ಕಲೆಯ ಬಗ್ಗೆ ಅಂತಹ ತಿರಸ್ಕಾರ, ಅಸಡ್ಡೆ ಆಗ ಇತ್ತು. ಆದರೆ ಈಗ ಜನರ ಮನೋಭಾವನೆಯಲ್ಲಿ ಬದಲಾವಣೆಯಾಗಿದೆ."(ಪೂರ್ವೋಕ್ತ., ಪು-753) ಇವರ ಸಾಂಸ್ಕೃತಿಕ ಚಟುವಟಿಕೆಯ ವಿವರಣೆಯನ್ನು ಸಾಂತೂರು ಶ್ರೀನಿವಾಸ ತಂತ್ರಿಯವರು ನಿರೂಪಿಸುವ ರೀತಿ ಹೀಗಿದೆ. "ಪೇಜಾವರಶ್ರೀಗಳವರ ಪರ್ಯಾಯವೆಂದರೆ ಉಡುಪಿಯ ಕೃಷ್ಣನಿಗೆ ನಿತ್ಯೋತ್ಸವ. ಉಡುಪಿಯ ನಾಗರಿಕರಿಗೆ ಧಾರ್ಮಿಕ-ಸಾಂಸ್ಕೃತಿಕ ವೈವಿಧ್ಯಮಯ ಕಾರ್ಯಕ್ರಮಗಳ ಸುಗ್ಗಿ... ಪ್ರತಿಭಾನ್ವಿತ ವಿದ್ವಾಂಸರ ಪ್ರವಚನ, ಉಪನ್ಯಾಸ, ಹರಿಕಥೆ, ಸಂಗೀತ ಕಛೇರಿ, ನೃತ್ಯಕಾರ್ಯಕ್ರಮ, ನಾಟಕ, ಯಕ್ಷಗಾನಗಳ ಅವಿರತ ಮನೋರಂಜನೆ. ವಾರದಲ್ಲಿ ಏನಿಲ್ಲವೆಂದರೂ ಒಂದೆರಡು ಧಾರ್ಮಿಕ, ಸಾಂಸ್ಕೃತಿಕ ಕಾರ್ಯಕ್ರಮಗಳು ಮಾಮೂಲು."(ಪೂರ್ವೋಕ್ತ, ಪು-411)

ಇವರು ತಮ್ಮ ಮೂರನೆಯ ಪರ್ಯಾಯಾವಧಿಯಲ್ಲಿ ನಡೆಸಿದ ಸಾಹಿತ್ಯ ಚಟುವಟಿಕೆಗಳ ಸಮಗ್ರವಿವರಗಳನ್ನು **ಪೇಜಾವರ ಪ್ರಶಸ್ತಿ** ಎಂಬ ಕೃತಿಯ 419 ರಿಂದ 434ರ ವರೆಗೆ ದಾಖಲಾಗಿರುವುದನ್ನು ಗಮನಿಸಬಹುದು.(ಪೇಜಾವರ ಪ್ರಶಸ್ತಿ, ಸಂ: ಹೆರಂಜೆ ಕೃಷ್ಣ ಭಟ್ಟ ಮತ್ತು ಮುರಳೀಧರ ಉಪಾಧ್ಯ ಹಿರಿಯಡಕ) ಕನ್ನಡ ಸಾಹಿತ್ಯದ ಎಲ್ಲ ಪ್ರಕಾರಗಳಿಗೂ ಪ್ರಾಮುಖ್ಯವನ್ನು ನೀಡುತ್ತಾ ಚಟುವಟಿಕೆಯ ವಿವಿಧಪ್ರಕಾರಗಳಿಗೆ (ಗೋಷ್ಠಿ, ಉಪನ್ಯಾಸ, ಕಾರ್ಯಾಗಾರ, ಕಮ್ಮಟ, ಸಂವಾದ ) ಅವಕಾಶ ನೀಡಿರುವುದನ್ನು ಗಮನಿಸಬಹುದಾಗಿದೆ.

"ಪೇಜಾವರ ಪರ್ಯಾಯ ನೂರಾರು ಕಲಾವಿದರು ಮತ್ತು ಸಾವಿರಾರು ಕಲಾಸಹೃದಯರು ಎಂದೆಂದೂ ಮರೆಯಲಾರದ ಮಧುರ ಸ್ಮೃತಿಗಳ ಸುವರ್ಣೋತ್ಸವ ಶ್ರೀಕೃಷ್ಣಮಠದ ರಾಜಾಂಗಣ, ರಂಗಸ್ಥಳಕ್ಕೊಂದು ಯತಿ ಒದಗಿಸಿದ

ರಾಜಾಶ್ರಯವಾಯಿತು. ದಿನದಿನವೂ ಕಲಿಯುಗ ದ್ವಾಪರವಾಯಿತು..."(ಸಂ: ಸಂಧ್ಯಾ ಎಸ್. ಪೈ., 2002, ಪು-44) ಎಂದು ಉದ್ಯಾವರ ಮಾಧವ ಆಚಾರ್ಯರು ಉಲ್ಲೇಖಿಸಿದ್ದಾರೆ.

ಸರ್ವರ ಹಿತವನ್ನು ಬಯಸುವ, ಸಾಹಿತ್ಯ-ಸಾಂಸ್ಕೃತಿಕ-ಧಾರ್ಮಿಕಸಮಾವೇಶಗಳಲ್ಲಿ ತಮ್ಮನ್ನು ಸದಾ ತೊಡಗಿಸಿಕೊಂಡ ಸ್ವಾಮೀಜಿಯವರು, ಗಾಂಧೀಜಿಯವರ ವಿಚಾರಧಾರೆಗಳಿಂದ ಪ್ರಭಾವಿತರಾದವರು. ಉಳಿದೆಲ್ಲಾ ಏಳು ಮಠಗಳಿಂದ ತಮ್ಮ ಮಠ ಭಿನ್ನವಾಗಿರಬೇಕೆಂಬ ಬಯಕೆ ಮತ್ತು ಗರಿಷ್ಠಸಾಧನೆಯ ಉತ್ತುಂಗಶಿಖರವನ್ನೇರಬೇಕೆಂಬ ಕಾಳಜಿಯೇ ಅವರ ಚಟುವಟಿಕೆಯ ಹಿಂದಿನ ಮೂಲೋದ್ದೇಶವಾಗಿದೆ. ಯಾವುದೇ ಸಂದರ್ಭದಲ್ಲೂ ಯಾರ ಮನಸ್ಸನ್ನೂ ನೋಯಿಸಬಯಸದ ತಮ್ಮ ನಿಲುವಿನಿಂದ ಎಷ್ಟೋ ಬಾರಿ ತಾವೇ ಸಾಕಷ್ಟು ಗೊಂದಲಕ್ಕೊಳಗಾಗಿದ್ದಾರೆ. ತಮ್ಮ ನಿರ್ಧಾರದಿಂದ ತಾವೇ ಸಾಕಷ್ಟು ವಿಚಲಿತರಾಗಿದ್ದಾರೆ; ಮತ್ತು ಅಧ್ವಾನಕ್ಕೊಳಗಾಗಿದ್ದಾರೆ. ಇಂತಹ ಒಂದು ಪ್ರಸಂಗ ಗೋಕಾಕ್ ಚಳವಳಿಯ ಸಂದರ್ಭವೆನ್ನಬಹುದು. "ಸಂಸ್ಕೃತವೂ ಬೇಕು, ಕನ್ನಡಕ್ಕೆ ಅಪಚಾರವಾಗಲೇ ಬಾರದು" ಎಂಬ ನಿಲುವು ವಿಶ್ವೇಶತೀರ್ಥರದ್ದಾಗಿತ್ತು. ಈ ಸಮಸ್ಯೆಯು ರಾಜ್ಯವ್ಯಾಪಿ ಆಂದೋಲನದ ಸ್ವರೂಪವನ್ನು ತಳೆಯಿತು. "ಕನ್ನಡಿಗರ ವಿರೋಧಿಯಲ್ಲ, ಸಂಸ್ಕೃತದ ವ್ಯಾಮೋಹದಿಂದ ಮುಕ್ತನಲ್ಲ" ಎಂಬೀ ಶ್ರೀಪಾದರ ವಿಚಾರಧಾರೆಯ ಹೇಳಿಕೆಗಳಿಂದ ಕನ್ನಡಿಗರ ಸಂಬಂಧವೂ ಹಾಳಾಗದೆ ಸಂಸ್ಕೃತನಿಷ್ಠೆಗೂ ಚ್ಯುತಿ ಬಾರದಂತೆ ಮೇಲಿನಂತೆ ಹೇಳಿಕೆ ನೀಡಿ, ತೀರಾ ಗೊಂದಲಕ್ಕೂ ಮುಜುಗರಕ್ಕೂ ಒಳಗಾದರು. ಇಂತಹ ನೂರಾರು ಪ್ರಸಂಗಗಳು ನಾಲ್ಕು ಪರ್ಯಾಯವನ್ನು ಕಳೆದು ಐದನೇ ಪರ್ಯಾಯ ಪೀಠಕ್ಕೇರಿರುವ ಸ್ವಾಮೀಜಿಯವರ ಬದುಕಿನಲ್ಲಿ ನಡೆದಿದೆ.

ಪೇಜಾವರಶ್ರೀಗಳವರ 1984-86ರ ಪರ್ಯಾಯವಸರದ ಎರಡು ವರ್ಷಗಳ 730 ದಿನಗಳಲ್ಲಿ ಅನುದಿನವೂ ಒಂದಲ್ಲ ಒಂದು ಧಾರ್ಮಿಕ ಹಾಗೂ ಸಾಂಸ್ಕೃತಿಕ ಸತ್ಕಾರ್ಯಕ್ರಮಗಳು ಜರಗುತ್ತಾ ಬಂದುದು ಗಮನಾರ್ಹ. ವರ್ಷವಿಡೀ ದಿನಂಪ್ರತಿ ನೆರವೇರಿದ ಈ ಸತ್ಕಾರ್ಯದಲ್ಲಿ ಸಂಪನ್ಮೂಲ ಅಭ್ಯಾಗತರು ಭಾಗವಹಿಸದೆ ಬಿಡುವಿದ್ದ ನಡುವಿನ ದಿನಗಳಲ್ಲಿ ಪರ್ಯಾಯ ಪೀಠಾಧೀಶ ಶ್ರೀಗಳವರೆ ರಾಮಾಯಣ, ಭಾರತ, ಭಾಗವತ, ಗೀತೆಯ ಕುರಿತಾಗಿ ಪ್ರವಚನವನ್ನು ಅನುಕ್ರಮವಾಗಿ ಗೈದಿರುವುದು ಮಹತ್ವಪೂರ್ಣ ವಿಚಾರವಾಗಿದೆ.

20ನೇ ಶತಮಾನದಲ್ಲಿ ನಾಲ್ಕು ಪರ್ಯಾಯಗಳನ್ನು ಯಶಸ್ವಿಯಾಗಿ ಪೂರೈಸಿದ ವಿಶ್ವೇಶತೀರ್ಥರು 2015ನೇ ಜನವರಿ 14ರಿಂದ ಐದನೇ ಪರ್ಯಾಯದಲ್ಲಿದ್ದಾರೆ. ಸ್ವತಃ ಕಲೆ, ಸಾಹಿತ್ಯ, ಸಂಗೀತದಲ್ಲಿ ಎಳವೆಯಿಂದಲೇ ಅಭಿರುಚಿ ಮೂಡಿಸಿಕೊಂಡ ಪೇಜಾವರರು ತಮ್ಮ ಪರ್ಯಾಯದ ಅವಧಿಯಲ್ಲಿ ಸಾಹಿತ್ಯ, ಸಂಗೀತ, ಮುಂತಾದ ಸಾಂಸ್ಕೃತಿಕ ಚಟುವಟಿಕೆಗಳಿಗೆ ವಿಶೇಷ ಬೆಂಬಲಕೊಟ್ಟರು. ಅಷ್ಟಮಠಗಳಲ್ಲಿ ತಮ್ಮ ಮಠವೇ ಮೇಲ್ಮಟ್ಟದಲ್ಲಿರಬೇಕೆಂಬ ತುಡಿತ ಹಾಗೂ ಈ ಚಟುವಟಿಕೆಗಳಿಂದ ಪ್ರಾಪ್ತವಾಗುವ ಆತ್ಮಸಂತೋಷ ಮತ್ತು ಸಾಮಾಜಿಕಪ್ರತಿಷ್ಠೆ ಅಥವಾ ಮಾನ್ಯತೆಯೇ ಪೇಜಾವರ ವಿಶ್ವೇಶತೀರ್ಥರ ಕಾರ್ಯಚಟುವಟಿಕೆಗಳ ಹಿಂದಿನ ಪ್ರೇರಣೆ ಎನ್ನುವುದನ್ನು ಗುರುತಿಸಬಹುದಾಗಿದೆ.

**ಶೀರೂರುಮಠದ ವತಿಯಿಂದ ನಡೆದ ಕನ್ನಡ ಸಾಹಿತ್ಯ ಚಟುವಟಿಕೆಗಳು:**

ಶ್ರೀಕೃಷ್ಣದೇವಸ್ಥಾನಕ್ಕೆ ಅತ್ಯಂತ ಸಮೀಪವಿರುವ ಮಠವೇ ಶೀರೂರು ಮಠವಾಗಿದ್ದು, ಇದರ ಪ್ರಧಾನಮಠ ಇರುವುದು ಹಿರಿಯಡ್ಕ ಸಮೀಪದ ಶೀರೂರು ಗ್ರಾಮದಲ್ಲಾದ ಕಾರಣ ಈ ಮಠವನ್ನು ಶೀರೂರುಮಠ ಎಂದು ಕರೆಯಲಾಗುತ್ತದೆ.

ಮಧ್ವಾಚಾರ್ಯರ ಕಾಲದಿಂದ ಈವರೆಗೆ ಈ ಮಠದ 31 ಮಂದಿ ಯತಿಶ್ರೇಷ್ಠರು ಶ್ರೀಕೃಷ್ಣಪೂಜೆಯ ಜವಾಬ್ದಾರಿಯನ್ನು ನಿರ್ವಹಿಸುತ್ತಾ, ಮಠದ ಆಡಳಿತದ ಹೊಣೆಯನ್ನು ನಿಭಾಯಿಸಿದ್ದರು. ಉಳಿದೆಲ್ಲಾ ಮಠಗಳಿಂತ ಹೆಚ್ಚಾಗಿ ಶೀರೂರುಮಠವು ಕೆಲವು ವೈಶಿಷ್ಟ್ಯಗಳನ್ನು ಉಳಿಸಿಕೊಂಡು ಬಂದಿರುವುದಲ್ಲದೆ ಈ ವೈಶಿಷ್ಟ್ಯಗಳಿಂದಾಗಿ ಅದು ಇತರ ಮಠಗಳಿಗಿಂತ ಭಿನ್ನವಾಗಿ ಕಾಣಿಸುತ್ತದೆ. ಶ್ರೀಮಠದ ಚಟುವಟಿಕೆಗಳು ಪರಂಪರೆಗೆ ಬದ್ಧವಾಗದೆ, ಆಧುನಿಕತೆಗೆ ಸ್ಪಂದಿಸುತ್ತಾ, ಪ್ರಗತಿಪರ ನಿಲುವುಗಳಿಗೆ ತೆರೆದುಕೊಂಡಿದೆ ಎಂಬುದೇ ಶೀರೂರುಮಠದ ವೈಶಿಷ್ಟ್ಯ. ಮಠದ ಪರಂಪರೆಯ ಚೌಕಟ್ಟನ್ನು ಮೀರಿ, ವರ್ತಮಾನದ ವಿದ್ಯಮಾನಗಳಿಗೆ ಸ್ಪಂದಿಸಲು ಬೇಕಾದ ಧೈರ್ಯ ಮತ್ತು ಬೌದ್ಧಿಕಪ್ರೌಢಿಮೆ ಅವಶ್ಯವಾಗುತ್ತದೆ. ಆ ಎರಡನ್ನೂ ಈಗಿನ ಯತಿವರ್ಯರಾದ ಶ್ರೀ ಶ್ರೀ ಲಕ್ಷ್ಮೀವರತೀರ್ಥರು ತಮ್ಮ ವ್ಯಕ್ತಿತ್ವದಲ್ಲಿ ಮೇಳೈಸಿಕೊಂಡು 20ನೇ ಶತಮಾನದ ಕಾಲಾವಧಿಯಲ್ಲಿ ಯಶಸ್ವಿಯಾಗಿ ಎರಡು ಪರ್ಯಾಯಗಳನ್ನು ಪೂರೈಸಿದ್ದಾರೆ.

20ನೇ ಶತಮಾನದ ಪೂರ್ವಾರ್ಧದಲ್ಲಿ ಮಠದ ಜವಾಬ್ದಾರಿಯನ್ನು ಪೂರೈಸಿಕೊಂಡು ಬಂದ ಈ ಮಠದ ಯತಿಗಳು ಪರಂಪರೆಯಿಂದ ನಡೆಸಿಕೊಂಡು ಬಂದ ಧಾರ್ಮಿಕ ಚಟುವಟಿಕೆಗಳಿಗಷ್ಟೇ ಸೀಮಿತಗೊಂಡಿದ್ದರು. ಆದರೆ 20ನೇ ಶತಮಾನದ ಉತ್ತರಾರ್ಧದಲ್ಲಿ ಪ್ರಗತಿಪರ ನಿಲುವುಗಳನ್ನು ಮೈಗೂಡಿಸಿಕೊಂಡು ಆಧುನಿಕತೆಗೆ ಸ್ಪಂದಿಸುವ ಅನಿವಾರ್ಯತೆಯನ್ನು ಅರ್ಥೈಸಿಕೊಂಡ ಈ ಮಠದ 30ನೇ ಯತಿಗಳಾದ ಶ್ರೀ ಶ್ರೀ ಲಕ್ಷ್ಮೀವರತೀರ್ಥ ಶ್ರೀಪಾದರು ಈಗಾಗಲೇ ಹೇಳಿದಂತೆ ತಮ್ಮ ಪ್ರಗತಿಪರ ನಿಲುವುಗಳಿಂದ ತಮ್ಮ ಕಾರ್ಯಕ್ಷೇತ್ರವನ್ನು ವಿಸ್ತರಿಸಿಕೊಂಡರು.

**ಶ್ರೀಮಠದಿಂದ ನಿರ್ವಹಿಸಲಾದ ಸಾಹಿತ್ಯ ಚಟುವಟಿಕೆಗಳ ಸಂಕ್ಷಿಪ್ತ ಅವಲೋಕನ:**

ಯತಿವರ್ಯರಾದ ಶ್ರೀ ಶ್ರೀ ಲಕ್ಷ್ಮೀವರತೀರ್ಥಶ್ರೀಪಾದರು ತಮ್ಮ ಪರ್ಯಾಯಾವಧಿಯಲ್ಲಿ ಮಠವು ಒಂದು ಶೈಕ್ಷಣಿಕಸಂಸ್ಥೆಯು ನಿರ್ವಹಿಸಬಹುದಾದ ರೀತಿಯಲ್ಲಿ ಸಾಹಿತ್ಯ ಚಟುವಟಿಕೆಗಳಿಗೆ ಅವಕಾಶ ಮಾಡಿಕೊಟ್ಟರು. ಆ ಸಾಹಿತ್ಯ ಚಟುವಟಿಕೆಗಳ ಒಂದೊಂದು ವಿವರಗಳನ್ನು ಇಲ್ಲಿ ಪ್ರಸ್ತಾಪಿಸದೇ ಆ ವೈಶಿಷ್ಟ್ಯಗಳನ್ನು ಹೀಗೆ ಉಲ್ಲೇಖಿಸಬಹುದಾಗಿದೆ.

1) **ಧಾರ್ಮಿಕ ಮಹತ್ವದ ದಿನಗಳಂದು ಸಾಹಿತ್ಯ ಚಟುವಟಿಕೆಗಳಿಗೆ ಅವಕಾಶ:** ತಮ್ಮ ಪರ್ಯಾಯಾವಧಿಯಲ್ಲಿ ಬರುವ ವಿಶೇಷ ಧಾರ್ಮಿಕ ಮಹತ್ವದ ದಿನಗಳಾದ ನರಕಚತುರ್ದಶಿ, ಬಲೀಂದ್ರಪೂಜೆ-ದೀಪಾವಳಿಯ ಹಬ್ಬವನ್ನು ಸಂಪ್ರದಾಯಬದ್ಧವಾಗಿಯೇ ಆಚರಿಸಿ, ಅಪರಾಹ್ನ (ಅಂದು ಕನ್ನಡ ರಾಜ್ಯೋತ್ಸವ ದಿನವಾದ ಪ್ರಯುಕ್ತ) ಕನ್ನಡ ರಾಜ್ಯೋತ್ಸವವನ್ನು ಆಚರಿಸಿದರು. ರಾಜ್ಯೋತ್ಸವದ ನೆನಪಿಗಾಗಿ ಕನ್ನಡದ ಹಿರಿಯ ಸಾಹಿತಿ ಮತ್ತು ವಿದ್ಯಾರ್ಥಿಗಳ ನೆಚ್ಚಿನ ಗುರುಗಳೂ ಆಗಿದ್ದ ಪ್ರೊ. ಎಸ್. ವಿ. ಪರಮೇಶ್ವರ ಭಟ್ಟ ಅವರನ್ನು ಆದರಪೂರ್ವಕವಾಗಿ ಮಧ್ವಪೀಠದಲ್ಲಿ ಸನ್ಮಾನಿಸಿದರು. 'ಇದು ಶ್ರೀಪಾದರು ಸಾಹಿತ್ಯ ಹಾಗೂ ಸಾಹಿತಿಗಳ ಮೇಲಿಟ್ಟ ಅಭಿಮಾನದ ಸಂಕೇತ'(ಸಂ: ಪಾದೇಕಲ್ಲು ವಿಷ್ಣು ಭಟ್ಟ, ಶಿವಸ್ವಾಮಿ ಹೊಸ್ಕೆರೆ ಡಾ., 1996, ಸಂಪಾದಕೀಯ) ಎಂದು ಅನ್ನವಿಠಲ ಕೃತಿಯ ಸಂಪಾದಕರು ತಮ್ಮ ಅಭಿಪ್ರಾಯವನ್ನು ನೇರವಾಗಿಯೇ ಮಂಡಿಸಿರುತ್ತಾರೆ.

2) ನವರಾತ್ರಿ ಮತ್ತು ವಿಜಯದಶಮಿಯಂದು ಮಠದ ಪರಂಪರೆಯಂತೆ ಧಾರ್ಮಿಕ ಪೂಜಾ ವಿಧಿ-ವಿಧಾನಗಳನ್ನು ಪೂರೈಸಿದ ಅನಂತರ ಅದೇ ದಿನ ಪೂರ್ವಾಹ್ನದ ಅವಧಿಯಲ್ಲಿ ರಾಜ್ಯಪ್ರಶಸ್ತಿವಿಜೇತರಾದ ಹಿರಿಯ ವಿದ್ವಾಂಸ ಶ್ರೀ ಎನ್. ರಂಗನಾಥ

ಶರ್ಮ ಮತ್ತು ಸ್ಥಳೀಯ ಕನ್ನಡ ಸಾಹಿತ್ಯ ವಿದ್ವಾಂಸ ಪ್ರೊ. ಕು.ಶಿ. ಹರಿದಾಸ ಭಟ್ಟ ಮತ್ತು ಮಣಿಪಾಲ ವೈದ್ಯಕೀಯ ಕಾಲೇಜಿನ ಪ್ರೊ. ಲಕ್ಷ್ಮೀನಾರಾಯಣ ರಾವ್ ಇವರನ್ನು ಸತ್ಕರಿಸಿದರು.

3) **ಮಧ್ವಜಯಂತಿಯಂದು ಹಮ್ಮಿಕೊಂಡ ವಿಚಾರಗೋಷ್ಠಿ:** ಮಧ್ವಮತದ ಸಂಸ್ಥಾಪಕ ಮಧ್ವಾಚಾರ್ಯರ ಜನ್ಮನಕ್ಷತ್ರದಂದು ಮಧ್ವಜಯಂತಿಯನ್ನು ಆಚರಿಸುವುದು ಉಡುಪಿ ಅಷ್ಟಮಠಗಳ ಸತ್‌ಸಂಪ್ರದಾಯಗಳಲ್ಲೊಂದು. ಸ್ವಾಮೀಜಿಯವರು ಸಂಪ್ರದಾಯಕ್ಕೆ ಬದ್ಧರಾಗಿ ಅಂದು ಸಂಸ್ಕೃತ ಸಾಹಿತ್ಯದಲ್ಲಿ ಪ್ರತಿಪಾದಿತವಾದ 'ಮಧ್ವತತ್ವಗಳು' ಎಂಬ ವಿಷಯದ ಕುರಿತು ವಿಚಾರಗೋಷ್ಠಿಯನ್ನು ಹಮ್ಮಿಕೊಂಡರು. ಸ್ಥಳೀಯ ಸಂಸ್ಕೃತ ಕಾಲೇಜಿನ ಪ್ರಾಧ್ಯಾಪಕರೂ ಪರವೂರಿನ ಅನೇಕ ಸಂಸ್ಕೃತ ವಿದ್ವಾಂಸರೂ ವಿವಿಧ ವಿಷಯಗಳ ಕುರಿತು ಪ್ರಬಂಧ ಮಂಡಿಸಿದ್ದರು.

4) **ಮಠದ ಪರಿಸರದಲ್ಲಿ ಆಚರಿಸಿದ ಸ್ವಾತಂತ್ರ್ಯ ದಿನಾಚರಣೆ:** ಸ್ವಾತಂತ್ರ್ಯದಿನಾಚರಣೆ ಕೇವಲ ಸರಕಾರಿ ಕಚೇರಿ ಹಾಗೂ ಶಾಲಾ-ಕಾಲೇಜುಗಳಿಗೆ ಮಾತ್ರ ಸೀಮಿತವಾದ ಆಚರಣೆಯಾಗಬಾರದು ಎನ್ನುವುದು ಸ್ವಾಮೀಜಿಯವರ ಹೇಳಿಕೆಯಾಗಿತ್ತು. ಈ ಹೇಳಿಕೆಗೆ ಅನುಗುಣವಾಗಿ 'ರಾಷ್ಟ್ರಧರ್ಮಕ್ಕೆ ಬದ್ಧವಾಗಿಯೇ ಮಠಧರ್ಮ' ಎಂಬ ತತ್ತ್ವದಲ್ಲಿ ಅಗೋಸ್ಟ್ 14ರ ಅಪರಾಹ್ನ ಜಿಲ್ಲೆಯ ಮೊದಲ ಸಾಲಿನ ಕಲಾವಿದರ ಕೂಡುವಿಕೆಯಲ್ಲಿ ತಾಳಮದ್ದಳೆಯನ್ನು ಸಂಯೋಜಿಸಿ, ಅಗಸ್ಟ್ 15ರಂದು ಪೂರ್ವಾಹ್ನ ರಾಜ್ಯ ಮಟ್ಟದ ಕನ್ನಡ ಪ್ರಬಂಧಸ್ಪರ್ಧೆಯನ್ನು ಆಯೋಜಿಸಿ, ಸ್ವಾತಂತ್ರ್ಯ ದಿನಾಚರಣೆಯ ಸಂದರ್ಭದಲ್ಲಿ ಕಾಲೇಜು ವಿದ್ಯಾರ್ಥಿಗಳು ರಾಷ್ಟ್ರದ ಕುರಿತಾಗಿ ಚಿಂತಿಸುವುದಕ್ಕೆ ಅವಕಾಶ ಕಲ್ಪಿಸಿಕೊಟ್ಟರು.

5) **ವಯೋವೃದ್ಧ ಸಾಹಿತಿಗಳಿಗೆ ಸ್ವಗೃಹದಲ್ಲೇ ಸನ್ಮಾನ:** ನಾಡಿನ ವಯೋವೃದ್ಧರೂ, ಜ್ಞಾನವೃದ್ಧರೂ ಆದ ಹಿರಿಯ ಚೇತನ, ಶಬ್ದಬ್ರಹ್ಮ ಎಂದೇ ಖ್ಯಾತರಾದ ಕನ್ನಡ ಸಾಹಿತಿ, ಶ್ರೀ ಸೇಡಿಯಾಪು ಕೃಷ್ಣ ಭಟ್ಟರ ದೇಹಪ್ರಕೃತಿಯನ್ನು ಗಮನಿಸಿ, ಅವರ ಮನೆಯಲ್ಲೇ ಅವರನ್ನು ಮಠದ ಪರವಾಗಿ ವಿದ್ವಾಂಸರ ಮೂಲಕ, ಶ್ರೀಕೃಷ್ಣಜನ್ಮಾಷ್ಟಮಿಯಂದು ಸತ್ಕರಿಸಿ, ವಿದ್ವಜ್ಜನರ ಗಮನ ಸೆಳೆದರು.

6) **ರಾಮನವಮಿಯಂದು ಹರಿಕೀರ್ತನೆ:** 1995 ಎಪ್ರಿಲ್ 9 ರ ರಾಮನವಮಿಯಂದು ಧಾರ್ಮಿಕ ಆಚರಣೆ ಸಹಿತ ಹರಿದಾಸ ಶ್ರೀಶದಾಸರ ಹರಿಕಥಾಕಾರ್ಯಕ್ರಮವನ್ನು ಆಯೋಜಿಸಿದರು. ಕಾರ್ಯಕ್ರಮ ಮುಗಿದೊಡನೆ ರಂಗವಲ್ಲಿ ಮತ್ತು ಕೀರ್ತನ ಗಾಯನ ಸ್ಪರ್ಧೆಯನ್ನು ಪ್ರೌಢಶಾಲಾವಿದ್ಯಾರ್ಥಿಗಳಾಗಿ ಹಮ್ಮಿಕೊಂಡು ವಿಜೇತವಿದ್ಯಾರ್ಥಿಗಳಿಗೆ ನಗದು ಬಹುಮಾನ ಸಹಿತ ಪ್ರಮಾಣಪತ್ರದೊಂದಿಗೆ ಪುರಸ್ಕರಿಸಿದರು.

7) **ಶ್ರೀಕೃಷ್ಣಜನ್ಮಾಷ್ಟಮಿಯಂದು ಸಾಹಿತ್ಯಸ್ಪರ್ಧೆ:** ಅಗಸ್ಟ್ 15 1995ರಂದು ಮಠದಲ್ಲಿ ಶ್ರೀಕೃಷ್ಣಜನ್ಮಾಷ್ಟಮಿಯನ್ನು ಮಠದ ಪರಂಪರೆಯಂತೆ ವಿಧಿವತ್ತಾಗಿ ಆಚರಿಸಿ, ತದನಂತರ ಮಠದಲ್ಲಿ ಕಥಾಸ್ಪರ್ಧೆ, ರಸಪ್ರಶ್ನೆ ಎಂಬ ಎರಡು ರೀತಿಯ ಸಾಹಿತ್ಯ ಸ್ಪರ್ಧೆಯನ್ನು ಏರ್ಪಡಿಸಿ, ಅಪರಾಹ್ನದ ಅವಧಿಯಲ್ಲಿ ಬೆಂಗಳೂರಿನ ಸಾಹಿತಿ ಡಾ. ಪಿ.ವಿ. ನಾರಾಯಣ ಅವರು 'ಹಳಗನ್ನಡ ಕಾವ್ಯಗಳಲ್ಲಿ ಚಿತ್ರಿತವಾದ ಶ್ರೀಕೃಷ್ಣ' ಎಂಬ ವಿಷಯದ ಕುರಿತು ಉಪನ್ಯಾಸದ ವ್ಯವಸ್ಥೆ ಮಾಡಿದ್ದರು. ಸಾಹಿತ್ಯ ಸ್ಪರ್ಧೆಯಲ್ಲಿ ವಿಜೇತರಿಗೆ ಸಂಜೆಯ ಸಭೆಯಲ್ಲಿ ಬಹುಮಾನ ವಿತರಿಸಿ, ಶುಭ ಕೋರಿದರು.

**ಕಾರ್ಯಾಗಾರ, ಕಮ್ಮಟ, ಸಮ್ಮೇಳನ:** ಶ್ರೀಕೃಷ್ಣಮಠದ ಇತಿಹಾಸದಲ್ಲೇ ಮೊದಲ ಬಾರಿ ಲಕ್ಷ್ಮೀವರತೀರ್ಥಶ್ರೀಪಾದರು 1995 ನವೆಂಬರ್ 10–11ರಂದು ದ.ಕ. ಜಿಲ್ಲಾ ಎಂಟನೆಯ ಕನ್ನಡ ಸಾಹಿತ್ಯ ಸಮ್ಮೇಳನಕ್ಕೆ ತಮ್ಮ ಮಠದ ವತಿಯಿಂದ ವಿಶೇಷ ಆಶ್ರಯವನ್ನು ನೀಡಿದರು. ಈ ಸಾಹಿತ್ಯ ಸಮ್ಮೇಳನದ ಸವಿನೆನಪಿಗಾಗಿ ಹೊರತಂದ ಸ್ಮರಣಸಂಚಿಕೆಯೇ 'ಅಷ್ಟಮ'. ಈ ಸಂಚಿಕೆಯಲ್ಲಿ 'ನಮ್ಮ ಜಿಲ್ಲೆಯಲ್ಲಿ ಕನ್ನಡ ಸಾಹಿತ್ಯ' ಎಂಬ ವಿಷಯದ ಕುರಿತಂತೆ ಪ್ರೊ. ಎಂ. ರಾಜಗೋಪಾಲಾಚಾರ್ಯ ಅವರು ಪ್ರಬಂಧ ಮಂಡಿಸಿದ್ದು, "ಓದಿನಲ್ಲಿ ಸಂತೋಷಪಡುವ ಪ್ರವೃತ್ತಿ ಹಿಂದಾಗುತ್ತಾ ಇದೆ. ಇದು ಒಳಿತಲ್ಲ. ಜನರಲ್ಲಿ ಓದುವ ಅಭಿರುಚಿ, ಜ್ಞಾನಪಿಪಾಸೆ ಬೆಳೆಯಬೇಕು"(ಸಂ: ರಾಮ ಭಟ್ಟ ಉಪ್ಪಂಗಳ, 1995, ಪು–09) ಎಂದು ತಮ್ಮ ನಿಲುವನ್ನು ಮಂಡಿಸಿದ್ದನ್ನು ಗಮನಿಸಬಹುದು. ತಮ್ಮ ಎರಡು ಪರ್ಯಾಯಾವಧಿಯಲ್ಲಿ ಅವರು ನಡೆಸಿಕೊಂಡು ಬಂದ ವಿವಿಧ ಸಾಂಸ್ಕೃತಿಕ ಮತ್ತು ಸಾಹಿತ್ಯ ಕಾರ್ಯಕ್ರಮಗಳಿಗೆ ತಮ್ಮ ಕನ್ನಡಪರ ಕಾಳಜಿಗೆ ಒಂದು ಜ್ವಲಂತ ದೃಷ್ಟಾಂತ ಎಂಬಂತೆ ಸ್ವಾಮೀಜಿಯವರು ಎರಡು ದಿನಗಳ ಸಮ್ಮೇಳನಕ್ಕೆ ಅವಕಾಶವನ್ನು ಕಲ್ಪಿಸಿದರು. ಇಲ್ಲಿ ಆಶ್ರಯವೆಂದರೆ ಮಠದ ವತಿಯಿಂದ ಕೇವಲ ಭೌತಿಕ ವೇದಿಕೆ ಒದಗಿಸಿದ್ದು ಮಾತ್ರವಲ್ಲದೆ ಸಾಹಿತ್ಯಾಸಕ್ತ ವಿದ್ವಾಂಸ ಮತ್ತು ಸಹೃದಯರ ಊಟ–ಉಪಚಾರ ಪ್ರಶಸ್ತಿಪತ್ರ, ಸ್ಮರಣಿಕೆ, ವಾಸ್ತವ್ಯ ಈ ಮುಂತಾದ ಸರ್ವ ಜವಾಬ್ದಾರಿಗಳನ್ನು ನಿಭಾಯಿಸಿ, ತಮ್ಮ ಸಾಹಿತ್ಯ ಕಾಳಜಿ ಮತ್ತು ಗೌರವಾದರಗಳನ್ನು ಪ್ರಕಟಿಸಿದರು. ಧಾರ್ಮಿಕ ಚೌಕಟ್ಟಿಗೆ ಸಾಹಿತ್ಯ ಚಟುವಟಿಕೆಗಳನ್ನು ಬದ್ಧಗೊಳಿಸದೇ ಭಿನ್ನಭಿನ್ನ ವೈಚಾರಿಕ ಚಿಂತಕರಿಗೆ ಮಠದ ಆಶ್ರಯದಲ್ಲಿ ವೇದಿಕೆಯನ್ನು ನೀಡಿದರು.

**ಶಿಕ್ಷಕರ ಸಮ್ಮೇಳನ:** ದಿನಾಂಕ 04.01.1996ರಂದು ಸ್ವಾಮೀಜಿಯವರ ಆಶ್ರಯದಲ್ಲಿ ಜಿಲ್ಲಾ ಮಟ್ಟದ ಶಿಕ್ಷಕರ ಸಮ್ಮೇಳನವು ಯಶಸ್ವಿಯಾಗಿ ಜರುಗಿತು. ಶಿಕ್ಷಕರು ಸಾಹಿತ್ಯಾಸಕ್ತಿಯನ್ನೂ, ವಿದ್ಯಾರ್ಥಿಗಳನ್ನೂ ಆ ನಿಟ್ಟಿನಲ್ಲಿ ಪ್ರೇರೇಪಿಸುವುದನ್ನೂ ತಮ್ಮ ಬೋಧನೆಯಲ್ಲಿ ರೂಢಿಸಿಕೊಳ್ಳಬೇಕೆಂದು ತಮ್ಮ ಅನುಗ್ರಹ ಭಾಷಣದಲ್ಲಿ ಸ್ವಾಮೀಜಿಯವರು ನಿವೇದಿಸಿಕೊಂಡರು.

ದಿನಾಂಕ 07.01.1996ರಂದು ಪ್ರಾಥಮಿಕ ಹಾಗೂ ಪ್ರೌಢಶಾಲಾ ಮಕ್ಕಳಿಗಾಗಿ 'ಶುಭಾಶಯಪತ್ರ ತಯಾರಿಸುವ' ಒಂದು ದಿನದ ಕಾರ್ಯಾಗಾರವನ್ನು ಆಯೋಜಿಸಿದರು. ಪೂರ್ಣಪ್ರಜ್ಞ ಕಾಲೇಜಿನ ವಾಣಿಜ್ಯಶಾಸ್ತ್ರ ಪ್ರಾಧ್ಯಾಪಕರಾದ ಪ್ರೊ. ಎಂ.ಆರ್. ಹೆಗಡೆಯವರು ಕಾರ್ಯಾಗಾರದ ಸಮನ್ವಯಾಧಿಕಾರಿಯಾಗಿ ಶಿಬಿರವನ್ನು ಯಶಸ್ವಿಗೊಳಿಸಿದ್ದರು.

**ಹರಿದಾಸ ಸಾಹಿತ್ಯದ ಪುನಶ್ಚೇತನಕ್ಕಾಗಿ ಕಮ್ಮಟ:** ದಿನಾಂಕ 18.08.1995ರಂದು ಈ ಕಾರ್ಯಾಗಾರವನ್ನು ಹಮ್ಮಿಕೊಂಡಿದ್ದು, ಸಂಪನ್ಮೂಲವ್ಯಕ್ತಿಗಳಾಗಿ ಪ್ರೊ. ವಸಂತ ಕುಷ್ಟಗಿ ಗುಲ್ಬರ್ಗ, ಪ್ರೊ. ಎಚ್.ಎಸ್. ಶ್ರೀನಿವಾಸಮೂರ್ತಿ ಬೆಂಗಳೂರು, ಶ್ರೀ ಬಿ. ಹುಸೇನ್ ಸಾಬ್ ರಾಯಚೂರು, ಸಂತೋಷ ಕುಮಾರ್ ಗುಲ್ವಾಡಿ, ಬನ್ನಂಜೆ ಗೋವಿಂದಾಚಾರ್ಯ ಅವರು ಉಪಸ್ಥಿತರಿದ್ದು, ತಮ್ಮ ಮೌಲಿಕ ಸಲಹೆಗಳಿಂದ ಕಮ್ಮಟವನ್ನು ಯಶಸ್ವಿಗೊಳಿಸಿದರು.

**ಶೈಕ್ಷಣಿಕ ಕೊಡುಗೆ:** ಶ್ರೀಮಠದ ವತಿಯಿಂದ ಯಾವುದೇ ಶಿಕ್ಷಣಸಂಸ್ಥೆಗಳು ನಡೆಯುತ್ತಿಲ್ಲವಾದರೂ ಮಠದ ಸಮೀಪದಲ್ಲೇ ಕಾರ್ಯನಿರ್ವಹಿಸುವ ಶ್ರೀ ಪೂರ್ಣಪ್ರಜ್ಞ ಕಾಲೇಜು ಉಡುಪಿ ಇಲ್ಲಿಯ ಸ್ಥಳವು ಶ್ರೀ ಶೀರೂರುಮಠಕ್ಕೆ ಸೇರಿದ್ದ ಸ್ಥಿರಾಸ್ತಿಯಾಗಿದ್ದು, ಇದನ್ನು ಶೀರೂರುಮಠದ ಹಿಂದಿನ ಸ್ವಾಮೀಜಿಯವರು ಅದಮಾರುಮಠದ ಶ್ರೀ ವಿಬುಧೇಶತೀರ್ಥಸ್ವಾಮೀಜಿಯವರಿಗೆ ಹಸ್ತಾಂತರಿಸಿದ್ದರು.

ಟ್ಟಿನಲ್ಲಿ, 1) ಖಾಸಗಿ ದೇವಸ್ಥಾನಗಳು 2) ಜಾತೀಯ ದೇವಸ್ಥಾನಗಳು, 3) ಜನಾಂಗದ ದೇವಸ್ಥಾನಗಳು, 4) ವಾರೀಸು ಹಕ್ಕಿನ ದೇವಸ್ಥಾನಗಳು, 5) ಸಾಮಾಜಿಕ ದೇವಸ್ಥಾನಗಳು ಎಂದು ಐದು ಬಗೆಯ ದೇವಸ್ಥಾನಗಳು ಉಡುಪಿ ಜಿಲ್ಲೆಯಲ್ಲಿ ಅಸ್ತಿತ್ವದಲ್ಲಿದ್ದು, ಈ ಎಲ್ಲ ದೇವಸ್ಥಾನಗಳು ಧಾರ್ಮಿಕ ಚೌಕಟ್ಟಿನಲ್ಲೇ ತಮ್ಮ ಜವಾಬ್ದಾರಿಯನ್ನು ನಿರ್ವಹಿಸಿಕೊಂಡು ಬರುತ್ತಿವೆ. ಈ ಪ್ರಧಾನ ಚಟುವಟಿಕೆಗಳಿಗೆ ಪೂರಕವಾಗಿ ಸಾಹಿತ್ಯಕ ಮತ್ತು ಸಾಂಸ್ಕೃತಿಕ ಚಟುವಟಿಕೆಗಳನ್ನು ಇನ್ನು ಕೆಲವು ದೇವಸ್ಥಾನಗಳು ಶೈಕ್ಷಣಿಕ ಚಟುವಟಿಕೆಗಳನ್ನು ನಿರ್ವಹಿಸಿಕೊಂಡು ಬರುತ್ತಿವೆ. ಖಾಸಗಿ ದೇವಸ್ಥಾನಗಳೆಂಬ ವಿಭಾಗಕ್ಕೆ ಸೇರಿದ ಆದಾಯವಿರುವ ದೇವಸ್ಥಾನಗಳೆಂದು ಗುರುತಿಸುವ ವರ್ಗದಲ್ಲಿ ಹಟ್ಟಿಯಂಗಡಿ ಸಿದ್ಧಿವಿನಾಯಕ ದೇವಸ್ಥಾನವನ್ನು ಗರಿಷ್ಠ ಸಾಹಿತ್ಯ ಚಟುವಟಿಕೆಯನ್ನು ನಿರ್ವಹಿಸಿದ ದೇವಸ್ಥಾನವೆಂದು ಹೆಸರಿಸಬಹುದಾಗಿದೆ. ಇಲ್ಲಿನ ಪ್ರಧಾನಾರ್ಚಕರು ಅಥವಾ ವ್ಯವಸ್ಥಾಪಕರಿಗಿರುವ ಸಾಹಿತ್ಯಾಸಕ್ತಿಯಿಂದಾಗಿ ವರ್ಷದುದ್ದಕ್ಕೂ ವಿಭಿನ್ನ ಸಾಹಿತ್ಯ ಚಟುವಟಿಕೆಗಳನ್ನು ಈ ದೇವಸ್ಥಾನವು ನಿರ್ವಹಿಸಿಕೊಂಡು ಬಂದಿರುವುದನ್ನು ಈಗಾಗಲೇ ಗುರುತಿಸಲಾಗಿದೆ. ಧಾರ್ಮಿಕಮುಖ್ಯರಾದ ವ್ಯವಸ್ಥಾಪಕರಲ್ಲಿರುವ ವಿಶೇಷ ಸಾಹಿತ್ಯ ಕಾಳಜಿಯಿಂದಾಗಿ ಈ ತೆರನಾದ ಚಟುವಟಿಕೆಗಳು ನಿರ್ವಹಿಸುವುದಕ್ಕೆ ಇಲ್ಲಿ ಸಾಧ್ಯವಾಗಿದೆ. ದೇವಸ್ಥಾನದ ಆದಾಯವೆಂದು ಪರಿಗಣಿಸಿದ ಗಳಿಕೆಯಲ್ಲಿ ತಮ್ಮದೇ ಆದ ಸಾಹಿತ್ಯ ಮತ್ತು ಸಾಂಸ್ಕೃತಿಕ ಚಟುವಟಿಕೆಗಳನ್ನು ತಮ್ಮದೇ ಆದ ರೀತಿಯಲ್ಲಿ ನಿರ್ವಹಿಸಿಕೊಂಡು ಬರಲು ಪೂರ್ಣಸ್ವಾತಂತ್ರ್ಯವನ್ನು ಮತ್ತು ಅಧಿಕಾರವನ್ನು ಹೊಂದಿರುವುದರಿಂದ ಈ ಚಟುವಟಿಕೆಗಳು ಇಲ್ಲಿ ಸಾಧ್ಯವಾಗಿದೆ.

ಜಾತೀಯ ದೇವಸ್ಥಾನಗಳೆಂದು ಗುರುತಿಸಲಾದ ದೇವಸ್ಥಾನಗಳು ಧಾರ್ಮಿಕಚಟುವಟಿಕೆಗೆ ಪೂರಕವಾಗಿ ತಮ್ಮ ಜಾತೀಯ ಹಿತಾಸಕ್ತಿಗೆ ಬದ್ಧವಾಗಿರುವುದನ್ನು ಗಮನಿಸಬಹುದಾಗಿದೆ. ರಾಜಕೀಯಶಕ್ತಿಯ ಮುಂದೆ ತಮ್ಮ ಜಾತೀಯಶಕ್ತಿಯ ಸಾಮರ್ಥ್ಯ ಮತ್ತು ಸತ್ವವನ್ನು ಮನಗಾಣಿಸುತ್ತಾ ಸಾಮಾಜಿಕ ಸವಲತ್ತು ಮತ್ತು ಅವಕಾಶಗಳಿಗಾಗಿ ಜಾತೀಯ ದೇವಸ್ಥಾನಗಳ ಚಟುವಟಿಕೆಗಳನ್ನು ಒಂದು ಮಾಧ್ಯಮವಾಗಿ ದುಡಿಸಿಕೊಳ್ಳುತ್ತಿರುವುದನ್ನು ಕಂಡುಕೊಳ್ಳಬಹುದಾಗಿದೆ. ಈ ಪ್ರಜ್ಞೆಯನ್ನು ಇನ್ನಷ್ಟು ಜಾಗೃತಗೊಳಿಸುವ ಉದ್ದೇಶದಿಂದಲೇ ದೇವಸ್ಥಾನದ ವತಿಯಿಂದ ಪತ್ರಿಕೆಯನ್ನು ಪ್ರಕಟಿಸುತ್ತಿರುವುದು ಹಾಗೂ ಆ ಪತ್ರಿಕೆಯ ಸಂಪಾದಕೀಯದಲ್ಲೇ ಮೇಲಿನ ಹೇಳಿಕೆಗಳು ಸ್ಪಷ್ಟವಾಗಿ ಉಲ್ಲೇಖಗೊಂಡಿರುವುದನ್ನು ಗಮನಿಸಬಹುದಾಗಿದೆ.

ಜನಾಂಗದ ದೇವಸ್ಥಾನಗಳು ತಮ್ಮ ಜನಾಂಗದ ದೇವಸ್ಥಾನದಲ್ಲಿ ಧಾರ್ಮಿಕತೆಯ ಅರಿವನ್ನು ಸಾಂಸ್ಕೃತಿಕ ವೈಶಿಷ್ಟ್ಯವನ್ನೂ ಮನಗಾಣಿಸುವುದು ಆ ಜನಾಂಗದ ನೇತಾರರ ಪ್ರಧಾನಾಶಯವಾಗಿರುತ್ತದೆ. ಹೀಗಾಗಿ ಧಾರ್ಮಿಕ ಕೇಂದ್ರವನ್ನು ರಾಜಕೀಯ ಲಾಭಕ್ಕಾಗಿ ಬಳಸುವ ಯಾವುದೇ ಹುನ್ನಾರವು ಇಲ್ಲಿ ಕಂಡುಬಾರದೇ ಜನಾಂಗದ ಪ್ರತಿಯೋರ್ವ ಸದಸ್ಯನಲ್ಲೂ ಧಾರ್ಮಿಕಜಾಗೃತಿ ಒಡಮೂಡಬೇಕೆಂಬುದೇ ಅವರ ಪ್ರಧಾನ ಗುರಿಯಾಗಿರುತ್ತದೆ. ತಮ್ಮ ಈ ಉದ್ದೇಶಕ್ಕೆ ಪೂರಕವಾಗಿ ತಮ್ಮ ದೇವಸ್ಥಾನದ ಆವರಣದೊಳಗೆ ಧಾರ್ಮಿಕ ಹಬ್ಬಗಳ ಮಹತ್ವವನ್ನು ಅರಿತು, ವೈಶಿಷ್ಟ್ಯಪೂರ್ಣವಾಗಿ ಮತ್ತು ಅರ್ಥಪೂರ್ಣವಾಗಿ ಆ ಹಬ್ಬಗಳನ್ನು ಆಚರಿಸುಕೊಂಡು ಬರುವುದನ್ನು ಕಾಣುತ್ತೇವೆ. ಆ ಹಬ್ಬಗಳ ಪೌರಾಣಿಕ ಮಹತ್ವವನ್ನು ಮುಂದಿನ ಜನಾಂಗಕ್ಕೆ ತಿಳಿಸಿಕೊಡುವ ಉದ್ದೇಶದಿಂದ ವಿಶೇಷ ಉಪನ್ಯಾಸ ಮತ್ತು ಲಿಖಿತಚಟುವಟಿಕೆಗಳಿಗೂ ಅವಕಾಶ ನೀಡುತ್ತಿರುವುದನ್ನು ಉಡುಪಿ, ಕುಂದಾಪುರದ ಮತ್ತು ಕಾರ್ಕಳ ಜನಾಂಗ ದೇವಸ್ಥಾನದಿಂದ ಪ್ರಕಟಿತವಾದ ಕೃತಿಗಳಿಂದ ತಿಳಿದುಬರುತ್ತದೆ. ಪಟ್ಟಾಭಿರಾಮಚಂದ್ರ

ದೇವಸ್ಥಾನದ (ಕೋಟೇಶ್ವರ) ಸಾಂಸ್ಕೃತಿಕ ಚಟುವಟಿಕೆ ಮತ್ತು ಸಾಹಿತ್ಯ ಚಟುವಟಿಕೆಯ ವಿವರಗಳು 'ದಕ್ಷಿಣದ ಸಿರಿನಾಡು' ಎಂಬ ಕೃತಿಯಲ್ಲಿ ಉಲ್ಲೇಖಗೊಂಡಿರುವುದನ್ನು ಇಲ್ಲಿ ನೆನಪಿಸಿಕೊಳ್ಳಬಹುದಾಗಿದೆ. "ನಿಮ್ಮ ಮಕ್ಕಳನ್ನು ಆಂಗ್ಲಮಾಧ್ಯಮದ ಶಿಕ್ಷಣಕ್ಕೆ ಕಳುಹಿಸುವ ನೀವು, ದೇವಸ್ಥಾನದ ಆವರಣದೊಳಗೇಕೆ ಕನ್ನಡ ಸಾಹಿತ್ಯಚಟುವಟಿಕೆಗಳನ್ನು ಬೆಂಬಲಿಸುತ್ತಿದ್ದೀರಿ?" ಎಂಬ ಪ್ರಶ್ನೆಗೆ ಕುಂದಾಪುರದ ವೆಂಕಟರಮಣ ದೇವಸ್ಥಾನದ ಧರ್ಮದರ್ಶಿ ರವೀಂದ್ರ ಶೆಣೈ ಅವರು "ಆಂಗ್ಲಶಿಕ್ಷಣ ವ್ಯವಹಾರಕ್ಕಾಗಿ, **ಕನ್ನಡ ಭಾಷೆ ಮತ್ತು ಸಾಹಿತ್ಯ ಮನುಷ್ಯನಾಗಿ, ಸುಸಂಸ್ಕೃತನಾಗಿ ಬದುಕುವುದಕ್ಕಾಗಿ"** ಎಂಬ ಉತ್ತರವನ್ನು ನೀಡಿದ್ದಾರೆ. ಅವರ ಈ ಉತ್ತರದಲ್ಲಿ ಅವರ ಕನ್ನಡ ಸಾಹಿತ್ಯ-ಸಂಸ್ಕೃತಿಯ ಕಾಳಜಿಯನ್ನು ಮನಗಾಣಬಹುದಾಗಿದೆ.

ವಾರೀಸುಹಕ್ಕಿನ ದೇವಸ್ಥಾನಗಳು ಧಾರ್ಮಿಕ ಮತ್ತು ದತ್ತಿ ಇಲಾಖೆಯ ಆಯುಕ್ತರ ನೇರ ಹತೋಟಿಗೊಳಪಟ್ಟಿದ್ದು, ವಂಶಪಾರಂಪರ್ಯವಾಗಿ ಮಾತ್ರ ನಿರ್ದಿಷ್ಟಕುಟುಂಬಕ್ಕೆ ಸೇರಿದ ಒಬ್ಬ ಸದಸ್ಯನು ಆಡಳಿತ ಮಂಡಳಿಯ ಖಾಯಂ ಸದಸ್ಯನಾಗಿರುತ್ತಾನೆ. ದೇವಸ್ಥಾನದ ಆದಾಯವನ್ನು ಅತ್ಯಂತಪಾರದರ್ಶಕವಾಗಿ ಇಲಾಖೆಯ ನಿಯಮಕ್ಕೆ ಬದ್ಧವಾಗಿ ವಿನಿಯೋಗಿಸಬೇಕಾಗಿದ್ದು, ಈ ನಿಯಮಾವಳಿಯನ್ನು ಮೀರುವ ಸ್ವಾತಂತ್ರ್ಯ ಧರ್ಮದರ್ಶಿಮಂಡಳಿಗಿರುವುದಿಲ್ಲ. ಅಂಬಲಪಾಡಿ ಶ್ರೀಲಕ್ಷ್ಮೀಜನಾರ್ದನ ಮತ್ತು ಮಹಾಕಾಳಿ ದೇವಸ್ಥಾನವು ಈ ವಿಭಾಗದಲ್ಲಿ ಬರುತ್ತಿದ್ದು, ಕ್ರಿ.ಶ. 2002ಕ್ಕೂ ಪೂರ್ವದಲ್ಲಿ ಆದಾಯದ ಶೇ. 15 ಭಾಗವನ್ನು ಸಾರ್ವಜನಿಕ ಅನುಕೂಲದ ಚಟುವಟಿಕೆಯ ಹೆಸರಿನಲ್ಲಿ ಸಾಹಿತ್ಯ ಹಾಗೂ ಇನ್ನಿತರ ಜನೋಪಯೋಗಿ ಚಟುವಟಿಕೆಗಳಿಗೆ ವಿನಿಯೋಗಿಸಿಕೊಂಡು ಬಂದಿದ್ದರು. ಕ್ರಿ.ಶ. 2002ರ ಅನಂತರದಲ್ಲಿ ಕರ್ನಾಟಕ ಹಿಂದೂ ಧಾರ್ಮಿಕ ದತ್ತಿನಿಧಿಯ ಧರ್ಮಾದಾಯ ಶಾಸನದ ತಿದ್ದುಪಡಿಯ ಮೇರೆಗೆ ಕೇವಲ 5%ಕ್ಕಿಂತ ಹೆಚ್ಚಿನ ಮೊತ್ತವನ್ನು ಸಾಮಾಜಿಕ ಉಪಯೋಗಿ ಕಾರ್ಯಚಟುವಟಿಕೆಗಳಿಗೆ ವಿನಿಯೋಗಿಸಲು ಅಸಾಧ್ಯವಾದ ಪ್ರಯುಕ್ತ ಧರ್ಮದರ್ಶಿ ಮಂಡಳಿಗೆ ಸಾಹಿತ್ಯ ಚಟುವಟಿಕೆಗಳಲ್ಲಿ ಆಸಕ್ತಿಯಿದ್ದೂ, ನಿಯಮದಲ್ಲಿ ಅವಕಾಶವಿಲ್ಲದ ಕಾರಣ ಸಾಹಿತ್ಯಚಟುವಟಿಕೆಯಿಂದ ದೂರ ಸರಿಯುವಂತಾಗಿದೆ.

**ಧಾರ್ಮಿಕ ಚಟುವಟಿಕೆಗಳಿಗೆ ಪೂರಕವಾಗಿ ಸಾಹಿತ್ಯ ಚಟುವಟಿಕೆಗಳಿಗೆ ಆದ್ಯತೆ ನೀಡಿದ ಉಡುಪಿ ಜಿಲ್ಲೆಯ ದೇಗುಲಗಳ ಕುರಿತಾಗಿ ಅಂತಿಮ ವಿಶ್ಲೇಷಣೆ:**

ಧಾರ್ಮಿಕ ಚಟುವಟಿಕೆಗಳಿಗೆ ಪೂರಕವಾಗಿ ಸಾಹಿತ್ಯ ಮತ್ತು ಸಾಂಸ್ಕೃತಿಕ ಚಟುವಟಿಕೆಗಳಿಗೆ ಆದ್ಯತೆ ನೀಡಿದ ಜಿಲ್ಲೆಯ ಮುಖ್ಯ ನಾಲ್ಕು ದೇವಸ್ಥಾನಗಳ ಹೆಸರು ಹೀಗಿವೆ.

1) ಶ್ರೀ ಜನಾರ್ದನ ಮತ್ತು ಮಹಾಕಾಳಿ ದೇವಸ್ಥಾನ (ವಾರೀಸು ಹಕ್ಕಿನ ದೇವಸ್ಥಾನ, ಅಂಬಲಪಾಡಿ)
2) ಶ್ರೀ ವಿಶ್ವೇಶ್ವರ ದೇವಸ್ಥಾನ, ಎಲ್ಲೂರು, (ಸಾಮಾಜಿಕ ದೇವಸ್ಥಾನ)
3) ಶ್ರೀ ಸಿದ್ಧಿವಿನಾಯಕ ದೇವಸ್ಥಾನ ಹಟ್ಟಿಯಂಗಡಿ (ಖಾಸಗಿ ದೇವಸ್ಥಾನ)
4) ಶ್ರೀ ಪೇಜಾವರ ಮಠ (ಶ್ರೀ ಕೃಷ್ಣ ಮಠದ ಅಂಗಸಂಸ್ಥೆ)

ಈ ಮೇಲ್ಕಂಡ ಧಾರ್ಮಿಕ ಸಂಸ್ಥೆಗಳ ಚಟುವಟಿಕೆಗಳಿಗೆ ಅಲ್ಲಿಯ ವ್ಯವಸ್ಥಾಪಕರು (ಪೇಜಾವರ ಮಠದ ವಿಶ್ವೇಶತೀರ್ಥ ಶ್ರೀಪಾದರೂ ಸೇರಿದಂತೆ) ತಾವು ಎಳವೆಯಲ್ಲಿಯೇ ರೂಢಿಸಿಕೊಂಡ ಸಾಹಿತ್ಯಾಸಕ್ತಿ ಹಾಗೂ ತಮ್ಮ ವಿದ್ಯಾಭ್ಯಾಸದ ಸಂದರ್ಭದಲ್ಲಿ ಸಾಹಿತ್ಯದ ಕುರಿತಾಗಿ ದೊರೆತ ವಿಶೇಷ ಪ್ರೇರಣೆಯ ಕಾರಣದಿಂದಾಗಿ ತಾವು ಜವಾಬ್ದಾರಿಯನ್ನು ವಹಿಸಿಕೊಂಡ ಸಾಹಿತ್ಯಸಂಸ್ಥೆಗಳಲ್ಲೂ ಸಾಹಿತ್ಯ ಚಟುವಟಿಕೆಗಳನ್ನು ನಿರ್ವಹಿಸಿಕೊಂಡು ಬಂದರು. ಜಿಲ್ಲೆಯ ಮಿಕ್ಕುಳಿದ ದೇಗುಲಗಳು ಮತ್ತು

ಜಾತೀಯ ದೇವಸ್ಥಾನಗಳು ತಮ್ಮ ಧಾರ್ಮಿಕ ಚಟುವಟಿಕೆಯ ಅಂಗವಾಗಿ ಮತ್ತು ಜಾತೀಯ ಜಾಗೃತಿಗೆ ಪೂರಕವಾಗಿಯಷ್ಟೇ ಸಾಹಿತ್ಯ ಚಟುವಟಿಕೆಗಳಿಗೆ ಅವಕಾಶ ಕಲ್ಪಿಸಿದರು ಎಂಬೀ ವಿಚಾರವು ಅವುಗಳು ಪ್ರಕಟಿಸುವ ಲಿಖಿತ ಬರಹಗಳ ಪ್ರಕಟನೆಯಿಂದ ಖಚಿತವಾಗುತ್ತದೆ.

20ನೇ ಶತಮಾನದ ಉತ್ತರಾರ್ಧದಲ್ಲಿ ಧಾರ್ಮಿಕ ಕೇಂದ್ರವಾಗಿ ಗುರುತಿಸಿಕೊಂಡ ಉಡುಪಿಯ ಅಷ್ಟಮಠಗಳು ತಮ್ಮ ಪರ್ಯಾಯ ಅವಧಿಯಲ್ಲಿ ಸಾಹಿತ್ಯ ಚಟುವಟಿಕೆಗಳಿಗೆ ಪ್ರಾಮುಖ್ಯ ನೀಡಿದ್ದ ವಿವರಗಳು ಪತ್ರಿಕಾ ವರದಿ ಮತ್ತು ಆ ಮಠಗಳಿಂದ ಪ್ರಕಟಗೊಂಡ ಸಂಚಿಕೆಗಳಿಂದ ತಿಳಿದುಬರುತ್ತದೆ. ಈ ಎಲ್ಲ ಮಠಗಳಿಗೂ ಸಾಹಿತ್ಯವಿಚಾರಗಳಿಗೆ ಸಂಬಂಧಿಸಿದಂತೆ ಮೊದಲು ಪ್ರೇರಣೆ ನೀಡಿದವರು ಪೇಜಾವರ ಮಠದ ವಿಶ್ವೇಶತೀರ್ಥರು ಎನ್ನುವುದು ಪೇಜಾವರ ಮಠಕ್ಕೆ ಸಂಬಂಧಿಸಿದ ಲಭ್ಯ ಕೃತಿಗಳ ಅಧ್ಯಯನದಿಂದ ತಿಳಿದುಬರುತ್ತದೆ. ಪೇಜಾವರ ಮಠದ ಯತಿಗಳಾದ ಶ್ರೀ ವಿಶ್ವೇಶತೀರ್ಥರು ತಮ್ಮ ಪರ್ಯಾಯ ಅವಧಿಯ ಧಾರ್ಮಿಕವೇದಿಕೆಯಲ್ಲಿ ಸಾಹಿತ್ಯ ಚಟುವಟಿಕೆಗಳಿಗೆ ಮತ್ತು ಸಾಂಸ್ಕೃತಿಕ ಚಟುವಟಿಕೆಗಳಿಗೆ ಅವಕಾಶವನ್ನು ನೀಡುವ ಹೊಸ ಮಾರ್ಪಾಟಿಗೆ ಮುಂದಾದರು. ಹೀಗೆ ವಿನೂತನ ದಾರಿಯಲ್ಲಿ ಮುನ್ನಡೆಯುವ ಸಂದರ್ಭದಲ್ಲಿ ಸ್ಥಳೀಯ ಕಾಲೇಜಿನ ಪ್ರಾಂಶುಪಾಲರಾದ ಪ್ರೊ. ಕು.ಶಿ. ಹರಿದಾಸ ಭಟ್ಟರು ಹಾಗೂ ಅವರ ಶಿಷ್ಯರಾದ ಸಾಹಿತ್ಯ ಮತ್ತು ಸಾಂಸ್ಕೃತಿಕ ವಿಚಾರಗಳಲ್ಲಿ ವಿಶೇಷ ಅಭಿರುಚಿ ರೂಢಿಸಿಕೊಂಡ ವಿಜಯನಾಥ ಶೆಣೈಯವರ ಮಾರ್ಗದರ್ಶನವನ್ನು ಪಡೆದರು. (ಈ ಕುರಿತಂತೆ ಸವಿಸ್ತಾರ ವಿವರವು ವಿಜಯನಾಥ ಶೆಣೈಯವರ 'ನೆನಪಿನ ಶಿಲ್ಪಗಳು' ಎಂಬ ಕೃತಿಯಲ್ಲಿ ಉಲ್ಲೇಖಗೊಂಡಿರುತ್ತದೆ) ಪೇಜಾವರ ಮಠದ ವಿನೂತನ ಕ್ರಮವನ್ನು ಇತರ ಸ್ವಾಮೀಜಿಯವರು ಕೇವಲ ಅನುಕರಣೆಗಾಗಿ ಅವಳವಡಿಸಿಕೊಂಡಿರುವುದು ಕಂಡುಬರುತ್ತದೆಯೇ ಹೊರತು ಕನ್ನಡ ಸಾಹಿತ್ಯದ ಚಟುವಟಿಕೆಗಳನ್ನು ಒಂದು ಬದ್ಧತೆಯ ಚಟುವಟಿಕೆಯಾಗಿ ನಿರ್ವಹಿಸಿಕೊಂಡು ಬಂದಿಲ್ಲ. ಹಾಗಾಗಿ ತಮ್ಮ ಪರ್ಯಾಯಾವಧಿಯ ಅನಂತರ ಇತರ ಮಠದ ಸ್ವಾಮೀಜಿಯವರು ಕನ್ನಡ ಸಾಹಿತ್ಯ ಚಟುವಟಿಕೆಗಳಿಗೆ ತೊಡಗಿಕೊಂಡ ಯಾವುದೇ ಪ್ರಯತ್ನಗಳು ಕಂಡುಬರುವುದಿಲ್ಲ. ಶೀರೂರು ಮಠವು ತನ್ನ ಪರ್ಯಾಯ ಕಾಲದಲ್ಲಿ ದ.ಕ. ಜಿಲ್ಲಾ ಎಂಟನೆಯ ಸಾಹಿತ್ಯ ಸಮ್ಮೇಳನಕ್ಕೆ ಅವಕಾಶವಿತ್ತು ಪ್ರೋತ್ಸಾಹಿಸಿದ್ದು ಮಾತ್ರ ಒಂದು ಅಪವಾದವಾಗಿ ಕಾಣುತ್ತದೆ. (ಪೇಜಾವರ ಶ್ರೀಯವರು ರಥಬೀದಿ ಗೆಳೆಯರಿಗೆ ಸಾಹಿತ್ಯ ಚಟುವಟಿಕೆಗಳಿಗೆ ಅವಕಾಶ ಮಾತ್ರವಲ್ಲದೆ ಅವರ ಕಛೇರಿಗಾಗಿ ಒಂದು ಕೋಣೆಯನ್ನು ಮಠದ ವತಿಯಿಂದ ನೀಡಿರುತ್ತಾರೆ. ಜಿಲ್ಲೆಯ ಸಾಹಿತ್ಯ ಸಮ್ಮೇಳನಗಳಿಗೆ ಮತ್ತು ಕಾಲೇಜಿನ ಸಾಹಿತ್ಯ ಚಟುವಟಿಕೆಗಳಿಗೆ ನಿರಂತರ ಆರ್ಥಿಕ ಸಹಾಯವನ್ನು ನೀಡುತ್ತಲೇ ಬಂದಿರುತ್ತಾರೆ).

ಸಾಹಿತ್ಯಚಟುವಟಿಕೆಗಳಲ್ಲಿ ತೊಡಗಿಸಿಕೊಂಡ ವಿವಿಧ ಜಾತೀಯ ದೇವಸ್ಥಾನಗಳು ಉಡುಪಿ ಜಿಲ್ಲೆಯಾದ್ಯಂತ ಅಸ್ತಿತ್ವದ ಅಸ್ತಿತ್ವದಲ್ಲಿರುವುದಾದರೂ ಚಟುವಟಿಕೆಯ ಹಿಂದಿನ ಪ್ರಧಾನ ಉದ್ದೇಶ ಜಾತೀಯ ಹಿತಾಸಕ್ತಿಯನ್ನು ಕಾಪಾಡಿಕೊಳ್ಳುವುದೇ ಆಗಿದೆ. ಈ ಬದ್ಧತೆಯನ್ನು ಮೀರಿ, ಸಾಮಾಜಿಕ ಪ್ರಗತಿ ಮತ್ತು ಮೌಲ್ಯದ ಮಹತ್ವವನ್ನು ಮನಗಾಣಿಸುವಲ್ಲಿ ಗೌಡಸಾರಸ್ವತ ಕುಲಬಾಂಧವರ ಕಾರ್ಕಳ, ಕುಂದಾಪುರದ ವೆಂಕಟರಮಣ ದೇವಸ್ಥಾನ, ಗಂಗೊಳ್ಳಿಯ ಮಲ್ಯರ ಮಠವೆಂಬ ಧಾರ್ಮಿಕ ಕೇಂದ್ರವು ತಮ್ಮ ಮಿತಿಯಲ್ಲಿ ಶ್ರಮಿಸುತ್ತದೆ ಈ ಅಧ್ಯಯನದಿಂದ ತಿಳಿಯಬಹುದಾಗಿದೆ.

~*~

# ಅಧ್ಯಾಯ–5

# ಸಾಹಿತ್ಯಚಟುವಟಿಕೆಗಳನ್ನು ನಿರ್ವಹಿಸಿದ ಸಾಹಿತ್ಯಸಂಘಟನೆಗಳು

# ಅಧ್ಯಾಯ-5
## ಸಾಹಿತ್ಯಚಟುವಟಿಕೆಗಳನ್ನು ನಿರ್ವಹಿಸಿದ ಸಾಹಿತ್ಯಸಂಘಟನೆಗಳು

ಉಡುಪಿ ಜಿಲ್ಲೆಯಲ್ಲಿ ಕಳೆದ ಶತಮಾನದ ಕಾಲಾವಧಿಯಿಂದ ಕನ್ನಡ ಸಾಹಿತ್ಯಚಟುವಟಿಕೆಗಳನ್ನು ನಿರ್ವಹಿಸುವಲ್ಲಿ ಪ್ರಮುಖಪಾತ್ರ ವಹಿಸಿದ ನಾಲ್ಕನೇ ಘಟಕವೇ 'ಸಾಹಿತ್ಯಸಂಘಟನೆಗಳು' ಎಂದು ಗುರುತಿಸಲಾಗಿದೆ. ಸಾಹಿತ್ಯಸಂಘಟನೆಗಳು ಸಾಹಿತ್ಯಚಟುವಟಿಕೆಗಳನ್ನು ನಿರ್ವಹಿಸಿದ ಬಗೆ ಹಾಗೂ ಈ ಸಂಘಟನೆಗಳು ಅಸ್ತಿತ್ವಕ್ಕೆ ಬಂದ ರೀತಿ ಇವುಗಳು ಸಾಧಿಸಿದ ಒಟ್ಟು ಪರಿಣಾಮಗಳು ಮತ್ತು ವರ್ತಮಾನದಲ್ಲಿ ಇವುಗಳ ಕಾರ್ಯಸ್ವರೂಪದ ಪ್ರಸ್ತುತತೆ ಈ ಕುರಿತಾಗಿ ಈ ಅಧ್ಯಾಯದಲ್ಲಿ ಚರ್ಚಿಸಬೇಕಾಗಿದೆ.

**ಸಾಹಿತ್ಯಸಂಘಟನೆಗಳು ಅಸ್ತಿತ್ವಕ್ಕೆ ಬರಲು ಕಾರಣವಾದ ಹಿನ್ನೆಲೆ:**

18ನೇ ಶತಮಾನದ ತನಕ ಸಾಹಿತ್ಯ ಚಟುವಟಿಕೆಗಳಿಗೆ ರಾಜಾಶ್ರಯವೇ ಪೋಷಕವಾಗಿದ್ದು, 19ನೇ ಶತಮಾನದ ಆರಂಭದಿಂದಲೇ ಸಮಗ್ರ ಕರಾವಳಿ ಪ್ರದೇಶವು ಬ್ರಿಟೀಷ್ ವಸಾಹತುಶಾಹಿಯ ಎಲ್ಲಾ ಒಳ್ಳೆಯ ಹಾಗೂ ಕೆಟ್ಟ ಪರಿಣಾಮಗಳಿಗೆ ಒಳಗಾಯಿತು. ಇದನ್ನೇ ಇನ್ನೊಂದು ಮಾತಿನಲ್ಲಿ ಹೇಳುವುದಾದರೆ 19ನೇ ಶತಮಾನದ ಉತ್ತರಾರ್ಧದಿಂದಲೇ ಭಾರತೀಯ ಸನಾತನ ಧರ್ಮ-ಜೀವನಶೈಲಿ ಹಾಗೂ ಧೋರಣೆಗಳಿಗೂ ಬ್ರಿಟೀಷ್ ಸರಕಾರದ ಆಡಳಿತ ಮತ್ತು ಶಿಕ್ಷಣದಿಂದ ಬಂದ ಆಧುನಿಕತೆಗೂ ಪರಸ್ಪರ ಮುಖಾಮುಖಿಯ ಸನ್ನಿವೇಶವು ಎದುರಾಯಿತು. ಈ ಕಾಲಘಟ್ಟದಲ್ಲಿ ಕೆಲವರು ಆಧುನಿಕತೆಯ ಪ್ರಭಾವಕ್ಕೊಳಗಾಗದೆ ಸನಾತನಿಗಳಾಗಿಯೇ ಇರಬಯಸಿದರು. ಇದೇ ಹೊತ್ತಿಗೆ ಭಾರತೀಯ ಸಮಾಜದ ಇನ್ನೊಂದು ವರ್ಗ ಸನಾತನ ಜೀವನಧರ್ಮ ಮತ್ತು ಮೌಲ್ಯಗಳಲ್ಲಿ ವಿಶ್ವಾಸವನ್ನು ಕಳೆದುಕೊಂಡು ಆಧುನಿಕ ಶಿಕ್ಷಣ ಮತ್ತು ಜೀವನ ಶೈಲಿಗೆ ಹೊಂದಿಕೊಂಡರು. ಈ ಕಾರಣದಿಂದಾಗಿ ಮೌಲ್ಯಗಳ ಸಂಘರ್ಷ ಅಥವಾ ಮುಖಾಮುಖಿಯ ಸಂಕಥನಗಳು 19ನೇ ಶತಮಾನದ ಹಾಗೂ 20ನೇ ಶತಮಾನದ ಪೂರ್ವಾರ್ಧದ ಸಾಹಿತ್ಯಪ್ರಕಾರಗಳಲ್ಲಿ ಪ್ರಕಟಗೊಂಡಿರುವುದನ್ನು ಇಲ್ಲಿ ನೆನಪಿಸಿಕೊಳ್ಳಬಹುದಾಗಿದೆ. [ಬಾಲ್ಯವಿವಾಹ ಸಮರ್ಥನೆ, ಸಾಂಪ್ರದಾಯಿಕಶಿಕ್ಷಣದ ಮಹತ್ವವನ್ನು ಎತ್ತಿ ಹಿಡಿಯುವ ಹಠ, ಆಧುನಿಕ ಜೀವನಶೈಲಿಯ ಕುರಿತಾಗಿ ವಿರೋಧ ಇತ್ಯಾದಿ ಇತ್ಯಾದಿ ಚಿತ್ರಣಗಳು ಪತ್ರಿಕೆಗಳಲ್ಲಿ ಪ್ರಕಟಗೊಂಡರೆ ಶಿವರಾಮ ಕಾರಂತರ ಆತ್ಮಚರಿತ್ರೆ 'ಹುಚ್ಚು ಮನಸ್ಸಿನ ಹತ್ತು ಮುಖಗಳು'- (ಪುಟ ಸಂಖ್ಯೆ-14, 14ನೇ ಮುದ್ರಣ, )ಈ ಕೃತಿಯಲ್ಲಿ ಆಧುನಿಕತೆಯನ್ನು ಒಪ್ಪಿಕೊಳ್ಳದ ಅವರ ಹಿರಿಯರ ಕೌಟುಂಬಿಕ ಚಿತ್ರಣವನ್ನೂ, ನವ್ಯಕವಿ ಗೋಪಾಲಕೃಷ್ಣ ಅಡಿಗರ ಮನೆಯಲ್ಲಿ ಅಡಿಗರ ಉನ್ನತ ಶಿಕ್ಷಣವು ಸಾಂಪ್ರದಾಯಿಕ ಶಿಕ್ಷಣದಲ್ಲಿ ಮುಂದುವರಿಯಬೇಕೇ? ಅಥವಾ ಆಧುನಿಕಶಿಕ್ಷಣದಲ್ಲಿ ಮುಂದುವರಿಯಬೇಕೇ? ಎಂಬಿತ್ಯಾದಿ ಜಿಜ್ಞಾಸೆ ಅವರ ಆತ್ಮಚರಿತ್ರೆ 'ನೆನಪಿನ ಗಣಿ'ಯ ಪುಟ ಸಂಖ್ಯೆ-53, (1999)ರಲ್ಲಿ ಉಲ್ಲೇಖಗೊಂಡಿರುವುದನ್ನು ಗಮನಿಸಬಹುದಾಗಿದೆ]

20ನೇ ಶತಮಾನದ 2ನೇ ದಶಕದಿಂದ ಉಡುಪಿ ಜಿಲ್ಲೆಯಲ್ಲಿ ತೀವ್ರಗೊಂಡ ಸ್ವರಾಜ್ಯ ಚಳುವಳಿ-ಸರ್ಕಾರದ ಹಾಗೂ ಖಾಸಗಿ ವತಿಯಿಂದ ಚುರುಕುಗೊಂಡ ಶೈಕ್ಷಣಿಕಚಟುವಟಿಕೆ, ಆಂಗ್ಲಶಿಕ್ಷಣವು ಅವಕಾಶ ನೀಡಿದ ಮಾಸಿಕ ವೇತನದ ಸರಕಾರಿ

ಉದ್ಯೋಗವು ದೇಶದ ಸಾಮಾಜಿಕಸಂರಚನೆಯನ್ನು ಪಲ್ಲಟಗೊಳಿಸಿತು. ಇದರ ಪರಿಣಾಮವಾಗಿ ಸಾಹಿತ್ಯದ ಧೋರಣೆ, ಸ್ವರೂಪ, ಆಶಯಗಳಲ್ಲಿ ಬದಲಾವಣೆ ಕಾಣಿಸಿಕೊಂಡಿತು. ಬದಲಾದ ಸಾಹಿತ್ಯಪಠ್ಯವನ್ನು ಹೊಸ ದೃಷ್ಟಿಕೋನದಿಂದ ಅಭ್ಯಾಸ ಮಾಡುವ ಹಾಗೂ ಸಾಹಿತ್ಯಪಠ್ಯದಲ್ಲಿ ಅಂತರ್ಗತವಾದ ಹೊಸ ವೈಚಾರಿಕತೆಯ ಕುರಿತು ಸಾಮೂಹಿಕವಾಗಿ ಚರ್ಚಿಸಲು ಮತ್ತು ಹೊಸ ಆಶಯವನ್ನು ಸ್ಥಳೀಯ ಸಹೃದಯರಿಗೆ ಉಪನ್ಯಾಸದ ಮೂಲಕ ನಿವೇದಿಸುವ ಉಪಕ್ರಮವಾಗಿ **ಸಾಹಿತ್ಯಸಂಘಟನೆ**ಗಳೆಂಬ ಸಹೃದಯರ ಒಕ್ಕೂಟಗಳೂ 20ನೇ ಶತಮಾನದ ಪೂರ್ವಾರ್ಧದಲ್ಲಿಯೇ ಉಡುಪಿ ಜಿಲ್ಲೆಯಲ್ಲಿ ಅಸ್ತಿತ್ವಕ್ಕೆ ಬರತೊಡಗಿದುವು.

**ಉಡುಪಿ ಜಿಲ್ಲೆಯ 20ನೇ ಶತಮಾನದ ಸಾಹಿತ್ಯಸಂಘಟನೆಗಳು:**

ಉಡುಪಿ ಜಿಲ್ಲಾ ವ್ಯಾಪ್ತಿಯಲ್ಲಿ 20ನೇ ಶತಮಾನದ ವಿವಿಧ ಕಾಲಾವಧಿಯಲ್ಲಿ ಅಸ್ತಿತ್ವಕ್ಕೆ ಬಂದ ಸಾಹಿತ್ಯಸಂಘಟನೆಗಳ ಉದ್ದೇಶ ಮತ್ತು ಕಾರ್ಯಸ್ವರೂಪವನ್ನು ಅನುಸರಿಸಿ ಸಾಹಿತ್ಯಸಂಘಟನೆಗಳನ್ನು ಮುಖ್ಯವಾಗಿ ಈ ಕೆಳಗಿನ ಶೀರ್ಷಿಕೆಯಲ್ಲಿ ವಿಂಗಡಿಸಿಕೊಂಡು ವಿಶ್ಲೇಷಿಸಬಹುದಾಗಿದೆ.

1. **ಸಹೃದಯತೆಯನ್ನೇ ಪೋಷಿಸುವ ಸಾಹಿತ್ಯ ಕಾಳಜಿಗೆ ಬದ್ಧವಾದ ಸಂಘಟನೆಗಳು:**

   ಅ) ರೈಟರ್ಸ್ ಕ್ಲಬ್, ಉಡುಪಿ ಆ) ಬೆನಗಲ್ ವಿಶ್ವಭಾರತಿ ಕರ್ನಾಟಕ ಪ್ರತಿಷ್ಠಾನ ಇ) ಕಲಾವೃಂದ (ರಿ.), ಉಡುಪಿ ಈ) ಸಾಹಿತ್ಯ ಸಂಘ, ಮಣಿಪಾಲ ಉ) ಕರ್ಣಾಟಕ ಸಂಘ, ಕುಂದಾಪುರ ಊ) ಕರ್ನಾಟಕ ಸಂಘ, ಉಡುಪಿ ಋ) ಕನ್ನಡ ಸಾಹಿತ್ಯ ಸಂಘ, ಹಿರಿಯಡ್ಕ ೠ) ಸಾಹಿತ್ಯ ಸಂಘ, ಕಾರ್ಕಳ ಎ) ಕನ್ನಡ ಸಂಘ, ಹೆಬ್ರಿ ಏ) ಕವಿಮುದ್ದಣ ಮಿತ್ರಮಂಡಳಿ, ನಂದಳಿಕೆ ಐ) ಸಂಸೇವಿನಿ, ಬಸ್ರೂರು ಒ) ಕಸ್ತೂರಿ ಕನ್ನಡ ಕೂಟ, ಸಾಲಿಗ್ರಾಮ. ಓ) ಸ್ನೇಹವೃಂದ ಗುಂಡ್ಮಿ, ಅಂಬಾಗಿಲು ಔ) ತಿಂಗಳೆ ದೈವದ ಮನೆಯ ವಾರ್ಷಿಕ ಸಾಹಿತ್ಯ ಸಮಾರಂಭ, ಅಂ) ಜಾಗೃತಿ ಸಾಹಿತ್ಯಾಸಕ್ತ ಮಹಿಳೆಯರ ಒಕ್ಕೂಟ, ಕಾರ್ಕಳ ಅಃ) ಸುಹಾಸಂ ಹಾಸ್ಯ ಸಂಘಟನೆ, ಉಡುಪಿ.

**1.ಅ) ರೈಟರ್ಸ್ ಕ್ಲಬ್, ಉಡುಪಿ:** (1970–71)

ಕರ್ನಾಟಕ ಸಂಘದ ವತಿಯಿಂದ ಗೋಪಾಲಕೃಷ್ಣ ಅಡಿಗರ ಕೃತಿಯ ಕುರಿತಂತೆ ನಡೆದ ವಿಚಾರಸಂಕಿರಣದಲ್ಲಿ ಪರಿಸರದ ಕಾಲೇಜು ಉಪನ್ಯಾಸಕರು ಹಾಗೂ ಬೇರೆ ಬೇರೆ ಉದ್ಯೋಗದಲ್ಲಿದ್ದ ಸಾಹಿತ್ಯಾಸಕ್ತರು ಸಾಹಿತ್ಯ ಚರ್ಚೆಯಲ್ಲಿ ಆಸಕ್ತಿಯಿಂದ ಭಾಗವಹಿಸಿದ್ದನ್ನು ಕಂಡ ವಿಜಯನಾಥ ಶೆಣೈಯವರು **'ಬರಹಗಾರರ ಸಂಘ'** ಎಂಬ ಹೊಸ ವೇದಿಕೆಯನ್ನು ಹುಟ್ಟುಹಾಕಿದರು. ಈ ವೇದಿಕೆಯ ಸದಸ್ಯರು ಪ್ರತಿ ತಿಂಗಳ ಮೊದಲ ಭಾನುವಾರ ಒಂದು ಕೃತಿಯ ಕುರಿತು ಟಿಪ್ಪಣಿ ಸಮೇತ ಬಂದು ಚರ್ಚಿಸುವುದೆಂದು ತೀರ್ಮಾನಿಸಲಾಯಿತು. ಈ ಸಂಘಟನೆಯು 1970ರಿಂದ 1971 ಫೆಬ್ರುವರಿ ತನಕ ನಡೆದುಕೊಂಡು ಬಂದಿತು. ಮುಂದೆ ಬಹುತೇಕ ನೌಕರರು ವರ್ಗಾವಣೆಗೊಂಡು ಉಡುಪಿ ಬಿಟ್ಟುಹೋದ ಪ್ರಯುಕ್ತ ರೈಟರ್ಸ್ ಕ್ಲಬ್ ತನ್ನ ಅಸ್ತಿತ್ವವನ್ನು ಕಳೆದುಕೊಂಡಿತು.

**1. ಆ) ಬೆನಗಲ್ ವಿಶ್ವಭಾರತಿ ಕರ್ನಾಟಕ ಪ್ರತಿಷ್ಠಾನ:** ಹೊಸಗನ್ನಡ ಸಾಹಿತ್ಯಚರಿತ್ರೆಯಲ್ಲಿ ತನ್ನ ಹೆಸರನ್ನು 20ನೇ ಶತಮಾನದ ಮೊದಲಿನಶಕದಲ್ಲೇ ದಾಖಲಿಸಿಕೊಂಡ 'ಬೆನಗಲ್'ನಲ್ಲಿ 1992ರಲ್ಲಿ ಈ ಪ್ರತಿಷ್ಠಾನವು ಅಸ್ತಿತ್ವಕ್ಕೆ ಬಂದಿರುತ್ತದೆ. ಸೂರಾಲು ನಾರಾಯಣ ಮಡಿ ಎಂಬ ಎಂ.ಜಿ.ಎಂ. ಕಾಲೇಜಿನ ಪ್ರಾಕ್ತನ ವಿದ್ಯಾರ್ಥಿ, ರಾಷ್ಟ್ರೀಕೃತ ಬ್ಯಾಂಕ್ ಒಂದರಲ್ಲಿ ನೌಕರಿಯಲ್ಲಿರುತ್ತಾ

ಮ್ಮ ಸಾಹಿತ್ಯಪ್ರವೃತ್ತಿಗೆ ಅನುಗುಣವಾಗಿ ತಮ್ಮೂರಿನಲ್ಲಿ ಈ ಪ್ರತಿಷ್ಠಾನವನ್ನು ಸ್ಥಾಪಿಸಿದರು. ಪ್ರತಿಷ್ಠಾನದ ಉದ್ಘಾಟನೆಯು ಖ್ಯಾತ ಚಲನಚಿತ್ರ ನಿರ್ದೇಶಕರಾದ ಶ್ಯಾಂ ಬೆನಗಲ್‌ರಿಂದ ನಡೆದಿದ್ದು ಅಂದಿನ ಕಾರ್ಯಕ್ರಮದ ಅಧ್ಯಕ್ಷತೆಯನ್ನು ಹಿರಿಯ ಸಾಹಿತಿಗಳಾದ ಡಾ. ಶಿವರಾಮ ಕಾರಂತರು ವಹಿಸಿದ್ದರು. 'ತರಂಗ' ಪತ್ರಿಕೆಯ ಮುಖ್ಯ ಸಂಪಾದಕರಾಗಿದ್ದ ಸಂತೋಷಕುಮಾರ ಗುಲ್ವಾಡಿ, ಉಪನ್ಯಾಸಕ ಡಿ.ಜಿ. ಹೆಗ್ಡೆ, ಅಧ್ಯಾಪಕ ಕೂರಾಡಿ ಸದಾಶಿವ ಕಲ್ಕೂರ ಇವರುಗಳು ಅಂದಿನ ವೇದಿಕೆಯಲ್ಲಿ ಉಪಸ್ಥಿತರಿದ್ದರು.

ಸಾಹಿತ್ಯಉಪನ್ಯಾಸ, ವಿಚಾರಗೋಷ್ಠಿ ಪುಸ್ತಕ ಬಿಡುಗಡೆ, ಸನ್ಮಾನ, ಸಂಸ್ಮರಣೆ, ಮುಂತಾದ ಹಲವಾರು ಕಾರ್ಯಕ್ರಮಗಳನ್ನು ಸಂಘಟಿಸಿದೆ. ಸಾಂಸ್ಕೃತಿಕ ಕಾರ್ಯಕ್ರಮಗಳಾಗಿ ಯಕ್ಷಗಾನ, ತಾಳಮದ್ದಳೆ, ಪ್ರತಿಭಾಪುರಸ್ಕಾರ, ಮೊದಲಾದ ಕಾರ್ಯಕ್ರಮಗಳನ್ನು ಏರ್ಪಡಿಸಿದೆ. ಪ್ರತಿಷ್ಠಾನದ ವತಿಯಿಂದ ನಡೆಯುವ ಕಾರ್ಯಕ್ರಮವು ಆಸಕ್ತ ಸಹೃದಯರ ಅನುಕೂಲದ ದೃಷ್ಟಿಯಿಂದ ಬೆನಗಲ್ ಸಮೀಪದ ಊರುಗಳಾದ ಕೊಕ್ಕರ್ಣೆ, ಚೇರ್ಕಾಡಿ, ಪೇತ್ರಿ, ಮೊದಲಾದ ಸ್ಥಳಗಳಲ್ಲಿ ನಡೆದಿರುತ್ತದೆ. ಕೊಕ್ಕರ್ಣೆಯಲ್ಲಿ ಕಾರ್ಯಕ್ರಮಗಳನ್ನು ನಡೆಸಬೇಕಾದ ಸಂದರ್ಭದಲ್ಲಿ ಇಲ್ಲಿಯ ಶಿಕ್ಷಕ ತರಬೇತಿ ಸಂಸ್ಥೆಯಲ್ಲಿಯೂ, ಚೇರ್ಕಾಡಿಯಲ್ಲಿ ನಡೆಸಬೇಕಾದ ಸಂದರ್ಭದಲ್ಲಿ ಅಲ್ಲಿಯ ದುರ್ಗಾಪರಮೇಶ್ವರಿ ಹಿರಿಯ ಪ್ರಾಥಮಿಕ ಶಾಲೆಯಲ್ಲಿ ಮತ್ತು ಶಾರದಾ ಪ್ರೌಢಶಾಲೆಯಲ್ಲಿಯೂ ನಡೆಸಿಕೊಂಡು ಬಂದ ವರದಿಗಳು ಸಿಗುತ್ತವೆ.

1999ರಲ್ಲಿ ವಿಶ್ವಭಾರತಿ ಕರ್ನಾಟಕ ಪ್ರತಿಷ್ಠಾನದ ಸಹಯೋಗದೊಂದಿಗೆ ಐದನೆಯ ಉಡುಪಿ ತಾಲೂಕು ಕನ್ನಡ ಸಾಹಿತ್ಯ ಸಮ್ಮೇಳನವು ಚೇರ್ಕಾಡಿ ಶಾರದಾ ಪ್ರೌಢಶಾಲೆಯಲ್ಲಿ ಯಶಸ್ವಿಯಾಗಿ ನಡೆದಿರುತ್ತದೆ. ಕುರಾಡಿ ಸೀತಾರಾಮ ಅಡಿಗರು ಅಧ್ಯಕ್ಷತೆ ವಹಿಸಿದ್ದ ಈ ಸಮ್ಮೇಳನವನ್ನು ಸಂತೋಷ ಕುಮಾರ ಗುಲ್ವಾಡಿಯವರು ಉದ್ಘಾಟಿಸಿದ್ದರು.

ಪ್ರತಿಷ್ಠಾನದ ಸ್ಥಾಪಕರೂ ಮುಖ್ಯ ಸಂಘಟಕರೂ ಆದ ಸೂರಾಲು ನಾರಾಯಣ ಮಡಿಯವರು ಉದ್ಯೋಗ ನಿಮಿತ್ತ ಉಡುಪಿ ಕುಂಜಿಬೆಟ್ಟಿನಲ್ಲಿಯೇ ವಾಸವಾಗಿದ್ದ ಕಾರಣ ಪ್ರತಿಷ್ಠಾನದ ಬಹಳಷ್ಟು ಸಾಹಿತ್ಯ ಚಟುವಟಿಕೆಗಳು ರಾಷ್ಟ್ರಕವಿ ಗೋವಿಂದ ಪೈ ಸಂಶೋಧನಾ ಕೇಂದ್ರದ ನಿರ್ದೇಶಕರಾದ ಹೆರಂಜೆ ಕೃಷ್ಣ ಭಟ್ಟರ ಸಹಕಾರದೊಂದಿಗೆ ಗೋವಿಂದ ಪೈ ಸಂಶೋಧನ ಕೇಂದ್ರದಲ್ಲಿಯೇ ನಡೆದುಕೊಂಡು ಬಂದಿರುತ್ತದೆ. ನಾರಾಯಣ ಮಡಿಯವರಂತೆ ಯೋಚಿಸುವ ಬೆನಗಲ್ ಪರಿಸರದ ಇನ್ನಷ್ಟು ಮಂದಿ ನಾರಾಯಣ ಮಡಿಯವರ ಜೊತೆ ಕೈಜೋಡಿಸಿದಲ್ಲಿ ಮಾತ್ರ ಮಡಿಯವರ ಕನಸು ನನಸಾದೀತು.

ನಾರಾಯಣ ಮಡಿಯವರಂತೆ ಯೋಚಿಸುವ ಸಮಾನಮನಸ್ಕರು ಈ ಪ್ರತಿಷ್ಠಾನದೊಂದಿಗೆ ಗುರುತಿಸಿಕೊಂಡು ಕಾಲಕಾಲಕ್ಕೆ ಪರಿಷ್ಕಾರಗೊಳ್ಳುವ ನಿಬಂಧನೆಯನ್ನು ಅಳವಡಿಸಿಕೊಂಡಲ್ಲಿ, ನಾರಾಯಣ ಮಡಿಯವರ ಮೇಲಿನ ಸಂಘಟನೆಯು ಬಹುಕಾಲ ಅಸ್ತಿತ್ವದಲ್ಲಿ ಇರುತ್ತದೆ. ಈ ಪರಿಷ್ಕಾರಕ್ಕೆ ಸಂಘಟನೆಯು ಬದ್ಧವಾಗದೇ ಹೋದಲ್ಲಿ ಸಂಘಟನೆಯು ಅಸ್ತಿತ್ವವನ್ನು ಕಳೆದುಕೊಳ್ಳುತ್ತದೆ.

1. ೯) **ಕಲಾವೃಂದ (ರಿ.), ಉಡುಪಿ:** ಉಡುಪಿಯಲ್ಲಿ 'ಕರ್ನಾಟಕ ಸಂಘ' ಎಂಬ ಸಾಹಿತ್ಯ ಒಕ್ಕೂಟವು ಆರಂಭಗೊಂಡ ವರ್ಷದಲ್ಲೇ ಉಡುಪಿಯಲ್ಲಿಯೇ ಹುಟ್ಟಿಕೊಂಡ ಇನ್ನೊಂದು ಸಾಹಿತ್ಯ ಸಂಸ್ಥೆಯೇ 'ಕಲಾವೃಂದ' ಎಂಬ ಸಂಸ್ಥೆಯಾಗಿದೆ. ಈ

ನೋಂದಾಯಿತ ಸಂಸ್ಥೆಯು ದಿನಾಂಕ 13.07.1944 ರಂದು ನೋಂದಾಯಿಸಲ್ಪಟ್ಟು, ಉಡುಪಿಯ ಚಂದ್ರಮೌಳೀಶ್ವರ ದೇವಸ್ಥಾನದ ಮುಹಡಿಯಲ್ಲಿ ತನ್ನ ಕಛೇರಿ ಹಾಗೂ ಗ್ರಂಥಾಲಯವನ್ನು ಹೊಂದಿ ಅಧಿಕೃತವಾಗಿ ಉಡುಪಿ ಪರಿಸರದಲ್ಲಿ ಸಾಹಿತ್ಯಚಟುವಟಿಕೆಗಳ ಮೂಲಕ ಸಾಹಿತ್ಯಾಸಕ್ತರ ಬಯಕೆಗಳನ್ನು ಈಡೇರಿಸುತ್ತಾ ಬಂದಿತ್ತು. ಶ್ರೀಕೃಷ್ಣಮಠದಲ್ಲಿ ವಾಸ್ತವ್ಯದಲ್ಲಿದ್ದು, ಕಾಲೇಜು ಶಿಕ್ಷಣವನ್ನು ಪಡೆಯುತ್ತಿದ್ದ ವಿದ್ಯಾರ್ಥಿಗಳು ಕಲಾವೃಂದದ ಗ್ರಂಥಾಲಯದಿಂದ ಸಾಕಷ್ಟು ಪ್ರಯೋಜನವನ್ನು ಪಡೆದುಕೊಂಡಿರುತ್ತಾರೆ. ಇಂದು ರಾಜ್ಯದಲ್ಲೇ ಸಾಹಿತ್ಯಚಟುವಟಿಕೆಗಳಿಂದ ಗುರುತಿಸಿಕೊಂಡ ಕಾಂತಾವರ ಕನ್ನಡ ಸಂಘದ ಸಂಸ್ಥಾಪಕರಾದ ಡಾ। ನಾ. ಮೊಗಸಾಲೆಯವರು ಉಡುಪಿ ಆಯುರ್ವೇದ ಕಾಲೇಜಿನ ವಿದ್ಯಾರ್ಥಿಯಾಗಿದ್ದ ಸಂದರ್ಭದಲ್ಲಿ ಶ್ರೀಕೃಷ್ಣಮಠದಲ್ಲಿಯೇ ಉಳಿದುಕೊಂಡಿದ್ದರು. ತಮ್ಮ ವೈದ್ಯಕೀಯಶಿಕ್ಷಣದ ಸಂದರ್ಭದಲ್ಲಿ ಈ ಗ್ರಂಥಾಲಯದಿಂದ ಪಡೆದ ಅನುಕೂಲಗಳನ್ನು ಅವರ ಆತ್ಮಚರಿತ್ರೆ 'ಬಯಲಬೆಟ್ಟ'ದಲ್ಲಿ ಉಲ್ಲೇಖಿಸಿದ್ದಾರೆ. (ಕೃತಿ: ಬಯಲಬೆಟ್ಟ, ಪುಟ-239, ಅಧ್ಯಾಯ-3 ಪ್ರ.ಮು. 2005, ಸುಮುಖ ಪ್ರಕಾಶನ ಬೆಂಗಳೂರು)

ಸ್ಥಾಪಕ ಕಾರ್ಯದರ್ಶಿಗಳಾದ ಬಿ. ಪದ್ಮನಾಭ ಭಟ್ ಇವರು ಸುಮಾರು 50 ವರ್ಷಗಳ ಕಾಲ ನಿರಂತರವಾಗಿ ತಮ್ಮ ಚಟುವಟಿಕೆಗಳನ್ನು ಕಲಾವೃಂದದ ಮೂಲಕ ಮುನ್ನಡೆಸಿಕೊಂಡು ಬಂದರು. 25 ವರ್ಷದ ಯಶಸ್ವೀ ಕಾರ್ಯಾಚರಣೆಯ ನೆನಪಿಗಾಗಿ ರಜತಮಹೋತ್ಸವವನ್ನು ವೈಭವದಿಂದ ಆಚರಿಸಿದ ಕುರಿತು ಆ ಕಾಲದ ದಿನಪತ್ರಿಕೆಯಾಗಿದ್ದ ನವಭಾರತ ಮತ್ತು ನವಯುಗದಲ್ಲಿ ವರದಿಗಳು ಪ್ರಕಟಗೊಂಡಿದೆ.

**ಕಾರ್ಯಕ್ರಮದ ಸ್ವರೂಪ:** ಕನ್ನಡ ಕವಿಕೃತಿಗಳ ಕುರಿತಂತೆ ಉಪನ್ಯಾಸ-ಸಾಹಿತ್ಯಚಟುವಟಿಕೆಗಳಲ್ಲದೆ ನಾಟಕ ಪ್ರದರ್ಶನ, ಕನ್ನಡ ಸಣ್ಣಕಥೆಯ ರಚನಾ ಸ್ಪರ್ಧೆಯನ್ನು ರಾಜ್ಯಮಟ್ಟದಲ್ಲಿ ಏರ್ಪಡಿಸಿ, ಪ್ರತಿಭಾವಂತ ಕಥೆಗಾರರಿಗೆ ಸೂಕ್ತ ನಗದು ಬಹುಮಾನ ಸಹಿತ ಪ್ರಶಸ್ತಿಯನ್ನು ನೀಡುವುದು, ಕನ್ನಡ ಭಾಷಣಸ್ಪರ್ಧೆಯನ್ನು ಏರ್ಪಡಿಸುವುದು, ರಂಗವಲ್ಲಿಸ್ಪರ್ಧೆಯನ್ನು ಏರ್ಪಡಿಸುವುದು ಮತ್ತು ವಾರ್ಷಿಕೋತ್ಸವದ ಸಂದರ್ಭದಲ್ಲಿ ವಿಜೇತರಾದ ಸ್ಪರ್ಧಿಗಳಿಗೆ ಸಭೆಯಲ್ಲಿ ಬಹುಮಾನ ನೀಡುವುದು ಇವರ ಕಾರ್ಯಚಟುವಟಿಕೆಯ ಮುಖ್ಯ ಅಂಗವಾಗಿತ್ತು.

ದಿನಪತ್ರಿಕೆಯನ್ನು ಹಣತೆತ್ತು ಓದುವುದಕ್ಕೆ ಸಾಧ್ಯವಿಲ್ಲದವರಿಗೆ ಪತ್ರಿಕೆ ಓದುವುದಕ್ಕೆ ಅವಕಾಶವನ್ನೂ, ಮನೋರಂಜನೆಗಾಗಿ ಬೇರೆ ಯಾವುದೇ ಮಾಧ್ಯಮಗಳು ಇಲ್ಲದ ಸಂದರ್ಭದಲ್ಲಿ ಕಲಾರಂಗವು ಮನೋರಂಜನೆಗೆ ಅವಕಾಶವನ್ನೂ, ಮನೆಯಲ್ಲಿ ಬರೆಯುವುದಕ್ಕೆ ಬೇಕಾದ ಸವಲತ್ತು ಇಲ್ಲದ ಸಂದರ್ಭದಲ್ಲಿ ಇಲ್ಲಿಯ ಗ್ರಂಥಾಲಯವು ವಿದ್ಯಾರ್ಥಿಗಳಿಗೆ ಬರವಣಿಗೆಯ ಚಟುವಟಿಕೆಗೂ ನೆರವಾಗಿದೆ. ಸಾಹಿತ್ಯೋಪನ್ಯಾಸ ನೀಡಲು ಅದೆಷ್ಟೋ ಸಂದರ್ಭದಲ್ಲಿ ಎಂ.ಜಿ.ಎಂ. ಕಾಲೇಜಿನ ಕು. ಶಿ. ಹರಿದಾಸಭಟ್ಟರು ಸಂಪನ್ಮೂಲವ್ಯಕ್ತಿಗಳಾಗಿಯೂ ವಾರ್ಷಿಕೋತ್ಸವದ ಸಂದರ್ಭದಲ್ಲಿ ಮುಖ್ಯ ಅತಿಥಿಗಳಾಗಿಯೂ ವೇದಿಕೆಯಲ್ಲಿ ಆಗಾಗ ಕಾಣಿಸಿಕೊಂಡಿದ್ದಾರೆ.

ಕನ್ನಡ ಸಾಹಿತ್ಯದ ಸ್ವರೂಪವು ಬದಲಾವಣೆಯತ್ತ ಹೆಜ್ಜೆಹಾಕುವ 20ನೇ ಶತಮಾನದ 40ರ ಘಟ್ಟದ ಸಂದರ್ಭದಲ್ಲಿ ಸಾಹಿತ್ಯದ ವೈಶಿಷ್ಟ್ಯ, ಸ್ವಾರಸ್ಯ, ಆಶಯವನ್ನು ಸಹೃದಯನಿಗೆ ಮನಗಾಣಿಸುವ ಸಾರ್ಥಕಪ್ರಯತ್ನವೇ ಕಲಾವೃಂದದ ಚಟುವಟಿಕೆಯಾಗಿತ್ತು. 1990ರ ವರೆಗೂ ಕಲಾರಂಗದ ಚಟುವಟಿಕೆಗಳನ್ನು ಕ್ರಮವತ್ತಾಗಿ ನಡೆಸಿಕೊಂಡು ಬಂದಿದ್ದರೂ

ಾಲಸರಿದಂತೆ ಜನರ ಆಸಕ್ತಿ ಅಭಿರುಚಿಗಳು ಬದಲಾದಂತೆ ಕಲಾರಂಗದ ಕಾರ್ಯಕ್ರಮಗಳ ಸ್ವರೂಪದಲ್ಲಿ ಮಾರ್ಪಾಟು ಮಾಡಿಕೊಳ್ಳದ ಪ್ರಯುಕ್ತ ಕಲಾರಂಗದ ಕಾರ್ಯಚಟುವಟಿಕೆಗಳು ಆಧುನಿಕ ಸಾಹಿತ್ಯಾಸಕ್ತರ ಆಕರ್ಷಣೆಯಿಂದ ದೂರ ಸರಿದುವು.

. **ಈ) ಸಾಹಿತ್ಯ ಸಂಘ, ಮಣಿಪಾಲ: (ಸ್ಥಾಪನೆ: 07.11.1972):** ರಾಷ್ಟ್ರಮಟ್ಟದಲ್ಲಿ ಗುರುತಿಸಿಕೊಂಡ ಉನ್ನತ ಶಿಕ್ಷಣಸಂಸ್ಥೆಗಳು, ಸಿಂಡಿಕೇಟ್ ಬ್ಯಾಂಕಿನ ಕೇಂದ್ರ ಕಛೇರಿ, ಮಣಿಪಾಲದಲ್ಲಿಯೇ ಇರುವ 'ಮಣಿಪಾಲ ಪವರ್ ಪ್ರೆಸ್' ಎಂಬ ಮುದ್ರಣಾಲಯದಿಂದ ಹೊರಡುತ್ತಿರುವ ಜನಪ್ರಿಯ ದಿನಪತ್ರಿಕೆ, ನವೀನ ಉಪಕರಣಗಳ ಸುಸಜ್ಜಿತ ವ್ಯವಸ್ಥೆಯ ಕಸ್ತೂರ್ಬಾ ಆಸ್ಪತ್ರೆ, ಎಂಬ ಈ ಎಲ್ಲಾ ಆಧುನಿಕ ಸಂಸ್ಥೆಗಳಿಂದ 1970ರ ದಶಕದಲ್ಲೇ ಮಣಿಪಾಲವು ಅಂತಾರಾಷ್ಟ್ರೀಯ ಮಟ್ಟದಲ್ಲಿ ಗುರುತಿಸಿಕೊಂಡಿತ್ತು. ಮಣಿಪಾಲ ಮುದ್ರಣಾಲಯದಲ್ಲಿ ಸೃಜನಶೀಲ ಚಟುವಟಿಕೆಗಳಿಂದ ಗುರುತಿಸಿಕೊಂಡ ಹಿರಿಯ ಸಾಹಿತಿಗಳಾದ ಆಚಾರ್ಯ ಸಹೋದರರು (ಬನ್ನಂಜೆ ರಾಮಾಚಾರ್ಯ ಹಾಗೂ ಗೋವಿಂದಾಚಾರ್ಯ) ಸಿಂಡಿಕೇಟ್ ಬ್ಯಾಂಕಿನ ಅಧಿಕಾರಿಯಾಗಿದ್ದರೂ ಸಾಹಿತ್ಯವಲಯದಲ್ಲೇ ಪ್ರಸಿದ್ಧರಾದ ಅ.ಬಾ. ಶೆಟ್ಟಿಯವರು, ಕಲೆ-ಸಂಸ್ಕೃತಿ-ಸಾಹಿತ್ಯದ ಕುರಿತು ವಿಶೇಷ ಒಲವುಳ್ಳ ಮಣಿಪಾಲ ತಾಂತ್ರಿಕ ಕಾಲೇಜಿನಲ್ಲಿ ಉಪನ್ಯಾಸಕರಾಗಿದ್ದ ಪ್ರೊ. ಜಿ.ಆರ್. ರೈ ಅವರು, ಮಣಿಪಾಲ ವೈದ್ಯಕೀಯ ಕಾಲೇಜಿನ ಪ್ರಾಧ್ಯಾಪಕರಾಗಿ ಕನ್ನಡ ಸಾಹಿತ್ಯದ ಬಗ್ಗೆ ವಿಶೇಷ ಒಲವನ್ನು ಹೊಂದಿರುವ ಸ್ಥಳೀಯರೇ ಆದ ಡಾ। ಶಾಂತಾರಾಮ್ ಇವರುಗಳೆಲ್ಲರ ಸುದೀರ್ಘ ಸಮಾಲೋಚನೆ ಮತ್ತು ಸ್ಪಷ್ಟ ಉದ್ದೇಶದಿಂದ 1972ರಲ್ಲಿ **ಮಣಿಪಾಲ ಸಾಹಿತ್ಯ ಸಂಘ** ಎಂಬ ಸಾಹಿತ್ಯ ಒಕ್ಕೂಟವು ಅಸ್ತಿತ್ವಕ್ಕೆ ಬಂದಿತು. ಹೀಗೆ ಸ್ಥಾಪಿತವಾದ ಈ ಸಂಘವನ್ನು ದಿನಾಂಕ 01.11.1972ರಂದು ಪ್ರೊ। ತೆಕ್ಕುಂಜ ಗೋಪಾಲಕೃಷ್ಣ ಭಟ್ಟರು ಉದ್ಘಾಟಿಸಿದರು.

ಅ. ಬಾ. ಶೆಟ್ಟಿಯವರ ವಿಶೇಷ ಉತ್ಸಾಹ, ಸೂಕ್ತ ರೀತಿಯಲ್ಲಿ ಜಿ.ಆರ್. ರೈ ಅವರ ಬೆಂಬಲ, ಮಣಿಪಾಲ ಮುದ್ರಣಾಲಯ ಹಾಗೂ ಇತರ ಸಂಸ್ಥೆಗಳ ನೌಕರರ ಉತ್ತೇಜನದಿಂದಾಗಿ ಸಾಹಿತ್ಯ ಸಂಘವು ಆರಂಭದಿಂದಲೇ ಸಾಕಷ್ಟು ಚಟುವಟಿಕೆಗಳನ್ನು ನಡೆಸಿ ಸಾರ್ವಜನಿಕ ಸಹೃದಯರಿಂದ ಗುರುತಿಸಿಕೊಂಡಿತು. ಕೆ.ಎಂ.ಸಿ.ಯಲ್ಲಿ ಆಗ ಪ್ರಾಧ್ಯಾಪಕರಾಗಿದ್ದ, ಡಾ। ಶಾಂತಾರಾಮ್ ಅವರು, ಎಂ.ಜಿ.ಎಂ. ಕಾಲೇಜಿನ ಪ್ರಾಂಶುಪಾಲರಾದ ಪ್ರೊ. ಕು.ಶಿ. ಹರಿದಾಸ ಭಟ್ಟ ಅವರು ಸೂಕ್ತ ಮಾರ್ಗದರ್ಶನ ಮತ್ತು ಪ್ರೋತ್ಸಾಹದೊಂದಿಗೆ ಸಾಹಿತ್ಯ ಸಂಘದ ಚಟುವಟಿಕೆಗಳನ್ನು ಬೆಂಬಲಿಸಿದರು.

**ಸಂಘದ ಮುಖ್ಯ ಚಟುವಟಿಕೆಗಳು:**

ಗ್ರಂಥಪ್ರಕಟಣೆ, ಕವಿ-ಬರಹಗಾರರಿಗೆ ಸನ್ಮಾನ, ಉಪನ್ಯಾಸ, ಯಕ್ಷಗಾನ, ತಾಳಮದ್ದಳೆ, ಹರಿಕಥೆ, ಸಂಗೀತ ಕಛೇರಿ, ಈ ಮುಂತಾದ ಚಟುವಟಿಕೆಗಳನ್ನು ಸಂಘವು ವರ್ಷಂಪ್ರತಿ ನಡೆಸುತ್ತಾ ಬಂದಿತ್ತು.

**ಗ್ರಂಥ ಪ್ರಕಟಣೆ:** ತಮ್ಮ ಅನಾರೋಗ್ಯದಿಂದಾಗಿ ಬರೆವಣಿಗೆಯನ್ನೇ ಕೈಬಿಟ್ಟಿದ್ದ ಸೇಡಿಯಾಪು ಕೃಷ್ಣ ಭಟ್ಟರು ಮಣಿಪಾಲದ ತಮ್ಮ ಮಗನ ಮನೆಗೆ ಬಂದು ನೆಲೆಸಿದ ಅನಂತರ ಆರೋಗ್ಯದಲ್ಲಿ ಸುಧಾರಣೆ ಕಂಡುಬಂದು ಮಣಿಪಾಲದಲ್ಲಿಯೇ ಕೆಲವು ಉತ್ತಮ ಗ್ರಂಥಗಳನ್ನು ಬರೆದರು. ಅವುಗಳಲ್ಲಿ ಉಲ್ಲೇಖಿಸಬೇಕಾದುದು-'ಕೆಲವು ದೇಶನಾಮಗಳು', 'ಕನ್ನಡ ಛಂದಸ್ಸು', 'ತಥ್ಯದರ್ಶನ' ಎಂಬ ಕೃತಿಗಳು ಸಾಹಿತ್ಯಸಂಘದಿಂದ ಪ್ರಕಟಗೊಂಡವು. ಹಾಗೆಯೇ ಮಂದಾರ ಕೇಶವ ಭಟ್ಟರ ತುಳು-ಮಂದಾರ

ರಾಮಾಯಣ, ಪ್ರೊ. ರೈ ಅವರ ಎರಡು ಪುಸ್ತಕಗಳು, ಪೊಳಲಿಯವರ ಎರಡು ಸ್ವಂತ ಕೃತಿಗಳು, ಮಣಿಪಾಲ ಸಾಹಿತ್ಯ ಸಂಘದಿಂದಲೇ ಪ್ರಕಟಗೊಂಡು ಸಾಹಿತ್ಯ ಸಂಘಕ್ಕೆ ವಿಶೇಷ ಗೌರವವನ್ನು ತಂದುಕೊಟ್ಟಿತು.

**ವಿಶೇಷ ವಾರ್ಷಿಕ ಸಂಚಿಕೆ:** ಸಂಸ್ಥೆಯ ವರ್ಷದ ಚಟುವಟಿಕೆಗಳನ್ನು ದಾಖಲಿಸಿ ಖ್ಯಾತ ವಿದ್ವಾಂಸರ ಶ್ರೇಷ್ಠ ಸಾಹಿತ್ಯ ಬರಹಗಳನ್ನು ಒಗ್ಗೂಡಿಸಿ ಪ್ರತ್ಯೇಕವಾದ ವಾರ್ಷಿಕ ಸಂಚಿಕೆಯನ್ನು **'ಪಾರಿಜಾತ'** ಎಂಬ ಹೆಸರಿನಲ್ಲಿ ಸಂಪಾದಿಸಿ ಪ್ರಕಟಿಸುವ ಕೆಲಸವನ್ನು ಮಣಿಪಾಲ ಸಾಹಿತ್ಯಸಂಘವು ನಿರ್ವಹಿಸಿದೆ. ಪಾರಿಜಾತ ಎಂಬ ವಾರ್ಷಿಕ ಸಂಚಿಕೆಯ ಮೂಲಕ ಸಾಹಿತ್ಯದಲ್ಲಿ ಸಾಧನೆ ಮಾಡಿದ ಸಂಪನ್ಮೂಲವ್ಯಕ್ತಿಗಳು ತಮ್ಮ ಲೇಖನವನ್ನು ಪ್ರಕಟಿಸಿದ್ದಾರೆಂಬುದು ಮಣಿಪಾಲ ಸಾಹಿತ್ಯ ಸಂಘದ ಹೆಗ್ಗಳಿಕೆಯಾಗಿದೆ. ಜಿಲ್ಲೆಯ ಖ್ಯಾತ ಸಂಶೋಧಕ ಪ್ರೊ। ಪಿ.ಗುರುರಾಜ ಭಟ್ಟ ಅವರು ಬರೆದ ಸಂಶೋಧನಾ ಕೃತಿ 'Studies in Tuluva History and Culture' ಎಂಬ ಸಂಶೋಧನಾ ಗ್ರಂಥವೂ ಮಣಿಪಾಲ ಕನ್ನಡ ಸಂಘದ ಕಾರ್ಯಕ್ರಮದಲ್ಲೇ ಅನಾವರಣಗೊಂಡಿತು ಎನ್ನುವುದು ಮಣಿಪಾಲ ಕನ್ನಡ ಸಂಘಕ್ಕೊಂದು ಹೆಮ್ಮೆಯ ಸಂಗತಿ.

ಮಾಸ್ತಿ ವೆಂಕಟೇಶ ಅಯ್ಯಂಗಾರ್, ಪ್ರೊ. ವೀ. ಸೀ., ಪ್ರೊ. ದೇ. ಜ. ಗೌಡ, ಡಾ. ಶಿವರಾಮ ಕಾರಂತ, ಕಯ್ಯಾರ, ಎಸ್.ವಿ. ಪರಮೇಶ್ವರ ಭಟ್ಟ, ಗೌರೀಶ ಕಾಯ್ಕಿಣಿ, ಕೆ. ಟಿ. ಗಟ್ಟಿ, ಡಾ। ಅನುಪಮಾ ನಿರಂಜನ, ಏರ್ಯ ಲಕ್ಷ್ಮೀನಾರಾಯಣ ಆಳ್ವ, ಶ್ರೀ ಸೇಡಿಯಾಪು ಕೃಷ್ಣ ಭಟ್ಟ, ಶ್ರೀ ಎ.ಜೆ. ಅಲ್ಸೆ ಮತ್ತಿತರರು ಸಾಹಿತ್ಯ ಉಪನ್ಯಾಸಕ್ಕಾಗಿ ಮಣಿಪಾಲ ಸಾಹಿತ್ಯ ಸಂಘದ ವೇದಿಕೆಯನ್ನು ಬಳಸಿಕೊಂಡಿದ್ದರೆಂಬುದು ಈಗ ಇತಿಹಾಸ.

ಯಕ್ಷಗಾನ ತಾಳಮದ್ದಲೆ ಕಾರ್ಯಕ್ರಮದಲ್ಲಿ ಅಂಬಾತನಯ ಮುದ್ರಾಡಿ, ಪೊಲ್ಯ ದೇಜಪ್ಪ ಶೆಟ್ಟಿ, ರಾಘವ ನಂಬಿಯಾರ್, ಪ್ರೊ.ಎಂ. ಪ್ರಭಾಕರ ಜೋಷಿ, ಶೇಣಿ ಗೋಪಾಲಕೃಷ್ಣ ಭಟ್, ಕುಂಬಳೆ ಸುಂದರ ರಾವ್, ಹಿರಿಯಡ್ಕ ಗೋಪಾಲ ರಾವ್ ಮೊದಲಾದ ಕಲಾವಿದರು ಮಣಿಪಾಲ ಸಾಹಿತ್ಯ ಸಂಘದ ಅತಿಥಿಗಳಾಗಿದ್ದರು.

**ಅನಿರೀಕ್ಷಿತ ಅಂತ್ಯ:** ಸಾಹಿತ್ಯ ಸಂಘದ ಓರ್ವ ಸಕ್ರಿಯ ಸದಸ್ಯರಾಗಿದ್ದ ಮಣಿಪಾಲ ಮುದ್ರಣ ಸಂಸ್ಥೆಯ ನೌಕರರಾಗಿದ್ದ ಆತ್ರಾಡಿ ಸಂತೋಷ ಕುಮಾರ್ ಹೆಗ್ಡೆಯವರು ಮುದ್ರಣ ಸಂಸ್ಥೆಯನ್ನು ಬಿಟ್ಟು ಬೇರೊಂದು ಸಂಸ್ಥೆಯಲ್ಲಿ ಉದ್ಯೋಗಕ್ಕೆ ಸೇರಿಕೊಂಡರು. ಅ.ಬಾ. ಶೆಟ್ಟಿಯವರು ಬ್ಯಾಂಕ್ ನೌಕರಿಯ ವರ್ಗಾವಣೆಯ ನಿಯಮದಂತೆ ವರ್ಗಾವಣೆಗೊಂಡು ಪರವೂರನ್ನು ಸೇರಿಕೊಂಡರು. ಜಿ.ಆರ್. ರೈಯವರು ತಮ್ಮ ಸೇವೆಯನ್ನು ಮಂಗಳೂರಿನ ತಾಂತ್ರಿಕ ಕಾಲೇಜೊಂದರಲ್ಲಿ ಮುಂದುವರಿಸಿ, ತಮ್ಮ ಖಾಯಂ ವಾಸಸ್ಥಾನವನ್ನು ಮಂಗಳೂರಿಗೆ ಬದಲಾಯಿಸಿಕೊಂಡರು. ಹೀಗೆ ಸಂಘದ ಜವಾಬ್ದಾರಿಯುತ ಸದಸ್ಯರು ಒಬ್ಬೊಬ್ಬರಾಗಿ ಸಂಘದಿಂದ ದೂರವಾದಂತೆ ಪ್ರೊ. ಕು. ಶಿ. ಯವರೂ ತಮ್ಮ ಗೋವಿಂದ ಪೈ ಸಂಶೋಧನ ಕೇಂದ್ರದ ಕಾರ್ಯಚಟುವಟಿಕೆಗಳ ಒತ್ತಡದಿಂದಾಗಿ ಅಲ್ಲಿಂದ ಹೊರಬರಲಾಗದ ಸ್ಥಿತಿಯಲ್ಲಿದ್ದರು. ಡಾ. ಶಾಂತಾರಾಮ್ ಅವರಿಗೆ ಅಕಾಡೆಮಿಯ ಎಲ್ಲಾ ಕಾಲೇಜುಗಳ ಹೊಣೆ ನಿಭಾಯಿಸಬೇಕಾಗಿ ಬಂದ ಪ್ರಯುಕ್ತ ಅವರಿಗೂ ಮಣಿಪಾಲ ಸಾಹಿತ್ಯ ಸಂಘದ ಕಾರ್ಯಕ್ರಮಗಳನ್ನು ಸಂಘಟಿಸುವುದಕ್ಕೆ ಬಿಡುವಿಲ್ಲದಂತಾಯಿತು. ಈ ಎಲ್ಲ ಕಾರಣಗಳಿಂದಾಗಿ ಮಣಿಪಾಲ ಸಾಹಿತ್ಯ ಸಂಘವು ತನ್ನ ಚಟುವಟಿಕೆಗಳಿಂದ ಹಿಂದೆ ಸರಿದು, ಕೇವಲ ನೆನಪು ಮಾತ್ರ ಉಳಿಯುವಂತಾಯಿತು.

1. ಉ) **ಕರ್ನಾಟಕ ಸಂಘ, ಕುಂದಾಪುರ:** ಉಡುಪಿ ಜಿಲ್ಲೆಯಲ್ಲಿ ಮೊದಲು ಅಸ್ತಿತ್ವಕ್ಕೆ ಬಂದ ಸಾಹಿತ್ಯಸಂಘಟನೆಯೇ ಕರ್ನಾಟಕ ಸಂಘ ಕುಂದಾಪುರ ಎಂಬ ಒಕ್ಕೂಟವಾಗಿದೆ. ಈ ಸಂಘದ ಅಧಿಕೃತ ನಡಾವಳಿ ಪುಸ್ತಕ, ರಶೀದಿ ಪುಸ್ತಕಗಳು ಇಂದಿನ ತಾಲೂಕು ಕನ್ನಡ ಸಾಹಿತ್ಯ ಪರಿಷತ್ತಿನ ಅಧ್ಯಕ್ಷರಾದ, ನ್ಯಾಯವಾದಿಗಳೂ ಆದ ಶ್ರೀ ಎ.ಎಸ್.ಎನ್. ಹೆಬ್ಬಾರರ ವಶದಲ್ಲಿದೆ. ಹೆಬ್ಬಾರರಲ್ಲಿರುವ ನಡಾವಳಿ ಪುಸ್ತಕದ ದಾಖಲೆಯಂತೆ ಕುಂದಾಪುರ ಕರ್ನಾಟಕ ಸಂಘವು 1936–37ರ ಹೊತ್ತಿಗೆ ಅಸ್ತಿತ್ವದಲ್ಲಿದ್ದು, 1946–47ರ ಅವಧಿಯಲ್ಲಿ ಸಂಘವು ನಿರ್ವಹಿಸಿದ ಕಾರ್ಯಚಟುವಟಿಕೆಗಳ ಮಾಹಿತಿಯಂತೆ ಸಾಹಿತ್ಯ ಉಪನ್ಯಾಸದ ವಿವರಗಳು ಈ ಕೆಳಗಿನಂತಿವೆ.

| ದಿನಾಂಕ | ಭಾಷಣಗಾರರ ಹೆಸರು | ಭಾಷಣಗಳ ವಿಷಯ |
|---|---|---|
| | ಶ್ರೀ ವಿ. ಸೀತಾರಾಮಯ್ಯ | ಗೋಕಾಕರ ಸಮುದ್ರಗೀತಗಳು |
| | ಶ್ರೀ ಶ್ರೀನಿವಾಸ ರಾವ್ | ಮಾಸ್ತಿಯವರ ಯಶೋಧರಾ ನಾಟಕದ ಕುರಿತು. |
| 24.01.1947 | ಶ್ರೀ ಸೇಡಿಯಾಪು ಕೃಷ್ಣ ಭಟ್ಟರು | ಭಾರತೀಯ ಮತ್ತು ಪಾಶ್ಚಿಮಾತ್ಯ ಸಾಹಿತ್ಯ |
| 17.07.1947 | ಶ್ರೀ ಯು. ಕೃಷ್ಣರಾಯರು | ಡಾ. ಶಿವರಾಮ ಕಾರಂತರ ನಾಟಕಗಳು. |
| 04.08.1947 | ಶ್ರೀ ಕೆ.ಎಲ್. ಕಾರಂತರು | ವಿಶ್ವವಿಕಾಸವಾದ |
| 12.08.1947 | ಶ್ರೀ ಹರಿದಾಸ ಮಲ್ಪೆ ಸಾಮಗರು | ದಾಸ ಸಾಹಿತ್ಯ |
| 27.08.1947 | ಶ್ರೀ ಶ್ರೀನಿವಾಸ ಶೆಟ್ಟಿಯವರು | ಸಮತಾವಾದ |

ನಡಾವಳಿ ಪುಸ್ತಕದಲ್ಲಿ ಕಾಣಿಸಿದಂತೆ ಸಂಘದ ಉದ್ದೇಶವು ಹೀಗೆ ನಿರೂಪಿತವಾಗಿದೆ:–

1) **ಸಂಘದ ಉದ್ದೇಶ:**– ನಿಯಮಬದ್ಧವಾದ ಎಲ್ಲಾ ವಿಧಗಳಿಂದ ಕನ್ನಡ ಜನತೆಯಲ್ಲಿ ಕನ್ನಡ ಸಾಹಿತ್ಯಾಭಿರುಚಿಯನ್ನು ಹೆಚ್ಚಿಸುವುದು, ಕಲಾಪ್ರೇಮವನ್ನು ಹೆಚ್ಚಿಸುವುದು, ಕರ್ಣಾಟಕದ ಏಕೀಕರಣವನ್ನು ಸಾಧಿಸುವುದು. ಕನ್ನಡಿಗರಲ್ಲಿ ಸ್ವಾಭಿಮಾನ–ಸ್ವಾವಲಂಬನೆಗಳನ್ನು ಹೆಚ್ಚಿಸುವುದು ಈ ಸಂಘದ ಉದ್ದೇಶಗಳಾಗಿದ್ದವು.

ಮೇಲಿನ ಉದ್ದೇಶವನ್ನು ಸಾಧಿಸಲು ಸಂಘವು ಹಮ್ಮಿಕೊಂಡ ಕಾರ್ಯಚಟುವಟಿಕೆಗಳು ಈ ಕೆಳಗಿನಂತಿವೆ.

2) ಕರ್ಣಾಟಕ ಸಂಘದ ನಿಬಂಧನೆಯಲ್ಲಿ ಸಭೆಯಲ್ಲಿ ಕರ್ಣಾಟಕ ಸಂಘವು ಇರಿಸಿಕೊಂಡ ಉದ್ದೇಶವನ್ನು ನೆರವೇರಿಸುವ ದೃಷ್ಟಿಯಿಂದ ಸಂಪನ್ಮೂಲವ್ಯಕ್ತಿಗಳಿಂದ ಉಪನ್ಯಾಸ ಕಾರ್ಯಕ್ರಮಗಳನ್ನು ಏರ್ಪಡಿಸುವುದಲ್ಲದೆ ಕುಂದಾಪುರ ಪರಿಸರದ ಶಾಲಾವಿದ್ಯಾರ್ಥಿಗಳಲ್ಲಿ ಸಾಹಿತ್ಯಾಸಕ್ತಿಯನ್ನು ಪ್ರಚೋದಿಸುವುದಕ್ಕಾಗಿ ಲೇಖನಸ್ಪರ್ಧೆ (ಪ್ರಬಂಧ) ವಾಚನಸ್ಪರ್ಧೆ (ಓದುವ), ಭಾಷಣಸ್ಪರ್ಧೆಗಳನ್ನು ಏರ್ಪಡಿಸಿಕೊಂಡು ಬರುತ್ತಿದ್ದರು ಈ ಪ್ರಬಂಧಸ್ಪರ್ಧೆ ಮತ್ತು ಭಾಷಣಸ್ಪರ್ಧೆಯ ನಿಯಮಾವಳಿಗಳು ಈ ಸ್ಪರ್ಧೆಗಳಿಗೆ ನೀಡುತ್ತಿದ್ದ ವಿಷಯಗಳು–ಇವೆಲ್ಲವುಗಳ ಸಮಗ್ರ ಮಾಹಿತಿಯು ಇಂದಿನ ತಾಲೂಕು ಸಾಹಿತ್ಯ ಪರಿಷತ್ತಿನ ಅಧ್ಯಕ್ಷರಾದ ಶ್ರೀ ಎ.ಎಸ್.ಎನ್. ಹೆಬ್ಬಾರ ಅವರ ಸುಪರ್ದಿಯಲ್ಲಿರುತ್ತದೆ.

ಸಂಘವು 48–50ರ ಅವಧಿಯಲ್ಲಿ ನಡೆಸಿದ ಕಾರ್ಯಚಟುವಟಿಕೆಗಳ ವಿವರಗಳು ನಡಾವಳಿ ಪುಸ್ತಕದಲ್ಲಿ ಕಾಣಿಸಿದಂತೆ ಈ ಕೆಳಗಿನಂತಿದೆ.

ದಿನಾಂಕ 28.01.1948ರಂದು ಗೌರವ ಅಧ್ಯಕ್ಷರ (ಖಾಯಂ) ನೇತೃತ್ವದಲ್ಲಿ ಸುಪ್ರಸಿದ್ಧ ಹರಿದಾಸರಾದ ಶ್ರೀ ಗೋಪಾಲಕೃಷ್ಣ ಭಟ್ಟರ ಹರಿಕಥಾ ಕಾಲಕ್ಷೇಪ ನಡೆಯಿತು ಎಂಬ ಉಲ್ಲೇಖದೊಂದಿಗೆ ಹರಿದಾಸರಿಗೆ ನೀಡಿದ ಸಂಭಾವನೆ ರೂ. 10.00 (ರೂಪಾಯಿ ಹತ್ತು) ಎಂದು ದಾಖಲಿಸಲಾಗಿದೆ. ದಿನಾಂಕ 11.07.1948ರಂದು ಸಕ್ರಿಯ ಅಧ್ಯಕ್ಷರಾದ ಎ.ಪಿ.ಎನ್.

ಹೆಬ್ಬಾರರ ಅಧ್ಯಕ್ಷತೆಯಲ್ಲಿ ಸಂಘದ ಸದಸ್ಯರು ಸಭೆ ಸೇರಿದ್ದು, ಶ್ರೀ ಕೊರಡ್ಕಲ್ ಶ್ರೀನಿವಾಸ ರಾಯರ ನಿಧನದ ಬಗ್ಗೆ 2 ನಿಮಿಷ ಮೌನವನ್ನಾಚರಿಸಲಾಯಿತು ಎಂದು ದಾಖಲಾಗಿದೆ.

ಐರೋಡಿ ವೆಂಕಟ ನರಸಿಂಹ ಹೆಬ್ಬಾರರು (ಎ. ಎಸ್.ಎನ್. ಹೆಬ್ಬಾರರ ತಂದೆ) ಕರ್ಣಾಟಕ ಸಂಘದ ಅಧ್ಯಕ್ಷರಾದ ಅನಂತರ ಕರ್ಣಾಟಕ ಸಂಘದ ನಾಡಹಬ್ಬದ ಕಾರ್ಯಕ್ರಮದಲ್ಲಿ ಮೊದಲ ದಿನ ಯಕ್ಷಗಾನ ಜರಗಿಸುವುದಾಗಿಯೂ ಆ ಬಗ್ಗೆ ಪೊಳಲಿ ಶಾಸ್ತ್ರಿಯವರನ್ನು ನಾರಾಯಣ ಕಿಲ್ಲೆಯವರನ್ನು ಕೇಳಿಕೊಳ್ಳುವುದಾಗಿ ನಿರ್ಣಯಿಸಲಾಯಿತೆಂಬ ಉಲ್ಲೇಖವು 20.09.1948ರಂದು ಸಭೆಯ ನಿರ್ಣಯವು, ನಿರ್ಣಯ ಪುಸ್ತಕದಲ್ಲಿ ದಾಖಲುಗೊಂಡಿದೆ.

1950–51ನೇ ವರ್ಷದ ವರೆಗೆ ಕರ್ಣಾಟಕ ಸಂಘವು ವ್ಯವಸ್ಥಿತವಾಗಿ ತನ್ನ ಕಾರ್ಯಚಟುವಟಿಕೆಗಳನ್ನು ನಿರ್ವಹಿಸಿಕೊಂಡು ಬಂದ ಬಗ್ಗೆ ವರದಿಗಳು ಅಧಿಕೃತವಾಗಿ ಲಭ್ಯವಾಗುತ್ತವೆ. 1951 ರಿಂದ ಕರ್ಣಾಟಕ ಸಂಘದ ಕಾರ್ಯಚಟುವಟಿಕೆಗಳ ಯಾವುದೇ ವರದಿಯು ಕಂಡುಬಾರದಿರುವ ಪ್ರಯುಕ್ತ ಕರ್ಣಾಟಕ ಸಂಘದ ಉದ್ದೇಶಗಳನ್ನು ಮುಂದುವರಿಸುತ್ತಾ ಕನ್ನಡಭಾಷೆ–ಸಾಹಿತ್ಯ ಮತ್ತು ಸಂಸ್ಕೃತಿಯಲ್ಲಿ ಆಸಕ್ತರಾದ ಸ್ಥಳೀಯನಾಗರಿಕರು ದಿನಾಂಕ 04.08.1963ರಂದು ಸಭೆ ಸೇರಿ, **'ಕನ್ನಡ ಸಂಘ'** ಎಂಬ ಒಕ್ಕೂಟವನ್ನು ಅಸ್ತಿತ್ವಕ್ಕೆ ತರಲಾಯಿತು. ಈ ಸಂಘದ ಒಟ್ಟು ಉದ್ದೇಶ 'ಕನ್ನಡ ನುಡಿ–ಸಾಹಿತ್ಯ, ಕಲೆ–ಸಂಸ್ಕೃತಿಗಳ ಅಭಿವೃದ್ಧಿಗೆ ಸಂಬಂಧಪಟ್ಟ ಚಟುವಟಿಕೆಗಳನ್ನು ನಡೆಸುವುದು' ಎಂಬ ಉಲ್ಲೇಖ ನಿರ್ಣಯ ಪುಸ್ತಕದಲ್ಲಿ ದಾಖಲಾಗಿದೆ. ಶ್ರೀ ಕಾಳಿಂಗ ಹೆಬ್ಬಾರರು ಕನ್ನಡ ಸಂಘದ ಸ್ಥಾಪಕ ಅಧ್ಯಕ್ಷರಾಗಿಯೂ, ಗುಂಡ್ಮಿ ಚಂದ್ರಶೇಖರ ಐತಾಳರು ಉಪಾಧ್ಯಕ್ಷರಾಗಿಯೂ, ಶ್ರೀ ಪಿ. ನಾರಾಯಣ ಹೇರ್ಳೆಯವರು ಕೋಶಾಧಿಕಾರಿಗಳಾಗಿಯೂ, ಶ್ರೀ ಕೆ. ರಾಮಚಂದ್ರ ಕೋತ್ವಾಲರು ಮತ್ತು ಶ್ರೀ ಎ. ಶಂಕರನಾರಾಯಣ ಹೆಬ್ಬಾರರು ಜೊತೆಕಾರ್ಯದರ್ಶಿಗಳಾಗಿಯೂ ಇನ್ನಿತರ ನಾಲ್ವರು ಸದಸ್ಯರೆಂದೂ ಆಯ್ಕೆಗೊಂಡರು ಎಂಬ ವರದಿಯು ಇಂದಿನ ಕುಂದಾಪುರ ಕನ್ನಡ ಸಂಘದ ಅಧ್ಯಕ್ಷರಾದ ಶ್ರೀ ಎ.ಎಸ್.ಎನ್. ಹೆಬ್ಬಾರರ ವಶದಲ್ಲಿರುವ ನಡಾವಳಿ ಪುಸ್ತಕದ ದಾಖಲೆಯಿಂದ ತಿಳಿದುಬರುತ್ತದೆ.

**ಕುಂದಾಪುರ ಕನ್ನಡ ಸಂಘದ ಚಟುವಟಿಕೆಗಳ ಸಂಕ್ಷಿಪ್ತ ಅವಲೋಕನ:** 1963–1995ರ ತನಕ ನಿರಂತರವಾಗಿ ಕನ್ನಡ ಸಂಘವು ಕುಂದಾಪುರ ಪರಿಸರದಲ್ಲಿ ಕನ್ನಡ ಚಟುವಟಿಕೆಗಳನ್ನು ಮುನ್ನಡೆಸಿಕೊಂಡು ಬಂದಿದೆ. ಈ ಚಟುವಟಿಕೆಗಳಿಗೆ ಬೆನ್ನೆಲುಬಾಗಿ ನಿಂತು ಕನ್ನಡ ಸಂಘದ ಅಧ್ಯಕ್ಷರಾಗಿ ಎ.ಎಸ್.ಎನ್. ಹೆಬ್ಬಾರರು ಜವಾಬ್ದಾರಿ ಸ್ವೀಕರಿಸಿದರು. ಇವರ ನೇತೃತ್ವದಲ್ಲಿ ಕಥಾಸ್ಪರ್ಧೆ, ಪುಸ್ತಕಪ್ರಕಟಣೆ, ರಾಜ್ಯೋತ್ಸವ ಪ್ರಶಸ್ತಿಪುರಸ್ಕೃತ ಸಾಹಿತಿಗಳಿಗೆ ಸನ್ಮಾನ ಹಾಗೂ ಸಂಘದ ಬೆಳ್ಳಿಹಬ್ಬ ಕಾರ್ಯಕ್ರಮಗಳನ್ನು ಯಶಸ್ವಿಯಾಗಿ ಮತ್ತು ಅರ್ಥಪೂರ್ಣವಾಗಿ ನಡೆಸಿದರು. ಕುಂದಾಪುರ ಕನ್ನಡ ಸಂಘದ ಬೆಳ್ಳಿಹಬ್ಬದ ಪ್ರಯುಕ್ತ ನಡೆಸಿದ 'ಯಕ್ಷಗಾನ ಕುರಿತ ವಿಚಾರಗೋಷ್ಠಿ' ಮುಖ್ಯ ಕಾರ್ಯಕ್ರಮಗಳಲ್ಲೊಂದಾಗಿದೆ. ಕನ್ನಡ ಸಂಘವು ರಜತೋತ್ಸವ (ಬೆಳ್ಳಿಹಬ್ಬ)ವನ್ನು ಆಚರಿಸಿದ ವರದಿಯು ಪತ್ರಿಕೆಯಲ್ಲಿ ಪ್ರಕಟಗೊಂಡಿದ್ದು ಪತ್ರಿಕಾ ವರದಿಯಂತೆ ಕಾಲೇಜು ವಿದ್ಯಾರ್ಥಿಗಳಿಗಾಗಿ ಸಂಘವು ಕಥಾಸ್ಪರ್ಧೆಯನ್ನೂ, ಕವಿಗೋಷ್ಠಿಯನ್ನೂ ಹಮ್ಮಿಕೊಂಡಿತ್ತು ಎಂದು ತಿಳಿದು ಬರುತ್ತದೆ.

**ಗ್ರಂಥ ಪ್ರಕಟಣೆ:** 'ಭಾವಸಾ' ಎಂಬ ನಿಯತಕಾಲಿಕವನ್ನು 1989ರ ತನಕ ಪ್ರಕಟಿಸಿದ್ದಲ್ಲದೇ ಇದೇ ಹೆಸರಿನ ಕಥಾಸಂಕಲನ ಪ್ರಕಟಿಸುವ ಸಾಹಸಕ್ಕೂ ಕೈಹಾಕಲಾಗಿತ್ತು. ಸಂಘದ ಬೆಳ್ಳಿಹಬ್ಬದ ಅಂಗವಾಗಿ ಕುಂದಾಪುರ ಕನ್ನಡದ ಭೌಗೋಳಿಕ ಪ್ರದೇಶದ

ವ್ಯಾಪ್ತಿಯಲ್ಲಿದ್ದ ಬರಹಗಾರರ ಪ್ರತಿಯೊಬ್ಬರ ವಿವರಗಳನ್ನು ಸಂಕ್ಷಿಪ್ತವಾಗಿ ಪ್ರಕಟಿಸುವ ಪ್ರಕಟನೆಯೊಂದನ್ನು ಮೊದಲಬಾರಿಗೆ ಹೊರತರಲಾಯಿತು. ಅದುವೇ 'ಬರಹಗಾರರ ಬಳಗ' ಸಂಚಿಕೆಯಾಗಿದ್ದು, ಇದನ್ನು ಕನರಾಡಿ ವಾದಿರಾಜ ಭಟ್ ಅವರು ಸಂಗ್ರಹಿಸಿ, ಸಂಪಾದಿಸಿದ್ದರು.

ಮೂರನೇ ಪ್ರಕಟನೆಯಾಗಿ 1995ರಲ್ಲಿ ಟಿ.ಪಿ. ಅಶೋಕ ಅವರು 'ವೈದೇಹಿಯವರ ಕಥೆಗಳು' ಎಂಬ ವಿಮರ್ಶಾ ಗ್ರಂಥವನ್ನು ಪ್ರಕಟಿಸಿದ್ದು ಇದು ವೈದೇಹಿಯವರ ಕುರಿತು ಅಧ್ಯಯನ ಮಾಡುವವರಿಗೆ ಮತ್ತು ಕುಂದಗನ್ನಡ ಪ್ರದೇಶದ ಸಂಸ್ಕೃತಿಯ ಕುರಿತಾಗಿ ಅಧ್ಯಯನ ನಡೆಸುವವರಿಗೆ ಒಂದು ಉಪಯುಕ್ತ ಪರಾಮರ್ಶನಗ್ರಂಥವಾಗಿದೆ.

ಕನ್ನಡ ಸಂಘದ ಅಧ್ಯಕ್ಷರಾದ ಶ್ರೀ ಎ.ಎಸ್.ಎನ್. ಹೆಬ್ಬಾರರೇ ಕುಂದಾಪುರ ತಾಲೂಕು ಕನ್ನಡ ಸಾಹಿತ್ಯ ಪರಿಷತ್ತಿನ ಜವಾಬ್ದಾರಿ ನಿರ್ವಹಿಸಬೇಕಾಗಿ ಬಂದ ಕಾರಣದಿಂದ ವಿಶ್ವಂಭರ ಉಪಾಧ್ಯಾಯರು ಕನ್ನಡ ಸಂಘದ ಅಧ್ಯಕ್ಷರಾಗಿ ಆಯ್ಕೆಯಾಗಿ ಸಂಘದ ಜವಾಬ್ದಾರಿಯನ್ನು ಯಶಸ್ವಿಯಾಗಿ ನಿರ್ವಹಿಸಿದ್ದರು. 1997ರಲ್ಲಿ ಉಡುಪಿ ಜಿಲ್ಲೆಯು ಅಸ್ತಿತ್ವಕ್ಕೆ ಬಂದು ತಾಲೂಕು ಮಟ್ಟದಲ್ಲಿ ಸಾಹಿತ್ಯ ಪರಿಷತ್ತಿನ ಚಟುವಟಿಕೆಗಳು ಆರಂಭಗೊಳ್ಳುವುದಕ್ಕೆ ತೊಡಗಿತು. ಸಂಘದ ಎಲ್ಲಾ ಉದ್ದೇಶಗಳು ಇಂದು ತಾಲೂಕು ಸಾಹಿತ್ಯ ಪರಿಷತ್ತಿನ ಮೂಲಕ ನಿರ್ವಹಿಸಲ್ಪಡುವ ಕಾರಣ ಕನ್ನಡಸಂಘದ ಚಟುವಟಿಕೆಗಳು 1997 ರಿಂದ ಸ್ತಬ್ಧಗೊಂಡಿತು.

1995ರಲ್ಲಿ ಕುಂದಾಪುರ ಕನ್ನಡ ಸಂಘ ಮತ್ತು ತಾಲೂಕು ಸಾಹಿತ್ಯ ಪರಿಷತ್ತಿನ ಸಹಯೋಗದೊಂದಿಗೆ 'ಕನ್ನಡ ಸಾಹಿತ್ಯಕ್ಕೆ ಕುಂದಾಪುರ ತಾಲೂಕಿನ ಕೊಡುಗೆ' ಎಂಬ ರಾಜ್ಯೋತ್ಸವ ವಿಚಾರಸಂಕಿರಣವು ಜರಗಿದ್ದು, ಆ ವಿಚಾರ ಸಂಕಿರಣದಲ್ಲಿ ಉಪಸ್ಥಿತರಿದ್ದ ಮೈಸೂರಿನ ಡಾ. ಕೆ. ಅನಂತರಾಮು ಅವರು ತಮ್ಮ ಕೃತಿ 'ದಕ್ಷಿಣದ ಸಿರಿನಾಡು' ಎಂಬ ಕೃತಿಯಲ್ಲಿ ವಿಚಾರಸಂಕಿರಣದ ಸಮಗ್ರ ವಿವರವನ್ನು ನಿರೂಪಿಸಿದ್ದಾರೆ. (ಕೃತಿ ದಕ್ಷಿಣದ ಸಿರಿನಾಡು, ಅನಂತರಾಮು, ಅನಂತ ಪ್ರಕಾಶನ 414 ದೇವಾಂಬ ಅಗ್ರಹಾರ, ಮೈಸೂರು, ಮೊದಲ ಮುದ್ರಣ ಅಕ್ಟೋಬರ 1997 ಪುಟ 204) ಕುಂದಾಪುರ ಕನ್ನಡ ಸಂಘದ ಸದಸ್ಯರೆಲ್ಲರೂ ಕುಂದಾಪುರ ತಾಲೂಕು ಸಾಹಿತ್ಯ ಪರಿಷತ್ತಿನ ಸದಸ್ಯರುಗಳೇ ಆಗಿದ್ದು, ಕುಂದಾಪುರ ಕನ್ನಡ ಸಂಘದ ಉದ್ದೇಶಗಳನ್ನು ಕುಂದಾಪುರ ತಾಲೂಕು ಪರಿಷತ್ತು ಈಡೇರಿಸಿಕೊಂಡು ಬರುತ್ತಿರುವ ಪ್ರಯುಕ್ತ 'ಕಾರ್ಯಕ್ರಮಗಳಿಗಾಗಿ ಕಾರ್ಯಕ್ರಮ' ಎಂಬ ರೀತಿಯಲ್ಲಿ ಚಟುವಟಿಕೆಗಳು ನಡೆಯಬಾರದೆನ್ನುವ ಕಾರಣಕ್ಕಾಗಿ ಚಟುವಟಿಕೆಗಳು ಸ್ತಬ್ಧಗೊಂಡರೂ ಸದಸ್ಯರು ಕ್ರಿಯಾಶೀಲರಾಗಿಯೇ ಇದ್ದಾರೆ ಎನ್ನುವುದು ಸಂಘದ ಪ್ರಸ್ತುತ ಅಧ್ಯಕ್ಷರಾದ ಶ್ರೀ ಎ.ಎಸ್.ಎನ್. ಹೆಬ್ಬಾರರ ಹೇಳಿಕೆಯಾಗಿದೆ. ಆದರೆ ಅಧ್ಯಕ್ಷರಾದ ಹೆಬ್ಬಾರರ ಹೇಳಿಕೆಯು ಅವರ ವ್ಯಕ್ತಿಗತ ಅಭಿಪ್ರಾಯವಾಗಿದ್ದು ಇದನ್ನು ಒಪ್ಪಿಕೊಳ್ಳಲು ಸಾಧ್ಯವಾಗುವುದಿಲ್ಲ. ಹೊಸ ತಲೆಮಾರಿಗೆ ಸ್ಪಂದಿಸುವ ನೂತನ ಕಾರ್ಯಚಟುವಟಿಕೆಗಳನ್ನು ಹಮ್ಮಿಕೊಳ್ಳುವುದು ಹಾಗೂ ಈ ಚಟುವಟಿಕೆಗಳಿಗೆ ಅವಶ್ಯಕವಾದ ಆರ್ಥಿಕ ಸಂಪನ್ಮೂಲದ ಮೂಲವನ್ನು ಕಂಡುಕೊಳ್ಳದೇ ಹೋದಲ್ಲಿ ಕನ್ನಡ ಸಂಘವು ಕೇವಲ ಹೆಸರಿಗಷ್ಟೇ ಅಸ್ತಿತ್ವದಲ್ಲಿದ್ದ ಸಂಘವಾಗಿ ಉಳಿಯುತ್ತದೆ.

**1. ಊ) ಕರ್ನಾಟಕ ಸಂಘ, ಉಡುಪಿ:** ಉಡುಪಿ ಪೇಟೆಯ ಪರಿಸರದಲ್ಲಿ ಸಾಹಿತ್ಯ ಚಟುವಟಿಕೆಗಳನ್ನು ಹುಟ್ಟುಹಾಕಿದ ಮೊದಲ ಸಂಸ್ಥೆಯೇ 'ಕರ್ನಾಟಕ ಸಂಘ'ಎಂಬ ವೇದಿಕೆಯಾಗಿದೆ. ಈ ಸಂಸ್ಥೆಯನ್ನು 1943ರಲ್ಲಿ ಕಡೇಕಾರು ರಾಜಗೋಪಾಲಕೃಷ್ಣರಾಯರು ಹುಟ್ಟುಹಾಕಿದರು. ಹೊಸಗನ್ನಡದ ಮೊದಲ ಕವಿ ಮುದ್ದಣನ ಶಿಷ್ಯರಾದ ಕಡೇಕಾರು ರಾಜಗೋಪಾಲಕೃಷ್ಣರಾಯರು ಮುದ್ದಣನಿಂದ ಸಾಕಷ್ಟು ಪ್ರಭಾವಿತರಾಗಿದ್ದರು. "ಮುದ್ದಣ ಕವಿಯ ಸಮರ್ಥ ಮಾರ್ಗದರ್ಶನ, ಉಡುಪಿ ಕ್ಷೇತ್ರದ ಸಾಂಸ್ಕೃತಿಕ ಹಿನ್ನೆಲೆ, ಮನೆಯ ಶ್ರೀಮಂತ ಪರಿಸರ ಹಾಗೂ ನೆರವು ಇವು ರಾಜಗೋಪಾಲಕೃಷ್ಣರಾಯರ ವ್ಯಕ್ತಿತ್ವ ವಿಕಸಿಸಲು ಅವಕಾಶ ಕಲ್ಪಿಸಿಕೊಟ್ಟವು"(ಲೇ: ಕೃಷ್ಣೇ ಗೌಡ ಹಾ.ತಿ., 1978, ಪು–5) ಎಂದು ರಾಯರ ಕುರಿತು ವಿಶೇಷ ಅಧ್ಯಯನ ನಡೆಸಿದ ಹಾ.ತಿ. ಕೃಷ್ಣೇಗೌಡರು ಗುರುತಿಸಿದ್ದಾರೆ.

**ಕರ್ನಾಟಕ ಸಂಘ ಎಂಬ ಸಾಹಿತ್ಯ ಸಂಘವು ಉಡುಪಿಯಲ್ಲಿ ನಿರ್ವಹಿಸಿದ ಸಾಹಿತ್ಯ ಚಟುವಟಿಕೆಗಳು:** 1943ರಲ್ಲಿ ರಾಜಗೋಪಾಲಕೃಷ್ಣರಾಯರು ಹುಟ್ಟುಹಾಕಿದ ಕನ್ನಡ ಸಂಘದ ಧ್ಯೇಯೋದ್ದೇಶಗಳನ್ನು ಕೃಷ್ಣೇಗೌಡರು ಹೀಗೆ ಗುರುತಿಸಿದ್ದಾರೆ.... "ಕನ್ನಡ ನಾಡು–ನುಡಿಗಳ ಉತ್ಕರ್ಷ, ಏಕೀಕರಣ, ಕನ್ನಡಿಗರ ಐಕ್ಯ, ಅವರಲ್ಲಿ ಸೌಹಾರ್ದವನ್ನು ಬೆಳೆಸುವುದು, ನಾಡಹಬ್ಬ, ಸಾಹಿತ್ಯೋತ್ಸವಗಳ ಮೂಲಕ ಖ್ಯಾತಸಾಹಿತಿಗಳ ಸಹಾಯದಿಂದ ಜನಜಾಗೃತಿಯನ್ನುಂಟುಮಾಡುವುದು... ವಿವಿಧ ಗೋಷ್ಠಿಗಳನ್ನು ಏರ್ಪಡಿಸುವುದು... ಈ ಮೊದಲಾದ ಧ್ಯೇಯೋದ್ದೇಶಗಳನ್ನು ಹಮ್ಮಿಕೊಂಡು ಪ್ರಾರಂಭವಾದ ರಾಯರ ಮಾರ್ಗದರ್ಶನದಲ್ಲಿ ತನ್ನ ಗುರಿಯನ್ನು ಬಹುಮಟ್ಟಿಗೆ ಈಡೇರಿಸಿಕೊಂಡಿತು"(ಪೂರ್ವೋಕ್ತ, ಪು–5) ಎಂದು ಹಾ.ತಿ. ಕೃಷ್ಣೇಗೌಡರು ತಮ್ಮ ಅಧ್ಯಯನದಲ್ಲಿ ಗುರುತಿಸಿದ್ದಾರೆ.

**ಕರ್ನಾಟಕ ಸಂಘದ ಕಾರ್ಯಚಟುವಟಿಕೆಗಳನ್ನು ಮುಖ್ಯವಾಗಿ ಮೂರು ಹಂತಗಳಲ್ಲಿ ಅಧ್ಯಯನ ಮಾಡಬಹುದಾಗಿದೆ:**

ಅ) ರಾಜಗೋಪಾಲಕೃಷ್ಣರಾಯರ ಕಾಲಾವಧಿಯ ಮೊದಲನೇ ಕಾಲಘಟ್ಟ 1943–50

ಕರ್ನಾಟಕ ಸಂಘದ ಮೂಲಕ ರಾಜಗೋಪಾಲಕೃಷ್ಣರಾಯರು ನಡೆಸಿದ ಕಾರ್ಯಚಟುವಟಿಕೆಗಳಲ್ಲಿ ಭಾಗವಹಿಸಿದ್ದ ಬೈಕಾಡಿ ವೆಂಕಟಕೃಷ್ಣರಾಯರು ಸಂಘವು ನಿರ್ವಹಿಸಿದ ಕಾರ್ಯಕ್ರಮಗಳ ಸ್ವರೂಪ ಹಾಗೂ ಸಂಘದ ನಿರ್ವಾಹಕರಾದ ರಾಜಗೋಪಾಲಕೃಷ್ಣರಾಯರ ಶಿಸ್ತನ್ನು ಹೀಗೆ ವಿವರಿಸಿದ್ದಾರೆ. "ಉಡುಪಿಯ ಕರ್ನಾಟಕ ಸಂಘ ರಾಯರ ಕನ್ನಡ ಚಟುವಟಿಕೆಯ ಇನ್ನೊಂದು ಕೇಂದ್ರ... ರಾಯರ ಶಿಸ್ತುಬದ್ಧವಾದ ಕಾರ್ಯಕ್ರಮಗಳ ಏರ್ಪಾಟು, ಕಾರ್ಯದಕ್ಷತೆ ಇವನ್ನೆಲ್ಲಾ ಪ್ರತ್ಯಕ್ಷ ಕಂಡವನು ಅವರ ದಕ್ಷತೆಗೆ ತಲೆಬಾಗಿದ್ದೆ. ನಾಗಸ್ವರವಾದನ, ಕಾವ್ಯವಾಚನ, ಉಪನ್ಯಾಸ, ಸಂಗೀತ–ಹೀಗೆ ಹತ್ತಾರು ಕಾರ್ಯಕ್ರಮಗಳನ್ನು ಒಂದೇ ವೇದಿಕೆಯಲ್ಲಿ ಗೊತ್ತಾದ ಸಮಯದಲ್ಲೇ ಆರಂಭಿಸಿ, ಮುಗಿಸುವ ಅವರ ಕಾರ್ಯಪಟುತ್ವಕ್ಕೆ ಯಾರೂ ತಲೆಬಾಗಬೇಕು"(ಸಂ: ಹೆರಂಜೆ ಕೃಷ್ಣ ಭಟ್ ಪ್ರೊ., 1998, ಪು–263–264) ಎಂಬ ಹೇಳಿಕೆಯಲ್ಲಿ ಅವರ ಕಾರ್ಯಕ್ರಮಸಂಯೋಜನೆ ಹಾಗೂ ಕಾರ್ಯಕ್ರಮಸ್ವರೂಪದ ವಿವರಗಳು ತಿಳಿದುಬರುತ್ತದೆ. ಅವರು ಸಂಘದಲ್ಲಿ ನಿರ್ವಹಿಸಿದ ಜವಾಬ್ದಾರಿಯನ್ನು ಅವರ ನಿಧನವಾರ್ತೆಯನ್ನು ಪ್ರಕಟಿಸಿದ 'ನವಯುಗ' ಪತ್ರಿಕೆಯು ಗುರುತಿಸಿತ್ತು ಎನ್ನುವುದನ್ನು ಇಲ್ಲಿ

ಉಲ್ಲೇಖಿಸಬೇಕಾದ ವಿಚಾರವಾಗಿದೆ. (24ನೇ ಸೆಪ್ಟೆಂಬರ್ 1953ರ ನವಯುಗ ಪತ್ರಿಕೆಯಲ್ಲಿ ನಿಧನ ಸುದ್ದಿಯು ವರದಿಯಾಗಿ ಪ್ರಕಟಗೊಂಡಿತು)

ಆ) **1950 ರಿಂದ 1962ರ ತನಕ ಕರ್ನಾಟಕ ಸಂಘದ 2ನೇ ಕಾಲಘಟ್ಟದ ಸಾಹಿತ್ಯಚಟುವಟಿಕೆಗಳು:** 1950ರ ಲಾಗಾಯ್ತಿನಿಂದ ಆಗ ತರುಣರಾಗಿದ್ದ ಕು.ಶಿ.ಹರಿದಾಸ ಭಟ್ಟರು ಸಂಘದ ಕಾರ್ಯದರ್ಶಿಯಾಗಿ ರಾಜಗೋಪಾಲಕೃಷ್ಣರಾಯರ ನಿರ್ದೇಶನದಲ್ಲಿ ದುಡಿದವರು. 1953ರಲ್ಲಿ ರಾಯರ ನಿಧಾನನಂತರ ಸಂಘದ ಚಟುವಟಿಕೆಗಳಲ್ಲಿ ಮುಖ್ಯವೆನಿಸಿದ ನಾಡಹಬ್ಬವನ್ನು ಮುಂದುವರಿಸಿಕೊಂಡು ಹೋಗುವುದು ಅತ್ಯಂತ ತ್ರಾಸದಾಯಕವಾಯಿತು. ಚಟುವಟಿಕೆಗಾಗಿ ಚಟುವಟಿಕೆ ಎಂಬ ರೀತಿಯಲ್ಲಿ 1956ರ ತನಕ ಸಂಘದ ಚಟುವಟಿಕೆಗಳನ್ನು ನಿರ್ವಹಿಸಿ, 1961ರಲ್ಲಿ ಚಟುವಟಿಕೆಗೆ ಕು.ಶಿ.ಯವರು ಪೂರ್ಣವಿರಾಮವನ್ನು ಹಾಕಿದರು. ಆದರೆ 1962ರಲ್ಲಿ ಕಾರಂತರ ಹುಟ್ಟುಹಬ್ಬಕ್ಕೆ ಇದೇ ವೇದಿಕೆಯನ್ನು (ಕನ್ನಡ ಸಂಘವನ್ನು) ಬಳಸಿಕೊಂಡು, ಮುಂದೆ ತಾವು ಕರ್ತವ್ಯ ನಿರ್ವಹಿಸುತ್ತಿದ್ದ ಕಾಲೇಜಿನಲ್ಲಿಯೇ ಕನ್ನಡ ಸಾಹಿತ್ಯ ಚಟುವಟಿಕೆಗಳಿಗೆ ಮುಂದಾದರು. ಸಂಘವು ನಿಷ್ಕ್ರಿಯಗೊಳ್ಳುವುದರಿಂದ ಉಡುಪಿಯ ಕನ್ನಡಾಸಕ್ತರ ಪಾಲಿಗೆ ಬಹುದೊಡ್ಡ ನಷ್ಟ ಎಂದು ತಿಳಿದ ವಿಜಯನಾಥ ಶೆಣೈಯವರು ಸಂಘದ ಜವಾಬ್ದಾರಿಯನ್ನು ಹರಿದಾಸಭಟ್ಟರಿಂದ ಸ್ವ-ಇಚ್ಛೆಯಿಂದ ಪಡೆದುಕೊಂಡರು. (ಕೃತಿ: ನೆನಪಿನ ಶಿಲ್ಪಗಳು)

ಇ) **ವಿಜಯನಾಥ ಶೆಣೈಯವರು ನೇತೃತ್ವ ವಹಿಸಿದ 1963 ರಿಂದ 1979ರ ಅವಧಿಯಲ್ಲಿ ನಡೆದ ಕರ್ನಾಟಕ ಸಂಘದ ಚಟುವಟಿಕೆಗಳು:**

ವಿಜಯನಾಥ ಶೆಣೈಯವರು ಗುರುಗಳಾದ ಪ್ರೊ. ಕು.ಶಿ. ಹರಿದಾಸ ಭಟ್ಟರಿಂದ ಜವಾಬ್ದಾರಿಯನ್ನು ಕೇಳಿ ಪಡೆದುಕೊಂಡು, ಹರಿದಾಸ ಭಟ್ಟರಿಗೂ ಹಾಗೂ ತಮಗೂ ಸ್ನೇಹಿತರಾಗಿದ್ದ ಸಾಹಿತ್ಯವಿಚಾರಗಳಲ್ಲಿ ಆಸಕ್ತರಾದ ಬನ್ನಂಜೆ ಗೋವಿಂದಾಚಾರ್ಯರ ಸಹಿತ, ನಾರಾಯಣ ಬಲ್ಲಾಳ, ನಾರಾಯಣ ಜೋಗಿತ್ತಾಯ ಹಾಗೂ ಪಿ. ರಂಗನಾಥ ಶೆಣೈ ಇವರುಗಳನ್ನು ಸದಸ್ಯರನ್ನಾಗಿ ಆಯ್ಕೆ ಮಾಡಿಕೊಂಡು ಸಂಘದ ಚಟುವಟಿಕೆಗಳಿಗೆ ಮುಂದಾದರು. ಅವರು ನಿರ್ವಹಿಸಲೇಬೇಕಾದ ಪರಂಪರೆಯ ಚಟುವಟಿಕೆಯಾದ ನಾಡಹಬ್ಬಕ್ಕೆ ಬೇಕಾದ ಭೌತಿಕ ಸಿದ್ಧತೆಗಳೊಂದಿಗೆ ಸಂಪನ್ಮೂಲವ್ಯಕ್ತಿಗಳನ್ನು ಆಹ್ವಾನಿಸಿ, ಕಾರ್ಯಕ್ರಮವನ್ನು ಏರ್ಪಡಿಸಿದ್ದರು. ಆದರೆ ಕಾರ್ಯಕ್ರಮಕ್ಕೆ ಸಭಾಸದರಾಗಿ ಹಾಜರಾದ ಸಹೃದಯರ ಸಂಖ್ಯೆ ಗೌಣವಾಗಿತ್ತು. ಇದರಿಂದ ನಿರಾಶೆಗೊಳ್ಳದ ವಿಜಯನಾಥ ಶೆಣೈಯವರು ಇದಕ್ಕೆ ಕಾರಣ **'ಏಕಮುಖ ಉಪನ್ಯಾಸದಲ್ಲಿ ಉಡುಪಿಯ ಸಹೃದಯರಿಗೆ ಒಲವಿಲ್ಲ'** ಎನ್ನುವುದನ್ನು ಕಂಡುಕೊಂಡರು.

**ಕರ್ನಾಟಕ ಸಂಘದ ಮೂಲಕ ಏರ್ಪಡಿಸಿದ ಮುಂದಿನ ಕಾರ್ಯಕ್ರಮಗಳು:**

ಅ) **ವಂಶವೃಕ್ಷ ಕಾದಂಬರಿಯ ವಿಚಾರಗೋಷ್ಠಿ:** ಉಡುಪಿಯ ಆಸುಪಾಸಿನ ಹೊಸ ಪೀಳಿಗೆಯ ಎರಡನೇ ತಲೆಮಾರಿಗೆ ಕನ್ನಡ ಸಾಹಿತ್ಯ ಉಪನ್ಯಾಸದಲ್ಲಿ ಆಸಕ್ತಿ ಇಲ್ಲದಿರುವುದನ್ನು ಕಂಡುಕೊಂಡ ಶೆಣೈಯವರು 1967ರಲ್ಲಿ ವಂಶವೃಕ್ಷ ಕಾದಂಬರಿಯ ಕುರಿತು ವಿಚಾರಸಂಕಿರಣಕ್ಕೆ ಯೋಜನೆ ರೂಪಿಸಿ, ಮುಕುಂದ ನಿವಾಸವನ್ನು ವಿಚಾರಸಂಕಿರಣದ ಸ್ಥಳವೆಂದು ನಿಗದಿಗೊಳಿಸಿದರು. ಈ ಕಾರ್ಯಕ್ರಮವು ಸಂಪೂರ್ಣವಾಗಿ ಯಶಸ್ಸನ್ನು ಕಂಡಿತು. ಈ ಯಶಸ್ಸಿನ ಕಾರಣದಿಂದಾಗಿ ವಿಜಯನಾಥ ಶೆಣೈಯವರನ್ನು ಉಡುಪಿಯ ಸಾಹಿತ್ಯಾಭಿಮಾನಿಗಳು ಗುರುತಿಸುವಂತಾಯಿತು.

ಆ) **1968ರಲ್ಲಿ ಕನಕಪ್ರಭಾ ಕೃತಿ ಬಿಡುಗಡೆ ಹಾಗೂ ಕವಿಗೋಷ್ಠಿ:** 1967ರ ವಿಚಾರಸಂಕಿರಣವು ಯಶಸ್ಸುಕಂಡ ಹಿನ್ನೆಲೆಯಲ್ಲಿ ವಿಜಯನಾಥ ಶೆಣ್ಯೈಯವರು ಕರ್ನಾಟಕ ಸಂಘ ಎಂಬ ಸಾಹಿತ್ಯ ವೇದಿಕೆಯ ಮೂಲಕ ಇನ್ನೊಂದು ಕಾರ್ಯಕ್ರಮಕ್ಕೆ ಮುಂದಾದರು. ಅದುವೇ 1965ರಲ್ಲಿ ಸಂಗೀತ ಸಭಾ ವೇದಿಕೆಯ ಮೂಲಕ ಏರ್ಪಡಿಸಿದ ಕನಕದಾಸ ಚತುರ್ಥ ಶತಮಾನೋತ್ಸವದಲ್ಲಿ ಹಮ್ಮಿಕೊಂಡ ಕವಿಗೋಷ್ಠಿಯಲ್ಲಿ ಓದಿದ ಕವನಗಳನ್ನು ಆಯಾ ಕವಿಗಳ ಒಪ್ಪಿಗೆಯ ಮೇರೆಗೆ ಅದನ್ನು ಕನಕಪ್ರಭಾ ಎಂಬ ಹೆಸರಿನಲ್ಲಿ ಸಂಪಾದಿಸಿ, ಮುದ್ರಣಗೊಳಿಸಿ, 1968 ಸೆಪ್ಟೆಂಬರ್ 17ರಂದು ಆ ಕೃತಿಯನ್ನು ಬಿಡುಗಡೆಗೊಳಿಸಿದರು.

ಇ) **ಅಡಿಗರ 50ರ ಜನ್ಮವರ್ಷದ ಆಚರಣೆ:** 1968ನೇ ನವೆಂಬರ್ 2ನೇ ವಾರ ಅತ್ಯಂತಸಂಭ್ರಮದಿಂದ ಅಡಿಗರ ಜನ್ಮದಿನಾಚರಣೆಯನ್ನು ಮೂರು ದಿವಸಗಳ 12 ಗೋಷ್ಠಿಗಳೊಂದಿಗೆ ಜರುಗಿಸಲಾಯಿತು. ಈ ಕಾರ್ಯಕ್ರಮದಲ್ಲಿ ಉಪಸ್ಥಿತರಿರಲು ಮುಂಬೈಯಲ್ಲಿದ್ದ ಆಂಗ್ಲಕವಿ ನಿಸ್ಸಿಂ ಎಜಿಕಲ್ ಅವರನ್ನಲ್ಲದೇ ಕರ್ನಾಟಕದ ಹಿರಿಯ ಕವಿ ವಿಮರ್ಶಕರನ್ನು ಆಹ್ವಾನಿಸಿದರು ಅಡಿಗರ ಕೃತಿಗಳನ್ನು ಕುರಿತಂತೆ ಸಂವಾದ, ಗೋಷ್ಠಿ, ಚರ್ಚೆ ಉಪನ್ಯಾಸಗಳೆಲ್ಲವನ್ನೂ ಅಚ್ಚುಕಟ್ಟಾಗಿ ನಡೆಸಿದರು. ಈ ಕಾರ್ಯಕ್ರಮವು ಯಶಸ್ವಿಗೊಂಡ ಬಗೆಗೆ ವರದಿಯು ಉಡುಪಿಯ ಆಗಿನ ಮಾಸಿಕ ಪತ್ರಿಕೆ 'ಭವ್ಯವಾಣಿ'ಯಲ್ಲಿ ಪ್ರಕಟಗೊಂಡಿತು.(ಭವ್ಯವಾಣಿ ಪುಟ ಸಂಖ್ಯೆ: 4 ರಿಂದ 7, ಸಂಪುಟ:13, ಸಂಚಿಕೆ: 11, 1968)

**ಕಳೆಗುಂದಿದ ಕರ್ನಾಟಕ ಸಂಘ:** ಕರ್ನಾಟಕ ಸಂಘದ ಮೂಲಕ ವಿಜಯನಾಥ ಶೆಣ್ಯೈಯವರು ನಿರ್ವಹಿಸಿದ ಎಲ್ಲ ಸಾಹಿತ್ಯಕ, ಸಾಂಸ್ಕೃತಿಕ ಚಟುವಟಿಕೆಗಳು ಯಶಸ್ಸು ಸಾಧಿಸಿರುವುದನ್ನು ಕೇಳಿ ತಿಳಿದ ಪೇಜಾವರ ಮಠದ ಸ್ವಾಮೀಜಿವರಾದ ಶ್ರೀ ಶ್ರೀ ವಿಶ್ವೇಶತೀರ್ಥ ಶ್ರೀಪಾದರು 1968ರ ತಮ್ಮ ಪರ್ಯಾಯಾವಧಿಯ ಸಾಂಸ್ಕೃತಿಕ ಚಟುವಟಿಕೆಯ ನಿರ್ವಹಣೆಯ ಪೂರ್ಣ ಜವಾಬ್ದಾರಿಯನ್ನು ವಿಜಯನಾಥ ಶೆಣ್ಯೈಯವರಿಗೆ ವರ್ಗಾಯಿಸಿದರು. ಪರ್ಯಾಯದ ಸಂದರ್ಭದಲ್ಲಿ ಶೆಣ್ಯೈಯವರು ಧಾರ್ಮಿಕ ಚಟುವಟಿಕೆಗಳ ಜೊತೆಗೆ ಮೇಳೈಸಿದ ಸಾಂಸ್ಕೃತಿಕ ಕಾರ್ಯಕ್ರಮಗಳು ಯಶಸ್ಸನ್ನು ಕಂಡ ಹಿನ್ನೆಲೆಯಲ್ಲಿ ಮುಂದಿನ ಎರಡು ಪರ್ಯಾಯಗಳಲ್ಲೂ ಸಾಂಸ್ಕೃತಿಕ ಜವಾಬ್ದಾರಿಯ ನಿರ್ವಹಣೆಗಾಗಿ ವಿಜಯನಾಥ ಶೆಣ್ಯೈಯವರೇ ಜವಾಬ್ದಾರಿ ವಹಿಸಿಕೊಳ್ಳುವಂತೆ ಆ ಮಠಗಳ ಸ್ವಾಮೀಜಿಯವರು ವಿಶ್ವೇಶತೀರ್ಥ ಶ್ರೀಪಾದರ ಮೂಲಕ ಒತ್ತಡ ಹೇರಿದರು. ಈ ಕಾರಣದಿಂದ ಮುಂದಿನ ಸರದಿಯ ಪರ್ಯಾಯ ಚಟುವಟಿಕೆಗಳ ಜವಾಬ್ದಾರಿಯನ್ನು ಶೆಣ್ಯೈಯವರು ಒಪ್ಪಿಕೊಳ್ಳಬೇಕಾಯಿತು. ಹೀಗೆ ನಿರಂತರ ಕಾರ್ಯಚಟುವಟಿಕೆಗಳಿಂದಾಗಿ ಕರ್ನಾಟಕ ಸಂಘದ ಕಾರ್ಯಚಟುವಟಿಕೆಗಳಿಗೆ ವಿಜಯನಾಥ ಶೆಣ್ಯೈಯವರಿಗೆ ಅವಕಾಶಗಳೇ ಸಿಗದಿರುವ ಸಂದರ್ಭ ಬಂದೊದಗಿತು. ಇದೇ ಹೊತ್ತಿಗೆ ತಮ್ಮ ವಿಶೇಷ ಹವ್ಯಾಸವಾದ 'ಹಸ್ತಶಿಲ್ಪ'ದ ಚಟುವಟಿಕೆಯಲ್ಲಿ ತೊಡಗಿಕೊಂಡ ಕಾರಣ ತಮ್ಮ  ವಾಸಸ್ಥಾನವನ್ನು ಮಣಿಪಾಲಕ್ಕೆ ವರ್ಗಾಯಿಸಿಕೊಂಡರು. ಹಿತೈಷಿಯೂ ಸ್ನೇಹಿತರೂ ಆದ ಪರ್ಕಳ ರಂಗನಾಥ ಶೆಣ್ಯೈಯವರ ಅಕಾಲನಿಧನಾನಂತರ ಶೆಣ್ಯೈಯವರ ಇನ್ನಿತರ ಸ್ನೇಹಿತರು ಒಂದೊಂದು ಉದ್ದೇಶಕ್ಕಾಗಿ ಉಡುಪಿಗೆ ವಿದಾಯ ಹೇಳಿದ ಪರಿಣಾಮವಾಗಿ ಶೆಣ್ಯೈಯವರಿಗೆ ಪುನರಪಿ ಕರ್ನಾಟಕ ಸಂಘವನ್ನು ಒಗ್ಗೂಡಿಸುವುದು ಕಷ್ಟಸಾಧ್ಯವಾಗಿ, ಕರ್ನಾಟಕ ಸಂಘದ ಚಟುವಟಿಕೆಗಳು ನಿಂತುಹೋಯಿತು. ಕರ್ನಾಟಕ ಸಂಘವು ಸತ್ತ್ವಯುತವಾದ ಚಟುವಟಿಕೆಗಳನ್ನು ಹಮ್ಮಿಕೊಂಡ ಪರಿಣಾಮವಾಗಿ ಉಡುಪಿಯಲ್ಲಿ ಗಂಭೀರ ಸಾಹಿತ್ಯಚಿಂತಕರುಳ್ಳ ರಂಗಭೂಮಿ, ರಥಬೀದಿ

ಗೆಳೆಯರು, ರಾಗಧನ, ಸುಹಾಸಂ ಮುಂತಾದ ಸಾಹಿತ್ಯ-ಸಾಂಸ್ಕೃತಿಕ ಸಂಘಟನೆಗಳು ಒಂದೊಂದಾಗಿ ಅಸ್ತಿತ್ವಕ್ಕೆ ಬಂದವು. ಬದಲಾದ ಕಾಲಘಟ್ಟಕ್ಕನುಸರಿಸಿ ಸಹೃದಯರ ಅಭಿರುಚಿಗೆ ತಕ್ಕಂತೆ ಸಂಘದ ಕಾರ್ಯದರ್ಶಿಯಾಗಿದ್ದ ವಿಜಯನಾಥ ಶೆಣೈಯವರು ಹೊಸ ಹೊಸ ಯೋಜನೆಗಳೊಂದಿಗೆ ವಿವಿಧ ಸಂಘಟನೆಗಳನ್ನು ಮತ್ತು ಕಾರ್ಯಚಟುವಟಿಕೆಗಳನ್ನು ನಿರ್ವಹಿಸಿದ ಕಾರಣದಿಂದಾಗಿ ಉಡುಪಿ ಕರ್ನಾಟಕ ಸಂಘವು ನವೀನ ಹೆಸರುಗಳ ಸಂಘಗಳೊಂದಿಗೆ ಇಂದಿಗೂ ಅಸ್ತಿತ್ವದಲ್ಲಿ ಉಳಿದುಕೊಂಡಿದೆ. ಆಧುನಿಕ ಉಡುಪಿಯಲ್ಲಿ ಅಸ್ತಿತ್ವದಲ್ಲಿರುವ ವಿವಿಧ ಸಂಘಟನೆಗಳ ಸದಸ್ಯರು ಈ ಹಿಂದೆ ಕರ್ನಾಟಕ ಸಂಘದ ಚಟುವಟಿಕೆಗಳಲ್ಲಿ ಪಾಲ್ಗೊಂಡವರಾಗಿರುತ್ತಾರೆ ಎನ್ನುವುದನ್ನು ಇಲ್ಲಿ ದಾಖಲಿಸಬಹುದಾಗಿದೆ.

**1. ಖ) ಕನ್ನಡ ಸಾಹಿತ್ಯ ಸಂಘ, ಹಿರಿಯಡ್ಕ:** 1977–78ರಲ್ಲಿ ಪೊಳಲಿ ಬಾಲಕೃಷ್ಣ ಶೆಟ್ಟಿಯವರು ಮಣಿಪಾಲ ಸಿಂಡಿಕೇಟ್ ಬ್ಯಾಂಕ್ ಕೇಂದ್ರ ಕಛೇರಿಯಿಂದ ಹಿರಿಯಡ್ಕ ಸಿಂಡಿಕೇಟ್ ಬ್ಯಾಂಕಿಗೆ ವರ್ಗಾವಣೆಗೊಂಡು ಹಿರಿಯಡ್ಕದಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದ ಸಂದರ್ಭದಲ್ಲಿ ಹಿರಿಯಡ್ಕದಲ್ಲೂ ಒಂದು 'ಕನ್ನಡ ಸಂಘ'ವನ್ನು ಹುಟ್ಟುಹಾಕಿದರು. ಈ ಸಂಘದ ಸ್ಥಾಪಕಾಧ್ಯಕ್ಷರಾಗಿ ಪಳ್ಳಿ ಶ್ರೀನಿವಾಸ ಹೆಗ್ಡೆಯವರು, ಕಾರ್ಯದರ್ಶಿಯಾಗಿ ಬೊಮ್ಮರಬೆಟ್ಟು ಹಿರಿಯ ಪ್ರಾಥಮಿಕ ಶಾಲೆಯ ಮುಖ್ಯೋಪಾಧ್ಯಾಯರಾಗಿದ್ದ ಮಲ್ಪೆ ರಾಘವೇಂದ್ರರು, ಸದಸ್ಯರಾಗಿ ಹಿರಿಯಡ್ಕ ಪ್ರೌಢಶಾಲಾಧ್ಯಾಪಕರಾಗಿದ್ದ ಯಕ್ಷಗಾನಪ್ರಸಂಗಕವಿ ಸೀತಾನದಿ ಗಣಪಯ್ಯ ಶೆಟ್ಟಿಯವರು, ಹಿರಿಯಡ್ಕ ಪದವಿಪೂರ್ವ ಕಾಲೇಜಿನ ಕನ್ನಡ ಉಪನ್ಯಾಸಕರಾದ ಎಂ.ವಿ. ನಾಗರಾಜರಾಯರು, ಸ್ಥಳೀಯರಾಗಿದ್ದ ಕೊಂಬಾವಿ ಸೀತಾರಾಮ ಭಟ್, ಶೇಖರ ದೇವಾಡಿಗ, ಪಾಂಡುರಂಗ ನಾಯಕ್ ಇವರುಗಳು ಸೇರ್ಪಡೆಗೊಂಡಿದ್ದರು. ವಿದ್ಯಾರ್ಥಿಗಳಲ್ಲಿ ಸಾಹಿತ್ಯಾಸಕ್ತಿಯನ್ನು ಉತ್ತೇಜಿಸುವ ಸಲುವಾಗಿ ವಿದ್ಯಾರ್ಥಿ ಪ್ರತಿನಿಧಿಯೊಬ್ಬನನ್ನು ಆಯ್ಕೆ ಮಾಡಲಾಗಿದ್ದು 1977–78ನೇ ಸಾಲಿನಲ್ಲಿ ಪಿ.ಯು.ಸಿ. ವಿದ್ಯಾರ್ಥಿಯಾಗಿದ್ದ (ಈಗ ಎಂ.ಜಿ.ಎಂ. ಕಾಲೇಜಿನ ರಾಜ್ಯಶಾಸ್ತ್ರ ಉಪನ್ಯಾಸಕರು)ಕೊಕ್ಕರ್ಣೆ ಸುರೇಂದ್ರನಾಥ ಶೆಟ್ಟಿಯವರು ಆಯ್ಕೆಗೊಂಡಿದ್ದರು.

**ಚಟುವಟಿಕೆಯ ಸ್ವರೂಪ:** ಪ್ರತಿ ತಿಂಗಳ ಪ್ರಥಮ ಶನಿವಾರ ಅಪರಾಹ್ನ ಗಂಟೆ 2.30ರಿಂದ ಕನ್ನಡ ಸಂಘದ ಸಭೆಯು ಜರುಗುತ್ತಿತ್ತು. ಆ ಸಭೆಯಲ್ಲಿ ಆಮಂತ್ರಿತರಾದ ಸಂಪನ್ಮೂಲವ್ಯಕ್ತಿ ಒಬ್ಬರು ವರ್ತಮಾನ ಪತ್ರಿಕೆಯ ಒಂದು ಕಥೆ ಅಥವಾ ಆ ತಿಂಗಳಲ್ಲಿ ಪ್ರಕಟವಾದ ಕಾದಂಬರಿ-ಸಣ್ಣಕಥೆ-ಇತ್ಯಾದಿಗಳ ಕುರಿತು ಸಂವಾದದ ಮೂಲಕ ಚರ್ಚಿಸಿ ಅದರ ಆಶಯವನ್ನು ವಿವರಿಸುವ ಕಾರ್ಯಕ್ರಮವನ್ನು ಹಮ್ಮಿಕೊಳ್ಳುತ್ತಿದ್ದರು. ಹೀಗೆ ಸಾಹಿತ್ಯಪಠ್ಯವೊಂದನ್ನು ಚರ್ಚಿಸುವ ಮೂಲಕ ಕನ್ನಡ-ಕೃತಿಯೊಂದನ್ನು ಓದಿ ಅರ್ಥೈಸುವ ಬಗೆಯನ್ನು ಕಂಡುಕೊಳ್ಳುತ್ತಾ, ಪರಿಸರದ ಸಹೃದಯರಲ್ಲಿ ಸಾಹಿತ್ಯಾಸಕ್ತಿಯನ್ನು ಉತ್ತೇಜಿಸುವುದೇ ಸಂಘದ ಒಟ್ಟು ಉದ್ದೇಶವಾಗಿತ್ತು.

**ಸಂಪನ್ಮೂಲ ವ್ಯಕ್ತಿಗಳಾಗಿ ಸಂಘದಿಂದ ಆಹ್ವಾನಿತರಾದ ಗಣ್ಯರ ವಿವರ:**

ಸಾಹಿತ್ಯ ಹಾಗೂ ಸಾಂಸ್ಕೃತಿಕ ಕ್ಷೇತ್ರದಲ್ಲಿ ಹೆಸರು ಮಾಡಿ ಗುರುತಿಸಿಕೊಂಡ, ಸಾಹಿತಿ-ವಿದ್ವಾಂಸರನ್ನೂ ಯಕ್ಷಗಾನ ಕ್ಷೇತ್ರದಲ್ಲಿ ಗುರುತಿಸಿಕೊಂಡ ಹಿರಿಯ ಕಲಾವಿದರನ್ನೂ ಸಂಘದ ವತಿಯಿಂದ ಆಹ್ವಾನಿಸಿ, ಉಪನ್ಯಾಸ ಕಾರ್ಯಕ್ರಮಗಳನ್ನು ಹಮ್ಮಿಕೊಳ್ಳಲಾಗುತ್ತಿತ್ತು. ಸಾಹಿತ್ಯ ಮತ್ತು ಸಂಶೋಧನಕ್ಷೇತ್ರದಲ್ಲಿ ಸಾಧನೆ ಮಾಡಿದವರನ್ನು ಸನ್ಮಾನಿಸುವುದು ಅವರ ಕಾರ್ಯಚಟುವಟಿಕೆಗಳ ಮುಖ್ಯ ಅಂಶವಾಗಿತ್ತು.

ಪೊಳಲಿ ಬಾಲಕೃಷ್ಣ ಶೆಟ್ಟಿಯವರು ಹಿರಿಯಡ್ಕದಿಂದ ವರ್ಗಾವಣೆಗೊಂಡ ಅನಂತರ ಬ್ಯಾಂಕಿನ ವಿಶೇಷ ಜವಾಬ್ದಾರಿಯೊಂದಿಗೆ ಮಣಿಪಾಲ ಸಾಹಿತ್ಯ ಸಂಘದ ಜವಾಬ್ದಾರಿಯನ್ನು ನಿರ್ವಹಿಸುತ್ತಾ ಹಿರಿಯಡ್ಕ ಕನ್ನಡ ಸಂಘದ ಜವಾಬ್ದಾರಿಯನ್ನು ನಿರ್ವಹಿಸುವುದು ಅವರಿಗೆ ಕಷ್ಟಸಾಧ್ಯವಾಯಿತು. ಸಭಾಕಾರ್ಯಕ್ರಮದ ಸಂಪೂರ್ಣ ಹೊಣೆ ವಹಿಸುತ್ತಿದ್ದ ಎಂ. ವಿ. ನಾಗರಾಜರಾಯರು ಹಿರಿಯಡ್ಕದಿಂದ ವರ್ಗಾವಣೆಗೊಂಡು ತಮ್ಮ ಸ್ವಂತ (ತುಮಕೂರು) ಜಿಲ್ಲೆಗೆ ಹೋದುದರಿಂದ ಕನ್ನಡ ಸಂಘವು ಅನಾಥವಾಯಿತೆಂದೇ ಹೇಳಬಹುದು. ಈ ಕಾರಣದಿಂದಾಗಿ ಬಾಲಕೃಷ್ಣ ಶೆಟ್ಟಿಯವರ ಅನುಪಸ್ಥಿತಿಯಲ್ಲಿ ಸಂಘದ ಕಾರ್ಯಕ್ರಮಗಳನ್ನು ಮುನ್ನಡೆಸಿಕೊಂಡು ಹೋಗುವಲ್ಲಿ ಸಮರ್ಥ ವ್ಯಕ್ತಿಗಳಿಲ್ಲದೆ 'ಕನ್ನಡ ಸಂಘ' ಎಂಬ ವೇದಿಕೆಯೇ ತನ್ನ ಅಸ್ತಿತ್ವವನ್ನು ಕಳೆದುಕೊಂಡಿತು. ಆದರೆ ಸ್ಥಾಪನೆಯ ಮೂರನೇ ವರ್ಷದಲ್ಲಿ ಪೊಳಲಿ ಬಾಲಕೃಷ್ಣ ಶೆಟ್ಟಿಯವರೇ ಸಂಪಾದಿಸಿ ಪ್ರಕಟಿಸಿದ 'ಬೆಳಕು' ಎಂಬ ಸ್ಮರಣಸಂಚಿಕೆಯೊಂದೇ ಕನ್ನಡ ಸಂಘದ ಅಸ್ತಿತ್ವವನ್ನು ಸಾಬೀತುಗೊಳಿಸಲು ಇರುವ ಏಕೈಕ ಆಧಾರವಾಗಿದೆ.

ಕನ್ನಡ ಸಂಘದೊಂದಿಗೆ ಗುರುತಿಸಿಕೊಂಡ ಯಕ್ಷಗಾನ ವಿದ್ವಾಂಸ, ಪ್ರಸಂಗಕರ್ತ ಸೀತಾನದಿ ಗಣಪಯ್ಯ ಶೆಟ್ಟಿಯವರು ತಮ್ಮ ದೇಹಾರೋಗ್ಯ ಇರುವಲ್ಲಿಯ ತನಕವೂ (ವರ್ಷಂಪ್ರತಿ) ತಾಳಮದ್ದಳೆ ಕೂಟವನ್ನು ಹಿರಿಯಡ್ಕ ದೇವಸ್ಥಾನದಲ್ಲಿ ಏರ್ಪಡಿಸುತ್ತ ಪರಿಸರದ ಸಹೃದಯರಿಗೆ ಹಿಂದಿನ ಕನ್ನಡ ಸಂಘದ ಸವಿನೆನಪು ಎತ್ತಿಹಿಡಿಯಬಯಸಿದರು. ಅವರ ನಿಧನಾನಂತರ ಕನ್ನಡ ಸಂಘವು ಚಟುವಟಿಕೆಯಿಂದ ಸಂಪೂರ್ಣ ಮುಕ್ತವಾಯಿತು. ಏಕಮುಖ ಭಾಷಣ/ಉಪನ್ಯಾಸ ಮಾದರಿಯ ಚಟುವಟಿಕೆಗಳಲ್ಲಿ ಜನರು ಆಸಕ್ತಿ ಕಳೆದುಕೊಂಡ ಕಾರಣ ಹೊಸ ಸಂಘಟಕರು ಹೊಸ ಪ್ರಯತ್ನದೊಂದಿಗೆ ಸಂಘವನ್ನು ಮುನ್ನಡೆಸದಿರುವುದರಿಂದ ಸಂಘವು ಸಾಹಿತ್ಯಾಭಿಮಾನಿಗಳಿಂದ ದೂರವಾಯಿತು.

**1. ಋ) ಸಾಹಿತ್ಯ ಸಂಘ, ಕಾರ್ಕಳ:**

ಸುದೀರ್ಘ 35 ವರ್ಷ ಶ್ರೀ ಭುವನೇಂದ್ರ ಕಾಲೇಜಿನ ಕನ್ನಡ ಪ್ರಾಧ್ಯಾಪಕರಾಗಿ ಅನುಭವವನ್ನು ಹೊಂದಿದ ಎಂ. ರಾಮಚಂದ್ರರು ಅಧ್ಯಾಪನದ ಸಂದರ್ಭದಲ್ಲಿಯೇ ಕಾಲೇಜಿನ 'ಸಾಹಿತ್ಯ ಸಂಘ'ದ ವತಿಯಿಂದ ಅನೇಕ ವೈಶಿಷ್ಟ್ಯಪೂರ್ಣ ಸಾಹಿತ್ಯ ಕಾರ್ಯಕ್ರಮಗಳನ್ನು ಸಂಘಟಿಸಿದ್ದರು. 1997ರಲ್ಲಿ ಸೇವೆಯಿಂದ ನಿವೃತ್ತಿಗೊಂಡ ಎಂ. ರಾಮಚಂದ್ರರು 'ಸಾಹಿತ್ಯ ಸಂಘ' ಎಂಬ ಸಂಸ್ಥೆಯೊಂದನ್ನು ಕಾರ್ಕಳದಲ್ಲಿಯೇ ಹುಟ್ಟುಹಾಕಿದರು. ಕೇವಲ ಕಾಲೇಜಿನ ಸಾಹಿತ್ಯ ಸಮಾರಂಭಗಳನ್ನು ನಿರ್ವಹಿಸಿಕೊಂಡು ಬಂದ ಅನುಭವವಲ್ಲದೆ, ಮಣಿಪಾಲ ಅಕಾಡೆಮಿಯ ಸಮಾರಂಭಗಳು, ಧರ್ಮಸ್ಥಳದಲ್ಲಿ ನಡೆಯುವ ಸಾಹಿತ್ಯ ಸಭೆ-ಸಮಾರಂಭಗಳನ್ನು ಯಶಸ್ವಿಯಾಗಿ ನಿರ್ವಹಿಸಿದ ಅನುಭವವುಳ್ಳ ರಾಮಚಂದ್ರರು, ಸಾಹಿತ್ಯ ಚಟುವಟಿಕೆಗಳ ನಿರ್ವಹಣೆಯನ್ನೇ ಪ್ರಧಾನ ಉದ್ದೇಶವಾಗಿರಿಸಿಕೊಂಡು ಈ ಸಂಸ್ಥೆಯನ್ನು ಸ್ಥಾಪಿಸಿದರು.

ಮೂವತ್ತೈದು ವರ್ಷ ಸುದೀರ್ಘಕಾಲ ಕಾರ್ಕಳದಲ್ಲಿಯೇ ನೆಲೆನಿಂತು ವೃತ್ತಿ ಬದುಕನ್ನು ಮತ್ತು ಖಾಸಗಿ ಬದುಕನ್ನು ಪರಸ್ಪರ ಸಮನ್ವಯಿಸಿಕೊಂಡು ಬಂದ ರಾಮಚಂದ್ರರಿಗೆ ಇಲ್ಲಿಯ ಶಿಷ್ಯರೇ ಸಂಪತ್ತಾದರೆ, ಅವರ ವಿದ್ವತ್ತನ್ನು ಗೌರವಿಸುವ ಗಣ್ಯಸಹೃದಯರೇ ಹೆಚ್ಚಿನ ಅಭಿಮಾನಿಗಳಾಗಿದ್ದರು. ತಮ್ಮೀ ಸಂಪರ್ಕದ ಬಾಂಧವ್ಯವನ್ನು ಕನ್ನಡ ಸಂಘಕ್ಕೆ ಬೆಸೆಯುವ ಮೂಲಕ ತಮ್ಮ ಪ್ರವೃತ್ತಿ ಮತ್ತು ಹವ್ಯಾಸಕ್ಕೆ ಸ್ಪಷ್ಟವಾದ ನೆಲೆಕಂಡುಕೊಳ್ಳುವ ಉದ್ದೇಶದಿಂದ ಈ ಸಂಘವನ್ನು ಸ್ಥಾಪಿಸಿದರು. ಈ

ಸಂಘವನ್ನು ದಿನಾಂಕ 11ನೇ ಅಗಸ್ಟ್ 1997 ರಂದು ಸಾಹಿತ್ಯ ಪರಿಚಾರಿಕೆಯಲ್ಲಿಯೇ ಬದುಕನ್ನು ಸವೆಯಿಸಿದ ಸಾಹಿತಿ, ಪ್ರೊ. ಕು. ಶಿ. ಹರಿದಾಸ ಭಟ್ಟರು ಉದ್ಘಾಟಿಸಿದರು.

ಸಂಘದ ಉದ್ದೇಶವನ್ನು ಸಂಕ್ಷಿಪ್ತವಾಗಿ ಉಲ್ಲೇಖಿಸಬಹುದಾದಲ್ಲಿ "ಪ್ರಾರಂಭದಲ್ಲಿ ಸೀಮಿತ ಸಾಹಿತ್ಯದ ವಿಷಯಗಳಿಗೆ ಸಂಬಂಧಿಸಿದ ಉಪನ್ಯಾಸಗಳೇ ಸಂಘದಲ್ಲಿ ಹೆಚ್ಚಾಗಿದ್ದವು. ದಿನಗಳೆದಂತೆ ಸಾಹಿತ್ಯದ ವಿಶಾಲ ಅರ್ಥವ್ಯಾಪ್ತಿಗನುಸಾರವಾಗಿ ವೈವಿಧ್ಯಪೂರ್ಣ ಕಾರ್ಯಕ್ರಮಗಳನ್ನು ಸಂಘ ನಡೆಸುತ್ತಾ ಬಂದಿದೆ. ಸಮೃದ್ಧವಾದ ಸಾಹಿತ್ಯಕ ವಿಚಾರಗಳ ಜೊತೆಗೆ ಸಾಮಾಜಿಕ, ಕೌಟುಂಬಿಕ, ಧಾರ್ಮಿಕ, ಸಾಂಸ್ಕೃತಿಕ, ಮನೋವೈಜ್ಞಾನಿಕ ಪರಿಸರ ಸಂಬಂಧಿತ ಹಾಗೂ ರಾಷ್ಟ್ರಜೀವನ ವಿಷಯಕವಾದ ಹಲವಾರು ಕಾರ್ಯಕ್ರಮಗಳನ್ನು ಸಂಯೋಜಿಸಿ ಭಿನ್ನಭಿನ್ನ ಅಭಿರುಚಿಯ ಜನರೆಲ್ಲ ಒಂದೇ ಕಡೆ ಸೇರುವಂತೆ ಮಾಡಿ ಅವರನ್ನು ಸಂತೃಪ್ತಿಗೊಳಿಸುವಲ್ಲಿ ಯಶಸ್ವಿಯಾಗಿದೆ"(ಸಂ: ಮೋಹನ್ ಆಳ್ವ, 2013, ಪು-571) ಎಂದು ಸಾಹಿತ್ಯ ಸಂಘದ ವ್ಯಾಪ್ತಿಯು ವಿಶಾಲವಾದ ಬಗೆಯನ್ನು ಮುನಿರಾಜ ಅವರು ಗುರುತಿಸಿದ್ದಾರೆ.

**ಸಂಪನ್ಮೂಲ ವ್ಯಕ್ತಿಗಳಾಗಿ ಆಗಮಿಸಿ, ಉಪನ್ಯಾಸ ನೀಡಿದ ಗಣ್ಯರು:** ಕಾಲೇಜಿನ ಸಾಹಿತ್ಯ ಸಂಘದ ಸಂಚಾಲಕರಾಗಿ ವಿವಿಧ ಸಾಹಿತ್ಯಶಿಬಿರ, ಗೋಷ್ಠಿ, ಚರ್ಚೆ-ಸಂವಾದಗಳನ್ನು ತಮ್ಮದೇ ಸೂತ್ರ, ನೀತಿಗಳನ್ನನುಸರಿಸಿ, ಸಂಘಟಿಸಿ ಅಪಾರ ಅನುಭವವನ್ನು ಪಡೆದ ಎಂ. ರಾಮಚಂದ್ರರಿಗೆ ಯಾವ ಕಾರ್ಯಕ್ರಮಗಳಿಗೆ ಯಾವ ಸಂಪನ್ಮೂಲ ವ್ಯಕ್ತಿಗಳು ಸೂಕ್ತ? ಎನ್ನುವ ಪ್ರಶ್ನೆಗೆ ಸ್ಪಷ್ಟ ನಿಲುವು ಹೊಂದಿದವರಾಗಿದ್ದು ಕಾರ್ಯಕ್ರಮಗಳನ್ನು ಯಶಸ್ವಿಯಾಗಿ ಮುನ್ನಡೆಸುವ ಸಾಮರ್ಥ್ಯ ಅವರಿಗೆ ಸಿದ್ಧಿಸಿದೆ. ಇವರ ವೈವಿಧ್ಯಮಯವಾದ ಸಾಹಿತ್ಯ ಕಮ್ಮಟಗಳಿಗೆ ರಾಜ್ಯದ ಹಿರಿ-ಕಿರಿಯ ಗಣ್ಯಸಾಹಿತಿಗಳು ಆಗಮಿಸಿ, ತಮ್ಮ ಅಪಾರ ವಿದ್ವತ್ತನ್ನು ಕಾರ್ಕಳದ ಸಹೃದಯ ಸಜ್ಜನರಿಗೆ ಸಮರ್ಪಿಸಿ, ತೆರಳಿದ್ದಾರೆ. ಇಂದು ನಮ್ಮೊಂದಿಗಿಲ್ಲದ ಹಿರಿಯರಾದ ಕೈಯಾರರು, ಪ್ರೊ. ಜಿ.ಎಸ್. ಶಿವರುದ್ರಪ್ಪ, ಡಾ. ಎಸ್.ಎಂ. ವೃಷಭೇಂದ್ರ ಸ್ವಾಮಿ, ಪ್ರೊ. ಸಾ.ಶಿ. ಮರುಳಯ್ಯ, ಡಾ.ಎಂ.ಎಂ. ಕಲಬುರ್ಗಿ, ಪ್ರೊ. ಜಿ.ಟಿ. ನಾರಾಯಣ ರಾವ್, ಮುಂತಾದ ವಿದ್ವಾಂಸರು ಕಾರ್ಕಳ ಸಾಹಿತ್ಯ ಸಂಘದ ವೇದಿಕೆಯನ್ನು ಬಳಸಿಕೊಂಡಿದ್ದಾರೆ. ಇಂದು ನಮ್ಮೊಂದಿಗಿರುವ ಹಿರಿಯ ವಿದ್ವಾಂಸರಾದ ಡಾ. ಚೆನ್ನವೀರ ಕಣವಿ, ಡಾ. ಗಿರಡ್ಡಿ ಗೋವಿಂದರಾಜ, ತಾಳ್ತಜೆ ವಸಂತ ಕುಮಾರ್, ಪುರುಷೋತ್ತಮ ಬಿಳಿಮಲೆ, ಡಾ. ಚಂದ್ರಶೇಖರ ಕಂಬಾರ, ಡಾ. ಬಸವರಾಜ ನೆಲ್ಲಿಸರ, ಪ್ರೊ.ಎಸ್.ಎಲ್. ಭೈರಪ್ಪ, ಜಯಂತ ಕಾಯ್ಕಿಣಿ, ಅಮೃತ ಸೋಮೇಶ್ವರ, ಡಾ. ಪಾದೇಕಲ್ಲು ವಿಷ್ಣು ಭಟ್ಟ, ಡಾ. ನಾ. ದಾ. ಶೆಟ್ಟಿ, ಕವಿ ಡುಂಡಿರಾಜ್, ಡಾ. ನಾ. ಮೊಗಸಾಲೆ, ಡಾ. ಎಚ್.ಎಸ್. ವೆಂಕಟೇಶ ಮೂರ್ತಿ, ಹಿರೇಮಗಳೂರು ಕಣ್ಣನ್, ಡಾ. ಪ್ರಭುಶಂಕರ, ಪ್ರೊ. ಎಚ್.ಎಸ್. ರಘವೇಂದ್ರ ರಾವ್, ಡಾ. ರಮಾನಂದ ಬನಾರಿ, ಸಂಧ್ಯಾ ಪೈ ಈಗಾಗಲೇ ವಿವಿಧ ಕಾರ್ಯಕ್ರಮಗಳನ್ನು ಸಂಘದ ವತಿಯಿಂದ ನಡೆಸಿಕೊಟ್ಟಿರುತ್ತಾರೆ.

**ಕನ್ನಡ ಕೃತಿ ಲೋಕಾರ್ಪಣೆ:** ಸಂಘದ ಸದಸ್ಯರ ಶಿಸ್ತು, ಕಾರ್ಯಕ್ರಮದ ಅಚ್ಚುಕಟ್ಟು, ಸಂಘಟಕರ ವ್ಯವಸ್ಥೆ ಇವೆಲ್ಲವನ್ನೂ ಈಗಾಗಲೇ ಗುರುತಿಸಿದ ನಾಡಿನ ವಿವಿಧ ಸಂಘಟನೆಗಳು, ವಿದ್ವಾಂಸರು, ಈ ಸಂಘಟನೆಯೊಂದಿಗೆ ಸೇರಿಕೊಂಡು ವಿವಿಧ ಕಾರ್ಯಕ್ರಮಗಳನ್ನು ಸಂಘಟಿಸಿದ್ದಾರೆ. ಕನ್ನಡ ಸಂಘದ ಸಹಕಾರದೊಂದಿಗೆ ಕಾರ್ಯಕ್ರಮಗಳನ್ನು ಸಂಘಟಿಸಿದ ಸಂಸ್ಥೆಗಳ ಹೆಸರು ಈ ಕೆಳಗಿನಂತಿವೆ:

ಅ) ಕೇಂದ್ರ ಹಾಗೂ ರಾಜ್ಯ ಸಾಹಿತ್ಯ ಅಕಾಡೆಮಿಗಳು. ಆ) ಉಡುಪಿಯ ರಾಷ್ಟ್ರಕವಿ ಗೋವಿಂದ ಪೈ ಸಂಶೋಧನ ಕೇಂದ್ರ. ಇ) ಮಂಗಳೂರಿನ ಎಸ್.ವಿ. ಪಿ. ಸಂಸ್ಮರಣಾ ಸಮಿತಿ. ಈ) ಬೆಂಗಳೂರಿನ ವೀ.ಸೀ. ಸಂಪದ. ಉ) ಕನ್ನಡ ಮತ್ತು ಸಂಸ್ಕೃತಿ ಇಲಾಖೆ, ಬೆಂಗಳೂರು.

ಜಿಲ್ಲೆಯ ರಾಜ್ಯದ ಅನೇಕ ಹಿರಿ–ಕಿರಿಯ ಲೇಖಕರ ಕೃತಿಗಳು ಕನ್ನಡ ಸಂಘದ ವೇದಿಕೆಯಲ್ಲಿ ಲೋಕಾರ್ಪಣೆಗೊಂಡು ಸಹೃದಯ ಲೋಕಕ್ಕೆ ಸೇರಿವೆ. ಇದರಲ್ಲಿ ಹೆಸರಿಸಬಹುದಾದ ಪ್ರಮುಖ ಕೃತಿ ಹಾಗೂ ಕೃತಿಕಾರರ ವಿವರಗಳು ಹೀಗಿವೆ:
ಕ) ಶ್ರೀಮತಿ ಪ್ರೇಮಾ ಭಟ್ ಅವರ ಕಥಾ ಸಂಕಲನ– ಖ) ಉದಯ ಕುಮಾರ್ ಹಬ್ಬು ಅವರ ವಿಮರ್ಶಗ್ರಂಥ. ಗ) ಶ್ರೀ ವ್ಯಾಸರಾಯ ಬಲ್ಲಾಳರ ಬದುಕು, ಬರಹ (ವ್ಯಾಸಪಥ) ಘ) ಶ್ರೀ ಪೂರ್ಣಚಂದ್ರ ತೇಜಸ್ವಿಯವರ–ಮಾಯಾಲೋಕ (ಕಿರು ಕಾದಂಬರಿ) ಙ) ಅರ್ಚನಾ ಭಟ್‌ರವರ ಕವನಸಂಕಲನ– ಎಲೆ ಚಿಗುರು. ಚ) ವೀ.ಸೀ.ಯವರ ಪ್ರವಾಸ ಕಥನ ಪಂಪಾಯಾತ್ರೆಯ ಇಂಗ್ಲಿಷ್ ಅನುವಾದ An Excursion to the Hampi ಹಾಗೂ ಛ) ಮುನಿರಾಜ ರೆಂಜಾಳ ಅವರ –ಸಾಗರ ತೀರದ ಸ್ವರ್ಗ ಕೇರಳ ಎಂಬಿವುಗಳನ್ನು ಉಲ್ಲೇಖಿಸಬಹುದಾಗಿದೆ.

ಎಂ. ರಾಮಚಂದ್ರರ ಸಾಹಿತ್ಯಾಸಕ್ತಿ ಹಾಗೂ ಬದ್ಧತೆಯಿಂದಾಗಿ ಕನ್ನಡ ಸಂಘದ ಕಾರ್ಯಚಟುವಟಿಕೆಗಳು ಯಶಸ್ವಿಯಾಗಿ ಮುನ್ನಡೆದುಕೊಂಡು ಬರುತ್ತಿವೆ. ಸಾಹಿತ್ಯ ಚಟುವಟಿಕೆಗಳಲ್ಲಿ ಒಂದು ರೀತಿಯ ವಿಶಿಷ್ಟ ಸುಖಾನುಭವವನ್ನು ಹೊಂದುವ ಎಂ. ರಾಮಚಂದ್ರರ ಈ ಸಂಘಟನೆ ಗಟ್ಟಿಯಾಗಿ ಬೇರೂರಿ ಮುನ್ನಡೆದಲ್ಲಿ ಕನ್ನಡ ಸಹೃದಯಲೋಕವು ಇದರ ಲಾಭ ಪಡೆಯುತ್ತದೆ. "ಕನ್ನಡ ನಾಡಿನಲ್ಲಿ ಉಡುಪಿ ಜಿಲ್ಲೆಯಲ್ಲಿ ಇಂತಹ ಸಂಘ–ಸಂಸ್ಥೆಗಳು ಕನ್ನಡ ಸಾಹಿತ್ಯ ಚಟುವಟಿಕೆಗಳನ್ನು ನಿರ್ವಹಿಸಿವೆ. ಕನ್ನಡಪ್ರಜ್ಞೆಯ ಜಾಗೃತಿವಿಷಯವಾಗಿ ನಮ್ಮ ನಾಡಿನ ಒಳಹೊರಗಿನ ಕನ್ನಡ ಸಂಘಗಳು ವಹಿಸುತ್ತಾ ಬಂದ ಪಾತ್ರ ಮಹತ್ವಪೂರ್ಣವಾದುದು, ಅಲ್ಲಲ್ಲಿ ದ್ವೀಪಗಳಂತೆ ಅಸ್ತಿತ್ವಕ್ಕೆ ಬಂದ ಇವು ಇಂದು ಸಾಂಸ್ಕೃತಿಕ ದ್ವೀಪಗಳಂತೆ ಬೆಳಗುತ್ತಲಿವೆ. ಇವುಗಳ ಸಾಲಿನಲ್ಲೂ ಹೆಸರಿಸಬೇಕಾದ ಮುಖ್ಯ ಸಂಸ್ಥೆ ಕಾರ್ಕಳದ ಸಾಹಿತ್ಯ ಸಂಘ"(ಪೂರ್ವೋಕ್ತ, ಪು–573) ಎಂದಿದ್ದಾರೆ ಡಾ.ಎಂ.ಎಂ. ಕಲಬುರ್ಗಿ.

ಕನ್ನಡ ಸಂಘದ ಮುಂದಿನ ಭವಿಷ್ಯದ ಕುರಿತು ಎಂ. ರಾಮಚಂದ್ರರು ಸ್ಪಷ್ಟವಾದ ಕಾರ್ಯಸೂತ್ರಗಳನ್ನು ರಚಿಸಿ, ಎಲ್ಲ ಚಟುವಟಿಕೆಗಳ ಸಂದರ್ಭದಲ್ಲಿ ಕೆಲವು ನಿರ್ದಿಷ್ಟ ಜವಾಬ್ದಾರಿಗಳನ್ನು ಸಮರ್ಪಕವ್ಯಕ್ತಿಗಳಿಗೆ ವಹಿಸುವ ಉದಾರತೆಯನ್ನು ತೋರಿದಲ್ಲಿ ಸಂಘವು ನಿರಂತರವಾಗಿ ಮತ್ತು ನಿರಾತಂಕವಾಗಿ ತನ್ನ ಚಟುವಟಿಕೆಗಳನ್ನು ಮುಂದುವರಿಸುವ ಸಾಧ್ಯತೆಗಳಿವೆ. ಯಾವ ಕಾರ್ಯಯೋಜನೆಗಳನ್ನೂ ನಿರೂಪಿಸದೇ ಹೋದಲ್ಲಿ ಜಿಲ್ಲೆಯ ಇತರ ಕನ್ನಡ ಸಂಘಗಳು ಹಿಡಿದ ದಾರಿಯನ್ನೇ ಕಾರ್ಕಳ ಸಾಹಿತ್ಯಸಂಘವೂ ಅನುಸರಿಸಿದಲ್ಲಿ ಆಶ್ಚರ್ಯವಿಲ್ಲ.

1. ಎ) **ಕರ್ನಾಟಕ ಸಂಘ, ಹೆಬ್ರಿ**: 1979ರಲ್ಲಿ ಹೆಬ್ರಿಯಲ್ಲಿ ತಿಂಗಳೆ ರವೀಂದ್ರ ಹೆಗ್ಗಡೆಯವರ ನೇತೃತ್ವದಲ್ಲಿ ಅಸ್ತಿತ್ವಕ್ಕೆ ಬಂದು, ಕಾರ್ಯದರ್ಶಿಯಾಗಿ ಜವಾಬ್ದಾರಿಯನ್ನು ಸ್ವೀಕರಿಸಿದ ಅಂಬಾತನಯ ಮುದ್ರಾಡಿಯವರ ಸಮರ್ಪಣಾಮನೋಭಾವದಿಂದ ಅವಿಭಜಿತ ದಕ್ಷಿಣ ಕನ್ನಡ ಜಿಲ್ಲೆಯ ಮುಖ್ಯ ಸಾಹಿತ್ಯ ಸಂಘಟನೆಯಾಗಿ ಗುರುತಿಸಿಕೊಂಡಿತು. ಸಂಘದ ಸದಸ್ಯರಾಗಿ ಸ್ಥಳೀಯರಾದ ಭಾಸ್ಕರ ಜೋಯಿಸ್, ಬಿ.ಸಿ.ರಾವ್ ಶಿವಪುರ, ಯೋಗೀಶ್ ಭಟ್ ಸೇರ್ಪಡೆಗೊಂಡರು. ಇವರೆಲ್ಲರ ಜಂಟಿ

ಪ್ರಯತ್ನದ ಸಾಹಿತ್ಯಕ ಚಟುವಟಿಕೆಗಳಿಗೆ ಸಕಾಲದಲ್ಲಿ ಮಾರ್ಗದರ್ಶನ ನೀಡಲು ಅಂದು ಸ್ಥಳೀಯ ಸರಕಾರಿ ಪ್ರಥಮದರ್ಜೆ ಕಾಲೇಜಿನ ಕನ್ನಡ ಉಪನ್ಯಾಸಕರಾಗಿದ್ದ ಪ್ರೊ. ಪಾದೇಕಲ್ಲು ವಿಷ್ಣು ಭಟ್ಟರು ಲಭ್ಯರಾದ ಕಾರಣದಿಂದ ಸಂಘದ ಚಟುವಟಿಕೆಗಳು ಪರಿಸರದ ಸಹೃದಯರ ಮೆಚ್ಚುಗೆಗೊಳಗಾಯಿತು.

**ಸಂಘದ ವಿಶೇಷ ಸಾಹಿತ್ಯ ಚಟುವಟಿಕೆಗಳು:** ಹೆಬ್ರಿ ಪ್ರಾಥಮಿಕ ಶಾಲೆ ಮತ್ತು ಪ್ರೌಢಶಾಲೆಯಲ್ಲಿ ಹಾಗೂ ಸುತ್ತಮುತ್ತಲಿನ ಪ್ರಾಥಮಿಕ ಶಾಲೆಗಳಲ್ಲಿ ಮುಖ್ಯೋಪಾಧ್ಯಾಯರ ಸಹಕಾರದೊಂದಿಗೆ ಸಾಹಿತ್ಯ ಗೋಷ್ಠಿ, ಕವಿತಾಗೋಷ್ಠಿ, ಚಿಂತನಶಿಬಿರ ಹಾಗೂ ಸಾಂಸ್ಕೃತಿಕ ಕಾರ್ಯಕ್ರಮವಾಗಿ ಯಕ್ಷಗಾನಗೊಂಬೆಯಾಟ, ಹರಿಕಥೆ ಇತ್ಯಾದಿ ಮನೋರಂಜನಾ ಕಾರ್ಯಕ್ರಮಗಳನ್ನು ಯಶಸ್ವಿಯಾಗಿ ಸಂಯೋಜಿಸಿಕೊಂಡು ಬಂದರು. 1990ರ ದಶಕದಲ್ಲಿ ಸಾಹಿತ್ಯ ಸಂಘದ ಸದಸ್ಯರಾಗಿದ್ದ ವಸಂತ ಭಾರದ್ವಾಜರು ಹೆಬ್ರಿಯಲ್ಲಿ ಸಾಹಿತ್ಯ ಸಂಘದ ವತಿಯಿಂದ 'ಅಷ್ಟಾವಧಾನ' ಎಂಬ ಕಾರ್ಯಕ್ರಮವನ್ನು ನಡೆಸಿಕೊಡುವ ಮೂಲಕ ಹೆಬ್ರಿಯಂತಹ ಗ್ರಾಮೀಣ ಪ್ರದೇಶದ ನಾಗರಿಕರಿಗೆ ಅದೊಂದು ವಿಶಿಷ್ಟ ಸಾಹಿತ್ಯ-ಸಾಂಸ್ಕೃತಿಕ ಕಾರ್ಯಕ್ರಮದ ಪರಿಚಯ ಮಾಡಿಕೊಟ್ಟರು ಮತ್ತು ಸ್ಥಳೀಯ ಸಹೃದಯರಿಂದ ಗುರುತಿಸಿಕೊಂಡರು. ಕರ್ನಾಟಕ ಸಂಘದ ವತಿಯಿಂದ ರಾಜ್ಯೋತ್ಸವ ಕಾರ್ಯಕ್ರಮವನ್ನು ಸ್ಥಳೀಯ ಶಾಲೆಗಳ ಸಹಕಾರದೊಂದಿಗೆ ಸಂಪನ್ಮೂಲವ್ಯಕ್ತಿಗಳ ಉಪಸ್ಥಿತಿಯಲ್ಲಿ ಆಚರಿಸುತ್ತಾ ಬಂದಿತು. ಗ್ರಂಥಪ್ರಕಟಣೆಯಂತಹ ಜವಾಬ್ದಾರಿಯನ್ನು ಸಂಘವು ಕೈಗೆತ್ತಿಕೊಂಡ ಪ್ರಯುಕ್ತ ಇಂತಹ ಜವಾಬ್ದಾರಿಯನ್ನು ನಿರ್ವಹಿಸುವುದಕ್ಕೆ ವಿದ್ವಾಂಸರಾದ ಪಾದೇಕಲ್ಲು ವಿಷ್ಣು ಭಟ್ಟರು ಅರ್ಹ ಎಂದು ಸಂಘವು ನಿರ್ಣಯಿಸಿದ ಪ್ರಯುಕ್ತ ಪಾದೇಕಲ್ಲು ವಿಷ್ಣುಭಟ್ಟ ಅವರು ಸಂಘದ ಕಾರ್ಯದರ್ಶಿಗಳಾಗಿ ಕರ್ತವ್ಯ ನಿರ್ವಹಿಸಲು ಮುಂದೆ ಬಂದರು.

**ಗ್ರಂಥ ಪ್ರಕಟಣೆ:** ಸಂಘವು ಒಟ್ಟು ಎಂಟು ಕೃತಿಗಳನ್ನು ಪ್ರಕಟಿಸಿದ್ದು, ಈ ಪ್ರಕಟನೆಯಲ್ಲಿ ಒಂದು ಯಕ್ಷಗಾನಪ್ರಸಂಗ ಕೃತಿಯೂ ಸೇರಿದೆ. ಅಂಬಾತನಯ ಮುದ್ರಾಡಿಯವರ 'ಪರಿತ್ಯಕ್ತ', 'ಪ್ರಜಾಪ್ರಭುತ್ವೇಶ್ವರ', 'ವಚನಶತಕ', 'ಸೌರಾಷ್ಟ್ರ ವಿಜಯ', 'ಕೋಗಿಲೆ' (ಶಿಶುಗೀತೆ ಸಂಕಲನ) ಎಂಬಿತ್ಯಾದಿ ಕೃತಿಗಳನ್ನು ಪ್ರಕಟಿಸಿದೆ. ಸಂಘವು ಅಸ್ಥಿತ್ವಕ್ಕೆ ಬಂದ ಹತ್ತನೇ ವರ್ಷದ ಸಂದರ್ಭದಲ್ಲಿ ದಶಮಾನೋತ್ಸವವನ್ನು ಜಿಲ್ಲಾ ಸಾಹಿತ್ಯ ಸಮ್ಮೇಳನದ ಸಂಭ್ರಮಕ್ಕೆ ಕಡಿಮೆ ಇಲ್ಲದಂತೆ ಅರ್ಥಪೂರ್ಣವಾಗಿ ಆಚರಿಸಿದ ಹೆಗ್ಗಳಿಕೆಯೂ ಹೆಬ್ರಿ ಕರ್ನಾಟಕ ಸಂಘದ್ದಾಗಿದೆ.

**ನಿಂತುಹೋದ ಚಟುವಟಿಕೆ:** ಸಾಹಿತ್ಯ ಸಂಘದ ಅಧ್ಯಕ್ಷರಾಗಿದ್ದ ತಿಂಗಳೆ ರವೀಂದ್ರ ಹೆಗ್ಗಡೆಯವರ ನಿಧನಾನಂತರ ಅಧ್ಯಕ್ಷ ಸ್ಥಾನವನ್ನು ಒಪ್ಪಿಕೊಳ್ಳುವುದಕ್ಕೆ ಅವರ ಸುಪುತ್ರರಾದ ತಿಂಗಳೆ ವಿಕ್ರಮಾರ್ಜುನ ಹೆಗ್ಡೆಯವರು ಒಪ್ಪಿಕೊಂಡರು. ಆದರೆ ಕಾರ್ಯದರ್ಶಿಗಳಾಗಿದ್ದ ಪ್ರೊ. ಪಾದೇಕಲ್ಲು ವಿಷ್ಣು ಭಟ್ಟ ಅವರು ಹೆಬ್ರಿಯಿಂದ ವರ್ಗಾವಣೆಗೊಂಡು ತಮ್ಮ ಜವಾಬ್ದಾರಿಯನ್ನು ಹೆಬ್ರಿಯ ಯೋಗೀಶ್ ಭಟ್ ಎಂಬವರಿಗೆ ಒಪ್ಪಿಸಿದರು. ಅದೇ ಸಮಯಕ್ಕೆ ಅಧ್ಯಕ್ಷರಾಗಿ ಸಂಘವನ್ನು ಮುನ್ನಡೆಸಬೇಕಾದ ತಿಂಗಳೆ ವಿಕ್ರಮಾರ್ಜುನ ಹೆಗ್ಗಡೆಯವರು ಒಂದು ರಾಜಕೀಯ ಪಕ್ಷದ ಕಾರ್ಯಕರ್ತ/ಪದಾಧಿಕಾರಿಯಾಗಿ ರಾಜಕೀಯ ಚಟುವಟಿಕೆಗೇ ತನ್ನ ಪೂರ್ಣ ಬಿಡುವನ್ನು ಸಮರ್ಪಿಸಿಕೊಂಡರು. ಸ್ಥಾಪಕ ಕಾರ್ಯದರ್ಶಿಗಳಾದ ವಯೋವೃದ್ಧ ಅಂಬಾತನಯ ಮುದ್ರಾಡಿಯವರನ್ನು ಉಡುಪಿ ಜಿಲ್ಲಾ ಕನ್ನಡ ಸಾಹಿತ್ಯ ಪರಿಷತ್ತು ಅವರ ಅನುಭವವನ್ನು ಜಿಲ್ಲಾ ಚಟುವಟಿಕೆಗಳಲ್ಲಿ ತೊಡಗಿಸಿಕೊಳ್ಳುತ್ತಿದ್ದಂತೆಯೇ ಹೆಬ್ರಿ ಕರ್ನಾಟಕ ಸಂಘವು ತನ್ನ ಚಟುವಟಿಕೆಗಳಿಗೆ ಅನಿರ್ದಿಷ್ಟಾವಧಿ ಬಿಡುವನ್ನು ಕಂಡುಕೊಂಡಿತು.

**1. ಎ) ಕವಿ ಮುದ್ದಣ ಮಿತ್ರಮಂಡಳಿ ನಂದಳಿಕೆ:** ಹೊಸಗನ್ನಡ ಸಾಹಿತ್ಯದ ಇತಿಹಾಸದಲ್ಲಿ 'ನಂದಳಿಕೆ' ಎಂಬ ಕಾರ್ಕಳ ತಾಲೂಕಿನ ಚಿಕ್ಕ ಹಳ್ಳಿಯೊಂದಕ್ಕೆ ಮಾನ್ಯತೆ ದೊರಕಿಸಿಕೊಟ್ಟವನು ಈ ಹಳ್ಳಿಯಲ್ಲಿ ಹುಟ್ಟಿದ ಕವಿ ಮುದ್ದಣನೆಂದೇ ಖ್ಯಾತನಾದ ಕವಿ ಲಕ್ಷ್ಮೀನಾರಾಯಣಯ್ಯ. 1957ರಲ್ಲಿ ಮುದ್ದಣನ ಜನ್ಮಸ್ಥಳವಾದ ನಂದಳಿಕೆಯಲ್ಲಿ ಆತನ ಅಭಿಮಾನದಿಂದ ಹುಟ್ಟಿದ ಸಂಸ್ಥೆಗೆ 'ಕವಿಮುದ್ದಣ ಸ್ಮಾರಕ ರೈತ ಸಂಘ' ಎಂಬ ಹೆಸರನ್ನಿತ್ತು ಮುದ್ದಣನ ಜಯಂತ್ಯುತ್ಸವದ ಆಚರಣೆಯೊಂದಿಗೆ ಹಳ್ಳಿಯ ಅಭಿವೃದ್ಧಿಯ ಕಾರ್ಯಕ್ರಮಗಳಿಗಾಗಿ ಈ ಸಂಘಟನೆಯು ಯೋಜನೆಯನ್ನು ಹಾಕಿಕೊಂಡಿತ್ತು. ಆದರೆ ಸಂಘವು ಕೆಲವೇ ವರ್ಷಗಳಲ್ಲಿ ಯಾವುದೇ ಚಟುವಟಿಕೆಗಳಿಗೆ ಮುಂದಾಗದೇ ನಿಷ್ಕ್ರಿಯಗೊಂಡಿತು.

ಕವಿ ಮುದ್ದಣ ಸ್ಮಾರಕ ರೈತ ಸಂಘವು ತನ್ನ ಅಸ್ತಿತ್ವವನ್ನು ಕಳೆದುಕೊಂಡ ಅನಂತರ 1979ರಲ್ಲಿ ಕವಿ ಮುದ್ದಣ ಸ್ಮಾರಕ ಮಿತ್ರಮಂಡಳಿ (ರಿ.) ಎಂಬ ಹೊಸ ಸಂಸ್ಥೆಯು ಅಸ್ತಿತ್ವಕ್ಕೆ ಬಂದಿತು. ಇದರ ಅಧ್ಯಕ್ಷರಾಗಿ ಯುವಕರಾದ ನಂದಳಿಕೆಯ ಬಾಲಚಂದ್ರರಾಯರು ಜವಾಬ್ದಾರಿಯನ್ನು ವಹಿಸಿಕೊಂಡರು. ನಂದಳಿಕೆ ಬಾಲಚಂದ್ರರಾಯರು ಅಧ್ಯಕ್ಷರಾಗಿ ಆಯ್ಕೆಯಾದ ಅನಂತರ ಮಿತ್ರಮಂಡಳಿಯ ಕೆಲಸವನ್ನು ತಮ್ಮ ವ್ಯಕ್ತಿಗತ ಕೆಲಸ ಎಂಬಂತೆ ನಿರ್ವಹಿಸಿದ್ದಲ್ಲದೆ ಕವಿ ಮುದ್ದಣನ ಹೆಸರನ್ನು ಶಾಶ್ವತವಾಗಿ ನೆಲೆಗೊಳಿಸುವುದಕ್ಕಾಗಿ ಹೋರಾಟವನ್ನು ಆರಂಭಿಸಿದರು. ಕಾಂತಾವರ ಕನ್ನಡ ಸಂಘದ ಪಂಚಗ್ರಾಮಗಳ ವ್ಯಾಪ್ತಿಯಲ್ಲಿ ಸೇರಿದ ಒಂದು ಗ್ರಾಮ ನಂದಳಿಕೆಯಾಗಿದ್ದು, ಇಲ್ಲಿಯ ಮಿತ್ರಮಂಡಳಿಯವರು ತಮ್ಮ ಕನಸನ್ನು ಕಾರ್ಯಗತಗೊಳಿಸಲು ಕಾಂತಾವರ ಕನ್ನಡ ಸಂಘದ ಅಧ್ಯಕ್ಷರಾದ ಡಾ। ನಾ. ಮೊಗಸಾಲೆಯವರ ಬೆಂಬಲವನ್ನು ಕೋರಿದರು. ಮಿತ್ರಮಂಡಳಿಯವರ ಯೋಜನೆಯನ್ನು ಡಾ। ನಾ. ಮೊಗಸಾಲೆಯವರು ಸಂಪೂರ್ಣ ಬೆಂಬಲಿಸಿ, ಮುದ್ದಣ ಸ್ಮಾರಕ ಭವನ ನಿರ್ಮಾಣದ ಯೋಜನೆಯು ಕಾರ್ಯರೂಪಕ್ಕೆ ಬರಲು ಬೇಕಾದ ಮಾಹಿತಿ-ಮಾರ್ಗದರ್ಶನವನ್ನು ಮಿತ್ರಮಂಡಳಿಯ ಗೌರವಾಧ್ಯಕ್ಷರಾದ ಶ್ರೀ ಬಾಲಚಂದ್ರ ರಾಯರಿಗೆ ನೀಡಿದರು. ಬಾಲಚಂದ್ರರಾಯರ ಸತತ ಪರಿಶ್ರಮದ ಫಲವಾಗಿ 1984ರಲ್ಲಿ ಅಂದಿನ ಜನತಾ ಸರಕಾರವು ಮುದ್ದಣ ಸ್ಮಾರಕಭವನಕ್ಕಾಗಿ ರೂ. 2,12,000/-ರೂಪಾಯಿಯ ಅನುದಾನವನ್ನು ನೀಡಿತು. ಕೇವಲ ಸ್ಮಾರಕಭವನದ ಅನುದಾನವನ್ನು ಪಡೆದು, ಸುಮ್ಮನುಳಿಯದೇ ನಂದಳಿಕೆಯ ಮಿತ್ರಮಂಡಳಿಯವರು ತಮ್ಮ ಮುಂದಿನ ಕಾರ್ಯಚಟುವಟಿಕೆಗಳಿಗಾಗಿ ಪ್ರತ್ಯೇಕ ನಿವೇಶನಕ್ಕಾಗಿ ಜಿಲ್ಲಾಧಿಕಾರಿಯವರಿಗೆ ಅರ್ಜಿ ಸಲ್ಲಿಸಿದರು. ಮಿತ್ರಮಂಡಳಿಯ ಅಧ್ಯಕ್ಷರಾದ ಶ್ರೀ ಬಾಲಚಂದ್ರರಾಯರ ಹೋರಾಟದ ಫಲವಾಗಿ ದಿನಾಂಕ 15.11.1982ರಂದು ದ.ಕ. ಜಿಲ್ಲಾಧಿಕಾರಿಯವರು ಮುದ್ದಣ ಸ್ಮಾರಕಕ್ಕಾಗಿ 9.82 ಎಕ್ರೆ ಸ್ಥಳವನ್ನು ನಂದಳಿಕೆಯಲ್ಲಿ ಕಾದಿರಿಸಿದರು.

**ಮುದ್ದಣಕವಿಯ ಸ್ಮಾರಕ ಭವನ; ನಂದಳಿಕೆ:** ಕರ್ನಾಟಕ ಸರಕಾರ ನೀಡಿದ 2,12,000/-ರೂಪಾಯಿ ಹಾಗೂ ಮಿತ್ರಮಂಡಳಿಯ ಪದಾಧಿಕಾರಿಗಳು ಊರ ಮತ್ತು ಪರವೂರ ದಾನಿಗಳ ಸಹಕಾರದಿಂದ ಪಡೆದ ಆರ್ಥಿಕ ಸಹಾಯದಿಂದ ಒಟ್ಟು ಮೂರು ಲಕ್ಷ ರೂ.ಗಳ ಸಂಪನ್ಮೂಲಸಂಗ್ರಹದಿಂದ ಸ್ಮಾರಕಭವನವು ಅಸ್ತಿತ್ವಕ್ಕೆ ಬಂದಿತು. 1979ರಿಂದ ಕ್ರಿ.ಶ. 2004ರವರೆಗೂ ಮಿತ್ರಮಂಡಳಿಯು ಕವಿ ಮುದ್ದಣನ ಹೆಸರಿನಲ್ಲಿ ವಿವಿಧ ಸಾಹಿತ್ಯಚಟುವಟಿಕೆಗಳನ್ನು ಯಶಸ್ವಿಯಾಗಿ ನಿರ್ವಹಿಸಿದೆ. ಮುದ್ದಣಸ್ಮಾರಕಭವನದಲ್ಲಿ ಹಮ್ಮಿಕೊಳ್ಳಲಾಗುವ ಚಟುವಟಿಕೆಗಳಲ್ಲಿ ಪಾಲ್ಗೊಳ್ಳಲು ಆಗಮಿಸುವ ಸಹೃದಯರ ಅನುಕೂಲಕ್ಕಾಗಿ

ನಂದಳಿಕೆಯ ಮಣ್ಣಿನ ರಸ್ತೆಗೆ ಸರಕಾರವು ಡಾಮರು ವ್ಯವಸ್ಥೆಯನ್ನು ಬಸ್ ಸಂಚಾರದ ವ್ಯವಸ್ಥೆಯನ್ನು ವಿದ್ಯುದ್ದೀಪದ ಸೌಕರ್ಯವನ್ನು ಒಂದೊಂದಾಗಿ ನೀಡುತ್ತಾ ಬಂದಿತು.

**ಪೂರ್ಣಕಾಲಿಕ ಗ್ರಂಥಾಲಯ:** ಮುದ್ದಣ ಸ್ಮಾರಕ ಮಿತ್ರಮಂಡಳಿಯ ವತಿಯಿಂದ ಅಸ್ತಿತ್ವಕ್ಕೆ ಬಂದ ಸ್ಮಾರಕಭವನದಲ್ಲಿ ಗ್ರಾಮದ ಜನತೆ ವಿರಾಮದ ಸಮಯದ ಸದುಪಯೋಗ ಮಾಡಿಕೊಳ್ಳುವಂತೆ ಗ್ರಂಥಾಲಯವನ್ನು ತೆರೆಯಲಾಗಿದೆ. ಅದನ್ನು ನೋಡಿಕೊಳ್ಳುವುದಕ್ಕಾಗಿ ಪೂರ್ಣಕಾಲಿಕ ನೆಲೆಯಲ್ಲಿ ಮಿತ್ರಮಂಡಳಿಯ ವತಿಯಿಂದ ಸಿಬ್ಬಂದಿಯ ವ್ಯವಸ್ಥೆಯನ್ನೂ ಮಾಡಲಾಗಿದೆ. ಸುಮಾರು ಇಪ್ಪತ್ತೈದು ವರ್ಷಗಳ ಕಾಲ ಮುದ್ದಣ ಸ್ಮಾರಕ ಮಿತ್ರಮಂಡಳಿಯು ನಂದಳಿಕೆಯಲ್ಲಿ ವಿವಿಧ ಚಟುವಟಿಕೆಗಳನ್ನು ಯಶಸ್ವಿಯಾಗಿ ನಡೆಸಿ ಕರ್ನಾಟಕದಾದ್ಯಂತ ಸುದ್ದಿಯಾಯಿತು. 2004ರಲ್ಲಿ ಈ ಮಿತ್ರಮಂಡಳಿಯ ರಜತಮಹೋತ್ಸವ ಕಾರ್ಯಕ್ರಮವು ವಿಜೃಂಭಣೆಯಿಂದ ನಡೆದು ಮಿತ್ರಮಂಡಳಿಯ ಮುಖ್ಯಸ್ಥರಾಗಿದ್ದ ಬಾಲಚಂದ್ರರಾಯರ ಸಂಪಾದಕತ್ವದಲ್ಲಿಯೇ 'ನಂದಳಿಕೆಯ ನಂದನ' ಎಂಬ ಸ್ಮರಣಸಂಪುಟವೂ ಪ್ರಕಟಗೊಂಡಿತು. ಮಿತ್ರಮಂಡಳಿಯವರು ನಂದಳಿಕೆಯಲ್ಲಿ ಹಮ್ಮಿಕೊಂಡ ವಿವಿಧ ಸಾಹಿತ್ಯಚಟುವಟಿಕೆಗಳಲ್ಲಿ ಭಾಗವಹಿಸಲು ನಾಡಿನ ಅನೇಕ ಗಣ್ಯ ಸಾಹಿತಿಗಳು ನಂದಳಿಕೆಗೆ ಆಗಮಿಸಿದ್ದಾರೆ. ಮಿತ್ರಮಂಡಳಿಯ ರಜತ ಮಹೋತ್ಸವದಲ್ಲಿ ಮುಖ್ಯ ಅತಿಥಿಯಾಗಿ ಪಾಲ್ಗೊಂಡ ಕನ್ನಡದ ಮೇರು ಸಾಹಿತಿ ಹಾಗೂ ಮೈಸೂರು ಕನ್ನಡ ಅಧ್ಯಯನ ಸಂಸ್ಥೆಯ ನಿರ್ದೇಶಕರಾದ ಡಾ। ಹಾ.ಮಾ.ನಾಯಕ ಅವರು ಅತಿಥಿಯಾಗಿ ಬಂದು ನೀಡಿದ ಅಭಿಪ್ರಾಯ ಹೀಗಿದೆ:- "ಮುದ್ದಣ ಮಿತ್ರಮಂಡಳಿಯ ಚಟುವಟಿಕೆಯನ್ನು ಕಳೆದ ಎರಡು ದಶಕಗಳಿಂದ ಕೇಳಿದ್ದೆ. ಈಗ ಈ ಚಟುವಟಿಕೆಗಳ ಫಲವನ್ನು ಕಣ್ಣಾರೆ ಕಾಣುವ ಅವಕಾಶ ದೊರೆತಿದೆ. ವಿವರಗಳನ್ನು ತಿಳಿದು ಕೆಲಸಗಳನ್ನು ಕಂಡು ತುಂಬ ಖುಷಿಯಾಯಿತು. ದೂರದೃಷ್ಟಿ, ಶ್ರಮದ ದುಡಿಮೆ, ಕಾವ್ಯಪ್ರೇಮ, ಸಮೂಹದ ಬಗ್ಗೆ ಗೌರವ-ಇದೆಲ್ಲ ಇಲ್ಲಿ ಹರಳುಗಟ್ಟಿದೆ. ಶ್ರೀ ಬಾಲಚಂದ್ರ ರಾವ್ ಮತ್ತು ಅವರ ಸ್ನೇಹಿತರು ನಾಡಿಗೇ ಒಂದು ಆದರ್ಶವನ್ನು ಕೊಟ್ಟಿದ್ದಾರೆ"(ಸಂ: ಬಾಲಚಂದ್ರ ರಾವ್., 2004, ಹಾ.ಮಾ.ನಾ. ಬೆನ್ನುಡಿ) ಎಂದು ತಮ್ಮ ಸದಭಿಪ್ರಾಯವನ್ನು ಮುಕ್ತವಾಗಿ ಪ್ರಕಟಿಸಿದ್ದರು.

**ಮುದ್ದಣ ಸ್ಮಾರಕ ಮಿತ್ರಮಂಡಳಿಯ ವರ್ತಮಾನದ ಚಟುವಟಿಕೆಗಳು:** ಮಿತ್ರಮಂಡಳಿಯ ಸಕ್ರಿಯಸದಸ್ಯರಾಗಿ ಬಾಲಚಂದ್ರರಾಯರಿಗೆ ಬೆಂಬಲ ಕೊಡುತ್ತಿದ್ದ ಸುಂದರರಾಮ ಹೆಗ್ಡೆಯವರು ದೈಹಿಕ ಅನಾರೋಗ್ಯಕ್ಕೊಳಗಾಗಿ ಮಿತ್ರಮಂಡಳಿಯ ಚಟುವಟಿಕೆಯಿಂದ ದೂರ ಸರಿಯುವಂತಾದರು. ನಾಯಕನಾಗಿ ಮಿತ್ರಮಂಡಳಿಯನ್ನು ಮುನ್ನಡೆಸಿಕೊಂಡು ಹೋಗಬೇಕಾದ ಬಾಲಚಂದ್ರರಾಯರು ತಮ್ಮ ಹುಟ್ಟೂರನ್ನು ಬಿಟ್ಟು ಮಂಗಳೂರನ್ನು ಸೇರಿಕೊಂಡರು. ಈ ಕಾರಣದಿಂದಾಗಿ ಮಿತ್ರಮಂಡಳಿಯ ಕನ್ನಡ ಸಾಹಿತ್ಯ ಚಟುವಟಿಕೆಗಳು ಸ್ಥಬ್ಧಗೊಂಡುವು.

ಯಾವುದೇ ಸಾಹಿತ್ಯ-ಸಂಘಟನೆ ಹಾಗೂ ಚಟುವಟಿಕೆಗಳಲ್ಲಿ ಮುಂಚೂಣಿಗೆ ಬರುವ ನೇತಾರನು ಸದಾ ಹಿಂದೆ ನಿಂತ ಸದಸ್ಯರನ್ನು ಮುನ್ನಡೆಗೆ ತಂದು ತರಬೇತು ನೀಡಬೇಕು. ಹೀಗೆ ತರಬೇತು ನೀಡಿದಲ್ಲಿ ಮುಂಚೂಣಿಯಲ್ಲಿದ್ದ ಮುಖಂಡ ಖಾಸಗಿ ಒಬ್ಬತೆಯಿಂದ ಚಟುವಟಿಕೆಯಿಂದ ದೂರ ಉಳಿದಾಗಲೂ ಸಂಘಟನೆಯ ಚಟುವಟಿಕೆಗಳು ಸಾಂಗವಾಗಿ ನಡೆದುಕೊಂಡು ಹೋಗುತ್ತವೆ. ಅದಿಲ್ಲವಾದರೆ ಸಂಘಟನೆಯು ಮಾತ್ರ ಉಳಿಯುತ್ತದೆ. ಚಟುವಟಿಕೆಗಳಿಲ್ಲದೆ ಸಂಘಟನೆಯು ಆ ಊರಿನ ನಿಷ್ಕ್ರಿಯತೆಗೆ ಸಾಕ್ಷಿಯಾಗುತ್ತದೆ. ಬದಲಾದ ಕಾಲಕ್ಕನುಸರಿಸಿ ತಮ್ಮ ಸಂಘಟನೆಯ ಧ್ಯೇಯೋದ್ದೇಶಗಳನ್ನು

ಪರಿಷ್ಕರಿಸಿಕೊಳ್ಳತಕ್ಕದ್ದು. ಹೀಗೆ ಪರಿಷ್ಕರಿಸಿಕೊಂಡಲ್ಲಿ ವಿವಿಧ ಬಗೆಯ ಸಾಹಿತ್ಯ ಚಟುವಟಿಕೆಗಳು ನೆರವೇರುವುದರೊಂದಿಗೆ ಸಂಘದ ಉದ್ದೇಶಗಳು ಈಡೇರುವುದಕ್ಕೆ ಅವಕಾಶಗಳಿವೆ. ಯಾವುದೇ ಕ್ರಿಯಾಶೀಲ ಸಂಘಟನೆಯು ಒಂದೇ ಬಗೆಯ ಚಟುವಟಿಕೆಗಷ್ಟೇ ಬದ್ಧವಾದಲ್ಲಿ ಆ ಸಂಘಟನೆಯು ನಿರಂತರವಾಗಿ ತನ್ನ ಸಮಕಾಲೀನ ಸಹೃದಯರ ಗಮನ ಸೆಳೆಯಲಾರದು. ಈ ಹೇಳಿಕೆಯು ಕೇವಲ ಸಾಹಿತ್ಯ ಸಂಘಟನೆಗೆ ಮಾತ್ರವಲ್ಲ ಶಾಲಾ ಕಾಲೇಜುಗಳ ಚಟುವಟಿಕೆಗಳಿಗೂ ಅನ್ವಯಿಸಬಹುದಾಗಿದೆ. ಸಂಘಟನೆಯ ಮುಂಚೂಣಿಯಲ್ಲಿದ್ದ ಬಾಲಚಂದ್ರರು ಯುವ ತಲೆಮಾರನ್ನು ಮೇಲ್ಕಂಡ ಸಂಘಟನೆಗೆ ತರಬೇತುಗೊಳಿಸದೆ ನೇಪಥ್ಯಕ್ಕೆ ಸರಿದು, 20ನೇ ಶತಮಾನದ 70–80ರ ದಶಕದ ಚಟುವಟಿಕೆಗಳು ಗತಕಾಲದ ಇತಿಹಾಸಕ್ಕೆ ಸೇರಿಹೋಗುವಂತಾಯಿತು. ಮುಂಚೂಣಿಯಲ್ಲಿದ್ದ ನಾಯಕನು ಉತ್ಸಾಹಿ ಯುವಕರನ್ನು ಮುಂಚೂಣಿಗೆ ತಾರದೇ ತಾನು ನೇಪಥ್ಯಕ್ಕೆ ಸರಿದಾಗ ಸಂಘವು ನಿಷ್ಕ್ರಿಯವಾಗುವುದು ಸಹಜವಾಗಿದೆ. ನಂದಳಿಕೆಯ ಮುದ್ದಣ ಮಿತ್ರಮಂಡಳಿಯು ಕ್ರಿಯಾಶೀಲ ಸದಸ್ಯರ ಕೊರತೆಯಿಂದಾಗಿ 21ನೇ ಶತಮಾನದಲ್ಲಿ ಹೆಸರಿಗಷ್ಟೇ ಉಳಿದುಕೊಳ್ಳುವಂತಾಯಿತು.

**1. ಐ) ಸಂಸೇವಿನಿ, ಬಸ್ರೂರು:**

ಉದಯೋನ್ಮುಖ ಬರಹಗಾರರಿಗೆ ಪ್ರೋತ್ಸಾಹ ನೀಡುವುದರೊಂದಿಗೆ ಜಾನಪದ–ಇತಿಹಾಸ–ಸಂಸ್ಕೃತಿ–ಸಾಹಿತ್ಯ ವಿಚಾರಗಳನ್ನೊಳಗೊಂಡ ವಸ್ತು–ವಿಷಯಗಳ ಕುರಿತಾಗಿ ಚರ್ಚಿಸಲು ಅಸ್ತಿತ್ವಕ್ಕೆ ಬಂದ ವಿಚಾರವೇದಿಕೆಯಾಗಿರುತ್ತದೆ. ಜಿಲ್ಲೆಯಲ್ಲಿ ವಿವಿಧ ವಿಷಯಗಳಲ್ಲಿ ಸಂಶೋಧನೆ ನಡೆಸುವ ಸಂಶೋಧಕರಿಗೆ ಬೇಕಾದ ಮೌಖಿಕ ಮಾರ್ಗದರ್ಶನ, ಅಗತ್ಯ ಗ್ರಂಥಗಳ ಎರವಲು ವ್ಯವಸ್ಥೆ ಸಂಸೇವಿನಿಯ ಕಾರ್ಯವ್ಯಾಪ್ತಿಯಲ್ಲಿ ಬರುತ್ತದೆ.

**ಸಂಸೇವಿನಿಯ ಮೂಲಕ ಪ್ರಕಟಗೊಂಡ ಪುಸ್ತಕಗಳು:**

1) ಶುಭಾ ಮರವಂತೆಯವರ ತೋಮು, ಆತ್ಮರಾಜ ಮತ್ತು ಇತರ ಕಥೆಗಳು. 2) ನಿಟಿಲಾಪುರ ಕೃಷ್ಣಮೂರ್ತಿಯವರ– ಶಿವಯೋಗ. 3) ಕನರಾಡಿ ವಾದಿರಾಜ ಭಟ್ಟ ಅವರ ಸಂಪಾದಕತ್ವದಲ್ಲಿ ಪ್ರಕಟಗೊಂಡ 'ಅಜ್ಜಿ ಸಾಕಿದ ಮಗ' ಇವು ಮುಖ್ಯವಾಗಿ 'ಸಂಸೇವಿನಿ' ಯ ಆಶ್ರಯದಲ್ಲಿ ಪ್ರಕಟಗೊಂಡ ಕೃತಿಗಳಾಗಿವೆ.

ಭಾರತಿ ಮರವಂತೆಯವರ ಸಂಪಾದಕತ್ವದಲ್ಲಿ ಅನಿಯತಕಾಲಿಕವಾಗಿ ಪ್ರಕಟಗೊಳ್ಳುವ 'ಶ್ರೀರಂಗೋಲಿ' ಪತ್ರಿಕೆಯ ಪ್ರಕಾಶನಸಂಸ್ಥೆಯೂ ಸಂಸೇವಿನಿಯೇ ಆಗಿದ್ದು, ಇಲ್ಲಿಯೂ ಪ್ರಕಾಶನಸಂಸ್ಥೆಯ ಸ್ಥಾಪಕರಾದ ಕನರಾಡಿ ವಾದಿರಾಜ ಭಟ್ಟ ಅವರ ಪರಿಶ್ರಮವಿದೆ. ಶ್ರೀರಂಗೋಲಿ ಪತ್ರಿಕೆಯ ಮೊದಲ ಸಂಚಿಕೆ ಆನೆಗುಡ್ಡೆ ವಿನಾಯಕ ದೇಗುಲದಲ್ಲಿಯೂ ಎರಡನೆಯ ಸಂಚಿಕೆ ಉಡುಪಿಯ ರಾಜಾಂಗಣದಲ್ಲಿಯೂ (ಪುತ್ತಿಗೆ ಮಠದ ಪರ್ಯಾಯ ಕಾಲದಲ್ಲಿ– 2006–08) ಮೂರನೇ ಸಂಚಿಕೆ ಶ್ರೀ ಕ್ಷೇತ್ರ ಧರ್ಮಸ್ಥಳದಲ್ಲಿಯೂ ಬಿಡುಗಡೆಗೊಂಡಿರುತ್ತದೆ.

**1. ಒ) ಕಸ್ತೂರಿ ಕನ್ನಡಕೂಟ, ಸಾಲಿಗ್ರಾಮ : 'ಕಸ್ತೂರಿ ಕನ್ನಡಕೂಟ'** ಎಂಬ ಕನ್ನಡ ಸಾಹಿತ್ಯ ಒಕ್ಕೂಟವು 1972ರಲ್ಲಿ ಸಾಲಿಗ್ರಾಮದಲ್ಲಿ ಅಸ್ತಿತ್ವಕ್ಕೆ ಬಂದ ಸಂಸ್ಥೆಯಾಗಿದೆ. ಸ್ಥಳೀಯ ಪ್ರಾಥಮಿಕ ಮತ್ತು ಪ್ರೌಢಶಾಲೆಯ, ಬ್ಯಾಂಕ್ ಹಾಗೂ ಇತರ ಸರಕಾರಿ ಮತ್ತು ಖಾಸಗಿ ಕ್ಷೇತ್ರದ ಸಂಸ್ಥೆಗಳಲ್ಲಿ ಉದ್ಯೋಗದಲ್ಲಿರುವ ಸಾಹಿತ್ಯಾಸಕ್ತರು ಈ ಕೂಟದ ಸದಸ್ಯರಾಗಿರುತ್ತಾರೆ.

ಸದಸ್ಯರೆಲ್ಲರಿಗೂ ನಿಗದಿಗೊಳಿಸಿದ ಸದಸ್ಯತನ ಶುಲ್ಕವು ಇದ್ದು ಕೂಟಕ್ಕೆ ಇದುವೇ ಕಾರ್ಯಕ್ರಮಗಳ ಖರ್ಚುಗಳಿಗೆ ಮೂಲವಾಗಿರುತ್ತದೆ.

**ಹಮ್ಮಿಕೊಳ್ಳಲಾಗುವ ಕಾರ್ಯಕ್ರಮದ ಸ್ವರೂಪ:** ವಿಶೇಷವಾಗಿ ಸಾಹಿತ್ಯ ಚಟುವಟಿಕೆಗಳಿಗೆ ಪ್ರಾಧಾನ್ಯ ನೀಡುತ್ತಾ ಬಂದಿದ್ದು ಇದರ ಜೊತೆಯಲ್ಲಿಯೇ ಸಾಂಸ್ಕೃತಿಕ ಕಾರ್ಯಕ್ರಮಗಳಿಗೂ ಅವಕಾಶ ನೀಡುತ್ತಾ ಬರಲಾಗಿದೆ. ಕನ್ನಡ ಕೂಟದ ವಾರ್ಷಿಕೋತ್ಸವ ಸಂದರ್ಭದಂದು ಸಾಂಸ್ಕೃತಿಕ ಕಾರ್ಯಕ್ರಮಗಳಿಗೆ ಪ್ರಾಧಾನ್ಯವನ್ನು ನೀಡಲಾಗುತ್ತಿತ್ತು. ಕಸ್ತೂರಿ ಕನ್ನಡಕೂಟದ ಕಾರ್ಯಚಟುವಟಿಕೆಗಳ ವಿವರ ಈ ಕೆಳಗಿನಂತಿರುತ್ತದೆ.

1) ಕನ್ನಡ ಕವಿಗಳ ಭಾವಗೀತ ಗಾಯನಸ್ಪರ್ಧೆ 2) ಕನ್ನಡ ಪ್ರಬಂಧಸ್ಪರ್ಧೆ 3) ಕನ್ನಡ ಜಾನಪದ ಗಾಯನಸ್ಪರ್ಧೆ 4) ಕನ್ನಡ ರಸಪ್ರಶ್ನೆ ಕಾರ್ಯಕ್ರಮ.

ಈ ಎಲ್ಲಾ ಸ್ಪರ್ಧೆಗಳನ್ನು ಸ್ಥಳೀಯ ಶಾಲಾಸಭಾಭವನದಲ್ಲಿ ನಡೆಸಲಾಗುತ್ತಿದ್ದು, ಕೂಟದ ಸದಸ್ಯರೇ ಸ್ಪರ್ಧೆಯ ನಿರ್ಣಾಯಕರಾಗಿರುತ್ತಾರೆ.

**ಕಸ್ತೂರಿ ಕನ್ನಡ ಕೂಟದ ಉದ್ದೇಶ:**

1) ಹದಿಹರೆಯದ ವಿದ್ಯಾರ್ಥಿಗಳಲ್ಲಿ ಕನ್ನಡ ಸಾಹಿತ್ಯದ ಕುರಿತು ಆಸಕ್ತಿಯನ್ನು ಪ್ರೇರೇಪಿಸುವುದಕ್ಕಾಗಿ ವೇದಿಕೆಯ ಮೂಲಕ ಕನ್ನಡ ಭಾಷೆ ಮತ್ತು ಸಾಹಿತ್ಯಕ್ಕೆ ಸಂಬಂಧಿಸಿದಂತೆ ವಿದ್ಯಾರ್ಥಿಗಳಿಗೆ ಸಾಕಷ್ಟು ಜ್ಞಾನವನ್ನು ನೀಡುವುದು. ಈ ಉದ್ದೇಶಕ್ಕಾಗಿ ಪ್ರಾಥಮಿಕ ಶಾಲಾ ಮತ್ತು ಪ್ರೌಢಶಾಲಾವಿದ್ಯಾರ್ಥಿಗಳಿಗಾಗಿ ವಿಶೇಷ ಪುಸ್ತಕಗಳನ್ನು ಓದುವುದಕ್ಕಾಗಿ ವ್ಯವಸ್ಥೆಗೊಳಿಸಿ, ಆ ಕೃತಿಗಳಲ್ಲಿ ಎತ್ತಿ ಹಿಡಿದ ಮೌಲ್ಯಗಳ ಕುರಿತು ವಿದ್ಯಾರ್ಥಿಗಳಿಗೆ ಅರಿವು ಮೂಡಿಸುವುದು.
2) ವಿದ್ಯಾರ್ಥಿಗಳ ಮೌಖಿಕಸಾಮರ್ಥ್ಯ, ಸ್ಮರಣಸಾಮರ್ಥ್ಯ ಮತ್ತು ಲಿಖಿತಸಾಮರ್ಥ್ಯವನ್ನು ಪರೀಕ್ಷಿಸುವುದಕ್ಕಾಗಿ ಸ್ಥಳೀಯ ಶಾಲಾವಿದ್ಯಾರ್ಥಿಗಳಿಗೆ ಕಾವ್ಯ ಕಂಠಪಾಠಸ್ಪರ್ಧೆ, ಭಾಷಣಸ್ಪರ್ಧೆ, ಪ್ರಬಂಧಸ್ಪರ್ಧೆಗಳನ್ನು ಏರ್ಪಡಿಸಿ, ಅಧಿಕ ಅಂಕಗಳಿಸಿದ ವಿದ್ಯಾರ್ಥಿಗಳಿಗೆ ಬಹುಮಾನವನ್ನು ನೀಡುವುದು. ಈ ಬಹುಮಾನ ವಿತರಣಾ ಸಮಾರಂಭಕ್ಕೆ ಜಿಲ್ಲೆಯ ಮತ್ತು ಜಿಲ್ಲೆಯ ಹೊರಗಿನಿಂದ ಗಣ್ಯ ಸಾಹಿತಿಗಳನ್ನು ಆಹ್ವಾನಿಸುವುದು.

**ಸಂಸ್ಥೆಯು ಈ ತನಕದ ನಡೆಸಿದ ಚಟುವಟಿಕೆಗಳು:** 1) ಪ್ರೌಢಶಾಲೆ ಮತ್ತು ಪದವಿಪೂರ್ವ ವಿದ್ಯಾರ್ಥಿಗಳಿಗೆ ಕ್ರಿ.ಶ. 2002ರ ತನಕ ಮೇಲೆ ಪ್ರಸ್ತಾಪಿಸಿದ ಸ್ಪರ್ಧೆಯನ್ನು ನಡೆಸುತ್ತಾ ಬಂದಿದೆ.

2) ಡಾ. ಶಿವರಾಮ ಕಾರಂತರ ಸಹಿತ ಈ ಜಿಲ್ಲೆಯೊಳಗಿನ ಮತ್ತು ಹೊರಗಿನ ಸಾಹಿತಿ ಗಣ್ಯರನ್ನು ಸಮಾರಂಭಕ್ಕೆ ಆಹ್ವಾನಿಸಿ, ಸಾರ್ವಜನಿಕವಾಗಿ ಅವರನ್ನು ಸತ್ಕರಿಸಿ ಸಮ್ಮಾನಿಸಿದೆ. ಉದಾ: ಪ್ರೊ. ಎಸ್. ಅನಂತನಾರಾಯಣ, ಕಯ್ಯಾರ ಕಿಞ್ಞಣ್ಣ ರೈ, ಬಿ.ಎಂ.ಇದಿನಬ್ಬ, ಡಾ. ಗುಂಡ್ಮಿ ಚಂದ್ರಶೇಖರ ಐತಾಳ, ಪಾ.ನ. ಮಯ್ಯ, ಪ್ರೊ. ನರಸಿಂಹಮೂರ್ತಿ, ಪ್ರೊ. ಅನಂತರಾಮು ಮೈಸೂರು, ಬೇಲೂರು ಕೃಷ್ಣಮೂರ್ತಿ, ಮುಂತಾದವರು ಕಸ್ತೂರಿ ಕನ್ನಡಕೂಟದ ಸಂಭ್ರಮಕ್ಕೆ ಸಾಕ್ಷಿಯಾಗಿ ಸಮ್ಮಾನವನ್ನು ಪಡೆದಿರುತ್ತಾರೆ.

**ಪ್ರಸ್ತುತ ಕೂಟದ ಕಾರ್ಯಚಟುವಟಿಕೆಗಳು:** ಪ್ರಸ್ತುತ ಎಂದರೆ 2002 ರಿಂದ ಕೂಟದ ಕಾರ್ಯಚಟುವಟಿಕೆಗಳು ಸಂಪೂರ್ಣ ಸ್ಥಬ್ದಗೊಂಡಿವೆ. ಹೀಗೆ ಸ್ತಬ್ದಗೊಳ್ಳಲು ಮುಖ್ಯ ಕಾರಣ:

1) ವಿದ್ಯುನ್ಮಾನ ಮಾಧ್ಯಮ ಕ್ಷೇತ್ರದ ಮುಖ್ಯ ಆಕರ ದೂರದರ್ಶನದ ವಿವಿಧ ವಾಹಿನಿಯ ಮೂಲಕ ಪ್ರಸಾರಗೊಳ್ಳುವ ಕಾರ್ಯಕ್ರಮಗಳು

2) ಆಂಗ್ಲ ಭಾಷಾ ಮಾಧ್ಯಮದ ಹಾವಳಿ

3) ಸದಸ್ಯರಲ್ಲಿಯೇ ಉದ್ಭವಿಸಿದ ವೈಚಾರಿಕ ಭಿನ್ನಾಭಿಪ್ರಾಯಗಳು

**ಈಗಿನ ಅಧ್ಯಕ್ಷರ ಕೊನೆಯ ನಿರ್ಣಯ:** ಇಂದು ಆಂಗ್ಲಭಾಷೆಯು ಪ್ರತಿಯೊಂದು ಮಗುವಿಗೂ ಅವಶ್ಯಕವೆಂದು ಮಗುವಿನ ಹೆತ್ತವರ ಅಭಿಪ್ರಾಯ. ಮಗು ಕನ್ನಡದಲ್ಲಿ ಮಾತನಾಡುವುದಕ್ಕಿಂತ ನಿರರ್ಗಳವಾಗಿ ಇಂಗ್ಲೀಷ್‌ನಲ್ಲಿ ಮಾತನಾಡಿದಲ್ಲಿ ಮಗುವಿನ ವ್ಯಕ್ತಿತ್ವ ವಿಕಸನಗೊಳ್ಳುತ್ತದೆ; ಉನ್ನತ ಶಿಕ್ಷಣಕ್ಕೆ ಸಹಕಾರಿಯಾಗುತ್ತದೆ; ತಾಂತ್ರಿಕ ಶಿಕ್ಷಣಕ್ಕೆ ಪೂರಕವಾಗುತ್ತವೆ ಎಂಬಿತ್ಯಾದಿ ಅಪಕಲ್ಪನೆಗೆ ವಿದ್ಯಾರ್ಥಿ ಹೆತ್ತವರು ಒಳಗಾಗಿರುವ ಕಾರಣ ಕನ್ನಡ ಭಾಷೆಯ ಮೂಲಕ ನಡೆಯುವ ಯಾವುದೇ ಚಟುವಟಿಕೆಗಳಿಗೆ ಪರಿಸರದ ಸಹೃದಯರು ಸಕ್ರಿಯವಾಗಿ ಸ್ಪಂದಿಸದಿರುವ ಸ್ಥಿತಿ ಉದ್ಭವಿಸಿದೆ. ಇಂತಹ ಸಂದರ್ಭದಲ್ಲಿ ಕನ್ನಡ ಚಟುವಟಿಕೆಗಳನ್ನು ಕೂಟದ ಮೂಲಕ ನಿರ್ವಹಿಸಿಕೊಂಡು ಹೋಗುವುದಕ್ಕೆ ಅಸಾಧ್ಯವಾಗಿ ಕಸ್ತೂರಿ ಕನ್ನಡ ಕೂಟವು ತನ್ನ ಚಟುವಟಿಕೆಯನ್ನು ನಿಲ್ಲಿಸಿದೆ.

**ಕಸ್ತೂರಿ ಕನ್ನಡ ಕೂಟದ ಪ್ರಕಟಣೆ:** 1980ರ ದಶಕವು ಕಸ್ತೂರಿ ಕನ್ನಡ ಕೂಟದ ವೈಭವದ ಕಾಲ. ಇದೇ ಸಮಯದಲ್ಲಿ ಕೂಟದ ವತಿಯಿಂದ **'ಮೆಲುಕು'** ಎಂಬ ಗ್ರಂಥವೊಂದನ್ನು ಪ್ರಕಟಿಸಲಾಗಿತ್ತು. 1987ರಲ್ಲಿ ಡಿ.ವಿ.ಜಿ.ಯವರ ಜನ್ಮಶತಮಾನೋತ್ಸವವನ್ನು ಅತ್ಯಂತ ಅರ್ಥವತ್ತಾಗಿ ಆಚರಿಸಿ, ಅಂದಿನ ಸಭೆಯಲ್ಲಿ ಸಂಪನ್ಮೂಲವ್ಯಕ್ತಿಗಳಾಗಿ ಉಪನ್ಯಾಸ ನೀಡಿದ ಉಪನ್ಯಾಸಕರ ಪ್ರಬಂಧಗಳನ್ನು ಸಂಕಲಿಸಿ 'ಮೆಲುಕು' ಎಂಬ ಗ್ರಂಥವನ್ನು ಪ್ರಕಟಿಸಿದ್ದಾಗಿರುತ್ತದೆ. ಈ ಗ್ರಂಥವೊಂದೇ 21ನೇ ಶತಮಾನದ ಕನ್ನಡಾಸಕ್ತ ಸಹೃದಯರಿಗೆ "ಕಸ್ತೂರಿ ಕನ್ನಡ ಕೂಟದ ಕಾರ್ಯವೈಖರಿಯನ್ನು ತಿಳಿಸುವ ಪ್ರಮಾಣಪತ್ರವಾಗಿದೆ. ಈ ಗ್ರಂಥಕ್ಕೆ ಮುನ್ನುಡಿ ಬರೆದ ಡಾ. ಶಿವರಾಮ ಕಾರಂತರು "ಕಸ್ತೂರಿ ಕನ್ನಡ ಕೂಟದವರು ದಿ। ಡಿ.ವಿ.ಜಿ.ಯವರ ಸ್ಮಾರಕ ಉಪನ್ಯಾಸಗಳನ್ನು ಏರ್ಪಡಿಸಿ ಆ ಉಪನ್ಯಾಸಗಳ ವಸ್ತು ಗಾಳಿಯಲ್ಲಿ ತೇಲಿಹೋಗದೆ ನಾಲ್ಕು ದಿನ ಉಳಿಯಲಿ; ದಿವಂಗತ ಡಿ.ವಿ.ಜಿಯವರ ಸಾಹಿತ್ಯವನ್ನು ಕುರಿತ ಅಧ್ಯಯನಕ್ಕೆ ಅನುಕೂಲವಾಗಲಿ ಎಂದು ಹೊರಡಿಸಿದ ವಿಮರ್ಶಾ ಸಂಕಲನ ಇದು"(ಸಂ: ಕಸ್ತೂರಿ ಕನ್ನಡ ಕೂಟ, 1987, ಸಂಪಾದಕೀಯ ನುಡಿ) ಎಂದು ಇದರ ವೈಶಿಷ್ಟ್ಯವನ್ನು ಕೊಂಡಾಡಿದ್ದಾರೆ.

ಸಂಘಟನೆಗೆ ಹೊಸ ಸದಸ್ಯರ ಸೇರ್ಪಡೆಯಾಗಲೀ ಸಂಘದ ಬದ್ಧತೆಯ ಕುರಿತಾಗಿಯಾಗಲೀ, ಕನ್ನಡ ಕೂಟದ ಸದಸ್ಯರು ಚಿಂತಿಸಲಿಲ್ಲ ಎನ್ನುವುದು ಕಸ್ತೂರಿ ಕನ್ನಡ ಕೂಟದ ಸದಸ್ಯರ ಮುಖ್ಯವಾದ ಮಿತಿಯಾಗಿದೆ. ತಮ್ಮ ಕಾಲದಲ್ಲಷ್ಟೇ ಚಟುವಟಿಕೆಯನ್ನು ನಿರ್ವಹಿಸುವುದಲ್ಲದೇ ಮುಂದಿನ ಕಾಲಘಟ್ಟದ ಸವಾಲುಗಳನ್ನು ನಿರ್ವಹಿಸಲು ಸಂಘವು ಹೆಜ್ಜೆ ಇಡಬೇಕಾದ

ಬಗೆ ಹೇಗೆ? ಎಂಬ ಕುರಿತಾಗಿ ಸಂಘದ ಸದಸ್ಯರು ಎಂದೂ ಚಿಂತಿಸದ ಕಾರಣ ಕಸ್ತೂರಿ ಕನ್ನಡ ಕೂಟದ ಕಾರ್ಯಕ್ರಮಗಳು ಕೇವಲ ನೆನಪಾಗಿ ಉಳಿಯುವಂತಾಯಿತು.

**1. ಓ) ಸ್ನೇಹವೃಂದ-ಗುಂಡ್ಮಿ, ಅಂಬಾಗಿಲು:** ಈ ಸಂಸ್ಥೆಯ ಸ್ಥಾಪಕಾಧ್ಯಕ್ಷರಾದ 'ಶಂಕರ' ಎಂಬುವವರು ಬೆಂಗಳೂರಿನಲ್ಲಿ ಕಲಾತ್ಮಕ ಬರವಣಿಗೆಯಲ್ಲಿ ತೊಡಗಿಕೊಂಡು ಜೀವನ ನಡೆಸುತ್ತಿದ್ದ ಸಂದರ್ಭದಲ್ಲಿ ಅಲ್ಲಿನ ಯುವಕರು ಕನ್ನಡ ರಾಜ್ಯೋತ್ಸವವನ್ನು ನಡೆಸುವ ಬಗೆಯನ್ನು ಕಂಡು ಅವರ ಚಟುವಟಿಕೆಯಿಂದ ವಿಶೇಷ ಪ್ರೇರಣೆ ಪಡೆದುಕೊಂಡರು. ಸ್ವಂತ ಉದ್ಯೋಗದ ಕನಸನ್ನು ಹೊತ್ತು ಬೆಂಗಳೂರಿನಿಂದ ಗುಂಡ್ಮಿಗೆ ಬಂದ ಶ್ರೀಯುತ ಶಂಕರ ಅವರು 1988ರಲ್ಲಿ ಸ್ನೇಹವೃಂದ ಎಂಬ ಒಕ್ಕೂಟವನ್ನು ಆರಂಭಿಸಿ, ಆ ಒಕ್ಕೂಟದ ವತಿಯಿಂದ ವರ್ಷಂಪ್ರತಿ ಕನ್ನಡ ರಾಜ್ಯೋತ್ಸವ ಕಾರ್ಯಕ್ರಮವನ್ನು ಆರಂಭಿಸುವ ಪರಿಪಾಠವನ್ನು ಆರಂಭಿಸಿದರು.

ದೇಶದ ಸ್ವಾತಂತ್ರ್ಯ ದಿನಾಚರಣೆಯನ್ನು ಎಲ್ಲಾ ಪ್ರಾಥಮಿಕ ಶಾಲೆಗಳಲ್ಲಿ ಕಡ್ಡಾಯವಾಗಿ ಆಚರಿಸಲು ಸುತ್ತೋಲೆ ಇರುವಂತೆ ಎಲ್ಲಾ ಪ್ರಾಥಮಿಕ ಶಾಲೆಗಳಲ್ಲಿಯೂ ಕಡ್ಡಾಯವಾಗಿ ಕನ್ನಡ ರಾಜ್ಯೋತ್ಸವವನ್ನು ಆಚರಿಸುವ ಮೂಲಕ ಬಾಲಕರಲ್ಲಿ ಕನ್ನಡ ಭಾಷೆಯ ಅಭಿಮಾನವನ್ನುಂಟುಮಾಡಿಸುವ ಪ್ರಯತ್ನ ನಡೆಯಬೇಕು ಎಂಬುದು ಇವರ ನಿಲುವಾಗಿತ್ತು. 1988 ರಿಂದ 1999 ರ ತನಕ ಈ ದಿನವನ್ನು (ನವೆಂಬರ್ 1) ಹಬ್ಬದ ರೀತಿಯಲ್ಲಿ ಆಚರಿಸುತ್ತಾ ಕನ್ನಡ ಭಾಷೆ-ಸಾಹಿತ್ಯದಲ್ಲಿ ವಿಶೇಷವಾಗಿ ಸಾಧನೆ ಮಾಡಿದ ವಿದ್ವಾಂಸರಿಂದ ಉಪನ್ಯಾಸ ಕಾರ್ಯಕ್ರಮಗಳನ್ನು ಏರ್ಪಡಿಸಿಕೊಂಡು ಬಂದಿದ್ದಾರೆ.

ಇವರು (ಸ್ನೇಹವೃಂದ) ಸಂಘಟಿಸುವ ಕಾರ್ಯಕ್ರಮಕ್ಕೆ ಸಂಪನ್ಮೂಲವ್ಯಕ್ತಿಗಳಾಗಿ ಜಿಲ್ಲೆಯ ವಿವಿಧ ಪದವಿಪೂರ್ವ ಮತ್ತು ಪದವಿ ಕಾಲೇಜುಗಳ ಕನ್ನಡ ಉಪನ್ಯಾಸಕರನ್ನು ಆಹ್ವಾನಿಸುತ್ತಾ ಬಂದಿದ್ದಾರೆ. ಕಾರ್ಯಕ್ರಮಕ್ಕೆ ಅವಶ್ಯಕವಾಗಿ ಬೇಕಾದ ಹಣಕಾಸಿಗಾಗಿ ಸ್ಥಳೀಯ ಸಣ್ಣ ಉದ್ದಿಮೆದಾರರು, ದೇವಾಲಯ, ಹಣಕಾಸು ಸಂಸ್ಥೆಗಳಾದ ಬ್ಯಾಂಕ್ ಮುಂತಾದ ಕ್ಷೇತ್ರದಲ್ಲಿ ದುಡಿಯುವ ಅಧಿಕಾರಿ ವರ್ಗದವರಿಂದ ಕಿಂಚಿತ್ ಆರ್ಥಿಕ ಸಹಾಯವನ್ನು ಪಡೆದು, ಕಾರ್ಯಕ್ರಮಗಳನ್ನು ಯಶಸ್ವಿಗೊಳಿಸುತ್ತಿದ್ದರು. ಸ್ಥಳೀಯ ಯಾವುದಾದರೊಂದು ಪ್ರಾಥಮಿಕಶಾಲೆಯೊಂದನ್ನು ಸಭಾಕಾರ್ಯಕ್ರಮಕ್ಕೆ ಆಯ್ಕೆ ಮಾಡಿಕೊಂಡು ಉಪನ್ಯಾಸ ಮತ್ತು ಕಿರು ಪ್ರಹಸನಗಳನ್ನು ಹಮ್ಮಿಕೊಳ್ಳುವ ಪರಂಪರೆಯನ್ನು ಹುಟ್ಟುಹಾಕಿದ್ದಾರೆ. ಇದೊಂದು ಸಂಘಟನೆ ಎನ್ನುವುದಕ್ಕಿಂತ ಏಕವ್ಯಕ್ತಿ ಪ್ರಯತ್ನ ಎಂದು ಉಲ್ಲೇಖಿಸಬಹುದಾಗಿದೆ. ಕೇವಲ ಅನುಕರಣೆ ಮಾದರಿಯಲ್ಲಿ ಅಸ್ತಿತ್ವಕ್ಕೆ ಬಂದ ಈ ಸಂಘಟನೆಯು ಕೇವಲ ಮೂರೇ ವರ್ಷದಲ್ಲಿ ಮರೆಯಾಯಿತು.

**1. ಔ) ತಿಂಗಳೆ-ದೈವದ ಮನೆಯ ವಾರ್ಷಿಕ ಸಾಹಿತ್ಯ ಸಮಾರಂಭ (1961):**

ತಿಂಗಳೆ ಎನ್ನುವುದು ಕಾರ್ಕಳ ತಾಲೂಕಿನ ಸೀತಾನದಿ ಎಂಬ ಸ್ಥಳಕ್ಕೆ ಸಮೀಪದಲ್ಲಿ ಪಶ್ಚಿಮ ಘಟ್ಟದ ಬುಡದಲ್ಲಿರುವ ಚಿಕ್ಕ ಹಳ್ಳಿ. ಆ ಹಳ್ಳಿಯ ಮನೆಯಲ್ಲಿ ವಾಸವಾಗಿದ್ದ ಕೃಷಿಕರೇ ತಿಂಗಳೆ ರವೀಂದ್ರ ಹೆಗ್ಗಡೆ ಎಂಬುವವರು. ಇವರು ವಿದ್ಯಾರ್ಥಿ ದೆಸೆಯಿಂದಲೇ ಸಾಹಿತ್ಯ ಚಟುವಟಿಕೆಗಳಲ್ಲಿ ಆಸಕ್ತಿ ಹೊಂದಿದ್ದು, ನಿಸರ್ಗಪ್ರಿಯರಾದ ಡಾ. ಶಿವರಾಮ ಕಾರಂತರನ್ನು ಪತ್ರ ಮುಖೇನ ಪರಿಚಯಿಸಿಕೊಂಡು ತಮ್ಮ ಊರಿಗೂ-ಮನೆಗೂ ಆಹ್ವಾನಿಸುತ್ತಿದ್ದರು. ರವೀಂದ್ರ ಹೆಗ್ಗಡೆಯವರ 'ಪತ್ರ'ದ

ಆಮಂತ್ರಣದಿಂದಲೇ ಡಾ. ಕಾರಂತರಿಗೆ ರವೀಂದ್ರ ಹೆಗ್ಡೆಯವರ ಪರಿಚಯವಾಗಿ ಆ ಪರಿಚಯವೇ ಮುಂದೆ ಸ್ನೇಹಕ್ಕೆ ಕಾರಣವಾಗಿ–ಮುಂದೆ ತಮ್ಮ ಬದುಕಿನುದ್ದಕ್ಕೂ ಕಾರಂತರು ತಿಂಗಳೆಯ ಸಂಪರ್ಕವನ್ನು ಉಳಿಸಿಕೊಂಡು ಬಂದಿದ್ದರು.

ತಿಂಗಳೆಯ ರವೀಂದ್ರ ಹೆಗ್ಗಡೆಯವರ ಮನೆಯಲ್ಲಿ ದೈವದ (ಕೋಟಿ ಚೆನ್ನಯ ಹಾಗೂ ಶಿವರಾಯ ದೈವಗಳು) ಕೋಲ ಬೇಸಿಗೆಯ ಕಾಲದಲ್ಲಿ ವರ್ಷಂಪ್ರತಿ ನಡೆಸುವ ಒಂದು ಆಚರಣೆಯಾಗಿದ್ದು, ಈ ದೈವದ ಧಾರ್ಮಿಕ ಆಚರಣೆಯು ಪ್ರಾರಂಭವಾಗುವುದಕ್ಕೆ ಮೊದಲು ರವೀಂದ್ರ ಹೆಗ್ಗಡೆಯವರು ವರ್ಷಂಪ್ರತಿ ಸಾಹಿತ್ಯ ಉಪನ್ಯಾಸವನ್ನು ಏರ್ಪಡಿಸಿಕೊಂಡು ಬರುವುದನ್ನು ರೂಢಿಮಾಡಿಕೊಂಡಿದ್ದರು. ಈ ಸಾಹಿತ್ಯೋಪನ್ಯಾಸ ಕಾರ್ಯಕ್ರಮಕ್ಕೆ ಡಾ. ಶಿವರಾಮ ಕಾರಂತರೂ ಉಪನ್ಯಾಸ ನೀಡುವುದಕ್ಕಾಗಿ ಆಗಮಿಸಿದ ಸಂದರ್ಭಗಳನ್ನು ಡಾ. ಕಾರಂತರೇ ಹೀಗೆ ಹೇಳಿಕೊಂಡಿದ್ದಾರೆ. "ಅಲ್ಲಿನ ನೇಮದ ದಿವಸ ಪ್ರತಿ ವರ್ಷವೂ ಎಂಬಂತೆ ಅನೇಕ ಸಾಂಸ್ಕೃತಿಕ ಕಾರ್ಯಕ್ರಮಗಳನ್ನು ನಡೆಸಿಕೊಂಡು ಬಂದಿದ್ದಾರೆ. ಕಲಾವಿದರನ್ನು ಕರೆಯಿಸಿ ಸನ್ಮಾನಿಸಿದ್ದಾರೆ. ವಾಗ್ಮಿಗಳನ್ನು ಕರೆಯಿಸಿ ಭಾಷಣ ಮಾಡಿಸಿದ್ದಾರೆ. ಅಂಥ ಅನೇಕ ಸಂದರ್ಭಗಳಲ್ಲಿ–ಅಲ್ಲಿಗೆ ನಾನು ಪ್ರತ್ಯಕ್ಷ ಭೂತವಾಗಿ ಹೋಗದಿದ್ದರೂ ಸಾಕ್ಷೀಭೂತವಾಗಿ ಹೋಗಿದ್ದೇನೆ."(ಸಂ: ಮಾಲಿನಿ ಮಲ್ಯ ಬಿ., 1995ಬಿ, ಪು–176)

ತಿಂಗಳೆ ರವೀಂದ್ರ ಹೆಗ್ಗಡೆಯವರ ಕಾಲಾನಂತರ ಅವರ ಸುಪುತ್ರರಾದ ತಿಂಗಳೆ ವಿಕ್ರಮಾರ್ಜುನ ಹೆಗ್ಗಡೆಯವರು ಈ ಧಾರ್ಮಿಕ ಕಾರ್ಯಕ್ರಮದೊಂದಿಗೆ ಸಾಹಿತ್ಯ ಮತ್ತು ಸಾಂಸ್ಕೃತಿಕ ಚಟುವಟಿಕೆಯನ್ನು ಅತ್ಯಂತ ಶ್ರದ್ಧೆಯಿಂದ ನಡೆಸಿಕೊಂಡು ಬರುತ್ತಿದ್ದಾರೆ. ದೇವಸ್ಥಾನದಲ್ಲಿ ಸಾಹಿತ್ಯ ಚಟುವಟಿಕೆಗಳು ನಡೆದುಕೊಂಡು ಬರುವುದು ಸಾಮಾನ್ಯವಾದರೂ ದೈವಸ್ಥಾನದಲ್ಲಿ ಅಲ್ಲಿಯ ಕೋಲದ ದಿನ ಸಾಹಿತ್ಯ ಚಟುವಟಿಕೆಯು ನಿರಂತರವಾಗಿ ನಡೆದುಕೊಂಡು ಬರುತ್ತಿರುವುದು ತಿಂಗಳೆ ಮನೆಯ ದೈವದ ಮನೆಯಲ್ಲಿ ಮಾತ್ರ ಎಂಬುದು ಉಲ್ಲೇಖನೀಯ ವಿಚಾರವಾಗಿದೆ. ಧಾರ್ಮಿಕ ಕಾರ್ಯಕ್ರಮಕ್ಕೆ ಪೂರ್ವಭಾವಿಯಾಗಿ ಹಮ್ಮಿಕೊಂಡ ಇಲ್ಲಿಯ ಸಾಹಿತ್ಯ ಚಟುವಟಿಕೆ ಕೇವಲ ಒಂದು ಮನೆತನದ ಚಟುವಟಿಕೆಯಂತಾಗಿದೆ. ಉಪನ್ಯಾಸ ಅಥವಾ ಭಾಷಣದ ಮೂಲಕ ಗಣ್ಯ ಸಾಹಿತಿಗಳನ್ನು ಸತ್ಕರಿಸಿ, ಸಾಹಿತಿಗಳ ಸಮ್ಮುಖದಲ್ಲಿ ತಮ್ಮ ಸಾಹಿತ್ಯ ಕಾಳಜಿಯನ್ನು ಮೆರೆಸುವುದು ಹಾಗೂ ಅಲ್ಲಿಯ ಸಹೃದಯ ಸಭೆಯ ಮುಂದೆ ತಮ್ಮ ಹಿರಿಮೆಯನ್ನು ಪ್ರದರ್ಶಿಸುವುದು ಈ ಚಟುವಟಿಕೆಯ ಹಿಂದಿನ ಉದ್ದೇಶವಾಗಿರುತ್ತದೆ. ಈ ಚಟುವಟಿಕೆಯ ಬಂಡವಾಳದಿಂದಲೇ ಸಾಹಿತ್ಯವಲಯದ ಕೆಲವು ಅವಕಾಶಗಳನ್ನು ನಿರೂಪಿಸುವುದು ಈ ಕಾರ್ಯಕ್ರಮದ ದೂರಗಾಮಿ ಯೋಜನೆಯೆನ್ನುವುದನ್ನು ಅಲ್ಲಗಳೆಯುವಂತಿಲ್ಲ.

**1. ಅಂ) ಜಾಗೃತಿ ಸಾಹಿತ್ಯಾಸಕ್ತ ಮಹಿಳೆಯರ ಒಕ್ಕೂಟ, ಕಾರ್ಕಳ:** ಇದು ಸಮಾನಮನಸ್ಕರಾದ ಮಹಿಳೆಯರು ತಮ್ಮ ದೈನಂದಿನ ಜೀವನದಲ್ಲಿ ಕಂಡುಕೊಂಡ ಆಗುಹೋಗುಗಳಿಗೆ ತಮ್ಮದೇ ವೈಚಾರಿಕ ಹಿನ್ನೆಲೆಯಲ್ಲಿ ಚರ್ಚಿಸುವುದಕ್ಕಾಗಿ ತಮ್ಮದೇ ಇತಿ–ಮಿತಿ ವ್ಯಾಪ್ತಿಯಲ್ಲಿ ಕಟ್ಟಿಕೊಂಡ ಒಕ್ಕೂಟವಾಗಿದೆ. ಈ ಸಂಘಟನೆಯಲ್ಲಿ ಕಾರ್ಕಳದವರೇ ಆದ ಶ್ಯಾಮಲ ಗೋಪೀನಾಥ್, ಯು. ಬಿ. ರಾಜಲಕ್ಷ್ಮೀ, ಸಾವಿತ್ರಿ ಮನೋಹರ್, ಮಿತ್ರಪ್ರಭಾ ಹೆಗ್ಡೆ, ಭಾರತೀ ಉಪಾಧ್ಯಾಯರೇ ಮೊದಲಾದ ಮಹಿಳಾ ಸದಸ್ಯರಿದ್ದು ಇವರೆಲ್ಲರೂ ನಿಗದಿತ ಸ್ಥಳದಲ್ಲಿ ಮೊದಲೇ ತೀರ್ಮಾನಿಸಿದಂತೆ ಒಟ್ಟು ಸೇರಿ ನಿರ್ದಿಷ್ಟ ವಿಷಯವೊಂದರ ಕುರಿತು ಚರ್ಚಿಸಿ, ಚರ್ಚೆಯ ಸ್ವಾರಸ್ಯ–ವಿಶೇಷಗಳನ್ನು ಪತ್ರಿಕೆಯಲ್ಲಿ ವರದಿಯಾಗಿಯೂ, ಪ್ರಕಟಿಸಿರುತ್ತಾರೆ. ಪ್ರಸ್ತುತ ತರಂಗ ವಾರಪತ್ರಿಕೆಯ ಉಪಸಂಪಾದಕಿಯಾಗಿ ಉದ್ಯೋಗದಲ್ಲಿದ್ದ ಯು.ಬಿ. ರಾಜಲಕ್ಷ್ಮೀಯವರು ಮತ್ತು ಎಸ್.ವಿ.ಟಿ. ಮಹಿಳಾ

ಕಾಲೇಜಿನ ಪ್ರಾಂಶುಪಾಲರಾದ ಮಿತ್ರಪ್ರಭಾ ಹೆಗ್ಡೆಯವರು ಈ ಸಂಘಟನೆಯ ಕಾರ್ಯಕ್ರಮದ ನೇತೃತ್ವವಹಿಸಿ ಯಶಸ್ವೀ ಚಟುವಟಿಕೆಗಳನ್ನು ನಡೆಸಿಕೊಂಡು ಬರುತ್ತಿದ್ದರು. ಕಾರ್ಕಳ ತಾಲೂಕಿನ ಏಕೈಕ ಮಹಿಳಾ ಸಂಘಟನೆ ಎಂಬ ಕಾರಣಕ್ಕಾಗಿ ಇದು ಉಲ್ಲೇಖಿಸಲೇ ಬೇಕಾದ ಸಂಘಟನೆಯಾಗಿದೆ. 1997ರಲ್ಲಿ ಪ್ರೊ. ಎಂ. ರಾಮಚಂದ್ರರ ನೇತೃತ್ವದ ಕನ್ನಡ ಸಂಘವು ಅಸ್ತಿತ್ವಕ್ಕೆ ಬಂದೊಡನೆ ಈ ಸಂಘಟನೆ ತನ್ನೆಲ್ಲಾ ಕಾರ್ಯಕ್ರಮಗಳಿಗೆ ಪೂರ್ಣವಿರಾಮವನ್ನು ನೀಡಿತು. ಸಾಹಿತ್ಯ ಚರ್ಚೆ ಮತ್ತು ಅದರಲ್ಲಿ ಭಾಗವಹಿಸಿದ ಸದಸ್ಯರ ಚರ್ಚೆಯ ವಿವರಗಳನ್ನು ಪತ್ರಿಕೆಯಲ್ಲಿ ದಾಖಲಿಸುವುದಷ್ಟೇ ಅವರ ಉದ್ದೇಶವೆನ್ನುವುದು ಅವರ ಚಟುವಟಿಕೆಯ ಸ್ವರೂಪದಿಂದ ಅರ್ಥೈಸಿಕೊಳ್ಳಬಹುದಾಗಿದೆ. ಯಾವುದೇ ಗಂಭೀರ ಉದ್ದೇಶವಿಲ್ಲದ ಈ ಸದಸ್ಯೆಯರು ಕಾರ್ಕಳದಲ್ಲಿ ಇನ್ನೊಂದು ಕನ್ನಡ ಸಂಘವು ಆರಂಭವಾಗುತ್ತಿದ್ದಂತೆಯೇ ತಮ್ಮ ಚಟುವಟಿಕೆಗಳಿಗೆ ಪೂರ್ಣವಿರಾಮವನ್ನು ನೀಡಿದರು.

**1. ಅಃ) 'ಸುಹಾಸಂ' ಎಂಬ ಹಾಸ್ಯ ಸಂಘಟನೆ, ಉಡುಪಿ:** ಕುಂಜಿಬೆಟ್ಟು ಗೋಪಾಲ ಭಟ್ಟರೆಂಬವರು ಜೀವವಿಮಾ ಇಲಾಖೆಯಲ್ಲಿ ಉದ್ಯೋಗದಲ್ಲಿದ್ದು ನಿವೃತ್ತರಾದ ಅನಂತರ ಉಡುಪಿಯ ಹಯಗ್ರೀವ ನಗರದಲ್ಲಿ ಖಾಯಂ ನಿವಾಸಿಯಾದರು. ತಮ್ಮ ನಿವೃತ್ತ ಬದುಕನ್ನು ಸಂತೋಷದಿಂದ ಕಳೆಯಲು ಹಾಗೂ ತಮ್ಮ ಆಪ್ತ ಹಿತೈಷಿಗಳ ಬದುಕಿಗೂ ಹಿತವನ್ನುಂಟುಮಾಡುವ ಉದ್ದೇಶದಿಂದ 'ಸುಹಾಸಂ' ಎಂಬ ಹಾಸ್ಯ ಸಂಘಟನೆಯ ಯೋಜನೆಯನ್ನು ಸಂಘಟಿಸಿದರು. ಸಾಹಿತ್ಯ ಸಮ್ಮೇಳನಗಳಿಗೆ, ಶಾಲಾ ಕಾಲೇಜುಗಳು ಏರ್ಪಡಿಸುವ ವಿಚಾರಸಂಕಿರಣ ಚರ್ಚಾಕೂಟಗಳು ನಡೆಯುವ ಸ್ಥಳಗಳಿಗೆ ತಮ್ಮದೇ ಆದ ಸ್ವಂತ ಪುಸ್ತಕಗಳನ್ನು ಕೊಂಡುಹೋಗಿ, ಕೆಲವೊಮ್ಮೆ ಅದನ್ನು ವಿಕ್ರಯಿಸುತ್ತಾ, ಇನ್ನು ಕೆಲವೊಮ್ಮೆ ಕಿರಿಯ ವಯಸ್ಸಿನ ಸಹೃದಯ ವಿದ್ಯಾರ್ಥಿಗಳಿಗೆ ಉಚಿತವಾಗಿ ಹಂಚುವ ಹವ್ಯಾಸವನ್ನಿರಿಸಿಕೊಂಡಿದ್ದಾರೆ. ಈ ಸಂಘಟನೆಯ ಸ್ಥಾಪಕ ಅಧ್ಯಕ್ಷರಾಗಿ ಶ್ರೀ ಕೆ.ವಿ. ಶ್ರೀನಿವಾಸರಾವ್ ಅವರು ಅನೇಕ ಕಾರ್ಯಕ್ರಮಗಳನ್ನು ಸಂಯೋಜಿಸಿದ್ದರು. ಪ್ರಸ್ತುತ ಶಾಂತರಾಜ ಐತಾಳ ಅವರು 'ಸುಹಾಸಂ' ಸಂಘಟನೆಯ ಅಧ್ಯಕ್ಷರಾಗಿ ಸಂಘಟನೆಯ ವತಿಯಿಂದ ವಿಚಾರಗೋಷ್ಠಿ-ಪುಸ್ತಕ ಪ್ರಕಟಣೆ ಮುಂತಾದ ಕಾರ್ಯಕ್ರಮಗಳನ್ನು ಹಮ್ಮಿಕೊಂಡು ಬರುತ್ತಿದ್ದಾರೆ. ಕು.ಗೋ. ಅವರ ಮನೆಯೇ ಈ ಸಂಘಟನೆಯ ಮುಖ್ಯ ಕಛೇರಿಯಾಗಿದ್ದು ಉಡುಪಿಯ ಯಾವುದಾದರೂ ಶಾಲಾ ಕೊಠಡಿ, ಹೋಟೆಲ್ ಸಭಾಂಗಣ, ದೇವಸ್ಥಾನದ ಸಭಾಮಂದಿರದಲ್ಲಿ ತಮ್ಮ ಸಂಘಟನೆಯ ಸಾಹಿತ್ಯ ಕಾರ್ಯಕ್ರಮಗಳನ್ನು ಹಮ್ಮಿಕೊಂಡು ಬರುತ್ತಿದ್ದಾರೆ. ಸಾಹಿತ್ಯಚಟುವಟಿಕೆಗಳ ಮೂಲಕ ಓದುಗ-ಸಹೃದಯರನ್ನು ಲವಲವಿಕೆ-ಉತ್ಸಾಹದಲ್ಲಿರಿಸಿ ಅವರ ಜೀವನೋತ್ಸಾಹಕ್ಕೆ ಸಾಹಿತ್ಯದ ಮೂಲಕ ಶಕ್ತಿ ತುಂಬಬೇಕೆಂಬುದೇ ಕು.ಗೋ. ಅವರ ಒಟ್ಟು ಧೋರಣೆಯಾಗಿದೆ. ಶಾರದಾ ಭಟ್ ಎಂಬ ಉಡುಪಿಯ ಸಾಹಿತ್ಯಾಸಕ್ತರು ಹುಟ್ಟುಹಾಕಿದ 'ನಡುಮನೆ ಸಾಹಿತ್ಯ ಸಂಘಟನೆ'ಯನ್ನು ಕು.ಗೋ. ಅವರು ಶಾರದಾ ಭಟ್ ಮತ್ತಿತರ ಸಾಹಿತ್ಯಾಭಿಮಾನಿಗಳ ಸಹಿತ ವ್ಯವಸ್ಥಿತವಾಗಿ ನಡೆಸಿಕೊಂಡು ಬರುತ್ತಿದ್ದರೆನ್ನುವುದು ಇವರ ಇನ್ನೊಂದು ಸಾಹಸವಾಗಿದೆ.

**2) ಸಾಹಿತ್ಯ ಕಾರ್ಯಕ್ರಮಗಳೊಂದಿಗೆ ಸಾಂಸ್ಕೃತಿಕ ಚಟುವಟಿಕೆಗಳನ್ನು ನಿರ್ವಹಿಸುವ ಸಂಘಟನೆಗಳು:**

ಅ) ಚೇತನ ಕರ್ನಾಟಕ ಸಂಘ, ಹಂಗಾರಕಟ್ಟೆ ಆ) ಸರ್ವೋದಯ ಯುವಕ ಮಂಡಲ, ಹಂಗಾರಕಟ್ಟೆ ಇ) ರಥಬೀದಿ ಗೆಳೆಯರು, ಉಡುಪಿ ಈ) ಚೇತನ ಕ್ರೀಡಾ ಮತ್ತು ಕಲಾ ಸಂಘ (ರಿ.), ಕೋಟೇಶ್ವರ ಉ) ಮಿತ್ರಮಂಡಳಿ, ಕೋಟ ಯುವಕ ಮಂಡಲ, ಪಲಿಮ್ಮಾರು-ಕುತ್ಯಾರು ಊ) ರಂಗಭೂಮಿ (ರಿ.), ಉಡುಪಿ ಋ) ಕಾರ್ಕಡ ಗೆಳೆಯರ ಬಳಗ (ರಿ.), ಸಾಲಿಗ್ರಾಮ, ೠ)

ಅಜಪುರ ಕರ್ನಾಟಕ ಸಂಘ, ಬ್ರಹ್ಮಾವರ, ಎ) ಯುವಕ ಮಂಡಲ ಎಲ್ಲೂರು, ಏ) ಯುವಕ ಮಂಡಲ (ರಿ.), ಕುತ್ಯಾರು, ಐ) ಸ್ವಾಮಿ ವಿವೇಕಾನಂದ ಸಾಂಸ್ಕೃತಿಕ ಕೇಂದ್ರ ಬಾರಕೂರು, ಒ) ಡಾ. ಬಿ. ಆರ್. ಅಂಬೇಡ್ಕರ್ ಯುವಕ ಮಂಡಲ (ರಿ.) ಮೇಲ್‌ಗಂಗೊಳ್ಳಿ, ಓ) ಸಂಗೀತ ಸಭಾ, ಉಡುಪಿ, ಔ) ಲಾವಣ್ಯ ಬೈಂದೂರು, ಅಂ) ಸುರಭಿ ಸಾಹಿತ್ಯ ಸಂಘ, ಬೈಂದೂರು, ಅಃ) ಹಂಗಳೂರು ಗೆಳೆಯರ ಬಳಗ, ಕುಂದಾಪುರ.

**2. ಅ) ಚೇತನ ಕರ್ನಾಟಕ ಸಂಘ, ಹಂಗಾರಕಟ್ಟೆ:**

ಐರೋಡಿ, ಪಾಂಡೇಶ್ವರ, ಮಾಬುಕಳ, ಬಾಳೆಕುದ್ರು ಎಂಬೀ ಗ್ರಾಮಗಳ ನಡುವಿನ ಸೀತಾನದಿಯ ದಡದ ಮೇಲಿರುವ ಸಣ್ಣ ಊರು ಹಂಗಾರಕಟ್ಟೆ. ಇಲ್ಲಿ 'ಉಡುಪಿ ಜಿಲ್ಲಾ ಮಾದರಿ ಹಿರಿಯ ಪ್ರಾಥಮಿಕ ಶಾಲೆ, ಹಂಗಾರಕಟ್ಟೆ' ಎಂದು ಪ್ರಸಿದ್ಧಿಯನ್ನು ಪಡೆದ ಶಾಲೆಯಿದೆ. ಈಗಾಗಲೇ ಶತಮಾನೋತ್ಸವವನ್ನು ಆಚರಿಸಿಕೊಂಡ ಈ ಶಾಲೆಯು ಅನೇಕರ ವ್ಯಕ್ತಿತ್ವವನ್ನು ಬೆಳಗಿಸಿ, ಈ ಉನ್ನತ ವ್ಯಕ್ತಿಗಳೇ ಸಮಾಜದ ಉನ್ನತಿಗಾಗಿ ದುಡಿದು, ಮುಂದಿನ ತಲೆಮಾರಿನ ಯುವಕ, ಯುವತಿಯರ ಬಾಳಿಗೆ ದಾರಿದೀಪವಾಯಿತು. ಈ ಶಾಲೆಯ ವಿದ್ಯಾರ್ಥಿಗಳಾಗಿ ಇಲ್ಲಿಯೇ ತಮ್ಮ ಬದುಕನ್ನು ರೂಪಿಸಿಕೊಳ್ಳುವುದಕ್ಕೆ ಪ್ರೇರಣೆಯನ್ನು ಪಡೆದ ಹಿರಿಯ ವಿದ್ಯಾರ್ಥಿಗಳು ಶೈಕ್ಷಣಿಕವಾಗಿ, ಸಾಮಾಜಿಕವಾಗಿ, ಧಾರ್ಮಿಕವಾಗಿ ಸಾಹಿತ್ಯಕವಾಗಿ, ಗುರುತಿಸಿಕೊಂಡು ತಮ್ಮ ಅನುಭವಗಳನ್ನು ಬೇರೆ ಬೇರೆ ವೇದಿಕೆ ಅಥವಾ ಸಂಘಟನೆಗಳಲ್ಲಿ ಯುವ ತಲೆಮಾರಿಗೆ ವರ್ಗಾಯಿಸಿ, ಜೀವನದಲ್ಲಿ ಸಾರ್ಥಕತೆಯನ್ನು ಕಂಡುಕೊಂಡಿದ್ದಾರೆ.

ಈ ಶಾಲೆಯಲ್ಲಿ ಪ್ರಾಥಮಿಕ ಶಿಕ್ಷಣವನ್ನು ಪೂರೈಸಿದ ಹಿರಿಯ ವಿದ್ಯಾರ್ಥಿಗಳು ಕರ್ಣಾಟಕ ಸಂಘವನ್ನು ಸ್ಥಾಪಿಸಿ, ತಮ್ಮ ಪ್ರಗತಿಪರ ಚಟುವಟಿಕೆಗಳಿಂದ ಪರಿಸರದ ನಾಗರಿಕರ ಗಮನವನ್ನು ಸೆಳೆದರು. ಸ್ಥಳೀಯರ ಪ್ರೌಢಶಿಕ್ಷಣದ ಅಗತ್ಯವನ್ನು ಪೂರೈಸಲೋಸುಗ ಚೇತನಾ ಪ್ರೌಢಶಾಲೆ ಎಂಬ ವಿದ್ಯಾ ಸಂಸ್ಥೆಯನ್ನು ಇದೇ ಸಂಘಟನೆಯ ವತಿಯಿಂದ ಸ್ಥಾಪಿಸಿದರು. ಮುಂದೆ ಚೇತನಾ ಪ್ರೌಢಶಾಲೆಯ ಪ್ರಾಕ್ತನ ವಿದ್ಯಾರ್ಥಿಗಳು ತಮ್ಮೂರಿನ ಸರ್ವತೋಮುಖ ಏಳಿಗೆಯ ಕನಸನ್ನು ಕಂಡು 'ಸರ್ವೋದಯ ಯುವಕ ಮಂಡಲ'ಎಂಬ ಸಂಸ್ಥೆಯನ್ನು ಸ್ಥಾಪಿಸಿ, ದಿನಾಂಕ 08.03.1969ರಂದು ಈ ಸಂಸ್ಥೆಯನ್ನು ಅಧಿಕೃತವಾಗಿ ನೋಂದಾಯಿಸಿಕೊಂಡರು.

**ಆ) ಹಂಗಾರಕಟ್ಟೆಯ ಕರ್ಣಾಟಕ ಸಂಘದ ಸಾಹಿತ್ಯಚಟುವಟಿಕೆಗಳು:** ಸಾಹಿತ್ಯಚಟುವಟಿಕೆ, ಸಾಂಸ್ಕೃತಿಕ ಚಟುವಟಿಕೆ, ಯಕ್ಷಗಾನ-ತಾಳಮದ್ದಳೆ ಮುಂತಾಗಿ ನಿತ್ಯೋತ್ಸವದ ತಾಣವಾಗಿ ಹಂಗಾರಕಟ್ಟೆಯ ಶಾಲೆಯ ಪರಿಸರವು ಜನರ ಮನೋರಂಜನೆಯ ಕೇಂದ್ರವಾಗಿತ್ತು. ವರ್ತಮಾನ ಕಾಲದ ಖ್ಯಾತ ವಿಮರ್ಶಕರೂ, ಶಾಲೆಯ ಪ್ರಾಕ್ತನ ವಿದ್ಯಾರ್ಥಿಯೂ ಆಗಿದ್ದ ಬಿ.ವಿ. ಕೆದಿಲಾಯರ ಮಾತಿನಲ್ಲಿಯೇ ವಿವರಿಸುವುದಾದರೆ –"ಶಾಲೆಯ ವಠಾರ ಆಗ ಆ ಪ್ರದೇಶದ ಒಂದು ಸಾಂಸ್ಕೃತಿಕ ಕೇಂದ್ರವಾಗಿತ್ತು. ಅಲ್ಲಿ ಆಗಾಗ ನಾಟಕಗಳು, ಯಕ್ಷಗಾನ ತಾಳಮದ್ದಳೆ, ವಿದ್ವಾಂಸರ ಉಪನ್ಯಾಸಗಳು, ವಿದ್ಯಾರ್ಥಿಗಳಿಗೆ ಸ್ಪರ್ಧೆಗಳು ನಡೆಯುತ್ತಿದ್ದವು. ಶಾಲೆಯೊಳಗಿನ ಓದು ಬರಹಕ್ಕಿಂತಲೂ ಇವುಗಳಿಂದ ನಾನು ಕಲಿತದ್ದೇ ಹೆಚ್ಚೆಂದರೂ ತಪ್ಪಾಗದು....ನನಗೆ ದೊರೆತ ಬೌದ್ಧಿಕ ಸಂಸ್ಕಾರ, ಕಲಾಸಕ್ತಿ ನನ್ನ ಮುಂದಿನ ಬದುಕಿನಲ್ಲಿ ಮಹತ್ವದ ಪಾತ್ರವಹಿಸಿತೆನ್ನುವುದನ್ನು ಇಲ್ಲಿ ಹೇಳಬೇಕು."(ಸಂ: ಸದಾನಂದ ಐತಾಳ, 2003, ಪು-25) ಕೇವಲ ಬಿ.ವಿ. ಕೆದಿಲಾಯರ ಬದುಕಿನಲ್ಲಿ ಮಾತ್ರ ಮಹತ್ವದ ಪಾತ್ರ ವಹಿಸಿದ್ದಲ್ಲದೆ ಈ ಪರಿಸರದ

ಚಟುವಟಿಕೆಗಳಿಂದ ಪ್ರಭಾವಿತರಾದ ಅನೇಕ ಮಂದಿ ಜಿಲ್ಲೆಯ ನಾನಾ ಭಾಗಗಳಲ್ಲಿ ತಮ್ಮ ಸಾಹಿತ್ಯ-ಸಾಂಸ್ಕೃತಿಕ ಚಟುವಟಿಕೆಗಳಿಂದ ಗುರುತಿಸಿಕೊಂಡರು. ಉದಾ: ಪಾಂಡೇಶ್ವರ ಚಂದ್ರಶೇಖರ ಚಡಗ (ಹಂಗಾರಕಟ್ಟೆ ಧೂಳಂಗಡಿ ಶಾಲೆಯಲ್ಲಿ ಓದಿ ಮುಂದೆ ಎಂ.ಜಿ.ಎಂ. ಕಾಲೇಜಿನಲ್ಲಿ ಬಿ.ಕಾಂ. ಪದವಿ ಪೂರೈಸಿ, ಬೆಂಗಳೂರಿನ ಆದಾಯ ತೆರಿಗೆ ಇಲಾಖೆಯಲ್ಲಿ ನೌಕರಿಯಲ್ಲಿದ್ದು, ಅಲ್ಲಿಯೇ ನಿವೃತ್ತರಾಗಿ ಇಂದಿಗೂ ಬೆಂಗಳೂರಿನಲ್ಲಿ ಸಾಹಿತ್ಯಚಟುವಟಿಕೆಗಳಲ್ಲಿ ತೊಡಗಿಸಿಕೊಂಡಿದ್ದಾರೆ) ಜಗದಾತ್ಮಾನಂದಜೀ (ರಾಮಕೃಷ್ಣಾಶ್ರಮದ ಹಿರಿಯ ಸನ್ಯಾಸಿ) ಬದುಕಲು ಕಲಿಯಿರಿ ಎಂಬ ಕೃತಿಯಿಂದ ಖ್ಯಾತರಾದವರು. ಜನಾರ್ದನ ಅಲ್ಸೆ (ಹಂಗಾರಕಟ್ಟೆ ಐರೋಡಿಯವರಾದ ಇವರು ಉಡುಪಿಯಲ್ಲಿ ಪತ್ರಿಕೋದ್ಯಮಿಯಾಗಿ ಹೆಸರು ಪಡೆದವರು, ಪ್ರಕಾಶ ಎಂಬ ವಾರಪತ್ರಿಕೆ ನಡೆಸಿಕೊಂಡು ಬಂದವರು...) ಹೀಗೆ-ಬದುಕಿನ ವಿವಿಧ ಕ್ಷೇತ್ರಗಳಲ್ಲಿ ಯಶಸ್ಸನ್ನು ಕಂಡು ಗುರುತಿಸಿಕೊಂಡವರು ಅನೇಕರಿದ್ದಾರೆ. ವೈದೇಹಿ ಎಂಬ ಕಾವ್ಯನಾಮದ ವರ್ತಮಾನದ ಲೇಖಕಿ ಕುಂದಾಪುರದಲ್ಲಿ ತಮ್ಮ ಪ್ರೌಢಶಿಕ್ಷಣ ಮತ್ತು ಕಾಲೇಜು ಶಿಕ್ಷಣವನ್ನು ಪಡೆದರೂ ಮೂಲತಃ ಐರೋಡಿಯವರು. ಅವರ ಎಲ್ಲಾ ಕೃತಿಗಳಲ್ಲೂ ಐರೋಡಿ-ಪಾಂಡೇಶ್ವರ-ಗುಂಡ್ಮಿಯ ಮಣ್ಣಿನ ವಾಸನೆ ದಟ್ಟವಾಗಿ/ಸಮ್ಮಿಳಿತಗೊಂಡಿರುವುದನ್ನು ಕಾಣಬಹುದು. ಸಮಾನ ಆಸಕ್ತಿಯ ಊರಿನ ಯುವಕರು ನಿರ್ವಹಿಸಿದ ಚಟುವಟಿಕೆಗಳು ಇತರ ಸಂಘಟನೆಗಳಿಗೆ ಮಾದರಿ ಎಂಬಂತಿತ್ತು. ಉದ್ಯೋಗ ನಿಮಿತ್ತ ಪರವೂರಿಗೆ ತೆರಳಿದ ಈ ಸಂಘಟನೆಯ ಸದಸ್ಯರು ತಮ್ಮೂರಿನಲ್ಲಿ ಸಂಘದ ಮೂಲಕ ಚಟುವಟಿಕೆಗಳು ಅಭಿವ್ಯಕ್ತಿ ಪಡೆಯಲು ಯಾವುದೇ ದೂರಗಾಮಿ ಯೋಜನೆಯನ್ನು ಹಮ್ಮಿಕೊಳ್ಳದ ಪ್ರಯುಕ್ತ ಸಂಘಟನೆಯು ನಿಷ್ಕ್ರಿಯಗೊಂಡಿತು.

**2. ಆ) ಸರ್ವೋದಯ ಯುವಕ ಮಂಡಲ, ಹಂಗಾರಕಟ್ಟೆ:**

ಹಂಗಾರಕಟ್ಟೆ (ಧೂಳಂಗಡಿ) ಶಾಲೆಯ ಹಳೆವಿದ್ಯಾರ್ಥಿ ಮತ್ತು ಮುಂದೆ ಅದೇ ಶಾಲೆಯಲ್ಲಿ ಅಧ್ಯಾಪಕರಾಗಿದ್ದ ಐರೋಡಿ ಸದಾನಂದ ಹೆಬ್ಬಾರರು ತಮ್ಮ ಸ್ವಪ್ರಯತ್ನದಿಂದ ಖಾಸಗಿ ಓದಿನಲ್ಲಿ ಪದವಿ ಹಾಗೂ ಸ್ನಾತಕೋತ್ತರ ಶಿಕ್ಷಣವನ್ನು ಪೂರೈಸಿ ತರಬೇತಿ ಪಡೆದು, ಚೇತನಾ ಪ್ರೌಢಶಾಲೆಯ ಮುಖ್ಯೋಪಾಧ್ಯಾಯರಾದರು. ಚೇತನಾ ಕರ್ನಾಟಕ ಸಂಘದ ಸಕ್ರಿಯ ಸದಸ್ಯರು ಮಾತ್ರವಲ್ಲದೆ 1948ರಿಂದ 1962 ರತನಕ ಈ ಸಂಘದ ಅಧ್ಯಕ್ಷರಾಗಿಯೂ ಸೇವೆ ಸಲ್ಲಿಸಿದ್ದರು. ರಾಷ್ಟ್ರಮಟ್ಟದಲ್ಲಿ ನೂತನ ಕಲಿಕಾ ವಿಧಾನಗಳಿಗೆ ಸಂಬಂಧಿಸಿದಂತೆ ವಿಚಾರಗೋಷ್ಠಿ(ದೆಹಲಿ)ಯಲ್ಲಿ ಪ್ರಬಂಧ ಮಂಡಿಸಿದವರು. ಶಿಕ್ಷಕ ಸಮ್ಮೇಳನಗಳಲ್ಲಿ ಮೂರು ಬಾರಿ ಪ್ರಶಸ್ತಿ ಪಡೆದವರು. 1976ರಲ್ಲಿ ಶ್ರೇಷ್ಠ ಅಧ್ಯಾಪಕರೆಂದು ರಾಷ್ಟ್ರಪತಿಗಳಿಂದ ರಾಷ್ಟ್ರಪ್ರಶಸ್ತಿ ಗಳಿಸಿದವರು. 1972ರಲ್ಲಿ ಹಂಗಾರಕಟ್ಟೆ ಯಕ್ಷಗಾನಕಲಾಕೇಂದ್ರವನ್ನು ಸ್ಥಾಪಿಸಿ, ಸಾಂಪ್ರದಾಯಿಕಶೈಲಿಯಲ್ಲಿ ಭಾಗವತಿಕೆ, ಹಿಮ್ಮೇಳಕ್ಕೆ ತರಬೇತಿ ನೀಡುತ್ತಾ ಬಂದವರು. ಇಂತಹ ಮುಖ್ಯೋಪಾಧ್ಯಾಯರ ಗರಡಿಯಲ್ಲಿ ಪಳಗಿದ ಹಂಗಾರಕಟ್ಟೆಯ ಚೇತನಾ ಪ್ರೌಢಶಾಲೆಯ ಪ್ರಾಕ್ತನ ವಿದ್ಯಾರ್ಥಿಗಳು 1969ರಲ್ಲಿ ಸರ್ವೋದಯ ಯುವಕ ಮಂಡಲವನ್ನು ಸ್ಥಾಪಿಸಿ, ನೋಂದಣಿ ಮಾಡಿದರು. ಈ ಯುವಕ ಮಂಡಲವೂ ಗ್ರಾಮದ ಸರ್ವರೀತಿಯ ಅಭಿವೃದ್ಧಿಗೆ ಸಹಕರಿಸುತ್ತಾ ಬಂದಿದೆ. ಇವರ ಬಹುವಿಧದ ಚಟುವಟಿಕೆಗಳಲ್ಲಿ ಸಾಹಿತ್ಯ ಚಟುವಟಿಕೆಯೂ ಒಳಗೊಂಡಿದ್ದು, ಅದನ್ನು ಈ ಕೆಳಗಿನಂತೆ ಗುರುತಿಸಬಹುದು.

**ಸರ್ವೋದಯ ಯುವಕ ಮಂಡಲ (ರಿ.) ಹಂಗಾರಕಟ್ಟೆ ಇವರು ನಿರ್ವಹಿಸಿದ ಸಾಹಿತ್ಯಚಟುವಟಿಕೆಗಳ ಸಂಕ್ಷಿಪ್ತ ವಿವರ:** (ಕೇವಲ ಸಾಹಿತ್ಯಚಟುವಟಿಕೆಗಳನ್ನು ಮಾತ್ರ ಉಲ್ಲೇಖಿಸಿದೆ)

1.8.1976–ಸಾರ್ವಜನಿಕ ಗ್ರಂಥಾಲಯ ಆರಂಭ, 28/29.8.1976 –ಸಾರ್ವಜನಿಕ ಗಣೇಶೋತ್ಸವ ಆಚರಣೆಯ ಪ್ರಾರಂಭ (ಸಾಹಿತ್ಯ ಉಪನ್ಯಾಸದೊಂದಿಗೆ), 30.09.1976– ವಯಸ್ಕಶಿಕ್ಷಣ ತರಗತಿಗಳ ಆರಂಭ, 17.10.1976 –ರಾಷ್ಟ್ರಪ್ರಶಸ್ತಿ ವಿಜೇತ ಶ್ರೀ ಸದಾನಂದ ಹೆಬ್ಬಾರರಿಗೆ ಅಭಿನಂದನೆಯೊಂದಿಗೆ ಸನ್ಮಾನ, 25.12.1976 ಸಾರ್ವಜನಿಕ ಗ್ರಂಥಾಲಯಕ್ಕೆ ಸುಮಾರು ರೂ. 700/–ಕ್ಕೂ ಮೇಲ್ಪಟ್ಟ ಮೌಲ್ಯದ ಪುಸ್ತಕಗಳ ಖರೀದಿ, 16.09.1977– ಸಾರ್ವಜನಿಕ ಗಣೇಶೋತ್ಸವದಂದು ಸಾಂಸ್ಕೃತಿಕ ಕಾರ್ಯಕ್ರಮಗಳ ಪ್ರದರ್ಶನ, 17.08.1978–ಜ್ಞಾನಪೀಠ ಪ್ರಶಸ್ತಿ ವಿಜೇತ, ಡಾ. ಕೆ. ಶಿವರಾಮ ಕಾರಂತರನ್ನು ಅಭಿನಂದಿಸಿ, ಸನ್ಮಾನಿಸಿರುವುದು. 1.11.1979–ಕನ್ನಡ ರಾಜ್ಯೋತ್ಸವವನ್ನು ಅತಿವಿಜೃಂಭಣೆಯಿಂದ ಆಚರಿಸಿ ಹೊಸ ಪರಂಪರೆಗೆ ನಾಂದಿ ಹಾಕಿರುವುದು, 21ನೇ ಶತಮಾನದಲ್ಲಿ ಅಸ್ತಿತ್ವಕ್ಕೆ ಬಂದ ಯಾವೊಂದೂ ಯುವಕ ಮಂಡಲಗಳಲ್ಲಿ ಈ ವೈವಿಧ್ಯಮಯ ಚಟುವಟಿಕೆಗಳಿಗೆ ಅವಕಾಶಗಳಿಲ್ಲದಿರುವ ಪ್ರಯುಕ್ತ ಈ ಚಟುವಟಿಕೆಗಳನ್ನು ಇಲ್ಲಿ ಉಲ್ಲೇಖಿಸಲಾಗಿದೆ.

ವಿವಿಧ ವಯೋಮಾನದ ವೃತ್ತಿಯ ಮತ್ತು ಜಾತಿಯ ಯುವಕರು ಸಾರ್ವಜನಿಕರ, ಸರಕಾರದ, ಜನಪ್ರತಿನಿಧಿಗಳ ಸಹಕಾರದೊಂದಿಗೆ ಸಾಹಿತ್ಯ ಚಟುವಟಿಕೆಗಳನ್ನು ನಿರ್ವಹಿಸಿಕೊಂಡು ಬಂದರು. ಪ್ರಜಾಪ್ರಭುತ್ವ ಚಿಂತನೆಯ ತಳಹದಿಯಲ್ಲಿ ಕಾರ್ಯಕ್ರಮಗಳನ್ನು ಹಮ್ಮಿಕೊಂಡು ಬಂದ ಕಾರಣ ಇಂದಿಗೂ ಮುಂದುವರಿಯುತ್ತಿದೆ. ಸಾರ್ವಜನಿಕರ ಆರ್ಥಿಕ ಸಹಾಯವನ್ನು ಪಡೆದ ಸದಸ್ಯರು ತಾವು ಸಂಗ್ರಹಿಸಿದ ಹಣವನ್ನು ದುಂದುವೆಚ್ಚ ಮಾಡದೆ ಸಾಹಿತ್ಯ ಚಟುವಟಿಕೆಗಳನ್ನು ನಿರ್ವಹಿಸುತ್ತ ಬಂದ ಕಾರಣ ಸಂಘದ ಚಟುವಟಿಕೆಗಳಲ್ಲಿ ಸಹೃದಯರಿಗೆ ಸದಭಿಪ್ರಾಯವನ್ನಿರಿಸಿಕೊಂಡರು. ಈ ಸದಭಿಪ್ರಾಯದಿಂದಾಗಿ ಯುವಕ ಮಂಡಲದ ವತಿಯಿಂದ ಸಾಹಿತ್ಯ ಚಟುವಟಿಕೆಗಳು ನಿರಂತರವಾಗಿ ಮುಂದುವರಿಯುತ್ತಿದೆ.

**2. ಇ) ರಥಬೀದಿ ಗೆಳೆಯರು, ಉಡುಪಿ:**

ಚಿಕ್ಕ ಪೇಟೆಯಾಗಿ ಧಾರ್ಮಿಕ ಕೇಂದ್ರವಾಗಿಯೇ ಗುರುತಿಸಿಕೊಂಡ ಉಡುಪಿಯು ನಗರವಾಗಿ ಮಾರ್ಪಡುವುದಕ್ಕೆ ಇಲ್ಲಿಯ ಶಾಲಾಕಾಲೇಜುಗಳು, ಸರಕಾರಿ ಕಛೇರಿಗಳು ತಮ್ಮ ಪಾಲಿನ ಕೊಡುಗೆಯನ್ನು ನೀಡುತ್ತಿದ್ದಂತೆಯೇ ಉಡುಪಿ ರಥಬೀದಿಯು ಕೇವಲ ಆಸ್ತಿಕರ ಬೀದಿಯಾಗುಳಿಯದೇ ಅದು ವಿಚಾರವಂತರ ತಂಗುದಾಣವಾಗಿ ಪರಿವರ್ತಿತವಾಯಿತು. ಇದೇ ಬೀದಿಯ ಒಂದೆಡೆಯಲ್ಲಿ ನಿಂತು ವಿವಿಧ ವಯೋಮಾನದ ಜಿಜ್ಞಾಸುಗಳು ಸಂಜೆಯ ಒಂದಿಷ್ಟು ಹೊತ್ತು ಊರಿನ–ದೇಶದ ಆಗುಹೋಗುಗಳ ಕುರಿತಾಗಿ ಚರ್ಚಿಸಿ, ಮನೆಗೆ ಮರಳುತ್ತಿದ್ದ ವಿವರಗಳು ನಾ. ಮೊಗಸಾಲೆಯವರ ಆತ್ಮಚರಿತ್ರೆ (ಬಯಲಬೆಟ್ಟ ಪು.250)ಯಲ್ಲಿ ಉಲ್ಲೇಖಗೊಂಡಿವೆ. 1981ರ ಸುಮಾರಿಗೆ ಇದೇ ಸ್ಥಳದಲ್ಲಿ ಮತ್ತೊಂದು ಹೊಸ ಸಾಹಿತ್ಯ ಕೂಟ ಹುಟ್ಟಿಕೊಂಡಿತು. ಅದೇ **'ರಥಬೀದಿ ಗೆಳೆಯರು'** ಎಂಬ ಸಂಸ್ಥೆ. ಈ ಸಂಸ್ಥೆಗೆ ಕಛೇರಿ ಇರಲಿಲ್ಲ. ರಥಬೀದಿಯೇ ಅದರ ಕಛೇರಿ. ಆದರೂ ಅರ್ಥಶಾಸ್ತ್ರಜ್ಞ, ಪರಿಸರವಾದಿ ಮತ್ತು ಚಿಂತಕ ಶ್ರೀ ನಿ. ಮುರಾರಿ ಬಲ್ಲಾಳ ಮತ್ತು ಪ್ರಾಧ್ಯಾಪಕ ಮತ್ತು ವಿಮರ್ಶಕ, ಮುರಳೀಧರ ಉಪಾಧ್ಯ ಹಿರಿಯಡ್ಕ ಹಾಗೂ ಪ್ರಾಧ್ಯಾಪಕ ಕೆ.ಎಸ್. ಕೆದ್ಲಾಯರೇ ಮೊದಲಾದವರ ಉತ್ಸಾಹದಿಂದ ಈ 'ರಥಬೀದಿ ಗೆಳೆಯರು' ಎಂಬ ಸಂಘಟನೆಯು ರಾಷ್ಟ್ರಮಟ್ಟದ ವಿಚಾರ ಸಂಕಿರಣಗಳನ್ನು ನಾಲ್ಕಾರು ಬಾರಿ ಉಡುಪಿಯಲ್ಲಿ ಸಂಘಟಿಸಿತ್ತು. ಇದೇ ರಥಬೀದಿಯು ನಾ. ಮೊಗಸಾಲೆಯವರ ಸಾಹಿತ್ಯ ಬೆಳವಣಿಗೆಗೆ ಪ್ರೇರಣೆ ನೀಡಿದ ಮೂಲಸ್ಥಳ ಎನ್ನುವುದನ್ನು ತಮ್ಮ ಆತ್ಮಚರಿತ್ರೆಯಲ್ಲಿ ಹೇಳಿಕೊಂಡಿದ್ದಾರೆ.

ಉಡುಪಿ ನಗರದ ಆಸುಪಾಸಿನ ಶಿಕ್ಷಣಸಂಸ್ಥೆಗಳ, ಹಣಕಾಸು ಸಂಸ್ಥೆಗಳ ಸರಕಾರಿ ಹಾಗೂ ಖಾಸಗೀ ಕಛೇರಿಯ ಸಿಬ್ಬಂದಿಗಳು ಇದರ ಸದಸ್ಯರುಗಳಾಗಿದ್ದು, ತಮ್ಮ ಪರಿಸರದ ಸಾಂಸ್ಕೃತಿಕ ಕಾಳಜಿಯನ್ನು, ಸಾಂಸ್ಕೃತಿಕ ಹಾಗೂ ಸಾಹಿತ್ಯಕ ಚಟುವಟಿಕೆಗಳ ಮೂಲಕ ಅಭಿವ್ಯಂಜಿಸುವುದಕ್ಕಾಗಿಯೇ ಈ ಸಂಘಟನೆಯನ್ನು 1981ರಲ್ಲಿ ಅಸ್ತಿತ್ವಕ್ಕೆ ತಂದರು.

**ನಿರ್ವಹಿಸಿದ ಚಟುವಟಿಕೆಗಳು:**

ಈ ಸಂಸ್ಥೆಯು ಇತರ ಸಂಸ್ಥೆಗಳ ಸಹಕಾರದಿಂದ ಏರ್ಪಡಿಸಿದ ಚಟುವಟಿಕೆಗಳು ಹೀಗಿವೆ: ಹಕ್ಸರ್ ವರದಿ ಕುರಿತ ಚಿಂತನಗೋಷ್ಠಿ, ನೆಹರೂ ಬದುಕು-ಚಿಂತನಗೋಷ್ಠಿ, ಗಾಂಧಿ-ಆಧುನಿಕ-ಜಾಗತಿಕ ಸಂಸ್ಕೃತಿಯ ಮರುಚಿಂತನೆ ಮುಂತಾದ ವಿಚಾರಗೋಷ್ಠಿಗಳಲ್ಲದೆ ಕರ್ನಾಟಕ ಭೂಪಟದಲ್ಲಿ ವಿಶಿಷ್ಟವಾಗಿ ಗುರುತಿಸಿಕೊಂಡು ಪಾಜಕ-ಪರಿಸರವನ್ನು ಬಂಡೆ ಒಡೆಯುವುದರ ಮೂಲಕ ಕಲುಷಿತಗೊಳಿಸುತ್ತಿರುವ ಕುರಿತು ಹೋರಾಟವನ್ನು ನಡೆಸಿ, ಯಶಸ್ಸನ್ನು ಕಂಡಿದೆ.

ಸಾಂಸ್ಕೃತಿಕ ಕಾರ್ಯಕ್ರಮಗಳ ಕುರಿತು ತಮ್ಮದೇ ಆದ ನಿಲುವು ಮತ್ತು ಧೋರಣೆಯನ್ನು ಹೊಂದಿದ ಸಂಘಟನೆಯು ರಾಜ್ಯದ ಹೊರಗಿನ ನಾಟಕ ಸಂಘಗಳನ್ನು ಆಹ್ವಾನಿಸಿ, ನಾಟಕಪ್ರದರ್ಶನಕ್ಕೆ ಏರ್ಪಾಟು ಮಾಡಿದೆ. ರಾಜ್ಯದ ಮಾತ್ರವಲ್ಲದೆ ದೇಶದ ವಿವಿಧ ಭಾಗದಲ್ಲಿರುವ ಜನಪರ ಕಾಳಜಿಯ ಚಿಂತಕರನ್ನು ವೇದಿಕೆಯ ಮೂಲಕ ಆಹ್ವಾನಿಸಿ-ಪ್ರಚಲಿತ ವಿದ್ಯಮಾನಗಳ ಕುರಿತು ವಾಗ್ವಾದ-ವಿಚಾರಸಂಕಿರಣಗಳನ್ನು ಏರ್ಪಡಿಸಿದೆ. ಜನಪ್ರತಿನಿಧಿಗಳೊಡನೆ ನೇರ ಮುಖಾಮುಖಿಯಾಗಿದೆ. ವಿದ್ಯಾರ್ಥಿಗಳಲ್ಲಿ ಪ್ರದರ್ಶನಕಲೆಯಾದ ನಾಟಕ, ಯಕ್ಷಗಾನ, ಭರತನಾಟ್ಯ ಮುಂತಾದವುಗಳ ಕುರಿತು ಸ್ಪಷ್ಟ ಅರಿವು ಹಾಗೂ ಪ್ರೇರಣೆಯನ್ನು ನೀಡಲು ರಾಷ್ಟ್ರಮಟ್ಟದಲ್ಲಿ ಗುರುತಿಸಿಕೊಂಡ ಕಲಾವಿದರನ್ನು ಉಡುಪಿಗೆ ಕರೆಯಿಸಿ, ಸಾಂಸ್ಕೃತಿಕ ಕಾರ್ಯಕ್ರಮಗಳನ್ನು ನೀಡಿದೆ. ವೇದಿಕೆಯ ಈ ಕ್ರಿಯಾಶೀಲತೆ ಮತ್ತು ಸಾಂಸ್ಕೃತಿಕ ಕಾಳಜಿಯನ್ನು ಗುರುತಿಸಿದ ಉಡುಪಿಯ ಪೇಜಾವರ ಮಠದ ಶ್ರೀ ವಿಶ್ವೇಶತೀರ್ಥ ಶ್ರೀಪಾದರು ರಥಬೀದಿ ಗೆಳೆಯರ ಸಭೆ ಸಮಾಲೋಚನೆಗಾಗಿ ತಮ್ಮ ಮಠಕ್ಕೆ ಸೇರಿದ ಒಂದು ಕೋಣೆಯನ್ನು ಸಂಘಟನೆಯ ಕಛೇರಿಗಾಗಿ ಬಾಡಿಗೆ ರಹಿತವಾಗಿ ಬಿಟ್ಟುಕೊಟ್ಟು ವೇದಿಕೆಯ ಉದ್ದೇಶವನ್ನು ಬೆಂಬಲಿಸಿದ್ದಾರೆ. "ಉಡುಪಿಯ ಸಾಂಸ್ಕೃತಿಕ ಸಂಘಟನೆಗಳ ಸರಣಿಯಲ್ಲಿ ರಥಬೀದಿ ಗೆಳೆಯರು ಸಂಸ್ಥೆಯು ಈಚಿನದು. 1981ರಲ್ಲಿ ಎಳೆಯ ಉತ್ಸಾಹಿಗಳಿಂದ ಪ್ರಾರಂಭಗೊಂಡ ಈ ಸಂಸ್ಥೆಯು ಕಳೆದ 15 ವರ್ಷಗಳಿಂದ ತನ್ನ ಚಟುವಟಿಕೆಗಳ ಮೂಲಕ ಉಡುಪಿಯ ಜನಸಮುದಾಯದಲ್ಲಿ ಗಣ್ಯತೆಯನ್ನು ಪಡೆದುಕೊಂಡಿದೆ"(ಸಂ: ಮುರಾರಿ ಬಲ್ಲಾಳ ನಿ., 1989, ಪು-95) ಎಂದು ಕೆ.ವಿ. ಸುಬ್ಬಣ್ಣ ಅವರು ಸಂಘದ ಕುರಿತು ತನ್ನ ಮೆಚ್ಚುಗೆಯ ನುಡಿಗಳನ್ನಾಡಿದ್ದಾರೆ. ಸಂಸ್ಥೆಯ ಕೇಂದ್ರ ಚೇತನವಾಗಿದ್ದ ಡಾ. ನಿ. ಮುರಾರಿ ಬಲ್ಲಾಳರು, ಸ್ಥಾಪಕ ಕಾರ್ಯದರ್ಶಿಯಾಗಿದ್ದ ಪ್ರೊ. ಕೆ. ಎಸ್. ಕೆದ್ಲಾಯ ಅವರು ಅನಿರೀಕ್ಷಿತವಾಗಿ ಅಗಲಿದ ಕಾರಣ ಸಂಸ್ಥೆಯ ಚಟುವಟಿಕೆಗಳ ವೇಗಕ್ಕೆ ಕಡಿವಾಣ ಹಾಕಿದಂತಾಯಿತು. ಮುಂಚೂಣಿಯ ನಾಯಕರಿಬ್ಬರು ನೇಪಥ್ಯಕ್ಕೆ ಸರಿದ ಕಾರಣ ವೇದಿಕೆಯ ಉದ್ದೇಶಗಳನ್ನರಿತು ಆಗಲೇ ಸಕ್ರಿಯರಾಗಿದ್ದ ಪ್ರೊ. ಮುರಳೀಧರ ಉಪಾಧ್ಯರು ಇಬ್ಬರ ಶಕ್ತಿಯನ್ನು ಒಬ್ಬರೇ ಭರಿಸಬೇಕಾಗಿ ಬಂದಿದೆ. ಇತ್ತೀಚೆಯ ವರ್ಷಗಳಲ್ಲಿ ಪಟ್ಟರ್ ಅವರಂತಹ ವಿಚಾರವಾದಿಗಳನ್ನು ಅಲ್ಲದೇ ನುರಿತ ಕಲಾವಿದರನ್ನು ಚಿಂತಕರನ್ನೂ ಆಹ್ವಾನಿಸಿ, ಕಾರ್ಯಕ್ರಮಗಳನ್ನು ಹಮ್ಮಿಕೊಳ್ಳುತ್ತಾ, ನೂತನ ವೈಚಾರಿಕತೆಯನ್ನು ಹೊಸತಲೆಮಾರಿನ ಯುವಕರಿಗೆ ಪರಿಚಯಿಸುವ ಕಾರ್ಯಚಟುವಟಿಕೆಗಳಲ್ಲಿ ರಥಬೀದಿ ಗೆಳೆಯರು ಸಕ್ರಿಯರಾಗಿದ್ದಾರೆ. ಪ್ರಜಾವಾಣಿ ದೀಪಾವಳಿ ವಾರ್ಷಿಕ ವಿಶೇಷಾಂಕ 2015ರ

ಸಂಚಿಕೆಯಲ್ಲಿ 'ಉಡುಪಿಯಲ್ಲೊಂದು ಸ್ವಪ್ನದ ಹೊಳೆ' ಎಂಬ ಲೇಖನದಲ್ಲಿ ಮುರಳೀಧರ ಉಪಾಧ್ಯ ಹಿರಿಯಡ್ಕ ಅವರು ಡಿ.ಆರ್. ನಾಗರಾಜ ಅವರು ರಥಬೀದಿ ಗೆಳೆಯರ ಕುರಿತು ಹೇಳಿದ ಹೇಳಿಕೆಯನ್ನು ಹೀಗೆ ದಾಖಲಿಸಿದ್ದಾರೆ. "ಉಡುಪಿಯ ಏಳುನೂರು ವರ್ಷಗಳ ಇತಿಹಾಸದಲ್ಲಿ ರಥಬೀದಿ ಗೆಳೆಯರದ್ದು ಹೊಸ ರೀತಿಯ ಧ್ವನಿ"ಎಂದು ಡಾ. ಡಿ. ಆರ್. ನಾಗರಾಜ ಅವರ ಪ್ರಶಂಸೆಗೆ ಒಳಗಾದ ಅಗ್ಗಳಿಕೆ ಉಡುಪಿಯ ರಥಬೀದಿ ಗೆಳೆಯರ ಸಂಘಟನೆಯದು.

**2. ಈ) ಚೇತನ ಕ್ರೀಡಾ ಮತ್ತು ಕಲಾರಂಗ (ರಿ.), ಕೋಟೇಶ್ವರ:**

**ಹಿನ್ನೆಲೆ:** 1971–72ನೇ ಶೈಕ್ಷಣಿಕ ವರ್ಷದಲ್ಲಿ ಕುಂದಾಪುರದ ಭಂಡಾರ್ಕಾರ್ಸ್ ಕಾಲೇಜಿನಲ್ಲಿ ಪದವಿ ಶಿಕ್ಷಣ ಪಡೆಯುತ್ತಿದ್ದ ಕೋಟೇಶ್ವರ ಪರಿಸರದ ಕೆಲವು ಯುವಕರು ಸ್ಥಳೀಯ ಕೋಟೇಶ್ವರ ಪದವಿಪೂರ್ವ ಕಾಲೇಜಿನ ಕ್ರೀಡಾಂಗಣದಲ್ಲಿ ಸಂಜೆಯ ಹೊತ್ತು ತಮ್ಮ ಕ್ರೀಡಾಚಟುವಟಿಕೆಗಳಿಗಾಗಿ ಒಗ್ಗೂಡುತ್ತಿದ್ದರು. ಹೀಗೆ ಒಟ್ಟಾದ ಯುವಕರಲ್ಲಿ ಕೇವಲ ಕ್ರೀಡೆ ಮಾತ್ರವಲ್ಲದೇ ಸಾಹಿತ್ಯ, ಸಾಂಸ್ಕೃತಿಕ ಚಟುವಟಿಕೆಗಳಲ್ಲಿ ತೊಡಗಿಕೊಳ್ಳುವುದಕ್ಕೆ ಅನುಕೂಲವಾಗುವಂತೆ ಒಂದು ಸಂಘಟನೆಗೆ ಮುಂದಾಗುವ ಯೋಜನೆಯನ್ನು ರೂಪಿಸಿಕೊಂಡರು. ಹೀಗೆ ರೂಪಿಸಿಕೊಂಡ ಯೋಜನೆಯು ಕೆಲವೇ ದಿನಗಳಲ್ಲಿ ಕೋಟದ ವಿವೇಕ ಪದವಿಪೂರ್ವ ಕಾಲೇಜಿನ ಅಂದಿನ ಪ್ರಾಂಶುಪಾಲರ ಮಾರ್ಗದರ್ಶನದಲ್ಲಿ ಚೇತನಾ ಕ್ರೀಡಾರಂಗ ಮತ್ತು ಕಲಾರಂಗ ಎಂಬ ಹೆಸರಿನಲ್ಲಿ ಅಸ್ತಿತ್ವಕ್ಕೆ ಬಂದಿತು. ಸಂಸ್ಥೆಯಲ್ಲಿ ಹಿಂದೆ ಮತ್ತು ಈಗಲೂ ಚಟುವಟಿಕೆಯಲ್ಲಿ ಕಾರ್ಯನಿರತರಾದವರು ಬಹುತೇಕ ಮಂದಿ ಭಂಡಾರ್ಕಾರ್ಸ್ ಕಾಲೇಜಿನ ಪ್ರಾಕ್ತನ ವಿದ್ಯಾರ್ಥಿಗಳೆಂಬುವುದೇ ಈ ಸಂಘಟನೆಯ ವಿಶೇಷ.

**ಚೇತನಾ ಸಂಸ್ಥೆಯ ಚಟುವಟಿಕೆಗಳ ಸಂಕ್ಷಿಪ್ತ ಮಾಹಿತಿ:** ಕೋಟೇಶ್ವರ ಪರಿಸರದ ನಾಗರಿಕರ ಮೆಚ್ಚುಗೆಗೆ ಒಳಗಾದ ಈ ಸಂಘಟನೆಯು 1971 ರಿಂದ ನಾಟಕ ಚಟುವಟಿಕೆ, ಸಾಹಿತ್ಯ ಚಟುವಟಿಕೆ, ವಿವಿಧ ಸಾಂಸ್ಕೃತಿಕ ಚಟುವಟಿಕೆಗಳನ್ನು ಯಶಸ್ವಿಯಾಗಿ ನಿರ್ವಹಿಸಿಕೊಂಡು, ಅವಿಭಜಿತ ದ.ಕ. ಜಿಲ್ಲೆಯಲ್ಲಿ ವಿಶೇಷವಾಗಿ ಗುರುತಿಸಿಕೊಂಡಿದೆ. ನಾಟಕ ಮಾತ್ರವಲ್ಲದೇ ಈ ಪರಿಸರದ ಜೀವಂತ ಕಲೆಯಾದ ಯಕ್ಷಗಾನಕಲೆಯಲ್ಲೂ ಸಂಘಟನೆಯ ಸದಸ್ಯರು ಆಸಕ್ತರಾಗಿ ಪರಿಸರದ ಶಾಲಾವಿದ್ಯಾರ್ಥಿಗಳಿಗೆ ಯಕ್ಷಗಾನದ ತರಬೇತಿಯನ್ನು ನೀಡಿ, ಸಂಸ್ಥೆಯ ವಾರ್ಷಿಕೋತ್ಸವದಂದು ಸ್ಥಳೀಯ ವಿದ್ಯಾರ್ಥಿಗಳಿಗೆ ಯಕ್ಷಗಾನಕಾರ್ಯಕ್ರಮದಲ್ಲಿ ಪಾತ್ರಧಾರಿಗಳಾಗಿ ಭಾಗವಹಿಸುವಂತೆ ಪ್ರೇರಣೆ ನೀಡುತ್ತಾ ಬಂದಿದ್ದಾರೆ. ನವರಾತ್ರಿಯ ಮತ್ತು ಗಣೇಶೋತ್ಸವದ ಸಂದರ್ಭದಲ್ಲಿ ಚೇತನ ಸಂಸ್ಥೆಯ ವತಿಯಿಂದ ಸ್ಥಳೀಯ ದೇಗುಲದಲ್ಲಿ ಹರಿಕಥೆ, ಭರತನಾಟ್ಯ ಮುಂತಾದ ಸಾಂಸ್ಕೃತಿಕ ಕಾರ್ಯಕ್ರಮಗಳನ್ನು ಸಂಯೋಜಿಸಿ, ನಾಗರಿಕರಿಗೆ ಮನರಂಜನೆಯನ್ನು ನೀಡುವಲ್ಲಿ ಪ್ರಮುಖ ಪಾತ್ರವಹಿಸಿದೆ. ಸಾಹಿತ್ಯಕ್ಷೇತ್ರದಲ್ಲಿ ಹೆಸರು ಮಾಡಿದ ಸ್ಥಳೀಯ ಬರಹಗಾರರಿಗೆ, ಶಿಲ್ಪಕ್ಷೇತ್ರದಲ್ಲಿ (ಮರದ ಮತ್ತು ಕಲ್ಲಿನ) ಖ್ಯಾತಿಗಳಿಸಿದ ಶಿಲ್ಪಿಗಳಿಗೆ, ನಾಟಕಕ್ಷೇತ್ರದಲ್ಲಿ ಗುರುತಿಸಿಕೊಂಡ ಕಲಾವಿದರಿಗೆ, ಶಿಕ್ಷಣಸಂಸ್ಥೆಯಲ್ಲಿ ವಿದ್ಯಾರ್ಥಿಗಳಿಂದ ಗೌರವಕ್ಕೆ ಪಾತ್ರರಾದ ಶಿಕ್ಷಕರಿಗೆ, ಉನ್ನತ ಅಂಕಗಳನ್ನು ಪಡೆದ ವಿದ್ಯಾರ್ಥಿಗಳಿಗೆ ಸನ್ಮಾನಸಹಿತ ಪ್ರಶಸ್ತಿಪತ್ರಗಳನ್ನು ನೀಡುತ್ತಾ, ತನ್ನ ಜವಾಬ್ದಾರಿಯನ್ನು, ಆದರ್ಶವನ್ನು ಎತ್ತಿ ಹಿಡಿದಿದೆ.

1993ರಲ್ಲಿ ಕುಂದಾಪುರದಲ್ಲಿ ಜಿಲ್ಲಾ ಸಾಹಿತ್ಯ ಪರಿಷತ್ತಿನ ಸಹಯೋಗದೊಂದಿಗೆ ನಡೆಸಿದ ಕುಂದಾಪುರ ತಾಲೂಕು ಎರಡನೇ ಕನ್ನಡ ಸಾಹಿತ್ಯ ಸಮ್ಮೇಳನದಲ್ಲೂ ಕಲಾರಂಗದ ಸದಸ್ಯರು ಸಕ್ರಿಯವಾಗಿ ಭಾಗವಹಿಸಿ, ಸಮ್ಮೇಳನವನ್ನು ಯಶಸ್ವಿಗೊಳಿಸಿ, ಸಾಹಿತ್ಯ ಪರಿಷತ್ತಿನಿಂದ ಗುರುತಿಸಿಕೊಂಡರು. 1987ರಲ್ಲಿ ಸ್ಥಳೀಯ ಯುವಕ–ಯುವತಿಯರ ಸಾಹಿತ್ಯ

ಪ್ರತಿಭೆಯನ್ನು ಗುರುತಿಸಿ, ಗೌರವಿಸುವುದಕ್ಕಾಗಿ ತಾಲೂಕು ಯುವಜನ ಇಲಾಖೆಯು ಚೇತನದ ಸಹಕಾರದೊಂದಿಗೆ ವಿವಿಧ ಸ್ಪರ್ಧೆಗಳನ್ನು ನಡೆಸಿ, ಸಾಹಿತ್ಯಕ್ಷೇತ್ರದಲ್ಲಿ ಪ್ರತಿಭಾವಂತರೆನಿಸಿಕೊಂಡ ಯುವ ಕವಿ, ಬರಹಗಾರರಿಗೆ ಪುರಸ್ಕಾರವನ್ನು ನೀಡಿತ್ತು. ಚೇತನ ಕಲಾರಂಗವು ವಿದ್ಯಾರ್ಥಿಗಳಿಗೆ ಹಾಗೂ ನಾಗರಿಕರ ಅನುಕೂಲಕ್ಕಾಗಿ ಗ್ರಂಥಾಲಯವೊಂದನ್ನು 1980ರ ದಶಕದಲ್ಲೇ ಪ್ರಾರಂಭಿಸಿದ್ದು, ವಿದ್ಯಾರ್ಥಿಗಳು ಇದರ ಸಂಪೂರ್ಣ ಪ್ರಯೋಜನವನ್ನು ಪಡೆದುಕೊಳ್ಳುತ್ತಿದ್ದಾರೆ. ವರ್ಷಂಪ್ರತಿ ನಡೆಯುವ ವಾರ್ಷಿಕೋತ್ಸವದಲ್ಲಿ ಸಾಂಸ್ಕೃತಿಕ ಕ್ಷೇತ್ರ, ಸಾಹಿತ್ಯಕ್ಷೇತ್ರ ಹಾಗೂ ಸಾಮಾಜಿಕ ಕ್ಷೇತ್ರದಲ್ಲಿ ಗುರುತಿಸಿಕೊಂಡ ಸಾಧಕರಿಗೆ ಸಾರ್ವಜನಿಕವಾಗಿ ಸನ್ಮಾನಿಸುವ ಪರಿಪಾಠವನ್ನು ಇಂದಿಗೂ ಮುಂದುವರಿಸಿಕೊಂಡು ಬಂದಿದೆ. ಸ್ಥಾಪಕ ಸದಸ್ಯರೂ ಮತ್ತು ಈಗಿನ ಅಧ್ಯಕ್ಷರೂ ತಮ್ಮ ಅವಿರತ ನಿಸ್ವಾರ್ಥ ದುಡಿಮೆಯಿಂದಾಗಿ ಚೇತನ ಸಂಸ್ಥೆ ತನ್ನ ಯಶಸ್ಸನ್ನೂ, ಕ್ರಿಯಾಶಕ್ತಿಯನ್ನು ಕಾಯ್ದುಕೊಳ್ಳುವಲ್ಲಿ ಸಂಪೂರ್ಣ ಸಫಲಗೊಂಡಿದೆ.

**2. ಉ) ಮಿತ್ರಮಂಡಳಿ, ಕೋಟ:–** ವಕ್ವಾಡಿ ಸರಕಾರಿ ಪ್ರೌಢಶಾಲೆಯ ಕನ್ನಡ ಅಧ್ಯಾಪಕರಾಗಿ ನಿವೃತ್ತರಾದ ಶ್ರೀನಿವಾಸ ಅಡಿಗ ಎಂಬವರು ತಮ್ಮ ಪ್ರೌಢಶಾಲಾಧ್ಯಯನದ ಅವಧಿಯಲ್ಲಿ ಕೆಲವೇ ಮಂದಿ ಸ್ನೇಹಿತರೊಂದಿಗೆ ಸೇರಿ, ಕಟ್ಟಿದ ಸಂಘಟನೆಯೇ **ಕೋಟ ಮಿತ್ರಮಂಡಳಿ** ಎಂಬ ಒಕ್ಕೂಟವಾಗಿದೆ. ತಮ್ಮ ಪದವಿ ಶಿಕ್ಷಣದ ಅನಂತರ ಉದ್ಯೋಗ ನಿಮಿತ್ತ ಬೆಂಗಳೂರಿಗೆ ತೆರಳಿ ಅಲ್ಲಿ ಖಾಯಂ ಉದ್ಯೋಗದಲ್ಲಿದ್ದು, ಹುಟ್ಟೂರಿನ ಅಭಿಮಾನದಿಂದ ಪುನಃ ಊರಿಗೆ ಬಂದ ಶ್ರೀನಿವಾಸ ಅಡಿಗರು ಕೊನೆಗೂ ಅಧ್ಯಾಪಕರಾಗಿ ವಕ್ವಾಡಿ ಸರಕಾರಿ ಪ್ರೌಢಶಾಲೆಯಲ್ಲಿ ಸೇವೆಯನ್ನು ಆರಂಭಿಸಿದರು. ಪ್ರೌಢಶಾಲಾಧ್ಯಾಪಕರಾಗಿ ಸೇವೆಯಲ್ಲಿರುತ್ತಾ ಅಡಿಗರು ತಮ್ಮ ಕಾಲೇಜು ಮತ್ತು ಹೈಸ್ಕೂಲು ಶಿಕ್ಷಣ ಸಂದರ್ಭದ ಸಹಪಾಠಿಗಳನ್ನೇ ಕೂಡಿಕೊಂಡು ಮಿತ್ರಮಂಡಳಿ ವತಿಯಿಂದ ನಾಟಕ ಚಟುವಟಿಕೆಗಳಲ್ಲಿ ಸಕ್ರಿಯರಾಗತೊಡಗಿದರು. ತಲಾ 25 ರೂಪಾಯಿಗಳನ್ನು ಸಾರ್ವಜನಿಕರಿಂದ ಸಂಗ್ರಹಿಸಿ–ಹಣ ನೀಡಿದವರಿಗೆ ವಾರ್ಷಿಕ ಮೂರು ನಾಟಕಗಳಿಗೆ ಪ್ರವೇಶ ನೀಡುವ ಹೊಸದೊಂದು ಪರಂಪರೆಯನ್ನು ಹುಟ್ಟುಹಾಕಿ, ಸ್ಥಳೀಯ ಕಲಾಭಿಮಾನಿ ಸಹೃದಯರ ಮೆಚ್ಚುಗೆಗೆ ಪಾತ್ರರಾದರು. ಆಸುಪಾಸಿನ ಊರಿನ ವಿಶೇಷ ಧಾರ್ಮಿಕ, ಸಾಂಸ್ಕೃತಿಕ ಸಮಾರಂಭಗಳಿಗೂ ಇದೇ ನಾಟಕ ತಂಡವನ್ನು ಆಹ್ವಾನಿಸಿ, ನಾಟಕವೇರ್ಪಡಿಸುವ ಮೂಲಕ 'ಮಿತ್ರಮಂಡಳಿ' ಎಂಬ ಹೆಸರು ಕೋಟ ಪರಿಸರದಲ್ಲಿ ಸ್ಥಾಯಿಯಾಯಿತು. ಹವ್ಯಾಸಿ ರಂಗಭೂಮಿಯ ಕಲಾವಿದರುಗಳಾದರೂ, ವೃತ್ತಿ ರಂಗಭೂಮಿಯ ಕಲಾವಿದರಂತೆ ಅಕ್ಕಪಕ್ಕದ ಊರುಗಳ ಶಾಲಾ ಕಟ್ಟಡದ ಸಹಾಯಾರ್ಥ ನಾಟಕವನ್ನಾಡಿ, ಪ್ರೇಕ್ಷಕರ ಮನವನ್ನು ರಂಜಿಸಿದ್ದಲ್ಲದೇ ಸ್ಥಳೀಯ ಶಾಲೆಗಳ ಅಭಿವೃದ್ಧಿಯಲ್ಲೂ ಸಹಕರಿಸಿದರು. ಪರಿಸರದ ಮಂದಿಯ ಮೆಚ್ಚುಗೆಯಿಂದಾಗಿ ಮುಂದೆ ರಾಜ್ಯಮಟ್ಟದ ನಾಟಕಸ್ಪರ್ಧೆಯಲ್ಲೂ ಭಾಗವಹಿಸುವ ಅವಕಾಶವನ್ನು ಪಡೆದು ಬಹುಮಾನವನ್ನು ಗಿಟ್ಟಿಸಿಕೊಳ್ಳುವುದರೊಂದಿಗೆ ರಾಜ್ಯಮಟ್ಟದಲ್ಲೂ ಸುದ್ದಿಯಾದರು.

ಮಿತ್ರಮಂಡಳಿಯ ಹೆಸರು ಕೋಟ ಪರಿಸರದಲ್ಲಿ ಸ್ಥಿರವಾಗುತ್ತಿದ್ದಂತೆಯೇ ಸ್ಥಳೀಯ ಕಾಲೇಜು ಉಪನ್ಯಾಸಕರು, ಬ್ಯಾಂಕ್ ನೌಕರರು, ಶಾಲಾ ಶಿಕ್ಷಕರು ಒಬ್ಬೊಬ್ಬರಾಗಿ ಮಿತ್ರಮಂಡಳಿಯ ಸದಸ್ಯರಾಗಿ ಸೇರ್ಪಡೆಗೊಂಡರು. ಸದಸ್ಯರ ಸಂಖ್ಯೆ ಹೆಚ್ಚಿದಷ್ಟೂ ಸಂಘಟನೆಯ ಶಿಸ್ತು ಮತ್ತು ಬದ್ಧತೆ ಮತ್ತಷ್ಟು ಗಟ್ಟಿಯಾಯಿತು. ಮಿತ್ರಮಂಡಳಿಯ ಬದ್ಧತೆಗೆ ಮೆಚ್ಚಿದ ಎಚ್.ಎಲ್.

ನಾಗೇಗೌಡರು (ಜನಪದ ಅಕಾಡೆಮಿಯ ಅಧ್ಯಕ್ಷರು) 1985ರಲ್ಲಿ ಕೋಟದಲ್ಲಿಯೇ ಜಾನಪದ ಸಮ್ಮೇಳನವನ್ನು ಆಯೋಜಿಸಲು ಪ್ರೋತ್ಸಾಹ ನೀಡಿದರು. ಈ ಜಾನಪದ ಸಮ್ಮೇಳನದ ಯಶಸ್ಸು ಮಿತ್ರಮಂಡಳಿಗೆ ಮತ್ತಷ್ಟು ಗೌರವವನ್ನು ತಂದುಕೊಟ್ಟಿತು.

1991ರಲ್ಲಿ ಶಿವರಾಮ ಕಾರಂತರ 90ನೇ ಹುಟ್ಟುಹಬ್ಬವನ್ನು 'ಕಾರಂತ 90' ಶೀರ್ಷಿಕೆಯಲ್ಲಿ ಸಡಗರ ಸಂಭ್ರಮದಿಂದ ಆಚರಿಸಿ, ಕರ್ನಾಟಕದ ಕಾರಂತಾಭಿಮಾನಿಗಳ ವಿಶೇಷ ಮನ್ನಣೆಗೆ ಪಾತ್ರವಾದರು. ಕೋಟ ವಿವೇಕ ಪದವಿಪೂರ್ವ ಕಾಲೇಜಿನ ವಠಾರದಲ್ಲಿ ನಡೆದ ಈ ಸಮಾರಂಭದಲ್ಲಿ ವಿದ್ವಾಂಸರು ಮಂಡಿಸಿದ ಪ್ರಬಂಧವನ್ನು ಮಿತ್ರಮಂಡಳಿಯು **'ಎಲ್ಲರಂತಲ್ಲ ಕಾರಂತ'** ಎಂಬ ಶೀರ್ಷಿಕೆಯಲ್ಲಿ ಕೃತಿಯೊಂದನ್ನು ಸಂಪಾದಿಸಿ, 1992ರಲ್ಲಿ ಪ್ರಕಟಿಸಿದರು. ಕಾರಂತರ ನಿಧನವರ್ಷ ತಿಂಗಳಿಗೊಂದರಂತೆ 12 ಸಾಹಿತ್ಯ ಮಾಸಿಕಗಳನ್ನು ವರ್ಷಪರ್ಯಂತ ಗಣ್ಯ ಸಾಹಿತಿಗಳ ಉಪನ್ಯಾಸಗಳ ಕಾರ್ಯಕ್ರಮಗಳನ್ನು ರೂಪಿಸಿ, ಕಾರಂತರಿಗೆ ವಿಶಿಷ್ಟ ರೀತಿಯ ಗೌರವ ತೋರಿಸಿದರು.

1998ರಿಂದ ಕಾರಂತರ ಜನ್ಮದಿನದಂದು ಮಿತ್ರಮಂಡಳಿಯು ಮಂಗಳೂರು ವಿಶ್ವವಿದ್ಯಾನಿಲಯ ವ್ಯಾಪ್ತಿಯ ವಿದ್ಯಾರ್ಥಿ ಸಾಹಿತ್ಯ ಸಮ್ಮೇಳನವನ್ನು ನಡೆಸಿಕೊಂಡು ಬರುತ್ತಿದ್ದು, ವಿದ್ಯಾರ್ಥಿಗಳಲ್ಲಿ ಕಾಲೇಜು ಶಿಕ್ಷಣದ ಅವಧಿಯಲ್ಲಿಯೇ ಸಾಹಿತ್ಯದ ಕುರಿತಾಗಿ ಒಲವನ್ನು ಮೂಡಿಸುವುದು ಈ ಸಮ್ಮೇಳನದ ಮೂಲ ಆಶಯವಾಗಿದೆ.

**ಅವ್ಯವಸ್ಥಿತ ಸಂಘಟನೆಯ ವ್ಯವಸ್ಥಿತ ಕಾರ್ಯಕ್ರಮಗಳು:** ಮಿತ್ರಮಂಡಳಿ ಎಂಬ ಸಾಹಿತ್ಯ ಸಂಘಟನೆಗೆ ಯಾವುದೇ ನಿರ್ದಿಷ್ಟ ವ್ಯವಸ್ಥಿತ ಸ್ವರೂಪವಿಲ್ಲ. ನಿಯಮ ನಿಬಂಧನೆಗಳಿಲ್ಲ. ಸದಸ್ಯರಿಗೆ ಪ್ರವೇಶ ಶುಲ್ಕವಿಲ್ಲ. ಅಧಿಕೃತ ಕಛೇರಿ ಇಲ್ಲ. ವರ್ಷದಲ್ಲಿ ಇಂತಿಷ್ಟೇ ಸಭೆ ಸಮಾಲೋಚನೆ ಎಂಬ ನಿಯಮಗಳಿಲ್ಲ. ಆದರೆ ಇದು ಸಮಾನ ಮನಸ್ಸಿನ ವಿವಿಧ ವಯೋಮಾನದ ಈ ಪರಿಸರದ ನಾಗರಿಕ ಸಹೃದಯರು ತಮ್ಮ ಬಿಡುವಿನ ಅವಧಿಯಲ್ಲಿ ತಮ್ಮ ಆಸಕ್ತಿ ಮತ್ತು ಅಭಿರುಚಿಯನ್ನು ನಿರ್ದಿಷ್ಟವಾದ ಸೂತ್ರದಲ್ಲಿ ಅಭಿವ್ಯಂಜಿಸಲು ತಮಗೆ ತಾವೇ ಸ್ವ ಇಚ್ಛೆಯಿಂದ ಗುಂಪು ಕೂಡಿದ ಒಂದು ಒಕ್ಕೂಟವಾಗಿದೆ. ಕಾರ್ಯಕ್ರಮದ ಮೊದಲು ಯಾವ ಪೂರ್ವತಯಾರಿ ಇಲ್ಲದೆಯೂ ಒಟ್ಟಾಗಿ ತೆಗೆದುಕೊಳ್ಳುವ ಅಲಿಖಿತ ತೀರ್ಮಾನದಿಂದ ಎಲ್ಲ ಚಟುವಟಿಕೆಗಳೂ ಸಾಂಗವಾಗಿ ನೆರವೇರುತ್ತಾ ಬಂದಿವೆ. ಮಿತ್ರಮಂಡಳಿಯ 50 ವರ್ಷದ ಯಶಸ್ವೀ ಚಟುವಟಿಕೆಯು ಆ ಪರಿಸರದ ಜನರ ಪ್ರೋತ್ಸಾಹ ಮತ್ತು ಬೆಂಬಲಕ್ಕೆ ಕಾರಣವಾಗಿದೆ.

ಮಿತ್ರಮಂಡಳಿಯು ಹಮ್ಮಿಕೊಳ್ಳುವ ಕಾರ್ಯಕ್ರಮಗಳಿಗೆ ಹಾಜರಾಗುವವರಿಗೆ ಇದರ ಸದಸ್ಯರಾಗಿರುವುದು, ಹಾಜರಾದ ಸದಸ್ಯರ ಕಾರ್ಯಕ್ರಮದ ವ್ಯವಸ್ಥೆಯ ಖರ್ಚನ್ನು ನಿಭಾಯಿಸುವುದೇ ಮಿತ್ರಮಂಡಳಿಯ ಸಂಕ್ಷಿಪ್ತ ಕಾರ್ಯವೈಖರಿಯಾಗಿದೆ. ಸುಮಾರು 50 ವರ್ಷದ ಇತಿಹಾಸವುಳ್ಳ ಈ ಸಂಘಟನೆಯ ವಯೋವೃದ್ಧ ಸದಸ್ಯರು ತಮ್ಮ ಹಿಂದಿನ ಉತ್ಸಾಹದೊಂದಿಗೆ ಸಾಹಿತ್ಯ ಚಟುವಟಿಕೆಗಳನ್ನು ನಿರ್ವಹಿಸಿಕೊಂಡು ಬರುತ್ತಿದ್ದಾರೆ. ಕೇವಲ ಭಾಷಣ/ಉಪನ್ಯಾಸ ಮಾತ್ರವಲ್ಲದೆ ವಿಚಾರಸಂಕಿರಣ, ಕೃತಿಬಿಡುಗಡೆ ಎಂಬ ವಿವಿಧ ಚಟುವಟಿಕೆಯಲ್ಲಿ ನಿರಂತರವಾಗಿ ತೊಡಗಿಸಿಕೊಂಡಿರುವುದನ್ನು ಅವರ ಪತ್ರಿಕಾ ದಾಖಲೆಗಳ ಮತ್ತು ಛಾಯಾಚಿತ್ರ ಸಂಗ್ರಹದ ಮೂಲಕ ತಿಳಿದುಬರುತ್ತದೆ. ಆದರೆ ಇನ್ನು ಮುಂದಿನ ಕಾಲಘಟ್ಟದಲ್ಲಿ ಯುವ ತಲೆಮಾರಿನ ಸ್ಥಳೀಯ ಸಹೃದಯರು ಈ ಸಂಘಟನೆಯನ್ನು ಕಾಲಧರ್ಮಕ್ಕನುಸರಿಸಿ, ಪುನಃಸಂಘಟಿಸದೇ ಹೋದರೆ ಈ ಸಂಘಟನೆಯು ತನ್ನ ಚಟುವಟಿಕೆಗಳಿಗೆ ಕೊನೆಯನ್ನು ಹಾಕಬೇಕಾದ ಎಲ್ಲ ಸಾಧ್ಯತೆಗಳು ಇವೆ.

2. ಊ)**ರಂಗಭೂಮಿ (ರಿ.), ಉಡುಪಿ:** 20ನೇ ಶತಮಾನದ ಉತ್ತರಾರ್ಧದಲ್ಲಿ ಉಡುಪಿಯ ಸಾಂಸ್ಕೃತಿಕ ಸಂಘಟನೆಯಲ್ಲಿ ಅತಿ ಮುಖ್ಯವಾಗಿ ಗುರುತಿಸಿಕೊಂಡ ಸಂಘಟನೆಯೇ 'ರಂಗಭೂಮಿ' ಎಂಬ ಕಲಾಕೂಟವಾಗಿದೆ. ಈ ಸಾಂಸ್ಕೃತಿಕ ವೇದಿಕೆಯು ಅಸ್ತಿತ್ವಕ್ಕೆ ಬಂದು ಮೂವತ್ತು ವರ್ಷಗಳು ಪೂರ್ಣಗೊಂಡಿದ್ದು, ಸಂಸ್ಥೆಯು ತನ್ನ ಬೆಳ್ಳಿಹಬ್ಬವನ್ನು 40ರ ಸಂಭ್ರಮವನ್ನು (2004–05) ಆಚರಿಸಿಕೊಂಡಿದ್ದು, ಈಗಾಗಲೇ ಎರಡು ಸ್ಮರಣಸಂಚಿಕೆಗಳನ್ನು ಪ್ರಕಟಿಸಿರುತ್ತದೆ. ರಂಗಭೂಮಿಯು ಸ್ಥಾಪನೆಯಾಗಿ ಯಶಸ್ವಿಯಾಗಿ ಇಪ್ಪತ್ತೈದನೇ ವರ್ಷವು ಪೂರ್ಣಗೊಂಡ ಸಂದರ್ಭದಲ್ಲಿ ರಜತೋತ್ಸವವನ್ನು ಆರಂಭಿಸಿ, ಆಚರಣೆಯ ಸಂಭ್ರಮದ ನೆನಪನ್ನು ರಜತೋತ್ಸವ ಸಂಚಿಕೆಯಲ್ಲಿ ದಾಖಲಿಸಲಾಗಿದೆ. ರಂಗಭೂಮಿಯು ತನ್ನ ನಲುವತ್ತು ವರ್ಷವನ್ನು ಯಶಸ್ವಿಯಾಗಿ ಪೂರ್ಣಗೊಳಿಸಿದ ಪ್ರಯುಕ್ತ ನಲುವತ್ತರ ಸಂಭ್ರಮವನ್ನು ಅರ್ಥಪೂರ್ಣವಾಗಿ ಆಚರಿಸಿ, 'ಕಲಾಂಜಲಿ' ಎಂಬ ಸ್ಮರಣಸಂಚಿಕೆಯನ್ನು ಹೊರತಂದಿರುತ್ತಾರೆ.

**ರಂಗಭೂಮಿ (ರಿ.) ಎಂಬ ಸಾಂಸ್ಕೃತಿಕ ಸಂಘಟನೆಯನ್ನು ಎರಡು ಕಾರಣಗಳಿಗಾಗಿ ಗುರುತಿಸಬೇಕಾಗಿದೆ. ಆ ಕಾರಣಗಳು ಹೀಗಿವೆ:**

1. ಅದು ನಡೆಸುವ ರಂಗ ತರಬೇತಿ ಶಿಬಿರ ಮತ್ತು ಗೋಷ್ಠಿ.
2. ನಾಟಕ ಪ್ರದರ್ಶನದ ಪೂರ್ವಭಾವಿಯಾಗಿ ನಡೆಸುವ ಸಂಸ್ಮರಣ ಕಾರ್ಯಕ್ರಮಗಳು.

**ರಂಗಭೂಮಿಯ ರಂಗ ತರಬೇತಿಯ ಶಿಬಿರ:** ಸಾಂಸ್ಕೃತಿಕ ಚಟುವಟಿಕೆಯನ್ನು ನಿರ್ವಹಿಸುವ ಸಂಘಟಕರು ಹಾಗೂ ರಂಗ ಕಲಾವಿದರು ಕಲಾತ್ಮಕ ಅಭಿವ್ಯಕ್ತಿಯ ಕಡೆಗೆ ಪ್ರಾಮುಖ್ಯ ನೀಡದೆ ಪ್ರೇಕ್ಷಕರನ್ನು ರಂಜಿಸುವುದೇ ತಮ್ಮ ಉದ್ದೇಶವೆಂದು ತಿಳಿದಾಗ ಪ್ರದರ್ಶನಕ್ಕಾಗಿ ಆಯ್ಕೆ ಮಾಡಿಕೊಂಡ ಸಾಹಿತ್ಯಪಠ್ಯದ ಮೌಲ್ಯವು ಗೌಣವಾಗುತ್ತದೆ. ಸಾಂಸ್ಕೃತಿಕ ಚಟುವಟಿಕೆಯನ್ನು ಪ್ರದರ್ಶಿಸುವ ಬಹುತೇಕ ನಟರು ವೇದಿಕೆಯ ಮೇಲೆ ಬಂದು, ಕೀಳು ಅಭಿರುಚಿಯನ್ನು ಉತ್ತೇಜಿಸುವ ತಮ್ಮ ಮಾತು ಮತ್ತು ನಟನೆಯಿಂದ ಜನರಿಂದ ಮೆಚ್ಚುಗೆ ಪಡೆಯಲು ಪ್ರಯತ್ನಿಸುತ್ತಾರೆ. ರಂಗಭೂಮಿಯ ಪದಾಧಿಕಾರಿಗಳು ಈ ಪ್ರವೃತ್ತಿಯನ್ನು ನಿವಾರಿಸಲು ನಟರಾಗಿ, ರಂಗದಲ್ಲಿ ಕಾಣಿಸಿಕೊಳ್ಳುವ ಕಲಾವಿದರಿಗೆ ಸೂಕ್ತ ತರಬೇತಿಯನ್ನು ನೀಡುವ ಪರಿಪಾಠವನ್ನು ಇರಿಸಿಕೊಂಡು ಬಂದಿರುವುದು ರಂಗಭೂಮಿಯ ವತಿಯಿಂದ ಪ್ರಕಟವಾದ ರಜತಮಹೋತ್ಸವ ಸಂಚಿಕೆಯಿಂದ ತಿಳಿದುಬರುತ್ತದೆ. ರಂಗಭೂಮಿಯ ಪ್ರಥಮ ರಂಗ ತರಬೇತಿ ಶಿಬಿರವು 10.05.1985 ರಿಂದ 31.05.1985ರ ವರೆಗೆ 22 ದಿನಗಳ ಕಾಲಾವಧಿಯಲ್ಲಿ ಆಯೋಜಿಸಲಾಗಿದ್ದು, ಈ ಶಿಬಿರದ ಪ್ರಧಾನನಿರ್ದೇಶಕರಾಗಿ ಪಿ. ಗಂಗಾಧರ ಸ್ವಾಮಿಯವರು ಕರ್ತವ್ಯ ನಿರ್ವಹಿಸಿದ್ದರು ಎಂಬ ಉಲ್ಲೇಖ 'ರಜತಕಲಾಂಜಲಿ' ಸ್ಮರಣಸಂಚಿಕೆ 2004–05ರಲ್ಲಿ ದಾಖಲಾಗಿದೆ. ಈ ಪ್ರಥಮ ಶಿಬಿರದಲ್ಲಿ ಉಪನ್ಯಾಸ ನೀಡಿದ ಹದಿನೈದು ಮಂದಿ ಸಂಪನ್ಮೂಲ ವ್ಯಕ್ತಿಗಳು ಹಾಗೂ ಅವರ ಉಪನ್ಯಾಸದ ವಿಷಯಗಳನ್ನು ರಜತಕಲಾಂಜಲಿಯ ಪುಟ ಸಂಖ್ಯೆ: 50ರಲ್ಲಿ ಉಲ್ಲೇಖಗೊಂಡಿದೆ.

ರಂಗಭೂಮಿಯು ಇದೇ ರೀತಿಯಲ್ಲಿ ಮೂರು ಶಿಬಿರಗಳನ್ನು ಆಯೋಜಿಸಿದ ಕುರಿತಂತೆ ರಂಗಭೂಮಿಯು ಪ್ರಕಟಿಸಿದ ಸಂಚಿಕೆಗಳಿಂದ ತಿಳಿದುಬರುತ್ತದೆ.

**ರಜತಮಹೋತ್ಸವದ ವಿಶೇಷ ವಿಚಾರಗೋಷ್ಠಿಗಳು:** ರಂಗಭೂಮಿಯು ತನ್ನ ಯಶಸ್ವೀ 25 ವರ್ಷವನ್ನು ಪೂರೈಸಿದ ಸಂದರ್ಭದಲ್ಲಿ ರಜತಮಹೋತ್ಸವದ ಅಂಗವಾಗಿ 2 ದಿನಗಳ ವಿಚಾರಗೋಷ್ಠಿಯನ್ನು (03.03.1990 ಮತ್ತು 04.03.1990) ಹಮ್ಮಿಕೊಂಡಿದ್ದು, ಆ ವಿಚಾರಗೋಷ್ಠಿಯ ಉದ್ಘಾಟನೆಯು ರಾಜ್ಯದ ನುರಿತ ರಂಗಕರ್ಮಿ ಬಿ.ವಿ. ವೈಕುಂಠರಾಜು ಅವರು ನೆರವೇರಿಸಿದ್ದು, ಆ ವಿಚಾರಗೋಷ್ಠಿಯ ಅಧ್ಯಕ್ಷತೆಯನ್ನು ಪರ್ವತವಾಣಿಯವರು ನಿರ್ವಹಿಸಿದ್ದರು. ಅದೇ ವೇದಿಕೆಯಲ್ಲಿ ಹಿರಿಯ ಜಾನಪದ ತಜ್ಞ ಮುದೇನೂರು ಸಂಗಣ್ಣ ಅವರು ಉಪಸ್ಥಿತರಿದ್ದರು.

3) **ನಾಟಕ ಪ್ರದರ್ಶನದ ಪೂರ್ವಭಾವಿ ಸಂಸ್ಮರಣಕಾರ್ಯಕ್ರಮಗಳು:** ರಂಗಭೂಮಿಯು ತನ್ನ ಸ್ಥಾಪನೆಯ ವರ್ಷದಿಂದ (1965) ಇಂದಿನವರೆಗೂ ನಿರಂತರವಾಗಿ ರಾಜ್ಯಮಟ್ಟದ ನಾಟಕಸ್ಪರ್ಧೆಯನ್ನು ಆಯೋಜಿಸಿಕೊಂಡು ಬಂದಿದ್ದು, ರಂಗಕಲೆಗಳಲ್ಲಿ ಆಸಕ್ತಿ ಇರುವ ನಾಟಕ ತಂಡಗಳು ಈ ಸ್ಪರ್ಧೆಯಲ್ಲಿ ಭಾಗವಹಿಸುತ್ತಿವೆ. ವರ್ಷಂಪ್ರತಿ ನಡೆಸುವ ರಾಜ್ಯ ಮಟ್ಟದ ನಾಟಕ ಪ್ರದರ್ಶನದ ಸ್ಪರ್ಧೆಯ ಸಂದರ್ಭದ ಮೊದಲ ದಿನ ಉಡುಪಿಯ ನಗರಪರಿಸರದಲ್ಲಿ ನಾಟಕ ಎಂಬ ರಂಗಚಟುವಟಿಕೆಗಾಗಿ 20ನೇ ಶತಮಾನದಲ್ಲಿ ದುಡಿದ ರಂಗ ಮುಂದಾಳುಗಳನ್ನು ಸ್ಮರಿಸುವ ಕೃತಜ್ಞತಾಸಮರ್ಪಣೆಯ ಸಾಂಪ್ರದಾಯಿಕ ಸಮಾರಂಭವೊಂದು ಅಚ್ಚುಕಟ್ಟಾಗಿ ನಡೆಯುತ್ತದೆ.

**2. ಋ) ಕಾರ್ಕಡ ಗೆಳೆಯರ ಬಳಗ (ರಿ.), ಕಾರ್ಕಡ, ಸಾಲಿಗ್ರಾಮ:**

ಕಾರ್ಕಡ ಗೆಳೆಯರ ಬಳಗ (ರಿ.) ಎಂಬ ಸಾಹಿತ್ಯ ವೇದಿಕೆಯು ದಿನಾಂಕ 07.02.1988ರಲ್ಲಿ ಕೆ. ತಾರಾನಾಥ ಹೊಳ್ಳ ಎಂಬವರಿಂದ ಸ್ಥಾಪನೆಗೊಂಡಿತು.

**ಗೆಳೆಯರ ಬಳಗದ ಧ್ಯೇಯಧೋರಣೆಗಳು:** ಆಧುನಿಕ ಬದುಕಿನ ಆಯಾಮಗಳು ವಿಸ್ತಾರಗೊಂಡ ಹಿನ್ನೆಲೆಯಲ್ಲಿ ಈ ಸಂಘಟನೆಯ ಉದ್ದೇಶ ಮತ್ತು ವ್ಯಾಪ್ತಿಯು ವಿಸ್ತಾರಗೊಂಡಿದ್ದು, ಸ್ಥಾಪಕರಾದ ತಾರಾನಾಥ ಹೊಳ್ಳರು, ಸ್ಥಳೀಯ ಸದಸ್ಯರ ಸಹಕಾರದೊಂದಿಗೆ ತಮ್ಮೆಲ್ಲಾ ಯೋಜನೆ/ಉದ್ದೇಶಗಳನ್ನು ಕಾರ್ಯಗತಗೊಳಿಸಲು ನಿರಂತರ ಶ್ರಮಿಸುತ್ತಿದ್ದಾರೆ. ಸಾಹಿತ್ಯಕ, ಸಾಂಸ್ಕೃತಿಕ, ಶೈಕ್ಷಣಿಕ, ವೈದ್ಯಕೀಯ ಮತ್ತು ಸಾಮಾಜಿಕ ಚಟುವಟಿಕೆಗಳನ್ನು ವರ್ಷದುದ್ದಕ್ಕೂ ಕೈಗೆತ್ತಿಕೊಳ್ಳುವ ವಿಶಾಲವ್ಯಾಪ್ತಿಯ ಯೋಜನೆ ಸ್ಥಾಪಕ ಹೊಳ್ಳರದ್ದಾಗಿದೆ.

**ಶೈಕ್ಷಣಿಕ ಚಟುವಟಿಕೆಗಳು:** ಗೆಳೆಯರ ಬಳಗವು ಶೈಕ್ಷಣಿಕ ಚಟುವಟಿಕೆಯ ಅಂಗವಾಗಿ 'ಅಧ್ಯಾಪಕರಿಗೆ ಸೂಚನೆಗಳು' ಎಂಬ ಕಾರ್ಕಡ ಶ್ರೀನಿವಾಸ ಉಡುಪರು ರಚಿಸಿದ ಕೃತಿಯನ್ನು ಸಂಘದ ವತಿಯಿಂದಲೇ ಬಿಡುಗಡೆಗೊಳಿಸಿದ್ದರು. ಸಾಲಿಗ್ರಾಮದ ವಾಣಿ ವಿಲಾಸ ಸಂಸ್ಕೃತ ಪಾಠಶಾಲೆಯಲ್ಲಿ ಕಾರಂತರ ಸ್ಮರಣಾರ್ಥ 'ಯೋಗ ಮತ್ತು ನೈತಿಕ ಶಿಕ್ಷಣ' ಶಿಬಿರ ವ್ಯವಸ್ಥೆಯನ್ನು 1999ರಿಂದ ಆಯೋಜಿಸಿಕೊಂಡು ಬಂದರು. (2011 ರಿಂದ ಸಂಸ್ಕೃತ ಪಾಠಶಾಲೆಗೆ ವಿದ್ಯಾರ್ಥಿಗಳ ಸೇರ್ಪಡೆ ನಿಂತುಹೋದ ಕಾರಣ ಈ ಕಾರ್ಯಕ್ರಮವನ್ನು ಕೈಬಿಟ್ಟಿರುತ್ತಾರೆ.) ಸ್ಥಳೀಯ ಪ್ರಾಥಮಿಕಶಾಲಾ ವಿದ್ಯಾರ್ಥಿಗಳಿಗೆ ವಿವಿಧ ಸಾಹಿತ್ಯಸ್ಪರ್ಧೆಗಳನ್ನು ಆಯೋಜಿಸಿ, ವಿಜೇತ ವಿದ್ಯಾರ್ಥಿಗಳಿಗೆ ತಮ್ಮ ಬಳಗದ ವತಿಯಿಂದ ಆಕರ್ಷಕ ಬಹುಮಾನವನ್ನು ನೀಡುತ್ತಾ ಬಂದಿದ್ದಾರೆ.

**ರಾಜ್ಯೋತ್ಸವದ ಆಚರಣೆ:** ಬಳಗದ ವತಿಯಿಂದ ರಾಜ್ಯೋತ್ಸವವನ್ನು ಸಂಭ್ರಮ ಸಡಗರಗಳಿಂದ 1988ರಿಂದಲೇ ಆಚರಿಸಿಕೊಂಡು ಬರುತ್ತಿದ್ದು, ನವೆಂಬರ್ 1ರ ಪ್ರಾಮುಖ್ಯತೆಯನ್ನು ಸ್ಥಳೀಯ ಯುವಕರಿಗೆ ಮನಗಾಣಿಸಿಕೊಟ್ಟಿರುವುದೇ ಗೆಳೆಯರ ಬಳಗದ

ಕಾರ್ಯಕ್ರಮದ ವೈಶಿಷ್ಟ್ಯ ಎನ್ನುವುದು ಸ್ಥಳೀಯರ (ಕಾರ್ಕಡದ ಹೊಳ್ಳರ ಅಭಿಮಾನಿಗಳ) ಹೇಳಿಕೆಯಾಗಿದೆ. ರಾಜ್ಯೋತ್ಸವದ ಸಭಾಕಾರ್ಯಕ್ರಮದಲ್ಲಿ ಸಂಪನ್ಮೂಲವ್ಯಕ್ತಿಗಳು ಕನ್ನಡ ನಾಡು–ನುಡಿಯ ಕುರಿತಾಗಿ ಉಪನ್ಯಾಸ ನಡೆಸಿಕೊಡುತ್ತಿದ್ದಾರೆ.

**ವಾರ್ಷಿಕೋತ್ಸವ:** ಗೆಳೆಯರ ಬಳಗದ ಸದಸ್ಯರೆಲ್ಲರೂ ಸ್ಥಾಪಕ ಸಂಚಾಲಕರಾದ ತಾರಾನಾಥ ಹೊಳ್ಳರ ನಿರ್ದೇಶನದಲ್ಲಿ ನಿಗದಿತ ದಿನದಂದು ಒಂದುಗೂಡಿ, ವಾರ್ಷಿಕೋತ್ಸವ ಆಚರಣೆಯ ಕುರಿತು ದಿನಾಂಕವೊಂದನ್ನು ಗೊತ್ತುಮಾಡಿ, ಆಮಂತ್ರಣಪತ್ರವನ್ನು ಮುದ್ರಿಸಿ, ವಾರ್ಷಿಕೋತ್ಸವವನ್ನು ಸಾಂಸ್ಕೃತಿಕ ಕಾರ್ಯಕ್ರಮಗಳೊಂದಿಗೆ ಅದ್ದೂರಿಯಿಂದ ಆಚರಿಸಿಕೊಂಡು ಬರುತ್ತಿದ್ದಾರೆ.

**ಕಾರಂತಸಂಸ್ಮರಣ ಕಾರ್ಯಕ್ರಮ:** ಕಾರಂತರ ನಿಧನಾನಂತರ ಗೆಳೆಯರ ಬಳಗವು 'ಕಾರಂತ ಯುಗಾಂತ' ಎಂಬ ಹೆಸರಿನಲ್ಲಿ ವರ್ಷಂಪ್ರತಿ ಕಾರಂತರ ಸಂಸ್ಮರಣಾ ಕಾರ್ಯಕ್ರಮವನ್ನು ಹಮ್ಮಿಕೊಳ್ಳುತ್ತಿದ್ದು, ಆ ದಿನ ಬಳಗದ ಸದಸ್ಯರು ಸಾಂಸ್ಕೃತಿಕ ಕಾರ್ಯಕ್ರಮಗಳೊಂದಿಗೆ ವಿವಿಧ ಸಾಹಿತ್ಯಕ ಕಾರ್ಯಕ್ರಮಗಳನ್ನು ನಡೆಸಿಕೊಂಡು ಬರುತ್ತಿದ್ದಾರೆ. ಸಾಲಿಗ್ರಾಮದ ಮತ್ತು ಆಸುಪಾಸಿನ ಶಾಲಾ ಕಾಲೇಜು ವಿದ್ಯಾರ್ಥಿ, ವಿದ್ಯಾರ್ಥಿನಿಯರಿಗೆ ಕಾರ್ಯಕ್ರಮಕ್ಕೆ ಸುಲಭವಾಗಿ ಬಂದು ಸೇರಲು ಅನುಕೂಲವಾಗುವಂತೆ ಈ ಕಾರ್ಯಕ್ರಮವನ್ನು ಸಾಲಿಗ್ರಾಮದ 'ವಾಣೀವಿಲಾಸ' ಸಂಸ್ಕೃತ ಪಾಠಶಾಲೆಯಲ್ಲಿಯೇ ಆಯೋಜಿಸುತ್ತಿದ್ದಾರೆ.

**ಸೇವಾಸೌರಭ:** ಬಳಗವು ಸ್ಥಾಪನೆಗೊಂಡು 10 ವರ್ಷ ಯಶಸ್ವಿಯಾಗಿ ಮುಗಿಯುತ್ತಿದ್ದಂತೆ ಸೇವಾಸೌರಭ ಎಂಬ ಸಂಚಿಕೆಯನ್ನು ಪ್ರಕಟಿಸಿದ್ದು, ಈ ಸಂಚಿಕೆಯಲ್ಲಿ ಸ್ಥಳೀಯ ಸಂಪನ್ಮೂಲ ವ್ಯಕ್ತಿಗಳ ಶಾಲಾ ಕಾಲೇಜಿನ ವಿದ್ಯಾರ್ಥಿಗಳ ವಿವಿಧ ಸಾಹಿತ್ಯಕ ಲೇಖನಗಳು ಪ್ರಕಟಗೊಂಡಿರುತ್ತದೆ.

**ಔದ್ಯೋಗಿಕ ತರಬೇತಿ ಮತ್ತು ವೈದ್ಯಕೀಯ ಶಿಬಿರ:** ಗ್ರಾಮೀಣ ಪ್ರದೇಶದ ನಿರುದ್ಯೋಗಿ ಯುವಕರಿಗೆ ವಿವಿಧ ಔದ್ಯೋಗಿಕ ಘಟಕಗಳಲ್ಲಿ ನೇಮಕಾತಿಗಾಗಿ ಇಲಾಖೆಯೊಡನೆ ಸಂಪರ್ಕಿಸಿ–ತರಬೇತಿ ನೀಡಿ, ಉದ್ಯೋಗಾವಕಾಶಕ್ಕೆ ಅನುವು ಮಾಡಿಕೊಡುವ ವಿಶಿಷ್ಟ ಕಾರ್ಯಕ್ರಮವನ್ನು ಹಮ್ಮಿಕೊಂಡಿರುವುದೇ ಗೆಳೆಯರ ಬಳಗದ 20ನೇ ಶತಮಾನದ ನೂತನ ಕಾರ್ಯಕ್ರಮವಾಗಿದೆ.

ವಿವಿಧ ಕ್ಷೇತ್ರಗಳಲ್ಲಿ ಆಸಕ್ತಿಯುಳ್ಳ ವಿಭಿನ್ನ ಪ್ರವೃತ್ತಿಯ ಯುವಕರು ಈ ಸಂಘಟನೆಯಲ್ಲಿ ಸಕ್ರಿಯವಾದ ಕಾರಣ ಮತ್ತು ತಮ್ಮ ಸಾಹಿತ್ಯ ಚಟುವಟಿಕೆಗಳಿಗೆ ತಮ್ಮ ಕಾರ್ಯವ್ಯಾಪ್ತಿಯನ್ನು ಮಿತಿಗೊಳಿಸಿಕೊಳ್ಳದ ಕಾರಣ ಗೆಳೆಯರ ಬಳಗದ ಚಟುವಟಿಕೆಗಳಿಗೆ ಯಾವುದೇ ಆತಂಕ ಎದುರಾಗುವ ಸಾಧ್ಯತೆಗಳಿಲ್ಲ ಎನ್ನುವುದು ಅವರ 20ನೇ ಶತಮಾನದ ಮತ್ತು 21ನೇ ಶತಮಾನದಲ್ಲಿ ನಡೆಸಿದ ಕಾರ್ಯಚಟುವಟಿಕೆಗಳ ಯಶಸ್ಸಿನಿಂದ ಅರ್ಥೈಸಬಹುದಾಗಿದೆ.

**2. ಋ) ಅಜಪುರ ಕರ್ನಾಟಕ ಸಂಘ, ಬ್ರಹ್ಮಾವರ:** ಈ ಸಂಸ್ಥೆಯು ಕೆ.ಆರ್. ಹಂದೆಯವರ ಅಧ್ಯಕ್ಷತೆಯಲ್ಲಿ 1956ರಲ್ಲಿ ಬ್ರಹ್ಮಾವರದಲ್ಲಿ ಅಸ್ತಿತ್ವಕ್ಕೆ ಬಂದಿತು. ಸ್ಥಾಪಕ ಕಾರ್ಯದರ್ಶಿಯಾಗಿ ಬೈಕಾಡಿ ವೆಂಕಟಕೃಷ್ಣರಾಯರು ಸಂಘಕ್ಕಾಗಿ ನಿಷ್ಠೆಯಿಂದ ದುಡಿದವರಾಗಿದ್ದರು. ಈ ಸಂಘವು ದಿನಾಂಕ 04.08.1956ರಂದು ಜಿಲ್ಲೆಯ ಮೇರು ಸಾಹಿತಿ ಡಾ. ಶಿವರಾಮ ಕಾರಂತರಿಂದ ಉದ್ಘಾಟನೆಗೊಂಡಿತು. ಎಂ. ರಾಮಚಂದ್ರರು ಬೈಕಾಡಿ ವೆಂಕಟಕೃಷ್ಣರಾಯರ ಕಾರ್ಯಚಟುವಟಿಕೆಯನ್ನು ಹೀಗೆ ವರ್ಣಿಸಿದ್ದಾರೆ. "ಬೈಕಾಡಿ ವೆಂಕಟಕೃಷ್ಣರಾಯರು ಕನ್ನಡದ ಒಬ್ಬ ಕಾವಲುಭಟ. ತಮ್ಮ ಕೃಶಕಾಯದಲ್ಲಿ ಎಷ್ಟು ಕಸುವಿತ್ತೋ, ಗಂಟಲಲ್ಲಿ ಎಷ್ಟು ದನಿಯಿತ್ತೋ ಅದನ್ನೆಲ್ಲ ಕನ್ನಡದ ಕೆಲಸಕ್ಕೆ, ಕನ್ನಡದ ಕೂಗಿಗೆ ಮೀಸಲಿಟ್ಟವರು ಬೈಕಾಡಿ. ಅವರ ಕನ್ನಡದ ಕಾಯಕದ ಒಂದು

ಮೂರ್ತರೂಪ ಬ್ರಹ್ಮಾವರ(ಅಜಪುರ)ದ ಕರ್ನಾಟಕ ಸಂಘ. ಸುಮಾರು 25 ವರ್ಷಗಳ ಕಾಲ ಅವರು ಕಾರ್ಯದರ್ಶಿಯಾಗಿ ಒಂದು ಸಣ್ಣ ಊರಲ್ಲಿ ಕನ್ನಡ ಕಸ್ತೂರಿಯ ಕರಂಡಕವನ್ನು ತೆರೆದಿಟ್ಟು ಅದರ ಕಂಪು ಜಿಲ್ಲೆಯ ಉದ್ದಗಲಕ್ಕೂ ಘಟ್ಟದ ಆಚೆಗೂ ಚಾಚುವಂತೆ ದುಡಿದರು; ದುಡಿದು ದಣಿದರು. ಇನ್ನು ದುಡಿಯಲಾರೆ ಎಂದು ಕಂಡಾಗ ತರುಣರಿಗೆ, ಉತ್ಸಾಹಿಗಳಿಗೆ ಅವಕಾಶವಿತ್ತು ತಾವು ಬದಿಗೆ ಸರಿದರು." (ಸಂ: ಹೆರಂಜೆ ಕೃಷ್ಣ ಭಟ್ ಪ್ರೊ., 1998, ಪು–999) ಎಂಬೀ ಹೇಳಿಕೆಯಲ್ಲಿ ಬೈಕಾಡಿ ವೆಂಕಟಕೃಷ್ಣರಾಯರಿಗೂ ಕನ್ನಡ ಸಂಘಕ್ಕೂ ಇರುವ ಸಂಬಂಧ ಇರುವ ಬೆಸುಗೆ ಯಾವ ಬಗೆಯದು ಎಂದು ತಿಳಿದುಬರುತ್ತದೆ. ಅಜಪುರ ಕರ್ನಾಟಕ ಸಂಘದ ವೈಶಿಷ್ಟ್ಯಗಳನ್ನು ಈ ಕೆಳಗಿನಂತೆ ಉಲ್ಲೇಖಿಸಬಹುದಾಗಿದೆ.

1. **ಪ್ರಚಾರೋಪಾನ್ಯಾಸಮಾಲೆ:** 1963 ರಿಂದ 1966ರ ವರೆಗೆ ಮೈಸೂರು ವಿಶ್ವವಿದ್ಯಾನಿಲಯ ಪ್ರಸಾರಂಗದ ನೆರವಿನೊಂದಿಗೆ ಪ್ರಚಾರೋಪಾನ್ಯಾಸ ಮಾಲೆಯನ್ನು ನಡೆಸಿಕೊಂಡು ಬಂದಿದೆ. ಈ ಉಪನ್ಯಾಸಮಾಲಿಕೆಯಲ್ಲಿ ಉಪನ್ಯಾಸ ನೀಡಲು ಮಾಸ್ತಿ, ಬೇಂದ್ರೆ, ಸು.ರಂ. ಎಕ್ಕುಂಡಿ, ಗೋವಿಂದ ಪೈ, ಅ.ನ.ಕೃ., ಹುರುಳಿ ಭೀಮರಾವ್, ಸೇಡಿಯಾಪು ಕೃಷ್ಣ ಭಟ್ಟ, ಬಿ.ಎಂ. ಇದಿನಬ್ಬ, ಕೈಯಾರ ಕಿಞ್ಞಣ್ಣ ರೈ, ಸಾರಾ ಅಬೂಬಕರ್, ಜಿ.ಆರ್. ಪಾಂಡೇಶ್ವರ್ ಮುಂತಾದವರು ಆಗಮಿಸಿದ್ದರು.

2. **1993ರ ಸಾಹಿತ್ಯ ಪರಿಷತ್ತಿನ ಆಶ್ರಯದೊಂದಿಗೆ ನಡೆಸಿದ ತಾಲೂಕು (ಉಡುಪಿ) ಕನ್ನಡ ಸಾಹಿತ್ಯ ಸಮ್ಮೇಳನ:** 1993ರಲ್ಲಿ ಅವಿಭಜಿತ ದ.ಕ. ಜಿಲ್ಲಾ ಸಾಹಿತ್ಯ ಪರಿಷತ್ತಿನ ಆಶ್ರಯದಲ್ಲಿ ಉಡುಪಿ ತಾಲೂಕು ಕನ್ನಡ ಸಾಹಿತ್ಯ ಸಮ್ಮೇಳನವನ್ನು ಕರ್ನಾಟಕ ಸಂಘದ ವತಿಯಿಂದ ನಡೆಸಿದ್ದು, ಸಮ್ಮೇಳನದ ಅಧ್ಯಕ್ಷರಾಗಿ ಬನ್ನಂಜೆ ಗೋವಿಂದ ಆಚಾರ್ಯರು, ಸಮ್ಮೇಳನವನ್ನು ನಿರ್ವಹಿಸಿದ್ದರು.

3. **ಸಂಸ್ಮರಣ ಉಪನ್ಯಾಸ:** ಸಂಘದ ಸದಸ್ಯರಾಗಿ ಸಾಹಿತ್ಯಕ, ಸಾಂಸ್ಕೃತಿಕ ಚಟುವಟಿಕೆಯಲ್ಲಿ ದುಡಿದವರು ನಿಧನರಾದ ನಂತರ ಅವರ ಹೆಸರಿನಲ್ಲಿಟ್ಟ ದತ್ತಿನಿಧಿಯಿಂದ ನಿರ್ದಿಷ್ಟ ದಿನದಂದು ಯಾವುದಾದರೊಂದು ಸಾಹಿತ್ಯ, ಸಾಂಸ್ಕೃತಿಕ ಕಾರ್ಯಕ್ರಮಗಳನ್ನು ನಡೆಸಿಕೊಂಡುಬರುವುದು ಅಜಪುರ ಕರ್ನಾಟಕ ಸಂಘದ ಪರಂಪರೆಯಾಗಿತ್ತು. ಇದು ಸಂಘದ ಚಟುವಟಿಕೆಗಳು ನಿರಾತಂಕವಾಗಿ ಮತ್ತು ನಿರಂತರವಾಗಿ ಮುಂದುವರಿದುಕೊಂಡು ಬರಲು ಸಂಘದ ಸ್ಥಾಪಕರು ಕಂಡುಕೊಂಡ ನೂತನ ತಂತ್ರವೂ ಹೌದು.

4. **ಭಿನ್ನ ವಯೋಮಾನದ ಭಿನ್ನ ಪ್ರವೃತ್ತಿಯವರಿಗೆ ಅನುಕೂಲವಾಗುವ ಚಟುವಟಿಕೆಗಳು:** ಕೇವಲ ಸಾಹಿತ್ಯಚಟುವಟಿಕೆಗಳಿಗೆ ಮಾತ್ರವೇ ಸಂಘದ ಸದಸ್ಯರು ಆದ್ಯತೆ ನೀಡದೇ ಸಾಹಿತ್ಯದೊಂದಿಗೆ ಸಂಗೀತ, ಯಕ್ಷಗಾನ, ಅಷ್ಟಾವಧಾನ, ಚಿತ್ರಪ್ರದರ್ಶನ, ಗಮಕ ಮುಂತಾದ ಚಟುವಟಿಕೆಗಳಿಗೂ ಪ್ರಾಮುಖ್ಯವನ್ನು ನೀಡುತ್ತಾ ಬಂದಿದೆ. 1956ರಿಂದ 2006ರ ತನಕ ನಿರಂತರವಾಗಿ ಕಥಾಸ್ಪರ್ಧೆಗಳನ್ನು ಹಮ್ಮಿಕೊಂಡು, ಶಾಲಾಶಿಕ್ಷಣದ ಸಂದರ್ಭದಿಂದಲೇ ಸಾಹಿತ್ಯಾಸಕ್ತಿಯನ್ನು ಪ್ರಚೋದಿಸುವ ಕೈಂಕರ್ಯಕ್ಕೆ ಕರ್ನಾಟಕ ಸಂಘವು ಮುಂದಾಗಿದೆ. ದಿನಾಂಕ 04.08.1956ರಿಂದ 2000ದ ವರೆಗೆ ನಡೆಸಿಕೊಂಡು ಬಂದ ವಿವಿಧ ಕಾರ್ಯಕ್ರಮಗಳ ಸುದೀರ್ಘ ಪಟ್ಟಿಯು ಸಂಘದ 'ಹೊನ್ನತೇರು' ಎಂಬ ಸಂಚಿಕೆಯಲ್ಲಿ ಪ್ರಕಟವಾಗಿದೆ.

**ಅಜಪುರ ಕರ್ನಾಟಕ ಸಂಘದ ಮುಂದಿನ ನಡೆ:** ಪ್ರಸ್ತುತ ಕಾರ್ಯದರ್ಶಿಯಾಗಿ ಹಾರ್‍ಯಾಡಿ ಚಂದ್ರಶೇಖರ ಕೆದ್ಲಾಯ ಅವರು ಕಾರ್ಯನಿರ್ವಹಿಸುತ್ತಿದ್ದು, ಸಂಘವು ಚಟುವಟಿಕೆಯಿಂದ ಕಾರ್ಯತತ್ಪರವಾಗಿದೆ. ಸ್ಥಾಪಕಸದಸ್ಯರಲ್ಲಿ ಬಹಳ ಮಂದಿ ನಿಧನಹೊಂದಿದ್ದರೂ ಹೊಸದಾಗಿ ಸೇರ್ಪಡೆಯಾಗುವ ಸದಸ್ಯರಿಂದಾಗಿ ಚಟುವಟಿಕೆಗಳು ಮುಂದುವರಿಯುತ್ತಿವೆ. ಸ್ಥಾಪಕ

ಸದಸ್ಯರಾಗಿದ್ದವರು ತಮ್ಮ ಜೀವಿತಾವಧಿಯಲ್ಲಿ ಸಂಘಕ್ಕೆ ಮುಡುಪಾಗಿಟ್ಟ ದತ್ತಿನಿಧಿ ಹಾಗೂ ಮುಂದೆ ಸದಸ್ಯರಾಗುವವರು ನೀಡುವ ಸದಸ್ಯಶುಲ್ಕ ನಿಧಿ, ಸಂಘದ ಚಟುವಟಿಕೆಗಳನ್ನು ನಿಭಾಯಿಸಿಕೊಂಡು ಹೋಗಲು ಸಾಧ್ಯವಾಗುವ ಕಾರಣ, ಆರ್ಥಿಕ ಅನನುಕೂಲತೆಯಿಂದ ಸಂಘವು ನಿಷ್ಕ್ರಿಯಗೊಳ್ಳದು.

**2. ಎ) ಯುವಕ ಮಂಡಲ, ಎಲ್ಲೂರು:** ಬೆಂಗಳೂರಿನ ಸಾಹಿತ್ಯ ಪರಿಷತ್ತಿನ ಕೇಂದ್ರ ಕಛೇರಿಯು ನಡೆಸುವ ಮಧ್ಯಮ ಮತ್ತು ಉತ್ತಮ ಎಂಬ ಎರಡು ಹಂತದ ಪರೀಕ್ಷೆಗೆ ವಿದ್ಯಾರ್ಥಿಗಳನ್ನು ತರಬೇತುಗೊಳಿಸುವುದು, ಯುವಜನ ಮೇಳದಲ್ಲಿ ನಡೆಯುವ ಸಾಹಿತ್ಯ ಸ್ಪರ್ಧೆಗಳಲ್ಲಿ ಸಂಘದ ಸದಸ್ಯರು ಹಾಗೂ ಇತರ ಆಸಕ್ತ ಸ್ಥಳೀಯ ಸದಸ್ಯರನ್ನು ಹಾಜರಾಗುವಂತೆ ಉತ್ತೇಜಿಸುವುದು. ಜಿಲ್ಲೆಯ ಇತರೆಡೆಗಳಲ್ಲಿ ನಡೆಯುವ ಸಾಹಿತ್ಯಸ್ಪರ್ಧೆಗಳಲ್ಲಿ ಭಾಗವಹಿಸುವುದು, ವರ್ಷಂಪ್ರತಿ ಕೈಬರಹದ ಸಂಚಿಕೆಯನ್ನು ಪ್ರಕಟಿಸುವುದು, ಸ್ಥಳೀಯ ವಿಶ್ವನಾಥ ದೇಗುಲದ ಧಾರ್ಮಿಕ ಚಟುವಟಿಕೆಗಳಲ್ಲಿ ಸಕ್ರಿಯವಾಗಿ ಭಾಗವಹಿಸುತ್ತಾ ದೇವಸ್ಥಾನದ ವೇದಿಕೆಯಲ್ಲಿ ಸಾಹಿತ್ಯಚಟುವಟಿಕೆಗಳಿಗೆ ಅವಕಾಶವಿರುವಂತೆ ನೋಡಿಕೊಳ್ಳುವುದು ಇವೇ ಮೊದಲಾದವುಗಳು ಯುವಕ ಮಂಡಲದ ಕಾರ್ಯಚಟುವಟಿಕೆಗಳಾಗಿವೆ. ಈ ತೆರನಾದ ಚಟುವಟಿಕೆಗಳಲ್ಲಿ ಯುವಕ ಮಂಡಲವು ಸಕ್ರಿಯವಾಗಿದ್ದ ವರದಿಯು ಯುವಕ ಮಂಡಲದ ರಜತ ಮಹೋತ್ಸವ ಸಂಚಿಕೆ **'ತರುಣ ದೀಪಿಕೆ'** ಹಾಗೂ ಸುವರ್ಣಮಹೋತ್ಸವದ ಸಂಚಿಕೆ **'ಚಿನ್ನ ಚಿತ್ತಾರ'** ದಲ್ಲಿ ಪ್ರಕಟಗೊಂಡ ವರದಿಗಳಿಂದ ತಿಳಿದುಬರುತ್ತವೆ. ಕೇವಲ ಧಾರ್ಮಿಕ, ಸಾಹಿತ್ಯಕ, ಸಾಂಸ್ಕೃತಿಕ ಚಟುವಟಿಕೆಗಳಲ್ಲದೇ ಕ್ರೀಡಾ ಚಟುವಟಿಕೆಗಳಿಗೂ ಯುವಕ ಮಂಡಲವು ಆದ್ಯತೆ ನೀಡುತ್ತಿದ್ದು, ದಕ್ಷಿಣ ಭಾರತ ಮಟ್ಟದ ವಾಲಿಬಾಲ್ ಪಂದ್ಯಾಟವನ್ನು 1990ರ ದಶಕದಲ್ಲಿ ಯಶಸ್ವಿಯಾಗಿ ನಿಭಾಯಿಸಿದ ಕುರಿತಂತೆ ಸುವರ್ಣ ಮಹೋತ್ಸವದ ಸಂಚಿಕೆ 'ಚಿನ್ನ ಚಿತ್ತಾರ'ದಲ್ಲಿ ವರದಿಗಳಿವೆ. ಸಾಹಿತ್ಯ, ಸಾಂಸ್ಕೃತಿಕ ಚಟುವಟಿಕೆಗಳಿಗೆ ವಿಶೇಷ ಪ್ರಾಮುಖ್ಯವನ್ನು ನೀಡುತ್ತಾ, ದೇವಸ್ಥಾನದ ಭೌತಿಕಪರಿಕರವನ್ನು ಈ ಚಟುವಟಿಕೆಗಳಿಗಾಗಿ ಬಳಸಿಕೊಳ್ಳುತ್ತಾ, ಸ್ಥಳೀಯ ಯುವಕರಲ್ಲಿ ಸಾಹಿತ್ಯಾಸಕ್ತಿಯನ್ನು ಪ್ರೇರೇಪಿಸುವಲ್ಲಿ ಸಕ್ರಿಯವಾಗಿ ದುಡಿಯುವ ಉಡುಪಿ ಜಿಲ್ಲೆಯ ಕ್ರಿಯಾಶೀಲ ಯುವಕಮಂಡಲದಲ್ಲಿ ಎಲ್ಲೂರು ಯುವಕ ಮಂಡಲವು ಮುಂಚೂಣಿಯಲ್ಲಿದೆ ಎನ್ನುವುದನ್ನು ಸಂಚಿಕೆಗಳು ದೃಢೀಕರಿಸುತ್ತವೆ. ಸಂಘವು ಆರ್ಥಿಕ ಅನನುಕೂಲತೆಯಿಂದ ನಿಷ್ಕ್ರಿಯಗೊಳ್ಳದೇ ಹೋದರೂ ಬದಲಾದ ಕಾಲಮಾನಕ್ಕನುಸರಿಸಿ, ತನ್ನ ಚಟುವಟಿಕೆಯ ಅಭಿವ್ಯಕ್ತಿಯಲ್ಲಿ ಮಾರ್ಪಾಟನ್ನು ಕಂಡುಕೊಳ್ಳಬೇಕಾದ ಅನಿವಾರ್ಯತೆ ಇದೆ.

**2. ಐ)ಯುವಕ ಮಂಡಲ (ರಿ.), ಕುತ್ಯಾರು:**

ಕುತ್ಯಾರು ಪರಿಸರದ ಗ್ರಾಮೀಣ ಯುವಕರು ಈ ವೇದಿಕೆಯಲ್ಲಿ ಒಂದಾಗಿ ತಮ್ಮ ಸಾಂಸ್ಕೃತಿಕ ಆಸಕ್ತಿಗನುಗುಣವಾಗಿ ವಿವಿಧ ಸಾಂಸ್ಕೃತಿಕ ಚಟುವಟಿಕೆಗಳನ್ನು ನಿರ್ವಹಿಸಿಕೊಂಡು ಬಂದಿರುವ ವರದಿಯು ಯುವಕ ಮಂಡಲವು ಹೊರತಂದಿರುವ ಮಾಹಿತಿ ಕೈಪಿಡಿಯಲ್ಲಿ ಉಲ್ಲೇಖಗೊಂಡಿದೆ. ಅದೇ ಕೈಪಿಡಿಯಲ್ಲಿ ಉಲ್ಲೇಖಗೊಂಡಂತೆ ಊರಿನ ಯುವಕರಿಗಾಗಿ ಯಕ್ಷಗಾನದ ಸಾಂಪ್ರದಾಯಿಕ ಶೈಲಿ-ವಿನ್ಯಾಸದ ಕುರಿತಂತೆ 'ಪ್ರಾತ್ಯಕ್ಷಿಕೆ' ಕಾರ್ಯಕ್ರಮವು 18.08.2012 ರಿಂದ 20.08.2012ರ ವರೆಗೆ ಸಂಘಟಿಸಿದ್ದ ಕುರಿತು ಯುವಕ ಮಂಡಲದ ಕೈಪಿಡಿಯಲ್ಲಿ ಉಲ್ಲೇಖಗಳಿವೆ. ಈ ಕಾರ್ಯಾಗಾರವನ್ನು ಉಡುಪಿಯ ಯಕ್ಷಗಾನ ಕೇಂದ್ರದ ಮುಖ್ಯ ಗುರುಗಳಾದ ಶ್ರೀ ಸಂಜೀವ ಸುವರ್ಣರು ನಡೆಸಿಕೊಟ್ಟಿರುತ್ತಾರೆ. ಯಕ್ಷಗಾನದ ಸಂಪ್ರದಾಯ-ಪರಂಪರೆಯ

ಕುರಿತು ಆಧುನಿಕ ಕಾಲದ ಯುವಕರು ಚಿಂತಿಸಿದರೆನ್ನುವುದೇ ಈ ಯುವಕ ಮಂಡಲದ ಪ್ರಗತಿಪರ ನಿಲುವನ್ನು ಸೂಚಿಸುತ್ತದೆ ಎನ್ನಬಹುದಾಗಿದೆ.

**2. ಐ) ಸ್ವಾಮೀ ವಿವೇಕಾನಂದ ಸಾಂಸ್ಕೃತಿಕ ಕೇಂದ್ರ, ಬಾರಕೂರು:**

ಬಾರಕೂರು ನೇಶನಲ್ ಜೂನಿಯರ್ ಕಾಲೇಜಿನ ಆಂಗ್ಲಾಭಾಷಾ ಉಪನ್ಯಾಸಕರಾದ ರಾಮಭಟ್ಟ ಸಜಂಗದ್ದೆಯವರು ಕ್ರಿ.ಶ. 2000ದಲ್ಲಿ ಈ ಕೇಂದ್ರವನ್ನು ಹುಟ್ಟುಹಾಕಿದ್ದು ಪ್ರತಿ ವರ್ಷ ಮಕ್ಕಳ ಸಾಹಿತ್ಯ ಸಮ್ಮೇಳನವನ್ನು ಉಡುಪಿ ಜಿಲ್ಲೆ ವ್ಯಾಪ್ತಿಗೊಳಪಟ್ಟು ನಡೆಸಿಕೊಂಡು ಬರುತ್ತಿದ್ದಾರೆ. ಮಕ್ಕಳನ್ನು ಸೃಜನಶೀಲ ಬರವಣಿಗೆಗೆ ತೊಡಗಿಸುವುದು, ಸಾಂಸ್ಕೃತಿಕ ಕಾರ್ಯಕ್ರಮಗಳಿಗೆ ತರಬೇತುಗೊಳಿಸುವುದು ಈ ಕೇಂದ್ರದ ಮುಖ್ಯ ಉದ್ದೇಶವಾಗಿದೆ. ಕ್ರಿ.ಶ. 2000ದಲ್ಲಿ ಸಾಹಿತ್ಯ ಸಮ್ಮೇಳನದ ಸಮಾರೋಪ ಉಪನ್ಯಾಸವನ್ನು ಸಾಹಿತಿ, ಅಧ್ಯಾಪಕ, ಕುರಾಡಿ ಸೀತಾರಾಮ ಅಡಿಗರು ನಡೆಸಿಕೊಟ್ಟ ಬಗ್ಗೆ ಕೇಂದ್ರದ ಕಛೇರಿಯಲ್ಲಿರುವ ದಾಖಲೆಗಳಿಂದ ತಿಳಿದುಬರುತ್ತದೆ.

ಬಾರಕೂರಿನ ನೇಶನಲ್ ಪ್ರೌಢಶಾಲೆಯು 1946ರಲ್ಲಿ ಆರಂಭವಾಗಿ 1972 ರಲ್ಲಿ ಪಿ.ಯು. ತರಗತಿಗಳು ಆರಂಭಗೊಂಡು ನೇಶನಲ್ ಪದವಿಪೂರ್ವ ಕಾಲೇಜಾಗಿ ಬೆಳವಣಿಗೆಯನ್ನು ಕಂಡು ಶೈಕ್ಷಣಿಕವಾಗಿ ಸಾಕಷ್ಟು ಹೆಸರು ಮಾಡಿರುವುದು ನಿಜವಾದರೂ ಸಾಹಿತ್ಯಕವಾಗಿ ಇಲ್ಲಿನ ವಿದ್ಯಾರ್ಥಿಗಳ ಮತ್ತು ಅಧ್ಯಾಪಕರ ಸಾಧನೆ ಗೌಣ ಎನ್ನುವುದು ದಾಖಲಿಸಬೇಕಾದ ವಿಚಾರವಾಗಿದೆ.

ಕೇಂದ್ರದ ವಾರ್ಷಿಕೋತ್ಸವದಂದು ಉಡುಪಿ ಜಿಲ್ಲಾ ವ್ಯಾಪ್ತಿಯಲ್ಲಿ 'ವಿದ್ಯಾರ್ಥಿ ಸಾಹಿತ್ಯಸಮ್ಮೇಳನ'ವನ್ನು ಆಯೋಜಿಸಿ ಎಲ್ಲಾ ಪ್ರೌಢಶಾಲೆ ಮತ್ತು ಪದವಿಪೂರ್ವ ವಿದ್ಯಾಲಯಗಳ ವಿದ್ಯಾರ್ಥಿಗಳನ್ನು ಸಮ್ಮೇಳನಕ್ಕೆ ಆಹ್ವಾನಿಸಿ ವಿದ್ಯಾರ್ಥಿಗಳಲ್ಲಿ ಸೃಜನಶೀಲ ಚಟುವಟಿಕೆಗಳು ಅಭಿವ್ಯಕ್ತಗೊಳ್ಳುವುದಕ್ಕೆ ಸಂಸ್ಥೆಯ ಸಂಚಾಲಕ ಶ್ರೀ ರಾಮ ಭಟ್ ಅವರು ಪ್ರೇರಣೆ ನೀಡುತ್ತಾ ಬಂದಿರುತ್ತಾರೆ. ಶ್ರೀ ರಾಮ ಭಟ್ ಅವರು ಕರ್ತವ್ಯ ನಿರ್ವಹಿಸುತ್ತಿದ್ದ ಸಂಸ್ಥೆಯ ಸಹೋದ್ಯೋಗಿ ಸ್ನೇಹಿತರು ಹಾಗೂ ಸಂಸ್ಥೆಯ ಪ್ರಾಕ್ತನ ವಿದ್ಯಾರ್ಥಿಗಳಿಂದ ತನು-ಮನ-ಧನದ ಸಹಕಾರದೊಂದಿಗೆ 'ವಿವೇಕಾನಂದ ಸಾಂಸ್ಕೃತಿಕ ಕೇಂದ್ರ'ವು ನಡೆಸುವ ಚಟುವಟಿಕೆಗಳನ್ನು ಈವರೆಗೂ ಯಶಸ್ವಿಯಾಗಿ ಮುನ್ನಡೆಸಿಕೊಂಡು ಬಂದಿದ್ದಾರೆ.

ವಿದ್ಯಾರ್ಥಿಗಳಲ್ಲಿ ನೈತಿಕಪ್ರಜ್ಞೆಯ ವಿಕಸನಕ್ಕಾಗಿ ಸಮ್ಮೇಳನದಲ್ಲಿ ಭಾಗವಹಿಸುವ ಎಲ್ಲಾ ಸಾಹಿತ್ಯಾಸಕ್ತ ವಿದ್ಯಾರ್ಥಿಗಳಿಗೂ ಶ್ರೀ ರಾಮಕೃಷ್ಣ ಆಶ್ರಮದ ವತಿಯಿಂದ ಪ್ರಕಟಗೊಳ್ಳುವ ಪುಸ್ತಕಗಳನ್ನು ಉಚಿತವಾಗಿ ಕೊಟ್ಟರೆ, ಧರ್ಮಸ್ಥಳ ಶಾಂತಿವನ ಟ್ರಸ್ಟ್‌ನ ವತಿಯಿಂದ ಸ್ಪರ್ಧೆಗಳಲ್ಲಿ ಭಾಗವಹಿಸಿ ವಿಜೇತರಾದ ವಿದ್ಯಾರ್ಥಿಗಳಿಗೆ ಬಹುಮಾನವನ್ನು ನೀಡುತ್ತ ಕಾರ್ಯಕ್ರಮದ ಯಶಸ್ವಿಗಾಗಿ ತಮ್ಮ ಪಾಲಿನ ಕೊಡುಗೆಯನ್ನು ನೀಡುತ್ತಾ ಬಂದಿದ್ದಾರೆ. ಆಂಗ್ಲಮಾಧ್ಯಮ ಶಾಲೆಗಳು ಹಳ್ಳಿಹಳ್ಳಿಗಳಲ್ಲಿ ವಿಜೃಂಭಿಸುತ್ತಿರುವ ಹೊತ್ತಿಗೆ ಜಿಲ್ಲಾ ವ್ಯಾಪ್ತಿಯ ಸೀಮೆಯೊಳಗಿನ ಸಾಹಿತ್ಯಾಸಕ್ತ ವಿದ್ಯಾರ್ಥಿಗಳನ್ನು ವರ್ಷಕ್ಕೊಮ್ಮೆ ಕನ್ನಡದ ಹೆಸರಿನಲ್ಲಿ ಒಂದು ವೇದಿಕೆಯ ಮೂಲಕ ಕನ್ನಡದ ಬಗ್ಗೆ ತಮ್ಮ ಅನಿಸಿಕೆಯನ್ನು ಹಂಚಿಕೊಳ್ಳುವುದಕ್ಕೆ ಅವಕಾಶ ನೀಡಿರುವುದು ಮಹತ್ವದ ಕಾರ್ಯಕ್ರಮವೆಂದೇ ಪರಿಗಣಿಸಬೇಕಾಗಿದೆ. ಇದೇ ರೀತಿಯ ಹತ್ತಾರು ವೇದಿಕೆಗಳಲ್ಲಿ ಜೊಮ್ಮುವ ಚರ್ಚೆಯು ಕನ್ನಡದ ಸ್ಥಿತಿಯನ್ನು ಅತ್ಯುನ್ನತ ಮಟ್ಟಕ್ಕೆ ತರುವ ಸಾಧ್ಯತೆಯನ್ನು ತಳ್ಳಿಹಾಕುವಂತಿಲ್ಲ.

ಕೇಂದ್ರದ ಆಶಯವು ಉದಾತ್ತವಾದುದು ಮತ್ತು ವರ್ತಮಾನಕ್ಕೆ ಅವಶ್ಯವಾದದ್ದು ಆಗಿದೆ. ಜವಾಬ್ದಾರಿಯನ್ನು ನಿರ್ವಹಿಸುವ ಸಂಘಟನೆಯ ಸದಸ್ಯರು ಕಾಲದಿಂದ ಕಾಲಕ್ಕೆ ಬದಲಾಗುತ್ತ ಇದು ಏಕವ್ಯಕ್ತಿ ಕಾರ್ಯಕ್ರಮವೆಂಬ ಅಭಿಪ್ರಾಯ ಸಮಾಜದಲ್ಲಿ ನೆಲೆಗೊಳ್ಳದಂತೆ ಸಂಘಟಕರು ಪ್ರಯತ್ನಿಸಬೇಕಾಗಿದೆ. ಸುಸಂಸ್ಕೃತ ನಾಗರಿಕರನ್ನು ರೂಪಿಸಿ, ಸಾಹಿತ್ಯಚಟುವಟಿಕೆಗಳತ್ತ ಜನರನ್ನು ಆಕರ್ಷಿಸುವುದೇ ಸಂಘಟನೆಯ ಪ್ರಧಾನ ಉದ್ದೇಶ ಎನ್ನುವುದನ್ನು ಸಂಘಟಕರ ಕಾರ್ಯವೈಖರಿಯಿಂದ ರುಜುಗೊಂಡರೆ ಈ ಸಂಘಟನೆಗೆ ಭವಿಷ್ಯವಿದೆ.

**2. ಒ)ಡಾ. ಬಿ.ಆರ್. ಅಂಬೇಡ್ಕರ್ ಯುವಕ ಮಂಡಲ (ರಿ.), ಮೇಲ್ ಗಂಗೊಳ್ಳಿ:** ಈ ಯುವಕ ಮಂಡಲವು 1987–88ನೇ ವರ್ಷದಲ್ಲಿ ಅಸ್ತಿತ್ವಕ್ಕೆ ಬಂದಿದ್ದು, ಇದರ ಸ್ಥಾಪಕ ಅಧ್ಯಕ್ಷರಾಗಿ ಶ್ರೀ ಭಾಸ್ಕರ ಎಚ್.ಜಿ. ಅವರು ಕಾರ್ಯನಿರ್ವಹಿಸಿದ್ದರು. ಪ್ರಸ್ತುತ ಕಿರಣ್ ಗಂಗೊಳ್ಳಿಯವರು ಕಾರ್ಯದರ್ಶಿಯಾಗಿ ದುಡಿಯುತ್ತಿದ್ದಾರೆ.

**ಕಾರ್ಯಚಟುವಟಿಕೆಯ ಸ್ವರೂಪ:** 1987ರಿಂದ ಸಾಂಸ್ಕೃತಿಕ ಚಟುವಟಿಕೆಗಳನ್ನು ನಿರ್ವಹಿಸಿಕೊಂಡು ಬಂದಿರುವುದಲ್ಲದೆ ರಾಷ್ಟ್ರೀಯ ಹಬ್ಬಗಳಾದ ಗಣರಾಜ್ಯೋತ್ಸವ, ಸ್ವಾಂತ್ರ್ಯೋತ್ಸವ, ವಿವೇಕಾನಂದ ಜಯಂತಿ ಹಾಗೂ ಅಂಬೇಡ್ಕರ್ ಜಯಂತಿಯನ್ನು ಆಚರಿಸಿಕೊಂಡು ಬಂದಿರುತ್ತಾರೆ. ವರ್ಷಂಪ್ರತಿ ಎಪ್ರಿಲ್ 14ರಂದು ಅಂಬೇಡ್ಕರ್ ಜಯಂತಿಯನ್ನು ವಾರ್ಷಿಕ ದಿನಾಚರಣೆಯಾಗಿ ಆಚರಿಸುತ್ತಿದ್ದು, ಆ ದಿನ ಸಭಾ ಕಾರ್ಯಕ್ರಮದ ಸಹಿತ ಸಾಂಸ್ಕೃತಿಕ ಕಾರ್ಯಕ್ರಮಗಳನ್ನು ಹಮ್ಮಿಕೊಳ್ಳುತ್ತಿದ್ದಾರೆ.

ಕ್ರಿ.ಶ. 2000ದ ಪೂರ್ವದಲ್ಲಿ ಅಂಬೇಡ್ಕರ್ ಜನ್ಮಶತಾಬ್ದಿಯ ಅಂಗವಾಗಿ ಯುವಕ/ಯುವತಿ ಮಂಡಲದ ಪರಿಶಿಷ್ಟ ಜಾತಿ ವರ್ಗದ ಸದಸ್ಯರಿಗಾಗಿ ಯುವಮುಂದಾಳತ್ವ ಶಿಬಿರ (16.09.1993) ಹಾಗೂ ಸಂಘದ ದಶಮಾನೋತ್ಸವದ ಪ್ರಯುಕ್ತ 'ಸಾಮಾಜಿಕ ಜಾಗೃತಿ' ಎಂಬ ವಿಷಯದ ಕುರಿತು ಉಪನ್ಯಾಸ, ಅನಂತರದಲ್ಲಿ (2003) 16ನೇ ವಾರ್ಷಿಕೋತ್ಸವದ ಪ್ರಯುಕ್ತ ಮತ್ತು ಅರ್ಚನಾ ಮಹಿಳಾ ಮಂಡಳದ ದಶಮಾನೋತ್ಸವದ ನೆನಪಿಗಾಗಿ ಉಡುಪಿ ಜಿಲ್ಲಾ ಮಟ್ಟದ ಜಾನಪದ ಕಲೋತ್ಸವ ಸ್ಪರ್ಧೆ ಅಸ್ಪೃಶ್ಯತಾ ನಿವಾರಣಾ ಸಂಬಂಧ ಜನಜಾಗೃತಿ ಅಭಿಯಾನ ಮುಂತಾದ ಚಟುವಟಿಕೆಗಳಿಂದ ಸಂಘವು ಜನಸಾಮಾನ್ಯರಿಂದ ಗುರುತಿಸಿಕೊಂಡಿದೆ. ವರ್ಷಂಪ್ರತಿ ನಡೆಯುವ ವಾರ್ಷಿಕೋತ್ಸವದಲ್ಲಿ ಸಮಾಜಸೇವೆ, ಸಾಹಿತ್ಯ, ಕ್ರೀಡೆ, ಕಲೆ, ಮುಂತಾದ ಕ್ಷೇತ್ರದಲ್ಲಿ ಸಾಧನೆ ಮಾಡಿದ ಗಣ್ಯರನ್ನು ಜಾತಿಮತ ಬೇಧವಿಲ್ಲದೆ ಗೌರವಿಸುವ ಪರಿಪಾಠವನ್ನನುಸರಿಸಿಕೊಂಡು ಬಂದಿರುವುದು ಇವರ ಪ್ರಗತಿಪರ ನಿಲುವಿಗೊಂದು ಸಾಕ್ಷಿಯಾಗಿದೆ.

20ನೇ ಶತಮಾನವನ್ನು ಯಶಸ್ವಿಯಾಗಿ ಪೂರೈಸಿ, 21ನೇ ಶತಮಾನದಲ್ಲಿ ಈಗಾಗಲೇ ಹದಿನಾರು ವರ್ಷವನ್ನು ಯಶಸ್ವಿಯಾಗಿ ಕಳೆದಿದೆ. ಸ್ಥಳೀಯ ಸಾಹಿತ್ಯಾಭಿಮಾನಿಗಳ ಪೂರಕ ಪ್ರೋತ್ಸಾಹ, ಬೆಂಬಲವು ಈ ಸಂಘವು ಪಡೆಯುತ್ತಾ ಬಂದಿರುವುದು ನಿಜವಾಗಿದೆ. ಸಂಘದ ಸದಸ್ಯರು ಕೇವಲ ಮನೋರಂಜನಾತ್ಮಕ ಚಟುವಟಿಕೆಗಳೊಂದಿಗೆ, ಕೇವಲ ಜನಜಾಗೃತಿ ಚಟುವಟಿಕೆಗಳಾದ ಚಳವಳಿ, ಮುಷ್ಕರ ಮತ್ತು ವಾರ್ಷಿಕೋತ್ಸವ ಈ ಮುಂತಾದ ಕಾರ್ಯಕ್ರಮಗಳಲ್ಲಿ ತಮ್ಮ ಕಾರ್ಯವ್ಯಾಪ್ತಿಯನ್ನು ಮಿತಿಗೊಳಪಡಿಸಿಕೊಂಡಿದ್ದಾರೆ. ಸ್ಥಳೀಯ ಪದವಿಪೂರ್ವ ಕಾಲೇಜಿನ ದ್ವಿತೀಯ ದರ್ಜೆ ಉಪನ್ಯಾಸಕರೋರ್ವರು ಸಾರ್ವಜನಿಕ ಸಂಪರ್ಕ ಹಾಗೂ ಸಾಹಿತಿಗಳ ಒಡನಾಟವನ್ನು ಹೊಂದಿದವರಾಗಿದ್ದು, ಎಲ್ಲಾ ಚಟುವಟಿಕೆಗಳಿಗೂ ಅವರೇ ಸೂತ್ರಧಾರರಾಗಿದ್ದಾರೆ. ಕಾರ್ಯಕ್ರಮದ ಅಭಿವ್ಯಕ್ತಿಯಲ್ಲಿ ಮಾರ್ಪಾಟಿನ ಆವಶ್ಯಕತೆಯನ್ನು

ಮನಗಂಡು ಮಾರ್ಪಾಟಿಗೆ ಮುಂದಾದಲ್ಲಿ ಸಂಘದ ಇತರ ಸದಸ್ಯರ ಸಹಕಾರ ಇಲ್ಲವೆನ್ನುವುದನ್ನು ಕಂಡುಕೊಂಡು ಕೇವಲ ಪರಂಪರೆಯ ಯಥಾವತ್ ಚಟುವಟಿಕೆಗಳನ್ನೇ ಮುಂದುವರಿಸುತ್ತಿದ್ದಾರೆ. ಈ ಸಮೂಹಕ್ಕಿಂತ ಉನ್ನತ ಶಿಕ್ಷಣ ಹೊಂದಿದ ಮತ್ತು ಸಾಹಿತ್ಯದ ಕುರಿತು ಹೆಚ್ಚಿನ ಅನುಭವವನ್ನು ಹೊಂದಿದ ಯುವ ತಲೆಮಾರು ಈ ಸಂಘಟನೆಗೆ ಸೇರ್ಪಡೆಗೊಂಡಲ್ಲಿ ವಿವಿಧ ಬಗೆಯ ಸಾಹಿತ್ಯ ಚಟುವಟಿಕೆಗಳು ಅರ್ಥಪೂರ್ಣವಾಗಿ ನೆರವೇರುವುದಲ್ಲದೆ ಸಂಘಟನೆಯ ಉದ್ದೇಶವು ಯಶಸ್ವಿಯಾಗುವ ಎಲ್ಲ ಅವಕಾಶಗಳು ಇವೆ.

**2. ಓ)ಸಂಗೀತಸಭಾ, ಉಡುಪಿ:** 1961ರಲ್ಲಿ ಉಡುಪಿ ಪರಿಸರದ ಸಾಂಸ್ಕೃತಿಕ ಚಟುವಟಿಕೆಯಲ್ಲಿ ವಿಶೇಷ ಒಲವನ್ನು ರೂಢಿಸಿಕೊಂಡ ವಿಜಯನಾಥ ಶೆಣೈಯವರ ಮುತುವರ್ಜಿಯಲ್ಲಿ 'ಸಂಗೀತಸಭಾ' ಎಂಬ ಸಾಂಸ್ಕೃತಿಕ ಒಕ್ಕೂಟವು ಅಸ್ತಿತ್ವಕ್ಕೆ ಬಂದಿತು. ಈ ಸಂಸ್ಥೆಯ ಮೂಲಕ 1962ನೇ ಮೇ ತಿಂಗಳಲ್ಲಿ ಉಡುಪಿಯ ಸಂಸ್ಕೃತ ಕಾಲೇಜು ಸಭಾಂಗಣದಲ್ಲಿ ಅವರು ನಡೆಸಿಕೊಟ್ಟ ಗಂಗೂ ಬ್ಯಾ ಹಾನಗಲ್ ಅವರು ನಡೆಸಿಕೊಟ್ಟ ಸಂಗೀತ ಕಛೇರಿಯು ಸಂಪೂರ್ಣ ಯಶಸ್ವಿಗೊಂಡು ಸಂಘಟನೆಯು ಸಾರ್ವಜನಿಕರ ಪ್ರಶಂಸೆಗೆ ಪಾತ್ರವಾಯಿತು.

ಸಂಗೀತಸಭಾ ಎಂಬ ವೇದಿಕೆಯು ಸಂಗೀತ ಕಛೇರಿಯನ್ನು ಮಾತ್ರ ನಡೆಸಿದ್ದಲ್ಲಿ ಈ ಹೆಸರನ್ನು ಇಲ್ಲಿ ಉಲ್ಲೇಖಿಸುವ ಅವಶ್ಯಕತೆ ಇರಲಿಲ್ಲ. **ಸಂಗೀತಸಭಾ** ಎಂಬೀ ವೇದಿಕೆಯ ಮೂಲಕ ಕೆಲವು ಸಾಹಿತ್ಯ ಚಟುವಟಿಕೆಗಳನ್ನು ನಡೆಸಲಾಯಿತು ಎನ್ನುವುದರಿಂದ ಸಂಗೀತಸಭಾದ ಚಟುವಟಿಕೆಗಳು ಮುಖ್ಯವಾಗುತ್ತದೆ. ಆ ಚಟುವಟಿಕೆಗಳ ವಿವರಗಳು ಹೀಗಿವೆ:

1963ರಲ್ಲಿ ಇದೇ ವೇದಿಕೆಯ ವತಿಯಿಂದ ಪುರಂದರದಾಸ ಚತುರ್ಥ ಶತಮಾನೋತ್ಸವ 1964ರಲ್ಲಿ ಚಿತ್ರಕಲಾ ಪ್ರದರ್ಶನ ಮತ್ತು ಉತ್ಸವ, 1965ರಲ್ಲಿ ಮೂರು ದಿನಗಳ ಕಾಲದ ಕನಕದಾಸ ಚತುರ್ಥ ಶತಮಾನೋತ್ಸವ, 1966ರಲ್ಲಿ ಮದ್ರಾಸಿನ ಪಂಢರೀ ಬಾಯಿಯವರ ಶ್ರೀಕೃಷ್ಣ ಚೈತನ್ಯ ನಾಟಕ ಸಭಾದ ವತಿಯಿಂದ ಐದು ದಿನಗಳ ನಾಟಕೋತ್ಸವ ಹಾಗೂ 1967ರಲ್ಲಿ ಮತ್ತು 1970ರಲ್ಲಿ ಹಿರಣ್ಣಯ್ಯ ಮಿತ್ರ ಮಂಡಳಿಯವರ ನಾಟಕ ಸಪ್ತಾಹವು ನಡೆಯಿತು. ಈ ಚಟುವಟಿಕೆಗಳಲ್ಲಿ ಪುರಂದರದಾಸ ಮತ್ತು ಕನಕದಾಸರ ನಾಲ್ಕು ನೂರನೇ ಜನ್ಮದಿನೋತ್ಸವ ಎಂಬ ಎರಡು ಕಾರ್ಯಕ್ರಮಗಳು ಸಂಪೂರ್ಣವಾಗಿ ಸಾಹಿತ್ಯ ಚಟುವಟಿಕೆಗಳಾಗಿದ್ದುವು. ಈ ಚಟುವಟಿಕೆಗಳನ್ನು ನಡೆಸುವ ಉದ್ದೇಶವನ್ನು ಸಂಗೀತಸಭಾದ ವೇದಿಕೆಯ ಸಂಸ್ಥಾಪಕ ಇಲ್ಲವೇ ನೇತಾರರಾದ ವಿಜಯನಾಥ ಶೆಣೈಯವರು "ಉದಯೋನ್ಮುಖ ಕಲಾವಿದರಿಗೆ ವೇದಿಕೆಯನ್ನು ಒದಗಿಸುವುದು, ಹಿರಿಯ ಕಲಾವಿದರನ್ನು ಸಮ್ಮಾನಿಸುವುದು, ಈ ಜಿಲ್ಲೆಯವರೇ ಆಗಿದ್ದು ಹೊರನಾಡಿನಲ್ಲಿ ನೆಲೆಸಿದ ಕಲಾವಿದರನ್ನೇ ಗುರುತಿಸಿ, ಅವರ ಕಾರ್ಯಕ್ರಮಗಳನ್ನು... ಪ್ರಸ್ತುತಪಡಿಸುವುದು..."(ಲೇ: ವಿಜಯನಾಥ ಶೆಣೈ, 2010, ಪು–36) ಸಂಗೀತಸಭಾದ ಉದ್ದೇಶವೆಂದು ಹೇಳಿಕೊಂಡಿದ್ದಾರೆ. ಈ ಉದ್ದೇಶಕ್ಕನುಸರಿಸಿ, 1963ರಲ್ಲಿ ನಡೆದ ಪುರಂದರದಾಸ 400ನೇ ಜನ್ಮೋತ್ಸವದಂದು ಪಿಟೀಲು ಮಂಜುನಾಥಯ್ಯನವರಿಗೆ ಸಮ್ಮಾನ ಮತ್ತು ನಿಧಿ ಸಮರ್ಪಣಕಾರ್ಯಕ್ರಮವನ್ನು ಏರ್ಪಡಿಸಿದರೆ 1964ನೇ ಇಸವಿಯ ಚಿತ್ರಕಲಾ ಪ್ರದರ್ಶನ ಮತ್ತು ಮೇಳದಲ್ಲಿ ಕೆ.ಕೆ. ಹೆಬ್ಬಾರರನ್ನು, ಕಾರ್ಕಳದ ಶಿಲ್ಪಿ ರೆಂಜಾಳ ಗೋಪಾಲಕೃಷ್ಣ ಶೆಣೈಯವರ ಅಭಿನಂದನ ಕಾರ್ಯಕ್ರಮವನ್ನು ನಡೆಸಲಾಯಿತು.

ಸಂಗೀತ ಸಭಾ ಇಂದಿಗೂ ಚಟುವಟಿಕೆಯನ್ನು ನಿರ್ವಹಿಸುತ್ತಾ ಬರುತ್ತಿರುವ ಸಶಕ್ತ ಸಂಘಟನೆಯೆಂದು ಗುರುತಿಸಿಕೊಂಡಿದೆ. ಆದರೆ 1963ರ ಅಂದಿನ ಉದ್ದೇಶವನ್ನೇ ಇರಿಸಿಕೊಂಡು ಅಪರೂಪಕ್ಕೊಮ್ಮೆ ಸಂಗೀತ ಗಾಯನಗೋಷ್ಠಿ, ಉಪನ್ಯಾಸ ಕಾರ್ಯಕ್ರಮಗಳನ್ನು ಹಮ್ಮಿಕೊಳ್ಳುವ ಮೂಲಕ ಕೇವಲ ಒಂದು ಗುಂಪಿನ ಚಟುವಟಿಕೆಯಾಗಿ ಮುಂದುವರಿಯುತ್ತಿದೆ. ಜಾನಪದ ಸಾಹಿತ್ಯದಲ್ಲಿರುವ ಲಯ, ಮಟ್ಟು, ಯಕ್ಷಗಾನ ಸಾಹಿತ್ಯದ ಸಂಗೀತದ ಸ್ವರೂಪ, ಆಧುನಿಕ ಸಿನೆಮಾ ಗೀತೆಗಳಲ್ಲಿರುವ ಸಂಗೀತದ ಶ್ರುತಿ ಈ ಕುರಿತಂತೆ ವರ್ತಮಾನದ ಅವಶ್ಯಕತೆಗಳಿಗನುಗುಣವಾಗಿ ಸಾಕಷ್ಟು ಚರ್ಚೆ ಸಂವಾದಗಳಿಗೆ ಅವಕಾಶವಿದ್ದೂ, ಕೇವಲ ಗತಕಾಲದ ಸೀಮಿತ ಉದ್ದೇಶಕ್ಕೆ ಬದ್ಧವಾಗಿರುತ್ತಾ ಈ ಬದ್ಧತೆಯೇ ನಿಷ್ಕ್ರಿಯತೆಯ ಸೂಚನೆಯನ್ನು ಸಂಕೇತಿಸುತ್ತಿದೆ.

**2. ಔ)ಲಾವಣ್ಯ, ಬೈಂದೂರು:** (1977)

ಬೈಂದೂರಿನ ಈ ಸಂಘಟನೆಯ ಗೌರವಾಧ್ಯಕ್ಷರಾಗಿ ಯು. ಶ್ರೀನಿವಾಸ ಪ್ರಭು ಅವರು, ಕಾರ್ಯದರ್ಶಿಯಾಗಿ ಶ್ರೀ ಗಣೇಶ ಕಾರಂತ ಅವರು 1977ರಲ್ಲಿ ಈ ಸಂಸ್ಥೆಯನ್ನು ಹುಟ್ಟುಹಾಕಿದರು. ರಂಗಕಲೆಗಳ ಅಭಿವ್ಯಕ್ತಿಗೆ ಪ್ರೋತ್ಸಾಹಿಸುವುದು ಹಾಗೂ ವಿವಿಧ ಸಂಘಟನೆಗಳು ಏರ್ಪಡಿಸುವ ಸ್ಪರ್ಧೆಗಳಲ್ಲಿ ಭಾಗವಹಿಸಿ, ತಮ್ಮ ರಂಗಸಿದ್ದಿಯನ್ನು ಅಥವಾ ನೈಪುಣ್ಯವನ್ನು ಸಾರ್ವಜನಿಕರ ಮುಂದೆ ಪ್ರದರ್ಶಿಸುವುದೇ ಇವರ ಒಟ್ಟಾರೆ ಉದ್ದೇಶವಾಗಿದೆ. 1977ರಿಂದ ಕ್ರಿ.ಶ. 2000ದ ವರೆಗೆ ಕೇವಲ ಪ್ರದರ್ಶನ ಚಟುವಟಿಕೆಗಳಿಗೆ ಹಾಗೂ ಸಾರ್ವಜನಿಕರಿಗೆ ವಿದ್ಯಾರ್ಥಿಗಳಿಗೆ ಸಾಂಸ್ಕೃತಿಕ ಹಾಗೂ ಸಾಹಿತ್ಯಕ ಸ್ಪರ್ಧೆಗಳನ್ನು ಏರ್ಪಡಿಸಿ ಸ್ಥಳೀಯ ವಿದ್ಯಾರ್ಥಿಗಳಲ್ಲಿ ಸಾಹಿತ್ಯಾಸಕ್ತಿಯನ್ನು ರೂಢಿಸುವುದಕ್ಕೆ ಗಂಭೀರಪ್ರಯತ್ನ ಮಾಡಿರುತ್ತಾರೆ. ತಮ್ಮ ಸಂಸ್ಥೆಯ ಉದ್ದೇಶದಂತೆ 1980 ರಿಂದ ಕ್ರಿ.ಶ. 2000 ದ ತನಕ ಜಿಲ್ಲೆಯ ಒಳಗೆ ಮತ್ತು ಹೊರಗೆ ವಿವಿಧ ಸಂಘಟನೆಗಳು ಏರ್ಪಡಿಸಿದ ನಾಟಕಸ್ಪರ್ಧೆಗಳಲ್ಲಿ ಭಾಗವಹಿಸಿ, ಬಹುಮಾನ ಪಡೆಯುವುದರೊಂದಿಗೆ ಜಿಲ್ಲೆಯಿಂದಲೂ, ನಾಟಕ ಅಕಾಡೆಮಿಯಿಂದಲೂ ಗುರುತಿಸಿಕೊಂಡಿದ್ದಾರೆ. ಕ್ರಿ.ಶ. 2000ದ ಅನಂತರದಲ್ಲಿ ನಾಟಕದ ಕುರಿತು ಸಂಪನ್ಮೂಲ ವ್ಯಕ್ತಿಗಳನ್ನು ಆಹ್ವಾನಿಸಿ, ರಂಗಕಲೆಯ ಕುರಿತಂತೆ ವಿಶೇಷ ಉಪನ್ಯಾಸವನ್ನು ಇರಿಸಿಕೊಂಡು ಪರಿಸರದ ವಿದ್ಯಾರ್ಥಿ ಹಾಗೂ ಸಾರ್ವಜನಿಕರಿಗೆ ನಾಟಕ ರಂಗಕಲೆಯ ಕುರಿತು ವಿಶೇಷ ಮಾಹಿತಿ ನೀಡುತ್ತಾ ಬಂದಿರುತ್ತಾರೆ.

**2. ಅಂ)ಸುರಭಿ ಸಾಹಿತ್ಯ ಸಂಘಟನೆ, ಬೈಂದೂರು:** 1996ರಲ್ಲಿ ಸುಧಾಕರ ಬೈಂದೂರು ಎಂಬುವವರ ನೇತೃತ್ವದಲ್ಲಿ ಈ ಸಂಘಟನೆಯು ಅಸ್ತಿತ್ವಕ್ಕೆ ಬಂದಿದ್ದು, ಸ್ಥಳೀಯ ಪರಿಸರದಲ್ಲಿ ಸಾಂಸ್ಕೃತಿಕ ಹಾಗೂ ಸಾಹಿತ್ಯಕ ಚಟುವಟಿಕೆಗಳನ್ನು ನಿರ್ವಹಿಸಿಕೊಂಡು ಹೋಗುವುದು ಈ ಸಂಘಟನೆಯ ಮುಖ್ಯ ಉದ್ದೇಶವಾಗಿದೆ. ಸಾಹಿತ್ಯದ ವಿವಿಧ ಪ್ರಕಾರಗಳು ಮತ್ತು ಸಮಕಾಲೀನ ಧೋರಣೆಗಳನ್ನು ಸಾಂಸ್ಕೃತಿಕ ಕಾರ್ಯಕ್ರಮಗಳ ಮತ್ತು ಉಪನ್ಯಾಸದ ಮೂಲಕ ಅಭಿವ್ಯಂಜಿಸುವುದೇ ಈ ಸಂಘಟನೆಯ ಪ್ರಧಾನ ಧೋರಣೆಯಾಗಿದೆ. ತಮ್ಮೀ ಸಂಘಟನೆಗೆ ಕರ್ನಾಟಕ ಸಾಹಿತ್ಯ ಅಕಾಡೆಮಿ, ಸ್ಥಳೀಯ ವಿವಿಧ ವೇದಿಕೆಗಳನ್ನು ಬಳಸಿಕೊಂಡು 20 ವರ್ಷಗಳಿಂದ ತಮ್ಮ ಕಾರ್ಯಚಟುವಟಿಕೆಗಳನ್ನು ಯಶಸ್ವಿಯಾಗಿ ನಿರ್ವಹಿಸಿಕೊಂಡು ಬಂದಿರುತ್ತಾರೆ. ತಮ್ಮ ಕಾರ್ಯಕ್ರಮಗಳಿಗಾಗಿ ಪರಿಸರದ ಶಾಲಾ ಕಾಲೇಜು, ದೇಗುಲದ ಸಭಾಮಂದಿರವನ್ನು ಬಳಸಿಕೊಳ್ಳುತ್ತಿದ್ದಾರೆ.

**2. ಅಃ) ಹಂಗಳೂರು ಗೆಳೆಯರ ಬಳಗ, ಹಂಗಳೂರು:** 1965ರಲ್ಲಿ ಅಸ್ತಿತ್ವಕ್ಕೆ ಬಂದ ಈ ಸಾಹಿತ್ಯ ಹಾಗೂ ಸಾಂಸ್ಕೃತಿಕ ಒಕ್ಕೂಟದ ಸ್ಥಾಪಕರು ವಿ. ಬಾಬು ಶೆಟ್ಟಿ ಎಂಬ ಸಾಹಿತ್ಯಾಸಕ್ತ ಸಹೃದಯರು. ತಮ್ಮದೇ ಪರಿಸರದ ತನ್ನ ಧೋರಣೆಗೆ ಸ್ಪಂದಿಸುವ ಕೆಲವೇ ಕೆಲವು ಆಸಕ್ತ ಸ್ನೇಹಿತರನ್ನು ಕೂಡಿಕೊಂಡು ಈ ಸಂಘಟನೆಯ ಮೂಲಕ ಸಾಹಿತ್ಯಕ ಮತ್ತು ಸಾಂಸ್ಕೃತಿಕ ಚಟುವಟಿಗಳನ್ನು ಸುಮಾರು 50 ವರ್ಷಗಳಿಂದ ನಿರ್ವಹಿಸಿಕೊಂಡು ಬರುತ್ತಿದ್ದಾರೆ.

**ಚಟುವಟಿಕೆಯ ಸಂಕ್ಷಿಪ್ತ ಅವಲೋಕನ:** ಅ) ಸಾಹಿತ್ಯ ಸ್ಪರ್ಧೆಯನ್ನು ಏರ್ಪಡಿಸುವುದು. ಆ) ಸಾಹಿತ್ಯೋಪನ್ಯಾಸವನ್ನು ಹಮ್ಮಿಕೊಳ್ಳುವುದು ಇ) ಜಿಲ್ಲೆಯ ಒಳಗೆ ಮತ್ತು ಹೊರಗೆ ನಡೆಯುವ ಸಾಹಿತ್ಯಸ್ಪರ್ಧೆಗಳಲ್ಲಿ ಭಾಗವಹಿಸಲು ಸ್ಥಳೀಯ ಆಸಕ್ತ ವಿದ್ಯಾರ್ಥಿ-ವಿದ್ಯಾರ್ಥಿನಿಯರಿಗೆ ತರಬೇತಿ ನೀಡುವುದು ಈ) ಸಾಹಿತ್ಯ ಹಾಗೂ ಸಾಂಸ್ಕೃತಿಕ ಕ್ಷೇತ್ರಗಳಲ್ಲಿ ಸಾಧನೆಗೈದ ತಜ್ಞರನ್ನು ಸಾರ್ವಜನಿಕವಾಗಿ ಗೌರವಿಸುವುದು. ಉ) ರಾಷ್ಟ್ರೀಯ ಹಬ್ಬಗಳಾದ ಸ್ವಾತಂತ್ರ್ಯದಿನಾಚರಣೆ, ಗಾಂಧೀಜಯಂತಿ, ಗಣರಾಜ್ಯೋತ್ಸವವನ್ನು ವಿದ್ಯಾರ್ಥಿಗಳ ಪಾಲ್ಗೊಳ್ಳುವಿಕೆಯೊಂದಿಗೆ ಆಚರಿಸುವುದು ಊ) ಓದುವ ಹವ್ಯಾಸವನ್ನು ರೂಢಿಸುವುದಕ್ಕಾಗಿ ವಾಚನಾಲಯದ ವ್ಯವಸ್ಥೆಯನ್ನು ಏರ್ಪಡಿಸಿರುವುದು. ಈ ಮುಂತಾದ ಚಟುವಟಿಕೆಗಳನ್ನು ಅಚ್ಚುಕಟ್ಟಾಗಿ ಈ ತನಕ ನಿರ್ವಹಿಸಿಕೊಂಡು ಬಂದಿರುತ್ತಾರೆ.

**ವಾಚನಾಲಯದ ವ್ಯವಸ್ಥೆ:** ನಗರದಲ್ಲಿ/ಪೇಟೆಯಲ್ಲಿ ವಾಸಿಸುವ ಬಡ ಕುಟುಂಬದ ಶಾಲಾ ಕಾಲೇಜು ವಿದ್ಯಾರ್ಥಿಗಳಿಗೆ ತಮ್ಮ ಮನೆಯಲ್ಲಿ ಓದಿಕೊಳ್ಳುವುದಕ್ಕೆ-ಬರೆಯುವುದಕ್ಕೆ ಸೂಕ್ತ ವ್ಯವಸ್ಥೆ ಇಲ್ಲದಿರುವುದರಿಂದ ಅಂತಹ ವಿದ್ಯಾರ್ಥಿಗಳಿಗೆ ವಾಚನಾಲಯದ ಕೊಠಡಿಯು ಅನುಕೂಲವಾಗಿ ಪರಿಣಮಿಸಿದೆ. ಈ ವಾಚನಾಲಯದ ಅನುಕೂಲ ಪಡೆದು, ಉದ್ಯೋಗದಲ್ಲಿರುವ ಅನೇಕ ಮಂದಿ, ಈ ಪರಿಸರದಲ್ಲಿದ್ದಾರೆ ಎನ್ನುವುದು ಗೆಳೆಯರ ಬಳಗದ ಸ್ಥಾಪಕ ಬಾಬು ಶೆಟ್ಟಿಯವರಿಗೆ ಹೆಮ್ಮೆಯ ಸಂಗತಿ.

1999ರಿಂದ ಗ್ರಂಥಾಲಯವನ್ನು ಕೇವಲ ವರ್ತಮಾನಪತ್ರಿಕೆಗಳನ್ನು ಓದುವುದಕ್ಕಷ್ಟೇ ಬಳಸಿಕೊಳ್ಳುತ್ತಿದ್ದು, ಗ್ರಂಥಾಲಯದ ಯಾವುದೇ ಪುಸ್ತಕಗಳನ್ನು ಪರಿಸರದ ವಿದ್ಯಾರ್ಥಿಗಳಾಗಲೀ, ಸಾರ್ವಜನಿಕರಾಗಲೀ ಪಡೆದುಕೊಂಡು ಓದುತ್ತಿಲ್ಲ ಎನ್ನುವುದು ಬಾಬು ಶೆಟ್ಟಿಯವರ ನೋವಿನ ಹೇಳಿಕೆಯಾಗಿದೆ. ಯಾವುದೇ ಸಾಹಿತ್ಯಚಟುವಟಿಕೆಗಳನ್ನು ಹಮ್ಮಿಕೊಂಡಾಗಲೂ ವಿದ್ಯಾರ್ಥಿಗಳ ನೀರಸ ಪ್ರತಿಕ್ರಿಯೆಯಿಂದ ಬೇಸತ್ತಿದ್ದೇನೆ ಎಂಬ ಹೇಳಿಕೆಯನ್ನು ಸಂದರ್ಶನದ ಸಂದರ್ಭದಲ್ಲಿ ನೀಡಿರುತ್ತಾರೆ. ತನ್ನ ಸ್ಥಳ ಮತ್ತು ಕಟ್ಟಡವು ಸಾಹಿತ್ಯದ ಉದ್ದೇಶಗಳಿಗೆ ಬಳಕೆಯಾಗದಿರುವುದರಿಂದ ಈ ಸ್ವತ್ತುಗಳನ್ನು ಮುಂದೇನು ಮಾಡಲಿ? ಎಂಬ ಪ್ರಶ್ನೆಯನ್ನು ತನಗೇ ಹಾಕಿಕೊಂಡು ಶೆಟ್ಟಿಯವರು ಚಿಂತಿತರಾಗಿದ್ದಾರೆ.

**3. ಸಾಂಸ್ಕೃತಿಕ ಮತ್ತು ಸಂಶೋಧನ ಚಟುವಟಿಕೆಗಳಿಗೆ ಬದ್ಧವಾದ ಸಂಘಟನೆಗಳು:**

1) ಕುಂದ ಅಧ್ಯಯನಕೇಂದ್ರ, ಉಪ್ಪುಂದ 2) ಕನ್ನಡಸಂಘ, ಕಾಂತಾವರ, 3) ಗೋವಿಂದ ಪೈ ಸಂಶೋಧನ ಕೇಂದ್ರ ಎಂ.ಜಿ.ಎಂ. ಕಾಲೇಜು, ಉಡುಪಿ, 4) ಜಾನಪದ ರಂಗಕಲೆಗಳ ಅಧ್ಯಯನಕೇಂದ್ರ, ಉಡುಪಿ 5) ಯಕ್ಷಗಾನ ಕೇಂದ್ರ, ಎಂ.ಜಿ.ಎಂ. ಕಾಲೇಜು ಆವರಣ ಉಡುಪಿ 6) ಡಾ. ಕೆ. ಶಿವರಾಮ ಕಾರಂತ ಸಂಶೋಧನೆ ಮತ್ತು ಅಧ್ಯಯನ ಸಂಸ್ಥೆ (ರಿ.) ಸಾಲಿಗ್ರಾಮ 7) ಯಕ್ಷಗಾನ ಕಲಾಕ್ಷೇತ್ರ (ರಿ.), ಉಡುಪಿ, 8) ಯಕ್ಷಗಾನ ಕಲಾರಂಗ, ಉಡುಪಿ 9) ಯಕ್ಷಗಾನ ಕಲಾಕೇಂದ್ರ ಐರೋಡಿ, ಹಂಗಾರಕಟ್ಟೆ

**3.1) ಕುಂದ ಅಧ್ಯಯನ ಕೇಂದ್ರ, ಉಪ್ಪುಂದ:** (1993) ಇದರ ಸಂಸ್ಥಾಪಕರು ಉಪ್ಪುಂದ ಚಂದ್ರಶೇಖರ ಹೊಳ್ಳರು ಹಾಗೂ ಉತ್ತೇಜಕರು ಅವರ ಧರ್ಮಪತ್ನಿ ಶ್ರೀಮತಿ ವರಮಹಾಲಕ್ಷ್ಮೀ ಹೊಳ್ಳರು. ದಕ್ಷಿಣದ ಕಲ್ಯಾಣಪುರದ ಸುವರ್ಣಾನದಿಯಿಂದ ಉತ್ತರದ ಶಿರೂರಿನ ತನಕದ ವ್ಯಾಪ್ತಿಯ ಕುಂದಗನ್ನಡ ಪ್ರದೇಶದ ಇತಿಹಾಸ, ಜಾನಪದ, ಲಿಖಿತಸಾಹಿತ್ಯ, ಎಂಬಿತ್ಯಾದಿ ವಿಚಾರಗಳ ಕುರಿತಾಗಿ ವಿಶೇಷ ಅಧ್ಯಯನ ನಡೆಸುವುದಕ್ಕಾಗಿ ಮಾಹಿತಿ ಸಂಗ್ರಹಿಸಿ, ಆಕರಗಳನ್ನು ಕಲೆಹಾಕುವುದು (ಜನಪದ ಸಾಹಿತ್ಯದ ದಾಖಲೀಕರಣ ಮತ್ತು ಕೃತಿಪ್ರಕಟಣೆ, ಶಾಸನಗಳ ಸಂಗ್ರಹ, ಸಂಸ್ಕೃತಿಗೆ ಸಂಬಂಧಿಸಿದ ಭೌತಿಕ ಪರಿಕರಗಳ ಸಂಗ್ರಹ, ಗ್ರಂಥ ಸಂಪಾದನೆ, ಅಪ್ರಕಟಿತಕೃತಿಗಳ ಸಂಗ್ರಹ, ಕುಂದಗನ್ನಡ ಶಬ್ದಕೋಶದ ಯೋಜನೆ ಇತ್ಯಾದಿ... ಇತ್ಯಾದಿ...) ಈ ಅಧ್ಯಯನಕೇಂದ್ರದ ಮುಖ್ಯ ಗುರಿಯಾಗಿರುತ್ತದೆ. ತಮ್ಮ ವಾಸಸ್ಥಳವಾದ ಉಪ್ಪುಂದದ ಬೆಳ್ಳಿರಥದ ಸನಿಹದಲ್ಲಿಯೇ ಈಗಾಗಲೇ ವಾಚನಾಲಯ, ಗ್ರಂಥಾಲಯ, ಸಭಾಮಂದಿರವನ್ನು ಈ ಉದ್ದೇಶಕ್ಕಾಗಿಯೇ ವ್ಯವಸ್ಥೆಗೊಳಿಸಿಕೊಂಡಿದ್ದು, ಶಾಸನ ತಜ್ಞ ಪಿ.ಎನ್. ನರಸಿಂಹಮೂರ್ತಿಯವರ ನೆರವಿನೊಂದಿಗೆ ಕುಂದಗನ್ನಡ ಪ್ರದೇಶದ ಭೌಗೋಳಿಕ ಪ್ರದೇಶದ ಇತಿಹಾಸಕ್ಕೆ ಸಂಬಂಧಿಸಿ ಸಮಗ್ರ ಮಾಹಿತಿ ಸಂಗ್ರಹಿಸಿ, ಈ ಪ್ರದೇಶದ ಅಧ್ಯಯನಕ್ಕಾಗಿ ವಿಶೇಷ ಯೋಜನೆಯನ್ನು ರೂಪಿಸಿಕೊಂಡು ಮುಂದುವರಿಯುತ್ತಿದ್ದಾರೆ.

ಕುಂದಭಾಷೆಗೆ ಸಂಬಂಧಿಸಿ, ನಿಘಂಟುಯೋಜನೆಗೆ ಪ್ರಾಥಮಿಕ ತಳಹದಿಯಾಗಿ ಕ್ಷೇತ್ರಕಾರ್ಯ ಯೋಜನೆಗಳನ್ನು ಯಶಸ್ವಿಯಾಗಿ ನಿಭಾಯಿಸಿಕೊಂಡು ಬಂದಿದ್ದರೂ ನಿಷ್ಠಾವಂತ ಸಮರ್ಪಣಮನೋಭಾವದ ಸಂಸ್ಕೃತಿ ಪ್ರೇಮವುಳ್ಳ ಆಸಕ್ತ ಯುವಕ/ಯುವತಿಯರ ಕೊರತೆಯ ದೆಸೆಯಿಂದಾಗಿ ಈ ಕಾರ್ಯಯೋಜನೆಯು ಅಸಾಧ್ಯವೆಂದು ಕೈಬಿಟ್ಟಿರುತ್ತಾರೆ.

**3.2)ಕನ್ನಡಸಂಘ, ಕಾಂತಾವರ:** (1976) ಕಾಂತಾವರ ಕನ್ನಡಸಂಘವು ಅದರ ಅಧ್ಯಕ್ಷರಾದ ಡಾ. ನಾ. ಮೊಗಸಾಲೆಯವರ ಮನೋಭಿತ್ತಿಯಲ್ಲಿ ಮೂಡಿ ಕಾರ್ಯರೂಪಕ್ಕೆ ಬಂದ ಒಂದು ರಚನಾತ್ಮಕ ಒಕ್ಕೂಟವಾಗಿದೆ. ಸಂಘವು 20ನೇ ಶತಮಾನದಲ್ಲಿ ಕೇವಲ ಗ್ರಂಥಪ್ರಕಟನೆ ಹಾಗೂ ಉಪನ್ಯಾಸ/ಸಂವಾದ ಕಾರ್ಯಕ್ರಮಗಳಿಗಷ್ಟೇ ಬದ್ಧವಾಗದೆ ತನ್ನ ಕಾರ್ಯಚಟುವಟಿಕೆಯ ಬಗೆಗಳನ್ನು ವಿಸ್ತರಿಸಿಕೂಂಡು ಕಾಲಕಾಲಕ್ಕೆ ಎದುರಾಗುವ ಸಮಕಾಲೀನ ಸಮಸ್ಯೆಗೆ ಸಾಹಿತ್ಯದ ಮೂಲಕ ಪ್ರತಿಕ್ರಿಯಿಸುವ ಒಂದು ಪ್ರಗತಿಪರ ಒಕ್ಕೂಟ ಎನ್ನುವುದನ್ನು ಕರ್ನಾಟಕದ ಸಾಹಿತ್ಯಾಭಿಮಾನಿಗಳಿಗೆ ಈಗಾಗಲೇ ಮನದಟ್ಟು ಮಾಡಿಕೊಟ್ಟಿದೆ. ಆ ಕಾರ್ಯಚಟುವಟಿಕೆಗಳ ಕುರಿತು ಸಂಕ್ಷಿಪ್ತ ವಿಶ್ಲೇಷಣೆಯು ಈ ಅಧ್ಯಯನವಿಷಯಕ್ಕೆ ಪೂರಕವಾದ ಕಾರಣ ಅವುಗಳನ್ನಿಲ್ಲಿ ದಾಖಲಿಸುವುದು ಔಚಿತ್ಯಪೂರ್ಣವಾಗಿದೆ.

**ಗ್ರಂಥ ಪ್ರಕಟನೆ:** ಕನ್ನಡ ಸಂಘದ ಸಂಸ್ಥಾಪಕರಾದ ಡಾ. ನಾ. ಮೊಗಸಾಲೆಯವರು ಸ್ವತಃ ಲೇಖಕರಾಗಿದ್ದು, ಹದಿನೈದು ಕಾದಂಬರಿ, ಹನ್ನೊಂದು ಕವನಸಂಕಲವನ್ನು, ಆರು ಸಣ್ಣಕಥಾ ಸಂಕಲನಗಳನ್ನು ಹೊರತಂದಿದ್ದಾರೆ. ಕನ್ನಡ ಸಂಘದ ಮೂಲಕ ಪ್ರಕಟಿಸಿದ ಪ್ರಕಟಣೆಗಳು (ಸೃಜನೇತರ) ಕನ್ನಡ ಸಾಹಿತ್ಯ ಮತ್ತು ಸಂಸ್ಕೃತಿಗೆ ಸಂಬಂಧಿಸಿದ ಕೃತಿಗಳಾಗಿವೆ.

**ದಕ್ಷಿಣಕನ್ನಡದ ಶತಮಾನದ ಕಾವ್ಯ:** ಏಕೀಕರಣಪೂರ್ವದ ಅವಿಭಜಿತ ದ.ಕ. ಜಿಲ್ಲೆಯಲ್ಲಿ 1900 ರಿಂದ 2000 ತನಕದ ನೂರು ವರ್ಷದ (ಒಂದು ಶತಮಾನದ) ವಿವಿಧ ಕಾಲಘಟ್ಟದಲ್ಲಿ ಹುಟ್ಟಿದ ಕನ್ನಡ ಕವಿಗಳ ಕೃತಿರಚನೆಗಳನ್ನು ಇದರಲ್ಲಿ ಸಂಕಲಿಸಲಾಗಿದೆ. ಶತಮಾನದ ಬೇರೆ ಬೇರೆ ಕಾಲಾವಧಿಯಲ್ಲಿ ಕವಿ ಮನಸ್ಸು ಭಿನ್ನಭಿನ್ನವಾಗಿ ಸ್ಪಂದಿಸಿದ ಬಗೆಯನ್ನು ಅಧ್ಯಯನ ಮಾಡುವ ಸಾಹಿತ್ಯಚರಿತ್ರೆಯ ನಿರೂಪಕರಿಗೆ ಇದೊಂದು ಅಮೂಲ್ಯ ಆಕರಗ್ರಂಥವಾಗಿದೆ.

**ಬೆಳ್ಳಿಬೆಳಕು:** ಕನ್ನಡ ಸಂಘದ ಇನ್ನೊಂದು ದಾಖಲಿಸಲೇಬೇಕಾದ ಪ್ರಕಟಣೆ 'ಬೆಳ್ಳಿಬೆಳಕು' ಎಂಬ ಸಂಚಿಕೆಯಾಗಿದ್ದು, ಇದು ಕನ್ನಡಸಂಘದ ಬೆಳ್ಳಿಹಬ್ಬದ ನೆನಪಿನ ಸಂಚಿಕೆಯಾಗಿದೆ. 25 ವರ್ಷದಲ್ಲಿ ಕನ್ನಡಸಂಘವು ನಡೆಸಿದ ಕಾರ್ಯಕ್ರಮಗಳ ವಿವರಗಳು, ಆಗಮಿಸಿದ ಸಂಪನ್ಮೂಲ ವ್ಯಕ್ತಿಗಳ ಸಮಗ್ರ ಮಾಹಿತಿ ಕೈಪಿಡಿಯಾಗಿ ಈ ಕೃತಿಯು ಪ್ರಕಟಗೊಂಡಿರುತ್ತದೆ.

**ಅರ್ಥಪೂರ್ಣವಾಗಿ ಆಚರಿಸಿದ ರಜತಮಹೋತ್ಸವ ಕಾರ್ಯಕ್ರಮ:** ಆರಂಭದ ವರ್ಷಗಳಲ್ಲಿ ಕನ್ನಡ ಸಂಘದ ಅಧಿಕೃತ ಕಛೇರಿ, ಬೇಲಾಡಿ ಶಾಲೆಯಾಗಿದ್ದು, ಬೆಳ್ಳಿಹಬ್ಬದ ಕಾರ್ಯಕ್ರಮದ ಉದ್ಘಾಟನೆಯು ಬೇಲಾಡಿ ಶಾಲಾ ನಾಡಹಬ್ಬದ ಸಾಂಸ್ಕೃತಿಕ ವೇದಿಕೆಯಲ್ಲಿಯೇ ನಡೆದಿತ್ತು. ಬೆಳ್ಳಿಹಬ್ಬದ ಪ್ರಯುಕ್ತ ಕಾಂತಾವರದ ಕನ್ನಡಸಂಘದ ಪರಿವಾರಕ್ಕೆ ಸೇರಿದ 5 ಗ್ರಾಮಗಳಲ್ಲಿ ತಿಂಗಳಿಗೊಂದರಂತೆ ಒಂದೊಂದು ಕಾರ್ಯಕ್ರಮವನ್ನು ಬೆಳ್ಳಿಹಬ್ಬದ ತಿಂಗಳ ಕಾರ್ಯಕ್ರಮವಾಗಿ ಭಿನ್ನಭಿನ್ನ ರೀತಿಯಲ್ಲಿ ನಡೆಸಲಾಗಿತ್ತು. ಈ ಕಾರ್ಯಕ್ರಮಗಳ ಒಟ್ಟು ಉದ್ದೇಶ: ಕನ್ನಡ ಸಾಹಿತ್ಯ-ಸಂಸ್ಕೃತಿಯ ಕುರಿತು ಪ್ರಾತ್ಯಕ್ಷಿಕೆಯೊಂದಿಗೆ ಶ್ರೀ ಸಾಮಾನ್ಯನ ಮಟ್ಟದಿಂದ ವಿದ್ವಾಂಸರ ವಲಯದ ವರೆಗಿನ ಸಹೃದಯರಲ್ಲಿ ಕನ್ನಡ ಸಾಹಿತ್ಯದ ಸತ್ತ್ವ ಮತ್ತು ಸಂಸ್ಕೃತಿಯ ಮಹತ್ತ್ವವನ್ನು ಮನಗಾಣಿಸುವುದೇ ಆಗಿದೆ.

**'ನಾಡಿಗೆ ನಮಸ್ಕಾರ' ನೂತನ ಗ್ರಂಥಮಾಲಾಯೋಜನೆ:**

ತಮ್ಮ ಪ್ರಗತಿಪರ ಚಿಂತನೆ ಮೌಲಿಕವಾದ ಕೊಡುಗೆಗಳಿಂದ ಕನ್ನಡ ಸಾಹಿತ್ಯ ಮತ್ತು ಸಾಂಸ್ಕೃತಿಕ ಇತಿಹಾಸದಲ್ಲಿ ನೆನಪಿಸಿಕೊಳ್ಳಬೇಕಾದ ಅವಿಭಜಿತ ದ.ಕ. ಜಿಲ್ಲೆಯ ಅದೆಷ್ಟೋ ಮಹನೀಯರ ಕೊಡುಗೆಗಳನ್ನು ಲಿಖಿತವಾಗಿ ದಾಖಲಿಸುವ ಕಿರುಗ್ರಂಥ ಪ್ರಕಟಣೆಯೇ 'ನಾಡಿಗೆ ನಮಸ್ಕಾರ' ಗ್ರಂಥಮಾಲೆಯಾಗಿದೆ.

**ಪ್ರಶಸ್ತಿ ಪುರಸ್ಕಾರ ಯೋಜನೆ:** ಕನ್ನಡ ಸಾಹಿತ್ಯಲೋಕಕ್ಕೆ ಮೌಲಿಕ ಕವನಸಂಕಲನಗಳನ್ನು ನೀಡಿದ ಕವಿಗಳನ್ನು ಅವರ ಕೃತಿಗಳನ್ನು ಗೌರವಿಸುವ ಸಲುವಾಗಿ ನಾಡಿನ ಹಿರಿಯ ಸಾಹಿತ್ಯಸಂಸ್ಥೆಗಳ ಮಾದರಿಯಲ್ಲಿ 'ಮುದ್ದಣ ಪ್ರಶಸ್ತಿ', 'ಕಾಂತಾವರ ಪುರಸ್ಕಾರ' ಎಂಬ ಯೋಜನೆಗಳನ್ನು ಕಾರ್ಯಗತಗೊಳಿಸಿದ್ದಾರೆ. 1979ರಿಂದ ಕ್ರಿ.ಶ. 2000ದ ತನಕ 20ನೇ ಶತಮಾನದ ಅವಧಿಯಲ್ಲಿ ಒಟ್ಟು 22 ಮಂದಿ ಪ್ರಶಸ್ತಿಯನ್ನು ಪಡೆದುಕೊಂಡಿರುತ್ತಾರೆ. ರಾಜ್ಯಮಟ್ಟದಲ್ಲಿ ನೀಡುವ ಈ ಪ್ರಶಸ್ತಿಗೆ ಕನ್ನಡ ನಾಡಿನ ವಿವಿಧ ಲೇಖಕರು ಪಾತ್ರರಾಗಿದ್ದಾರೆ.

**ನುಡಿಹಾರ ಯೋಜನೆ:** ನುಡಿನಮನ ಎಂಬ ಯೋಜನೆಯಲ್ಲಿ ಪ್ರತಿತಿಂಗಳು ಕನ್ನಡ ಸಂಘದ ವೇದಿಕೆಯಲ್ಲಿ ಸಂಪನ್ಮೂಲ ವ್ಯಕ್ತಿಗಳು ನೀಡುವ ಉಪನ್ಯಾಸವನ್ನು ಅಕ್ಷರರೂಪದ ದಾಖಲೀಕೃತ ಹೊತ್ತಿಗೆಯಾದ 'ನುಡಿಹಾರ' ಎಂಬ ಸಂಪುಟಗಳಲ್ಲಿ ಪ್ರಕಟಗೊಳ್ಳುತ್ತವೆ. ಉಪನ್ಯಾಸದಲ್ಲಿ ಪ್ರಸ್ತಾಪಿಸಲಾದ ಹಾಗೂ ಅದೇ ಸಂದರ್ಭದಲ್ಲಿ ನಡೆದ ಪೂರಕ ಚರ್ಚೆಯ ಸಂವಾದದ ಅದೆಷ್ಟೋ ಹೊಸ ವಿಚಾರಗಳು ದಾಖಲೆ ರೂಪವಾಗಿ ಮುಂದಿನ ಅಧ್ಯಯನಕಾರರಿಗೆ ಅವಶ್ಯವಾಗುತ್ತದೆ ಎಂಬ ದೃಷ್ಟಿಯಿಂದ 'ನುಡಿಹಾರ' ಎಂಬ ಹೆಸರಿನಲ್ಲಿ ಸಂಪುಟರೂಪವಾಗಿ ಹೊರಬರುತ್ತಿದೆ.

**ಸಾಹಿತ್ಯ ಸಂಸ್ಕೃತಿಯ ಕುರಿತಾಗಿ ಸಂಶೋಧನೆಯತ್ತ ಹೆಜ್ಜೆ....:** ಕಾಂತಾವರ ಕನ್ನಡ ಸಂಘವು ಕನ್ನಡ ಭವನ ಎಂಬ ವಿಶಾಲ ಆವರಣದೊಳಗೆ ನಡೆಸಿದ ಉಪನ್ಯಾಸ, ಸಂವಾದ, ಗ್ರಂಥಪ್ರಕಟಣೆ, ಸಾಂಸ್ಕೃತಿಕ ಕಾರ್ಯಕ್ರಮಗಳು, ಪ್ರಶಸ್ತಿ ಪುರಸ್ಕಾರ

ಯೋಜನೆಗಳು ನಿರಂತರವಾಗಿ ಮುಂದುವರಿದುಕೊಂಡು ಬಂದು, ಈಗಾಗಲೇ ಕನ್ನಡ ಸಾಹಿತ್ಯದ ವಿದ್ಯಾರ್ಥಿಗಳು ಸಾಕಷ್ಟು ರೀತಿಯ ಸಾಹಿತ್ಯ ಪ್ರಯೋಜನವನ್ನು ಪಡೆದುಕೊಂಡಿರುತ್ತಾರೆ. ಅಧ್ಯಯನಕ್ಕಾಗಿ ಸಂಸ್ಥೆಯ 'ಭೌತಿಕ' ಹಾಗೂ 'ಬೌದ್ಧಿಕ' ಆಕರಗಳನ್ನು ಅಧ್ಯಯನಕಾರರು ಸಮರ್ಪಕವಾಗಿ ದುಡಿಸಿಕೊಂಡಿರುತ್ತಾರೆ. ಸಾಹಿತ್ಯ-ಸಂಸ್ಕೃತಿಗೆ ಸಂಬಂಧಿಸಿದ ಅಧ್ಯಯನ ವಿಚಾರಗಳಲ್ಲಿ ಸುಮಾರು ಮೂರು ದಶಕಗಳ ಕಾಲ ನಿರಂತರ ತೊಡಗಿಕೊಂಡ ಕನ್ನಡ ಸಂಘವು 2012ರಲ್ಲಿ **ಅಲ್ಲಮಪ್ರಭು ಪೀಠ** ಎಂಬ ವೇದಿಕೆಯನ್ನು ಹುಟ್ಟುಹಾಕಿದೆ. ಈ ವೇದಿಕೆಯ ಮೂಲಕ ಹನ್ನೊಂದು-ಹನ್ನೆರಡನೆ ಶತಮಾನದ ಕಾಲಾವಧಿಯಲ್ಲಿ ಕನ್ನಡ ಸಾಹಿತ್ಯದ ವ್ಯಾಪ್ತಿ ಮತ್ತು ಸತ್ತ್ವವನ್ನು ಹಿಗ್ಗಿಸಿದ ವಚನಸಾಹಿತ್ಯದ ಮೇರುಕವಿ ಅಲ್ಲಮನ ಹೆಸರಿನಲ್ಲಿ ಕನ್ನಡ ಸಾಹಿತ್ಯದ ಕುರಿತಾಗಿ ವಿಶೇಷ ಅಧ್ಯಯನ-ಚಿಂತನೆ-ಸಂಶೋಧನೆ-ಪ್ರಕಟಣೆಯ ನೂತನ ಯೋಜನೆಯನ್ನು ಹಾಕಿಕೊಂಡಿದೆ. **'ನುಡಿಹಾರ'** ಸಂಪುಟ 5ರಲ್ಲಿ ಸಂಪುಟದ ಸಂಪಾದಕ ಡಾ. ಎಸ್.ಆರ್. ಅರುಣಕುಮಾರ್ ಅವರು 'ಕಾಂತಾವರ ಕನ್ನಡ ಸಂಘದ ಕನ್ನಡದ ಪರಿಚಾರಿಕೆ' ಎಂಬ ಶೀರ್ಷಿಕೆಯಲ್ಲಿ ಈ ವಿಚಾರವಾಗಿ ಪ್ರಸ್ತಾಪಿಸಿರುತ್ತಾರೆ. ಕನ್ನಡ ಸಂಘದ ಈ ಯೋಜನೆಗೆ ಪೂರಕವಾಗಿ ಸಾಂಸ್ಕೃತಿಕ ಕಾರ್ಯಕ್ರಮಗಳ ಯಶಸ್ವೀ ಪ್ರಯೋಗಕ್ಕಾಗಿ ಬಯಲುರಂಗಮಂದಿರ ಯೋಜನೆಯು ನಿರ್ಮಾಣ ಹಂತದಲ್ಲಿರುವುದನ್ನು ಗಮನಿಸಬಹುದಾಗಿದೆ. ಸಂಶೋಧನ ಚಟುವಟಿಕೆಗಳಿಗೆ ಪೂರಕವಾಗಿ ಅವಶ್ಯವಿರುವ ಸಭಾಭವನ ಮತ್ತು ಅಧ್ಯಯನಕೇಂದ್ರ (ಅನುಭವ ಮಂಟಪ) ಬಹುಭಾಷಾ ಅಂತಾರಾಷ್ಟ್ರೀಯ ಮಟ್ಟದ ಗ್ರಂಥಾಲಯ (ಷಟ್‌ಸ್ಥಳ) ಈ ಮುಂತಾದ ಪೂರಕವ್ಯವಸ್ಥೆಗೆ ಅವಶ್ಯವಾದ ಆರ್ಥಿಕ ನೆರವಿಗಾಗಿ ಸಂಸ್ಥೆಯು ಸರಕಾರದ ಸಹಾಯವನ್ನು ಇದಿರು ನೋಡುತ್ತಿದೆ.

ಮೊಗಸಾಲೆಯವರು ಮೂರು ದಶಕಗಳ ಕಾಲ ವೈದ್ಯರಾಗಿ, ಸಂಘಟಕರಾಗಿ, ಸೃಜನಶೀಲ ಲೇಖಕರಾಗಿ ಕನ್ನಡ ನಾಡಿಗೆ ನೀಡಿದ ಸಾಹಿತ್ಯ ಮತ್ತು ಸಂಸ್ಕೃತಿಯ ಕೊಡುಗೆಯಲ್ಲಿ ಯಶಸ್ಸನ್ನು ಕಂಡವರಾಗಿದ್ದು, ಮುಂದಿನ ಕಾಲಘಟ್ಟದಲ್ಲಿ ಪ್ರಭುಶಕ್ತಿಯ ಕೃಪೆ ಇದ್ದಲ್ಲಿ ಅವರೆಲ್ಲಾ ಕನಸು ನನಸಾಗುವುದಕ್ಕೆ ಸಾಧ್ಯ. ಪ್ರಭುಶಕ್ತಿಯ ಕೃಪೆ ಇಲ್ಲದೇ ಹೋದಲ್ಲಿ ಸಂಸ್ಥೆಯ ಜಂಗಮವಾಗುವ ಕನಸು ಸ್ಥಾವರದಲ್ಲೇ ಉಳಿದುಬಿಡುವ ಸಾಧ್ಯತೆಗಳಿವೆ. ಸ್ಥಾವರಗೊಂಡ ಸಂಸ್ಥೆಗಳು ಕಾಲಕಾಲಕ್ಕೆ ಬರುವ ಸವಾಲುಗಳನ್ನು ಎದುರಿಸುವಲ್ಲಿ ವಿಫಲವಾಗಿ ಜಿಲ್ಲೆಯ ಇತರ ಕನ್ನಡ ಸಂಸ್ಥೆಗಳಂತೆ ಕಾಂತಾವರ ಕನ್ನಡ ಸಂಘವೂ ವಿಳಾಸ ಕಳೆದುಕೊಂಡಲ್ಲಿ ಆಶ್ಚರ್ಯಪಡಬೇಕಾಗಿಲ್ಲ.

**3.3) ರಾಷ್ಟ್ರಕವಿ ಮಂಜೇಶ್ವರ ಗೋವಿಂದ ಪೈ ಸಂಶೋಧನ ಕೇಂದ್ರ, ಉಡುಪಿ: (ಎಂ.ಜಿ.ಎಂ. ಕಾಲೇಜು ಆವರಣ, ಉಡುಪಿ)**

ರಾಷ್ಟ್ರಕವಿ ಮಂಜೇಶ್ವರ ಗೋವಿಂದ ಪೈ ಅವರ ನಿಧನಾನಂತರ ಅವರ ಮಂಜೇಶ್ವರದ ಮನೆಯಲ್ಲಿದ್ದ ಪುಸ್ತಕಭಂಡಾರ ಎಂ.ಜಿ.ಎಂ. ಕಾಲೇಜಿನ ಪ್ರಾಂಶುಪಾಲರಾಗಿದ್ದ ಕು.ಶಿ. ಹರಿದಾಸ ಭಟ್ಟರ ಪ್ರಯತ್ನದಿಂದಾಗಿ ಎಂ.ಜಿ.ಎಂ. ಕಾಲೇಜನ್ನು ಸೇರಿತು. ಸಾಹಿತ್ಯ-ಸಂಸ್ಕೃತಿ, ಇತಿಹಾಸಕ್ಕೆ ಸಂಬಂಧಿಸಿದ ಪೈ ಅವರ ಖಾಸಗಿ ಗ್ರಂಥಾಲಯದ ಸುಮಾರು 5000 ಗ್ರಂಥಗಳು ಉನ್ನತ ಅಧ್ಯಯನ ನಡೆಸುವ ಸಂಶೋಧಕರಿಗೆ ಅಪೂರ್ವ ಆಕರಸಾಮಗ್ರಿಗಳೆನಿಸಿದ್ದವು. ದಿವಂಗತ ಗೋವಿಂದ ಪೈ ಅವರ ನಿವಾಸದಿಂದ ತಂದ ಈ ಪುಸ್ತಕಗಳನ್ನು ಕಾಲೇಜಿನ ಕಛೇರಿಯ ಸಮೀಪದಲ್ಲಿಯೇ ಒಪ್ಪ ಓರಣವಾಗಿರಿಸಿ, ಈ ಗ್ರಂಥಾಲಯವನ್ನೇ ಡಿಸೆಂಬರ್ 1965 ಡಿಸೆಂಬರ್ 17 ರಂದು ಕನ್ನಡದ ಖ್ಯಾತಕವಿಗಳಾಗಿದ್ದ ಜಿ.ಪಿ. ರಾಜರತ್ನಂ ಅವರು 'ರಾಷ್ಟ್ರಕವಿ ಗೋವಿಂದ ಪೈ

ಸಂಶೋಧನ ಕೇಂದ್ರ'ವಾಗಿ ಉದ್ಘಾಟಿಸಿದರು. ಇದೇ ಸಂದರ್ಭದಲ್ಲಿ ಕಾಲೇಜಿನಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದ ಡಾ. ಪಾದೂರು ಗುರುರಾಜ ಭಟ್ಟರು, ಪ್ರೊ. ಹರಿದಾಸ ಭಟ್ಟರ ಪ್ರೇರಣೆ ಹಾಗೂ ತಮ್ಮ ಸ್ವಂತ ಪರಿಶ್ರಮದಿಂದ ಸಂಗ್ರಹಿಸಿದ ಶಾಸನಗಳು, ಮಾಸ್ತಿಕಲ್ಲುಗಳು, ವೀರಗಲ್ಲುಗಳು, ಮರದ ಮತ್ತು ಶಿಲೆಯ ವಿಗ್ರಹಗಳು ಮತ್ತು ಹಸ್ತಪ್ರತಿಗಳನ್ನು ಸುವ್ಯವಸ್ಥಿತವಾಗಿ ಕಾಲೇಜು ವಠಾರದಲ್ಲಿ ಜೋಡಿಸಿ ಪ್ರಾಚ್ಯವಸ್ತುಸಂಗ್ರಹಾಲಯವನ್ನಾಗಿ ನೇರ್ಪುಗೊಳಿಸಿದರು. ಈ ತೆರನಾಗಿ ವ್ಯವಸ್ಥೆಗೊಂಡ ಪ್ರಾಚ್ಯವಸ್ತುಸಂಗ್ರಹಾಲಯವು ಕರ್ನಾಟಕ ಸರ್ಕಾರದ ಪ್ರಾಚ್ಯವಸ್ತುಇಲಾಖೆಯಿಂದ ಅಧಿಕೃತವಾಗಿ ನೋಂದಣಿಗೊಂಡಿತು. ಹೀಗೆ ಸಂಶೋಧನಸಂಸ್ಥೆಗೆ ಅವಶ್ಯಕವಾದ ಎಲ್ಲಾ ಪೂರಕ ಪರಿಕರ ವ್ಯವಸ್ಥೆಯಿಂದ ಎಂ.ಜಿ.ಎಂ. ಕಾಲೇಜು ಸಜ್ಜುಗೊಂಡಾಗ ಕಾಲೇಜಿನ ಆಡಳಿತ ಹಾಗೂ ಪ್ರಾಂಶುಪಾಲರು ಸಂಸ್ಥೆಯನ್ನು (ಸಂಶೋಧನ ಕೇಂದ್ರವನ್ನು) ಅಧಿಕೃತ ಸಂಶೋಧನಕೇಂದ್ರವಾಗಿ ಸಂಯೋಜನೆ ನೀಡಬೇಕೆಂದು ಮೈಸೂರು ವಿಶ್ವವಿದ್ಯಾನಿಲಯಕ್ಕೆ ಬೇಡಿಕೆ ಸಲ್ಲಿಸಿದರು. ಬೇಡಿಕೆಗೆ ಪೂರಕವಾಗಿ ಸ್ಪಂದಿಸಿದ ಮೈಸೂರು ವಿಶ್ವವಿದ್ಯಾನಿಲಯವು ಕಾಲೇಜಿನ ಅಂಗಸಂಸ್ಥೆಯಾದ ರಾಷ್ಟ್ರಕವಿ ಗೋವಿಂದ ಪೈ ಸಂಶೋಧನಕೇಂದ್ರವನ್ನು ಪಿಹೆಚ್. ಡಿ. ಅಧ್ಯಯನಕ್ಕೆ ಸಂಶೋಧನಕೇಂದ್ರವನ್ನಾಗಿ ಅಂಗೀಕರಿಸಿತು. ಹೀಗೆ ಅಧಿಕೃತಗೊಂಡ ನೂತನ ಸಂಶೋಧನಭವನವನ್ನು ಮೈಸೂರು ವಿಶ್ವವಿದ್ಯಾನಿಲಯದ ಅಂದಿನ ಉಪಕುಲಪತಿಗಳಾದ ಶ್ರೀ ಡಿ. ವಿ. ಅರಸ್ ಅವರು 1976ರಲ್ಲಿ ಉದ್ಘಾಟಿಸಿದರು.

1976ರಿಂದಲೂ ಅವಿಭಜಿತ ದಕ್ಷಿಣ ಕನ್ನಡ ಜಿಲ್ಲೆಯ ಸಂಶೋಧನಾಸಕ್ತರ ಸಂಶೋಧನ ಚಟುವಟಿಕೆಗೆ ಪೂರಕವಾಗಿ ಸ್ಪಂದಿಸಿ ತನ್ನ ಉದ್ದೇಶವನ್ನು ಸಮರ್ಪಕವಾಗಿ ನಿರ್ವಹಿಸಿದ ರಾಷ್ಟ್ರಕವಿ ಗೋವಿಂದ ಪೈ ಸಂಶೋಧನ ಕೇಂದ್ರವು 1980ರಿಂದ ಮಂಗಳೂರು ವಿಶ್ವವಿದ್ಯಾನಿಲಯದ ವ್ಯಾಪ್ತಿಗೆ ಸೇರ್ಪಡೆಗೊಂಡು ತನ್ನ ಕಾರ್ಯಚಟುವಟಿಕೆಯನ್ನು ಇನ್ನಷ್ಟು ವಿಸ್ತರಿಸಿಕೊಂಡಿತು.

**ಸಂಶೋಧನ ಕೇಂದ್ರದ ಕಾರ್ಯಚಟುವಟಿಕೆಯ ಸ್ವರೂಪ:** ಕಮ್ಮಟ/ವಿಚಾರಸಂಕಿರಣ-ಪ್ರಕಟನೆ, ಸಂಶೋಧನೆ ಇವುಗಳು ಸಂಶೋಧನಕೇಂದ್ರದ ಒಟ್ಟಾರೆ ಕಾರ್ಯಚಟುವಟಿಕೆಗಳಾಗಿವೆ. ಕೇಂದ್ರವು ಅಸ್ತಿತ್ವಕ್ಕೆ ಬಂದ ಜಿಲ್ಲೆಯ ಹಾಗೂ ಪರಿಸರದ ಭಾಷೆಯು ತುಳುವಾದ ಕಾರಣ ಸ್ಥಳೀಯಭಾಷೆಗೆ ವಿಶೇಷಪ್ರಾಶಸ್ತ್ಯವನ್ನು ನೀಡುವ ಹಿನ್ನೆಲೆಯಲ್ಲಿ ತುಳುಭಾಷೆಯಲ್ಲಿ ನಿಘಂಟೊಂದನ್ನು ಹೊರತರುವ ಯೋಜನೆಗೆ ಕೇಂದ್ರವು ಮುಂದಾಯಿತು. ಸುಮಾರು 19 ವರ್ಷಗಳ ನಿರಂತರ ಪರಿಶ್ರಮದಿಂದ ಆರು ಸಂಪುಟಗಳಲ್ಲಿ ತುಳುನಿಘಂಟು ಪ್ರಕಟಗೊಂಡಿತು. ಕೇವಲ ನಿಘಂಟುರಚನೆ ಮಾತ್ರವಲ್ಲದೆ ತುಳು ಸಂಸ್ಕೃತಿಯ ಆರಾಧನೆಯ ಸಂದರ್ಭಗಳಲ್ಲಿ ಅಭಿವ್ಯಕ್ತಗೊಳ್ಳುವ ಪ್ರದರ್ಶನಕಲೆ ಮತ್ತು ಸಾಹಿತ್ಯದ ಕುರಿತು ವಿಶೇಷ ಅಧ್ಯಯನಕ್ಕಾಗಿ ರಂಗಕಲೆಯ ಕೇಂದ್ರವನ್ನು ಇದರ ಸನಿಹದಲ್ಲಿಯೇ ಸ್ಥಾಪಿಸಲಾಗಿದೆ. ಈ ಕೇಂದ್ರದ ಚಟುವಟಿಕೆಯ ಸ್ವರೂಪವನ್ನು ಪ್ರತ್ಯೇಕ ಶೀರ್ಷಿಕೆಯಲ್ಲಿ ಚರ್ಚಿಸಲಾಗಿದೆ.

**ಸಂಶೋಧನೆ:** ಮೈಸೂರು ಹಾಗೂ ಮಂಗಳೂರು ವಿ.ವಿ.ಗಳ ಸಂಯೋಜನೆಗೊಳಪಟ್ಟು ಕಾರ್ಯನಿರ್ವಹಿಸಿದ ಸಂಶೋಧನಕೇಂದ್ರದಿಂದ 20ನೇ ಶತಮಾನದಲ್ಲಿ (1979 ರಿಂದ 1999ರವರೆಗೆ) 12 ಮಂದಿ ವಿದ್ವಾಂಸರು ವಿವಿಧ ವಿಷಯಗಳಲ್ಲಿ ಅಧ್ಯಯನ ನಡೆಸಿ, ಪಿಹೆಚ್.ಡಿ. ಪದವಿಯನ್ನು ಪಡೆದುಕೊಂಡಿರುತ್ತಾರೆ. ಪ್ರಸ್ತುತ ಹಂಪಿ ಕನ್ನಡ ವಿಶ್ವವಿದ್ಯಾನಿಲಯದ ಸಂಯೋಜನೆಗೊಳಪಟ್ಟಿರುವ ಕೇಂದ್ರದ ಮೂಲಕ ಸಂಶೋಧನಾಸಕ್ತ ವಿದ್ಯಾರ್ಥಿಗಳು ಸಂಶೋಧನ ಚಟುವಟಿಕೆಗಳಲ್ಲಿ ತೊಡಗಿಕೊಂಡಿರುತ್ತಾರೆ.

**ವಿಚಾರಸಂಕಿರಣ, ಕಮ್ಮಟ, ಉಪನ್ಯಾಸ:** ಸಂಶೋಧನಕೇಂದ್ರದಲ್ಲಿ ವಿವಿಧವಿಷಯಗಳಿಗೆ ಸಂಬಂಧಿಸಿದಂತೆ ಚರ್ಚಿಸಲು ಕಮ್ಮಟಗಳನ್ನು, ವಿಚಾರಸಂಕಿರಣಗಳನ್ನು ಹಮ್ಮಿಕೊಳ್ಳುತ್ತಿರುವುದಲ್ಲದೆ ಈ ವಿಚಾರಸಂಕಿರಣದಲ್ಲಿ ವಿದ್ವಾಂಸರು ಕಂಡುಕೊಂಡ ಹೊಸ ವಿಚಾರಗಳನ್ನು ಕೃತಿ ಮೂಲಕ ಕೇಂದ್ರವು ವತಿಯಿಂದ ಪ್ರಕಟಗೊಳಿಸುತ್ತಾ ಬಂದಿದೆ.

**ಪ್ರಶಸ್ತಿಪ್ರದಾನ ಹಾಗೂ ಸನ್ಮಾನ ಕಾರ್ಯಕ್ರಮಗಳು:** ಕೇಂದ್ರವು ಕೇವಲ ಸಂಶೋಧನೆ, ಪ್ರಕಟನೆ ಮತ್ತು ಉಪನ್ಯಾಸ ಚಟುವಟಿಕೆಗಳಲ್ಲಿ ನಿರತವಾಗಿರುವುದರ ಸಹಿತ, ಕರ್ನಾಟಕ ರಾಜ್ಯ ಮಟ್ಟದಲ್ಲಿ ಜನಪದಸಾಹಿತ್ಯ, ಶಿಷ್ಟಸಾಹಿತ್ಯ, ಶಾಸ್ತ್ರಸಾಹಿತ್ಯ, ಇತಿಹಾಸ, ಸಂಸ್ಕೃತಿಯ ಕುರಿತಂತೆ ವಿಶೇಷ ಸಾಧನೆ ಮಾಡಿದ ವಿದ್ವಾಂಸರನ್ನು ಗುರುತಿಸಿ, ಪ್ರಶಸ್ತಿಯ ಜೊತೆಗೆ ಸನ್ಮಾನಿಸುವ ಕಾರ್ಯಯೋಜನೆಗಳನ್ನು ಹಮ್ಮಿಕೊಳ್ಳುತ್ತಾ ಬಂದಿದೆ. ಕಾವ್ಯರಚನೆಯಲ್ಲಿ ವಿಶೇಷ ಸಾಧನೆಗೈದ ಕವಿಗಳಿಗೆ ಕಡೆಂಗೋಡ್ಲು ಶಂಕರಭಟ್ಟ ಕಾವ್ಯ ಪ್ರಶಸ್ತಿ, ವಿಮರ್ಶೆಯ ಕ್ಷೇತ್ರದಲ್ಲಿ ಗುರುತಿಸಿಕೊಂಡ ವಿದ್ವಾಂಸರಿಗೆ 1987ರಿಂದ ವಿ.ಎಂ. ಇನಾಂದಾರ್ ಪ್ರಶಸ್ತಿಯನ್ನು ಜಾನಪದ ಕ್ಷೇತ್ರದಲ್ಲಿ ದುಡಿದ ಸಾಧಕರಿಗೆ ಕು. ಶಿ. ಹರಿದಾಸ ಭಟ್ಟರ ನೆನಪಿನಲ್ಲಿ ಕು.ಶಿ. ಜಾನಪದ ಪ್ರಶಸ್ತಿಯನ್ನು ನೀಡುವ ಪರಿಪಾಠವನ್ನು ರೂಢಿಸಿಕೊಂಡಿದೆ. ಶಾಸ್ತ್ರಸಾಹಿತ್ಯವಾದ ಭಾಷಾವಿಜ್ಞಾನ, ವ್ಯಾಕರಣ, ಛಂದಸ್ಸು, ಮುಂತಾದ ಪ್ರಕಾರಗಳಲ್ಲಿ ದುಡಿದ ವಿದ್ವಾಂಸರನ್ನು ಸೇಡಿಯಾಪು ಕೃಷ್ಣ ಭಟ್ಟ ಪ್ರಶಸ್ತಿಯೊಂದಿಗೆ ಗೌರವಿಸಲಾಗುತ್ತದೆ. ಇದೇ ರೀತಿಯಲ್ಲಿ ತುಳು ಭಾಷೆ, ಸಾಹಿತ್ಯ, ಸಂಸ್ಕೃತಿಯಲ್ಲಿ ಸಾಧನೆ ಮಾಡಿದ ಸಾಧಕರನ್ನು ಪೊಳಲಿ ಶೀನಪ್ಪ ಹೆಗ್ಡೆ ಪ್ರಶಸ್ತಿಯೊಂದಿಗೆ ಗೌರವಿಸಲಾಗುತ್ತದೆ.

**3.4) ಜಾನಪದ ರಂಗಕಲೆಗಳ ಅಧ್ಯಯನ ಕೇಂದ್ರ:** ಕರ್ನಾಟಕ ವ್ಯಾಪ್ತಿಯಲ್ಲಿ ಜಾನಪದ ರಂಗಕಲೆ ಹಾಗೂ ಜನಪದಸಾಹಿತ್ಯದ ವಿಶೇಷ ಅಧ್ಯಯನಕ್ಕಾಗಿ ಎಂ.ಜಿ.ಎಂ. ಕಾಲೇಜಿನ ಆವರಣದಲ್ಲಿ ಅಸ್ತಿತ್ವದಲ್ಲಿದ್ದ ಗೋವಿಂದ ಪೈ ಸಂಶೋಧನ ಕೇಂದ್ರದ ಇನ್ನೊಂದು ವಿಭಾಗವೇ ಪ್ರಾದೇಶಿಕ ಜಾನಪದ ರಂಗಕಲೆಗಳ ಅಧ್ಯಯನ ಕೇಂದ್ರ ಎಂಬ ಹೆಸರಿನ ಸಂಸ್ಥೆಯಾಗಿರುತ್ತದೆ. ಇಲ್ಲಿ ಜನಪದಸಾಹಿತ್ಯ ಹಾಗೂ ಪ್ರದರ್ಶನಕಲೆಗಳನ್ನು ಶ್ರವ್ಯ ಹಾಗೂ ದೃಶ್ಯ ಮಾಧ್ಯಮಗಳಲ್ಲಿ ದಾಖಲಿಸುವ ಮತ್ತು ಚಿತ್ರಿಸುವ ಮೂಲಕ ಜಾನಪದವನ್ನು ಹೆಚ್ಚು ವೈಜ್ಞಾನಿಕವಾಗಿ ಅಭ್ಯಾಸ ಮಾಡಲಾಗುತ್ತದೆ. ಈ ರಂಗಕಲೆಗಳ ಅಧ್ಯಯನ ಕೇಂದ್ರಕ್ಕೆ ಅಂತಾರಾಷ್ಟ್ರೀಯ ಮನ್ನಣೆಗೆ ಕು.ಶಿ. ಹರಿದಾಸ ಭಟ್ಟರು ಮತ್ತು ಅವರ ಸಂಗಡಿಗರ ಪರಿಶ್ರಮವೇ ಕಾರಣ. ಫಿನ್‌ಲ್ಯಾಂಡ್‌ನಲ್ಲಿರುವ ಪ್ರೊ. ಜಾನ್ ಆಲ್ಫೆನ್ಸೋ ಕಾರ್ಕಳ ಅವರು ಎಂ.ಜಿ.ಎಂ. ಕಾಲೇಜಿನ ನಿವೇಶನದಲ್ಲಿ ಕು. ಶಿ. ಯವರ ಮಾರ್ಗದರ್ಶನದಲ್ಲಿ ಕಾರ್ಯಾಚರಿಸುವ ಆರ್ಕೈವ್ ಮಾದರಿಯ ರಂಗ ಕಲೆಗಳ ಅಧ್ಯಯನವಿಷಯವಾಗಿ ತಿಳಿದುಕೊಂಡವರಾಗಿದ್ದರು. ಫಿನ್ಲೆಂಡ್‌ನ ಕಾಲೇವಾಲ ಎಂಬ ಜನಪದ ಮಹಾಕಾವ್ಯದ 150ನೆಯ ಪ್ರಕಟಣಾ ವರ್ಷದ ಆಚರಣೆಯ ಮಹೋತ್ಸವದ ಸಂದರ್ಭದಲ್ಲಿ ಕಾಲೇವಾಲ ಎಂಬ ಮಹಾಕಾವ್ಯವು ವಿಶ್ವದ ಇತರ ಮಹಾಕಾವ್ಯಗಳ ಜೊತೆಗಿನ ಸಾಮ್ಯತೆ ಮತ್ತು ಭಿನ್ನತೆಯ ಬಗೆಗೆ ಅಧ್ಯಯನ ಮಾಡಲು ಅವಕಾಶ ಏರ್ಪಟ್ಟಿದೆ ಎಂಬ ಹೊಸ ವಿಷಯವನ್ನು ಪ್ರೊ. ಆಲ್ಫಾನ್ಸೋ ಅವರು ಕು. ಶಿ. ಅವರಿಗೆ ತಿಳಿಸಿದರು. ಈ ಹೊಸ ವಿಚಾರದ ಕುರಿತಾಗಿ ಕುತೂಹಲ ಹೊಂದಿದ ಪ್ರೊ. ಕು. ಶಿ. ಅವರು ಪ್ರೊ. ಜಾನ್ ಆಲ್ಫಾನ್ಸೋ ಅವರ ಸೂಚನೆ ಮೇರೆಗೆ ಫಿನ್ಲೆಂಡ್‌ಗೆ ತೆರಳಿದಾಗ ಹೆಲ್ಸಿಂಕಿ ವಿಶ್ವವಿದ್ಯಾನಿಲಯದ ಜಾನಪದ ಅಧ್ಯಯನ

ವಿಭಾಗದ ಪ್ರೊ. ಲಾರಿ ಹಾಂಕೋ ಅವರ ಸಂಪರ್ಕದಿಂದ ಮತ್ತು ಅವರ ಸಹಕಾರದಿಂದ ಕೇಂದ್ರದಲ್ಲಿ ವಿನೂತನ ರೀತಿಯ ದಾಖಲಾತಿ, ಕಮ್ಮಟ, ಪ್ರಾತ್ಯಕ್ಷಿಕೆ, ವಿಚಾರಸಂಕಿರಣಗಳು ಏರ್ಪಡುವುದಕ್ಕೆ ಸಾಧ್ಯವಾಯಿತು.

ಅಮೇರಿಕಾದ ಫೋರ್ಡ್ ಫೌಂಡೇಶನ್ ಅವರ ಆರ್ಥಿಕ ಸಹಕಾರದೊಂದಿಗೆ ಉಡುಪಿಯ ಪ್ರಾದೇಶಿಕ ಜಾನಪದ ರಂಗಕಲೆಗಳ ಅಧ್ಯಯನಕೇಂದ್ರವು ಕರ್ನಾಟಕದ ಒಳಗಿನ ಮತ್ತು ಹೊರಗಿನ ವಿವಿಧ ಸಂಸ್ಥೆಗಳ ಸಹಕಾರದಿಂದ 1987ರಿಂದ ಕ್ರಿ.ಶ. 2000ದ ತನಕ ಅನೇಕ ಕಾರ್ಯಾಗಾರ, ಕಮ್ಮಟ, ವಿಚಾರಸಂಕಿರಣಗಳನ್ನು ಏರ್ಪಡಿಸಿದೆ.

ಕಮ್ಮಟಗಳಲ್ಲಿ /ವಿಚಾರಸಂಕಿರಣಗಳಲ್ಲಿ ವಿದ್ವಾಂಸರು ಅಂತಿಮವಾಗಿ ಕಂಡುಕೊಂಡ ಹೊಸ ವಿಷಯಗಳು ಅಮೂಲ್ಯ ಕೃತಿಗಳಾಗಿ ಕೇಂದ್ರದ ವತಿಯಿಂದಲೇ ಪ್ರಕಟಗೊಂಡಿವೆ. ಕು.ಶಿ. ಯವರು ಫಿನ್ಲಾಂಡ್‌ನೊಡನೆ ಸಂಪರ್ಕ ಸಾಧಿಸಿದ ಕಾರಣದಿಂದಾಗಿ ಅಮೇರಿಕಾ ಮತ್ತು ಇತರ ಯುರೋಪ್‌ನ ಇತರ ರಾಷ್ಟ್ರಗಳ ವಿಶ್ವವಿದ್ಯಾನಿಲಯಗಳ ಪ್ರಾಧ್ಯಾಪಕ ವಿದ್ವಾಂಸರ ಪರಿಚಯವಾಯಿತು. ಆ ವಿದ್ವಾಂಸರು ಜನಪದ ವಿಷಯಕ್ಕೆ ಸಂಬಂಧಿಸಿದಂತೆ ಕಂಡುಕೊಂಡ ವಿವಿಧ ಅಧ್ಯಯನ ವಿಧಾನಗಳನ್ನು ಅವಿಭಜಿತ ದ.ಕ. ಜಿಲ್ಲೆಯ ವಿದ್ವಾಂಸರು ತಮ್ಮ ಅಧ್ಯಯನ ವಿಧಾನದಲ್ಲಿ ಅಳವಡಿಸಿಕೊಳ್ಳುವುದಕ್ಕೆ ಅವಕಾಶವಾಗಿ ಜಾನಪದ ರಂಗಕಲೆ–ಸಾಹಿತ್ಯದ ಬಗೆಗಿರುವ ಸಾಂಪ್ರದಾಯಿಕ ದೃಷ್ಟಿಕೋನಗಳು ಬದಲಾಗುವಂತಾಯಿತು.

**21ನೇ ಶತಮಾನದಲ್ಲಿ ರಂಗಕಲೆ ಅಧ್ಯಯನಕೇಂದ್ರದ ಮುಂದಿರುವ ಹೊಸ ಸವಾಲುಗಳು:** ಫೋರ್ಡ್ ಫೌಂಡೇಶನ್ ನೆರವಿನಿಂದ 20ನೇ ಶತಮಾನದ 80ರ ದಶಕದ ಅಂತ್ಯದಿಂದ ಮೊದಲ್ಗೊಂಡು, ಕ್ರಿ.ಶ. 2000ದ ಅವಧಿಯಲ್ಲಿ ಕೇಂದ್ರವು ತನ್ನ ಧ್ಯೇಯೋದ್ದೇಶಕ್ಕೆ ಅನುಸರಿಸಿ, ಮೇಲೆ ಉಲ್ಲೇಖಿಸಲಾದ ಚಟುವಟಿಕೆಗಳನ್ನು ಕೈಗೊಂಡಿತ್ತು. ಹಲವಾರು ಅತ್ಯಾಧುನಿಕ ತಾಂತ್ರಿಕ ಉಪಕರಣಗಳಿಂದ ಕೇಂದ್ರವು ಭೌತಿಕ ಸಂಪನ್ಮೂಲಗಳಿಂದ ಶ್ರೀಮಂತಗೊಂಡಿತು. ಭೌತಿಕ ಸಂಪನ್ಮೂಲಗಳನ್ನು ಬಳಸಿ, ಕ್ಷೇತ್ರಕಾರ್ಯಮುಖೇನ ಸಾಕಷ್ಟು ವಿಡಿಯೋ ಟೇಪುಗಳು, ಆಡಿಯೋ ಟೇಪುಗಳು, ವರ್ಣಫಲಕಗಳು, ಛಾಯಾಚಿತ್ರಗಳು ಕೇಂದ್ರದಲ್ಲಿ ಸಂಗ್ರಹಗೊಂಡವು. ಫೋರ್ಡ್ ಫೌಂಡೇಶನ್ ನೀಡಿದ ಮೂಲಧನ ಹಾಗೂ ಇತರ ಸಂಸ್ಥೆಗಳು ನೀಡಿದ ಸಹಕಾರದಿಂದ ಇದು ಕೇಂದ್ರದಲ್ಲಿ ಸಾಧ್ಯವಾಯಿತು. ಫೋರ್ಡ್ ಫೌಂಡೇಶನ್ ಅನುದಾನದ ನೆರವು ನಿಂತುಹೋದಂತೆ ಕೇಂದ್ರದ ಚಟುವಟಿಕೆಗಳು ಹಣಕಾಸಿನ ಕೊರತೆಯಿಂದಾಗಿ ಬಹುತೇಕ ಸ್ತಬ್ಧಗೊಂಡವು. ಅಧ್ಯಯನ ಕೇಂದ್ರದ ಮುಖೇನ ಹೊಸ ಹೊಸ ಯೋಜನೆಗಳನ್ನು ಕೈಗೆತ್ತಿಕೊಳ್ಳುವುದಕ್ಕೆ ಮಣಿಪಾಲ ಅಕಾಡೆಮಿಯಾಗಲೀ, ಎಂ.ಜಿ.ಎಂ. ಕಾಲೇಜಾಗಲೀ ಮುಂದೆ ಬಾರದ ಕಾರಣ ಕೇಂದ್ರವು ಚಟುವಟಿಕೆಯಿಂದ ದೂರಸರಿದು, ಕೇಂದ್ರದ ಪ್ರೇರಕರಾದ ಪ್ರೊ. ಕು.ಶಿಯವರ ಮತ್ತು ಕೇಂದ್ರದ ಬಗೆಗೆ ಬಹಳಷ್ಟು ಭರವಸೆಯನ್ನು ಹೊಂದಿದ ಪ್ರೊ. ಪೀಟರ್ ಜೆ. ಕ್ಲಾಸ್ ಹಾಗೂ ಪ್ರೊ. ಲಾರಿ ಹಾಂಕೋರವರ ಯೋಜನೆಗಳು ಕನಸಾಗಿಯೇ ಉಳಿಯುವಂತಾಗಿದೆ.

ಮಣಿಪಾಲ ಅಕಾಡೆಮಿಯಂತಹ ಖಾಸಗೀ ಸಂಸ್ಥೆಗಳು ಇಂತಹ ಚಟುವಟಿಕೆಗಳಿಗೆ ಮುಂದೆ ಬಾರದೇ ಹೋದರೂ ಯು.ಜಿ.ಸಿ., ಕೇಂದ್ರ ಸಾಹಿತ್ಯ ಅಕಾಡೆಮಿ, ರಾಜ್ಯ ನಾಟಕ ಅಕಾಡೆಮಿ, ಜಾನಪದ ಅಕಾಡೆಮಿ, ಕನ್ನಡ ಮತ್ತು ಸಂಸ್ಕೃತಿ ಇಲಾಖೆ ಮುಂತಾದ ಸಂಸ್ಥೆಗಳು ವಾರ್ಷಿಕ ಅನುದಾನವನ್ನು ನೀಡಿ, ಇಂತಹ ಚಟುವಟಿಕೆಗಳಿಗೆ ಪ್ರೋತ್ಸಾಹ ನೀಡಬೇಕು. ಆಗ 20ನೇ ಶತಮಾನದ ಕೊನೆಯ ಎರಡು ದಶಕಗಳಲ್ಲಿ ಸಂಗ್ರಹಿಸಲಾದ ಅಮೂಲ್ಯ ಜಾನಪದ ಮಾಹಿತಿ, ಸಾಹಿತ್ಯ ಸಂಪತ್ತು, ಮುಂದಿನ

ಅಧ್ಯಯನದಲ್ಲಿ ಬಳಸಿಕೊಳ್ಳುವುದಕ್ಕೆ ಸಂಶೋಧಕರಿಗೆ ಸಾಧ್ಯವಾಗುತ್ತದೆ. ಅದು ಹಣಕಾಸಿನ ಮಾನದಂಡದಿಂದ ಮೌಲ್ಯಮಾಪನ ಮಾಡುವುದಕ್ಕೆ ಸಾಧ್ಯವಾಗದ ಅಪಾರ ಸಂಪತ್ತಾಗಿ ಕೇಂದ್ರದ ಮೌಲ್ಯವನ್ನು ಹೆಚ್ಚಿಸಿದೆ. ಆದರೆ ಅಧ್ಯಯನದ ಮೂಲಕ ಅವುಗಳನ್ನು ಸಂಶೋಧಕರು ಆಕರವಾಗಿ ಬಳಸಿಕೊಳ್ಳದೇ ಹೋದಲ್ಲಿ ಉಪಯೋಗಕ್ಕೆ ಬಾರದ ವ್ಯರ್ಥ ಸಂಪತ್ತಾಗಿ ಮೂಲೆಗುಂಪಾಗುತ್ತದೆ. ಇದನ್ನು ತಪ್ಪಿಸಲು ಕೇಂದ್ರವು ನೂತನ ಯೋಜನೆಗಳಿಗೆ ಮುಂದಾಗಬೇಕಾಗಿದೆ.

**3.5) ಯಕ್ಷಗಾನ ಕೇಂದ್ರ, ಎಂ.ಜಿ.ಎಂ. ಕಾಲೇಜು ಆವರಣ, ಉಡುಪಿ:** ಯಕ್ಷಗಾನವು ಯಾವುದೇ ರೀತಿಯ ಆಧುನಿಕ ಸಿನಿಮಾ ನಾಟಕ ಮುಂತಾದ ಇತರ ಕಲೆಗಳ ಪ್ರಭಾವಕ್ಕೆ ಸಿಲುಕಿ ತನ್ನತನವನ್ನು ಕಳೆದುಕೊಂಡಲ್ಲಿ ಯಕ್ಷಗಾನದ ಮೂಲತತ್ತ್ವವು ನಾಶವಾಗಿ ಯಕ್ಷಗಾನ ಎಂದರೆ ಏನು ಎನ್ನುವುದನ್ನು ಮುಂದಿನ ಜನಾಂಗಕ್ಕೆ ತೋರಿಸಲು ಕಲೆಯೇ ಇಲ್ಲದಂತಾಗಿ ಕಲೆಯು ನಾಶವಾಗುವ ಸಾಧ್ಯತೆಗಳಿವೆ ಎನ್ನುವುದನ್ನು ಕಂಡುಕೊಂಡ ಶಿವರಾಮ ಕಾರಂತರು ಯಕ್ಷಗಾನ ಕಲೆಯನ್ನು ಅದರ ಮೂಲಸತ್ತ್ವದಲ್ಲೇ ಉಳಿಸಿಕೊಳ್ಳುವ ಪ್ರಯತ್ನಕ್ಕಾಗಿ 1950ರ ದಶಕದಿಂದ 1970ರ ದಶಕದವರೆಗೂ ಸತತವಾಗಿ ಹೋರಾಟವನ್ನು ನಡೆಸಿದರು. ಇಲ್ಲಿ ಕಾರಂತರ ಹೋರಾಟ ಎಂದರೆ ಶುದ್ಧ ಜಾನಪದ ಕಲೆಯಾದ ಯಕ್ಷಗಾನದ ವಿವಿಧ ಅಂಗಗಳಾದ ಗಾನ (ಸಂಗೀತ–ಭಾಗವತಿಕೆ), ನೃತ್ಯ (ಅಭಿನಯ), ವೇಷ (ಹೆಣ್ಣು ಹಾಗೂ ಪುರುಷ ವೇಷಗಳಿಗೆ ಸಂಪ್ರದಾಯಬದ್ಧವಾದ ವಿವಿಧ ದಿರಿಸು ಹಾಗೂ ಬೇರೆ ಬೇರೆ ತೊಡುಗೆಗಳು) ಮಾತು (ಪಾತ್ರಗಳ ನಡುವಿನಲ್ಲಿ ಭಾಗವತರ ಪದವನ್ನನುಸರಿಸಿ ನಡೆಯುವ ಸಂಭಾಷಣೆ) ಇವುಗಳ ಕುರಿತು ಲಿಖಿತವಾದ ಯಾವುದೇ ನಿಯಮಬದ್ಧವಾದ ಲಕ್ಷಣ ಗ್ರಂಥಗಳಿಲ್ಲದ ಕಾರಣ ಬೇರೆ ಬೇರೆ ಪ್ರಸಂಗ ಕೃತಿಗಳಲ್ಲಿ ಬರುವ ಆಧಾರದಿಂದ ಕನ್ನಡದ ಲಿಖಿತ ಕಾವ್ಯಗಳ ಉಲ್ಲೇಖವನ್ನು ಆಧರಿಸಿ 'ಯಕ್ಷಗಾನ' ಎಂಬ ಕೃತಿಯನ್ನು 1957ರಲ್ಲಿ ಹೊರತಂದರು. 'ಯಕ್ಷಗಾನ' ಕಲೆಯ ಕುರಿತಂತೆ ಸಂಪ್ರದಾಯ ಸೂತ್ರಕ್ಕನುಸರಿಸಿ ಹೊರತಂದ ಮೊದಲ ಶಾಸ್ತ್ರೀಯ ಗ್ರಂಥವೇ ಇದಾಗಿದ್ದು, ಈ ಕೃತಿಗೆ ಕೇಂದ್ರ ಸಾಹಿತ್ಯ ಅಕಾಡೆಮಿ ಪ್ರಶಸ್ತಿಯೂ ಬಂದಿತು. ಯಕ್ಷಗಾನ ಕಲೆಯನ್ನು ಶಿಸ್ತುಬದ್ಧವಾಗಿ ಶಾಸ್ತ್ರೀಯವಾಗಿ ಅಭ್ಯಾಸಮಾಡಿ ಮೇಳವನ್ನು ಪ್ರವೇಶಿಸುವಂತಾಗಬೇಕೆಂಬ ಉದ್ದೇಶದಿಂದ ಯಕ್ಷಗಾನ ಕಲಾಕೇಂದ್ರವನ್ನು ಸ್ಥಾಪಿಸುವ ಯೋಜನೆಯನ್ನು ರೂಪಿಸಿಕೊಂಡರು. ಮಣಿಪಾಲ ಅಕಾಡೆಮಿಯ ಸೂಕ್ತ ಆಶ್ರಯ ಮತ್ತು ಅವಕಾಶದಿಂದ ಪ್ರೊ. ಕು.ಶಿ. ಹರಿದಾಸ ಭಟ್ಟರ ಪ್ರಯತ್ನಗಳಿಂದ 1971ನೆಯ ಜೂನ್‌ನಿಂದ ಎಂ.ಜಿ.ಎಂ. ಕಾಲೇಜಿನ ಪರಿಸರದಲ್ಲಿ ಈ ಸಂಸ್ಥೆಯು ಅಸ್ತಿತ್ವಕ್ಕೆ ಬಂದಿತು. ಸಂಸ್ಥೆಯ ನಿರ್ದೇಶಕರಾಗಿ ಉಸ್ತುವಾರಿಯನ್ನು ಪ್ರೊ. ಕು.ಶಿ. ಯವರೂ, ಕಲಾನಿರ್ದೇಶಕನ ಉಸ್ತುವಾರಿಯನ್ನು ಡಾ. ಶಿವರಾಮ ಕಾರಂತರೂ ವಹಿಸಿದರು. ಸಂಸ್ಥೆಯ ನಿರ್ವಹಣೆಗೆ ಅವಶ್ಯವಾಗಿ ಬೇಕಾಗುವ ಭಾಗಶಃ ಅನುದಾನವನ್ನು ಕೇಂದ್ರ ಸಂಗೀತ ನಾಟಕ ಅಕಾಡೆಮಿಯು ಪೂರೈಸುತ್ತಾ ಬಂದಿದೆ. ಸಂಸ್ಥೆಯಲ್ಲಿ ತರಬೇತಿ ಪಡೆದ ವಿದ್ಯಾರ್ಥಿಗಳು ಯಕ್ಷಗಾನ ಕ್ಷೇತ್ರದಲ್ಲಿ ತೊಡಗಿಸಿಕೊಂಡು ಗುರುತಿಸಿಕೊಂಡ ಕಲಾವಿದರುಗಳಾಗಿ ಸಮಾಜದಲ್ಲಿ ಮಾನ್ಯತೆ ಪಡೆದಿರುತ್ತಾರೆ.

**ಯಕ್ಷರಂಗ/ಬ್ಯಾಲೆ ಪ್ರಯೋಗ:** ಕನ್ನಡನಾಡಿನೊಳಗೆ ಭಾಷೆಯನ್ನು ತಿಳಿದವರಿಗೆ ಮಾತ್ರವೇ ಯಕ್ಷಗಾನ ಕಲೆಯು ಆನಂದವನ್ನುಂಟುಮಾಡುತ್ತದೆ. ಆದರೆ ಭಾಷೆಯನ್ನು ತಿಳಿಯದ ಎಲ್ಲರಿಗೂ ಯಕ್ಷಗಾನ ಕಲೆಯನ್ನು ಸಂವಹನ ಮಾಡಲು ಮಾತಿನಲ್ಲಿ ಮಂಡಿಸಬೇಕಾದುದನ್ನು ಸಂಗೀತೋಪಕರಣಗಳಲ್ಲಿ ಹೊರಹೊಮ್ಮಿಸುತ್ತಾ ನರ್ತಿಸಿದಲ್ಲಿ ಅದನ್ನು ಭಾಷೆ ತಿಳಿಯದ ಯಾರೇ ಆದರೂ ಅರ್ಥಮಾಡಿಕೊಳ್ಳುತ್ತಾರೆ. ಇದರಿಂದ 'ಯಕ್ಷಗಾನ' ಎಂಬ ವಿಶಿಷ್ಟ ಶ್ರೀಮಂತ ಕಲೆಯು ಪ್ರಪಂಚದ ಎಲ್ಲಾ,

ಭಾಗಗಳನ್ನು ತಲುಪುತ್ತದೆ ಎಂಬ ಉದ್ದೇಶದಿಂದ ನೃತ್ಯ ವೇಷಭೂಷಣ ಸಂಗೀತದೊಂದಿಗೆ ಯಕ್ಷಗಾನ ಕಲೆಯ ಪ್ರಯೋಗ ಸಾಧ್ಯತೆಯನ್ನು ವಿಸ್ತರಿಸಿ ಇದಕ್ಕೆ ಬ್ಯಾಲೆ ಪ್ರಯೋಗ ಎಂದು ಕರೆದರು. ಇದುವೇ ಯಕ್ಷರಂಗ ಪ್ರಯೋಗ ಎಂದು ಖ್ಯಾತವಾಗಿದೆ. ಯಕ್ಷಗಾನಕೇಂದ್ರದ ವೃತ್ತಿನಿರತ ಕಲಾವಿದರ ತಂಡವೇ ಯಕ್ಷರಂಗ. ಇದರ ಮೂಲಕವೇ ಕಾರಂತರ ಬ್ಯಾಲೆ ಮೊದಲಾದ ಪ್ರಯೋಗಗಳನ್ನು ರಂಗದ ಮೇಲೆ ತರಲು ಯಕ್ಷಗಾನಕೇಂದ್ರದ ಆಡಳಿತ ವ್ಯವಸ್ಥೆಯು ಅವಕಾಶನೀಡಿತು.

ಯಕ್ಷಗಾನದಲ್ಲಿ ನುರಿತ-ಅನುಭವೀ ಕಲಾವಿದರಿಂದಲೇ ಪೌರಾಣಿಕ ಪ್ರಸಂಗಗಳನ್ನು ರಂಗಕ್ಕೆ ತರುವ ಮೂಲಕ ಯಕ್ಷರಂಗ ಪ್ರಯೋಗವು ಕಲಾತ್ಮಕವಾಗಿ ಅಭಿವ್ಯಕ್ತಗೊಂಡು ಪ್ರೇಕ್ಷಕರನ್ನು ಆಕರ್ಷಿಸುವಲ್ಲಿ ಸಂಪೂರ್ಣ ಸಫಲವಾಗಿದೆ. "ಕೇಂದ್ರ ಸರ್ಕಾರದ ಸಂಸ್ಕೃತಿ ಶಾಖೆಯ ಡಾ। ಕಪಿಲ ವಾತ್ಸ್ಯಾಯನ ಎಂಬುವವರು ಉಡುಪಿಗೆ ಬಂದು ಈ ಹೊಸ ಮಾದರಿಯನ್ನು ಶಾಶ್ವತ ನೆಲೆಯ ಮೇಲೆ ಪ್ರದರ್ಶಿಸಲು ಬೇಕಾಗುವ ನೆರವನ್ನು ಕೊಡುವ ಭರವಸೆಯನ್ನು ಕೊಟ್ಟರು. ಅದರಿಂದಾಗಿ 'ಯಕ್ಷರಂಗ' ಎಂಬ ಹೊಸ ವಿಭಾಗ ನಮ್ಮ ಕೇಂದ್ರದಲ್ಲಿ ಜನಿಸಿತು"(ಲೇ: ಶಿವರಾಮ ಕಾರಂತ ಕೆ., ಡಾ.,2011, ಪು-300)

ವಿಶ್ವದ ವಿವಿಧ ವಿಶ್ವವಿದ್ಯಾನಿಲಯದ ರಂಗತಜ್ಞರು, ಪ್ರದರ್ಶನ ಕಲೆಯಲ್ಲಿ ಪರಂಪರಾಗತವಾದ ವಿದ್ವಾಂಸರು ನೃತ್ಯಶಾಸ್ತ್ರದಲ್ಲಿ ವಿದ್ವತ್ತನ್ನು ಪಡೆದವರು ಯಕ್ಷಗಾನ ಕೇಂದ್ರಕ್ಕೆ ಭೇಟಿ ನೀಡಿ ಈ ಕ್ಷೇತ್ರದ ಕುರಿತು ತಮಗಿರುವ ಜ್ಞಾನ ದಾಹಕ್ಕೆ, ಸಂದೇಹಕ್ಕೆ ಪರಿಹಾರವನ್ನು ಕಂಡುಕೊಂಡಿದ್ದಾರೆ. ವಿದೇಶಗಳಿಗೆ ಕಲಾತಂಡವು ಭೇಟಿನೀಡಿ ಕಲೆ, ಸಂಗೀತ, ನೃತ್ಯ, ನಾಟಕ ಮುಂತಾದ ಅಭಿನಯ ಕಲೆಗಳಲ್ಲಿ ತಜ್ಞತೆಯನ್ನು ಹೊಂದಿದ ವಿದ್ವಾಂಸರ ಮುಂದೆ ಉಡುಪಿ ಜಿಲ್ಲೆಯ ಕಾರಂತರ ನಿರ್ದೇಶಿತ ಬ್ಯಾಲೆ ಪ್ರಯೋಗವು ಯಕ್ಷರಂಗದ ಮೂಲಕ ಪ್ರದರ್ಶನಗೊಂಡಿದೆ. ಈ ವಿಶಿಷ್ಟ ರಂಗಪ್ರಯೋಗದ ಕಾರಣದಿಂದಾಗಿ ಎಂ.ಜಿ.ಎಂ. ಕಾಲೇಜಿನ ಯಕ್ಷಗಾನ ಕೇಂದ್ರವು ವಿದೇಶದ ವಿದ್ವಾಂಸರ ಗಮನ ಸೆಳೆಯುವ ಕೇಂದ್ರವಾಯಿತು.

ಪ್ರಾದೇಶಿಕ ರಂಗಕಲೆ ಹಾಗೂ ಗೋವಿಂದ ಪೈ ಸಂಶೋಧನ ಕೇಂದ್ರ ಮತ್ತು ಯಕ್ಷಗಾನಕೇಂದ್ರದ ಒಟ್ಟಾರೆ ಕೊಡುಗೆಗಳು ಅಥವಾ ಈ ಸಂಸ್ಥೆಗಳ ಕಾರ್ಯಚಟುವಟಿಕೆಗಳ ಅಂತಿಮ ಪರಿಣಾಮಗಳನ್ನು ಈ ಕೆಳಗಿನಂತಿವೆ.

1. ಸಂಶೋಧನಾಸಕ್ತರಿಗೆ, ಅಧ್ಯಯನಪ್ರವೃತ್ತಿಯ ವಿದ್ವಾಂಸರಿಗೆ ಕೇಂದ್ರವು ತಮ್ಮ ಉನ್ನತಾಧ್ಯಯನಕ್ಕೆ ಅಪೂರ್ವ ಅವಕಾಶವನ್ನೊದಗಿಸಿಕೊಟ್ಟಿತ್ತು.
2. ಆಧುನಿಕ ವಿದ್ಯಾವಂತರಿಗೆ ಜಾನಪದ ಎಂಬ ನಿಕಾಯದ ಕುರಿತಾಗಿದ್ದ ನಿರ್ಲಕ್ಷ್ಯ ಮನೋಭಾವವು ತೊಲಗಿ ಗೌರವ ಮತ್ತು ಮಾನ್ಯತೆಯನ್ನು ತಂದುಕೊಟ್ಟಿತು.
3. ತುಳುನಾಡಿನ ಹಾಗೂ ಕರ್ನಾಟಕದ ಸಂಸ್ಕೃತಿ-ಕಲೆ-ಜನಪದ ಸಾಹಿತ್ಯದ ಕುರಿತು ವಿದೇಶೀ ವಿದ್ವಾಂಸರು ವಿಶ್ವಮಟ್ಟದಲ್ಲಿ ಗುರುತಿಸುವ ಮತ್ತು ಮನ್ನಿಸುವ ಅಪೂರ್ವ ಅವಕಾಶವು ಬಂದೊದಗಿತು.
4. ಅವಿಭಜಿತ ಜಿಲ್ಲೆಯ ವಿದ್ವಾಂಸರನ್ನು ಸ್ಮರಿಸುವುದಕ್ಕೆ ಸಂಶೋಧನ ಕೇಂದ್ರವು ಅಪೂರ್ವ ಅವಕಾಶವನ್ನು ನೀಡಿತು. (ಕಡೆಂಗೋಡ್ಲು ಕಾವ್ಯ ಪ್ರಶಸ್ತಿ, ಕು.ಶಿ. ಜಾನಪದ ಪ್ರಶಸ್ತಿ, ಪೊಳಲಿ ಶೀನಪ್ಪ ಹೆಗ್ಡೆ ಪ್ರಶಸ್ತಿ, ಸೇಡಿಯಾಪು ಪ್ರಶಸ್ತಿ, ಇತ್ಯಾದಿ, ಇತ್ಯಾದಿ.

5. ಯಕ್ಷಗಾನ ಎಂಬ ಪ್ರಾದೇಶಿಕ ಕಲೆಯು ವಿಶ್ವವಿದ್ಯಾನಿಲಯ ಮಟ್ಟದ ವಿದ್ವಾಂಸರ, ಸಂಶೋಧಕರ ಮನ್ನಣೆಗೆ ಪಾತ್ರವಾಯಿತು.

6. ಜನಪದ ಕಲಾಪ್ರಕಾರವೆಂಬ ಯಕ್ಷಗಾನ ಚಟುವಟಿಕೆಯು 'ಯಕ್ಷಗಾನಕೇಂದ್ರ'ವೆಂಬ ಸಾಂಸ್ಥಿಕ ಚೌಕಟ್ಟಿನಿಂದಾಗಿ ಕಲೆಯ ಪರಂಪರೆ- ಸಂಪ್ರದಾಯವು ಉಳಿಯುವಂತಾಯಿತು.

**3.6) ಡಾ. ಕೆ. ಶಿವರಾಮ ಕಾರಂತ ಸಂಶೋಧನೆ ಮತ್ತು ಅಧ್ಯಯನ ಸಂಸ್ಥೆ (ರಿ.) 'ಮಾನಸ' ಸಾಲಿಗ್ರಾಮ, ಉಡುಪಿ ತಾಲೂಕು:**

ಡಾ. ಶಿವರಾಮ ಕಾರಂತರು ಸುದೀರ್ಘ ತಮ್ಮ 50ವರ್ಷದ ಪುತ್ತೂರಿನ ಬದುಕಿಗೆ ಶಾಶ್ವತ ವಿದಾಯವನ್ನು ಹೇಳಿ, ತಮ್ಮ ಖಾಸಗಿ ವಾಸಸ್ಥಾನವನ್ನು ಪುನಃ ಸಾಲಿಗ್ರಾಮಕ್ಕೆ ವರ್ಗಾಯಿಸಿಕೊಂಡರು. ಆರಂಭದಲ್ಲಿ ಸ್ನೇಹಿತರಾದ ರಾಮಕೃಷ್ಣ ಐತಾಳರು ನೀಡಿದ 'ಸುಹಾಸ' ಎಂಬ ಮನೆಯಲ್ಲಿ ವಾಸ್ತವ್ಯವಿದ್ದರು. ಕಾರಂತರ ಪತ್ನಿ ಲೀಲಾ ಕಾರಂತರು ನಿಧನಗೊಂಡನಂತರ 'ಸುಹಾಸ' ಎಂಬ ಮನೆಯನ್ನು ಮೂಲ ವಾರೀಸುದಾರರಿಗೆ ಬಿಟ್ಟುಕೊಡಬೇಕಾಗಿ ಬಂತು. ಏಕಾಂಗಿಯಾದ ಕಾರಂತರು ತಮ್ಮ ಇಳಿ ವಯಸ್ಸಿನಲ್ಲಿ ಅವರ ಬರಹ ಚಟುವಟಿಕೆಗಳಿಗೆ ಸಹಾಯಕರಾಗಿದ್ದ ಎಲ್.ಐ.ಸಿ.ಯಲ್ಲಿ ಉದ್ಯೋಗಿಯಾಗಿದ್ದ ಮಾಲಿನಿ ಮಲ್ಯ ಎಂಬುವವರ ಸಲಹೆಯಂತೆ ಸಾಲಿಗ್ರಾಮದ ಮಾಲಿನಿ ಮಲ್ಯ ಅವರ ಸ್ವಂತ ಮನೆಗೆ ಬಂದು ನೆಲೆಸಿದರು. ಜೀವನದುದ್ದಕ್ಕೂ ಯಾರ ಕೃಪೆ ಹಂಗು ಮುಲಾಜಿಗೂ ಒಳಗಾಗದ ಕಾರಂತರು ಮಾಲಿನಿ ಮಲ್ಯ ಅವರ ಮನೆಯಲ್ಲಿ ತಮ್ಮ ಸೃಜನ ಚಟುವಟಿಕೆಗಳನ್ನು ಮುಂದುವರಿಸಿದರು. ವೃದ್ಧಾಪ್ಯದಿಂದ ದೈಹಿಕವಾಗಿ ಬಳಲಿದ್ದರೂ ಮಾನಸಿಕಶಕ್ತಿ, ಸ್ಮರಣಶಕ್ತಿ ಉಳಿಸಿಕೊಂಡ ಕಾರಂತರು ಸಾಹಿತ್ಯದಲ್ಲಿ ಆಸಕ್ತರಾದ ಮಾಲಿನಿ ಮಲ್ಯರವರ ಕೋರಿಕೆಯಂತೆ ತಮ್ಮ ದೀರ್ಘ ನೆನಪಿನ ಸುರುಳಿಯಿಂದ ಅಮೂಲ್ಯವಾದ ಕನ್ನಡ ಮತ್ತು ಭಾರತೀಯ ಸಾಹಿತ್ಯಕ್ಕೆ ಅತ್ಯವಶ್ಯವಾದ ಅನೇಕಾನೇಕ ಮಾಹಿತಿಗಳನ್ನು ನಿರರ್ಗಳವಾಗಿ ಅಭಿವ್ಯಕ್ತಿಸುತ್ತಾ ಹೋದಂತೆ ಮಾಲಿನಿಯವರು ಅದಕ್ಕೆ ಅಕ್ಷರರೂಪವನ್ನು ನೀಡಿದರು. ದೇಶ ವಿದೇಶಗಳಿಂದ ಕಾರಂತರಿಗೆ ಬರುವ ಪತ್ರಗಳಿಗೆ ಮಾಲಿನಿಯವರೇ ಕಾರಂತರ ಮೂಲಕ ಪ್ರತಿಕ್ರಿಯಿಸತೊಡಗಿದರು. ಕಾರಂತರ ಸುಪರ್ದಿಯಲ್ಲಿದ್ದ ಅಮೂಲ್ಯ ಕೃತಿಗಳು, ಕಾರಂತರು ಪ್ರಕಟಿಸಿದ ಅನೇಕ ಲೇಖನಗಳು, ಕಾರಂತರ ಲೇಖನಗಳು ಪ್ರಕಟಗೊಂಡ ವಿವಿಧ ದಿನಪತ್ರಿಕೆ, ವಾರಪತ್ರಿಕೆಗಳು, ವಿಶೇಷ ಸಂಚಿಕೆಗಳನ್ನು, ಕನ್ನಡದ ಮತ್ತು ಭಾರತೀಯ ಭಾಷೆಯ ಅಪೂರ್ವ ಆಸ್ತಿಯೆಂದು ಬಗೆದ ಮಾಲಿನಿ ಮಲ್ಯ ಅವರು ತಮ್ಮ ನಿವಾಸದಲ್ಲಿಯೇ ಅವುಗಳನ್ನು ಒಪ್ಪ ಓರಣವಾಗಿ ಜೋಡಿಸಿ, ತಮ್ಮ ನಿವಾಸವನ್ನೇ ಕಾರಂತರ ಕುರಿತಾಗಿ ಅಭ್ಯಾಸ ಮಾಡುವವರಿಗೆ ಅಮೂಲ್ಯ ಸಂಶೋಧನಕೇಂದ್ರವೆಂಬಂತೆ ಸಜ್ಜುಗೊಳಿಸಿದರು. ದೈಹಿಕ ದೌರ್ಬಲ್ಯವು ಇದ್ದಕ್ಕಿಂದಂತೆ ಉಲ್ಬಣಿಸಿದ ಪರಿಣಾಮದಿಂದಾಗಿ ಕಾರಂತರು ಮಣಿಪಾಲ ಆಸ್ಪತ್ರೆಯಲ್ಲಿ ಕಾಲವಾದರು. (1997) ತಮ್ಮ ಜೀವಿತಾವಧಿಯಲ್ಲಿಯೇ ಕಾರಂತರು ತನ್ನೆಲ್ಲಾ ಬೌದ್ಧಿಕ ಬರವಣಿಗೆಗಳ ಅಧಿಕಾರವನ್ನು ಮಾಲಿನಿ ಮಲ್ಯರಿಗೆ ಲಿಖಿತವಾಗಿ ನೀಡಿದ್ದ ಕಾರಣ ಮಾಲಿನಿ ಮಲ್ಯ ಅವರು ಕಾರಂತರ ಕೃತಿಗಳನ್ನು, (ವಿಚಾರಧಾರೆಯನ್ನು) ಮುಂದಿನ ತಲೆಮಾರಿಗೆ ವರ್ಗಾಯಿಸುವ ಹೊಣೆ ಹೊತ್ತು, ತಮ್ಮ ನಿವಾಸವನ್ನೇ ಕಾರಂತರ ಹೆಸರಿನ ಸಂಶೋಧನೆ ಮತ್ತು ಅಧ್ಯಯನ ಸಂಸ್ಥೆಯಾಗಿ ಪರಿವರ್ತಿಸಿದರು. ವರ್ಷಂಪ್ರತಿ ಅವರ ಜನ್ಮದಿನದಂದು ಕಾರಂತರ ಚಿಂತನೆಯ ಕುರಿತಾಗಿ ಉಪನ್ಯಾಸವನ್ನೂ ಅವರ ನಿಧನದಿನದಂದು ಅವರಿಗೆ ಪ್ರಿಯವಾದ ಯಕ್ಷಗಾನ ಚಟುವಟಿಕೆಯನ್ನೂ, ಸಂವಾದಕಾರ್ಯಕ್ರಮವನ್ನೂ ಹಮ್ಮಿಕೊಳ್ಳುತ್ತಾ ಕಾರಂತರ ಕೊಡುಗೆಗಳನ್ನು ಆಧುನಿಕರಿಗೆ ನೆನಪಿಸುವ

ಕೈಂಕರ್ಯದಲ್ಲಿ 1997ರಿಂದ ಈತನಕ ನಿರತರಾಗಿದ್ದಾರೆ. ರಾಜ್ಯದ ಮತ್ತು ರಾಜ್ಯದ ಹೊರಗಿನ ಕಾಲೇಜು ಮತ್ತು ವಿಶ್ವವಿದ್ಯಾನಿಲಯದ ಅಧ್ಯಾಪಕರು, ಸಂಶೋಧನವಿದ್ಯಾರ್ಥಿಗಳು ತಮ್ಮ ಸಂಶೋಧನವಿಷಯಕ್ಕೆ ಪೂರಕವಾದ ಮಾಹಿತಿಗಾಗಿ ಈ ಕೇಂದ್ರವನ್ನು ಬಳಸಿಕೊಳ್ಳುತ್ತಿದ್ದಾರೆ. ಸ್ವಂತ ವಾರೀಸುದಾರರಿಲ್ಲದ ಮಾಲಿನಿ ಮಲ್ಯ ಅವರು ಕೇಂದ್ರದ ಮುಂದಿನ ಭವಿಷ್ಯದ ಕುರಿತಂತೆ (ಕಾರಂತರ ಮೇಲಿನ ಅಭಿಮಾನ ಮತ್ತು ಕಾಳಜಿಯಿಂದಾಗಿ) ಗಟ್ಟಿ ನಿರ್ಧಾರದ ಶಾಶ್ವತ ಯೋಜನೆಯನ್ನು ಹಾಕಿಕೊಳ್ಳಬೇಕಾಗಿದೆ. ಅದಿಲ್ಲದೇ ಹೋದಲ್ಲಿ ಕೇಂದ್ರದ ಒಳಗಿರುವ ಅಪಾರ ಭೌತಿಕ ಪರಿಕರಗಳ ಮೌಲ್ಯ ತಿಳಿಯದ ಅರಸಿಕರ ಅಸಡ್ಡೆಗೆ ಗುರಿಯಾದಲ್ಲಿ ಕನ್ನಡಿಗರ ಪಾಲಿಗೆ ಅಪಾರ ನಷ್ಟ ಒದಗುವ ಸಂದರ್ಭ ಎದುರಾಗುತ್ತದೆ.

**3.7) ಯಕ್ಷಗಾನ ಕಲಾಕ್ಷೇತ್ರ (ರಿ.), ಉಡುಪಿ:** ಜಿಲ್ಲೆಯ ಶ್ರೇಷ್ಠ ಕಲೆಯಾದ ಯಕ್ಷಗಾನವನ್ನು ಅದರ ಮೂಲ ಸಂಪ್ರದಾಯಕ್ಕೆ ಧಕ್ಕೆ ಬರದಂತೆ ಬಳಸಿ ಅದನ್ನು ಯುವ ತಲೆಮಾರಿಗೆ ವ್ಯವಸ್ಥಿತ ತರಬೇತಿಯೊಂದಿಗೆ ವರ್ಗಾಯಿಸುವ ಉದ್ದೇಶದಿಂದ ಹುಟ್ಟಿಕೊಂಡ ಸಂಸ್ಥೆಯೇ ಯಕ್ಷಗಾನ ಕಲಾಕ್ಷೇತ್ರ-ಗುಂಡಿಬೈಲು. ಈ ಯಕ್ಷಗಾನ ಕಲಾಕೂಟದ ಮೂಲ ಹೆಸರು 'ಶ್ರೀ ಬ್ರಹ್ಮಬೈದರ್ಕಳ ಧೂಮಾವತಿ ಯಕ್ಷಗಾನ ಸಂಘ' ಎಂದಾಗಿತ್ತು. 1951 ರಿಂದ ಅಸ್ತಿತ್ವವನ್ನು ಹೊಂದಿದ ಈ ಸಂಘವು 1954 ರ ತನಕ ನಿಟ್ಟೂರಿನ ಪಂಚಧೂಮಾವತಿ ದೈವಸ್ಥಾನದಲ್ಲಿಯೇ ಕಾರ್ಯಾಲಯವನ್ನು ಹೊಂದಿತ್ತು. 1954ರಲ್ಲಿ ಉಡುಪಿ ಸಿಟಿ ಬಸ್ ನಿಲ್ದಾಣದ ಸಮೀಪದ ಜಂಗಮರ ಮಠದ ಬಾಡಿಗೆ ಕಟ್ಟಡದಲ್ಲಿ ಕಾರ್ಯಾಚರಿಸುತ್ತಿತ್ತು. ಭವಿಷ್ಯದಲ್ಲಿ ಯಾವುದೇ ಜನ-ಜಾತಿ ಪಂಗಡಗಳಿಗೆ ಸಂಘವನ್ನು ಸೀಮಿತಗೊಳಿಸಬಾರದೆಂಬ ಉದ್ದೇಶದಿಂದ ಸಂಘದ ಹೆಸರನ್ನು 1961ರಲ್ಲಿ **ಯಕ್ಷಗಾನ ಕಲಾಕ್ಷೇತ್ರ** ಎಂದು ಹೆಸರನ್ನು ಮಾರ್ಪಡಿಸಲಾಯಿತು. ಕ್ರಿ.ಶ. 1987ರಲ್ಲಿ ವರ್ಷದಲ್ಲಿ ಗುಂಡಿಬೈಲಿನ ಸ್ವಂತ ಸ್ಥಳದಲ್ಲಿ ಸ್ವಂತ ಕಟ್ಟಡವನ್ನು ಹೊಂದಿದ ಯಕ್ಷಗಾನ ಕಲಾಕ್ಷೇತ್ರವು ರಜತಮಹೋತ್ಸವ ಹಾಗೂ ಸುವರ್ಣ ಮಹೋತ್ಸವ ಎಂಬ ಎರಡು ಕಾರ್ಯಕ್ರಮಗಳನ್ನು ಅದ್ದೂರಿಯಿಂದ ಆಚರಿಸಿ ಉಡುಪಿ ಪರಿಸರದ ಯಕ್ಷಗಾನ ಕಲಾಭಿಮಾನಿಗಳ ಗಮನ ಸೆಳೆದಿದೆ.

ಕಲಾಕ್ಷೇತ್ರವು ಯಕ್ಷಗಾನದ ಕುರಿತಂತೆ ನಡೆಸಿದ ಎಲ್ಲ ಚಟುವಟಿಕೆಗಳ ಮಾಹಿತಿಯು ಸಂಸ್ಥೆಯು ತನ್ನ 25ನೇ ವರ್ಷದ ಸಂದರ್ಭದಲ್ಲಿ ಹೊರತಂದ 'ರಜತ ಕುಸುಮ' ಎಂಬ ಬೆಳ್ಳಿಹಬ್ಬದ ಸಂಚಿಕೆಯಲ್ಲಿ ಸಮಗ್ರವಾಗಿ ದಾಖಲಿಸಿರುವುದನ್ನು ಗಮನಿಸಬಹುದು.

**3.8) ಯಕ್ಷಗಾನಕಲಾರಂಗ:**

**ಯಕ್ಷಗಾನಕಲಾರಂಗದ ಹುಟ್ಟಿನ ಹಿನ್ನೆಲೆ:** ವೃತ್ತಿ ಮೇಳದ ಕಲಾವಿದರಾಗಿ ಉಡುಪಿಗೆ ಬರುತ್ತಿದ್ದ ಯಕ್ಷಗಾನಕಲಾವಿದರನ್ನು ಊಟ ಮತ್ತು ವೈದ್ಯಕೀಯ ಉಪಚಾರದೊಂದಿಗೆ ಸತ್ಕರಿಸುತ್ತಿದ್ದ ಇಬ್ಬರು ಮಹನೀಯರೇ ಸುಂದರ ಶೆಟ್ಟಿ ಎಂಬ ಹೋಟೆಲ್ ಮಾಲೀಕರು ಹಾಗೂ ಲಲಿತ ಕ್ಲಿನಿಕ್‌ನ ವೈದ್ಯರಾಗಿದ್ದ ಡಾ. ಬಿ.ಬಿ. ಶೆಟ್ಟಿಯವರು. (ಈಗ ಇಬ್ಬರೂ ದಿವಂಗತರು) ಯಕ್ಷಗಾನ ಕಲೆಯ ಅಭಿಮಾನಿಯಾಗಿದ್ದ ಡಾ। ಬಿ.ಬಿ. ಶೆಟ್ಟಿಯವರು ಮಳೆಗಾಲದ ಬಿಡುವಿನಲ್ಲಿ ಉಡುಪಿಯಲ್ಲೇ ಏಕೆ ಯಕ್ಷಗಾನ ಪ್ರದರ್ಶನಕ್ಕೆ ಅವಕಾಶ ನೀಡಬಾರದು? ಎಂದು ಚಿಂತಿಸಿ ಹಗಲು ಯಕ್ಷಗಾನ ಪ್ರದರ್ಶನಕ್ಕಾಗಿ ಉಡುಪಿಯ ತಮ್ಮ ಕೆಲವು ಮಿತ್ರರನ್ನು ಸಂಘಟಿಸಿ ವೇದಿಕೆಯೊಂದನ್ನು ಸ್ಥಾಪಿಸಿದರು ಅದುವೇ 'ಯಕ್ಷಗಾನಕಲಾರಂಗ'.

ಕೇವಲ ಕಲೆಗೆ ಮಾತ್ರ ಪ್ರೋತ್ಸಾಹ ನೀಡುವುದಲ್ಲದೆ ಕಲಾವಿದರ ಖಾಸಗಿ ಬದುಕಿನ ಕೆಲವೊಂದು ಸಮಸ್ಯೆಗಳನ್ನು ಪರಿಹರಿಸುವ ನಿಟ್ಟಿನಲ್ಲೂ ಗಮನಹರಿಸಿದರು. ಕಲಾವಿದನ ವ್ಯಕ್ತಿಗತ ಸಮಸ್ಯೆಯನ್ನು ವೇದಿಕೆಯ ಮೂಲಕ ಪರಿಹರಿಸುವುದಕ್ಕೆ ಮುಂದಾದಲ್ಲಿ ಆತನ ಕಲಾತ್ಮಕ ಪ್ರತಿಭೆ ಇನ್ನಷ್ಟು ಪರಿಣಾಮಕಾರಿಯಾಗಿ ಅಭಿವ್ಯಕ್ತಗೊಳ್ಳುತ್ತದೆ ಎನ್ನುವುದು ವೈದ್ಯರಾದ ಡಾ। ಬಿ.ಬಿ. ಶೆಟ್ಟಿಯವರ ಮತ್ತು ಕಲಾರಂಗದ ನಿಲುವಾಗಿತ್ತು. ಯಕ್ಷಗಾನಕಲಾರಂಗ ಎಂಬ ಸಂಸ್ಥೆಯನ್ನು 1975ರ ಹತ್ತನಾಜೆಯ ಒಂದು ದಿನ ಯಕ್ಷಗಾನ ಲೋಕದ ಕಿನ್ನರಪುರುಷ ಕೋಟ ಶಿವರಾಮ ಕಾರಂತರು ಅಗ್ನಿಹಸ್ತದಲ್ಲಿ ದೀಪ ಪ್ರಜ್ವಲಿಸಿ ಯಕ್ಷಗಾನ ಕಲಾರಂಗಕ್ಕೆ ಗಜಮುಖದವನಿಗೆ ಹಾಡಿದರು.'' (ಸಂ: ಕಲಾರಂಗ, 2014, ಪು–7) ಡಾ. ಬಿ.ಬಿ. ಶೆಟ್ಟಿಯವರು ಸುಮಾರು 18 ವರ್ಷ ಕಲಾರಂಗದ ಅಧ್ಯಕ್ಷರಾಗಿ ಮಳೆಗಾಲದ ಯಕ್ಷಗಾನಕ್ಕೆ ಅವಕಾಶವನ್ನು ಕಲ್ಪಿಸಿ–ಕಲೆಯ ಪರಂಪರೆಯ ಮೌಲ್ಯಗಳನ್ನುಳಿಸುವುದರೊಂದಿಗೆ ಅಶಕ್ತ ಕಲಾವಿದರ ಸಮಸ್ಯೆಗಳಿಗೆ ವೇದಿಕೆಯ ಮೂಲಕ ಸ್ಪಂದಿಸಿದರು. ಕಲಾರಂಗದ ಸ್ಥಾಪಕ ಸದಸ್ಯರಾಗಿ ಡಾ। ಬಿ.ಬಿ. ಶೆಟ್ಟಿಯವರೊಂದಿಗೆ ವಿಶ್ವಜ್ಞ ಶೆಟ್ಟರು, ಅಮ್ಮುಂಜೆ ನಾಗೇಶ ನಾಯಕರು, ಬಿ.ವಿ. ಆಚಾರ್ಯರು, ಜಿ. ಆರ್. ರೈಗಳು, ಕುತ್ಪಾಡಿ ಆನಂದ ಗಾಣಿಗರು, ಕೆ. ಬಾಲಕೃಷ್ಣರಾಯರು, ಶಾನಾಡಿ ವಿಶ್ವೇಶ್ವರ ಭಟ್ಟರು ಮೊದಲಾದವರಿದ್ದರು. ಕೇವಲ ಯಕ್ಷಗಾನ ಪ್ರದರ್ಶನವನ್ನಲ್ಲದೆ ಹಿರಿಯ ಕಲಾವಿದರ ಸನ್ಮಾನ–ವಿಚಾರಗೋಷ್ಠಿ, ಪ್ರಾತ್ಯಕ್ಷಿಕೆ ಮುಂತಾದ ಕಾರ್ಯಕ್ರಮಗಳನ್ನು 20ನೇ ಶತಮಾನದ ಕೊನೆಯ ಎರಡು ದಶಕಗಳಲ್ಲಿ ನಿರಂತರವಾಗಿ ನಡೆಸಿಕೊಂಡು ಬಂದಿರುತ್ತಾರೆ. 1985ರಲ್ಲಿ ಕಲಾರಂಗದ ದಶಮಾನೋತ್ಸವ ಕಾರ್ಯಕ್ರಮವನ್ನು ದಿನಾಂಕ 05.10.1985 ರಿಂದ 14.10.1985ರ ತನಕ ಹತ್ತು ದಿನಗಳ ಕಾಲ ಆಚರಿಸಿಕೊಂಡು ಬರಲಾಗಿತ್ತು. ಈ ಕಾರ್ಯಕ್ರಮದ ಅಂಗವಾಗಿ ಪ್ರತೀ ನಿತ್ಯ ಅತಿಥಿಕಲಾವಿದರಿಂದ ಯಕ್ಷಗಾನ–ತಾಳಮದ್ದಳೆ ಹಾಗೂ ತಾಳಮದ್ದಳೆಯ ಕುರಿತು ಪ್ರಾತ್ಯಕ್ಷಿಕೆ, ಯಕ್ಷಗಾನದ ವಿಚಾರಗೋಷ್ಠಿ ಮುಂತಾದ ಕಾರ್ಯಕ್ರಮಗಳನ್ನು ಹಮ್ಮಿಕೊಂಡಿದ್ದು, ದಶಮಾನೋತ್ಸವ ಕಾರ್ಯಕ್ರಮವು ಯಶಸ್ವಿಯಾಗಿ ಜರಗಿತು.

ಕ್ರಿ.ಶ. 2000ದ ತನಕ ಯಕ್ಷಗಾನ ಪ್ರದರ್ಶನಕಲೆಯ ಕುರಿತಾಗಿ ವಿಮರ್ಶಾತ್ಮಕವಾಗಿ ಚಿಂತನೆ ನಡೆಸಿದ ಕಲಾರಂಗದ ಸದಸ್ಯರು ಕ್ರಿ.ಶ. 2000ದ ಅನಂತರ ತಮ್ಮ ಉದ್ದೇಶವನ್ನು ಮಾರ್ಪಡಿಸಿಕೊಂಡು ಕಲಾವಿದರ ಯೋಗಕ್ಷೇಮದ ಕುರಿತಾಗಿ ಹಾಗೂ ಅವರ ಮಕ್ಕಳ ವಿದ್ಯಾಭ್ಯಾಸದ ಕುರಿತಾಗಿ ಕೆಲವು ಸ್ಪಷ್ಟವಾದ ಯೋಜನೆ ರೂಪಿಸಲು ಮುಂದಾದರು. ಕಲಾವಿದರ ದೇಹಾರೋಗ್ಯದ ಕಾಳಜಿಯಿಂದ ಆರೋಗ್ಯವಿಮೆಯನ್ನೂ ಅವರ ಮಕ್ಕಳ ವಿದ್ಯಾಭ್ಯಾಸಕ್ಕಾಗಿ 'ವಿದ್ಯಾಪೋಷಕ್' ಎಂಬ ವಿದ್ಯಾರ್ಥಿ ವೇತನ ಯೋಜನೆಯನ್ನೂ ಕಲಾವಿದರ ತಿರುಗಾಟದ ಸಂದರ್ಭದಲ್ಲಿ ಅವರಿಗೆ ರಿಯಾಯಿತಿದರದಲ್ಲಿ ಖಾಸಗಿ ಬಸ್ಸಿನಲ್ಲಿ ಪಾಸ್ ವ್ಯವಸ್ಥೆಯನ್ನೂ ಚಾಲ್ತಿಗೆ ತರಲಾಗಿದೆ. ಹೀಗೆ ಕಲಾರಂಗವು ಕಲೆಯ ವಿಚಾರಗಳಿಗಿಂತ ಕಲಾವಿದರ ಖಾಸಗಿ ಬದುಕಿನ ಕ್ಷೇಮಚಿಂತನೆಗೆ ಗಮನವನ್ನು ಕೊಡುತ್ತಿರುವ ಸಂಸ್ಥೆಯಾಗಿ ಮುಂದುವರಿದಿದೆ.

**3.9) ಯಕ್ಷಗಾನ ಕಲಾಕೇಂದ್ರ ಐರೋಡಿ, ಹಂಗಾರಕಟ್ಟೆ**

(ಅಧಿಕೃತ ಕಛೇರಿ–ಸಾಲಿಗ್ರಾಮ ಡಿವೈನ್ ಪಾರ್ಕ್ ಎದುರುಗಡೆ, ಅಂಚೆ: ಸಾಲಿಗ್ರಾಮ, ಉಡುಪಿ ತಾಲೂಕು ಉಡುಪಿ ಜಿಲ್ಲೆ)

ಈ ಯಕ್ಷಗಾನ ತರಬೇತಿ ಕೇಂದ್ರವು 1972 ಅಗಸ್ಟ್ ತಿಂಗಳಿನಲ್ಲಿ ಕೋಟ ಹಿರೇಮಹಾಲಿಂಗೇಶ್ವರ ದೇವಸ್ಥಾನದ ಉಪ್ಪರಿಗೆಯಲ್ಲಿ ಆರಂಭಗೊಂಡಿತು. ಇದರ ಸ್ಥಾಪನೆಗಾಗಿ ದುಡಿದ ಮುಖ್ಯ ನೇತಾರರು– ಐರೋಡಿ ಸದಾನಂದ ಹೆಬ್ಬಾರ್,

ಕೆ.ಎಲ್. ಐತಾಳ, ಪಿ. ಶ್ರೀಧರ ಹಂದೆ, ನಾರ್ಣಪ್ಪ ಉಪ್ಪೂರ ಇವರುಗಳೇ ನಾಲ್ವರೆಂದು ಈಗಿನ ಕೇಂದ್ರದ ಸಂಚಾಲಕರೂ, ನಿರ್ದೇಶಕರೂ ಆದ ರಾಜಶೇಖರ ಹೆಬ್ಬಾರ್ ಅವರ ಹೇಳಿಕೆಯಾಗಿದೆ.

**ಸಂಘದ ಉದ್ದೇಶ:** 1972ರ ಕಾಲಕ್ಕೆ ವೃತ್ತಿಕಲಾಮೇಳದಲ್ಲಿ ಹಿಮ್ಮೇಳದ ಕಲಾವಿದರ ತೀವ್ರಕೊರತೆ ಇದ್ದು ಇದನ್ನು ನಿವಾರಿಸಲು ಒಂದು ಕೇಂದ್ರವನ್ನು ಹುಟ್ಟುಹಾಕಲು ಯೋಜನೆ ರೂಪಿಸಿ, ಈ ಯೋಜನೆಯು 1972ರ ಅಗಸ್ಟ್ ತಿಂಗಳಿನಲ್ಲಿ ಮೇಲೆ ಹೇಳಿದ ದೇವಸ್ಥಾನದ ವಠಾರದಲ್ಲಿ ಕಾರ್ಯರೂಪಕ್ಕೆ ಬಂದಿತು. ವಿಶೇಷವಾಗಿ ಈ ಕೇಂದ್ರದಲ್ಲಿ ಯಕ್ಷಗಾನದ ಪರಂಪರಾಗತ ಶೈಲಿಯಲ್ಲಿ ತರಬೇತಿ ನೀಡುವ ವ್ಯವಸ್ಥೆಯನ್ನು ಕಾರ್ಯಗತಗೊಳಿಸಲಾಯಿತು. ಇಲ್ಲಿ ಹಿಮ್ಮೇಳ ಎಂದರೆ ಭಾಗವತಿಕೆ ಹಾಗೂ ಮದ್ದಳೆಗೆ ಮಾತ್ರ ಅವಕಾಶ ನೀಡಲಾಗಿದೆ. 2003ರವರೆಗೂ ಕೋಟದ ಹಿರೇ ಮಹಾಲಿಂಗೇಶ್ವರ ದೇವಸ್ಥಾನದ ವಠಾರದಲ್ಲಿಯೇ ಇದ್ದ ಕೇಂದ್ರವು 2004ರ ಹೊತ್ತಿಗೆ ಚೇಂಪಿಯಲ್ಲಿರುವ ಈಗಿನ ಸ್ವಂತ ಕಟ್ಟಡಕ್ಕೆ ಸ್ಥಳಾಂತರಗೊಂಡಿತು. ಕೇಂದ್ರ ಸರಕಾರದ ಅಧೀನದ ನಾಟಕ ಮತ್ತು ಸಂಗೀತ ಅಕಾಡೆಮಿಯು ವಾರ್ಷಿಕ ರೂ. 5,000/-ವನ್ನು ಪ್ರೋತ್ಸಾಹಧನವಾಗಿ ನೀಡುತ್ತಾ ಬರುತ್ತಿದ್ದು ಬೇರೆ ಯಾವುದೇ ರೀತಿಯ ಸರಕಾರಿ ಅನುದಾನ ಸಂಸ್ಥೆಗಿರುವುದಿಲ್ಲ. ಯಕ್ಷಗಾನದ ಪ್ರದರ್ಶನಕ್ಕಷ್ಟೇ ತಮ್ಮ ಕೇಂದ್ರವನ್ನು ಮೀಸಲಾಗಿರಿಸದೆ ಈ ಕಲೆಯ ಕುರಿತಾಗಿ ಹೊಸ ಆವಿಷ್ಕಾರದ ಸಾಧ್ಯತೆ, ಇತರ ರಂಗಪ್ರದರ್ಶನದಲ್ಲಿ ಇದರ ಅಳವಡಿಕೆಯ ಸಾಧ್ಯತೆ, ಯುವತಲೆಮಾರಿಗೆ ಕಲೆಯ ಸಂವಹನದ ವ್ಯವಸ್ಥೆ, ಈ ಕುರಿತಂತೆ ಸಾಕಷ್ಟು ಗೋಷ್ಠಿ, ಉಪನ್ಯಾಸ, ಸಂವಹನ ಕಾರ್ಯಕ್ರಮಗಳನ್ನು ವರ್ಷಪ್ರಂತಿ ನಡೆಸಿಕೊಂಡು ಬರುತ್ತಿದ್ದಾರೆ. ಈ ಚಟುವಟಿಕೆಗಳ ಮೂಲಕವೇ ಸಮಾಜಕ್ಕೆ ತಮ್ಮ ಅಸ್ತಿತ್ವವನ್ನೂ, ಅನಿವಾರ್ಯತೆಯನ್ನು ಸಾದರಪಡಿಸುತ್ತಾ ಕಲೆಯ ಕುರಿತು ಜಾಗೃತಿ ಮೂಡಿಸುವ ಬದ್ಧತೆಯುಳ್ಳ ಸಂಘಟನೆಯೆಂದು ಪರಿಸರದಲ್ಲಿ ಗುರುತಿಸಿಕೊಂಡಿರುವುದನ್ನು ಇವರ ಕಾರ್ಯಚಟುವಟಿಕೆಗಳಿಂದ ಅರ್ಥೈಸಿಕೊಳ್ಳಬೇಕಾಗಿದೆ.

ಉಡುಪಿ ಜಿಲ್ಲಾ ಭೌಗೋಳಿಕ ವ್ಯಾಪ್ತಿಯಲ್ಲಿ 20ನೇ ಶತಮಾನದ ಕೊನೆಯ ದಶಕದ ಅಂತ್ಯದ ಹೊತ್ತಿಗೆ ಸಾಹಿತ್ಯಚಟುವಟಿಕೆಗಳನ್ನು ನಿರ್ವಹಿಸುತ್ತಿದ್ದ 40 ಸಂಘಟನೆಗಳು ಅಸ್ತಿತ್ವದಲ್ಲಿರುವುದು ಕ್ಷೇತ್ರಕಾರ್ಯದ ಮೂಲಕ ಕಂಡುಕೊಳ್ಳಲಾಗಿದೆ.

**ಉಡುಪಿ ಜಿಲ್ಲೆಯಲ್ಲಿ ಇಪ್ಪತ್ತನೆಯ ಶತಮಾನದಲ್ಲಿ ಗುರುತಿಸಿಕೊಂಡ ಸಾಹಿತ್ಯ ಸಂಘಟನೆಗಳ ಚಟುವಟಿಕೆಗಳು**

| ಕ್ರ.ಸಂ. | ಪ್ರಾರಂಭ ವರ್ಷ | ಸಾಹಿತ್ಯ ಸಂಘದ ಹೆಸರು | ಸ್ಥಳ | ಸಾಹಿತ್ಯ | ಸಾಂಸ್ಕೃತಿಕ | ಕ್ರೀಡೆ |
|---|---|---|---|---|---|---|
| 1. | 1936 | ಕರ್ನಾಟಕ ಸಂಘ | ಕುಂದಾಪುರ | 97 | 03 | – |
| 2. | 1943 | ಕರ್ನಾಟಕ ಸಂಘ | ಉಡುಪಿ | 90 | 10 | – |
| 3. | 1944 | ಕಲಾವೃಂದ | ಉಡುಪಿ | 90 | 10 | – |
| 4. | 1951 | ಯಕ್ಷಗಾನ ಕಲಾಕೇಂದ್ರ ಗುಂಡಿಬೈಲು | ಉಡುಪಿ | 10 | 90 | – |
| 5. | 1956 | ಅಜಪುರ ಕರ್ನಾಟಕ ಸಂಘ | ಬ್ರಹ್ಮಾವರ | 60 | 40 | – |
| 6. | 1961 | ತಿಂಗಳ ದೈವದ ಮನೆ (ಸಾಹಿತ್ಯ ಸಮಾರಂಭ) | ತಿಂಗಳೆ (ಸೀತಾನದಿ) | 20 | 80 | – |
| 7. | 1961 | ಸಂಗೀತ ಸಭಾ, ಸಾಂಸ್ಕೃತಿಕ ವೇದಿಕೆ | ಉಡುಪಿ | 40 | 60 | – |
| 8. | 1962 | ಚೇತನಾ ಕರ್ನಾಟಕ ಸಂಘ | ಹಂಗಾರಕಟ್ಟೆ | 40 | 50 | 10 |
| 9. | 1963 | ಯುವಕ ಮಂಡಲ (ರಿ.) | ಕುತ್ಯಾರು | 10 | 70 | 20 |

| | | | | | | |
|---|---|---|---|---|---|---|
| 10. | 1965 | ರಂಗಭೂಮಿ (ರಿ.) | ಉಡುಪಿ | 20 | 80 | – |
| 11. | 1965 | ರಾಷ್ಟ್ರಕವಿ ಗೋವಿಂದ ಪೈ ಸಂಶೋಧನ ಕೇಂದ್ರ | ಉಡುಪಿ | 80 | 20 | – |
| 12. | 1965 | ಗೆಳೆಯರ ಬಳಗ | ಹಂಗಳೂರು | 50 | 50 | – |
| 13. | 1965 | ಮಿತ್ರಮಂಡಳಿ | ಕೋಟ | 50. | 50. | – |
| 14. | 1967 | ಯುವಕ ಮಂಡಲ (ರಿ.) | ಎಲ್ಲೂರು | 40 | 40 | 20 |
| 15. | 1969 | ಸರ್ವೋದಯ ಯುವಕ ಮಂಡಲ | ಹಂಗಾರಕಟ್ಟೆ | 30 | 50 | 20 |
| 16. | 1971 | ಚೇತನಾ ಕ್ರೀಡಾ ಮತ್ತು ಕಲಾರಂಗ | ಹಂಗಾರಕಟ್ಟೆ | 40 | 40 | 20 |
| 17. | 1972 | ಕಸ್ತೂರಿ ಕನ್ನಡ ಕೂಟ | ಸಾಲಿಗ್ರಾಮ | 98 | 02 | – |
| 18. | 1972 | ಯಕ್ಷಗಾನ ಕಲಾಕೇಂದ್ರ | ಐರೋಡಿ | 10 | 90 | – |
| 19. | 1975 | ಯಕ್ಷಗಾನ ಕಲಾರಂಗ | ಉಡುಪಿ | 10 | 90 | – |
| 20. | 1976 | ಕನ್ನಡ ಸಂಘ | ಕಾಂತಾವರ | 85 | 15 | – |
| 21. | 1977 | ಲಾವಣ್ಯ | ಬೈಂದೂರು | 10 | 90 | – |
| 22. | 1977 | ಯಕ್ಷರಂಗ | ಉಡುಪಿ | 20 | 80 | – |
| 23. | 1977 | ಕನ್ನಡ ಸಂಘ, | ಹಿರಿಯಡ್ಕ | 80 | 20 | – |
| 24. | 1978 | ಕರ್ನಾಟಕ ಸಂಘ | ಹೆಬ್ರಿ | 100 | – | – |
| 25. | 1974 | ವರ್ಧಮಾನ | ಉಡುಪಿ | 40 | 60 | – |
| 26. | 1979 | ಕವಿ ಮುದ್ದಣ್ಣ ಮಿತ್ರಮಂಡಳಿ | ನಂದಳಿಕೆ | 60 | 40 | – |
| 27. | 1980 | ಸಂಸೇವಿನಿ | ಬಸ್ರೂರು | 90 | 10 | – |
| 28. | 1981 | ರಥಬೀದಿ ಗೆಳೆಯರು | ಉಡುಪಿ | 50 | 50 | – |
| 29. | 1983 | ಪ್ರಾದೇಶಿಕ ಜಾನಪದ ರಂಗಕಲಾ ಅಧ್ಯಯನ ಕೇಂದ್ರ | ಉಡುಪಿ | 30 | 70 | – |
| 30. | 1987 | ಅಂಬೇಡ್ಕರ್ ಯುವಕಮಂಡಲ | ಮೇಲ್‌ಗಂಗೊಳ್ಳಿ | 10 | 70 | 20 |
| 31. | 1988 | ಸ್ನೇಹವೃಂದ | ಗುಂಡ್ಮಿ | 95 | 05 | – |
| 32. | 1988 | ಗೆಳೆಯರ ಬಳಗ | ಕಾರ್ಕಡ | 40 | 60 | – |
| 33. | 1993 | ಕುಂದ ಅಧ್ಯಯನ ಕೇಂದ್ರ | ಉಪ್ಪುಂದ | 80 | 20 | – |
| 34. | 1993 | ವಿಶ್ವಭಾರತಿ | ಬೆನಗಲ್ | 80 | 20 | – |
| 35 | 1995 | ಜಾಗೃತಿ ಸಾಹಿತ್ಯಾಸಕ್ತ ಮಹಿಳೆಯರ ಒಕ್ಕೂಟ | ಕಾರ್ಕಳ | 80 | 20 | – |
| 36. | 1996 | ಸುರಭಿ | ಬೈಂದೂರು | 50 | 50 | – |
| 37. | 1996 | ಸುಹಾಸಂ | ಉಡುಪಿ | 99 | 01 | – |
| 38. | 1997 | ಸಾಹಿತ್ಯ ಸಂಘ | ಕಾರ್ಕಳ | 90 | 10 | – |
| 39. | 1998 | ಶಿವರಾಮ ಕಾರಂತ ಸಾಂಸ್ಕೃತಿಕ ಅಧ್ಯಯನ ಕೇಂದ್ರ, ರಂಗರಥ | ಸಾಲಿಗ್ರಾಮ | 70 | 30 | – |
| 40. | 2000 | ಸ್ವಾಮಿ ವಿವೇಕಾನಂದ ಸಾಂಸ್ಕೃತಿಕ ಕೇಂದ್ರ | ಬಾರಕೂರು | 80 | 20 | – |

~*~

ಈ ಸಂಘಟನೆಗಳು 1999-2000ದ ಶೈಕ್ಷಣಿಕ ವರ್ಷದಲ್ಲಿ 55.60% ಸಾಹಿತ್ಯ ಚಟುವಟಿಕೆಗಳನ್ನು, 41.60% ಸಾಂಸ್ಕೃತಿಕ ಚಟುವಟಿಕೆಗಳನ್ನು, 2.80% ಕ್ರೀಡಾ ಚಟುವಟಿಕೆಗಳನ್ನು ನಿರ್ವಹಿಸುತ್ತಿದ್ದವು. 2015-16ನೇ ವರ್ಷದಲ್ಲಿ (21ನೇ ಶತಮಾನದಲ್ಲಿ) ಈ ಸಂಘಟನೆಗಳ ಸಾಹಿತ್ಯಚಟುವಟಿಕೆಗಳ ಪ್ರಮಾಣ 45.30%ಕ್ಕೆ ಇಳಿಕೆಯಾಗಿರುವುದನ್ನು ಸಾಂಸ್ಕೃತಿಕ ಚಟುವಟಿಕೆಗಳ ಪ್ರಮಾಣ ಅಥವಾ ವ್ಯಾಪ್ತಿಯು 50.60%ಕ್ಕೆ ಏರಿರುವುದನ್ನು ಗಮನಿಸಬಹುದಾಗಿದೆ. ಹಾಗೆಯೇ ಕ್ರೀಡಾ ಚಟುವಟಿಕೆಯು 14.70%ಕ್ಕೆ ಏರಿಕೆಯಾಗಿರುವುದನ್ನು ಈ ಅಧ್ಯಯನದಲ್ಲಿ ಕಂಡುಕೊಳ್ಳಲಾಗಿದೆ. ಮೇಲ್ಕಂಡ ಸಂಘಟನೆಗಳ ಚಟುವಟಿಕೆಗಳ ಸ್ವರೂಪವನ್ನು ಈ ಮುಂದಿನ ಸ್ತಂಭ ರೇಖಾಚಿತ್ರ ಹಾಗೂ ವೃತ್ತ ರೇಖಾಚಿತ್ರದಲ್ಲಿ ತೋರಿಸಲಾಗಿದೆ.

20ನೇ ಶತಮಾನದ ಅಂತ್ಯದ ಹೊತ್ತಿಗೆ ಉಡುಪಿ ಜಿಲ್ಲೆಯ 40 ಸಾಹಿತ್ಯ ಸಂಘಟನೆಗಳಲ್ಲಿ 7 ಸಾಹಿತ್ಯ ಸಂಘಟನೆಗಳು ತಮ್ಮ ಚಟುವಟಿಕೆಗಳನ್ನು ನಿಲ್ಲಿಸಿರುವುದು ಮಾತ್ರವಲ್ಲದೆ ತಮ್ಮ ಅಸ್ತಿತ್ವವನ್ನು ಕಳೆದುಕೊಂಡಿರುತ್ತವೆ. ಆ ಸಂಘಟನೆಗಳ ಹೆಸರುಗಳು ಹೀಗಿವೆ.

| ಕ್ರ.ಸಂ. | ಸಂಘಟನೆಯ ಹೆಸರು | ಚಟುವಟಿಕೆ ನಿಲ್ಲಿಸಿದ ವರ್ಷ |
|---|---|---|
| 1. | ಕರ್ನಾಟಕ ಸಂಘ, ಉಡುಪಿ | 1979 |
| 2. | ಕಲಾವೃಂದ (ರಿ.), ಉಡುಪಿ | 1997 |
| 3. | ಕಸ್ತೂರಿ ಕನ್ನಡ ಕೂಟ, ಸಾಲಿಗ್ರಾಮ | 1993 |
| 4. | ಕನ್ನಡ ಸಂಘ, ಹಿರಿಯಡ್ಕ | 1990 |
| 5. | ಕನ್ನಡ ಸಂಘ, ಹೆಬ್ರಿ | 1989 |
| 6. | ಸ್ನೇಹವೃಂದ, ಗುಂಡ್ಮಿ | 1998 |
| 7. | ವರ್ಧಮಾನ ಸಾಹಿತ್ಯ ಸಂಘ, ಉಡುಪಿ | 1981 |

ಚಟುವಟಿಕೆಗಳನ್ನು ನಿರ್ವಹಿಸದೆ ಕೇವಲ ಅಸ್ತಿತ್ವದಲ್ಲಿ ಮಾತ್ರ ಉಳಿದುಕೊಂಡ (ವಿಳಾಸ ಮಾತ್ರದಲ್ಲೇ ಇರುವ) ಸಂಘಟನೆಗಳ ಹೆಸರುಗಳು ಹೀಗಿವೆ.

**1) ಕರ್ನಾಟಕ ಸಂಘ, ಕುಂದಾಪುರ. 2) ಸಂಗೀತಸಭಾ ವೇದಿಕೆ, ಉಡುಪಿ. 3) ಜಾಗೃತಿ ಸಾಹಿತ್ಯಾಸಕ್ತ ಮಹಿಳೆಯರ ಒಕ್ಕೂಟ, ಕಾರ್ಕಳ.**

**4) ಗೆಳೆಯರ ಬಳಗ, ಹಂಗಳೂರು. 5) ಕುಂದ ಅಧ್ಯಯನ ಕೇಂದ್ರ, ಉಪ್ಪುಂದ. 6) ಕವಿ ಮುದ್ದಣ ಮಿತ್ರಮಂಡಳಿ, ನಂದಳಿಕೆ.**

ಸಾಹಿತ್ಯ ಚಟುವಟಿಕೆಗಳಲ್ಲಿ ಮುಂಚೂಣಿಯಲ್ಲಿದ್ದು ಪರಿಸರದ ಸಹೃದಯರಿಗೆ ಸಾಹಿತ್ಯ ಕೃತಿಗಳ ಸ್ವಾರಸ್ಯ ಮತ್ತು ಆಶಯವನ್ನು ಅಭಿವ್ಯಂಜಿಸುತ್ತಾ ಬಂದ 40 ಮುಖ್ಯ ಸಂಘಟನೆಗಳಲ್ಲಿ 13 ಸಂಘಟನೆಗಳು 20ನೇ ಶತಮಾನದ ಕೊನೆಯಲ್ಲಿ ತಮ್ಮ ಚಟುವಟಿಕೆಗಳನ್ನೇ ನಿಲ್ಲಿಸಿ, ನಿಷ್ಕ್ರಿಯೆಗೊಂಡವು. 24 ಸಾಹಿತ್ಯ ಸಂಘಟನೆಗಳು ಸಾಂಸ್ಕೃತಿಕ ಚಟುವಟಿಕೆಗಳನ್ನು ನಿರ್ವಹಿಸಿಕೊಂಡು ಬರುವುದರಿಂದ ತಮ್ಮ ಅಸ್ತಿತ್ವವನ್ನು ಉಳಿಸಿಕೊಂಡು ಬಂದಿವೆ ಎನ್ನುವುದನ್ನು ಈ ಅಧ್ಯಯನದಲ್ಲಿ ಕಂಡುಕೊಳ್ಳಲಾಗಿದೆ. 3 ಸಾಹಿತ್ಯ ಸಂಘಟನೆಗಳು (ಸಾಹಿತ್ಯಸಂಘ, ಕಾರ್ಕಳ; ಸಂಸೇವಿನಿ, ಬಸ್ರೂರು; ಸುಹಾಸಂ, ಉಡುಪಿ) ಸಂಸ್ಥಾಪಕರ ಅವಿರತಪರಿಶ್ರಮದಿಂದ ತಮ್ಮ ಚಟುವಟಿಕೆಗಳನ್ನು ಯಶಸ್ವಿಯಾಗಿ ನಿರ್ವಹಿಸಿಕೊಂಡು ಬರುತ್ತಿವೆ. ಈ ಸಂಘಟನೆಗಳು ವ್ಯವಸ್ಥೆಗೊಳಿಸುವ ಸಾಹಿತ್ಯಚಟುವಟಿಕೆಗಳಿಗೆ ಆಗಮಿಸುವ ಸಹೃದಯರ ಸಂಖ್ಯೆಯಲ್ಲಿ ನಿರ್ದಿಷ್ಟ ಪ್ರಮಾಣವಿದ್ದು,


ಸಾಹಿತ್ಯ ಸಂಘಟನೆಗಳ ಒಟ್ಟು ಶೇಕಡಾವಾರು ಅಂಕಿ ಅಂಶಗಳ ರೇಖಾಚಿತ್ರಗಳು
ಶತಮಾನದ ಅಂತ್ಯದಲ್ಲಿದ್ದಂತೆ
60.00%
50.00%
40.00%
30.00%
20.00%
10.00%
0.00%
55.60%
41.60%
2.80%
ಸಾಹಿತ್ಯ ಚಟುವಟಿಕೆಗಳ ಶೇಕಡಾ
ಸಾಂಸ್ಕೃತಿಕ ಚಟುವಟಿಕೆಗಳ ಶೇಕಡಾ
ಕ್ರೀಡಾ ಚಟುವಟಿಕೆಗಳ ಶೇಕಡಾ


ಸಾಹಿತ್ಯ ಸಂಘಟನೆಗಳ ಒಟ್ಟು ಶೇಕಡಾವಾರು ಅಂಕಿ ಅಂಶಗಳ ರೇಖಾಚಿತ್ರಗಳು 2015-16 ರಲ್ಲಿದ್ದಂತೆ
60.00%
50.00%
40.00%
30.00%
20.00%
10.00%
0.00%
45.30%
50.60%
14.70%
ಸಾಹಿತ್ಯ ಚಟುವಟಿಕೆಗಳ ಶೇಕಡಾ
ಸಾಂಸ್ಕೃತಿಕ ಚಟುವಟಿಕೆಗಳ ಶೇಕಡಾ
ಕ್ರೀಡಾ ಚಟುವಟಿಕೆಗಳ ಶೇಕಡಾ


ಸಾಹಿತ್ಯ ಸಂಘಟನೆಗಳ ಒಟ್ಟು ಶೇಕಡಾವಾರು ಅಂಕಿ ಅಂಶಗಳ ರೇಖಾಚಿತ್ರಗಳು
ಶತಮಾನದ ಅಂತ್ಯದಲ್ಲಿದ್ದಂತೆ
ಕ್ರೀಡಾ ಚಟುವಟಿಕೆಗಳ
ಶೇಕಡಾ, 2.80%
ಸಾಂಸ್ಕೃತಿಕ ಚಟುವಟಿಕೆಗಳ
ಶೇಕಡಾ, 41.60%
ಸಾಹಿತ್ಯ ಚಟುವಟಿಕೆಗಳ
ಶೇಕಡಾ, 55.60%

ಸಾಹಿತ್ಯ ಸಂಘಟನೆಗಳ ಒಟ್ಟು ಶೇಕಡಾವಾರು ಅಂಕಿ ಅಂಶಗಳ ರೇಖಾಚಿತ್ರಗಳು 2015-16 ರಲ್ಲಿದ್ದಂತೆ



ಈ ಸಹೃದಯರೆಲ್ಲರೂ ಸಂಘಟನೆಯ ಸ್ಥಾಪಕರ ಮೇಲಿನ ಪ್ರೀತಿ ಮತ್ತು ಅಭಿಮಾನದಿಂದ ಹಾಜರಾಗುತ್ತಿರುವುದು ಕಂಡುಬಂದಿದೆ.

ಶತಮಾನದ ಕೊನೆಯಲ್ಲಿ ಕನ್ನಡ ಸಾಹಿತ್ಯಚಟುವಟಿಕೆಗಳಲ್ಲಿ ಭಾಗವಹಿಸುತ್ತಿರುವ ಸಂಖ್ಯೆ ವಿರಳವಾಗುತ್ತಿರುವುದು ಅಧ್ಯಯನದ ಒಟ್ಟು ಫಲಿತವಾಗಿರುತ್ತದೆ. ಪ್ರಾಥಮಿಕ ಮತ್ತು ಪ್ರೌಢಶಿಕ್ಷಣ ಹಂತದಲ್ಲಿ ಆಂಗ್ಲಮಾಧ್ಯಮ ಶಿಕ್ಷಣಸಂಸ್ಥೆಗಳು ಏರಿಕೆಯಾಗುತ್ತಿದ್ದಂತೆ ಕನ್ನಡ ಸಾಹಿತ್ಯಚಟುವಟಿಕೆಗಳಿಗೆ ಹಾಜರಾಗುವ ಸಹೃದಯರ ಸಂಖ್ಯೆಯೂ ವರ್ಷದಿಂದ ವರ್ಷಕ್ಕೆ ಇಳಿಕೆಯಾಗುತ್ತಿರುವುದನ್ನು ಈ ಅಧ್ಯಯನದಲ್ಲಿ ಗುರುತಿಸಲಾಗಿದೆ. “ಕನ್ನಡದ ಮುನ್ನಡೆಗೆ ಯಾವುದೇ ಕ್ರಮಗಳನ್ನು ಕೈಗೊಂಡರೂ ಅದು ಶಾಲಾಶಿಕ್ಷಣದ ಮಾಧ್ಯಮವಾಗದ ಹೊರತು ಸಫಲವಾಗುವುದಿಲ್ಲ...” (ಸಂ: ರವಿಕುಮಾರ ನ., 2013, ಪು-63) ಎಂಬ ಕೆ.ವಿ. ತಿರುಮಲೇಶರ ಅಭಿಪ್ರಾಯವು ಈ ಅಧ್ಯಯನದ ಮೂಲಕ ಸಾಬೀತಾಗಿರುತ್ತದೆ.

ಕನ್ನಡದ ಮನಸ್ಸನ್ನು ನಿರ್ಮಿಸುವ ಗಂಭೀರ ಉದ್ದೇಶದತ್ತ ಹಳ್ಳಿಹಳ್ಳಿಗಳಲ್ಲಿ ಕನ್ನಡ ಸಂಘಟನೆಗಳು ಹೋರಾಟದ ರೀತಿಯಲ್ಲಿ ಕಾರ್ಯಪ್ರವೃತ್ತರಾಗಿ ಆಂಗ್ಲಮಾಧ್ಯಮದ ಕಡೆಗೆ ಆಕರ್ಷಿತರಾಗುವ ವಿದ್ಯಾರ್ಥಿಗಳ ಹೆತ್ತವರನ್ನು ಮನವೊಲಿಸಿ, ಕನ್ನಡಮಾಧ್ಯಮ ಶಾಲೆಗಳಿಗೆ ಕರೆತರುವ ಗಂಭೀರ ಸವಾಲನ್ನು ಸ್ವೀಕರಿಸಿದರೆ, ಕನ್ನಡ ಶಾಲೆಗಳಲ್ಲಿ ವಿದ್ಯಾರ್ಥಿಗಳ ಸಂಖ್ಯೆ ಹೆಚ್ಚುತ್ತದೆ; ಇದರಿಂದಾಗಿ ಕನ್ನಡ ಶಾಲೆಗಳಲ್ಲಿ ಕನ್ನಡ ಚಟುವಟಿಕೆಗಳು ಪುನಃ ಜೀವಪಡೆಯುತ್ತವೆ. ಕನ್ನಡ ಚಟುವಟಿಕೆಗಳು ಪುನರಪಿ ಜೀವಪಡೆದರೆ ಕನ್ನಡ ಮನಸ್ಸುಗಳು ಸೃಷ್ಟಿಯಾಗುತ್ತವೆ. ಕನ್ನಡ ಮನಸ್ಸುಗಳು ಜನಸಮೂಹದ ‘ಅಲೆ’ ಎಂಬ ರೀತಿಯಲ್ಲಿ ಸೃಷ್ಟಿಗೊಂಡಲ್ಲಿ ಪ್ರಭುಶಕ್ತಿಯ ಮುಂದೆ ಕನ್ನಡದ ಪರವಾಗಿ ಒತ್ತಡ ಹೇರುವುದಕ್ಕೆ ಸಾಧ್ಯವಾಗುತ್ತದೆ. ಈ ರೀತಿಯ ಜನಸಮೂಹದ ಒತ್ತಡದಿಂದ ಮಾತ್ರವೇ ಕನ್ನಡಪರ ಶಾಸನಗಳು ರೂಪುಗೊಳ್ಳಬಲ್ಲದು. ಸರಕಾರವು ಕನ್ನಡಪರವಾದ ಶಾಸನಗಳನ್ನು ಹೊರಡಿಸುವುದರಿಂದ ಕನ್ನಡ ಸಾಹಿತ್ಯಚಟುವಟಿಕೆಗಳು ಮತ್ತೆ ಚೇತರಿಸುತ್ತದೆ.

ಉಡುಪಿ ಜಿಲ್ಲೆಯ ಕುಂದಾಪುರ ತಾಲೂಕಿನ ಮಯ್ಯಾಡಿ (ಖಾಸಗಿ ಶಾಲೆ), ಮರವಂತೆ (ಸರ್ಕಾರಿ), ಚಿತ್ರಪಾಡಿ (ಸರ್ಕಾರಿ) ಶಾಲೆಗಳಲ್ಲಿ ವಿವಿಧ ಸಂಘಟನೆಗಳು ಈ ನಿಟ್ಟಿನಲ್ಲಿ ಪ್ರಯತ್ನಿಸಿದ ಕಾರಣ ಇಲ್ಲಿ ಸೂಚಿಸಿದ ಕನ್ನಡ ಮಾಧ್ಯಮದ ಶಾಲೆಗಳಲ್ಲಿ ವಿದ್ಯಾರ್ಥಿಗಳ ಸಂಖ್ಯೆ ಕಳೆದ 5 ವರ್ಷಗಳಿಂದೀಚೆಗೆ ವರ್ಷದಿಂದ ವರ್ಷಕ್ಕೆ ಅಧಿಕವಾಗಿರುತ್ತದೆ. ಇಂತಹ ಪ್ರಯತ್ನ ಜಿಲ್ಲೆಯಾದ್ಯಂತ ಮತ್ತು ರಾಜ್ಯವ್ಯಾಪಿಯಾಗಿ ನಡೆದಲ್ಲಿ ಮಾತ್ರ ಕನ್ನಡ ಸಾಹಿತ್ಯ ಮತ್ತು ಸಾಹಿತ್ಯ ಚಟುವಟಿಕೆಗಳು ಮರುಜೀವ ಪಡೆಯುವುದಕ್ಕೆ ಸಾಧ್ಯ ಎನ್ನುವುದನ್ನು ಈ ಅಧ್ಯಯನದಲ್ಲಿ ಗುರುತಿಸಲಾಗಿದೆ.

<u>ಅಂತಿಮ ವಿಶ್ಲೇಷಣೆ</u>: 20ನೇ ಶತಮಾನದ ಕಾಲಾವಧಿಯಲ್ಲಿ ಅಸ್ತಿತ್ವಕ್ಕೆ ಬಂದ ಸಾಹಿತ್ಯ ಸಂಸ್ಥೆಗಳ ಸಮಗ್ರ ಚಟುವಟಿಕೆಯನ್ನು ವಿಶ್ಲೇಷಣಾತ್ಮಕವಾಗಿ ಈ ಮೇಲಿನಂತೆ ಚರ್ಚಿಸಲಾಗಿದೆ. ಏಕಮುಖ ಉಪನ್ಯಾಸದಲ್ಲಿ ಆಸಕ್ತಿ ಕಳೆದುಕೊಂಡ ಆಧುನಿಕ ವಿದ್ಯಾವಂತರು ತಮ್ಮ ಸಾಹಿತ್ಯಾಸಕ್ತಿಯ ಅಭಿವ್ಯಕ್ತಿ ಮತ್ತು ಆಸ್ವಾದನೆಗಾಗಿ ವಿವಿಧ ಬಗೆಯ ಮಾಧ್ಯಮಗಳನ್ನು (ಲಿಖಿತ ಮತ್ತು ಇಲೆಕ್ಟ್ರಾನಿಕ್) ಮೊರೆಹೋಗುತ್ತಿರುವುದನ್ನು ಈ ಅಧ್ಯಯನದ ಸಂದರ್ಭದಲ್ಲಿ ಗಮನಿಸಲಾಗಿದೆ. 20ನೇ ಶತಮಾನದ ಪೂರ್ವಭಾಗದಲ್ಲಿ ಕೇವಲ ಲಿಖಿತ ಮಾಧ್ಯಮವನ್ನಷ್ಟೇ ಆಶ್ರಯಿಸುತ್ತಿದ್ದ ಸಹೃದಯರು, 21ನೇ ಶತಮಾನದ ಆರಂಭದ

ಸಂದರ್ಭದಲ್ಲಿ ವೈವಿಧ್ಯಮಯವಾದ ವಿದ್ಯುನ್ಮಾನ ಮಾಧ್ಯಮಗಳನ್ನು ಬಳಸಿಕೊಳ್ಳುವ ಮೂಲಕ ತಮ್ಮ ಸಾಹಿತ್ಯ ಆಸಕ್ತಿಯನ್ನು ಪೋಷಿಸಿಕೊಂಡರು. ಎರಡು ಶತಮಾನಗಳ ನಡುವಿನಲ್ಲಾದ ಪಲ್ಲಟವನ್ನು ಈ ಪ್ರಬಂಧದ **ಅನುಬಂಧ ಸಂಖ್ಯೆ 14** ರಲ್ಲಿ ಸಚಿತ್ರವಾಗಿ ಗಮನಿಸಬಹುದಾಗಿದೆ.

20ನೇ ಶತಮಾನದ 90ರ ದಶಕದವರೆಗೆ ಅಸ್ತಿತ್ವಕ್ಕೆ ಬಂದ ಬಹುತೇಕ ಸಾಹಿತ್ಯಕಸಂಘಟನೆಗಳ ಮುಖ್ಯ ಉದ್ದೇಶ, ಸಾಹಿತ್ಯಚರ್ಚೆ ಮತ್ತು ಸಾಂಸ್ಕೃತಿಕಚಟುವಟಿಕೆಗಳಾಗಿವೆ. 21ನೇ ಶತಮಾನದ ಮೊದಲ ದಶಕದಲ್ಲಿ ಹುಟ್ಟಿಕೊಂಡ ಎಲ್ಲ ಘಟಕಗಳು ಸಾಂಸ್ಕೃತಿಕ ಉದ್ದೇಶಗಳಿಗೇ ಸೀಮಿತಗೊಳ್ಳಲು ಆ ಸಂಘಟಕರ ಶೈಕ್ಷಣಿಕ ಹಾಗೂ ಸಾಮಾಜಿಕ ಕಾರಣಗಳೇ ಹಿನ್ನೆಲೆಯಾಗಿರುವುದನ್ನು ಪ್ರಸ್ತುತ ಅಧ್ಯಯನದಲ್ಲಿ ಗುರುತಿಸಲಾಗಿದೆ. ಸಾಹಿತ್ಯ ಸಂಘಟಕರು ನಿರ್ವಹಿಸುವ ಸಾಹಿತ್ಯಚಟುವಟಿಕೆಗಳಿಗೆ ಸ್ಪಂದಿಸುವ ಸಾಹಿತ್ಯಾಭಿಮಾನಿಗಳ ಸಂಖ್ಯೆ ಇಳಿಮುಖವಾಗುತ್ತಿದೆ ಎನ್ನುವುದು ಸಾಮಾಜಿಕರು ಸಾಹಿತ್ಯಾಭಿರುಚಿಯಿಂದ ದೂರ ಸರಿಯುತ್ತಾರೆಂದು ಅರ್ಥವಲ್ಲ. ಸಾಹಿತ್ಯ ಆಸ್ವಾದನೆಯಲ್ಲಿ ವೈವಿಧ್ಯತೆಗಳ ಅನುಕೂಲ ಒದಗಿದ ಕಾರಣ ಅವರವರ ಅಭಿರುಚಿಗನುಗುಣವಾದ ಮಾಧ್ಯಮದ ಮೂಲಕ ಸಾಹಿತ್ಯಲೋಕವನ್ನು ತಲುಪುತ್ತಿರುವುದರಿಂದ ಸಾಹಿತ್ಯ ಸಭೆಯಲ್ಲಿ ಸಹೃದಯರ ಸಂಖ್ಯೆ ಇಳಿಮುಖವಾಗಿದೆ ಎನ್ನುವುದನ್ನು ಈ ಅಧ್ಯಯನದಲ್ಲಿ ಗಮನಿಸಲಾಗಿದೆ.

~*~

# ಅಧ್ಯಾಯ-6
## ಸಂಶೋಧನೆಯ ಫಲಿತಗಳು

ಉಡುಪಿ ಜಿಲ್ಲೆಯ ವ್ಯಾಪ್ತಿಯೊಳಗೆ ಕ್ರಿ.ಶ. 20ನೇ ಶತಮಾನದ ಕಾಲಾವಧಿಯಲ್ಲಿ ನಡೆದ ಕನ್ನಡ ಸಾಹಿತ್ಯ ಚಟುವಟಿಕೆಗಳ ಪ್ರಕ್ರಿಯೆ ಹಾಗೂ ಪರಿಣಾಮಗಳು ಎಂಬ ಅಧ್ಯಯನವೇ ಪ್ರಸ್ತುತ ಸಂಶೋಧನೆಯ ವಸ್ತುವಿಷಯವಾಗಿದೆ. ಐದು ಅಧ್ಯಾಯಗಳಲ್ಲಿ ಸಂಶೋಧನ ಸಮಸ್ಯೆಯನ್ನು ಲಭ್ಯ ಲಿಖಿತ ಮಾಹಿತಿಯ ಹಾಗೂ ಮತ್ತಿತರ ಪೂರಕ ಮಾಹಿತಿಗಳಿಂದ ಸಂಗ್ರಹಿಸಿದ ಆಕರಗಳ ವಿಶ್ಲೇಷಣೆಯೊಂದಿಗೆ ನಡೆಸಿದ ಈ ಅಧ್ಯಯನದ ಅಂತ್ಯದಲ್ಲಿ ಈ ಕೆಳಗಿನ ಅಂಶಗಳನ್ನು ಕಂಡುಕೊಳ್ಳಲಾಗಿದೆ:

20ನೇ ಶತಮಾನದಿಂದ ಆರಂಭವಾಗುವ ಕನ್ನಡ ಪತ್ರಿಕೋದ್ಯಮದೊಂದಿಗೆ ಕನ್ನಡ ಸಾಹಿತ್ಯ ಚಟುವಟಿಕೆಗಳು ಆರಂಭಗೊಂಡು ಶಿಕ್ಷಣ ಸಂಸ್ಥೆಗಳಲ್ಲಿ ವಿಕಾಸವನ್ನು ಹೊಂದಿದವು. ಶಿಕ್ಷಣ ಸಂಸ್ಥೆಗಳಲ್ಲಿ ಬಹು ಆಯಾಮಗಳೊಂದಿಗೆ ಮಹತ್ವದ್ದೆಂದು ಗುರುತಿಸಿಕೊಂಡ ಕನ್ನಡ ಸಾಹಿತ್ಯ ಚಟುವಟಿಕೆಯು ಧಾರ್ಮಿಕ ಸಂಸ್ಥೆಗಳಲ್ಲೂ ಆಗಾಗ ಅಭಿವ್ಯಕ್ತಿಯನ್ನು ಪಡೆದು 'ಸಾಹಿತ್ಯ ಸಂಘಟನೆ'ಗಳೆಂಬ ಒಕ್ಕೂಟದ ಚೌಕಟ್ಟಿನಲ್ಲಿ ಚಟುವಟಿಕೆಗಳು ಮುಂದುವರಿಯುವ ಮೂಲಕ ತನ್ನ ಅಭಿವ್ಯಕ್ತಿಯ ಕ್ಷೇತ್ರವನ್ನು ವಿಸ್ತರಿಸಿಕೊಂಡಿತು. ಹೀಗೆ ನಾಲ್ಕು ಘಟಕಗಳ ಮೂಲಕ ಅಭಿವ್ಯಕ್ತಿಯನ್ನು ಕಂಡುಕೊಂಡ ಕನ್ನಡ ಸಾಹಿತ್ಯ ಚಟುವಟಿಕೆಗಳ ಪರಿಣಾಮಗಳ ಅಂತಿಮ ಫಲಿತಗಳು ಮುಂದಿನ ಅಧ್ಯಯನಕಾರರಿಗೆ, ಸರಕಾರದ ವಿವಿಧ ಇಲಾಖೆಯ ಯೋಜನಾ ನಿರೂಪಕರಿಗೆ, ಮಾರ್ಗದರ್ಶಕವೆಂದು ಭಾವಿಸಿ ಅವುಗಳನ್ನು ಒಂದೊಂದಾಗಿ ಕೆಳಗಿನಂತೆ ದಾಖಲಿಸಲಾಗಿದೆ.

1. ಸಾಂಸ್ಕೃತಿಕ ಚಟುವಟಿಕೆ, ಉಪನ್ಯಾಸ ಚಟುವಟಿಕೆ (ವಿಚಾರ ಸಂಕಿರಣ, ಕಮ್ಮಟ, ಇತ್ಯಾದಿ, ಇತ್ಯಾದಿ) ಸಂಶೋಧನ ಮತ್ತು ಪ್ರಕಟನಾ ಚಟುವಟಿಕೆ-ಇವು ಸಾಹಿತ್ಯ ಚಟುವಟಿಕೆಯ ಭಿನ್ನ-ಭಿನ್ನ ಬಗೆಗಳಾಗಿರುತ್ತವೆ. ಈ ಚಟುವಟಿಕೆಗಳನ್ನು ನಿರ್ವಹಿಸುವ ಸಾಹಿತ್ಯ ಸಂಘಟಕರ ಶೈಕ್ಷಣಿಕ ಅರ್ಹತೆ ಹಾಗೂ ಸಾಹಿತ್ಯದ ಕುರಿತಾಗಿ ಅವರಿಗಿರುವ ಬದ್ಧತೆಗನುಸರಿಸಿ, ಅವರ ಸಂಘಟನೆಗಳ ಚಟುವಟಿಕೆಗಳು ಅಭಿವ್ಯಕ್ತಗೊಳ್ಳುತ್ತವೆ. ಒಂದು ನಿರ್ದಿಷ್ಟ ಕಾಲಘಟ್ಟದಲ್ಲಿ ಅಸ್ತಿತ್ವಕ್ಕೆ ಬಂದ ಸಾಹಿತ್ಯ ಸಂಘಟನೆಗಳು ತಮ್ಮ ಸಾಹಿತ್ಯ ಚಟುವಟಿಕೆಗಳ ನಿರ್ವಹಣೆಯ ಬಗೆಯಲ್ಲಿ ಬದಲಾವಣೆಗೆ ಅವಕಾಶ ಕೊಡದೇ ಹೋದಲ್ಲಿ ಮುಂದಿನ ಕಾಲಘಟ್ಟದಲ್ಲಿ ಅಂತಹ ಸಂಸ್ಥೆಗಳು ಜನರಿಂದ ದೂರವಾಗುತ್ತವೆ. ಈ ಅಂಶವು ಈ ಅಧ್ಯಯನದಲ್ಲಿ ದೃಢಪಟ್ಟಿರುತ್ತದೆ. ಸಾಹಿತ್ಯ ಚಟುವಟಿಕೆಗಳನ್ನು ನಿರ್ವಹಿಸುವುದಕ್ಕಾಗಿಯೇ 20ನೇ ಶತಮಾನದಲ್ಲಿ ಅಸ್ತಿತ್ವಕ್ಕೆ ಬಂದ 40 ಸಂಘಟನೆಗಳಲ್ಲಿ ಏಳು ಸಂಘಟನೆಗಳು 20ನೇ ಶತಮಾನದ 80ರ ದಶಕದಲ್ಲಿ ಅಸ್ತಿತ್ವವನ್ನೇ ಕಳೆದುಕೊಂಡಿರುವುದನ್ನು ಈ ಸಂಶೋಧನೆಯಲ್ಲಿ ಗುರುತಿಸಲಾಗಿದೆ. ಉಡುಪಿ ಜಿಲ್ಲೆಯಲ್ಲಿ ಅಸ್ತಿತ್ವ ಕಳೆದುಕೊಂಡ ಏಳು ಸಾಹಿತ್ಯಸಂಘಟನೆಗಳ ಸಂಸ್ಥಾಪಕರು ತಮ್ಮ ಚಟುವಟಿಕೆಯನ್ನು ನಿರ್ವಹಿಸುವ ಬಗೆಯಲ್ಲಿ ಮಾರ್ಪಾಟನ್ನು

ಮಾಡಿಕೊಳ್ಳದ ಕಾರಣ ಸಾಹಿತ್ಯಸಂಘಟಕರ ಪ್ರಯತ್ನವು ವಿಫಲಗೊಂಡು, ಸಾಹಿತ್ಯಸಂಘಟನೆಯೇ ಅಸ್ತಿತ್ವ ಕಳೆದುಕೊಂಡಂತಾದುದನ್ನು ಈ ಅಧ್ಯಯನದಲ್ಲಿ ಗುರುತಿಸಲಾಗಿದೆ.

2. ಸಾಹಿತ್ಯ ಚಟುವಟಿಕೆ ಹಾಗೂ ಸಾಂಸ್ಕೃತಿಕ ಚಟುವಟಿಕೆಗಳಿಗೆ ಸಮಾನಪ್ರಾಮುಖ್ಯವನ್ನು ನೀಡಿದ ಸಂಘಟನೆಗಳು (ಶಿಕ್ಷಣ ಸಂಸ್ಥೆ ಹಾಗೂ ಪತ್ರಿಕೆ) ಸಾಹಿತ್ಯ ಚಟುವಟಿಕೆಯ ಪ್ರಯೋಗಗಳಲ್ಲಿ ಭಿನ್ನ-ಭಿನ್ನ ಬಗೆಗಳನ್ನು ಕಂಡುಕೊಂಡ ಸಂಘಟಕರು ಸಹೃದಯರನ್ನು ಆಕರ್ಷಿಸುವಲ್ಲಿ ಸಫಲರಾಗಿರುವುದನ್ನು ಈ ಅಧ್ಯಯನದಲ್ಲಿ ಗುರುತಿಸಲಾಗಿದೆ.

3. ಸಾಹಿತ್ಯಚಟುವಟಿಕೆ ಹಾಗೂ ಸಾಹಿತ್ಯ ಕೃತಿಗಳ ಓದು ಸಹೃದಯನ ವ್ಯಕ್ತಿಗತ ಆಸಕ್ತಿ ಮತ್ತು ಪ್ರವೃತ್ತಿಗೆ ಸಂಬಂಧಿಸಿದ ವಿಚಾರವಾಗಿದೆ. ಈ ಪ್ರವೃತ್ತಿ ಇಲ್ಲದ ಸಂಘಟನೆಗೆ ಬದ್ಧತೆ ಇರಲು ಸಾಧ್ಯವಿಲ್ಲ. ಬದ್ಧತೆ ಇರದ ಸಂಘಟನೆಯು ಶಾಶ್ವತವಾಗಿ ನೆಲೆ ಕಂಡುಕೊಳ್ಳುವುದೂ ಸಾಧ್ಯವಿಲ್ಲ ಎನ್ನುವುದನ್ನು ಈ ಜಿಲ್ಲೆಯಲ್ಲಿ ಹುಟ್ಟಿದ ಅಸಂಖ್ಯಾತ ಸಂಘಟನೆಗಳ ಕಾರ್ಯಚಟುವಟಿಕೆಗಳ ಅಧ್ಯಯನದಿಂದ ಕಂಡುಕೊಳ್ಳಲಾಗಿದೆ.

4. ಸಾಹಿತ್ಯಸಂಘಟನೆಯೊಂದು ಅಸ್ತಿತ್ವಕ್ಕೆ ಬರಲು ಆ ಸಂಘಟಕರಿಗೆ (ಪದಾಧಿಕಾರಿ ಸದಸ್ಯರಿಗೆ) ಶಾಲಾ ಕಾಲೇಜು ಶಿಕ್ಷಣದ ಸಂದರ್ಭದಲ್ಲಿ ಸಾಹಿತ್ಯಾಭ್ಯಾಸಕ್ಕೆ ದೊರೆತ ಪ್ರೇರಣೆಯೇ ಕಾರಣವಾಗಿರುತ್ತದೆ. ಕಾಲೇಜು ವಿದ್ಯಾಭ್ಯಾಸದ ಸಂದರ್ಭದಲ್ಲಿ ಬರವಣಿಗೆಯನ್ನು ಹವ್ಯಾಸವಾಗಿ ರೂಢಿಸಿಕೊಂಡ ವಿದ್ಯಾರ್ಥಿ ತನ್ನ ವಿದ್ಯಾಭ್ಯಾಸದ ಅನಂತರದಲ್ಲೂ ಬರವಣಿಗೆಯನ್ನು ಹವ್ಯಾಸವಾಗಿ ಮುಂದುವರಿಸಿಕೊಂಡು ಬರುತ್ತಾನೆ; ಮತ್ತು ತನ್ನದೇ ಇತಿಮಿತಿಯಲ್ಲಿ ಸಾಹಿತ್ಯ ಸಂಘಟನೆಯೊಂದರಲ್ಲಿ ತೊಡಗಿಸಿಕೊಂಡಿರುವ ಸಂದರ್ಭಗಳೇ ಅಧಿಕವಾಗಿರುವುದನ್ನು ಈ ಅಧ್ಯಯನದಲ್ಲಿ ಗುರುತಿಸಲಾಗಿದೆ.

5. ಏಕೀಕರಣಪೂರ್ವದ ಸಂದರ್ಭದಲ್ಲಿ ಅಸ್ತಿತ್ವಕ್ಕೆ ಬಂದ ಸಂಘಟನೆಗಳನ್ನು ಪ್ರಾಥಮಿಕ ಶಾಲಾ ಮತ್ತು ಪ್ರೌಢಶಾಲಾ ಕನ್ನಡ ಅಧ್ಯಾಪಕರು ಹುಟ್ಟುಹಾಕಿದ್ದು, ಏಕೀಕರಣದ ಅನಂತರದಲ್ಲಿ ಅಸ್ತಿತ್ವಕ್ಕೆ ಬಂದ ಸಾಹಿತ್ಯ ಸಂಘಟನೆಗಳನ್ನು ಕಾಲೇಜು ಶಿಕ್ಷಕರು ಮತ್ತು ವಿದ್ಯಾರ್ಥಿಗಳು ಜಂಟಿಯಾಗಿ ಅಸ್ತಿತ್ವಕ್ಕೆ ತಂದಿರುವುದನ್ನು ಅಧ್ಯಯನದ ಮೂಲಕ ಕಂಡುಕೊಳ್ಳಲಾಗಿದೆ. (ಉದಾ: ಕಾರ್ಕಡ ಗೆಳೆಯರ ಬಳಗ- ತಾರಾನಾಥ ಹೊಳ್ಳ, ರಥಬೀದಿ ಗೆಳೆಯರು-ಉಡುಪಿ ಎಂ.ಜಿ.ಎಂ. ಕಾಲೇಜಿನ ಮತ್ತು ಇತರ ಸ್ಥಳೀಯ ಕಾಲೇಜಿನ ಉಪನ್ಯಾಸಕರು ಮತ್ತು ವಿದ್ಯಾರ್ಥಿಗಳು), ಹೀಗೆ ಜಿಲ್ಲೆಯ ಪ್ರತಿಯೊಂದು ಸಂಘಟನೆಯನ್ನು ಇಲ್ಲಿ ಸ್ಮರಿಸಬಹುದಾಗಿದೆ.

6. ಪತ್ರಿಕಾಮಾಧ್ಯಮದ ಮೂಲಕ ಕಾಣಿಸಿಕೊಂಡ ಸಾಹಿತ್ಯಚಟುವಟಿಕೆಗಳು ಶಿಕ್ಷಣಸಂಸ್ಥೆಗಳಲ್ಲಿ ಬಗೆಬಗೆಯ ಸ್ವರೂಪಗಳಲ್ಲಿ ಅಭಿವ್ಯಕ್ತಗೊಂಡು (ಕಾಲೇಜು/ಶಾಲಾ ವಾರ್ಷಿಕ ಸಂಚಿಕೆ ಹಾಗೂ ಲಲಿತಕಲಾ/ಭಾಷಾ ಸಂಘಟನೆಯ ಉಪನ್ಯಾಸ, ಕಮ್ಮಟ, ಸಂವಾದ ಚಟುವಟಿಕೆಗಳಲ್ಲಿ) ಅಭಿವ್ಯಕ್ತಗೊಂಡು ಜಿಲ್ಲೆಯ ವಿವಿಧ ಸಾಹಿತ್ಯಸಂಘ, ಸಂಸ್ಥೆ, ಒಕ್ಕೂಟ ಮಠ ಮಂದಿರಗಳಲ್ಲಿ ನಿರಂತರ ಪ್ರಕ್ರಿಯೆ ಎಂಬಂತೆ ಮುಂದುವರಿದಿರುತ್ತದೆ. ಈ ಕಾರಣದಿಂದಾಗಿ ಪತ್ರಿಕೋದ್ಯಮ ಸಾಹಿತ್ಯಚಟುವಟಿಕೆ ಮತ್ತು ಶಿಕ್ಷಣ ಸಂಸ್ಥೆಗಳ ಸಾಹಿತ್ಯಚಟುವಟಿಕೆ ಹಾಗೂ ಇತರ ಸಾಹಿತ್ಯಸಂಘಟನೆಯ ಸಾಹಿತ್ಯಚಟುವಟಿಕೆಗಳಿಗೆ ಪರಸ್ಪರ ಪೂರಕಸಂಬಂಧವಿರುವುದನ್ನು ಈ ಅಧ್ಯಯನದಲ್ಲಿ ಗುರುತಿಸಲಾಗಿದೆ.

7. ಲಾಭ-ನಷ್ಟದ ಲೆಕ್ಕಾಚಾರದಲ್ಲಿ ತೊಡಗಿರುವ ದೇವಸ್ಥಾನಗಳು ಸಾಹಿತ್ಯಚಟುವಟಿಕೆಗಳನ್ನು ನಿರ್ವಹಿಸುವುದಾಗಲೀ, ಇತರ ಸಂಸ್ಥೆಗಳು ನಡೆಸುವ ಸಾಹಿತ್ಯ ಚಟುವಟಿಕೆಗಳಿಗೆ ಬೆಂಬಲ ಕೊಡುವುದಕ್ಕಾಗಲೀ ಮುಂದೆ ಬರಲಾರರು ಎಂಬೀ ವಿಷಯವನ್ನು ಈ ಅಧ್ಯಯನದಲ್ಲಿ ಕಂಡುಕೊಳ್ಳಲಾಗಿದೆ. (ಸಾಕಷ್ಟು ಆದಾಯವುಳ್ಳ ಸಾಲಿಗ್ರಾಮದ ಉಗ್ರನರಸಿಂಹ ದೇವಸ್ಥಾನದ ಆಡಳಿತ ಮಂಡಳಿಯು (ಕೂಟ ಮಹಾಜಗತ್ತಿನ ವ್ಯವಸ್ಥಾಪನಾ ಸಮಿತಿಯ ಸದಸ್ಯರು) ಯಾವುದೇ ಸಾಹಿತ್ಯಚಟುವಟಿಕೆಗಳಿಗೆ ಬೆಂಬಲ ಕೊಡದಿರುವುದನ್ನು ಈ ಅಧ್ಯಯನದ್ಲಲಿ ಗುರುತಿಸಲಾಗಿದೆ.

8. ಪಠ್ಯ ಬೋಧನೆಗಷ್ಟೇ ತಮ್ಮನ್ನು ತಾವು ಮಿತಿಗೊಳಿಸಿಕೊಂಡ ಶಿಕ್ಷಣಸಂಸ್ಥೆಗಳ ನೌಕರರು ಯಾವುದೇ ಸಾಹಿತ್ಯ ಚಟುವಟಿಕೆಗಳಲ್ಲಿ ಭಾಗವಹಿಸುವುದಾಗಲೀ, ಪ್ರೋತ್ಸಾಹ ನೀಡುವುದಕ್ಕೆ ಮುಂದಾಗುವುದಾಗಲೀ ಇಲ್ಲದಿರುವ ಅಂಶವನ್ನು ಅಧ್ಯಯನದ ಮೂಲಕ ಗುರುತಿಸಲಾಗಿದೆ.

9. ಸಾಹಿತ್ಯಚಟುವಟಿಕೆಗಳನ್ನು ನಿರ್ವಹಿಸಿದ ಹಟ್ಟಿಯಂಗಡಿ ಸಿದ್ಧಿವಿನಾಯಕ ದೇಗುಲದ ವ್ಯವಸ್ಥಾಪಕರು (20ನೇ ಶತಮಾನದ ಉತ್ತರಾರ್ಧ ಮತ್ತು ಈಗಿನ ವ್ಯವಸ್ಥಾಪಕರಾದ ಶ್ರೀ ರಾಮಚಂದ್ರ ಭಟ್ಟರು) ತಮ್ಮ ವಿದ್ಯಾಭ್ಯಾಸದ ಅವಧಿಯಲ್ಲಿ ಸಾಹಿತ್ಯಾಸಕ್ತಿಯನ್ನು ಯಕ್ಷಗಾನಪ್ರದರ್ಶನ ಮತ್ತು ಪಠ್ಯಪ್ರಸಂಗದ ಕುರಿತಾಗಿಯೂ ಆಸಕ್ತಿಯುಳ್ಳವರಾಗಿದ್ದರೆಂಬ ವಿಚಾರವು ಅವರ ವ್ಯಕ್ತಿಗತ ಜೀವನಾವಲೋಕನದಿಂದ ತಿಳಿದುಬರುತ್ತದೆ. ಈ ಕಾರಣದಿಂದಾಗಿ ತಮ್ಮ ದೇಗುಲದಲ್ಲಿ ನಿರಂತರ ಸಾಹಿತ್ಯ ಚಟುವಟಿಕೆಗೆ ಅವಕಾಶ ಕೊಟ್ಟಿರುವುದನ್ನು ಈ ಅಧ್ಯಯನದಲ್ಲಿ ಗುರುತಿಸಲಾಗಿದೆ.

10. ತಮ್ಮ ಖಾಸಗೀ ಜೀವನದಲ್ಲಿ ಸಾಹಿತ್ಯ ಹಾಗೂ ಲಲಿತ ಕಲೆಗಳ ವಿಚಾರದಲ್ಲಿ ವಿಶೇಷ ಆಸಕ್ತಿ ಹೊಂದಿದ ಉಡುಪಿಯ ಪೇಜಾವರ ಮಠಾಧೀಶರು ತಮ್ಮ ವ್ಯಕ್ತಿಗತ ಆಸಕ್ತಿಯ ಕಾರಣದಿಂದ ಕನ್ನಡ ಸಾಹಿತ್ಯ ಮತ್ತು ಸಾಂಸ್ಕೃತಿಕ ಚಟುವಟಿಕೆಗಳಿಗೆ ಮಠದ ಪರಿಸರದಲ್ಲಿ ಮೊತ್ತಮೊದಲಿಗೆ ಅವಕಾಶವನ್ನು ನಿರ್ಮಿಸಿಕೊಟ್ಟರು. ಹೀಗೆ ಅವಕಾಶ ಕಲ್ಪಿಸುವಲ್ಲಿ ಸ್ಥಳೀಯ ಕಾಲೇಜಿನ ಪ್ರಾಂಶುಪಾಲರಾದ ಪ್ರೊ. ಕು.ಶಿ ಹರಿದಾಸ ಭಟ್ಟ ಹಾಗೂ ಅವರ ಶಿಷ್ಯರಾದ ವಿಜಯನಾಥ ಶೆಣೈ ಅವರ ಮಾರ್ಗದರ್ಶನ ಹಾಗೂ ಬೆಂಬಲ ಇತ್ತು ಎನ್ನುವುದನ್ನು ಈ ಅಧ್ಯಯನದಲ್ಲಿ ಕಂಡುಕೊಳ್ಳಲಾಗಿದೆ.

11. ಅಷ್ಟಮಠಗಳಲ್ಲಿ ಒಂದಾದ ಪೇಜಾವರ ಮಠಾಧೀಶರು ಸಾಹಿತ್ಯಚಟುವಟಿಕೆ ಹಾಗೂ ಸಾಂಸ್ಕೃತಿಕಚಟುವಟಿಕೆಗಳಿಗೆ ಮಠದ ಪರಿಸರದಲ್ಲಿ ಮೊದಲು ವೇದಿಕೆ ನಿರ್ಮಿಸಿಕೊಟ್ಟ ಪ್ರಯುಕ್ತ ಮುಂದಿನ ಮಠಾಧೀಶರೆಲ್ಲರೂ ಈ ಪರಂಪರೆಯನ್ನು ಯಥಾವತ್ತಾಗಿ ಅನುಕರಿಸಿದರೆನ್ನುವುದು ಪ್ರಸ್ತುತ ಅಧ್ಯಯನದಲ್ಲಿ ಗುರುತಿಸಲಾಗಿದೆ.

12. ಸಾರ್ವಜನಿಕ ದೇಗುಲದ ಧರ್ಮದರ್ಶಿ ಮಂಡಳಿಯ ಸದಸ್ಯರು ಸಾಹಿತ್ಯ ವಿಚಾರದಲ್ಲಿ ಆಸಕ್ತರಾಗಿದ್ದೂ ಸಾಹಿತ್ಯ ಚಟುವಟಿಕೆಗಳ ನಿರ್ವಹಣೆಗೆ ದೇಗುಲದ ಆದಾಯದ ಕನಿಷ್ಟ 5% ಶೇಕಡಾವನ್ನು ಬಳಸುವಂತಿಲ್ಲ ಎಂಬ ಧಾರ್ಮಿಕ ದತ್ತಿ ಇಲಾಖೆಯ 1997 ಮತ್ತು 2002ರ ಹೊಸ ನಿಯಮಗಳಿಂದಾಗಿ ಸಾಹಿತ್ಯ ಚಟುವಟಿಕೆಯ ನಿರ್ವಹಣೆಗೆ ಹಿನ್ನೆಡೆಯಾಯಿತೆನ್ನುವುದನ್ನು ಈ ಅಧ್ಯಯನದಲ್ಲಿ ಕಂಡುಕೊಳ್ಳಲಾಗಿದೆ.

13. 20ನೇ ಶತಮಾನದ ಉತ್ತರಾರ್ಧದ ಕಾಲದಿಂದಷ್ಟೇ ಧಾರ್ಮಿಕ ಸಂಸ್ಥೆಗಳ ಆವರಣದಲ್ಲಿ ಸಾಹಿತ್ಯ ಚಟುವಟಿಕೆಗಳು ಆರಭಗೊಳ್ಳುವುದಕ್ಕೆ ತೊಡಗಿದ್ದು, ಈ ಚಟುವಟಿಕೆಗಳಿಗೆ ಉಡುಪಿ ಶ್ರೀಕೃಷ್ಣಮಠದ ಸಾಹಿತ್ಯ ಚಟುವಟಿಕೆಗಳೇ ಮುಖ್ಯ ಪ್ರೇರಣೆಯಾಗಿದೆ. ಶ್ರೀಕೃಷ್ಣಮಠದಲ್ಲಿ ಸಾಹಿತ್ಯ ಚಟುವಟಿಕೆಗಳಿಗೆ ಅವಕಾಶ ಕೊಡುತ್ತಿದ್ದಂತೆ ಜಿಲ್ಲೆಯ ಇತರ ಸಾಮಾಜಿಕ ಹಾಗೂ ಖಾಸಗಿ ದೇವಸ್ಥಾನಗಳಲ್ಲಿಯೂ ವ್ಯವಸ್ಥಾಪನಸಮಿತಿಯವರು ತಮ್ಮ ತಮ್ಮ ಇತಿಮಿತಿಯಲ್ಲಿ ಅಲ್ಲಿಯ ದೇಗುಲಗಳಲ್ಲೂ ಸಾಹಿತ್ಯ ಚಟುವಟಿಕೆಯ ನಿರ್ವಹಣೆಗೆ ಮುಂದಾದರು. ಹೀಗೆ ಧಾರ್ಮಿಕ ಸಂಸ್ಥೆಗಳಲ್ಲಿ ಸಾಹಿತ್ಯ ಚಟುವಟಿಕೆ ಎಂಬ ಹೊಸ ಅಧ್ಯಾಯಕ್ಕೆ ಮೊದಲ ಪ್ರೇರಕರೇ ಪೇಜಾವರ ಮಠಾಧೀಶರಾದ ಶ್ರೀ ವಿಶ್ವೇಶತೀರ್ಥ ಶ್ರೀಪಾದರೆನ್ನುವುದನ್ನು ಅಧ್ಯಯನದಲ್ಲಿ ಗುರುತಿಸಲಾಗಿದೆ.

14. ರಂಜನಾತ್ಮಕ ಚಟುವಟಿಕೆಗಳನ್ನಷ್ಟೇ ನಿರ್ವಹಿಸಿದ ಶಿಕ್ಷಣಸಂಸ್ಥೆಗಳಿಂದ ಪದವಿ ಪೂರೈಸಿದ ವಿದ್ಯಾರ್ಥಿಗಳು ಕನಿಷ್ಠ ಸಂಖ್ಯೆಯಲ್ಲಿ ಸಾಹಿತ್ಯಚಟುವಟಿಕೆಯಲ್ಲಿ ತೊಡಗಿರುವುದನ್ನೂ ಚಿಂತನಾತ್ಮಕ ಸಾಹಿತ್ಯಚಟುವಟಿಕೆಯೊಂದಿಗೆ ವೈವಿಧ್ಯಮಯ ಸಾಹಿತ್ಯಚಟುವಟಿಕೆಗಳನ್ನು ನಿರ್ವಹಿಸಿದ ಶಿಕ್ಷಣ ಸಂಸ್ಥೆಗಳಿಂದ ಪದವಿ ಪಡೆದ ವಿದ್ಯಾರ್ಥಿಗಳು ಗರಿಷ್ಠ ಸಂಖ್ಯೆಯಲ್ಲಿ ಸಾಹಿತ್ಯಚಟುವಟಿಕೆಗಳಿಗೆ ತೊಡಗಿಕೊಂಡಿರುವುದನ್ನು ಈ ಅಧ್ಯಯನದಲ್ಲಿ ಗುರುತಿಸಲಾಗಿದೆ.

15. ತಾಂತ್ರಿಕ ಶಿಕ್ಷಣದಲ್ಲಿ ಕನ್ನಡ ಭಾಷಾಧ್ಯಯನಕ್ಕೆ ಅವಕಾಶ ಇಲ್ಲದಿರುವುದು ವಿದ್ಯಾರ್ಥಿಗಳ ಸಾಹಿತ್ಯಾಭಿರುಚಿಗೆ ಮತ್ತು ಲಿಖಿತ ಅಭಿವ್ಯಕ್ತಿಗಳಿಗೆ ಒಡ್ಡನ್ನು ಅಥವಾ ತಡೆಯನ್ನು ನಿರ್ಮಿಸಿವೆ ಎಂದು ಕಂಡುಕೊಳ್ಳಲಾಗಿದೆ. ಕನ್ನಡ ಭಾಷೆ ಮತ್ತು ಸಾಹಿತ್ಯದಲ್ಲಿ ಆಸಕ್ತಿಯಿದ್ದ ವಿದ್ಯಾರ್ಥಿಗಳು ಯಾವುದೇ ವೃತ್ತಿಪರ ಶಿಕ್ಷಣ ಸಂಸ್ಥೆಗಳಿಗೆ ಸೇರಿಕೊಂಡಾಗ ಅಲ್ಲಿ ಸಾಹಿತ್ಯ ಚಟುವಟಿಕೆಗಳಿಗೆ ಅವಕಾಶವಿಲ್ಲದ ಪ್ರಯುಕ್ತ ಅವರ ಸಾಹಿತ್ಯಾಸಕ್ತಿ ಮತ್ತು ಪ್ರವೃತ್ತಿಗೆ ತಡೆ ಉಂಟಾಗಿರುವುದನ್ನು ಈ ಅಧ್ಯಯನದಲ್ಲಿ ಕಂಡುಕೊಳ್ಳಲಾಗಿದೆ.

16. ಏಕೀಕರಣಪೂರ್ವದಲ್ಲಿ ಕನ್ನಡ ಪತ್ರಿಕಾ ಸಂಪಾದಕರು ಲೋಕಹಿತ ಕಾಳಜಿಯುಳ್ಳವರಾಗಿ ದೇಶೀಯ ಸಂಸ್ಕೃತಿಯ ನಿರ್ವಾಚಕರಾಗಿ ಪತ್ರಿಕೆಯನ್ನು ಆರಂಭಿಸಿದರು. ಏಕೀಕರಣಾ ನಂತರದಲ್ಲಿ ಪತ್ರಿಕಾ ಸಂಪಾದಕರು ಓದುಗರ ಅಪೇಕ್ಷೆ ಸಂವೇದನೆಗನುಸರಿಸಿ ಪತ್ರಿಕಾಧರ್ಮದಲ್ಲಿ ಮಾರ್ಪಾಟನ್ನು ತಂದುಕೊಂಡರು. ಇದರಿಂದಾಗಿ ಏಕೀಕರಣಪೂರ್ವದಲ್ಲಿ ಪತ್ರಿಕೆಯೇ ಸಾರ್ವಜನಿಕರನ್ನು ಮುನ್ನಡೆಸಿದರೆ ಏಕೀಕರಣೋತ್ತರದಲ್ಲಿ ಸಾರ್ವಜನಿಕ ಓದುಗರೇ ಪತ್ರಿಕೆಯ ನಡೆಯನ್ನು ನಿರ್ಧರಿಸುವಲ್ಲಿ ಮುಖ್ಯ ಪಾತ್ರವಹಿಸಿದರು. ಸಾರ್ವಜನಿಕರ ಒಲವಿನಿಂದ ದೂರ ಉಳಿದ ಪತ್ರಿಕೆ ಕೆಲವೇ ಸಮಯದಲ್ಲಿ ಸ್ಥಗಿತಗೊಂಡಿರುವುದನ್ನು ಈ ಅಧ್ಯಯನದಲ್ಲಿ ಗುರುತಿಸಲಾಗಿದೆ.

17. ಆಧುನಿಕ ವಿದ್ಯುನ್ಮಾನ ಮಾಧ್ಯಮಗಳು ಎಷ್ಟೇ ಶೀಘ್ರವಾಗಿ ಮತ್ತು ಪರಿಣಾಮಕಾರಿಯಾಗಿ ಸುದ್ದಿಗಳನ್ನು ಬಿತ್ತರಿಸಿದರೂ ಪತ್ರಿಕಾ ಮಾಧ್ಯಮದ ಪ್ರಸರಣ ಮತ್ತು ವಿವಿಧ ಮನೋವೃತ್ತಿಯ ಸಹೃದಯರ ಬೇಡಿಕೆಯನ್ನು ಪೂರೈಸುವ ವಿಷಯ ವೈವಿಧ್ಯಕ್ಕೆ ಅವಕಾಶ ನೀಡುತ್ತಿರುವುದರಿಂದ ಮತ್ತು ಬಳಸುವ ಅನುಕೂಲತೆಯಲ್ಲಿ ವಿದ್ಯುನ್ಮಾನ ಮಾಧ್ಯಮಗಳಿಗಿಂತ ಪತ್ರಿಕಾಮಾಧ್ಯಮವು ಸುಲಭ ಸಾಧ್ಯವಾದುದರಿಂದ ಈ ಮಾಧ್ಯಮವು ಯಶಸ್ವಿಯಾಗಿ ಮುಂದುವರಿಯುತ್ತಿದೆ ಮತ್ತು ಮುಂದೆಯೂ ಮುಂದುವರಿಯುತ್ತದೆ ಎನ್ನುವುದನ್ನು ಅಧ್ಯಯನದಿಂದ ಗುರುತಿಸಲಾಗಿದೆ.

18. ಸರಸ್ವತೀ ಬಾಯಿ ರಾಜವಾಡೆಯವರು ಮಹಿಳೆಯಾಗಿ ಪತ್ರಿಕೆಯೊಂದನ್ನು ಹುಟ್ಟುಹಾಕಿ ಒಂದು ವರ್ಷ ಪೂರ್ತಿ 'ಸುಪ್ರಭಾತ' ಎಂಬ ಪತ್ರಿಕೆಯನ್ನು ಸ್ವತಂತ್ರವಾಗಿ ನಡೆಸಿದ ಉಡುಪಿ ಜಿಲ್ಲೆಯ ಮಹಿಳಾ ಪತ್ರಿಕೋದ್ಯಮಿ ಎಂದು ಗುರುತಿಸಿಕೊಂಡವರು. ಓರ್ವ ಮಹಿಳೆಯಾಗಿ ಓದುಗ ವರ್ಗದಲ್ಲಿ ಚಂದಾಹಣಕ್ಕಾಗಿ ಮೊರೆ ಇಡುವುದು ಶೋಭೆಯಲ್ಲವೆಂಬ ಗೋವಿಂದ ಪೈಯವರ ಸಲಹೆಯನ್ನು ಮನ್ನಿಸಿ ತಮ್ಮ ಪತ್ರಿಕೆಯನ್ನು ನಿಲ್ಲಿಸಿದರೇ ಹೊರತು ಪತ್ರಿಕೋದ್ಯಮದಿಂದುಂಟಾದ ನಷ್ಟಕ್ಕಾಗಿ ಪತ್ರಿಕೆಯನ್ನು ನಿಲ್ಲಿಸಿರಲಿಲ್ಲ ಎನ್ನುವುದು ಅಧ್ಯಯನಾಸಕ್ತರ ಗಮನ ಸೆಳೆಯುವ ಅಂಶವಾಗಿದೆ. ಸ್ತ್ರೀಸ್ವಾತಂತ್ರ್ಯ, ಸ್ತ್ರೀಸಮಾನತೆ, ಸ್ತ್ರೀಶಿಕ್ಷಣ, ಸ್ತ್ರೀಪರವಾದ ತಾತ್ವಿಕ ನಿಲುವುಗಳನ್ನು ತಾವೇ ಹುಟ್ಟುಹಾಕಿದ ಪತ್ರಿಕೆಯಲ್ಲಿ ಎತ್ತಿಹಿಡಿದರೆನ್ನುವುದು ಅವರ ಪತ್ರಿಕೋದ್ಯಮ ವೈಶಿಷ್ಟ್ಯ. ಕೇವಲ ಸಾಹಿತ್ಯ ವಿಷಯಗಳಿಗಾಗಿಯೇ ಪತ್ರಿಕೆಯನ್ನು ಮೀಸಲಿಟ್ಟ ಉಡುಪಿ ಜಿಲ್ಲೆಯ 'ಪ್ರಥಮ ಸಾಹಿತ್ಯಪತ್ರಿಕೆ' ಎಂದು ಈ ಅಧ್ಯಯನದಲ್ಲಿ ಕಂಡುಕೊಳ್ಳಲಾಗಿದೆ.

19. ಸ್ತ್ರೀವಾದಿ ಚಳುವಳಿಯು 20ನೇ ಶತಮಾನದಲ್ಲಿ ಅಖಿಲ ಕರ್ನಾಟಕ ಮಟ್ಟದಲ್ಲಿ ಕಂಡುಬರುವ ಸ್ತ್ರೀಪರವಾದ ನಿಲುವುಗಳನ್ನು ಪ್ರಕಟಪಡಿಸಿ, ಸಾಹಿತ್ಯ ರಚನೆ ಮಾಡಿದ್ದಲ್ಲದೆ ಅದಕ್ಕಾಗಿ ಪತ್ರಿಕೆಯನ್ನು ನಡೆಸಿರುವುದು ರಾಜವಾಡೆಯವರ ವಿಶೇಷ ಎನ್ನುವುದನ್ನು ಉಲ್ಲೇಖಿಸಲೇ ಬೇಕಾಗಿದೆ.

20. ಸಮಾಜಸುಧಾರಣೆ, ಸ್ತ್ರೀಪರವಾದ ಚರ್ಚೆಗಳು ಜಿಲ್ಲೆಯಲ್ಲಿ ಆಗಲೇ (ಗಾಂಧೀಜಿಯವರ ಪ್ರಭಾವದಿಂದಾಗಿ). ಸ್ವಾತಂತ್ರ್ಯಪೂರ್ವದಲ್ಲಿಯೇ ಆರಂಭಗೊಂಡಿದ್ದು, ಅಂದಿನ ಲೇಖಕರು ಈ ಕುರಿತಾಗಿ ಪತ್ರಿಕೆಗಳಲ್ಲಿ ಗಂಭೀರವಾಗಿ ಚರ್ಚೆ ಮಾಡುವುದನ್ನು ಈ ಅಧ್ಯಯನದಲ್ಲಿ ಉಲ್ಲೇಖಿಸಬೇಕಾಗುತ್ತದೆ. ಈ ಚರ್ಚೆಗಳ ಪರಿಣಾಮಗಳು ಅಂದಿನ ಸಾಹಿತ್ಯ ಚಟುವಟಿಕೆಯಲ್ಲಿಯೂ ಕಂಡುಬರುತ್ತವೆ. ಆ ಕಾಲದ ಪತ್ರಿಕಾ ವರದಿಗಳಲ್ಲಿ ಮತ್ತು ಪತ್ರಿಕಾ ಸಾಹಿತ್ಯದಲ್ಲಿ ಇದು ಸ್ಪಷ್ಟವಾಗಿ ತೋರಿಬರುತ್ತವೆ.

21. ಉಡುಪಿ ಜಿಲ್ಲೆಯ ಏಕೀಕರಣಪೂರ್ವದ ವಾರಪತ್ರಿಕೆ, ಪಾಕ್ಷಿಕ ಹಾಗೂ ಮಾಸಿಕ ಮುಂತಾದ ನಿಯತಕಾಲಿಕಗಳ ಸಂಪಾದಕರು ತಮ್ಮ ಪತ್ರಿಕೆಗಳಲ್ಲಿ ರಾಷ್ಟ್ರೀಯ ಸುದ್ದಿ ಮತ್ತು ಸಾಹಿತ್ಯ ವಿಚಾರಗಳಿಗೆ ಸಮಾನಪ್ರಾಮುಖ್ಯವನ್ನು ನೀಡುತ್ತಿದ್ದರು. ಈ ಸಮನ್ವಯದ ಮೂಲಕ ತಮ್ಮ ಪತ್ರಿಕೆಯಲ್ಲಿ ವಾಸ್ತವ ಲೋಕವನ್ನು ಮತ್ತು ಆದರ್ಶ ಲೋಕವನ್ನು ಜತೆಜತೆಯಾಗಿ ಒಡಮೂಡಿಸುತ್ತಿರುವ ವಿನ್ಯಾಸವನ್ನು ಪತ್ರಿಕೆಗಳ ಅಧ್ಯಯನದಿಂದ ಕಂಡುಕೊಳ್ಳಲಾಗಿದೆ.

22. ಸ್ವಾತಂತ್ರ್ಯಪೂರ್ವಕಾಲದಲ್ಲಿ ಉಡುಪಿ ಜಿಲ್ಲೆಯ ಪ್ರಾಥಮಿಕ ಮತ್ತು ಪ್ರೌಢಶಿಕ್ಷಣ ಸಂಸ್ಥೆಯ ಅಧ್ಯಾಪಕರು ತಮ್ಮ ಕಾಲದಲ್ಲಿ ಪ್ರಕತಗೊಳ್ಳುತ್ತಿದ್ದ ಪತ್ರಿಕೆಯಲ್ಲಿ ತಮ್ಮ ಸಾಹಿತ್ಯ ಬರಹಗಳ ಪ್ರಕಟನೆಗೆ ಸ್ಥಳಾವಕಾಶವನ್ನು ಪಡೆದರು. (ಫ್ರಾನ್ಸಿಸ್ ದಾಂತಿ, ಕೆ. ಹೊನ್ನಯ್ಯ ಶೆಟ್ಟಿ, ಐ. ಶಿವರಾಮಯ್ಯ, ಯಜ್ಞನಾರಾಯಣ ಉಡುಪ, ಬಳ್ಕೂರು ಸುಬ್ರಾಯ ಅಡಿಗ, ಬಿ.ಪಿ. ಬಾಯರಿ, ಕು.ಶಿ. ಹರಿದಾಸ ಭಟ್ಟ ಇವರುಗಳು ಮುಖ್ಯರಾಗಿದ್ದರು). ಉನ್ನತ ಶಿಕ್ಷಣಸಂಸ್ಥೆಗಳು ಸ್ವಾತಂತ್ರ್ಯೋತ್ತರ ಕಾಲದಲ್ಲಿ ಉಡುಪಿ ಜಿಲ್ಲೆಯಲ್ಲಿ ಅಸ್ತಿತ್ವಕ್ಕೆ ಬರುತ್ತಿದ್ದಂತೆ ಈ ಶಿಕ್ಷಣಸಂಸ್ಥೆಗಳಲ್ಲಿ ದುಡಿಯುವ ಪ್ರಾಧ್ಯಾಪಕರು ತಮ್ಮ ಜಿಲ್ಲೆಯ ಪತ್ರಿಕೆಗಳಲ್ಲಿ ತಮ್ಮ ಲೇಖನಗಳ ಪ್ರಕಟನೆಗೆ ಸ್ಥಳಾವಕಾಶವನ್ನು ಪಡೆದರು. (ಪ್ರೊ.

ಗುರುರಾಜ ಭಟ್ಟ, ಪ್ರೊ. ಕು.ಶಿ ಹರಿದಾಸ ಭಟ್ಟ, ಪ್ರೊ. ಯು.ಎಲ್. ಆಚಾರ್ಯ, ಪ್ರೊ. ಎಂ. ರಾಜಗೋಪಾಲ ಆಚಾರ್ಯ, ಪ್ರೊ. ಯಾದವಾಡ, ಪ್ರೊ. ವಸಂತ ಶೆಟ್ಟಿ, ಪ್ರೊ. ಎ.ವಿ. ನಾವಡ, ಪ್ರೊ. ಪಾರ್ವತಿ ಜಿ. ಐತಾಳ ಮತ್ತಿತರನ್ನು ಇಲ್ಲಿ ಹೆಸರಿಸಬಹುದಾಗಿದೆ).

23. ಸಾಹಿತ್ಯಾಸಕ್ತಿಯನ್ನು ಹೊಂದಿದ ದೇವಸ್ಥಾನದ ವ್ಯವಸ್ಥಾಪನ ಮಂಡಳಿಯ ಸದಸ್ಯರು ಸ್ಥಳೀಯ ಶಿಕ್ಷಣ ಸಂಸ್ಥೆಗಳು ಮತ್ತು ಸಾಹಿತ್ಯ ಸಂಘಟನೆಗಳು ನಿರ್ವಹಿಸುವ ಸಾಹಿತ್ಯ ಕಾರ್ಯಕ್ರಮಗಳಲ್ಲೂ ಶಿಕ್ಷಣ ಸಂಸ್ಥೆಯ ಆಸಕ್ತ ಉಪನ್ಯಾಸಕ ವಿದ್ಯಾರ್ಥಿಗಳೂ ದೇವಸ್ಥಾನದ ಮತ್ತು ಸಾಹಿತ್ಯ ಸಂಘ–ಸಂಸ್ಥೆಗಳ ಮುಖೇನ ನಡೆವ ಸಾಹಿತ್ಯ ಚಟುವಟಿಕೆಗಳಲ್ಲೂ ತೊಡಗಿಕೊಂಡಿರುವುದನ್ನು ಈ ಅಧ್ಯಯನದಲ್ಲಿ ಗುರುತಿಸಲಾಗಿದೆ. ಸಾಹಿತ್ಯಾಸಕ್ತರಾದ ಸಹೃದಯರು ತಮ್ಮ ಆಸಕ್ತಿಗನುಸರಿಸಿ, ಭಿನ್ನ–ಭಿನ್ನ ವೇದಿಕೆಯ ಮೂಲಕ ನಡೆಯುವ ಸಾಹಿತ್ಯ ಚಟುವಟಿಕೆಗಳಲ್ಲಿ ನಿರಂತರವಾಗಿ ತೊಡಗಿಕೊಳ್ಳುವ ಪ್ರಕ್ರಿಯೆಯನ್ನು 20ನೇ ಶತಮಾನದ ಉತ್ತರಾರ್ಧದ ಸಾಹಿತ್ಯಚಟುವಟಿಕೆಗಳ ಅಧ್ಯಯನದಲ್ಲಿ ಗುರುತಿಸಲಾಗಿದೆ.

24. ಸಮಕಾಲೀನ ಜೀವನದಲ್ಲಿ 20ನೇ ಶತಮಾನದ ಕೊನೆಯ ಹೊತ್ತಿಗೆ ಉದ್ಯೋಗಾಧಾರಿತ ವಿಷಯಗಳಿಗೆ ಪ್ರಾಮುಖ್ಯ ನೀಡುತ್ತಾ ಮಾನವಿಕ ವಿಷಯಗಳಿಗೆ ಕನಿಷ್ಠ ಆದ್ಯತೆಯನ್ನು ನೀಡುತ್ತಿದ್ದಂತೆ ವಿದ್ಯಾರ್ಥಿವಲಯವು ಸಾಹಿತ್ಯಾಭಿರುಚಿಯಿಂದ ವಿಮುಖರಾದರೆನ್ನುವುದನ್ನು ಈ ಅಧ್ಯಯನದಿಂದ ಗುರುತಿಸಲಾಗಿದೆ.

25. ಸ್ವಾತಂತ್ರ್ಯಪೂರ್ವದಲ್ಲಾಗಲೀ, ಸ್ವಾತಂತ್ರ್ಯನಂತರದಲ್ಲಾಗಲೀ ಸಾಹಿತ್ಯವಿಮರ್ಶೆ, ಸಂಶೋಧನೆಯ ಲೇಖನಗಳನ್ನೊಳಗೊಂಡ ಉತ್ಕೃಷ್ಟ ಮಾದರಿಯ (ಮೈಸೂರಿನ ಪ್ರಬುದ್ಧ ಕರ್ನಾಟಕ, ಉತ್ತರ ಕರ್ನಾಟಕದ ಜಯಕರ್ನಾಟಕ, ಬೆಂಗಳೂರು ವಿಶ್ವವಿದ್ಯಾನಿಲಯವು ಪ್ರಕಟಿಸಿದ 'ಸಾಧನೆ' ಮಾದರಿಯಂತಹ ಕೃತಿಗಳು) ಸಾಹಿತ್ಯ ವಿಮರ್ಶಾ ನಿಯತಕಾಲಿಕಗಳು ಉಡುಪಿ ಜಿಲ್ಲೆಯಲ್ಲಿ ಈತನಕ ಅಸ್ತಿತ್ವಕ್ಕೆ ಬರಲಿಲ್ಲವೆನ್ನುವುದನ್ನು ಈ ಅಧ್ಯಯನದಲ್ಲಿ ಗುರುತಿಸಲಾಗಿದೆ.

26. ಸ್ವಾತಂತ್ರ್ಯಪೂರ್ವ ಪತ್ರಿಕೆಗಳು ಈ ಜಿಲ್ಲೆಯ (ಉಡುಪಿ) ಸಾಹಿತ್ಯಕ, ಆರ್ಥಿಕ, ಸಾಮಾಜಿಕ, ಸಾಂಸ್ಕೃತಿಕ ಇತಿಹಾಸವನ್ನು ರೂಪಿಸುವಲ್ಲಿ ಮಹತ್ತರ ಆಕರವೆನ್ನುವುದನ್ನು ಉಲ್ಲೇಖಿಸಬಹುದಾಗಿದೆ. ಈ ನಿಟ್ಟಿನಲ್ಲಿ ಪತ್ರಿಕೆಗಳಲ್ಲಿ ಕಂಡುಬರುವ ಸಮಗ್ರ ಆಕರಗಳನ್ನು ಬಳಸಿಕೊಂಡು ಅಂತರ್‌ಶಿಸ್ತೀಯ ನೆಲೆಯಲ್ಲಿ ಗಂಭೀರ ಅಧ್ಯಯನ ನಡೆಸಲು ಸಂಶೋಧಕರಿಗೆ ಅವಕಾಶಗಳನ್ನು ನೀಡುತ್ತವೆ.

27. ಜಾಗತೀಕರಣದ ಪರಿಣಾಮವಾಗಿ ಉದ್ಯೋಗಾಧರಿತ ಹಿನ್ನೆಲೆಯಲ್ಲಿ ಸಾಹಿತ್ಯೇತರ ಪಠ್ಯಗಳು 20ನೇ ಶತಮಾನದ ಕೊನೆಯಲ್ಲಿ ಪರಿಷ್ಕಾರಗೊಳ್ಳುವುದಕ್ಕೆ ತೊಡಗಿತ್ತು. ಈ ಕಾರಣದಿಂದಾಗಿ 20ನೇ ಶತಮಾನದ ಅಂತ್ಯದ ಹೊತ್ತಿಗೆ ಮಾನವಿಕ ವಿಷಯಗಳಿಗೆ ಕನಿಷ್ಠ ಆದ್ಯತೆಯನ್ನು ನೀಡುವ ಪರಿಪಾಠವು ಆರಂಭವಾಗತೊಡಗಿತು. ಈ ಕಾರಣದಿಂದಾಗಿ ಸಾಹಿತ್ಯ ವಿಷಯಗಳನ್ನು ಕುರಿತು ವಿದ್ಯಾರ್ಥಿಸಮೂಹವು ಗಂಭೀರ ಅಧ್ಯಯನದಿಂದ ವಿಮುಖಗೊಳ್ಳುತ್ತಿರುವ ಬಗೆಯನ್ನು 20ನೇ ಶತಮಾನದ ಅಂತ್ಯದಿಂದಲೇ ಸ್ಪಷ್ಟವಾಗಿ ಗೋಚರಿಸುತ್ತಿರುವುದು ಕಂಡುಬಂದಿದೆ.

28. ಯಾವುದೇ ಪ್ರಬಲವಾದ ಪ್ರಕಾಶನ ಸಂಸ್ಥೆ ಉಡುಪಿ ಜಿಲ್ಲೆಯಲ್ಲಿ ಚಟುವಟಿಕೆ ನಡೆಸಿಕೊಂಡು ಬಂದಿಲ್ಲವೆಂಬುದು ಅಧ್ಯಯನದಲ್ಲಿ ಕಂಡುಕೊಂಡ ವಿಷಯ. ಅಂತರಂಗ ಪ್ರಕಾಶನ, ನವಭಾರತ ಪುಸ್ತಕ ಭಂಡಾರ ಮೊದಲಾದವು ಕೆಲವೇ ಅಷ್ಟಿಷ್ಟು ಪ್ರಕಾಶನೋದ್ಯಮ ನಡೆಸಿದವು. ಆದರೆ ಅವು ಅಖಿಲ ಕರ್ನಾಟಕ ಮಟ್ಟದ ಪ್ರಸಿದ್ಧಿಯನ್ನು ಪಡೆದಿಲ್ಲ.

29. ಪಾವಂಜೆ ಗುರುರಾವ್ ಅವರ ಶ್ರೀಕೃಷ್ಣ ಮುದ್ರಣಾಲಯ ಮತ್ತು ಶ್ರೀ ಮನ್ಮಧ್ವಸಿದ್ಧಾಂತ ಗ್ರಂಥಾಲಯದವರು ಯಕ್ಷಗಾನ ಮತ್ತು ದಾಸ ಸಾಹಿತ್ಯ ಪ್ರಕಟನೆಯ ಕ್ಷೇತ್ರದಲ್ಲಿ ಹೆಚ್ಚು ಕೆಲಸ ಮಾಡಿರುವುದು ಗಮನಾರ್ಹ. ಈ ಸಂಸ್ಥೆಯು ಈ ಎರಡು ಪ್ರಕಟನೆಗಳ ಸಂದರ್ಭದಲ್ಲಿ ಅಖಿಲಕರ್ನಾಟಕ ಮಟ್ಟದ ಪರಿಗಣನೆಗೆ ಯೋಗ್ಯವಾಗಿದೆ.

~*~

# ದಕ್ಷಿಣ ಕನ್ನಡ ಜಿಲ್ಲಾ ಕಾಂಗ್ರೆಸ್ ಕಮಿಟಿಯು ಜಿಲ್ಲಾ ಮಹಾಜನರಿಗೆ ವಿಜ್ಞಾಪಿಸಿಕೊಳ್ಳುವುದೇನಂದರೆ:---

ಪ್ರಿಯ ದೇಶಬಂಧುಗಳೇ,

ಮಹಾತ್ಮಾ ಗಾಂಧಿಯವರನ್ನು ಬಂಧಿಸಿ, ಅವರಿಗೆ ಶಿಕ್ಷೆ ವಿಧಿಸಿ, ಬರುವ ಮಾರ್ಚಿ ತಾ. ೧೮ಕ್ಕೆ ಒಂದು ವರುಷವಾಗುವುದು. ಅವರನ್ನು ಮಾರ್ಚಿ ತಾ. ೧೦ಕ್ಕೆ ಕೈದುಮಾಡಿ, ೧೮ಕ್ಕೆ ಶಿಕ್ಷೆ ಕೊಟ್ಟುದರಿಂದ ಬರುವ ಮಾರ್ಚಿ ೧೦ರಿಂದ ೧೮ರ ವರೆಗಿನ ವಾರವನ್ನು ರಾಷ್ಟ್ರೀಯ ವಾರವೆಂದು ಆಚರಿಸಿ, ೧೮ಕ್ಕೆ ಇಡೀ ಹಿಂದುಸ್ಥಾನದವರು ಸಂಪೂರ್ಣ ಹರತಾಳವನ್ನಾಚರಿಸಬೇಕಾಗಿ ಬೊಂಬಾಯಿಯಲ್ಲಿ ಕೂಡಿದ ಅಖಿಲ ಭಾರತ ರಾಷ್ಟ್ರೀಯ ಕಮಿಟಿಯ ಕಾರ್ಯಕಾರಿಮಂಡಳಿಯ ಸಭೆಯವರು ನಿರ್ಣಯಿಸಿರುತ್ತಾರೆ. ಈ ನಿರ್ಣಯವನ್ನು ಮೊನ್ನೆ ತಾನೇ ಉಡುಪಿಯಲ್ಲಿ ಜರಗಿದ ನಮ್ಮ ಜಿಲ್ಲಾ ಪರಿಷತ್ತಿನವರೂ ಸಂಪೂರ್ಣ ಅನುಮೋದಿಸಿರುತ್ತಾರೆ. ಆದಪ್ರಯುಕ್ತ ಆ ವಾರವನ್ನು ತಾವೆಲ್ಲರೂ ಬಹಳ ಪೂಜ್ಯ ರೀತಿಯಿಂದ ಆಚರಿಸಿ, ಗಯಾಕಾಂಗ್ರೆಸ್ಸಿನಲ್ಲಿ ನಿರ್ಣಯಿಸಿದ ವಿಧಾಯಕ ಕಾರ್ಯಕ್ರಮವನ್ನು ಅತ್ಯುತ್ಸಾಹದಿಂದ ಮಾಡಬೇಕಾಗಿಯೂ, ೧೮ನೇ ತಾರೀಕು ಸಂಪೂರ್ಣ ಹರತಾಳವನ್ನಾಚರಿಸಬೇಕಾಗಿಯೂ ವಿನಯಪೂರ್ವಕ ಪ್ರಾರ್ಥನೆ.

ಪ್ರಿಯ ಬಾಂಧವರೇ, ಮಹಾತ್ಮರು ಹೊರಗಿದ್ದಾಗ ಹಗಲು ರಾತ್ರೆ ಎಡೆಬಿಡದೆ ಶ್ರಮಪಟ್ಟು ನಮ್ಮ ದೇಶದ ಉದ್ಧರಣೆಗಾಗಿ ಎಷ್ಟು ಕೆಲಸಮಾಡುತ್ತಿದ್ದರೆಂಬುದೂ, ನಮ್ಮ ಸಲುವಾಗಿ ಜೈಲಿಗೆ ಹೋಗಿ ಈಗ ಎಷ್ಟು ಕಷ್ಟಪಡುತ್ತಿದ್ದಾರೆಂಬುದೂ, ತಮಗೆಲ್ಲರಿಗೆ ಗೊತ್ತಿದೆ. ಅಂತಹ ಮಹಾತ್ಮರಲ್ಲಿ ನಮಗೆ ವಿಶ್ವಾಸವೂ, ಪೂಜ್ಯಬುದ್ಧಿಯೂ ಇರುವುದೇ ಆದರೆ, ಅವನ್ನು ನಾವು ಕಾರ್ಯರೂಪದಲ್ಲಿ ತೋರಿಸಬೇಕು. ಅಂತಹ ಕಾರ್ಯವನ್ನು ಮಾಡುವರೆ ಇದೀಗ ಅತ್ಯುತ್ತಮ ಸಂದರ್ಭವಾಗಿದೆ. ಮಹಾತ್ಮರನ್ನು ಬಂಧಿಸಿ, ಶಿಕ್ಷೆ ವಿಧಿಸಿದ ದಿನದ ವರೆಗೆ ಒಂದು ವಾರವಾದರೂ ತಾವುಗಳು ಪವಿತ್ರವೆಂದೆಣಿಸಿ, ತಿಲಕಸ್ವರಾಜ್ಯನಿಧಿಗೆ ಶಕ್ತಿಮೀರಿ ಸಹಾಯ ಮಾಡುತ್ತಲೂ, ಇತರರಿಂದ ಸಹಾಯ ಮಾಡಿಸುತ್ತಲೂ, ತಾವು ಸ್ವತಹ ರಾಷ್ಟ್ರೀಯ ಸ್ವಯಂಸೇವಕರಾಗಿ ಸೇರುತ್ತಲೂ, ಇತರರನ್ನು ಸೇರಿಸುತ್ತಲೂ, ಕಾಂಗ್ರೆಸ್ ಸದಸ್ಯರನ್ನು ಆದಷ್ಟು ಹೆಚ್ಚಿಗೆ ಸೇರಿಸುತ್ತಲೂ ದೇಶಸೇವೆಯನ್ನು ಮಾಡಿ, ಮಹಾತ್ಮರ ಮೇಲಿನ ಪ್ರೀತಿಯನ್ನೂ, ಪೂಜ್ಯಬುದ್ಧಿಯನ್ನೂ ವ್ಯಕ್ತಗೊಳಿಸಬೇಕಾಗಿದೆ. ಬರುವ ಎಪ್ರಿಲ್ ಅಂತ್ಯದೊಳಗೆ ನಮ್ಮ ಜಿಲ್ಲೆಯಲ್ಲಿ ತಿಲಕಸ್ವರಾಜ್ಯನಿಧಿಗೆ ೧೫,೦೦೦ ರೂಪಾಯಿಯೂ, ೫೦೦ ರಾಷ್ಟ್ರೀಯ ಸ್ವಯಂಸೇವಕರೂ ಸೇರಬೇಕಾಗಿದೆ. ಈ ಕಾರ್ಯವು ಸಂಪೂರ್ಣ ನೆರವೇರಬೇಕಾದರೆ ತಾವೆಲ್ಲರೂ ತುಂಬಾ ಮನಸ್ಸು ಕೊಡಬೇಕು. ಈ ವಿಚಾರದಲ್ಲಿ ತಾವು ಗಮನಕೊಡದಿದ್ದರೆ ಸ್ವರಾಜ್ಯರಥವು ಮುಂದುವರಿಯಲಾರದು. ಸವಿನಯ ಕಾಯಿದೇಭಂಗಕ್ಕೆ ನಾವು ಸಿದ್ಧರಾಗಲು ಸಾಧ್ಯವಿಲ್ಲ. 'ಸವಿನಯ ಆಜ್ಞಾಭಂಗವಲ್ಲದೆ ಸ್ವರಾಜ್ಯಕ್ಕೆ ಬೇರೆ ದಾರಿಯಿಲ್ಲ. ವಿಧಾಯಕ ಕಾರ್ಯಕ್ರಮವನ್ನು ಮಾಡುವರೆ ಈ ಸುಸಂದರ್ಭವು ಅತ್ಯುತ್ತಮವಾಗಿದೆ.

ಹರತಾಳದ ವಿಚಾರವಾಗಿ ಕೆಲವರು ಚಾಂದ್ರಮಾನ ಯುಗಾದಿಯೆಂದು ಹೇಳಬಹುದು. ಆದರೆ ಅಂತಹ ಯುಗಾದಿಯು ಮಹಾತ್ಮರ ಬಂಧನದ ದಿನವೇ ಆದುದರಿಂದ ಮತ್ತೂ ಪವಿತ್ರವಾಯಿತು. ಆ ಪವಿತ್ರ ದಿನದಲ್ಲಿ ಉಪವಾಸಮಾಡಿ, ಪರಮಾತ್ಮನ ಪ್ರಾರ್ಥನೆ ಮಾಡಿದ್ದೇ ಆದರೆ ಆತ್ಮಬಲವು ಮತ್ತಷ್ಟು ಹೆಚ್ಚುವುದು. ಲೋಕೋದ್ಧಾರಕನಾದ ಶ್ರೀ ಕೃಷ್ಣಪರಮಾತ್ಮನ ಜನ್ಮದಿನವು ಆನಂದದ ದಿನವಾದರೂ ಅದನ್ನು ಉಪವಾಸದಿಂದ ಆಚರಿಸುವೆವು. ಉಪವಾಸದಿಂದ ಶರೀರಶುದ್ಧಿಯಾಗಿ ದೇವರ ಪ್ರಾರ್ಥನೆಯಿಂದ ಆತ್ಮಶಕ್ತಿಯು ಹೆಚ್ಚುವುದು. ಆತ್ಮಶಕ್ತಿಯಿಂದ ಸ್ವರಾಜ್ಯಲಾಭವಾಗುವುದು.

ಆದುದರಿಂದ ಪ್ರಿಯ ಬಂಧುಗಳೇ, ರಾಷ್ಟ್ರೀಯವಾರವನ್ನು ಮರೆಯಬೇಡಿರಿ! ವಿಧಾಯಕ ಕಾರ್ಯಕ್ರಮವನ್ನು ಮುಂದೊತ್ತಿರಿ!! ಮಾರ್ಚಿ ತಾ. ೧೮ಕ್ಕೆ ಸಂಪೂರ್ಣ ಹರತಾಳವನ್ನಾಚರಿಸಿರಿ!!!

ಮಂಗಳೂರು, ) ಉಡುಪಿ ಗೋವಿಂದರಾವ್,

ತಾ. ೧---೩---೧೯೨೩. ) ಕಾರ್ಯದರ್ಶಿ.

ಸತ್ಯಾಗ್ರಹೀ ಮುದ್ರಣಾಲಯ. ಉಡುಪಿ.]




RECEIPT.

MANIPAL (S. Kanara)

No. 1

Date 24-12-1938

# THE HINDU ORPHANAGE, MANIPAL.

(Registered under Act XXI of 1860)

*Name* B. Padmanabha Pai, Esq.

*Full address* Merchant, Brahmavar.

*Amount of Donation* Rs 8—0—0

*Membership fees* Rs. 2—0—0

**PAYMENT RECEIVED WITH THANKS**




G. H. Pai
*Secretary.*

# ಉದಯವಾಣಿ ನಡೆದು ಬಂದ ದಾರಿ

## ದೈನಿಕದ ವ್ಯಾಪ್ತಿಯನ್ನು ಪೇಟೆ ಪಟ್ಟಣಗಳ ಗಡಿ... ದಾಚೆ, ಅದೂ ಪೇಟೆಯ ಸಮ್ಮರ್ದದಿಂದ ದೂರವಾ... ಇನ್ನೂ ನಗರಸಭೆಯೂ ಕಾಲಿಡದ ಮಣಿಪಾಲ... ಗ್ರಾಮೀಣ ವಲಯಕ್ಕೆ ವಿಸ್ತರಿಸುವ ಮೂ... ಉದಯವಾಣಿ ಹೊಸತೊಂದು ವಿಕ್ರಮ ಸಾಧಿ...

...ಜದ ಕೊನೆಯ ದಿನಗಳು. ...ಯವಾಣಿ ಗರ್ಭವಾಸದಲ್ಲಿದ್ದ ...ಯಕೆಗೆ ಇನ್ನೂ ಮೂರ್ತ ...ಲ್ಲ. ತಲೆ ತುಂಬ ಗಿಡಿದ ...ಸಾಗುವ ಹಂಬಲ ಹೊತ್ತ ...ಳು.

...ದಯವನ್ನು ಮುಟ್ಟುವ ...ಕ ಈ ಮಣಿಪಾಲದಿಂದ ... ಎನ್ನುವುದು ನಮ್ಮ ಕನ ...ಕ್ಕಾಗಿ ಚಿಂತನ – ಮಂಥನ; ... ಹಿತ ಚಿಂತಕರೊಡನೆ ... ವಿಚಾರ ವಿನಿಮಯ, ...ಸವವೇದನೆ.

...ಥ ಸುಲಭದ ಕೆಲಸವಾಗಿರ ...ದ್ಯಮ. ಅದರಲ್ಲು ದಿನ ...ಹು ದೊಡ್ಡ ಹೊಣೆಗಾರಿಕೆ. ...ಮ್ಮಿ; ಕೈಹಾಕಿ ಕೈಸುಟ್ಟು ... ಇಳಿಯುವ ಮುನ್ನ ...ಚಿಸುವುದು ಅನಿವಾರ್ಯ.

...ದ್ರಗಳಲ್ಲಿ ದಿನಪತ್ರಿಕೆಗಳು ...ವು. ಅವು ವಾರ್ತೆಗಳ ...ಯ ಎಲ್ಲ ಸೌಕರ್ಯಗಳು ...ಕೇಂದ್ರಗಳಲ್ಲಿ ಸುದ್ದಿ ಪತ್ರಿಕೆ ...ಸಹಜ. ಮಣಿಪಾಲದಂಥ ... ಇದು ಎಷ್ಟರ ಮಟ್ಟಿಗೆ ...ದು ನಾವು ಯೋಚಿಸು ...ವಾಗಿತ್ತು. ಕೇಂದ್ರದಿಂದ ... ಮೂಲೆಯಿಂದ ಕರ್ನಾ... ಮೂಲೆಗೆ ಮುಟ್ಟಿಸುವ

...ಕೇಂದ್ರವಲ್ಲ; ಜಿಲ್ಲಾ ... 'ಹೇಗೋ ಎಂತೋ' ... ಸಾಧಿಸಿದರೆ ಯಾವು ... ಎಂದು ಹುರಿದುಂಬಿಸಿ ...ಲವು ಪ್ರಥಮಗಳನ್ನು ...ದ ಇತಿಹಾಸ ಮಣಿ... ಇಲ್ಲಿ ಇದು ಸಾಧ್ಯ' ...ಪ್ರಸಿದರು ಕೆಲವರು. ...ರ ಗಟ್ಟಿಯಾಯಿತು. ...ಯತೊಡಗಿತು.

... ಕೂತೇ ಇರುತ್ತಾನೆ. ... ಮುಂದೆ ಸಾಗದೆ ಮುಂದೆ ಸಾಗುತ್ತಾನೆ. "ನ ಸಂಶಯ ಮನಾರುಹ್ಯ ನರೋ ಭದ್ರಾಣಿ ಪಶ್ಯತಿ" ಸಮಸ್ಯೆಯನ್ನು ಎದುರಿಸುವ ಸಾಹಸದಲ್ಲೆ ಬದುಕಿನ ಸೊಗಸಿರುವುದು ಹೊರತು ತೆಪ್ಪಗೆ ಇರುವ ಜಡತೆಯಲ್ಲಲ್ಲ.

ಮಣಿಪಾಲ ರಾಜ್ಯದ ಕೇಂದ್ರವಾಗದೆ ಇರಬಹುದು. ಜಿಲ್ಲಾ ಕೇಂದ್ರವೂ ಆಗದೆ ಇರಬಹುದು. ಆಚಾರ್ಯ ಮಧ್ವರಿಂದ ಇತಿಹಾಸ ಪ್ರಸಿದ್ಧವಾದ ತಾಲೂಕು ಕೇಂದ್ರ ಉಡುಪಿಯ ಅಂಚಿನಲ್ಲಿ ಇರುವ ಜಾಗೃತಿಯ ಕೇಂದ್ರವಂತು ಹೌದು. ಡಾ: ಮಾಧವ ಪೈಗಳ ಪ್ರಯತ್ನದ ಫಲವಾಗಿ ಇದು ಶಿಕ್ಷಣ ಕೇಂದ್ರವೂ ಆಗಿದೆ. ಇಂಥ ಬುದ್ಧಿಜೀವಿಗಳ ಕೇಂದ್ರವನ್ನು ಈ ಜನದ ಪ್ರತಿಭೆಯನ್ನು ನಾವು ಬಳಸಿಕೊಳ್ಳಬೇಡವೆ? ಕೊನೆಗೂ ಈ ನಿರ್ಧಾರದ ಫಲವಾಗಿ ಉದಯವಾಣಿಯ ಉದಯವಾಯಿತು.

1969 ಡಿಸೆಂಬರ್ ತಿಂಗಳ ಕೊನೆಯ ವಾರ. ಉಡುಪಿಯಲ್ಲಿ ಶ್ರೀ ಪೇಜಾವರ ಶ್ರೀಪಾದರ ನೇತೃತ್ವದಲ್ಲಿ ಅಖಿಲ ಭಾರತ ವಿಶ್ವಹಿಂದೂ ಸಮ್ಮೇಳನ ನಡೆಯಿತು. ಹೊರ ನಾಡಿನಿಂದ ಸುಮಾರು 25 ಸಾವಿರ ಜನ ಇದರಲ್ಲಿ ಭಾಗವಹಿಸಿದ್ದರು. ಇಂಥ ಒಂದು ಮುಂಜಾನೆ ಉಡುಪಿಯ ಕಡಗೋಲು ಕೃಷ್ಣನ ಸನ್ನಿಧಿಯಲ್ಲಿ ಉದಯವಾಣಿಯ ಪ್ರಾಯೋಗಿಕ ಸಂಚಿಕೆ ಹೊರಬಂತು. ಕಂಡ ಜನ ಸಂತಸದಿಂದ ಹರಸಿದರು. ಮುಂದೆ 1970 ಜನವರಿ 1 ರಿಂದ ಉದಯವಾಣಿ ನಿಯತವಾಗಿ ಹೊರ ಬರತೊಡಗಿತು.

ಹೀಗೆ ದೈನಿಕದ ವ್ಯಾಪ್ತಿಯನ್ನು ಪೇಟೆ ಪಟ್ಟಣಗಳ ಗಡಿಯಿಂದಾಚೆ ಅದೂ ಪೇಟೆಯ ಸಮ್ಮರ್ದದಿಂದ ದೂರಾದ, ಇನ್ನೂ ನಗರಸಭೆಯೂ ಕಾಲಿಡದ ಮಣಿಪಾಲದಂಥ ಗ್ರಾಮೀಣ ವಲಯಕ್ಕೆ ವಿಸ್ತರಿಸುವ ಮೂಲಕ ಉದಯವಾಣಿ ತನ್ನ ಮೊದಲ ವಿಕ್ರಮವನ್ನು ಸ್ಥಾಪಿಸಿತು.

ಸುದ್ದಿ ಕೇಂದ್ರಗಳಿಂದ ದೂರ ನಿಂತು ಪೇಟೆಯ ಸಮ್ದು ಗದ್ದಲಗಳಿಂದಲೂ ದೂರ ನಿಂತು ಮಣಿಪಾಲದಂಥ ಒಂದು ಮೂಲೆಯಲ್ಲಿ ವಿಶ್ವದ ಮಹತ್ವದ ಸುದ್ದಿಗಳನ್ನು ಸಂಗ್ರಹಿಸಿ ಪೇಟೆಯ ನಗರದ ಜನಕ್ಕೆ ಮುಟ್ಟಿಸುವ ಸಾಹಸವನ್ನು ಉದಯವಾಣಿ ಮಾಡ...

Best For Thirst **Zaffa** Refreshes You Best ORANGE—LEMON—RASPBERRY

# ಉದಯವಾಣಿ

UDAYAVANI—KANNADA DAILY—MANIPAL

Mangalore GANESH BEEDIES Daily Production exceeds Four crores Beedies

ಹೊಸ ಚುನಾವಣೆ ನಡೆದರೆ ಇಂದಿರಾ ಗುಂಪಿಗೆ ಸೋಲು ಸಿದ್ಧ ಸ್ವತಂತ್ರ ಪಾರ್ಟಿ ಅಧ್ಯಕ್ಷರ ಭವಿಷ್ಯ

ಪ್ರತಿಬಂಧಕ ಸ್ಥಾನಬದ್ಧತಾ ಶಾಸನದ ಅವಧಿ ಮುಕ್ತಾಯ

ಮಧ್ಯಪ್ರದೇಶದಲ್ಲಿ ಸುಗ್ರೀವಾಜ್ಞೆ ಸೂಕ್ತ ಕ್ರಮ ರಾಜ್ಯಗಳಿಗೇ ಸೇರಿದ್ದು

ಯುಗೋಸ್ಲಾವ್ ನಗರದಲ್ಲಿ ಭೂಕಂಪ

ಪಿರ್ಸಾರಿಗೆ ಫರ್ಟಿಲೈಸರ್ ಕಾರ್ಖಾನೆ ಸ್ಥಾಪನೆಗೆ ಸಮ್ಮತಿ ನೀಡಿದ್ದಕ್ಕೆ ಆಕ್ಷೇಪಣಾ ಟೀಕೆ

ಯುರೋಪ್‌ಗೆ 'ಫ್ಲೂ' ಧಾಳಿ: ನೂರಾರು ಬಲಿ

ಉದಯವಾಣಿ ಪ್ರಥಮ ಸಂಚಿಕೆ

ಮುಂದಿನ ಬೆಳವಣಿಗೆಗೆ ಭರವಸೆಯ ನಾಂದಿಯಾಯಿತು.

### ಸಿಂಹಾವಲೋಕನ

ನಾವು ನಡೆದುಬಂದ ದಾರಿಯನ್ನು ಮರಳಿ ನೋಡುವುದರಲ್ಲಿ ಒಂದು ವಿಶಿಷ್ಟವಾದ ಆನಂದವಿದೆ. ಎದುರಾದ ಸಮಸ್ಯೆಗಳು, ಅದನ್ನು ಗೆದ್ದು ಮುಂದೆ ಸಾಗಿದ ಬಗೆ – ಒಂದೊಂದೂ ಖುಶಿ ಕೊಡುವ ಸಂಗತಿಗಳು. ಈ ಒಂದೂವರೆ ದಶಕದಲ್ಲಿ ಪಟ್ಟ ಪಾಡುಗಳೇನು? ಒಂದೊಂದೆ ಹೆಜ್ಜೆ ಮುಂದಡಿಯಿಡುತ್ತ ಬೆಳೆದ ಬಗೆಯೇನು? ಇದರ ರೋಮಂಥವೆ ಒಂದು ಖುಶಿ ಕೊಡುವ ಸಂಗತಿ. ನಿಜವಾದ ಆನಂದ ಇರುವುದು ಆನಂದವನ್ನು ಅನುಭವಿಸುವುದರಲ್ಲಿ ಅಲ್ಲವೇ ಅಲ್ಲ. ಹಿಂದೆ ಅನುಭವಿಸಿದ ಸಿಹಿ–ಕಹಿಗಳನ್ನು ನೆನಪಿಸಿಕೊಳ್ಳುವುದರಲ್ಲಿ. ಅನುಭವದ ಮೂಸೆಯಲ್ಲಿ ಸಿಹಿಯಂತೆಯೆ ಕಹಿಯೂ ಸಿಹಿಯಾಗಿರುತ್ತದೆ.

ಹೌದು ಈ ಹದಿನೈದು ವರ್ಷಗಳಲ್ಲಿ ಉದಯವಾಣಿ ಅನೇಕ ಹೆಜ್ಜೆಗಳನ್ನು ದಾಟಿ ಬಂದಿದೆ. ಅನೇಕ ಪ್ರಯೋಗಗಳನ್ನು ನಡೆಸಿದೆ. ಹಲವಾರು ಬದಲಾವಣೆಗಳನ್ನು ತಂದಿದೆ. ಹೆಚ್ಚಿನ ಮಟ್ಟಿಗೆ ತನ್ನ ಎಲ್ಲ ಪ್ರಯೋಗಗಳಲ್ಲೂ ಸಾಕಷ್ಟು ಯಶಸ್ವಿಯಾಗಿದೆ.

ಮೊದಲನೆಯದಾಗಿ ಕನ್ನಡದ ಇತಿಹಾಸದಲ್ಲೆ ಮೊದಲ ಬಾರಿಗೆ ವೆಬ್ ಆಫ್‌ಸೆಟ್ ಮುದ್ರಣದಲ್ಲಿ ಅಂದವಾದ ಪತ್ರಿಕೆಯನ್ನು ಜನರಿಗೆ ಕೊಡುವಲ್ಲಿ ಉದಯವಾಣಿ ಸಫಲವಾಯಿತು. ಸುಂದರವಾದ ಚಿತ್ರಗಳು ಸುಂದರವಾದ ಮುದ್ರಣ ಮತ್ತು ವಸ್ತುನಿಷ್ಠವಾದ ವಾರ್ತೆಗಳು ಪತ್ರಿಕೆಯನ್ನು ಜನಪ್ರಿಯಗೊಳಿಸಲು ಸಹಕಾರಿಯಾದವು.

ಮೊದಲ ವರ್ಷವೇ ರಾಷ್ಟ್ರೀಯಮಟ್ಟದಲ್ಲಿ ಅಂದವಾದ ಮುದ್ರಣ ವಿನ್ಯಾಸಕ್ಕಾಗಿ ಉದಯವಾಣಿಗೆ ಪ್ರಥಮ ಪ್ರಶಸ್ತಿ ದೊರೆತಾಗ ನಮ್ಮ ಪ್ರಯತ್ನಕ್ಕೆ ಸಾರ್ಥಕತೆಯ ಭಾವ ಬಂತು. ನಮ್ಮ ಉತ್ಸಾಹ ಇಮ್ಮಡಿಗೊಳ್ಳುವಂತಾಯಿತು. ಅನಂತರ ಇದುವರೆಗೆ ಹನ್ನೊಂದು ಬಾರಿ ರಾಷ್ಟ್ರೀಯಮಟ್ಟದ ಪ್ರಶಸ್ತಿಯನ್ನು ಪಡೆಯುವ ಮೂಲಕ ಉದಯವಾಣಿ ನಿರಂತರವಾಗಿ ತನ್ನ ಮಟ್ಟವನ್ನು ಕಾಯ್ದುಕೊಂಡು ಮುಂದುವರಿಯಿತು.

**ನಾವು ನಡೆದು ಬಂದ ದಾರಿಯನ್ನು ಮರಳಿ ನಿಂತು ನೋಡುವುದರಲ್ಲಿ ಒಂದು ಅನಿರ್ವಚನೀಯವಾದ ಆನಂದವಿದೆ. ಎದುರಾದ ಸಮಸ್ಯೆಗಳು, ಅದನ್ನು ಗೆದ್ದು ಮುಂದೆ ಸಾಗಿದ ಬಗೆ**

...ಗೆಗೆ ಪಾತ್ರವಾದವು. ಕು. ಶಿ. ಹರಿದಾಸ ಭಟ್ಟರಂತಹ ಖ್ಯಾತ ವಿದ್ವಾಂಸರ 'ಲೋಕಾಭಿರಾಮ', ಆಸಕ್ತಿಯಿಂದ ಜನ ಓದುತ್ತಿದ್ದ 'ಸಂಪಾದಕೀಯ' ಮತ್ತು 'ವಾರ್ತಾ ಪ್ರತಿಕ್ರಿಯೆಗಳು', ಮೀಸೆಯಡಿಯಲ್ಲೆ ಓದುಗರನ್ನು ನಗಿಸಿ ಕಚಕುಳಿಯಿಡುತ್ತಿದ್ದ 'ಕಿಷ್ಕಿಂಧಾ ಕಾಂಡ' ದಿನ ಪತ್ರಿಕೆಯ ವಿಶೇಷ ಕೊಡುಗೆಗಳಾಗಿ ಪತ್ರಿಕೆಗೆ ಕಳೆಯಿತ್ತವು.

ತುರ್ತುಪರಿಸ್ಥಿತಿಯ ಕಾಲವೂ ನಿಯತವಾಗಿ ಪ್ರಕಟವಾಗುತ್ತಿದ್ದ ಈ ಶೀರ್ಷಿಕೆಗಳು ಅನಂತರ ಅನಿಯತವಾದವು. ನ್ಯೂಸ್‌ಪ್ರಿಂಟಿನ ತಲೆ ತಿನ್ನುವ ಸಮಸ್ಯೆ, ವಾರ್ತೆಗಳ ಮತ್ತು ಲೇಖನಗಳ ಮೇಲಣ ಹಿಡಿತಗಳಿಂದಾಗಿ ನಾವು ನಮ್ಮನ್ನೆ ಒಂದು ಬಗೆಯಿಂದ ಮೊಟಕುಗೊಳಿಸುವುದು ಅನಿವಾರ್ಯವಾಯಿತು. ಮತ್ತೆ ಇಂಥ ಕೆಲವು ಶೀರ್ಷಿಕೆಗಳನ್ನು ನಿಯತವಾಗಿ ಮುಂದುವರಿಸಬೇಕು ಎನ್ನುವ ಉದ್ದೇಶ ನಮಗಿದೆ.

ಪತ್ರಿಕೋದ್ಯಮದ ಸಮಸ್ಯೆ ಹಲವಾರು. ಈ ಸಂಧಿ ಕಾಲದಲ್ಲಿ ದೇಶ ವಿದೇಶದ ಪತ್ರಿಕೋದ್ಯಮದಲ್ಲಿ ಮಹತ್ವದ ಏರುಪೇರುಗಳು, ಬದಲಾವಣೆಗಳು ಸಂಭವಿಸಿವೆ. ದೊಡ್ಡ ದೊಡ್ಡ ಪತ್ರಿಕೆಗಳೂ ಆರ್ಥಿಕ ಸಮಸ್ಯೆಗೆ, ನ್ಯೂಸ್‌ಪ್ರಿಂಟಿನ ಕೊರತೆಯ ಸಮಸ್ಯೆಗೆ, ಹಣದುಬ್ಬರದ ಸಮಸ್ಯೆಗೆ ಬಲಿಯಾಗಿ ಮುಗ್ಗರಿಸಿದ್ದುಂಟು. ದಿನದಿಂದ ದಿನಕ್ಕೆ ಹೆಚ್ಚುತ್ತಿರುವ ಕಾಗದದ ದುಬಾರಿ ಬೆಲೆ. ಮುಗಿಲಿಗೇರುತ್ತಿರುವ ಪೆಟ್ರೋಲಿನ ಬೆಲೆಯಿಂದ ವಾಹನಗಳ ಮೂಲಕ ಪತ್ರಿಕೆಯನ್ನು ನಾಡಿನ ಎಲ್ಲೆಡೆ ಸೂರ್ಯ ಕಣ್ಣು ತೆರೆಯುವ ಮುನ್ನ ಮುಟ್ಟಿಸುವ ಸಮಸ್ಯೆ – ಒಂದೇ ಎರಡೇ – ಇಂಥ ಸಮಸ್ಯೆಗಳ ಸರಮಾಲೆಯಲ್ಲಿ ಎಂಥ...

...ತೇರ್ಗಡೆಗೊಂಡು ಬೆಳೆಯಿತು ಎನ್ನುವುದನ್ನು ನೆನಪಿಸಿಕೊಂಡಾಗ ನಿಜಕ್ಕೂ ಒಂದು ಧನ್ಯತೆಯ ಆನಂದವನ್ನು ನಾವು ಅನುಭವಿಸುತ್ತೇವೆ.

ಇದಕ್ಕೆ ನಮ್ಮ ಪ್ರಯತ್ನದ ಜತೆಗೆ ಜನತೆಯ ಪ್ರೀತಿಯ ಸಹಕಾರವೂ ಮುಖ್ಯಕಾರಣ. ಪತ್ರಿಕೋದ್ಯಮದ ಕಷ್ಟಗಳನ್ನು, ಸಮಸ್ಯೆಗಳನ್ನು ಅರ್ಥಮಾಡಿಕೊಂಡ ನಮ್ಮ ಓದುಗರು – ಪರಿಸ್ಥಿತಿಯನ್ನು ಅರ್ಥಮಾಡಿಕೊಂಡು ಹೆಜ್ಜೆ ಹೆಜ್ಜೆಗೂ ನಮ್ಮನ್ನು ಬೆಂಬಲಿಸಿ ಸಹಕರಿಸಿದರು. ಜನಜೀವನದ ಜತೆಗೆ ಸ್ಪಂದಿಸಬೇಕು ಎಂಬ ಉದಯವಾಣಿಯ ಬಯಕೆ ಇದರಿಂದ ಸಾರ್ಥಕವಾಯಿತು.

### ವಸ್ತುನಿಷ್ಠ ವರದಿ

ದಿನಪತ್ರಿಕೆಗೆ ಹತ್ತು ಹಲವು ಮುಖಗಳು. ವಾರಪತ್ರಿಕೆ, ಮಾಸಪತ್ರಿಕೆಗಳ ವ್ಯಾಪ್ತಿ ಸೀಮಿತ. ಅದು ಒಂದು ಅಭಿರುಚಿಯ ಜನರನ್ನು ಆಯ್ದುಕೊಂಡು ಅಂಥ ಲೇಖನಗಳನ್ನೆ ಪ್ರಕಟಿಸುತ್ತದೆ. ಅದಕ್ಕೆ ನಿಶ್ಚಿತವಾದ ಒಂದು ಸಾಂಸ್ಕೃತಿಕ ಮತ್ತು ಸಾಹಿತ್ಯಿಕ ಧೋರಣೆ ಇರುತ್ತದೆ. ಆದರೆ ದಿನಪತ್ರಿಕೆ ದೇಶದ ಹಿರಿಯ ಬುದ್ಧಿಜೀವಿಗಳಿಂದ ಹಿಡಿದು ಹಳ್ಳಿಯ ಸಾಮಾನ್ಯ ಅಕ್ಷರಸ್ಥನ ವರೆಗೂ ಎಲ್ಲರಿಗೂ ಸಮಾನವಾದ ವೇದಿಕೆ. ಬೆಳಗ್ಗೆದ್ದು ಬಿಸಿ ಕಾಫಿ ಹೀರುವಾಗ ಕಣ್ಣು ದಿನಪತ್ರಿಕೆಯನ್ನು ಹೀರುತ್ತದೆ. ಒಬ್ಬೊಬ್ಬರು ಒಂದೊಂದು ಅಭಿರುಚಿ. ಒಬ್ಬೊಬ್ಬರಿಗೆ ಒಂದೊಂದು ಬಗೆಯ ಸುದ್ದಿಯಲ್ಲಿ ಆಸಕ್ತಿ.

ಆದರೆ ದಿನಪತ್ರಿಕೆಗೆ ಯಾವುದೇ ಸ್ವಂತದ ಆಸಕ್ತಿಯಿರುವುದು ಸಾಧ್ಯವಿಲ್ಲ. ಎಲ್ಲರ ಆಸಕ್ತಿಗೂ ಆಹಾರವನ್ನು ಒದಗಿಸಿ ತಾನು ತಟಸ್ಥವಾಗಿ ನಿಲ್ಲುವುದೇ ನಿಜವಾದ ಪತ್ರಿಕಾಧರ್ಮ. ಉದಯವಾಣಿ ಇದನ್ನು ...

ಸತ್ಯ ಅಪ್ರಿಯ... "ನ ಬ್ರೂಯಾತ್... ...ಮಿಗಳು ಸಾರಿದ... ಸತ್ಯದ ದಾರಿಯ... ಪ್ರಿಯತೆಯನ್ನೂ... "ಕ್ಷಂದಸ್ಯ ಧಾರಾ... ಇಂಥ ಅಲಗಿನ... ದಾರಿ... ನಡೆಯುವ ಕ... ...

ರಾಷ್ಟ್ರೀ...

ಉದಯವಾ...

1970

1971

1972-73

1972-73

1975-76

1977-78

1979

1980

1981

1982

ಉದಯ...

1972-73

1974-75

1975-76

1977-78

1979

1980

# ಉದಯವಾಣಿ ವಿಂಶತಿ ಸ್ಪರ್ಧೆ

# ದ.ಕ. ಜಿಲ್ಲೆಯ ಮಾದರಿ ಯುವಸಂಘಟನೆಗಳು – ಫಲಿತಾಂಶ

ಯುವಶಕ್ತಿ ಭುವಿಶಕ್ತಿಯಂತೆ ಅನನ್ಯ, ಅಮೃತ ಹಾಗೂ ಅದಮ್ಯ. ಆದ್ದರಿಂದಲೇ ಸಮಾಜದ ಅಭಿವೃದ್ಧಿಯಲ್ಲಿ ಯುವಜನರ ಪಾತ್ರ ಅತಿ ಮಹತ್ವದ್ದಾಗಿದೆ. ಯುವಜನತೆ ಕ್ರಿಯಾಶೀಲವಾಗಿರುವ ಯಾವುದೇ ಪ್ರದೇಶ ಅಥವಾ ರಾಷ್ಟ್ರ ಅಭ್ಯುದಯ ಪಥದಿಂದ ಹಿಂದೆ ಸರಿಯದು. ಒಂದು ದೇಶವೇಕೆ, ಸಮಗ್ರ ಜಗತ್ತಿನ ಭವಿಷ್ಯವೂ ಯುವಜನತೆಯನ್ನು ಆಧರಿಸಿದೆ.

ಹತ್ತು ವರ್ಷಗಳ ಹಿಂದೆ ದ.ಕ. ಜಿಲ್ಲೆಯಲ್ಲಿ ಉದಯವಾಣಿ 'ಕುಗ್ರಾಮ ಗುರುತಿಸಿ' ಅಭ್ಯುದಯ ಪತ್ರಿಕೋದ್ಯಮ ಪ್ರಯೋಗ ನಡೆಸಿದಾಗ 'ಒಂದು ಗಮನಾರ್ಹ ವಿಚಾರ' ವೇದ್ಯವಾಗಿತ್ತು. ಅದೇನೆಂದರೆ ಅನೇಕ ಕುಗ್ರಾಮಗಳಲ್ಲಿ ಜನತೆ; ಅದರಲ್ಲೂ ಯುವಜನತೆ ನಮ್ಮೂರಿನಲ್ಲಿ ಸರಕಾರದಿಂದ ಏನೂ ಆಗಿಲ್ಲ ಎಂದು ನಿರಾಶೆಯಲ್ಲಿದ್ದುದು. ನೀವೇನು ಮಾಡಿದ್ದೀರಿ? ನಿಮ್ಮೂರಿನ ಪ್ರಗತಿಗೆ ನೀವೆ ಹೊಣೆಯಲ್ಲವೇ ಎಂದು ಪ್ರಶ್ನಿಸಿದಾಗ ನಮ್ಮಿಂದೇನಾಗುತ್ತದೆ? ನಮಗೆ ಅದನ್ನೆಲ್ಲ ಮಾರ್ಗದರ್ಶನ ಮಾಡುವವರು ಯಾರಿದ್ದಾರೆ ಎಂಬ ಹತಾಶೆಯ ಪ್ರತಿಕ್ರಿಯೆಗಳೂ ಬಂದಿದ್ದವು. ಒಂದೆರಡು ಊರುಗಳಲ್ಲಿ "ನಮ್ಮೂರಿನಲ್ಲಿರುವ ಅತಿ ಚಟುವಟಿಕೆಯ ಕೇಂದ್ರ ಸಾರಾಯಿ ಅಂಗಡಿ, ಅದುವೇ ನಮ್ಮ ಒಂದೇ ಒಂದು ಸಾಂಸ್ಕೃತಿಕ ಕೇಂದ್ರ" ಎಂದು ವಿದ್ಯಾವಂತ ಯುವಜನರೇ ವ್ಯಂಗ್ಯ-ನಿರಾಶೆಯಿಂದ ಹೇಳಿದ್ದರು.

**ಯುವಸಂಘಟನೆಗಳು ಯಾಕೆ?**

ಅನಂತರದ ದಿನಗಳಲ್ಲಿ ಕುಗ್ರಾಮಗಳು ಅಭ್ಯುದಯದತ್ತ ಕಾಲಿಟ್ಟ ಗತಿ ಅವಲೋಕಿಸಿದಾಗ, ಯುವಜನತೆ ಸಂಘಟಿತವಾದೆಡೆಗಳಲ್ಲಿ ಪ್ರಗತಿಯ ವೇಗ ನಿಚ್ಚಳವಾಗಿತ್ತು. ಸ್ಥಳೀಯ ಸಂಸ್ಥೆಗಳು ನಿಷ್ಕ್ರಿಯವಾಗಿದ್ದೆಡೆಗಳಲ್ಲಿಯೂ ಯುವಜನತೆ ಮೈಕೊಡವಿ ಎದ್ದಾಗ, ಯುವಕ ಸಂಘಗಳ ಗತಿಗೆ ಸರಿಸಮಾನವಾಗಿ ಸ್ಥಳೀಯ ಸಂಸ್ಥೆಗಳು ಕೂಡಾ ಎಚ್ಚೆತ್ತುಕೊಂಡು ಸಮಾನಾಂತರದಲ್ಲಿ, ಪೂರಕವಾಗಿ ಸಾಗಿದ್ದವು ಎಂಬುದು ಕೂಡಾ ಗಮನಕ್ಕೆ ಬಂದಿತ್ತು.

ಈ ಹಿನ್ನೆಲೆಯಲ್ಲಿ ಚಿಂತನೆಯಲ್ಲಿ ಯುವ ಜನತೆ ಏನು ಮಾಡುತ್ತಿದ್ದಾರೆ ಅಥವಾ ಏನು ಮಾಡುತ್ತಿಲ್ಲ ಎಂಬುದರತ್ತ ಯಾವತ್ತೂ ಗಮನಹರಿಸಬೇಕಾಗಿರುವುದು ಸಮಾಜದೊಂದರ ಕರ್ತವ್ಯವೂ ಆಗಿದೆ ಎನ್ನಬಹುದು. ಕಾಲಧರ್ಮಕ್ಕನುಗುಣವಾಗಿ ಯುವ ಪ್ರಜ್ಞೆ ಬೆಳೆಯಬೇಕು. ಸಮಾಜದ ಅಭಿವೃದ್ಧಿಗೆ ಅವರು ಸ್ಪಂದಿಸಬೇಕು. ಅದು ರಾಷ್ಟ್ರದ ಪುರೋಭಿವೃದ್ಧಿಗೆ ಅತೀ ಅವಶ್ಯಕ ಮತ್ತು ಅನಿವಾರ್ಯ.

ಕೆಲವೊಮ್ಮೆ ಅಂತರ್ಮುಖಿಯಾಗಿ, ಹಲವೊಮ್ಮೆ ಬಹಿರ್ಮುಖಿಯಾಗಿ ಪ್ರಕಟಗೊಳ್ಳುವ ಈ ಅಪರಿಮಿತ, ಅಗಾಧ ಶಕ್ತಿಗೊಂದು ಧ್ಯೇಯ, ಉದ್ದೇಶ ಮತ್ತು ಮಾರ್ಗದರ್ಶನಗಳಿದ್ದಾಗ, ಆಗಬಹುದಾದ ಪರಿಣಾಮ, ಸಾಧನೆಗಳು ಅಪಾರ.

ಉದಯವಾಣಿಯ ಓದುಗ-ಅಭಿಮಾನಿಗಳಲ್ಲಿ ಸಾಕಷ್ಟು ದೊಡ್ಡ ಸಂಖ್ಯೆಯಲ್ಲಿ ಯುವಜನತೆಯಿದೆ. ಸಹಜವಾಗಿಯೇ 20 ವರ್ಷದ ಸೇವಾ ...


# ಉದಯವಾಣಿ ವಿಂಶತಿ ಉತ್ಸವ 1970–1990


# ಉದಯವಾಣಿ ವಿಂಶತಿ ಉತ್ಸವ 1970–1990

ಪ್ರೆಸ್ ಕಾರ್ನರ್ ಮಣಿಪಾಲ 576 119 ದ ಕನ್ನಡ ಕರ್ನಾಟಕ ಫೋನು (08252) 21241 22825

ಜುಲೈ 25, 1992

ಶ್ರೀ.ನಂದಳಿಕೆ ಬಾಲಚಂದ್ರರಾವ್
ಗೌರವಾಧ್ಯಕ್ಷರು
ಮುದ್ದಣ ಸ್ಮಾರಕ ಮಿತ್ರಮಂಡಳಿ,
ನಂದಳಿಕೆ, ಕಾರ್ಕಳ ತಾಲೂಕು 576126
ದ.ಕ.

ಪ್ರಿಯರೆ,

ಉದಯವಾಣಿ ವಿಂಶತಿ ಸಂಬಂಧಿತ ದ.ಕ. ಜಿಲ್ಲೆಯ ಅತ್ಯುತ್ತಮ ಯುವಕ ಮಂಡಲ ಪ್ರಶಸ್ತಿಗೆ ನಿಮ್ಮ ಸಂಘಟನೆಯನ್ನು ಆಯ್ಕೆಮಾಡಿಕೊಳ್ಳಲಾಗಿದೆ. ಅಭಿನಂದನೆಗಳು. ಪ್ರಶಸ್ತಿ ಮತ್ತು ಪ್ರಶಸ್ತಿಪತ್ರವನ್ನು ಶೀಘ್ರ ಕಳುಹಿಸಿ ಕೊಡಲಾಗುವುದೆಂದು ತಿಳಿಸಲು ಹರ್ಷಿಸುತ್ತೇವೆ.

ಈ ಪ್ರಶಸ್ತಿಯನ್ನು ನೀವು ಯುವಕ ಮಂಡಲ ಕಾಟಿಪಳ್ಳ- ಕೃಷ್ಣಾಪುರ ಅವರೊಂದಿಗೆ ಹಂಚಿಕೊಂಡಿದ್ದೀರಿ.

1995 ಉದಯವಾಣಿಯ ಬೆಳ್ಳಿಹಬ್ಬದ ವರ್ಷ. ಆವರೆಗೆಯೂ ಯುವ ಸಂಘಟನೆ ಸ್ಪರ್ಧೆಯನ್ನು ವಿಸ್ತರಿಸುತ್ತಿದ್ದೇವೆ. ಈಗಾಗಲೇ ಪ್ರಶಸ್ತಿ ವಿಜೇತ ಸಂಘಟನೆಯಾಗಿರುವುದರಿಂದ ಮುಂದಿನ ಸ್ಪರ್ಧೆಯಲ್ಲಿ ನೀವು ಭಾಗವಹಿಸುವಂತಿಲ್ಲ. ಆದರೆ, ಇತರ ಸಂಘಟನೆಗಳಿಗೆ ಉತ್ಸಾಹ ತುಂಬಲು, ಮಾರ್ಗದರ್ಶನ ನೀಡಲು ನೀವು ಮುಂದೆ ಬರಬೇಕು ಹಾಗೂ ಮುಂದಿನ ಸ್ಪರ್ಧೆಯ ತೀರ್ಪುಗಾರರಲ್ಲೊಬ್ಬರಾಗಿ ನಿಮ್ಮ ಸಂಘಟನೆಯ ಪ್ರತಿನಿಧಿಗಳೊಬ್ಬರು ಬಂದು ಸಹಕರಿಸಬೇಕು ಎಂದು ಮನವಿ ಮಾಡುತ್ತೇವೆ. ಅದರ ವಿವರಗಳನ್ನು ಕ್ರಮೇಣ ತಿಳಿಸಲಿದ್ದೇವೆ.

ಈ ಸಲದ ಸ್ಪರ್ಧೆಯ ಫಲಿತಾಂಶ, ವಿಜೇತ ಸಂಘಟನೆಗಳ ಪರಿಚಯ ಇರುವ ಪುರವಣಿಯನ್ನು ಉದಯವಾಣಿ ಶೀಘ್ರದಲ್ಲೇ ಪ್ರಕಟಿಸಲಿದೆ.

ನೀವು ಎದುರಿಟ್ಟುಕೊಂಡಿರುವ ಚಟುವಟಿಕೆಗಳನ್ನೆಲ್ಲ ಫಲಪ್ರದವಾಗಿ ನಡೆಸಿಕೊಂಡು ಬರುವಿರೆಂದು ಹಾರೈಸುತ್ತಾ

ವಿಶ್ವಾಸಪೂರ್ವಕ

ಟಿ. ಮೋಹನದಾಸ ಪೈ

ಮಣಿಪಾಲ ಪ್ರಿಂಟರ್ಸ್ ಎಂಡ್ ಪಬ್ಲಿಷರ್ಸ್ ಲಿಮಿಟೆಡ್

ಯುವ ಸಂಘಟನೆಗಳನ್ನು ಗುರುತಿಸಿ, ಪರಿಚಯಿಸಿ, ಪ್ರೋತ್ಸಾಹಿಸುವ ವಿನೂತನ ಯೋಜನೆಯೊಂದನ್ನು ಪ್ರಕಟಿಸಿತು. ... ಅವರೇನು ಮಾಡಬಹುದೆಂಬ ಸಲಹೆಯನ್ನು ಕೊಡಲಾಯಿತು. ಅವು ಸ್ಪರ್ಧೆಯ ಗತಿಗಳಲ್ಲಿ ಸಮಾಜದ ಸಮಸ್ತ ಅಭಿ ... ವಿಂಶತಿ ಯುವ ಸಂಘಟನಾ ... ವಿನಾಯಿತೆಂದು ಹಲವು ಕಡೆಗಳಿಂದ ಪ್ರಶ್ನೆಗಳು,

ಜಿಲ್ಲೆಯ ಗ್ರಾಮೀಣ ಸೌಂದರ್ಯ ಆಹೋಘವಾದುದು. ಕಾವ್ಯಸ್ಫೂರ್ತಿ ಪಡಿಸುವುದರೊಂದಿಗೆ ಕೈಗೆ ಕೆಲಸ. ಮನಸ್ಸಿಗೆ ಹಿತ ಕೊಡುವ ಮಂತ್ರಶಕ್ತಿ ಅದರಲ್ಲಿದೆ.

**ವಿಂಶತಿ ಸ್ಪರ್ಧೆ**

"ಅದುವೇ ಉದಯವಾಣಿಯ ವಿಂಶತಿ ಅಂಗವಾದ ದ.ಕ. ಜಿಲ್ಲೆಯ ಅತ್ಯುತ್ತಮ ಯುವ ಸಂಘಟನೆಗಳಿಗೆ ಬಹುಮಾನ ಯೋಜನೆ."

ಈ ಉದ್ದೇಶದಿಂದ 1990-91ರ ಸಾಲಿನಲ್ಲಿ ಯೋಜನೆಯಲ್ಲಿ ಪಾಲುಗೊಂಡ ಸಂಘಟನೆಗಳ ಚಟುವಟಿಕೆ-ವೃದ್ಧಿಯ ಗಮನವಿಡುವಂತೆ ಸೂಚಿಸಲಾಗಿತ್ತು.

ಈ ಕರೆಗೆ ಪ್ರತಿಸ್ಪಂದಿಸಿ ತಮ್ಮ ತಮ್ಮ ಸಂಕ್ಷಿಪ್ತ ಹಿನ್ನೆಲೆ, ಪರಿಚಯದೊಂದಿಗೆ, ಸ್ಪರ್ಧೆಯಲ್ಲಿ ಭಾಗವಹಿಸುವ ಇಂಗಿತ ಪತ್ರವನ್ನು ಕಳಿಸಿಕೊಟ್ಟ ಸಂಘಟನೆಗಳ ಸಂಖ್ಯೆ 21. ಸ್ಪರ್ಧಾ ವರ್ಷದಲ್ಲಿ ತಾವು ಮಾಡಿ ತೋರಿಸಿ... ಸಂದೇಹಗಳು ಕೇಳಿ ಬಂದವು ಬರುತ್ತಲೂ ಇದ್ದವು. ಆದರೂ ಉದಯವಾಣಿ ಪ್ರತಿಕ್ರಿಯಿಸಲಿಲ್ಲ.

ಆಶ್ಚರ್ಯವಾಯಿತೇನು? ಉದಯವಾಣಿ ಕೊಟ್ಟ ಮಾತು ತಪ್ಪಿದ್ದಕ್ಕೊಂದು ಒಳ ಉದ್ದೇಶವಿತ್ತು. ಜಿಲ್ಲೆಯ ಅತ್ಯುತ್ತಮ ಯುವ ಸಂಘಟನೆಗಳನ್ನು ಗುರುತಿಸಿ,

> ಕುಗ್ರಾಮಗಳು ಅಭ್ಯುದಯದತ್ತ ಕಾಲಿಟ್ಟ ಗತಿ ಅವಲೋಕಿಸಿದಾಗ ಯುವ ಜನತೆ ಸಂಘಟಿತವಾದೆಡೆಗಳಲ್ಲಿ ಪ್ರಗತಿಯ ವೇಗ ನಿಚ್ಚಳವಾಗಿತ್ತು.
> ಯುವ ಚಟುವಟಿಕೆ ಕೇವಲ ಪ್ರಶಸ್ತಿ, ಪ್ರಶಂಸೆಗಳಿಗಾಗಿ ಅಲ್ಲ; ಅದು ನಮ್ಮ ಕರ್ತವ್ಯ, ಸಮಾಜದ ಋಣ ಎಂಬ ಅರ್ಪಣಾ ಮನೋಭಾವವಿದ್ದಾಗಲೇ ಪರಿಣಾಮ ಅದ್ಭುತ.

ಸಾಧನೆಗಳನ್ನು ಪರಿಶೀಲನೆ ನಡೆಸಿ, ಅದರ ಆಧಾರದಲ್ಲಿ ಪ್ರಶಸ್ತಿಗೆ ಆಯ್ಕೆ ಮಾಡುವ ಮಾರ್ಗ ಸೂತ್ರವನ್ನು 1990ರ ಫೆಬ್ರವರಿ-ಮಾರ್ಚ್ ತಿಂಗಳುಗಳಲ್ಲಿ ಎರಡು ಬಾರಿ ಜಾಹೀರಾತುಗಳ ಮುಖಾಂತರ ಪ್ರಚಾರ ಮಾಡಲಾಯಿತು. ಪ್ರಶಸ್ತಿ ಯೋಜನೆಯಲ್ಲಿ ಪಾಲುಗೊಳ್ಳಲು ಜಿಲ್ಲೆಯ ಯುವ ಸಂಘಟನೆಗಳಿಗೆ ಆದೊಂದು ಬಹಿರಂಗ ಆಹ್ವಾನವಾಗಿತ್ತು.

ಲಿರುವ ಚಟುವಟಿಕೆಗಳನ್ನು ಜೊತೆಯಲ್ಲಿರಿಸಿ, ಭರವಸೆಯನ್ನೂ ಕೊಟ್ಟದ್ದವು ಬಹುತೇಕ ಸಂಸ್ಥೆಗಳು.

ವರ್ಷಾಂತ್ಯದ ಬಳಿಕ, ಸ್ಪರ್ಧೆಯಲ್ಲಿ ಭಾಗವಹಿಸಿದ ಎಲ್ಲ ಸಂಘಟನೆಗಳ ಸಮಗ್ರ ಚಟುವಟಿಕೆಗಳನ್ನು ಪರಿಶೀಲಿಸಿ ಅತ್ಯುತ್ತಮ ಸಂಘಟನೆ ಪ್ರಶಸ್ತಿ ಯಾರಿಗೆಂಬುದನ್ನು ನಿರ್ಧರಿಸಲಾಗುವುದೆಂದು ಉದಯವಾಣಿ ಭರವಸೆ ಇತ್ತಿತ್ತು.

ಆದರೆ ಉದಯವಾಣಿ ಮಾತು ...

ಪ್ರೋತ್ಸಾಹಿಸಬೇಕೆಂಬ ಮೂಲ ಉದ್ದೇಶಕ್ಕೆ ಆಧಾರವೇ ಆದಾಗಿತ್ತು. ಅದೇನೆಂದರೆ ಯುವ ಚಟುವಟಿಕೆ ನಿಂತ ನೀರಾಗಿರಬಾರದು. ಬಾಹ್ಯ ಒತ್ತಾಯದಿಂದಾಗಿ ಸೀಮಿತವಾಗಿ ನಡೆಯುವಂತಿರಬಾರದು. ನಿರಂತರವಾಗಿ ಕಾಲಧರ್ಮಕ್ಕೆ ಹೊಂದಿಕೊಂಡು ಮುನ್ನಡೆಯುತ್ತಿರಬೇಕು. ಅಂತಃಸ್ಫೂರ್ತಿಯ ಚಟುವಟಿಕೆ ... 

ಅನುಬಂಧ - 4



# ಕಲ್ಲಟ್ಟೆ ಫ್ರೆಂಡ್ಸ್ ಪಡುಬಿದ್ರಿ

ಪ್ರಾಥಮಿಕ ಆರೋಗ್ಯ ಕೇಂದ್ರದ ಬಳಿ



ದಿನಾಂಕ : 01.01.2010



## ಸನ್ಮಾನ ಪತ್ರ

ಜನನಿ ಜನ್ಮ ಭೂಮಿಶ್ಚ ಸ್ವರ್ಗಾದಪಿ ಗರೀಯಸೀ

ಎಂಬ ವೇದೋಕ್ತಿ, ತಮ್ಮ ಜೀವನದಲ್ಲಿ ಅಳವಡಿಸಿದ ಶ್ರೀಯುತರು, ತಮ್ಮ ಬಾಲ್ಯದಿಂದಲೇ ಮಹಾತ್ಮಗಾಂಧಿಯವರ ನಡೆನುಡಿಗಳಿಂದ ಪ್ರೇರಿತರಾಗಿ ಸ್ವಾತಂತ್ರ್ಯ ಹೋರಾಟಕ್ಕೆ ಧುಮುಕಿದರು.

ರಾಷ್ಟ್ರೀಯ ಕಾಂಗ್ರೇಸ್ ಸದಸ್ಯರಾಗಿ, ವೃತ್ತಿಯಲ್ಲಿ ಅಧ್ಯಾಪಕರಾಗಿದ್ದರೂ ಕೂಡಾ, ದೇಶ ಸೇವೆಯ ದೃಷ್ಟಿಯಲ್ಲಿ, ಕ್ವಿಟ್ ಇಂಡಿಯಾ ಚಳುವಳಿ, ಉಪ್ಪಿನ ಸತ್ಯಾಗ್ರಹದಲ್ಲಿ ಭಾಗಿಯಾಗಿ ಓರ್ವ ಕ್ರಿಯಾಶೀಲ ದೇಶಭಕ್ತರೆನಿಸಿಕೊಂಡಂತವರು.

1915ರಲ್ಲಿ ಕಾಪುವಿನ ಮಲ್ಲಾರು ಗ್ರಾಮದಲ್ಲಿ ದಬುಲು ಮುಖಾರಿ ಮತ್ತು ಅಕ್ಕಮ್ಮ ದಂಪತಿಗಳ ಮೊದಲನೆಯ ಮಗನಾಗಿ ಜನಿಸಿ, ಹುಟ್ಟಿದ ಭೂಮಿಯ ಕೀರ್ತಿಯನ್ನು ಬೆಳಗಿಸಿದ, ಸ್ವಾತಂತ್ರ್ಯ ಹೋರಾಟದ ಇತಿಹಾಸದಲ್ಲಿ ತನ್ನತನವನ್ನು ಉಳಿಸಿದ ಹಿರಿಯ, ಇಂದಿಗೆ ಈ ಪರಿಸರದ ಅಪ್ಪಟ ಗಾಂಧೀವಾದಿ.

ಇಂತಹ ಅಮೂಲ್ಯ ರತ್ನ ಹಿರಿಯ ಸ್ವಾತಂತ್ರ್ಯ ಸೇನಾನಿ, ಕಾಪು ಮಲ್ಲಾರು ಕೆ. ಬಾಬು ಮಾಸ್ತರ್ ಇವರ ದೇಶಸೇವೆಯನ್ನು ಸ್ಮರಿಸಿಕೊಂಡು, ಕಲ್ಲಟ್ಟೆ ಫ್ರೆಂಡ್ಸ್ ಪಡುಬಿದ್ರಿ ಇದರ 13ನೇ ವಾರ್ಷಿಕೋತ್ಸವದ ಸಂದರ್ಭದಲ್ಲಿ ಗೌರವಾದರಗಳಿಂದ ಸನ್ಮಾನಿಸಿ ಅಭಿನಂದಿಸಲು ಸಂತೋಷ ಪಡುತ್ತಿದ್ದೇವೆ.

| | | |
|---|---|---|
| ಪಿ. ಪ್ರಸನ್ನ ಕುಮಾರ್<br>ಅಧ್ಯಕ್ಷರು | ಸುರೇಶ್ ಪಡುಬಿದ್ರಿ<br>ಕಾರ್ಯದರ್ಶಿ | ಪ್ರಕಾಶ್ ಸಾಲ್ಯಾನ್<br>ಕೋಶಾಧಿಕಾರಿ |

ಹಾಗೂ ಸರ್ವ ಸದಸ್ಯರು

ಕಲ್ಲಟ್ಟೆ ಫ್ರೆಂಡ್ಸ್ ಪಡುಬಿದ್ರಿ




ಕಥೆ

✍: ತಾರಾನಾಥ್ ಜೆ. ಮೇಸ್ತ, ಶಿರೂರು

**ಸಾ**ಧನ ಪ್ರಿಯ... ಒಬ್ಬ ಯುವ ಬರಹಗಾರ,

ಸಾಹಿತ್ಯದ ಹಲವು ಪ್ರಕಾರಗಳಾದ ಕಥೆ, ಕವನ, ಹನಿಗವನ, ಕಾದಂಬರಿ, ಅಂಕಣಬರಹ ಹೀಗೆ ಎಲ್ಲದರಲ್ಲಿಯೂ ಕೃಷಿ ಮಾಡಿದ ಪ್ರತಿಭಾವಂತ ಯುವ ಸಾಹಿತಿ. ಈತನ ಬಹುಮುಖ ಪ್ರತಿಭೆಯನ್ನು ಗುರುತಿಸಿ, ಸಾಹಿತ್ಯಾತ್ಮಕ ಸಾಂಸ್ಕೃತಿಕ ಸಮಾಜಮುಖಿ ಚಿಂತನೆಯ ಸಂಘಸಂಸ್ಥೆಗಳು ಸನ್ಮಾನಿಸಿವೆ. ಸಾಧನಪ್ರಿಯನ ಮೂಲ ಹೆಸರು ಅಮರ್. ಬದುಕಿನಲ್ಲಿ ಏನಾದರೂ ಸಾಧನೆ ಮಾಡಬೇಕೆನ್ನುವ ಛಲ ಹೊಂದಿದ ವ್ಯಕ್ತಿ. ಹಾಗಾಗಿ ಆತ ಸಾಧನೆಯನ್ನು ಹಿಂಬಾಲಿಸುತ್ತಿದ್ದ. ಸಾಧನೆಗೆ ದಾಸನಾಗಿದ್ದ. ಆದ ಕಾರಣ ತಮ್ಮ ಶುಭನಾಮವಾಗಿ 'ಸಾಧನಪ್ರಿಯ' ಎನ್ನುವ ಕಾವ್ಯನಾಮ ಇಟ್ಟುಕೊಂಡು ಸಾಹಿತ್ಯ ಕೃಷಿ ಮಾಡುತ್ತಿದ್ದ. ಆತ ಬರೆದ ಅದೆಷ್ಟೋ ಕೃತಿಗಳು ಪ್ರಶಸ್ತಿಪಡೆದುಕೊಂಡಿವೆ. ಹಾಗಾಗಿ ಯುವ ಓದುಗರಿಂದ ಹಿಡಿದು, ಹಿರಿಯ ಓದುಗರ ತನಕ, ಆತನ ಬರಹಗಳನ್ನು ಮುದ್ರಣ ಮಾಧ್ಯಮದಲ್ಲಿ ನಿರೀಕ್ಷಿಸುತ್ತಿದ್ದರು. ಸಾಧನಪ್ರಿಯನ ಲೇಖನಿಯಿಂದ ಮೂಡಿಬಂದ ಹಸ್ತಪ್ರತಿಗಳ ಪ್ರಕಟಿಸಲು ಪ್ರಕಾಶಕರು ಹಕ್ಕುಗಳ ಪಡೆಯಲು ಮನೆಯ ಕದ ತಟ್ಟುತ್ತಿದ್ದರು. ಅಷ್ಟರ ಮಟ್ಟಿಗೆ ಸಾಧನಪ್ರಿಯನ ಬರವಣಿಗೆಗಳು ಮೌಲ್ಯವನ್ನು ಪಡೆದುಕೊಂಡಿದ್ದವು. ಕನ್ನಡ ಭಾಷೆ ಅಲ್ಲದೆ... ದೇಶದ ಎಲ್ಲಾ ಭಾಷೆಗಳಿಗೆ ಸಾಧನಪ್ರಿಯನ ಕೃತಿಗಳು ಅನುವಾದಗೊಂಡಿದ್ದವು. ಹಾಗೂ ಎಲ್ಲಾ ಭಾಷೆಗಳಲ್ಲಿಯೂ ಓದುಗರಿಂದ ಬೇಡಿಕೆ ಹೆಚ್ಚಾಗಿ ಮರುಮುದ್ರಣ ಕಾಣುತ್ತಿದ್ದವು.

ಸಾಧನಪ್ರಿಯ ತನ್ನ ವೃತ್ತಿಬಿಡುವಿನ ಬಹುತೇಕ ಸಮಯವನ್ನು ಕಟ್ಟೆ ಹರಟೆಗೆ ವಿನಿಯೋಗಗೊಳಿಸದೆ ನಿತ್ಯಾನಂದ ನಗರದ ವಾಚನಾಲಯದಲ್ಲಿ ನಿಯತಕಾಲಿಕ ಪತ್ರಿಕೆ, ಮೇರು ಸಾಹಿತಿಗಳ ಗ್ರಂಥಗಳ ಓದಿನಲ್ಲಿ ಮಗ್ನನಾಗುತ್ತಿದ್ದ, ವಾಚನಾಲಯ ಸಾಧನಪ್ರಿಯನಿಗೆ ಅಧ್ಯಯನ ಕೇಂದ್ರವಾಗಿ ಜ್ಞಾನದ ವಿಕಾಸಕ್ಕೆ ಸಹಕಾರಿಯಾಗಿತ್ತು. ಆತನ... ವಾಚನಾಲಯಕ್ಕೆ ನಿತ್ಯದ ಬರುವಿಕೆಯನ್ನು ಗಮನಿಸುತ್ತಿದ್ದಳು ಮಧುರ. ಮಧುರ ವಾಚನಾಲಯದ ನೋಂದಾಯಿತ ಓದುಗ ಸದಸ್ಯರಿಗೆ ಪುಸ್ತಕ ಎರವಲು ಕೊಡುವ ವಿಭಾಗದಲ್ಲಿ ಕೆಲಸ ನಿರ್ವಹಿಸುವ ಗ್ರಂಥಪಾಲಕಿ, ಮಧುರಳಿಗೆ ಬಾಲ್ಯದಿಂದಲೂ ಓದುವ ಹವ್ಯಾಸ, ತನ್ನ ಪದವಿ ಶಿಕ್ಷಣ ಮುಗಿಸಿದ ನಂತರ ಅವಳಿಗೆ ಉದ್ಯೋಗ ದೊರಕಿದ್ದು, ಕೇಂದ್ರ ಗ್ರಂಥಾಲಯದಲ್ಲಿ ಅದು ಅವಳಿಗೆ ಮನಸ್ಸಿಗೆ ಸಂತೋಷಕೊಟ್ಟಿತು. ಅಲ್ಲಿ... ಕನ್ನಡ ಸಾಹಿತ್ಯ ದಿಗ್ಗಜರುಗಳ ಗ್ರಂಥಗಳ ಓದಿ... ಬರಹಗಾರರ ಬಗ್ಗೆ ತಿಳಿದುಕೊಂಡಿದ್ದಳು. ಹಾಗೆಯೇ ಮಧುರ... ಸಾಧನಪ್ರಿಯ ಯುವ ಸಾಹಿತಿಯ ತುಂಬಾ ಕೃತಿಗಳನ್ನು ಓದಿದ್ದಾಳೆ. ಅವಳಿಗೆ ಅವನ ಕೃತಿಗಳು ಮೆಚ್ಚುಗೆಗೊಂಡಿದ್ದವು. ಹೀಗಿರುವಾಗ ನವನವೀನ ಪುಸ್ತಕಗಳ ವಾಚನಾಲಯದ ಕಪಾಟುಗಳಲ್ಲಿ ಹುಡುಕಲು ಸಾಧನಪ್ರಿಯ, ಗ್ರಂಥಪಾಲಕಿ ಮಧುರಳ ನೆರವನ್ನು ಪಡೆಯುತ್ತಿದ್ದ. ಮಧುರ ಅವನು ಆಯ್ಕೆ ಮಾಡಿದ ಪುಸ್ತಕ ಹುಡುಕಾಡಿ ಕೊಡುತ್ತಿದ್ದಳು. ಹೀಗೆ ಅವರಿಬ್ಬರ ಪರಿಚಯ ಗಾಢವಾಗಿತ್ತು. ಸಾಧನಪ್ರಿಯ ವಾಚನಾಲಯಕ್ಕೆ ಬಾರದ ದಿನದಲ್ಲಿ ಮಧುರಗಳಿಗೆ ಏನೋ ಕಳೆದುಕೊಂಡ ಅನುಭವವಾಗುತ್ತಿತ್ತು ಕರ್ತವ್ಯದಲ್ಲಿ ಕರ್ತವ್ಯಪ್ರಜ್ಞೆ ಕಳೆದುಕೊಳ್ಳುತ್ತಿದ್ದಳು... ಕಾರಣ ಇಷ್ಟೆ. ಮಧುರ... ಸಾಧನಪ್ರಿಯರ ಅಭಿಮಾನಿ ಮಾತ್ರ ಆಗಿರದೆ ಆತನ ಹೃದಯ ಆಂತರ್ಯದಲ್ಲೆ ಪ್ರೀತಿಸುತ್ತಿದ್ದಳು. ಆದರೆ ಮನಸ್ಸಿನ ಭಾವನೆಯನ್ನು ಅವಳಿಗೆ ಸಾಧನಪ್ರಿಯರಲ್ಲಿ ಅಭಿವ್ಯಕ್ತಪಡಿಸಲಾಗಲಿಲ್ಲ.ಕಾರಣ... ಪ್ರೇಮ ಭಿಕ್ಷೆ ನಿರಾಕರಿಸುತ್ತಾರೆ ಎನ್ನುವ ಭಯ ಮನಸ್ಸಿನ ಮೂಲೆಯಲ್ಲಿ ಕಾಡುತ್ತಿತ್ತು. ಆದರೂ ಮಧುರ ಛಲ ಬಿಡದೆ ಧೈರ್ಯಶಾಲಿ ತಾನು ನಂಬಿದ ದೇವರುಗಳಿಗೆ ಪ್ರಾರ್ಥಿಸಿ, ಸಾಧನಪ್ರಿಯನಲ್ಲಿ ತನ್ನ ಮನದಾಸೆಯನ್ನು ಅಭಿವ್ಯಕ್ತಿಪಡಿಸಿಯೇ ಬಿಟ್ಟಳು ಮಧುರ. ಅವಳ ಮನದಾಸೆಗೆ ಸಾಧನಪ್ರಿಯನಿಂದ ಹಸಿರು ನಿಶಾನೆಯ ಉತ್ತರ ದೊರೆಯಿತು.

ನಿತ್ಯಾನಂದ ನಗರದ ಹೃದಯ ಭಾಗದಲ್ಲಿರುವುದು ಎರಡಂತಸ್ತಿನ ವಾಚನಾಲಯ. ಕಟ್ಟಡದ ಮೊದಲ ಅಂತಸ್ತಿನಲ್ಲಿ ಗ್ರಂಥ ವಿಭಾಗ ಮತ್ತು ನೋಂದಾಯಿತ ಓದುಗ ಸದಸ್ಯರಿಗೆ ಪುಸ್ತಕ ನಿಯಮಾನುಸಾರ ಎರವಲು ಕೊಡುವ ಕಾರ್ಯ ನಡೆಯುತ್ತದೆ. ಆ ಕಾರ್ಯನಿರ್ವಹಣೆಯ ಜವಾಬ್ದಾರಿ ಮಧುರಳದ್ದು. ವಾಚನಾಲಯದ ಎರಡನೇ ಅಂತಸ್ತಿನಲ್ಲಿ ಸ್ಪರ್ಧಾತ್ಮಕ ಪರೀಕ್ಷೆಗಳ ಪುಸ್ತಕ ವಿಭಾಗ ಮತ್ತು ನಿಯತಕಾಲಿಕ

## ೭

ಪತ್ರಿಕೆಗಳ ಓದುಗರ ವಿಭಾಗ. ಯಾವತ್ತೂ ಇಲ್ಲಿ ಓದುಗರು ತುಂಬಿ ಹೋಗಿರುತ್ತಾರೆ. ಈ ಎಲ್ಲಾ ವಿಭಾಗದ ಉಸ್ತುವಾರಿ ಪ್ರೇಮಳದ್ದು. ಆಕೆಯದ್ದು ಸಾಧಾರಣ ಇಪ್ಪತ್ತರ ಹರೆಯದ ಪ್ರಾಯ. ಅಂದಾಜು ಐದುಕಾಲು ಅಡಿ ಎತ್ತರ, ಸಪೂರವೂ ಅಲ್ಲದ ದಪ್ಪವೂ ಅಲ್ಲದ ಸಾಧಾರಣ ಮೈಕಟ್ಟು, ಸದಾ ನಗುವಿನಿಂದ ತನ್ನ ಮುಖ ಸೌಂದರ್ಯದ ಅಂದವನ್ನು ಹೆಚ್ಚಿಸಿಕೊಂಡವಳು ಪ್ರೇಮ. ಕೆಲಸದ ವಿಚಾರದಲ್ಲಿ ಚುರುಕಿನ ಹುಡುಗಿ. ತನ್ನ ಕರ್ತವ್ಯಧರ್ಮಕ್ಕೆ ಚ್ಯುತಿ ಬಾರದ ರೀತಿಯಲ್ಲಿ ಕಾರ್ಯ ನಿರ್ವಹಿಸುತ್ತಿದ್ದಳು. ವಾಚನಾಲಯದ ಸ್ವಚ್ಛತೆ, ಓದುಗರ ಬೇಡಿಕೆಗಳಿಗೆ ಸ್ಪಂದನೆ, ಓದುಗರಿಗೆ ಕಾಡುಹರಟೆ, ಮೊಬೈಲ್‌ನಲ್ಲಿ ಮಾತುಕತೆಗೆ ಅವಕಾಶಕೊಡದೆ ನಿಶ್ಶಬ್ದ ವಾತಾವರಣ ನಿರ್ಮಿಸಿ, ಓದುಗರಿಗೆ ಓದಲು ಸಹಕರಿಸುತ್ತಿದ್ದಳು ಪ್ರೇಮ. ವಾಚನಾಲಯದಲ್ಲಿ ಅಳವಡಿಸಿದ ಟೇಬಲ್‌ಗಳಲ್ಲಿ ನಿಯತಕಾಲಿಕಗಳ ಜೋಡಿಸುವುದು ಚೆಲ್ಲಾಪಿಲ್ಲಿಯಾಗುವ ಕುರ್ಚಿಗಳನ್ನು ಆಗಿಂದಾಗಲೇ ಸರಿಯಾಗಿ ಯಥಾಸ್ಥಿತಿಯಲ್ಲಿಟ್ಟು, ತನ್ನ ಕರ್ತವ್ಯ ಪ್ರಜ್ಞೆ ಮೆರೆಯುತ್ತಿದ್ದಳು ಪ್ರೇಮ. ಇವಳ ಕಾರ್ಯವೈಖರಿ ಕಂಡು ವಾಚನಾಲಯದ ಮೇಲಾಧಿಕಾರಿಗಳ ಪ್ರಶಂಸೆ ಹಾಗೂ ಓದುಗರ ಸಮೂಹದ ಶಹಭಾಸ್‌ಗಿರಿಗೂ ಪಾತ್ರಳಾಗಿದ್ದಳು ಪ್ರೇಮ.

ಭಾನುವಾರದ ದಿನ ಮುಂಜಾನೆ ವಾಚನಾಲಯದ ಬಾಗಿಲು ತೆರೆದ ಪ್ರೇಮ ಪೇಪರ್ ಹುಡುಗ ಕಿಟಕಿ ಸಂಧಿಯಿಂದ ತೂರಿದ ಪತ್ರಿಕೆಗಳ ಒಟ್ಟುಗೂಡಿಸಿ, ಆಯಾಯ ಪತ್ರಿಕೆಗಳಿಗೆ ಚೆಲ್ಲಾಪಿಲ್ಲಿಯಾಗದಂತೆ ದಾರಕಟ್ಟಿ, ಇಲಾಖೆಯ ನಾಮಮುದ್ರೆಯನ್ನು ಒತ್ತಿ, ಪತ್ರಿಕಾ ಬೋರ್ಡ್‌ಗೆ ಪತ್ರಿಕೆಯನ್ನು ಜೋಡಿಸಿದ್ದಳು ಪ್ರೇಮ. ತದನಂತರ ಓದುಗರಿಗೆ ಜಲದಾಹ ತೀರಿಸಿಕೊಳ್ಳಲು ಶುದ್ಧೀಕರಿಸಿದ ಕುಡಿಯುವ ನೀರನ್ನು ಡ್ರಮ್‌ನಲ್ಲಿ ವ್ಯವಸ್ಥೆಗೊಳಿಸಿ, ಓದುಗರ ದಾಖಲಾತಿ ಪುಸ್ತಕದಲ್ಲಿ ಆದಿನದ ದಿನಾಂಕವನ್ನು ಬರೆದು, ಮೊದಲನೆಯದಾಗಿ ತಮ್ಮ ಹೆಸರು ಸಹಿಯನ್ನು ಹಾಕಿ ತನ್ನ ಇಷ್ಟದ ದೈನಿಕ ಪತ್ರಿಕೆಯನ್ನು ಓದಲು ಮುಂದಾದಳು. ಎಲ್ಲಾ ಪುಟಗಳ ಕಣ್ಣಾಡಿಸಿ... ವಾರದ ಸಾಪ್ತಾಹಿಕ ವಿಶೇಷ ಪುರವಣಿಯಲ್ಲಿ ಪ್ರೇಮ ಓದಲು ಮುಂದಾದಾಗ, ಅವಳಿಗೆ ತಟ್ಟನೆ ಕಣ್ಣಿಗೆ ಬಿದ್ದಿದ್ದು, "ಮನಸ್ಸಿನ ಕೊಳೆ ತೊಳೆದಾಗ..." ತಲೆಬರಹದ ಕಥೆ. ಕಥೆಯ ಕರ್ತೃವಿನ ಹೆಸರು ತಡಕಾಡಿದಾಗ ಪ್ರೇಮಳಿಗೆ ಕಥೆಯ ಮುಕ್ತಾಯದ ತಳಭಾಗದಲ್ಲಿ ಕಂಡುಬಂತು. ಆ ಹೆಸರು ನೋಡಿ ರೋಮಾಂಚನಗೊಂಡಳು ಪ್ರೇಮ. ಕಥೆಯ ಲೇಖಕ ಸಾಧನಪ್ರಿಯನಾಗಿದ್ದ. ಅವನ ಬರಹಗಳ ಇಷ್ಟಪಡುವವರ ಸಾಲಿನಲ್ಲಿ ಪ್ರೇಮಳು ಕೂಡಾ ಒಬ್ಬಳಾಗಿದ್ದಳು. ಹೆಸರಿನ ತಳಭಾಗದಲ್ಲಿ ಸಾಧನಪ್ರಿಯನ ಚರದೂರವಾಣಿ ಸಂಖ್ಯೆ ಹಾಕಲಾಗಿತ್ತು. ಪ್ರೇಮ ಆ ಸಂಖ್ಯೆಯನ್ನು ತನ್ನ ಮೊಬೈಲ್‌ನಲ್ಲಿ ನೋಂದಾಯಿಸಿಕೊಂಡಳು. ನಂತರ ಸಾಧನಪ್ರಿಯ ವಿರಚಿತ ಕಥೆ "ಮನಸ್ಸಿನ ಕೊಳೆ ತೊಳೆದಾಗ..." ಓದಲು ಮುಂದಾದಳು.

ಮಧುರ ಮತ್ತು ಪ್ರೇಮಳು ಬೇರೆ ಬೇರೆ ಊರಿನವರು. ಉದ್ಯೋಗಕ್ಕೆ ವಾಚನಾಲಯ ಇಲಾಖೆ ಸೇರಿದ ತರುವಾಯ ಒಬ್ಬರಿಗೊಬ್ಬರು ಪರಿಚಿತರಾದವರು. ಅವರಲ್ಲಿ ಗಾಢ ಸ್ನೇಹದ ಬೆಸುಗೆ ಹೊಂದಿ ಈಗ ವರ್ಷಗಳೇ ಕಳೆದಿವೆ. ಒಬ್ಬರನ್ನೊಬ್ಬರು ಬಹಳವಾಗಿ ಅರ್ಥ ಮಾಡಿಕೊಂಡಿದ್ದಾರೆ. ರಜಾದಿನಗಳಲ್ಲಿ ಜತೆಗೂಡಿ ಪಾರ್ಕ್, ಹೋಟೇಲು, ದೇವಸ್ಥಾನ ಹೀಗೆ ಅವರ ತಿರುಗಾಟ ನಡೆಯುತ್ತಿತ್ತು. ನೋಡುಗರು ಅವರ ಸ್ನೇಹ ನೋಡಿ ಜೋಡಿಹಕ್ಕಿಯೆಂದು ಕರೆಯುತ್ತಿದ್ದರು. ಅಷ್ಟರ ಮಟ್ಟಿಗೆ ಅವರ ಸ್ನೇಹ ಜನಪ್ರಚಲಿತವಾಗಿತ್ತು. ಹೀಗಿರುವಾಗ ಒಂದು ದಿನ ಪ್ರೇಮ, ಮಧುರ... ನಿನ್ನ ಹತ್ತಿರ ಮುಖ್ಯ ವಿಚಾರ ಹೇಳುವುದುಂಟು... ಆ ವಿಚಾರ ಪ್ರಸ್ತಾಪಕ್ಕೆ ಇದು ಯೋಗ್ಯ ಸ್ಥಳ ಅಲ್ಲ...! ಮಾತುಕತೆಗೆ ಸಂಜೆ ಕಡಲ ಕಿನಾರೆ ಹತ್ತಿರ ಹೋಗೋಣ. ನಿನ್ನಲ್ಲಿ ಆಪ್ತಮಿತ್ರಳಾಗಿ ಹೇಳದ ವಿಚಾರವೊಂದು ನನ್ನ ಹೃದಯದಲ್ಲಿ ಚುಚ್ಚುತ್ತಲೇ ಇದೆ. ಎಂದೂ... ನಾನು ನಿನ್ನಲ್ಲಿ ಮುಚ್ಚುಮರೆಮಾಡದವಳಲ್ಲ...

3



ಆದರೆ ಏಕೋ ಏನೋ... ಈ ವಿಚಾರ ಸಂಕುಚಿತ ಮನೋಭಾವದಿಂದಲೋ ಏನೋ... ಹೃದಯದಲ್ಲಿ ಹೆಪ್ಪುಗಟ್ಟಿದ ಭಾವನೆಯನ್ನು ನಿನ್ನಲ್ಲಿ ಹೇಳಲೇ ಇಲ್ಲ. ದಯವಿಟ್ಟು ಕ್ಷಮಿಸು ಮಧುರ...! ನನ್ನಲ್ಲಿ ಅಪರಾಧಭಾವನೆ ಕಾಡುತ್ತಾ ಉಂಟು... ಹಾಗಾಗಿ ನಿನ್ನಲ್ಲಿ ಹೇಳಿದರೆ ಮನಸ್ಸಿನ ಭಾರ ಕಡಿಮೆಯಾಗಬಹುದು. ಜೊತೆಗೆ ನನ್ನ ನಿರ್ಧಾರಿತ ಪಯಣದ ಹಾದಿಗೆ.. ನಿನ್ನ ಸಲಹೆ ಮಾರ್ಗದರ್ಶನವೂ ಸಿಗಬಹುದು. ಹೀಗೆಂದು ಪ್ರೇಮ ಮಾತು ಮುಗಿಸಿದಾಗ... ಮಧುರ ಆಶ್ಚರ್ಯಗೊಂಡು, ಏನೇ... ಪ್ರೇಮ...! ನನ್ನಲ್ಲಿ ಅಂಥಾ ದೊಡ್ಡ ವಿಷಯ ಬಚ್ಚಿಟ್ಟು ಕೊರಗುತ್ತಿದ್ದೀಯಾ... ಏನೇ ಅದು...? ಅಂಥದೊಂದು ಮನಸ್ಸಿನ ಆಘಾತಕ್ಕೆ ಕೊರಗಿಗೆ ಕಾರಣವಾದ ವಿಚಾರ...! ಇರಲಿ... ಇಲ್ಲಿ ವಿಷಯ ಪ್ರಸ್ತಾಪಕ್ಕೆ ಯೋಗ್ಯಸ್ಥಳ ಅಲ್ಲವೆಂದಾದರೆ ನಿನ್ನ ಆಯ್ಕೆಯ ಕಡಲ ಕಿನಾರೆಯತ್ತ ಹೋಗೋಣವಂತೆ ಎಂದು... ಮಧುರ ಪ್ರೇಮಳಿಗೆ ಧೈರ್ಯ ತುಂಬಿದಳು.

ಸಂಜೆಯ ಸಮಯ... ಪಡುವಣ ದಿಂಗತ... ಭಾನು ಕೆಂಪೇರಿದೆ. ಭಾಸ್ಕರ ಶರಧಿಯ ಉದರ ಸೇರುವ ಕ್ಷಣವನ್ನು ಆನಂದಿಸಲು ನಿಸರ್ಗ ಪ್ರಿಯರು ಆ ಸೊಬಗಿನ ದೃಶ್ಯನೋಡಲು ತಮ್ಮ ನಯನ ನೋಟವನ್ನು ಶರಧಿಯ ಅಂಚಿನತ್ತ ಕೇಂದ್ರೀಕರಿಸಿದ್ದಾರೆ. ಕಡಲ ತಡಿಯ ಮರಳ ರಾಶಿಯಲ್ಲಿ ಮಧುರ... ಪ್ರೇಮ ಕೂತಿದ್ದಾರೆ. ಪ್ರೇಮಳ ಮುಂಗುರುಳು, ಬೀಸುವ ಮುಸ್ಸಂಜೆಯ ಕಡಲ ತಡಿಯ ತಂಗಾಳಿಗೆ ಹಾರುತ್ತಿತ್ತು. ಅದನ್ನು ಗಮನಿಸಿದ ಮಧುರ..., ಪ್ರೇಮಳ... ಹಾರುತ್ತಿರುವ ಕೇಶರಾಶಿಯನ್ನು ಯಥಾಸ್ಥಿತಿಗೆ ಸರಿಪಡಿಸುತ್ತಾ..., ಏನೇ... ಪ್ರೇಮ...! ಮೌನವಾಗಿದ್ದೀಯಾ...! ಮನಸ್ಸಿನೊಳಗೆ ಹೆಪ್ಪುಗಟ್ಟಿದ ವಿಚಾರ ಪ್ರಸ್ತಾಪಪಡಿಸಲು ಇಲ್ಲಿಯವರೆಗೆ ಕರೆತಂದಿದ್ದೀಯಾ... ಆದರೆ ನೀನು ತುಟಿ ಬಿಚ್ಚುತ್ತಿಲ್ಲ...! ವಿಷಯ ಆರಂಭಿಸುವ ಯೋಚನೆಯಲ್ಲಿದ್ದ ಪ್ರೇಮ... ಒಂದು ಕ್ಷಣ ತುಟಿ ತೆರೆದು, ಮಧು... ಎಲ್ಲಿಂದ ಆರಂಭ ಮಾಡಲಿ, ಹೇಗೆ ಹೇಳುವುದಂತ ಆಲೋಚಿಸುತ್ತಿದ್ದೆ. ಏನೇ ಇರಲಿ ಮಧು... ವಿಷಯಕ್ಕೆ ಬರುತ್ತೇನೆ. ನಾನು ಒಬ್ಬ ಸಜ್ಜನ ವ್ಯಕ್ತಿಯನ್ನು ಪ್ರೀತಿಸುತ್ತಿದ್ದೇನೆ. ಪ್ರೀತಿಸುವ ವಿಚಾರ ಆತನ ಗಮನಕ್ಕೆ ಮುಟ್ಟಿಲ್ಲ. ಅವನೊಂದಿಗೆ ಮೊಬೈಲ್‌ನೊಂದಿಗೆ ಮಾತುಕತೆ ನಡೆಸಿದ್ದೇನೆ. ಸಂದೇಶಗಳ ರವಾನಿಸಿದ್ದೇನೆ. ಆದರೆ ಎಲ್ಲಿಯೂ ಪ್ರೀತಿಸುವ ವಿಚಾರ ಅಭಿವ್ಯಕ್ತಪಡಿಸಿಲ್ಲ. ಸಾಹಿತ್ಯ ಕ್ಷೇತ್ರದಲ್ಲಿ ಆತ ಹೆಸರುವಾಸಿಯಾದ್ದರಿಂದ ಅಭಿಮಾನಿಯಾಗಿ ಅಭಿಮಾನ ವ್ಯಕ್ತಪಡಿಸಿದ್ದೇನೆ. ನನಗೆ ಆತ ಹೊಂದಾಣಿಕೆಯ ವರ... ಗೋಧಿ ಮೈಬಣ್ಣ... ಬೊಜ್ಜಿಲ್ಲದ ಎತ್ತರ ದೇಹಕಾಯ, ತುಟಿ ಮೇಲಣ ದಪ್ಪ ಕಪ್ಪು ಮೀಸೆ, ಯಾವಾಗಲೂ ತುಟಿ ಅಂಚಿನಲ್ಲಿ ನಗುವ ಮೂಡಿಸಿ, ಶ್ವೇತದಂತಪಂಕ್ತಿಸಾಲುಗಳ ತೋರ್ಪಡಿಸುತ್ತಿರುವವರು. ಅವರು ಕಣ್ಣಿಗೆ ಕಾಣದ ದಿನಗಳಲ್ಲಿ ಮನಸ್ಸು ಸರಿಯಾಗಿರುವುದಿಲ್ಲ...

## ಜೀವನ ಸಂಗತಿ

ಜಾತಿ ಹೆಸರನ್ನೇ ಹೇಳಿ ನೂರು ಸವಲತ್ತು
ಬಾಚಿಕೊಳ್ಳುವುದಲ್ಲ ಈತನಿಗೆ ಗೊತ್ತು
ಇವನು ಪಠಿಸುವ ಜಾತ್ಯಾತೀತತೆಯ ಮಂತ್ರ
ಗಾಳ ಹಾಕುವ ನಕಲಿ ಶಾಸ್ತ್ರೀಯದೆ ತಂತ್ರ

ಪ: ಪಳಕಳ ಸೀತಾರಾಮ ಭಟ್ಟ, ಮಿತ್ತಬೈಲು

ಅಷ್ಟರ ಮಟ್ಟಿಗೆ ನನ್ನ ಹೃದಯ ಸೌಧದಲ್ಲಿ ವಾಸವಾಗಿದ್ದಾರೆ. ಅಲ್ಲಿಗೆ ಪ್ರೇಮಳ ಅರಳಿದ ಮುಖಭಾವದಲ್ಲಿ ವ್ಯಕ್ತವಾಗುತ್ತಿರುವ ಮಾತುಗಳ ತಡೆದ ಮಧುರ, ಏನೇ ನೀನು ಇನಿಯನ... ಪದಪುಂಜಗಳಿಂದ ಕವಿಯಂತೆ ವರ್ಣಿಸುತ್ತೀಯಾ... ಹೊರತು ಅವನ ಶುಭನಾಮ ಹೇಳುತ್ತಿಲ್ಲ...! ಹೌದಲ್ಲ...! ಮಧುರ. ನೀನು ಅವನ ಸಂಪೂರ್ಣ ಬಲ್ಲೆ... ಆತನೇ 'ಅಮರ್', ಸಾಧನಪ್ರಿಯ ಕಾವ್ಯನಾಮದಿಂದ ನಾಡಿನಲ್ಲಿ ಪ್ರಚಲಿತಗೊಂಡ ಯುವ ಸಾಹಿತಿ. ಹೀಗೆಂದು ನುಡಿದಾಗ ಪ್ರೇಮ ನಾಚಿ ನೀರಾದಳು. ಆದರೆ... ಪ್ರೇಮಳ ಮಾತುಗಳ ಆಲಿಸಿದ ಮಧುರ ಸಂಜೆಯ ಕಡಲತಡಿಯ ತಂಗಾಳಿಗೂ... ಬೆವತುಹೋದಳು.

ಕೆಲಹೊತ್ತು... ಇಬ್ಬರಿಂದಲೂ ಮಾತು ಹೊರಡದೆ ಮೌನ ಆವರಿಸಿತು. ಮಧುರ... ಒಂದುಕ್ಷಣ ಮನದಲ್ಲೇ ಯೋಚಿಸುತ್ತಾ... ಏನಿದು ವಿಚಿತ್ರ...! ನನ್ನ ಗೆಳತಿ ಪ್ರೇಮ.., ನಾನು ಪ್ರೀತಿಸಿರುವ ಸಾಧನಪ್ರಿಯನನ್ನು ಪ್ರೀತ್ರಿಸುತ್ತಿರುವಳೇ...! ನಾನು ಅವನಲ್ಲಿ ಮನೋಭಿಲಾಷೆ ವ್ಯಕ್ತಪಡಿಸಲು ಅದೆಷ್ಟೋ ಸಮಯವನ್ನು ಮನದೊಳಗೆ ಭೀತಿ ಆವರಿಸಿದ್ದರಿಂದ ತೆಗೆದುಕೊಂಡಿದ್ದೆ. ಅವನಲ್ಲಿ ಹೇಳದೆ ಮನದೊಳಗೆ ಪ್ರೀತಿಯನ್ನು ಬಂಧಿಯಾಗಿಟ್ಟಿದ್ದರೆ... ಪ್ರೇಮ ಪ್ರಸಂಗ ಇಲ್ಲಿತನಕ ಬರುವುದಿಲ್ಲವಾಗಿತ್ತು... ನಿಜವಾಗಲೂ ನಾನು ತಪ್ಪು ಮಾಡಿದೆ. ಈ ಮೊದಲು ನಾನು ನನ್ನ ವಿಚಾರವನ್ನು ಪ್ರೇಮಳಲ್ಲಿ ಹೇಳಬೇಕಿತ್ತು. ಸ್ನೇಹಿತೆಯಾಗಿ ನಾನು ಅವಳಿಗೆ ದ್ರೋಹ ಮಾಡಿದೆ. ನಾನು ಅನುಭವಿಸಿದ ಪರಿಸ್ಥಿತಿ ಪ್ರೇಮಳ ಪಾಲಿಗೆ ಬಂದರೂ... ಆಕೆಗೆ ಅಪರಾಧ ಭಾವನೆ, ಗೆಳತಿಗೆ ಹೇಳಿಲ್ಲವೆಂದು ಮನಸ್ಸಿಗೆ ಕಾಡತೊಡಗಿತು. ನಿಜವಾಗಲೂ ಆಪ್ತ ಮಿತ್ರತ್ವದ ಗುಣಧರ್ಮಕ್ಕೆ ಪ್ರೇಮ ಚ್ಯುತಿ ಬಾರದಂತೆ ವರ್ತಿಸಿದ್ದಾಳೆ. ಈ ಸಂದರ್ಭದಲ್ಲಿ ನಾನು ಮಾತ್ರ ಸತ್ಯವನ್ನು ಮುಚ್ಚಿಡಲೇ ಬೇಕು. ಸತ್ಯ ಬಾಯ್ಬಿಟ್ಟರೆ ಪ್ರೇಮಳ ಮನಸ್ಸಿಗೆ ಆಘಾತವಾಗುತ್ತದೆ. ಪರಿಣಾಮ ಪ್ರೇಮಳ ಬದುಕೇ ದುರಂತ ಕಾಣಬಹುದು. ನನ್ನ ಹೃದಯ ಭವನದಲ್ಲಿ ಪ್ರತಿಷ್ಠಾಪಿತ ಪ್ರೇಮ ಪುತ್ಥಳಿ... ಸಾಧನಪ್ರಿಯನನ್ನು ಪ್ರೇಮಳಿಗೆ ಬಿಟ್ಟುಕೊಡಲೇ ಬೇಕು. ಆಗ... ಮಧುರ ಪ್ರೇಮರ ಗೆಳೆತನಕ್ಕೆ ಅರ್ಥ ಬರುತ್ತದೆ. ಜೊತೆಗೆ

ಪ್ರೀತಿ ಎಂಬ ಚುಂಬಕಕ್ಕೆ ಸಿಲುಕಿದ ಪ್ರೇಮಳ ಪ್ರೇಮಕ್ಕೂ ಮೌಲ್ಯ ಬರುತ್ತದೆ. ಹೀಗೆಂದು ಮಧುರ ಮನಸ್ಸಿನೊಳಗೆ ನಿರ್ಧಾರ ತೆಗೆದುಕೊಂಡು ತನ್ನ ಕೈಯಲ್ಲಿದ್ದ ಮೊಬೈಲ್‌ನ ಕೀಲಿಗಳ ಒತ್ತತೊಡಗಿದಳು. ಪ್ರೇಮ... ಮಧುರಳ ಭುಜ ಸವರಿ... ಯಾಕೆ ಮಂಕಾಗಿಬಿಟ್ಟೆ...! ಮಂಕಲ್ಲ... ಪ್ರೇಮ... ನಿನ್ನಂಥ ಗೆಳತಿ ಪಡೆದೆನಲ್ಲಾ ಎಂಬ ಹೆಮ್ಮೆಯ ಭಾವ ಮನದೊಳಗೆ ಜಾಗೃತವಾಯಿತು. ಹಾಗಾಗಿ ನಿನ್ನ ಪ್ರೇಮ ನೌಕೆ ಯಾವುದೊಂದೂ ವಿಕೋಪಕ್ಕೆ ಒಳಗಾಗದೇ ದಡ ಸೇರಲೇ ಬೇಕು... ಅದಕ್ಕಾಗಿ ನಿಮ್ಮಬ್ಬರ ಜೊತೆಗೂಡಿಸಲು ನಾನು ಸಾರಥ್ಯ ವಹಿಸುತ್ತೇನೆ. ಅದಕ್ಕಾಗಿ ನೀನು ಅಲ್ಲಿ ಕಾಣುತ್ತಿರುವ ಜನಜಂಗುಳಿಯ ನಡುವೆ ಮರಳ ರಾಶಿಯಲ್ಲಿ ಕೂತಿರು. ಆಗಲೋ... ಈಗಲೋ... ಸಾಧನಪ್ರಿಯ ಇಲ್ಲಿಗಾಗಮಿಸುತ್ತಾನೆ. ಆತನಿಗೆ ಇಲ್ಲಿಗೆ ಬರಲು ಮೊಬೈಲ್ ಮುಖಾಂತರ ಸಂದೇಶ ರವಾನಿಸಿದ್ದೇನೆ. ಬರುತ್ತೇನೆಂದು ಪ್ರತಿಕ್ರಿಯೆ ನೀಡಿದ್ದಾನೆ. ಮಧುರ ಹೀಗೆನ್ನುತ್ತಿರುವಾಗಲೇ ಮುಖ್ಯರಸ್ತೆಯಲ್ಲಿ ಬೈಕ್ ಶಬ್ದ ಕೇಳಿ ಬಂತು. ಶಬ್ದ ಬಂದತ್ತ ಮಧುರ ಕಣ್ಣಾಡಿಸಿದಳು. ನಿರೀಕ್ಷಿಸಿದ್ದಂತೆ ಆತ ಹೆಲ್ಮೆಟ್ ತೆಗೆದಾಗ ಸಾಧನಪ್ರಿಯನೆಂದು ಅರಿವಿಗೆ ಬಂತು. ಅವನ ಕಂಡೊಡನೆ ಮಧುರಳ ಆದೇಶದಂತೆ ಪ್ರೇಮ ಅಲ್ಲಿಂದ ಮರೆಯಾದಳು.

ಮಧುರಳ ಗುರುತಿಸಿದ ಸಾಧನಪ್ರಿಯ, ಅವಳ ಸನಿಹ ಬಂದು ಏನು ಮಧು... ಅವಸರವಾಗಿ ನನ್ನ ಕರೆದದ್ದು. ಸಾಧನ್... ನಿಮ್ಮನ್ನು ಕರೆಯಲೇ ಬೇಕಾದ ಅನಿವಾರ್ಯ ಸಂದರ್ಭ ಬಂತು. ನಮ್ಮಿಬ್ಬರ ಪ್ರೀತಿ ಇತ್ತೀಚೆಗಷ್ಟೇ ಚಿಗುರೊಡೆದದ್ದು... ಅದು ಹೆಮ್ಮರವಾಗಿ ಬೆಳೆಯುವ ಮೊದಲು ತಡೆಹಿಡಿಯುವ ನಿರ್ಧಾರಕ್ಕೆ ಬಂದಿದ್ದೇನೆ. ವಿಚಾರ ಇಷ್ಟೇ... ನಾನು ನಿಮ್ಮಲ್ಲಿ ಮಾನಸಿಕವಾಗಲೀ, ದೈಹಿಕವಾಗಲೀ ನ್ಯೂನತೆ ಕಂಡು ಈ ನಿರ್ಧಾರಕ್ಕೆ ಬಂದವಳಲ್ಲ..! ನಮ್ಮಿಂದ ಮತ್ತೊಂದು ಜೀವ ಮಾನಸಿಕ ಖಿನ್ನತೆಗಳೊಳಗಾಗಿ ಅಗ್ನಿಜ್ವಾಲೆಯೊಳಗೆ ದಹಿಸುತ್ತದೆ ಎನ್ನುವುದನ್ನು ಅರಿತು, ನನ್ನ ಆಪ್ತ ಸ್ನೇಹಿತೆಗೋಸ್ಕರ ಅವಳಿಗೆ ಇನಿಯಾರ್ಪಣೆ ಮಾಡುತ್ತಿದ್ದೇನೆ. ನನ್ನ ನಿರ್ಧಾರ ಸಮಂಜಸವಾದದ್ದು. ನಾವು ಒಬ್ಬರನ್ನೊಬ್ಬರು ಅರ್ಥ ಮಾಡಿಕೊಂಡು ಬೆಳೆದವರು. ಅವಳ ವಂಚಿಸಿ, ನನಗೆ ನಿಮ್ಮೊಂದಿಗೆ ಬದುಕು ಸಾಗಿಸುವುದು ಕಷ್ಟಕರ. ಇಷ್ಟೆಲ್ಲ ಹೇಳಲು ಕಾರಣವೊಂದಿದೆ. ಪ್ರೇಮ... ಕೇವಲ ನಿಮಗೆ ಅಭಿಮಾನಿಯಾಗಿರಲಿಲ್ಲ. ನಿಮ್ಮನ್ನು ಹೃದಯನಿಲಯದಲ್ಲಿ ಬಚ್ಚಿಟ್ಟು ಆರಾಧಿಸುತ್ತಿದ್ದವಳು. ಅವಳ ನವರಸ ಬದುಕಿಗೆ ನಿಮ್ಮ ಸಾಂಗತ್ಯ ಬೇಕಾಗಿದೆ. ನೀವು ಅವಳನ್ನು ಹೃದಯಪಟ್ಟದ ರಾಣಿಯಾಗಿಸಿಕೊಳ್ಳಿ. ಆದರೆ ಒಂದು ಮುನ್ನೆಚ್ಚರಿಕೆ...! ನಮ್ಮಿಬ್ಬರ ಪ್ರೇಮಾಂಕುರದ ವಿಚಾರ ಗೌಪ್ಯವಾಗಿರಲಿ. ತಿಳಿಯಿತು ಎಂದಾದರೆ... ಅವಳ ಬದುಕು ಕಡಲ ಗರ್ಭದಲ್ಲಿ ಬಿರುಗಾಳಿಗೆ ಸಿಲುಕಿದ ನೌಕೆಯಂತಾದೀತು. ನಾವು ಒಬ್ಬರನ್ನು ಪ್ರೀತಿಸುವುದಕ್ಕಿಂತ... ನಮ್ಮನ್ನು ಪ್ರೀತಿಸುವವರನ್ನು ಮೆಚ್ಚಿಕೊಳ್ಳುವುದು ಸೂಕ್ತ ಎನ್ನುವುದು ಬಲ್ಲವರ ಮಾತು. ಮುಂದಿನ ವಿಚಾರ ಸಾಧನ್... ನಿಮಗೆ ಬಿಟ್ಟಿದ್ದು.

ಭೇಷ್... ಮಧುರ. ನೀನು ಹೇಳುವುದರಲ್ಲಿ ಮೌಲ್ಯಾಧಾರಿತ ಸತ್ಯಾರ್ಥ ಅಡಗಿದೆ. ಇನಿಯನ ಆಪ್ತ ಸ್ನೇಹಿತೆಗೆ ತ್ಯಾಗ ಮಾಡಿದ ಮಹಾಮಾನಿನಿ ನೀನು. ನಿನ್ನ ಮನದ ನಿರ್ಧರಿತ ತೀರ್ಮಾನಕ್ಕೆ ಮನಸಾರೆ ಒಪ್ಪಿಗೆ ಸೂಚಿಸಿದ್ದೇನೆ. ದೀರ್ಘ ಚರ್ಚೆಗೆ ಅವಕಾಶ ಕೊಡದೆ ಸಾಧನಪ್ರಿಯ ಹೀಗೆಂದು ನುಡಿದಾಗ ತೇವಗೊಂಡ ತನ್ನ ಕಣ್ಣುಗಳ ಕರವಸ್ತ್ರದಿಂದ ಒರೆಸುತ್ತಾ ಮಧುರ..., ಮರಳ ರಾಶಿಯಲ್ಲಿ ಕೈಬೆರಳುಗಳಿಂದ ಚಿತ್ತಾರಗಳ ಗೀಚುತ್ತಿರುವ ಪ್ರೇಮಳಿಗೆ ಕಣ್ಸನ್ನೆ ಮಾಡಿ ಬರಹೇಳಿದಳು. ತನ್ನ ಸನಿಹ ಬಂದ ಆಪ್ತ ಗೆಳತಿಯ ಎರಡೂ ಕರಗಳನ್ನು ಹಿಡಿದು... ಸಾಧನಪ್ರಿಯನ ಕರಬೊಗಸೆಗೆ ಸಮರ್ಪಿಸಿದಳು ಮಧುರ. ನಂತರ... ಪ್ರೇಮಳ ಬಿಗಿದಪ್ಪಿ ಸಾಧನಪ್ರಿಯ ಬೆನ್ನುತಟ್ಟಿದ ಆ ಸುಂದರ ದೃಶ್ಯ ನೋಡಿ... ಮನಸ್ಸಿನ ಎಲ್ಲಾ ನೋವನ್ನೂ ಮರೆತು ಗೆಲುವಿನ ನಗೆಬೀರಿ, "ಅಮರ... ಮಧುರ...ಪ್ರೇಮ..." ಹಳೆಯ ಚಿತ್ರಗೀತೆಯನ್ನು ತನ್ನ ಕಂಠಸಿರಿಯಲ್ಲಿ ಹಾಡುತ್ತಾ ಕರತಾಡನ ಮಾಡಿದಳು ಮಧುರ. ಸಾಧನಪ್ರಿಯನ ಬಿಸಿಯಪ್ಪುಗೆಯಿಂದ ಹೊರಬಂದ ಪ್ರೇಮ ಎರಡೂ ಹೃದಯಗಳ ಪ್ರೀತಿಯ ಬೆಸುಗೆಗೊಳಿಸಲು ಸಾರಥ್ಯವಹಿಸಿದ ಮಧುರಳ ಬಿಗಿದಪ್ಪಿ ಗಲ್ಲಕ್ಕೆ ಚುಂಬಿಸಿದಳು. ಸಾಧನಪ್ರಿಯ ಅವರನ್ನೇ ದಿಟ್ಟಿಸುತ್ತಿದ್ದಂತೆ ತನ್ನ ಕಣ್ಣಂಚಿನಿಂದ ತನಗರಿಯದೇ ಸುರಿದ ಅಶ್ರುಧಾರೆಯನ್ನು ಕರವಸ್ತ್ರದಿಂದ ಶುಚಿಗೊಳಿಸಿಕೊಂಡ. ಆ ಹೊತ್ತಿಗೆ ನಭೋಮಂಡಲದ ಪಡುವಣ ಪಾರ್ಶ್ವದತ್ತ ಭಗವಾನ್ ಭಾಸ್ಕರ ಕಡಲಗರ್ಭ ಸೇರಿಯಾಗಿತ್ತು. ಚದುರಿದ ಇರುವೆ ಸಾಲಿನಂತೆ ಕ್ಷಿತಿಜ ನೇಸರನ ರಂಗಿನಾಟ ವೀಕ್ಷಿಸುತ್ತಿದ್ದ ನಿಸರ್ಗಪ್ರಿಯರು ಕಾಣಿಪಾಗಿದ್ದರು. ಸುತ್ತಲೂ ಮಬ್ಬುಗತ್ತಲು ಆವರಿಸಿತ್ತು. ಅಲ್ಲಲ್ಲಿ ಬೃಹತ್ ದೀಪಗಳು ಬೆಳಗತೊಡಗಿದವು.

◆

ಪರಿಸ್ಥಿತಿ



ನಾವೆಲ್ಲ ಒಂದು
ಎಂಬ ಭಾವ ಬಿಂದು
ಹೆಪ್ಪುಗಟ್ಟಿದೆ
ನೊಂದು ಇಂದು !

• ಗೋಪಿ •
ಹಿರೇಬೆಟ್ಟು

ಂ.ಜಿ.ಎಂ. ಕಾಲೇಜಿನ ಕನ್ನಡ ಸಾಹಿತ್ಯ ಚಟುವಟಿಕೆಗಳಿಂದ ಪ್ರೇರಿತರಾಗಿ, ಸಾಹಿತ್ಯ ಚಟುವಟಿಕೆಗಳಲ್ಲಿ ತೊಡಗಿಸಿಕೊಂಡ ದ್ಯಾರ್ಥಿಗಳ ಮಾಹಿತಿ : ಅನುಬಂಧ ಸಂಖ್ಯೆ 6

| ಸಂ. | ಹೆಸರು | ಶಿಕ್ಷಣ | ಪದವಿ ಪಡೆದ ವರ್ಷ | ಸಾಹಿತ್ಯ ಕೊಡುಗೆಗಳು |
|---|---|---|---|---|
| | ವಿಜಯನಾಥ ಶೆಣೈ (ಸಾಂಸ್ಕೃತಿಕ ಕ್ಷೇತ್ರ) | ಬಿ.ಎ. | 1959 | 1. ಪತ್ರ ವಾತ್ಸಲ್ಯ<br>2. ನೆನಪಿನ ಶಿಲ್ಪಗಳು<br>ಈ ಎರಡು ಅವರ ಸ್ವಂತ ಸಂಪಾದಿತ ಕೃತಿಗಳು.<br>ಕರ್ನಾಟಕ ಸಂಘಕ್ಕೆ ಮರುಜೀವ, ರೈಟರ್ಸ್ ಕ್ಲಬ್ ಸ್ಥಾಪನೆ, ಸಂಗೀತ ಸಭಾ ಎಂಬ ವೇದಿಕೆಯನ್ನು ಹುಟ್ಟುಹಾಕಿರುವುದು ಉಡುಪಿ ಪರಿಸರದಲ್ಲಿ ಅನೇಕ ಸಾಹಿತ್ಯ ಗೋಷ್ಠಿ ಚರ್ಚೆಗಳನ್ನು ಏರ್ಪಡಿಸಿದರು. |
| | ಡಾ. ಭಾಸ್ಕರ ಮಯ್ಯ ಕಾಲೇಜು ವ್ಯಾಸಂಗದ ಅವಧಿಯಲ್ಲಿ ಕಾಲೇಜು ಸಂಚಿಕೆಯಲ್ಲಿಯೇ ಕಥೆ, ಚಿಂತನ, ಬರಹಗಳನ್ನು ಪ್ರಕಟಿಸಿದ್ದರು. | ಬಿ.ಎಸ್ಸಿ. | 1971 | ಮಹಾ ಪಂಡಿತ ರಾಹುಲ ಸಾಂಸ್ಕೃಂತಾಯನ ವ್ಯಕ್ತಿಚಿತ್ರಣ, ಮೂಕಜ್ಜಿಯ ಕನಸುಗಳು, ಮಾನವ ಶಾಸ್ತ್ರ ವಿಮರ್ಶೆ, ಮೂರ್ತ್ಯವಾದ ಮತ್ತು ಸೌಂದರ್ಯಶಾಸ್ತ್ರ (ಉ)ಜ್ಯೋತಿಷ್ಯ ಒಂದು ಅಧ್ಯಯನ, ಬಹುರಾಷ್ಟ್ರೀಯ ಆರ್ಥಿಕತೆಯ ದುಷ್ಪರಿಣಾಮಗಳು (ಚಿಂತನೆ), ಜ್ಯೋತಿಷ್ಯ ವೈಜ್ಞಾನಿಕವೇ ವಂಚನೆಯೇ? (ಚಿಂತನೆ) ಹರಿಶಂಕರ ಪರಸಾಯಿಯವರ ಆಯ್ದ ಕಥೆಗಳು (ಅನುವಾದ) |
| | ಮಹಾಬಲೇಶ್ವರ ರಾವ್ ಕಾಲೇಜು ವ್ಯಾಸಂಗದ ಅವಧಿಯಲ್ಲಿ ಕಾಲೇಜು ಸಂಚಿಕೆಯಲ್ಲಿ ಕನ್ನಡ ಬರಹಗಳನ್ನು ಪ್ರಕಟಿಸಿದ್ದರು | ಬಿ.ಎಸ್ಸಿ. | 1971 | ಸೂಕ್ಷ್ಮಬೋಧನೆ, ಅಸಮಾನತೆಯ ನಾಡಿನಲ್ಲಿ ಶಿಕ್ಷಣ, ಕಾರಂತರ ದೃಷ್ಟಿಸೃಷ್ಟಿ, ಸೃಜನಶೀಲತೆ. ಪ್ರಾಥಮಿಕ ಶಾಲೆಗಳಲ್ಲಿ ಕನ್ನಡ ಬೋಧನೆ, ಪ್ರೌಢ ಶಾಲೆಗಳಲ್ಲಿ ಕನ್ನಡ ಬೋಧನೆ, ಶೈಕ್ಷಣಿಕ ಮಹಾ ವಿಜ್ಞಾನ ಓದಬನ್ನಿ, ಒತ್ತಕ್ಷರ ಪದಗಳು ಇತ್ಯಾದಿ, ಆಧುನಿಕ ಭಾರತದ ನಿರ್ಮಾಣದಲ್ಲಿಶಾಪೂರಿನ ಪತ್ರ. |
| | ಮುರಳೀಧರ ಉಪಾಧ್ಯ ಹಿರಿಯಡ್ಕ ಕಾಲೇಜು ವ್ಯಾಸಂಗದ ಅವಧಿಯಲ್ಲಿ ಕಾಲೇಜು ಸಂಚಿಕೆಯಲ್ಲಿ ತಮ್ಮ ವಿಮರ್ಶಾ ಬರಹಗಳನ್ನು ಬರೆದು, ಪ್ರತಿಗಾಮಿ ಕು.ಶಿ. ಅವರಿಂದ ಗುರುತಿಸಿಕೊಂಡಿದ್ದರು. | ಬಿ.ಎ. | 1970 | ಪೇಜಾವರ ಸದಾಶಿವ ರಾಯರು (ಜೀವನ ಚರಿತ್ರೆ) ಕಯ್ಯಾರ ಕಿಞ್ಞಣ್ಣ ರೈ ಜೀವನ ಚರಿತ್ರೆ, ಎಸ್.ಯು. ಪಣಿಯಾಡಿ (ಜೀವನಚರಿತ್ರೆ) ಡಾ. ಬಿ. ಚಂದ್ರಯ್ಯ ಹೆಗ್ಡೆ (ಜೀವನ ಚರಿತ್ರೆ), ಯು.ಆರ್. ಅನಂತಮೂರ್ತಿ (ಸಂ.) ಬಿ.ವಿ. ಕಾರಂತ (ಸಂ). |
| | ಜಿ. ರಾಜಶೇಖರ್ | ಬಿ.ಎ. | 1966 | ಕಾಗೋಡು ಸತ್ಯಾಗ್ರಹ, ಬಟೋರ್ಲ್ಡ್ ಬೆಕ್ಟ್ ಪರಿಚಯ; ಕೋಮುವಾದದ ರಾಜಕೀಯ (ಸ.ಲೇ.) ಕೋಮುವಾದದ ಕರಾಳ ಮುಖಗಳು (ಸ.ಲೇ.) ನಾಡಿನ ಬೇರೆ ಬೇರೆ ವೈಚಾರಿಕ ವೇದಿಕೆಯಲ್ಲಿ ಉಪನ್ಯಾಸ ನೀಡಿರುತ್ತಾರೆ. |

| | | | |
|---|---|---|---|
| ಹಯವದನ ಉಪಾಧ್ಯ | ಬಿ.ಎ. | 1980 | ಕಾಲೇಜು ದಿನಗಳಿಂದಲೇ ನಾಟಕದಲ್ಲಿ ವಿಶೇಷ ಆಸಕ್ತಿ ಹಾಗೂ ವೈಚಾರಿಕ ಚಿಂತನಗಳಲ್ಲಿ ಆಸಕ್ತಿ. ಪ್ರಸ್ತುತ ಕುಂದಾಪುರದ ಭಂಡಾರ್‌ಕಾರ್ಸ್ ಆಂಗ್ಲಭಾಷಾ ಉಪನ್ಯಾಸಕರಾಗಿ ಕರ್ತವ್ಯದಲ್ಲಿದ್ದಾರೆ. 'ಜಿಜ್ಞಾಸೆ' ವೈಚಾರಿಕ ಲೇಖನಗಳ ಸಂಕಲನ, ಸೌಹಾರ್ದ ಸಂಕಲನ, ವಿಮರ್ಶಾ ವೈಚಾರಿಕ ಸಂಕಲನ, ತೀರದ ರಚನೆಗಳು–ಕವನಸಂಕಲನ. ಈ ಹಿಂದೆ ಜನವಾಹಿನಿ ಮತ್ತು ಮುಂಗಾರು ಪತ್ರಿಕೆಯಲ್ಲಿ ವೈಚಾರಿಕ ಲೇಖನಗಳನ್ನು ಬರೆಯುತ್ತಿದ್ದುದು, ಪ್ರಸ್ತುತ ವಾರ್ತಾಭಾರತಿ ಮತ್ತು ಲಂಕೇಶ್ ಪತ್ರಿಕೆಯಲ್ಲಿ ತಮ್ಮ ಲೇಖನ ಕೃಷಿಯಲ್ಲಿ ತೊಡಗಿಕೊಂಡಿರುತ್ತಾರೆ. |
| ಕೃಷ್ಣಾನಂದ ಹೆಗ್ಡೆ ಬಿ. ಪತ್ರಿಕಾ ಸಂಪಾದಕರಾಗಿ ದುಡಿದ ಇವರು ಐ.ಐ.ಎಸ್. ಇಂಡಿಯನ್ ಇನ್‌ಫಾರ್ಮೇಶನ್ ಸರ್ವೀಸ್‌ನಿಂದ ನಿವೃತ್ತರು, ಕಾಲೇಜು ವಿದ್ಯಾರ್ಥಿಗಳಾಗಿದ್ದಾಗ ಸಂಚಿಕೆಯಲ್ಲಿ ಕವನ ಬುದ್ಧಂ ಶರಣಂ ಗಚ್ಛಾಮಿ ಎಂಬಕವನ ಪ್ರಕಟಿಸಿದ್ದರು. ಸಂಚಿಕೆ 1954, ಪುಟ 6 | ಬಿ.ಕಾಂ. | 1954 | ಕಾರ್ಲ್‌ಮಾರ್ಕ್ಸ್, ಶಿಕ್ಷಣ ರಂಗದ ಬೆಳಕು ಎಂಬೀ ಎರಡು ಕೃತಿಗಳು ಅವರ ಸ್ವಂತ ರಚನೆಯಾಗಿರುತ್ತದೆ. ತಮ್ಮ ಪದವಿ ಶಿಕ್ಷಣದ ನಂತರ ಹೊಸದೆಹಲಿಯಲ್ಲಿ ಜಾಹೀರಾತು ಮತ್ತು ದೃಶ್ಯಪ್ರಚಾರ ನಿರ್ದೇಶನಾಲಯದ ಕನ್ನಡ ವಿಭಾಗದ ಸಂಪಾದಕರಾಗಿ ಕರ್ತವ್ಯ ನಿರ್ವಹಿಸಿದ್ದರು. |
| ಪಟ್ಟಾಭಿರಾಮ ಸೋಮಯಾಜಿ | ಬಿ.ಎ. | 1976 | ಮುಂದೆ ಮೈಸೂರು ವಿಶ್ವವಿದ್ಯಾನಿಲಯದಿಂದ ಆಂಗ್ಲಭಾಷೆಯಲ್ಲಿ ಸ್ನಾತಕೋತ್ತರ ಪದವಿ. ಸ್ನಾತಕೋತ್ತರ ಅಧ್ಯಯನದ ಸಂದರ್ಭದಲ್ಲಿ ಅನಂತಮೂರ್ತಿ ಇವರ ಸಂಪಾದಕತ್ವದಲ್ಲಿ ಹೊರಬರುತ್ತಿದ್ದ 'ಋಜುವಾತು'ಪತ್ರಿಕೆಯಲ್ಲಿ ಲೇಖನಗಳನ್ನು ಪ್ರಕಟಿಸುತ್ತಿದ್ದರು. ಅನಂತ ಮೂರ್ತಿಯವರು ಸಂಪಾದಿಸಿದ 'ಹಿಂದುತ್ವ ವರ್ಸಸ್ ಹಿಂದೂ ಸ್ವರಾಜ್' ಇದನ್ನು ಆಂಗ್ಲ ಭಾಷೆಗೆ ಅನುವಾದ ಮಾಡಿರುವುದು ಅನಂತ ಮೂರ್ತಿ ಮತ್ತು ಹತ್ತುಸಮಸ್ತರ ಜೊತೆಗೆ ಎಂಬ ಕೃತಿಯ ಸಂಪಾದನೆ. ಉದಯವಾಣಿ ದಿನಪತ್ರಿಕೆಯಲ್ಲೂ ವೈಚಾರಿಕ ಜಾಗೃತಿಗೆ ಸಂಬಂಧಿಸಿದ ಅನೇಕ ಲೇಖನಗಳನ್ನು ಪ್ರಕಟಿಸುತ್ತಿದ್ದರು. |
| ಎಸ್. ತಿರುಮಲೇಶ್ವರ ಭಟ್ಟ | ಬಿ.ಎ. | 1959 | ಎಂ.ಜಿ.ಎಂ. ಕಾಲೇಜಿನ ಪ್ರಾಕ್ತನ ವಿದ್ಯಾರ್ಥಿಯಾಗಿ ಮುಂದೆ ಅದೇ ಸಂಸ್ಥೆಯಲ್ಲಿ ಆಂಗ್ಲಭಾಷಾ ಉಪನ್ಯಾಸಕರಾಗಿ ತಮ್ಮ ಉದ್ಯೋಗ ಜೀವನವನ್ನು ಆರಂಭಿಸಿದರು. ಮಾಸ್ತಿಯವರ ಸುಬ್ಬಣ್ಣ ಕಾದಂಬರಿ, ಪಂಜೆ ಮಂಗೇಶರಾಯರು, ಪ್ರಭುಗಳಲ್ಲ ಸೇವಕರು, ಗೋವಿಂದ ಪೈ |

| | | | | |
|---|---|---|---|---|
| | | | | ಭಾಗ-1 ಮತ್ತು ಭಾಗ-2, ಬದುಕಲು ಕಲಿಯಿರಿ ಭಾಗ-1 ಮತ್ತು ಭಾಗ-2, ಜಗದಾತ್ಮಾನಂದಾಜಿ, ಡಾ.ಟಿ.ಎಂ.ಎ. ಪೈ ಅಭಿನಂದನಾ ಮತ್ತು ಭಾಗ್ಯದ ಬಾಗಿಲು, ಸಿರಿ ಸಂವಾದ ಸಂಪದ ಸಂಚಿಕೆ, ಒಂದರಿಂದ ಮೂರು ಕಾಡ್ಯನಾಟ, ಕೊಗ್ಗ ಕಾಮತರ ಗೊಂಬೆಯಾಟ ಇವುಗಳನ್ನು ಇಂಗ್ಲಿಷ್‌ಗೆ ಭಾಷಾಂತರಿಸಿದ್ದಾರೆ. |
| . | ಡಾ. ಪಿ. ಕೇಶವ ಭಟ್ಟ | ಇಂಟರ್ ಮೀಡಿಯಟ್ ವಿದ್ಯಾರ್ಥಿ | 1957 | 1955-57ರ ಅವಧಿಯ ಎಂ. ಜಿ.ಎಂ. ವಿದ್ಯಾರ್ಥಿಯಾಗಿದ್ದವರು. ವಿದೇಶದಲ್ಲಿ ಸಸ್ಯ ವಿಜ್ಞಾನಿಯಾಗಿ ಕರ್ತವ್ಯ ನಿರ್ವಹಿಸಿದವರು. ಸರಳ ಚಿಂತನೆಯಿಂದ ಸಮಗ್ರ ಚಿಂತನೆಯೆಡೆಗೆ ವೈದ್ಯಕೀಯ ಚಿಂತನ-ಬರಹಗಳನ್ನು ರಚಿಸಿರುತ್ತಾರೆ. ಸ್ಪ್ಯಾನಿಷ್ ಭಾಷೆಯಲ್ಲಿ ಎಂಟು ಕೃತಿ ರಚನೆ ಮಾಡಿದ್ದಾರೆ. |
| . | ಜಿ.ಸುಬ್ಬರಾಯ | ಬಿ.ಎ. | 1958 | ಪ್ರೌಢಶಾಲೆಯಲ್ಲಿ ಶಿಕ್ಷಕರಾಗಿ ಉದ್ಯೋಗವನ್ನು ಆರಂಭಿಸಿ, ಮುಖ್ಯೋಪಾಧ್ಯಾಯರಾಗಿ ಶಿಕ್ಷಣ ಇಲಾಖೆಯ ಜಂಟಿ ನಿರ್ದೇಶಕರಾಗಿ ಕರ್ತವ್ಯ ನಿರ್ವಹಿಸಿದ್ದರು. 'ಕರಿಮಣಿ' ಎಂಬ ಸಣ್ಣ ಕಥಾ ಸಂಕಲನವನ್ನು ಪ್ರಕಟಿಸಿದ್ದಾರೆ. |
| . | ಸುಬ್ಬಣ್ಣ ಭಟ್ಟ | ಬಿ.ಎ. | 1959 | ಕಾಲೇಜಿನ ಪ್ರಾಕ್ತನ ವಿದ್ಯಾರ್ಥಿ. ಬ್ರಹ್ಮಾವರದ ಎಸ್.ಎಂ.ಎಸ್. ಪ್ರೌಢಶಾಲೆಯಲ್ಲಿ ಸೇವೆ ಆರಂಭಿಸಿ, ಅಲ್ಲಿಯೇ ನಿವೃತ್ತಿ. ಯಕ್ಷಗಾನದ ವೇಷಭೂಷಣಗಳನ್ನು ಸ್ವತಃ ಸಿದ್ಧಗೊಳಿಸಿ, ಶಾಲಾ ಸಾಂಸ್ಕೃತಿಕ ಚಟುವಟಿಕೆಗಳಿಗೆ ಮತ್ತು ಊರಿನ ನಾಗರಿಕರ ಬೇಡಿಕೆಗನುಸರಿಸಿ, ಬಾಡಿಗೆ ಆಧಾರದಲ್ಲಿ ನೀಡುತ್ತಾ ಬಂದವರು. |
| . | ಯು.ಪಿ. ಉಪಾಧ್ಯಾಯ | ಬಿ.ಎ. | 1956 | ಎಂ.ಜಿ.ಎಂ. ಕಾಲೇಜಿನ ಎರಡನೇ ತಂಡದ ವಿದ್ಯಾರ್ಥಿಯಾಗಿ ತಮ್ಮ ಪದವಿ ಶಿಕ್ಷಣದ ಅನಂತರ ಭಾಷಾಶಾಸ್ತ್ರ ಮತ್ತು ನಿಘಂಟು ಶಾಸ್ತ್ರದಲ್ಲಿ ಹೆಚ್ಚಿನ ವಿದ್ಯಾಭ್ಯಾಸವನ್ನು ಹೊಂದಿ ಹಲವಾರು ದೇಶಗಳ ವಿ.ವಿ.ಗಳ ಸಂದರ್ಶಕ ಪ್ರಾಧ್ಯಾಪಕರಾಗಿ ಕರ್ತವ್ಯ ನಿರ್ವಹಿಸಿರುತ್ತಾರೆ. ಮುಂದೆ ಎಂ.ಜಿ.ಎಂ. ಕಾಲೇಜಿನ ಗೋವಿಂದ ಪೈ ಸಂಶೋಧನಾ ಕೇಂದ್ರದ ವತಿಯಿಂದ ಕೈಗೆತ್ತಿಕೊಂಡ ತುಳು ನಿಘಂಟು ಯೋಜನೆಯ ಮುಖ್ಯ ಸಂಪಾದಕರಾಗಿ, ತುಳು ನಿಘಂಟನ್ನು ಪ್ರಾರಂಭಿಸಿದ ಖ್ಯಾತಿ ಪ್ರೊ. ಉಪಾಧ್ಯಾಯರದ್ದಾಗಿದೆ. |
| . | ಬಾಲಕೃಷ್ಣ ಸಾಮಗ | ಬಿ.ಎ. ಪದವಿ | 1974 | ಸುಧೀರ್ಘ 31 ವರ್ಷಗಳ ಕಾಲ ದೆಹಲಿ ಕನ್ನಡಿಗ ಎಂಬ ಕನ್ನಡ ಪತ್ರಿಕೆಯನ್ನು ನಡೆಸಿಕೊಂಡು ಬಂದಿದ್ದರು. ದೆಹಲಿಯಲ್ಲಿ 31 ವರ್ಷ ರಾಷ್ಟ್ರೀಯ ಕನ್ನಡ ಸಮ್ಮೇಳನವನ್ನು ನಡೆಸಿಕೊಂಡು ಬಂದಿರುವುದಲ್ಲದೇ 5 ತುಳು ಸಮ್ಮೇಳನವನ್ನು ನಡೆಸಿರುತ್ತಾರೆ. 'ಕೆಂಪುಕೋಟೆ'ಯಲ್ಲಿ ಎರಡು ಸಣ್ಣ ಕಥಾ ಸಂಕಲನಗಳಾಗಿವೆ. |
| . | ಭವಾನಿಶಂಕರ್ ರಾವ್ | ಬಿ.ಎ. ಪ್ರಥಮ ವರ್ಷ ಮಾತ್ರ | 1973-74 | ಸುಮಾರು 30 ವರ್ಷಗಳ ಕಾಲ ಸೈಂಟ್ ಮೇರಿ ಕಾಲೇಜ್ ಶಿರ್ವ ಇಲ್ಲಿನ ಪದವಿ ತರಗತಿಗೆ ಕನ್ನಡ ಪಾಠ ಮಾಡಿದ ಮುಖ್ಯ ಶಿಕ್ಷಕರು. "ವಿಷಯವನ್ನು ಚೆನ್ನಾಗಿ ಓದಿಕೊಂಡು ವಿದ್ಯಾರ್ಥಿಗಳಿಗೆ ನಿಷ್ಠೆಯಿಂದ ಪಾಠ ಮಾಡುತ್ತಾರೆ" ಎಂಬುದಾಗಿ ಕಾಲೇಜಿನ ಪ್ರಾಂಶುಪಾಲರಾದ ಡಾ. ಜಾನ್ ಕ್ಲಾರೆನ್ಸ್ ಮಿರಾಂಡ ಅವರು ಭವಾನಿ ಶಂಕರ್ ಅವರ ಕಾರ್ ಡ್ರೈವಿಂಗ್ ಮತ್ತು ನಿರ್ವಹಣೆ ಕೃತಿಗೆ ಬರೆದ ಮುನ್ನುಡಿಯಲ್ಲಿ ಹೇಳಿಕೆ ನೀಡಿರುತ್ತಾರೆ. ಭವಾನಿ |

| | | | | |
|---|---|---|---|---|
| | | | | ಶಂಕರ್ ಅವರ ಕೃತಿಗಳು.<br>1. ಕಂಪ್ಯೂಟರ್ ಬಗ್ಗೆ ಏನೂ ತಿಳಿಯದವರಿಗಾಗಿ.<br>2. ನಗು ಮತ್ತು ಆರೋಗ್ಯ.<br>3. ಗೆಲ್ಲುವ ದಾರಿಗಳು ಇಲ್ಲಿವೆ.<br>4. ಕಥೆ ಬರೆಯುವುದು ಹೇಗೆ?<br>5. ಇಂಟರ್‌ನೆಟ್ ಕಲಿಯಿರಿ.<br>6. ನಗಿಸುವ ಕವನಗಳು.<br>7. ಕನ್ನಡ ಈ ಲೋಕ.<br>8. ಕಾರ್ ಡ್ರೈವಿಂಗ್ ಮತ್ತು ನಿರ್ವಹಣೆ ಇತ್ಯಾದಿ. |
| | ಸೂರಾಲು ನಾರಾಯಣ ಮಡಿ | ಬಿ.ಬಿ.ಎಂ. | 1978 | ಎಂ.ಜಿ.ಎಂ. ಕಾಲೇಜಿನ ಪದವಿ ಶಿಕ್ಷಣದ ಅನಂತರ ಕಾರ್ಪೊರೇಶನ್ ಬ್ಯಾಂಕ್‌ನಲ್ಲಿ ವೃತ್ತಿಜೀವನ ಆರಂಭ. ತಮ್ಮ ಸಾಹಿತ್ಯ ವ್ಯವಸಾಯಕ್ಕೆ ಜಿಲ್ಲೆಯ ಪತ್ರಿಕೆಯನ್ನು ಅಭಿವ್ಯಕ್ತ ಮಾಧ್ಯಮವನ್ನಾಗಿ ಬಳಸಿಕೊಂಡವರು. ಸಾಹಿತ್ಯ ಗೋಷ್ಠಿ, ಉಪನ್ಯಾಸ, ಸಂವಾದಗಳಲ್ಲಿ ವೇದಿಕೆಯ ನೇಪಥ್ಯದಲ್ಲಿ ಕಾರ್ಯಕರ್ತರಾಗಿ ದುಡಿಯುತ್ತಾ ಬಂದವರು. ಮುಂಬೈಗೆ ವರ್ಗವಾದಾಗ ಮುಂಬೈ ಆಕಾಶವಾಣಿಯ ಬಿ.ಎ. ಸನದಿಯ ಅವರ ಸಂಪರ್ಕದಿಂದ ಮುಂಬೈ ಆಕಾಶವಾಣಿ ಕಾರ್ಯಕ್ರಮಗಳನ್ನು ನೀಡುತ್ತಿದ್ದರು. ಮುಂಬೈ ಕನ್ನಡಿಗರು ಶ್ರೀ ರಂಗರ ಅಧ್ಯಕ್ಷತೆಯಲ್ಲಿ ನಡೆಸಿದ ಸಾಹಿತ್ಯ ಸಮ್ಮೇಳನದ ಕಾರ್ಯಕಾರಿ ಸಮಿತಿಯಲ್ಲಿ ದುಡಿದವರು. ಉಡುಪಿ ಜಿಲ್ಲಾ ಸಾಹಿತ್ಯ ಪರಿಷತ್ತಿನ ವೇದಿಕೆಯಿಂದ ಪ್ರಕಟಗೊಂಡ ಕೃತಿ ಬೆನಗಲ್ ರಾಮರಾಯರ ಕೃತಿಯನ್ನು ಸಂಪಾದಿಸಿರುತ್ತಾರೆ. ಪ್ರಸ್ತುತ ಅಜಪುರ ಕರ್ನಾಟಕ ಸಂಘದ ಕಾರ್ಯದರ್ಶಿಯಾಗಿ ದುಡಿಯುತ್ತಿದ್ದಾರೆ. ಹಾಗೆಯೇ ದ.ಕ. ಜಿಲ್ಲಾ ಮಕ್ಕಳ ಸಾಹಿತ್ಯ ಸಂಘದ ವೇದಿಕೆಯ ಸದಸ್ಯರಾಗಿ, ವೇದಿಕೆಯ ಚಟುವಟಿಕೆಗಳಲ್ಲಿ ತೊಡಗಿಸಿಕೊಂಡಿದ್ದಾರೆ. |
| | ಬಿ.ವಿ. ಕೆದಿಲಾಯ | ಪಿ.ಯು.ಸಿ. | 1957 | ಎಂ.ಜಿ.ಎಂ. ಕಾಲೇಜಿನಲ್ಲಿ ಪಿ.ಯು. ಶಿಕ್ಷಣವನ್ನು ಮುಗಿಸಿ, ಎಲ್.ಐ.ಸಿ.ಯಲ್ಲಿ ಅಧಿಕಾರಿಯಾಗಿ ಕರ್ತವ್ಯ ನಿರ್ವಹಿಸಿದವರು. ಅಡಿಗರ ಕುರಿತು ಅಧಿಕಾರಯುತವಾಗಿ ಉಪನ್ಯಾಸ ನೀಡಿ, ಅವರ ಕಾವ್ಯ ಪ್ರತಿಮಾಗೆ ವಿನೂತನ ವ್ಯಾಖ್ಯಾನ ನೀಡಿದವರು. ಕೃತಿಗಳು ಗೋಪಾಲಕೃಷ್ಣ ಅಡಿಗ (ವ್ಯ. ಬ) ಧೀಮಂತ ನಾಯಕ (ವ್ಯ.ಬ.) |
| | ಶ್ರೀಶ ಬಲ್ಲಾಳ | ಬಿ.ಎ. | 1958 | ಎಂ.ಜಿ.ಎಂ. ಕಾಲೇಜಿನಲ್ಲಿ ಸುಂದರ ರಾಯರ ಕಾಲದ ವಿದ್ಯಾರ್ಥಿಯಾಗಿ ಅರ್ಥಶಾಸ್ತ್ರದಲ್ಲಿ ಸ್ನಾತಕೋತ್ತರ ಪದವಿಯನ್ನು ಪಡೆದು, ಎಂ.ಜಿ.ಎಂ. ಕಾಲೇಜಿನಲ್ಲಿಯೇ ಉಪನ್ಯಾಸಕರಾಗಿ ಸೇವೆ ಸಲ್ಲಿಸಿದ್ದರು. ಬೇಂದ್ರೆಯವರ ಆಧ್ಯಾತ್ಮಿಕ ಚಿಂತನೆಗಳ ಕುರಿತು ವಿಶೇಷ ಬಲವುಳ್ಳ ಇವರು, ಕಾಲೇಜಿನ ಸಾಂಸ್ಕೃತಿಕ ಚಟುವಟಿಕೆಗಳಲ್ಲಿ ಸಂಪೂರ್ಣ ತೊಡಗಿಕೊಂಡವರು. |
| | ಪಾಂಡೇಶ್ವರ ಚಂದ್ರಶೇಖರ ಚಡಗ | ಬಿ.ಕಾಂ. | 1961 | 1959–60ರ ಅವಧಿಯಲ್ಲಿ ಎಂ.ಜಿ.ಎಂ. ಕಾಲೇಜಿನ ವಿದ್ಯಾರ್ಥಿಯಾಗಿದ್ದ ಇವರು ಕಾಲೇಜು ಸಂಚಿಕೆಯಿಂದಲೇ ತಮ್ಮ ಸಾಹಿತ್ಯ ಕೃಷಿಯನ್ನು ಆರಂಭಿಸಿದ್ದರು. ಪದವಿ ಶಿಕ್ಷಣದ ಅನಂತರ |

| | | | | |
|---|---|---|---|---|
| | | | | ಆದಾಯ ತೆರಿಗೆ ಇಲಾಖೆಯಲ್ಲಿ ನೌಕರಿ ಪಡೆದು, ಮುಂದೆ ಆದಾಯ ತೆರಿಗೆ ಆಯುಕ್ತರಾಗಿ ನಿವೃತ್ತಿ ಹೊಂದಿದವರು. ಇವರ ಸಾಹಿತ್ಯ ಕೃತಿಗಳು 1) 'ದಲಿತ ಬ್ರಾಹ್ಮಣ'–ಕವನ ಸಂಕಲನ, 2) ಗಾಂಧಿ ಜಯಂತಿ–ಕವನ ಸಂಕಲನ 3) ನವ ನಿರ್ಮಾಣ–ಕವನ ಸಂಕಲನ<br>ಬೆಂಗಳೂರಿನಲ್ಲಿ ಶಿವರಾಮ ಕಾರಂತ ವೇದಿಕೆ ಎಂಬ ಸಾಂಸ್ಕೃತಿಕ ವೇದಿಕೆಯನ್ನು ಹುಟ್ಟುಹಾಕಿ, ಅವರ ಮೂಲಕ ಯಕ್ಷಗಾನ–ನಾಟಕ ಸಾಹಿತ್ಯ ಸಂವಾದ ಮುಂತಾದ ಸಾಂಸ್ಕೃತಿಕ ಕಾರ್ಯಕ್ರಮಗಳನ್ನು ನೀಡುತ್ತಾ ತನ್ನ ಚಟುವಟಿಕೆಗೆ ಸ್ಪಷ್ಟ ನೆಲೆ ಕಂಡುಕೊಂಡಿದ್ದಾರೆ. 1991ರಿಂದ (ಬೆಂಗೂರಿನ ಆರ್.ಬಿ. ನಗರದಲ್ಲಿ) ಗ್ರಂಥಾಲಯವೊಂದನ್ನು ಸ್ಥಾಪಿಸಿ, ಬೆಂಗಳೂರಿನ ನಿವಾಸಿಗರಿಗೆ ವಿರಾಮ ಸಮಯದ ಸದುಪಯೋಗಕ್ಕೆ ಅವಕಾಶ ಕಲ್ಪಿಸಿಕೊಟ್ಟಿದ್ದಾರೆ. ಹಣತೆ ಎನ್ನುವ ನಿಯತಕಾಲಿಕವನ್ನು ಬೆಂಗಳೂರಿನಿಂದಲೇ ಪ್ರಕಟಿಸುತ್ತಿದ್ದರು. ಬೆಂಗಳೂರಿನ ಸಾಹಿತ್ಯಾಭಿಮಾನಿಗಳಿಗೆ ಹೊಸ ವಿಚಾರಗಳನ್ನು ಹಂಚಿಕೊಳ್ಳುತ್ತಿದ್ದಾರೆ. |
| | ಸುಕನ್ಯಾ ಕಳಸ | ಬಿ.ಎ. | 1983 | ಎಂ.ಜಿ.ಎಂ. ಕಾಲೇಜಿನ ಪದವಿ ಶಿಕ್ಷಣದ ಅನಂತರ ಅಂಚೆ ಇಲಾಖೆಯಲ್ಲಿ ನೌಕರಿಗೆ ಸೇರಿ, ಸ್ವಯಂ ನಿವೃತ್ತಿ ಪಡೆದು, ಸಾಹಿತ್ಯ ಚಟುವಟಿಕೆಗಳಲ್ಲಿ ತೊಡಗಿಸಿಕೊಂಡವರು. ಮುಖ್ಯ ಕವನಸಂಕಲನ ಗತದೊಂದಿಗೆ ಸ್ವಗತ, ಭಾನುವಾರವೆಂದರೆ... ಕಂಪ್ಯೂಟರ್ ಹಬ್ಬ, (ಪ್ರ) ಉದಯೋನ್ಮುಕ ಕವಿಗಳ ಕವನ ಸಂಕಲನವನ್ನು ಸಂಪಾದಿಸಿ, ಪ್ರಕಟಿಸಿದ್ದಾರೆ. |
| | ಎನ್. ನಾರಾಯಣ ಬಲ್ಲಾಳ | ಪಿ.ಯು.ಸಿ. | 1962 | ಎಂ.ಜಿ.ಎಂ. ಕಾಲೇಜಿನಲ್ಲಿ ಕೇವಲ ಒಂದು ವರ್ಷದ ಪಿ.ಯು.ಸಿ. ಶಿಕ್ಷಣವನ್ನು ಪೂರೈಸಿ, ಬ್ಯಾಂಕ್‌ನಲ್ಲಿ ಉದ್ಯೋಗವನ್ನಾಶ್ರಯಿಸಿ, ಮುಂದೆ ಸ್ವಯಂ ನಿವೃತ್ತಿ ಪಡೆದವರು. ಪ್ರಮುಖ ಕೃತಿಗಗಳು:<br>ಭಾವ ಪ್ರಕಾಶ (ಸಣ್ಣಕಥೆ), ದತ್ತು ಪುತ್ರ (ಸ.ಕ) ಕೆಂಪುದ್ವೀಪ ಸಾಹಿತಿ ಮಾಹಿತಿ ಕೋಶ–ಸ್ಂಪುಟ 1–2–3 ಪ್ರಕಟಿಸಿರುತ್ತಾರೆ. ಸಾಹಿತಿಗಳ ಮೇಲೆ ವಿಶೇಷ ಗೌರವವನ್ನಿಟ್ಟುಕೊಂಡಿರುವ ಇವರು ಸಾಹಿತ್ಯ ಚಟುವಟಿಕೆಗಳಿಗೆ ಸಾಧ್ಯವಾದಷ್ಟು ಪ್ರೋತ್ಸಾಹ ನೀಡುತ್ತಾ ಬಂದವರು. ಸುಮಾರು 12 ವರ್ಷದಿಂದ ಉಡುಪಿಯನ್ನು ಬಿಟ್ಟು ಬೆಂಗಳೂರಿನಲ್ಲಿ ಖಾಯಂ ನಿವಾಸಿಗಳಾಗಿ ಅಲ್ಲಿ ಗುರುನರಸಿಂಹ ವೃದ್ಧಾಶ್ರಮದ ವ್ಯವಸ್ಥಾಪಕರಾಗಿದ್ದಾರೆ. ಅಡಿಗರ 50ನೇ ಜನ್ಮ ವರ್ಷವನ್ನು ಉಡುಪಿಯಲ್ಲಿ ಅರ್ಥಪೂರ್ಣವಾಗಿ ಆಚರಿಸಿದ್ದರು. 20ನೇ ಶತಮಾನದ ಸಾಹಿತ್ಯ ಚಟುವಟಿಕೆಯಲ್ಲಿ ಗಮನಾರ್ಹ ಪಾತ್ರವಹಿಸಿರುವುದಕ್ಕೆ ಉಡುಪಿ ಪರ್ಯಾಯ ಸಂಚಿಕೆಗಳಲ್ಲಿ ಆಧಾರಗಳಿವೆ. ಪ್ರಸ್ತುತ ಬೆಂಗಳೂರಿನಲ್ಲಿ ಗುರುನರಸಿಂಹ ವೃದ್ಧಾಶ್ರಮದ ವ್ಯವಸ್ಥಾಪಕರಾಗಿ ಜವಾಬ್ದಾರಿಯಲ್ಲಿದ್ದಾರೆ. |

| | | | | |
|---|---|---|---|---|
| | ಎಂ.ಎಲ್. ಸಾಮಗ | ಬಿ.ಎ. | 1969 | ತಾವು ಓದಿದ ಕಾಲೇಜಿನಲ್ಲಿಯೇ ಉಪನ್ಯಾಸಕರಾಗಿ ಮುಂದೆ ಅದೇ ಕಾಲೇಜಿನಲ್ಲಿ ಪ್ರಾಂಶುಪಾಲರಾಗಿ ಸೇವೆ ಸಲ್ಲಿಸಿ, ಸೇವಾ ನಿವೃತ್ತಿಯನ್ನು ಹೊಂದಿದರು. ವೃತ್ತಿಬದುಕಿನುದ್ದಕ್ಕೂ ತನ್ನ ಮೂಲ ಹವ್ಯಾಸವಾದ ಯಕ್ಷಗಾನ ಚಟುವಟಿಕೆಯಲ್ಲಿ ನಿರಂತರವಾಗಿ ತೊಡಗಿಸಿಕೊಂಡು ಅವಿಭಜಿತ ದ.ಕ. ಜಿಲ್ಲೆಯಾದ್ಯಂತ ಗುರುತಿಸಿಕೊಂಡವರು. ಜಿಲ್ಲೆಯ ವಿವಿಧ ಸಂಘಟನೆ, ವೇದಿಕೆಯವರು ಹಮ್ಮಿಕೊಳ್ಳುವ ತಾಳಮದ್ದಲೆಯಲ್ಲಿ ಅರ್ಥದಾರಿಯಾಗಿಯೂ, ವಿಚಾರ ಸಂಕಿರಣ–ಕಮ್ಮಟಗಳಲ್ಲಿ ಸಂಪನ್ಮೂಲ ವ್ಯಕ್ತಿಯಾಗಿ ಭಾಗವಹಿಸಿ, ತಮ್ಮ ಯಕ್ಷಗಾನ ಕಲೆಯ ಕುರಿತ ಅನುಭವವನ್ನು ಕಲಾಭಿಮಾನಿ ಸಹೃದಯ ಜಿಜ್ಞಾಸುಗಳೊಂದಿಗೆ ಇಂದಿಗೂ ಹಂಚಿಕೊಂಡು ಬರುತ್ತಿದ್ದಾರೆ. |
| | ಡಾ. ವ್ಯಾಸರಾವ್ ನಿಂಜೂರು | ಬಿ.ಎಸ್ಸಿ . | 1961 | ವಿಜ್ಞಾನ ಪದವೀಧರರಾಗಿ ಆರಂಭದಲ್ಲಿ ಮಣಿಪಾಲ ವೈದ್ಯಕೀಯ ಕಾಲೇಜಿನಲ್ಲಿ ವೃತ್ತಿಜೀವನವನ್ನು ಆರಂಭಿಸಿ, ಮುಂದೆ ಮುಂಬೈ ಮಹಾನಗರದ ಸಂಶೋಧನ ಸಂಸ್ಥೆಯಲ್ಲಿ ತಮ್ಮ ವೃತ್ತಿ ಜೀವನವನ್ನು ಮುಂದುವರಿಸಿದ್ದರು. ಸಣ್ಣಕಥೆ, ನಾಟಕ, ಕಾದಂಬರಿ ಕ್ಷೇತ್ರದಲ್ಲಿ ತಮ್ಮ ಸೃಷ್ಟಿಶೀಲ ಚಟುವಟಿಕೆಗಳ ಕೊಡುಗೆಗಳಿಂದ ಕನ್ನಡಿಗರಿಂದ ಗುರುತಿಸಿಕೊಂಡಿದ್ದಾರೆ. ಸಾಹಿತ್ಯ ಕ್ಷೇತ್ರದ ಇವರ ಸಾಧನೆಗಾಗಿ ರಾಜ್ಯ ಸಾಹಿತ್ಯ ಅಕಾಡೆಮಿಯಿಂದ ಪುರಸ್ಕೃತರಾಗಿರುತ್ತಾರೆ. |
| | ಈಶ್ವರಯ್ಯ | ಬಿ.ಎ. | 1961 | ಕಾಲೇಜಿನ ತನ್ನ ಸಹಪಾಠಿ ವ್ಯಾಸರಾವ್ ನಿಂಜೂರು ಜತೆಗೂಡಿ 'ಸಗ್ರಿ ಸೆಂಟಿನಲ್' ಎಂಬ ಕಾಲೇಜು ಭಿತ್ತಿಪತ್ರಿಕೆಯನ್ನು ಕಾಲೇಜಿನ ಪ್ರಾಂಶುಪಾಲರ ಪ್ರೋತ್ಸಾಹದಿಂದ ಪ್ರಾರಂಭಿಸಿ, ತನ್ನ ಬರವಣಿಗೆಯ ಕಲೆಯನ್ನು ರೂಢಿಸಿಕೊಂಡರು. ಪದವಿಯ ನಂತರ ಪತ್ರಕರ್ತರಾಗಿ ಉದ್ಯೋಗಕ್ಕಿಳಿದ ಈಶ್ವರಯ್ಯನವರು ಮಣಿಪಾಲ ಸಮೂಹ ಮಾಧ್ಯಮದ ವತಿಯಿಂದ ಅಸ್ತಿತ್ವಕ್ಕೆ ಬಂದ 'ತುಷಾರ'ದ ಸ್ಥಾಪಕ ಸಂಪಾದಕರಾಗಿ ಆ ಪತ್ರಿಕೆಯ ಯಶಸ್ಸಿಗೆ ಕಾರಣಕರ್ತರಾದರು. 'ಪ್ರಮಾಣ' ಎಂಬ ಸಣ್ಣಕಥೆಯನ್ನೂ, 'ಅವಸಾನ' ಎಂಬ ಅನುದಾವಿತ ಸಣ್ಣಕತೆಯನ್ನು ಪ್ರಕಟಿಸಿದ್ದರು. ಇವರ ಬರವಣಿಗೆಯ ಶೈಲಿ ಮತ್ತು ನಿರೂಪಣಾ ಕ್ರಮ ಹಾಗೂ ಸಂಚಿಕೆಯ ಒಳಹೂರಣ ವಿನ್ಯಾಸವನ್ನು ಗಮನಿಸಿ, ಕರ್ನಾಟಕ ಪತ್ರಿಕಾ ಅಕಾಡೆಮಿ ಪ್ರಶಸ್ತಿಯನ್ನು ನೀಡಿ ಗೌರವಿಸಿದೆ. ಸಾಹಿತ್ಯ ಮಾತ್ರವಲ್ಲದೆ ಸಂಗೀತ, ನೃತ್ಯ, ಛಾಯಾಚಿತ್ರ, ಮುಂತಾದ ಕಲೆಗಳ ಕುರಿತಾಗಿ ತನ್ನ ಸ್ವಂತ ಪರಿಶ್ರಮದಿಂದ ವಿಶೇಷ ವಿದ್ವತ್ತನ್ನು ಪಡೆದುಕೊಂಡ ಇವರಿಗೆ ರಂಗವಾಚಸ್ಪತಿ ಪ್ರಶಸ್ತಿ ಹಾಗೂ ಕರ್ನಾಟಕ ಸಂಗೀತ ನೃತ್ಯ ಅಕಾಡೆಮಿಯ ಪ್ರಶಸ್ತಿಯೂ ಲಭಿಸಿದೆ. |

| | | | |
|---|---|---|---|
| ಬಿ.ಸಿ. ರಾವ್ ಶಿವಪುರ | 1971 | ಬಿ.ಎ. | ಕು.ಶಿ. ಹರಿದಾಸ ಭಟ್ಟರ ಶಿಷ್ಯರಾಗಿ ತಮ್ಮ ಪದವಿ ಶಿಕ್ಷಣದ ಸಂದರ್ಭದಲ್ಲಿಯೇ ಸಾಹಿತ್ಯ ಸಂಘಟನೆಗಳಲ್ಲಿ ತೊಡಗಿಸಿಕೊಂಡು ಪದವಿಯ ಅನಂತರ ತಮ್ಮ ಹುಟ್ಟೂರಿನ ಹಿರಿಯ ಪ್ರಾಥಮಿಕ ಶಾಲೆಯಲ್ಲಿ ಅಧ್ಯಾಪಕರಾಗಿ ವೃತ್ತಿ ಬದುಕಿಗೆ ಕಾಲಿಟ್ಟರು. ಹರಿಕಥೆಯೆಂಬ ಸಾಂಸ್ಕೃತಿಕ ಚಟುವಟಿಕೆಯಲ್ಲಿ ಕಾಲೇಜು ದಿನಗಳಿಂದಲೇ ಅಭಿರುಚಿ ರೂಢಿಸಿಕೊಂಡ ಇವರು ವಿವಿಧ ಸಂಘಟನೆಗಳು ಹಮ್ಮಿಕೊಳ್ಳುವ ಹರಿಕಥಾ ಕಾಲಕ್ಷೇಪ ಕಾರ್ಯಕ್ರಮದಲ್ಲಿ ಹರಿದಾಸರಾಗಿ ಗುರುತಿಸಿಕೊಂಡಿದ್ದಾರೆ. |
| ಉದ್ಯಾವರ ಮಾಧವ ಆಚಾರ್ಯ | 1963 | ಬಿ.ಎ. | ಕಾಲೇಜಿನ ಭಿತ್ತಿಪತ್ರ ಸಗ್ರಿ ಸೆಂಟಿನಲ್ ವೇದಿಕೆಯನ್ನು ವಿದ್ಯಾರ್ಥಿಯಾಗಿ ತಮ್ಮ ಲಿಖಿತ ಚಟುವಟಿಕೆಗೆ ವೇದಿಕೆಯಾಗಿ ಬಳಸಿಕೊಂಡರು. ಅರ್ಥಶಾಸ್ತ್ರ ವಿಷಯದಲ್ಲಿ ಸ್ನಾತಕೋತ್ತರ ಪದವಿಯನ್ನು ಪಡೆದು, ಆರಂಭದಲ್ಲಿ ಕುಂದಾಪುರದ ಭಂಡಾರ್ಕಾರ್ಸ್ ಕಾಲೇಜಿನಲ್ಲಿ ತಮ್ಮ ವೃತ್ತಿ ಜೀವನವನ್ನು ಆರಂಭಿಸಿ ಮುಂದೆ ಉಡುಪಿಯ ಪೂರ್ಣಪ್ರಜ್ಞ ಕಾಲೇಜಿನಲ್ಲಿ ತಮ್ಮ ಸೇವೆಯನ್ನು ಮುಂದುವರಿಸಿ, ಅಲ್ಲಿಯೇ ನಿವೃತ್ತರಾದರು. ಸಾಹಿತ್ಯ ಚಟುವಟಿಕೆಗಳೊಂದಿಗೆ ಸಾಂಸ್ಕೃತಿಕ ಚಟುವಟಿಕೆಗಳಲ್ಲಿ ವಿಶೇಷ ಅಭಿರುಚಿಯನ್ನು ರೂಢಿಸಿಕೊಂಡ ಮಾಧವಾಚಾರ್ಯರು ಕಾಲೇಜು ವಿದ್ಯಾರ್ಥಿಗಳನ್ನು ರಂಗಚಟುವಟಿಕೆಯತ್ತ ಪ್ರೇರೇಪಿಸುವಲ್ಲಿ ತಮ್ಮ ಸೇವೆಯುದ್ದಕ್ಕೂ ಸಾಕಷ್ಟು ಶ್ರಮಿಸಿದ್ದರು. ರಜತರಂಗ ಎಂಬ ರಂಗಪತ್ರಿಕೆಯನ್ನು ಹುಟ್ಟುಹಾಕಿ ನಾಲ್ಕು ಸಂಚಿಕೆಗಳನ್ನು ಹೊರತಂದಿದ್ದಾರೆ. ಸಣ್ಣಕಥೆ ಪ್ರಕಾರವನ್ನು ತನ್ನ ಅಭಿವ್ಯಕ್ತಿಯಾಗಿ ಬಳಸಿಕೊಂಡು ಆರು ಕಥಾಸಂಕಲನಗಳನ್ನು ಹೊರತಂದಿರುತ್ತಾರೆ. ಕನ್ನಡ ಸಾಹಿತ್ಯಕ್ಕೆ ನೀಡಿದ ಕೊಡುಗೆಗಳಿಂದಾಗಿ ಕನ್ನಡ ಸಾಹಿತ್ಯ ಪ್ರಶಸ್ತಿ ಮತ್ತು ರಾಜ್ಯೋತ್ಸವ ಪ್ರಶಸ್ತಿಯಿಂದ ಪುರಸ್ಕೃತಗೊಂಡಿರುತ್ತಾರೆ. |
| ಶಿವಪ್ರಸಾದ್ ಶೆಟ್ಟಿಗಾರ್ | ಬಿ.ಎ. | 1995 | ಆಂಗ್ಲಭಾಷೆಯನ್ನು ಐಚ್ಛಿಕವಾಗಿ ಅಭ್ಯಾಸ ಮಾಡಿ, ಕಾಲೇಜಿನ ಸಾಹಿತ್ಯಚಟುವಟಿಕೆಗಳಲ್ಲಿ ಆಸಕ್ತಿಯಿಂದ ಪಾಲ್ಗೊಳ್ಳುತ್ತಿದ್ದ ಇವರು ಪ್ರಸ್ತುತ ವಿವೇಕ ಪದವಿಪೂರ್ವ ಕಾಲೇಜಿನಲ್ಲಿ ಆಂಗ್ಲಭಾಷಾ ಉಪನ್ಯಾಸಕರಾಗಿ ಕರ್ತವ್ಯ ನಿರ್ವಹಿಸುತ್ತಿದ್ದಾರೆ. ಉಡುಪಿ ಪರಿಸರದ ಸಾಹಿತ್ಯ ಚಟುವಟಿಕೆ ಮತ್ತು ವಿವಿಧ ಸಾಂಸ್ಕೃತಿಕ ಚಟುವಟಿಕೆಗಳಲ್ಲಿ ಸಕ್ರಿಯವಾಗಿ ತೊಡಗಿಸಿಕೊಂಡಿದ್ದಾರೆ. |
| ವಸಂತಿ ಅಂಬಲ್ಪಾಡಿ | ಬಿ.ಎ. | 1994 | ಕನ್ನಡ ಐಚ್ಛಿಕದೊಂದಿಗೆ ಬಿ.ಎ. ಪದವಿಯ ಅನಂತರ ಕನ್ನಡದಲ್ಲಿ ಸ್ನಾತಕೋತ್ತರ ಪದವಿಯನ್ನು ಪಡೆದು, ಪ್ರಸ್ತುತ ಉಡುಪಿ ಜಿಲ್ಲೆಯ ಸರಕಾರಿ ಕಾಲೇಜೊಂದರಲ್ಲಿ ಕನ್ನಡ ಉಪನ್ಯಾಸಕರಾಗಿ ಕರ್ತವ್ಯ ನಿರ್ವಹಿಸುತ್ತಿದ್ದಾರೆ. 'ಹಕ್ಕಿಯ ಮೊದಲ ಹಾಡು ಮತ್ತು ತಾರೆಗಳ ಪಿಸುಮಾತು ಎಂಬ ಎರಡು ಕವನಸಂಕಲನಗಳನ್ನು ಪ್ರಕಟಿಸಿರುತ್ತಾರೆ. |

| | | | | |
|---|---|---|---|---|
| . | ಶಶಿಕಾಂತ | ಬಿ.ಎ. | 1994 | ಆಂಗ್ಲಭಾಷೆಯನ್ನು ಐಚ್ಛಿಕವಾಗಿ ಅಭ್ಯಾಸಮಾಡಿ ಬಿ.ಎ. ಪದವಿಯನ್ನು ಪೂರೈಸಿದ ಇವರು ಆಂಗ್ಲಭಾಷೆಯಲ್ಲಿ ಸ್ನಾತಕೋತ್ತರ ಪದವಿಯನ್ನು ಪಡೆದು, ಪ್ರಸ್ತುತ ಸುರತ್ಕಲ್‌ನ ಎನ್.ಐ.ಟಿ.ಕೆ ಸಂಸ್ಥೆಯಲ್ಲಿ ಆಂಗ್ಲಭಾಷಾ ಉಪನ್ಯಾಸಕರಾಗಿ ಕರ್ತವ್ಯನಿರ್ವಹಿಸುತ್ತಿದ್ದಾರೆ. ಅಲ್ಲಿನ ವಿದ್ಯಾರ್ಥಿಗಳಿಗೆ ಭಾಷಾ ಪಠ್ಯದ ಸಹಿತ ಸಾಹಿತ್ಯ ಮತ್ತು ಸಾಂಸ್ಕೃತಿಕ ಚಟುವಟಿಕೆಗಳಿಗೂ ಮಾರ್ಗದರ್ಶನ ನೀಡುತ್ತಿದ್ದಾರೆ. |
| . | ಶಶಿಧರ ಮಾಸ್ತಿಬೈಲು | ಬಿ.ಎ. | 1995 | ಸುವರ್ಣ ಚಾನೆಲ್‌ನಲ್ಲಿ ಸುದ್ದಿ ಸಂಪಾದಕರಾಗಿ ಕಾರ್ಯನಿರ್ವಹಿಸುತ್ತಿದ್ದಾರೆ. |
| . | ಸುಧೀರ್‌ರಾಜ್ | ಬಿ.ಕಾಂ. | 1995 | ಎಂ.ಜಿ.ಎಂ. ಕಾಲೇಜಿನಲ್ಲಿ ಪದವಿ ವ್ಯಾಸಂಗ ಮಾಡುತ್ತಿದ್ದಾಗಲೇ ಸಾಂಸ್ಕೃತಿಕ ಚಟುವಟಿಕೆಗಳಲ್ಲಿ ವಿಶೇಷ ಅಭಿರುಚಿಯುಳ್ಳವರಾಗಿದ್ದು, ಪದವಿ ಶಿಕ್ಷಣದ ಅನಂತರ 'ನೃತ್ಯನಿಕೇತನ' ಎಂಬ ಸಂಸ್ಥೆಯನ್ನು ಸ್ಥಾಪಿಸಿ, ಈಗಲೂ ನಡೆಸಿಕೊಂಡು ಬರುತ್ತಿದ್ದಾರೆ. |
| . | ನಿರಂಜನ ವಾನಳ್ಳಿ | ಪಿ.ಯು.ಸಿ. | | ಮೈಸೂರು ವಿಶ್ವವಿದ್ಯಾನಿಲಯದ ಪತ್ರಿಕೋದ್ಯಮ ವಿಭಾಗದ ಪ್ರಾಧ್ಯಾಪಕರಾಗಿರುವ ಇವರ ಜೀವನಕ್ಕೆ ಮುಖ್ಯ ತಿರುವು ದೊರೆತಿರುವುದು ಎಂ. ಜಿ.ಎಂ. ಕಾಲೇಜಿನ ಸ್ಪೀಕರ್ಸ್ ಕ್ಲಬ್‌ನ ಕಾರ್ಯದರ್ಶಿಯಾಗಿ ಕಳೆದ ಅನುಭವದಿಂದ ಎನ್ನುವುದು ಅವರೇ ನೀಡಿದ ಹೇಳಿಕೆಯಾಗಿದೆ. 'ಸೋಡಿಗದ್ದೆಯ ಚಲುವೆಯರು' 'ಎರಡು ದಡಗಳ ನಡುವೆ', 'ಮೊಗೆದಷ್ಟೂ ನೆನಪುಗಳು', 'ಪ್ರೀತಿಗೆಷ್ಟು ಮುಖಗಳು?', ಇವಿಷ್ಟು ಅವರ ಕವನ ಸಂಕಲನಗಳು. |
| . | ದೇವು ಹನೆಹಳ್ಳಿ | ಬಿ.ಎ. | 1986 | ಆಕಾಶವಾಣಿ ಪ್ರಸಾರ ನಿರ್ವಾಹಕರಾಗಿ ಕಾರ್ಯನಿರ್ವಹಿಸುತ್ತಿರುವ ಇವರು 'ಹೊನ್ನ ಬಣ್ಣದ ತೊನ್ನು' ಎಂಬ ಸಣ್ಣ ಕಥಾ ಸಂಕಲನವನ್ನು ಶಿಲೆಯೊಳಗಿನ ಕಪ್ಪೆ ಎಂಬ ಕಾದಂಬರಿಯನ್ನೂ ಪ್ರಕಟಿಸಿದ್ದು, ಇವರ ಒಂದು ಗದ್ಯ ಪ್ರಬಂಧವು ಮಂಗಳೂರು ವಿಶ್ವವಿದ್ಯಾಲಯದ ಪದವಿ ವಿದ್ಯಾರ್ಥಿಗಳಿಗೆ ಕನ್ನಡ ಪಠ್ಯವಾಗಿತ್ತು. |
| | ಜಯತೀರ್ಥಾಚಾರ್ಯ | ಪಿ.ಯು.ಸಿ. | 1994 | ಎಂ. ಜಿ.ಎಂ. ಕಾಲೇಜಿನ ಪ್ರಾಕ್ತನ ವಿದ್ಯಾರ್ಥಿಯಾದ ಇವರ್ ಇವರು ಉಡುಪಿಯ ಶ್ರೀ ರಾಘವೇಂದ್ರ ಮಠದ ವ್ಯವಸ್ಥಾಪಕರಾಗಿ ಅಧಿಕಾರ ಸ್ವೀಕರಿಸಿದರು. ಸಾಹಿತ್ಯ, ಸಂಗೀತ, ಚಿತ್ರಕಲೆ ಮುಂತಾದ ಲಲಿತಕಲೆಗಳ್‌ಲ್ಲಿ ಲಲಿತಕಲೆಗಳಲ್ಲಿ ಅಭಿರುಚಿ ಇರುವ ಇವರು ಪ್ರತಿ ಗುರುವಾರದಂದು ಮಠದಲ್ಲಿ ರಾಘವೇಂದ್ರ ಗುರುಗಳ ಸ್ವರಚಿತ ರಚನೆಯ ಕೀರ್ತನೆಗಳನ್ನು ಹಾಡುವುದಕ್ಕೆ ಭಕ್ತರಿಗೆ ಅವಕಾಶವನ್ನೊದಗಿಸಿದರು. ಶ್ರೀ ರಾಘವೇಂದ್ರ ಸ್ವಾಮಿಗಳ ಜನ್ಮ ನಕ್ಷತ್ರದಂದು ವರ್ಷಂಪ್ರತಿ ಆಚರಿಸಿಕೊಂಡು ಬರುವ ಆರಾಧನೆಯಂದು ಧಾರ್ಮಿಕ ಕಾರ್ಯಕ್ರಮಗಳ ಸಹಿತ ವಿವಿಧ ಸಾಹಿತ್ಯ ಕಾರ್ಯಕ್ರಮಗಳಿಗೂ (ವಿಶೇಷವಾಗಿ ಉಪನ್ಯಾಸ) ಅವಕಾಶವನ್ನೊದಗಿಸಿದರು. |

ರ್ಣಪ್ರಜ್ಞ ಕಾಲೇಜು, ಉಡುಪಿ ಇಲ್ಲಿನ ಕನ್ನಡ ಸಾಹಿತ್ಯಚಟುವಟಿಕೆಗಳಿಂದ ಪ್ರೇರಿತರಾಗಿ, ಸಾಹಿತ್ಯ ಚಟುವಟಿಕೆಗಳಲ್ಲಿ
ೂಡಗಿಸಿಕೊಂಡ ವಿದ್ಯಾರ್ಥಿಗಳ ಮಾಹಿತಿ : ಅನುಬಂಧ ಸಂಖ್ಯೆ : 7

| ಸ | ಹೆಸರು | ಪದವಿ | ಪಡೆದ ವರ್ಷ | ಸಾಹಿತ್ಯಚಟುವಟಿಕೆಗಳಲ್ಲಿ ತೊಡಗಿಕೊಂಡ ಬಗೆ |
|---|---|---|---|---|
| | 2 | 3 | 4 | 5 |
| | ಡಾ. ರಘುಪತಿ ಭಟ್ ಕೆಮ್ತೂರು | ಬಿ.ಎ. | 1974 | ಆರ್ಕೆ ಮಣಿಪಾಲ ಎಂಬ ಹೆಸರಿನಲ್ಲಿ ಖ್ಯಾತರಾದ ಇವರು ಸೃಷ್ಟಿಶೀಲ ಚಟುವಟಿಕೆಗಳಲ್ಲೂ ಸಾಮಾಜಿಕ ಹೋರಾಟಗಳಲ್ಲೂ ಮುಂಚೂಣಿಯಲ್ಲಿದ್ದು, ಜಿಲ್ಲೆಯಾದ್ಯಂತ ಸಾಹಿತ್ಯವಲಯದಲ್ಲಿ ಪರಿಚಿತರು. ಶಿಕ್ಷಣ ಮತ್ತು ವೈಚಾರಿಕತೆ ಇವರ ವಿಮರ್ಶಾತ್ಮಕ ಲೇಖನವಾಗಿದ್ದು, ಅಂಬೇಡ್ಕರ್ ಮತ್ತು ನನ್ನೂರ ಕೊರಗನ ಆನೆಕಾಲು, ಷಣ್ಮುಖ, ಕಾವ್ಯಕನ್ನಿಕೆಯ ಸೆರಗು ಸರಿಸಿ ಇವರ ಪ್ರಮುಖ ಕ್ಞಾನ ಸಂಕಲನಗಳಾಗಿವೆ. 'ತುಳುನಾಡಿನ ಸ್ಥಳನಾಮಗಳು' ಎಂಬ ಸಂಶೋಧನಾ ಪ್ರಬಂಧಕ್ಕೆ ಮಂಗಳೂರು ವಿಶ್ವವಿದ್ಯಾನಿಲಯದಿಂದ ಡಾಕ್ಟರೇಟ್ ಪದವಿಯನ್ನು ಪಡೆದವರು. |
| | ಡಾ. ಕೆ. ಸುಬ್ರಹ್ಮಣ್ಯ ಭಟ್ | ಬಿ.ಎ. | 1964-67 | ಮಂಗಳೂರು ವಿಶ್ವವಿದ್ಯಾನಿಲಯದ ಕನ್ನಡ ವಿಭಾಗದ ಪ್ರಾಧ್ಯಾಪಕರಾಗಿ ಸೇವೆ ಸಲ್ಲಿಸಿ, ಮುಳಿಯ ತಿಮ್ಮಪ್ಪಯ್ಯನವರ ಕುರಿತು ಬರೆದ ಸಂಶೋಧನ ಪ್ರಬಂಧಕ್ಕೆ ಡಾಕ್ಟರೇಟ್ ಪದವಿಯನ್ನು ಪಡೆದವರು. ಕನ್ನಡ ವಿಭಾಗದ ಮುಖ್ಯಸ್ಥರಾಗಿದ್ದಾಗ ಯು.ಜಿ.ಸಿ. ನೆರವಿನಿಂದ ರಾಷ್ಟ್ರಮಟ್ಟದ ವಿಚಾರ ಸಂಕಿರಣಗಳನ್ನು ವಿಭಾಗದ ವತಿಯಿಂದ ಸಂಘಟಿಸಿದ್ದರು. |
| | ಡಾ. ವಾದಿರಾಜ ಭಟ್ ಕನರಾಡಿ | ಬಿ.ಎ. | 1968-71 | ದೇವದಾಸಿಯರ ಹಾಡುಗಳು, ಬರಹಗಾರರ ಬಳಗ, ಮೂಕಜ್ಜಿಯ ಹಾಡುಗಳು, ಬಸ್ರೂರು ಒಂದು ಅಧ್ಯಯನ ಇವರ ಸಂಪಾದಿತ ಕೃತಿಗಳು. ಕುಂದನಾಡಿನ ಜನಪದ ಕಥೆಗಳು ಇವರ ಸಂಶೋಧನ ಕೃತಿ. ಬಸ್ರೂರು ಶ್ರೀ ಶಾರದಾ ಕಾಲೇಜಿನಲ್ಲಿ ಕನ್ನಡ ಉಪನ್ಯಾಸಕರಾಗಿ ಕರ್ತವ್ಯ ನಿರ್ವಹಿಸಿ, 'ದ್ವೈತ ವೇದಾಂತ ಮತ್ತು ಪ್ರಜಾಪಿತ ಬ್ರಹ್ಮಕುಮಾರಿ ಈಶ್ವರೀಯ ವಿಶ್ವವಿದ್ಯಾನಿಲಯದ ದರ್ಶನಗಳ ತೌಲನಿಕ ಅಧ್ಯಯನ' ಸಂಶೋಧನ ಪ್ರಬಂಧವನ್ನು ಸಿದ್ಧಪಡಿಸಿ, ಮೈಸೂರು ವಿಶ್ವವಿದ್ಯಾನಿಲಯದಿಂದ ಡಾಕ್ಟರೇಟ್ ಪದವಿಯನ್ನು ಪಡೆದಿರುತ್ತಾರೆ. |
| | ಡಾ. ಮುರಾರಿ ಬಲ್ಲಾಳ್ | ಬಿ.ಕಾಂ. | 1965-69 | ನಿತ್ಯವರ್ತಮಾನ, ಈ ಕ್ಷಣದ ಸತ್ಯ, ಕುದುರೆಮುಖ, ಇವರ ಪ್ರಮುಖ ಕವನಸಂಕಲನಗಳು. ಉಡುಪಿಯ ಸಾಂಸ್ಕೃತಿಕ ಕಥನ ಇವರ ಪ್ರಮುಖ ವೈಚಾರಿಕ ಬರಹವಾಗಿದ್ದು, ಉಡುಪಿಯ ಸಾಂಸ್ಕೃತಿಕ ಮತ್ತು ಸಾಹಿತ್ಯ ಇತಿಹಾಸದ ಕುರಿತು ವಿಶೇಷ ಮಾಹಿತಿ ನೀಡುತ್ತದೆ. ರಥಬೀದಿಗೆಳೆಯವರು ಎಂಬ ಸಂಘಟನೆಯ ಕಾರ್ಯದರ್ಶಿಯಾಗಿ ಈ ಸಂಘಟನೆಯ ಮೂಲಕ ರಾಷ್ಟ್ರಮಟ್ಟದ ವಿಚಾರ ಸಂಕಿರಣಗಳನ್ನು ಹಮ್ಮಿಕೊಂಡು, ಪರಿಸರದ ಸಾಹಿತಿ ಸಹೃದಯ ವಿಮರ್ಶಕರಿಂದ ವಿಶೇಷ ಮನ್ನಣೆಗೆ ಪಾತ್ರರಾದವರು. |

| | | | |
|---|---|---|---|
| ಹಾರ್ಯಾಡಿ ಚಂದ್ರಶೇಖರ ಕೆದ್ಲಾಯ | ಬಿ.ಎ. | 1969–72 | ಪದವಿ ಶಿಕ್ಷಣದ ನಂತರ ಶಿಕ್ಷಣ ತರಬೇತಿಯನ್ನು ಪೂರೈಸಿ, ಬ್ರಹ್ಮಾವರದ ನಿರ್ಮಲಾ ಪ್ರೌಢಶಾಲೆಯಲ್ಲಿ ಕನ್ನಡ ಅಧ್ಯಾಪಕರಾಗಿ ಸೇರ್ಪಡೆಗೊಂಡು, ಇತ್ತೀಚೆಗಷ್ಟೇ ಸೇವೆಯಿಂದ ನಿವೃತ್ತಗೊಂಡರು. ಬಿ.ಆರ್. ನಾಗೇಶ್ ಅವರ ನಾಟಕದಲ್ಲಿ ಅಭಿನಯಿಸಿ, ಪರಿಸರದ ಸಹೃದಯರಿಂದ ಗುರುತಿಸಿಕೊಂಡವರು. ತಮ್ಮ ವಿಶೇಷ ಕಂಠಸಿರಿಯಿಂದ ಸಾಹಿತ್ಯವಲಯದಲ್ಲಿ ಸಹೃದಯರ ಮೆಚ್ಚುಗೆಗೊಳಗಾದವರು. |
| ಪ್ರೊ. ಎಚ್. ಕೃಷ್ಣಭಟ್ಟರು | ಬಿ.ಎ. | 1961–65 | ಪದವಿ ಶಿಕ್ಷಣದ ನಂತರ ಸಂಸ್ಕೃತದಲ್ಲಿ ಸ್ನಾತಕೋತ್ತರ ಪದವಿಯನ್ನು ಪಡೆದು, ಎಂ.ಜಿ.ಎಂ. ಕಾಲೇಜಿನಲ್ಲಿ ಸಂಸ್ಕೃತ ಉಪನ್ಯಾಸಕರಾಗಿ ಸೇವೆ ಸಲ್ಲಿಸಿ, ಕು.ಶಿ. ಹರಿದಾಸ ಭಟ್ಟರ ಸಾಹಿತ್ಯ ಚಟುವಟಿಕೆಗಳಿಗೆ ನಿರಂತರವಾಗಿ ಸಹಕರಿಸುತ್ತಾ, ಮುಂದೆ ಗೋವಿಂದ ಪೈ ಸಂಶೋಧನ ಕೇಂದ್ರದ ನಿರ್ದೇಶಕರಾದರು. ಈ ಸಂಸ್ಥೆಯ ನಿರ್ದೇಶಕರಾಗಿ ಸಂಸ್ಥೆಯ ಮೂಲಕ ಮೌಲಿಕ ಕೃತಿಗಳನ್ನು ಸಂಪಾದಿಸಿದ್ದರು. |
| ವೀಣಾ ಬನ್ನಂಜೆ | ಬಿ.ಎ. | 1984–85 | ರಥಬೀದಿ ಗೆಳೆಯರು ಸಂಘಟಿಸಿದ ಅನೇಕ ನಾಟಕಗಳಲ್ಲಿ ಅಭಿನಯಿಸಿ, ಉಡುಪಿಯ ವಿದ್ವಜ್ಜನರಿಂದ ಗುರುತಿಸಿಕೊಂಡರು. ಕನ್ನಡ ಸ್ನಾತಕೋತ್ತರ ಪದವಿಯನ್ನು ಉನ್ನತ ಅಂಕಗಳೊಂದಿಗೆ ಪಡೆದು, ಸತ್ಯಕಾಮರ ಜೀವನ ದರ್ಶನದಿಂದ ಪ್ರೇರಿತರಾಗಿ ಅವರ ವಿಚಾರಧಾರೆಗಳನ್ನು ಖಾಸಗಿ ಬದುಕಿನಲ್ಲಿ ಅಳವಡಿಸಿಕೊಂಡರು. ಸತ್ಯಕಾಮರೊಡನೆ ನನ್ನ ಸಾವಿರದ ದಿನಗಳು, ಅಕ್ಕಮಹಾದೇವಿಯ ದ್ವೈತ, ಎಚ್ಚರದ ಕನಸು, ಅಕ್ಕನ ಹಾದಿ, ಲೋಕಾಂತ ಇವರ ಮುಖ್ಯ ಕೃತಿಗಳು. |
| ವಿಷ್ಣುಮೂರ್ತಿ ಭಾಗವತ | ಬಿ.ಎ. | 1961–65 | ಪೂರ್ಣಪ್ರಜ್ಞ ಕಾಲೇಜಿನಲ್ಲಿ ಸಂಸ್ಕೃತವನ್ನು ಐಚ್ಛಿಕ ವಿಷಯವಾಗಿ ಅಭ್ಯಾಸಮಾಡಿ, ತನ್ನ ಪದವಿಯ ನಂತರ ಕಾಂಚನ ಪ್ರೌಢಶಾಲೆಯಲ್ಲಿ ಅಧ್ಯಾಪಕರಾಗಿ ಸೇವೆ ಸಲ್ಲಿಸುತ್ತಾ ಸಂಗೀತದಲ್ಲಿ ವಿಶೇಷ ಪರಿಶ್ರಮವನ್ನು ಹೊಂದಿ, ಖ್ಯಾತರಾದರು. ಸದ್ಯ ಪುತ್ತೂರು ತಾಲೂಕಿನ 'ಕಾಂಚನ'ದಲ್ಲಿ ನೆಲೆಯಾಗಿದ್ದಾರೆ. |
| ಎಸ್. ಕೆ. ವಸಂತರಾಜ್ | ಬಿ.ಎಸ್ಸಿ. | 1971–74 | ಬಿ.ಎಸ್ಸಿ. ಪದವಿಯ ನಂತರ ಇಂಜಿನಿಯರಿಂಗ್ ಪದವಿಯನ್ನು ಪಡೆದು, ತಮ್ಮ ವೃತ್ತಿ ಬದುಕಿನಲ್ಲಿ ಅಮೇರಿಕಾ, ಇಂಗ್ಲೆಂಡ್, ಹಾಲೆಂಡ್ ಮುಂತಾದ ವಿವಿಧ ದೇಶಗಳಲ್ಲಿ ಸುತ್ತಾಡಿ, ವೈಚಾರಿಕ ಕ್ಷೇತ್ರದಲ್ಲಿ ಅಪಾರ ಅನುಭವವನ್ನು ಪಡೆದುಕೊಂಡವರು. ಕನ್ನಡದಲ್ಲಿ ತಮ್ಮ ಬರವಣಿಗೆಯನ್ನು ಆರಂಭಿಸಿ, ಸ್ವತಃ 'ಚಿಂತನ ಪಬ್ಲಿಕೇಶನ್ಸ್' ಎಂಬ ಪ್ರಕಟನಾ ಸಂಸ್ಥೆಯನ್ನು ಹುಟ್ಟುಹಾಕಿದ್ದು, 'ಅಮೇರಿಕಾದೊಳಗೊಂದು ಇಣುಕು' ಎಂಬ ಪ್ರವಾಸ ಕಥನವನ್ನು ಆ ಪ್ರಕಾಶನದ ಮೂಲಕವೇ ಪ್ರಕಟಿಸಿರುತ್ತಾರೆ. ಈ ಕೃತಿಗೆ ಕರ್ನಾಟಕ ಸಾಹಿತ್ಯ ಅಕಾಡೆಮಿ ಪ್ರಶಸ್ತಿಯೂ ದೊರಕಿದೆ. |

| | | | |
|---|---|---|---|
| ಮುರಳೀ ಕಡೆಕಾರ್ | ಬಿ.ಎ. | 1983–87 | ಉಡುಪಿಯ ಯಕ್ಷಗಾನ ಕಲಾರಂಗದ ಕಾರ್ಯದರ್ಶಿಯಾಗಿ ಆ ಸಂಘಟನೆಯನ್ನು 25 ವರ್ಷದಿಂದ ನಡೆಸಿಕೊಂಡು ಬರುತ್ತಿದ್ದಾರೆ. ಯಕ್ಷಗಾನ ಕಲಾವಿದರ ಕ್ಷೇಮ ಚಿಂತನೆಯೇ ಸಂಘಟನೆಯ ಪ್ರಮುಖ ಧ್ಯೇಯವಾಗಿದ್ದು, ಉಡುಪಿ ಪರಿಸರದಲ್ಲಿ ನಡೆಯುವ ಎಲ್ಲ ಸಾಹಿತ್ಯಚಟುವಟಿಕೆಗಳಲ್ಲೂ ಸಕ್ರಿಯವಾಗಿ ತೊಡಗಿಸಿಕೊಳ್ಳುವವರು. |
| ಭರತ್ ಕುಮಾರ್ ಪೊಲಿಪು | ಬಿ.ಎ. | 1984–89 | ಪ್ರಸ್ತುತ ಪದವಿಪೂರ್ವ ಕಾಲೇಜೊಂದರಲ್ಲಿ ಉಪನ್ಯಾಸಕರಾಗಿರುವ ಇವರು ಉಡುಪಿ ಪೂರ್ಣಪ್ರಜ್ಞ ಕಾಲೇಜಿನಿಂದ ಅಧ್ಯಯನದ ಸಂದರ್ಭದಿಂದಲೇ ಸಾಹಿತ್ಯ ಚಟುವಟಿಕೆಗಳಲ್ಲಿ ಅಭಿರುಚಿ ರೂಢಿಸಿಕೊಂಡವರು. ನಾಟಕ ಕ್ಷೇತ್ರದಲ್ಲಿ ವಿಶೇಷವಾಗಿ ಗುರಿತಿಸಿಕೊಂಡ ಇವರು ತಮ್ಮ ವಿದ್ಯಾರ್ಥಿಗಳನ್ನು ಆ ಕ್ಷೇತ್ರದ ಕಡೆಗೆ ಪ್ರೇರೇಪಿಸುತ್ತಿರುವುದು ಅವರ ಚಟುವಟಿಕೆಯಿಂದ ಗುರುತಿಸಬಹುದಾಗಿದೆ. |
| ಪ್ರಸಾದ್ ರಾವ್ | ಬಿ.ಎ. | 1984–89 | ಉಡುಪಿ ಸ್ನಾತಕೋತ್ತರ ಅಧ್ಯಯನ ಕೇಂದ್ರ ತೆಂಕನಿಡಿಯೂರು ಇಲ್ಲಿ ಆಂಗ್ಲಭಾಷಾ ಉಪನ್ಯಾಸಕರಾಗಿ ಕರ್ತವ್ಯ ನಿರ್ವಹಿಸುತ್ತಿದ್ದಾರೆ. ಉಡುಪಿಯ ರಂಗಭೂಮಿ ಚಟುವಟಿಕೆಗಳಲ್ಲಿ ತೊಡಗಿಸಿಕೊಂಡಿದ್ದಾರೆ. |
| ವಿಷ್ಣುಮೂರ್ತಿ ಪ್ರಭು | ಬಿ.ಎ. | 1996–99 | ಪ್ರಸ್ತುತ ಉಡುಪಿ ಜಿಲ್ಲೆಯ ಹೆಬ್ರಿ ಸರಕಾರಿ ಪ್ರಥಮದರ್ಜೆ ಕಾಲೇಜಿನಲ್ಲಿ ಆಂಗ್ಲ ಭಾಷಾ ಅಧ್ಯಾಪಕರಾಗಿ ಕರ್ತವ್ಯ ನಿರ್ವಹಿಸುತ್ತಿದ್ದಾರೆ. |
| ಪಿ.ಬಿ. ಪ್ರಸನ್ನ | ಬಿ.ಎ. | 1986–91 | ಸರಕಾರಿ ಕಾಲೇಜಿನಲ್ಲಿ ಪ್ರಸ್ತುತ ಕನ್ನಡ ಉಪನ್ಯಾಸಕರಾಗಿ ಕರ್ತವ್ಯ ನಿರ್ವಹಿಸುತ್ತಿದ್ದಾರೆ. 'ಗಣಪ ಮತ್ತು ಗಾಂಪ' ಇವರ ಸಣ್ಣ ಕಥಾ ಸಂಕಲನವಾಗಿದ್ದು, 'ಡೀಸೆಂಟಾಗಿ ಬೈಯುವುದು' ಇವರ ನಗೆಬರಹ ಪ್ರಬಂಧ ಕೃತಿಯಾಗಿರುತ್ತದೆ. |
| ಶ್ರೀಪಾದ ಭಟ್ | ಬಿ.ಎ. | 1979–82 | ಮಂಗಳೂರು ವಿಶ್ವವಿದ್ಯಾನಿಲಯದಿಂದ ಆಂಗ್ಲಭಾಷೆಯಲ್ಲಿ ಸ್ನಾತಕೋತ್ತರ ಪದವಿಯನ್ನು ಪೂರೈಸಿ, ಪ್ರಸ್ತುತ ಗೋವಾ ವಿಶ್ವವಿದ್ಯಾನಿಲಯದ ಆಂಗ್ಲ ಭಾಷಾ ವಿಭಾಗದಲ್ಲಿ ಪ್ರಾಧ್ಯಾಪಕರಾಗಿ ಕರ್ತವ್ಯನಿರ್ವಹಿಸುತ್ತಿದ್ದಾರೆ. |
| ಅಶ್ವತ್ಥ ಬಾರಧ್ವಾಜ | ಬಿ.ಎ. | 2000–03 | ಪ್ರಸ್ತುತ ಪೂರ್ಣಪ್ರಜ್ಞ ಕಾಲೇಜಿನಲ್ಲಿ ಕನ್ನಡ ಉಪನ್ಯಾಸಕರಾಗಿದ್ದಾರೆ. |
| ಮಂಜುನಾಥ ಕರಬ | ಬಿ.ಎ. | 1996–99 | ಪ್ರಸ್ತುತ ಪೂರ್ಣಪ್ರಜ್ಞ ಕಾಲೇಜಿನಲ್ಲಿ ಕನ್ನಡ ಉಪನ್ಯಾಸಕರಾಗಿದ್ದಾರೆ. |
| ಜಡಭರತ ಶರ್ಮ | ಬಿ.ಎಸ್ಸಿ. | 1986–89 | ಎಸ್.ವಿ.ಎಸ್. ಪದವಿಪೂರ್ವ ಕಾಲೇಜು, ಕಟಪಾಡಿ ಇಲ್ಲಿ ಭೌತಶಾಸ್ತ್ರ ಅಧ್ಯಾಪಕರಾಗಿ ಕರ್ತವ್ಯ ನಿರ್ವಹಿಸುತ್ತಾ, ಉಡುಪಿ ನಗರ ಪರಿಸರದ ಸಾಹಿತ್ಯಚಟುವಟಿಕೆಗಳಲ್ಲಿ ನಿರಂತರವಾಗಿ ತೊಡಗಿಸಿಕೊಂಡಿದ್ದಾರೆ. |
| ಕೆ. ರಾಧಾಕೃಷ್ಣ ಆಚಾರ್ಯ | ಬಿ.ಎ. | 1979–83 | ಮಣಿಪಾಲ ಇಂಜಿನಿಯರಿಂಗ್ ಕಾಲೇಜಿನ ಅರ್ಥಶಾಸ್ತ್ರ ವಿಭಾಗದ ಉಪನ್ಯಾಸಕರಾಗಿದ್ದ ಇವರು ಆರ್.ಎಲ್. ಭಟ್ಟರ 'ಸ್ನಾನ' ನಾಟಕದಲ್ಲಿ ಹಿಮ್ಮೇಳದಲ್ಲಿ ದುಡಿದಿದ್ದರು. |

| | | | | |
|---|---|---|---|---|
| | ಪಿ.ಎನ್. ರಾಮಚಂದ್ರ | ಬಿ.ಎ. | 1987–90 | ಇವರು ಸಿನಿಮಾ ರಂಗತರಬೇತಿ ಸಂಸ್ಥೆಯಲ್ಲಿ ಅಭಿನಯ ಮತ್ತು ರಂಗಕಲೆಯ ಕುರಿತು ಹೆಚ್ಚಿನ ತರಬೇತಿಯನ್ನು ಪಡೆದು, ಸಿನೆಮಾ ಕ್ಷೇತ್ರದಲ್ಲಿ ನೀಡಲಾಗುವ 'ಸ್ವರ್ಣಕಮಲ ಪ್ರಶಸ್ತಿ' ವಿಜೇತರಾದವರು. |
| | ವಿನಯಾ ಪ್ರಕಾಶ್ | ಬಿ.ಎ. | 1978–82 | ಸಿನೆಮಾ ನಟಿಯಾಗಿ ರೂಪುಗೊಳ್ಳುವಲ್ಲಿ ಪೂರ್ಣಪ್ರಜ್ಞದ ವಿಶೇಷ ಕೊಡುಗೆ ಇದೆ ಎನ್ನುವುದನ್ನು ಪೂರ್ಣಪ್ರಜ್ಞ ಕಾಲೇಜಿನ ಚಿನ್ನದ ಹಬ್ಬದ ಪ್ರಯುಕ್ತ ಪ್ರಕಟಿಸಿದ ಸ್ಮರಣಸಂಚಿಕೆ 'ಪೂರ್ಣಪ್ರಜ್ಞ–50' ಕೃತಿಯಲ್ಲಿ ನೇರವಾಗಿ ಹೇಳಿಕೊಂಡಿದ್ದಾರೆ. |
| | ಸುಜಾತಾ ಕುರ್ಹಟ್ಟಿ | ಬಿ.ಎ. | 1982–85 | ಪೂರ್ಣಪ್ರಜ್ಞ ಕಾಲೇಜಿನ ಕನ್ನಡ ಉಪನ್ಯಾಸಕರಾಗಿದ್ದ ಚಂದ್ರಶೇಖರ ಯಾದವಾಡರ ಸುಪುತ್ರಿಯಾಗಿ ಕಾಲೇಜು ಶಿಕ್ಷಣದ ಸಂದರ್ಭದಲ್ಲಿ ನಾಟಕದ ಕುರಿತು ವಿಶೇಷ ಅಭಿರುಚಿಯನ್ನು ರೂಢಿಸಿಕೊಂಡರು. ಅದೇ ಅನುಭವವನ್ನು ಮುಂದೆ ದುಡಿಸಿಕೊಳ್ಳುತ್ತಾ ಧಾರವಾಹಿಗಳಲ್ಲಿ ಅಭಿನಯಿಸುತ್ತಾ ಕನ್ನಡಿಗರಿಂದ ಗುರುತಿಸಿಕೊಂಡಿದ್ದಾರೆ. |
| | ಡಾ. ಶ್ರೀಧರ ಉಪ್ಪೂರ | ಬಿ.ಎ. | 1973 | |

~*~

ೀ ಭುವನೇಂದ್ರ ಕಾಲೇಜು, ಕಾರ್ಕಳ ಇಲ್ಲಿನ ಕನ್ನಡ ಸಾಹಿತ್ಯಚಟುವಟಿಕೆಗಳಿಂದ ಪ್ರೇರಿತರಾಗಿ, ಸಾಹಿತ್ಯ ಚಟುವಟಿಕೆಗಳಲ್ಲಿ
ಡಗಿಸಿಕೊಂಡ ವಿದ್ಯಾರ್ಥಿಗಳ ಮಾಹಿತಿ : ಅನುಬಂಧ ಸಂಖ್ಯೆ: 8

| ಸಂ. | ಹೆಸರು | ಶಿಕ್ಷಣ | ಪದವಿ ಪಡೆದ ವರ್ಷ | ಸಾಹಿತ್ಯ ಕೊಡುಗೆಗಳು |
|---|---|---|---|---|
| | ಪ್ರಭಾಕರ ಜೋಷಿ | ಬಿ.ಕಾಂ. | 1966 | ಬೆಸೆಂಟ್ ಪಿ.ಯು. ಕಾಲೇಜಿನ ಪ್ರಾಂಶುಪಾಲರಾಗಿ ನಿವೃತ್ತಿ ಹೊಂದಿದ ಇವರು, ಜಾಗರ, ಕೇದಿಗೆ, ಮಾರುಮಾಲೆ, ವಾಗರ್ಥ, ಯಕ್ಷಗಾನ ಪದಕೋಶ ಎಂಬೀ ವಿಮರ್ಶಾ ಕೃತಿಗಳನ್ನು, ಕುಕ್ಕಿಲ ಸಂಪುಟ, ಅರ್ಥಗಾರಿಕೆ ಸ್ವರೂಪ ಸಮೀಕ್ಷೆ, ಯಕ್ಷಗಾನ ಚಿಂತನ, ಯಕ್ಷಗಾನ ಮಕರಂದ ಎಂಬ ಸಂಪಾದಿತ ಕೃತಿಗಳನ್ನು ಪ್ರಕಟಿಸಿರುತ್ತಾರೆ. ಜಾನಪದ ಮತ್ತು ಯಕ್ಷಗಾನ ಅಕಾಡೆಮಿ ಪ್ರಶಸ್ತಿಯಿಂದ ಎರಡು ಬಾರಿ ಪುರಸ್ಕೃತಗೊಂಡಿರುತ್ತಾರೆ. |
| | ರಾಘವ ನಂಬಿಯಾರ್ | ಬಿ.ಎಸ್ಸಿ. | 1969 | ಉದಯವಾಣಿ ದೈನಿಕ ದಿನಪತ್ರಿಕೆಯ ಉಪಸಂಪಾದಕರಾಗಿ ವೃತ್ತಿಜೀವನವನ್ನು ಆರಂಭಿಸಿ, ಇಂದಿಗೂ ಅದೇ ಕ್ಷೇತ್ರದಲ್ಲಿ ಮುಂದುವರಿಯುತ್ತಿದ್ದಾರೆ. ಮದ್ದಳೆಯ ಮಾಯಾಲೋಕ, (ಹಿರಿಯಡ್ಕ ಗೋಪಾಲರಾಯರ ಜೀವನ ಚರಿತ್ರೆ), ಎಂಬ ಕೃತಿಯನ್ನು ಸಂಪಾದಿಸಿದ್ದಲ್ಲದೇ, ವಿಲೋಕ ಎಂಬ ವಿಮರ್ಶಾ ಕೃತಿಯನ್ನೂ, ತಿಳಿನೋಟ ಮತ್ತು ದೀವಟಿಗೆ ಮತ್ತು ಯಕ್ಷಗಾನ ಹಿಮ್ಮೇಳ ಒಂದು ಸಮಗ್ರ ಅಧ್ಯಯನ ಎಂಬ ಸಂಶೋಧನಾತ್ಮಕ ಲೇಖನಗಳ ಸಂಪುಟವನ್ನು ಹೊರತಂದಿರುತ್ತಾರೆ. ಜಾನಪದ ಮತ್ತು ಯಕ್ಷಗಾನ ಅಕಾಡೆಮಿ ಪ್ರಶಸ್ತಿ ಪುರಸ್ಕೃತರಾದ ಇವರಿಗೆ ಕುಬೆವೂರು ಪುಟ್ಟಣ್ಣ ಪ್ರಶಸ್ತಿಯೂ ಸಂದಿದೆ. |
| | ನಾಗರಾಜ ಜವಳಿ | ಬಿ.ಎ. | 1970 | ಕೆನರಾ ಕಾಲೇಜಿನ ಕನ್ನಡ ಉಪನ್ಯಾಸಕರಾಗಿ ಮುಂದೆ ಅದೇ ಕಾಲೇಜಿನ ಪ್ರಾಂಶುಪಾಲರೂ ಆಗಿ ನಿವೃತ್ತಿ ಹೊಂದಿ ನಾಲ್ಕು ವರ್ಷಗಳ ಹಿಂದಷ್ಟೇ ನಿಧನರಾದರು. ಕಾಲೇಜಿನಲ್ಲಿ ಸಾಹಿತ್ಯ ಚಟುವಟಿಕೆಗಳನ್ನು ನಿರ್ವಹಿಸುತ್ತಾ ಕಾಲೇಜಿನ ಹೊರಗೂ ವಿವಿಧ ಸಂಘಟನೆಗಳ ಸಾಹಿತ್ಯ ಚಟುವಟಿಕೆಗಳಿಗೆ ಮಾರ್ಗದರ್ಶನ ಮತ್ತು ಪ್ರೋತ್ಸಾಹ ನೀಡುತ್ತಾ ಬಂದವರು. ದಾಸಜನ ಎಂಬ ಸಾಹಿತ್ಯ ಒಕ್ಕೂಟದ ಅಸ್ತಿತ್ವಕ್ಕೆ ಕಾರಣರಾಗಿ ಈ ಒಕ್ಕೂಟದ ಮೂಲಕ ವಿವಿಧ ಸಾಹಿತ್ಯಚಟುವಟಿಕೆಗಳನ್ನು ಮಂಗಳೂರು ನಗರದಲ್ಲಿ ಯಶಸ್ವಿಯಾಗಿ ನಿರ್ವಹಿಸಿದ್ದರು. ಇವರ ಅನೇಕ ಪ್ರಕಟಿತ ಸಾಹಿತ್ಯ ಬರಹಗಳೂ ಅಲ್ಲಲ್ಲಿ ಚದುರಿದಂತೆ ವಿವಿಧ ಕೃತಿಗಳಲ್ಲಿ ವ್ಯಾಪಿಸಿಕೊಂಡಿದೆ. ಎರಡು ಕವನ ಸಂಕಲನಗಳು, ರಚಿಸಿರುವ ಇವರು ಪ್ರಕಟನಾಪೂರ್ವದಲ್ಲೇ ನಿಧನ ಹೊಂದಿದರು. |
| | ಎಂ. ಮನೋಹರ ಪ್ರಸಾದ್ | ಪಿ.ಯು.ಸಿ. | 1975-76 | ಉದಯವಾಣಿ ದಿನಪತ್ರಿಕೆಯ ಮಂಗಳೂರು ವಿಭಾಗದ ಪ್ರಧಾನ ವರದಿಗಾರರಾದ ಇವರು, ಇಲ್ಲಿನ ವಿದ್ಯಾರ್ಥಿ ಜೀವನದ ಅನುಭವವೇ ತನ್ನ ವೃತ್ತಿ ಬದುಕಿನ ಯಶಸ್ಸಿಗೆ ಕಾರಣ ಎಂಬುದನ್ನು ಅನೇಕ |

| | | | | |
|---|---|---|---|---|
| | | | | ಸಂದರ್ಭಗಳಲ್ಲಿ ಹೇಳಿಕೊಂಡಿರುತ್ತಾರೆ. 'ಹಿಮಾನಿ' ಎಂಬ ಸಣ್ಣಕಥಾ ಸಂಕಲನವೊಂದನ್ನು ಕಾಲೇಜಿನ ವಿದ್ಯಾರ್ಥಿಯಾಗಿರುವಾಗಲೇ ಸಂಪಾದಿಸಿ, ಪ್ರಕಟಿಸಿರುತ್ತಾರೆ. ತುಳುಭಾಷೆಯಲ್ಲೂ ಸಾಹಿತ್ಯ ಕೃತಿಗಳನ್ನು ರಚಿಸಿರುವ (ನಾಟಕ) ಇವರಿಗೆ ಪಣಿಯಾಡಿ ಪ್ರಶಸ್ತಿಯು ಲಭಿಸಿರುತ್ತದೆ. ಮಂಗಳೂರಿನ ಉದಯವಾಣಿ ಓದುಗ ವರ್ಗವು ಇವರ ಅಂಕಣ ಬರಹಗಳ ಅಭಿಮಾನಿಗಳಾಗಿದ್ದು, ವರ್ಷದ ಹಿಂದಷ್ಟೇ 'ಮನೋಭಿನಂದನ' ಎಂಬ ಅಭಿನಂದನ ಗ್ರಂಥವನ್ನು ಪ್ರಕಟಿಸಿ, ಸಾರ್ವಜನಿಕವಾಗಿ ಸಮ್ಮಾನಿಸಿರುತ್ತಾರೆ. ಮಾಧ್ಯಮ ಅಕಾಡೆಮಿಯು ಜೀವನ ಸಾಧನೆ ಪ್ರಶಸ್ತಿಯನ್ನು ನೀಡಿ ಗೌರವಿಸಿರುವುದು ಅವರ ಅಂಕಣಬರಹದ ನಿರೂಪಣಾ ಶೈಲಿಯ ಶ್ರೇಷ್ಠತೆಗೊಂದು ಸಾಕ್ಷಿಯಾಗಿದೆ. |
| | ಮುನಿರಾಜ ರೆಂಜಾಳ | ಬಿ.ಎ. | 1983 | ಮೂಡುಬಿದಿರೆಯ ಖಾಸಗಿ ಹೈಸ್ಕೂಲೊಂದರಲ್ಲಿ ಅಧ್ಯಾಪಕರಾಗಿ ಸೇವೆಯಲ್ಲಿರುವ ಇವರು, ಕೆ.ಬಿ. ಜಿನರಾಜ ಹೆಗ್ಡೆಯವರು ಮತ್ತು ಮಾರ್ನಾಡು ವರ್ಧಮಾನ ಹೆಗ್ಗಡೆಯವರ ಜೀವನ ಚರಿತ್ರೆಯನ್ನು ಸಂಪಾದಿಸಿ, ಪ್ರಕಟಿಸಿರುತ್ತಾರೆ. ಅರಿವೇ ಗುರು ಮತ್ತು ಮುನಿ ಪರಂಪರೆ ಮತ್ತು ಚಾತುರ್ಮಾಸ್ಯ ಎಂಬೆರಡು ಧಾರ್ಮಿಕ ಗ್ರಂಥಗಳನ್ನು ಸಂಪಾದಿಸಿ, ಪ್ರಕಟಿಸಿರುತ್ತಾರೆ. ಸಾಗರತೀರದ ಸ್ವರ್ಗ-ಕೇರಳ ಎನ್ನುವುದು ಇವರ ಪ್ರವಾಸ ಕೃತಿಯಾಗಿರುತ್ತದೆ. |
| | ಯು.ಬಿ. ರಾಜಲಕ್ಷ್ಮೀ | ಪಿ.ಯು.ಸಿ. | 1976-77 | ಪ್ರಸ್ತುತ 'ತರಂಗ' ವಾರಪತ್ರಿಕೆಯ ಕಾರ್ಯನಿರ್ವಾಹಕ ಸಂಪಾದಕಿಯಾಗಿ ಕರ್ತವ್ಯ ನಿರ್ವಹಿಸುತ್ತಿದ್ದಾರೆ. ಕೊರಡ್ಕಲ್ ಶ್ರೀನಿವಾಸ ರಾವ್ ಇವರ ಜೀವನ ಚರಿತ್ರೆಯನ್ನು ಸಂಪಾದಿಸಿದ್ದು, ಉಡುಪಿ ಅಡುಗೆ ಎಂಬ ಉಡುಪಿಯ ವಿಶಿಷ್ಟ ಖಾದ್ಯಗಳ ಕುರಿತು ಕೃತಿಯೊಂದನ್ನು ಹೊರತಂದಿರುತ್ತಾರೆ. ಶಂಖನಾದ ಎನ್ನುವುದು ಇವರ ಇನ್ನೊಂದು ಧಾರ್ಮಿಕ ಕೃತಿ. ಉಡುಪಿ ಅಡುಗೆ ಇಂಗ್ಲೀಷ್‌ಗೆ ಅನುವಾದಗೊಂಡು ಬ್ರೈಲ್ ಲಿಪಿಗೂ ರೂಪಾಂತರಗೊಂಡಿದೆ ಎಂಬುದು ಈ ಕೃತಿಯ ಹೆಗ್ಗಳಿಕೆಯಾಗಿದೆ. |
| | ಶ್ರೀನಿವಾಸ ಕಾರ್ಕಳ | ಬಿ.ಎಸ್ಸಿ. | 1982 | ಮಂಗಳೂರು ರಸಗೊಬ್ಬರ ಕಾರ್ಖಾನೆಯಲ್ಲಿ ಉದ್ಯೋಗಿಯಾಗಿದ್ದ ಇವರು, ಕಾಲೇಜಿನ ವಿದ್ಯಾರ್ಥಿಯಾಗಿರುವಾಗಲೇ ಸಾಹಿತ್ಯಾಭಿರುಚಿಯನ್ನು ರೂಢಿಸಿಕೊಂಡವರು. ತನ್ನ ಪದವಿ ಶಿಕ್ಷಣದ ಅನಂತರ ಉಡುಪಿಯ ಶಿಕ್ಷಣ ಕಾಲೇಜಿನಲ್ಲಿ ಶಿಕ್ಷಕರ ತರಬೇತಿ ಪದವಿಯನ್ನು ಪಡೆದರು. ನೀಹಾರಿಕ ಎಂಬ ಕವನ ಸಂಕಲನವನ್ನಲ್ಲದೆ ಮಾಧ್ಯಮ ಶಿಕ್ಷಣ ಬೋಧನೆ, ಜಾಗತಿಕ ಮಧುಮೇಹ ಸ್ಫೋಟ, ಆಹಾರದ ಹಕ್ಕು, ಪ್ರಾಥಮಿಕ ಶಿಕ್ಷಣದ ಹಕ್ಕು, ವಸತಿ ಹಕ್ಕು ಎಂಬ ಆರು ಆಂಗ್ಲಭಾಷೆಯಿಂದ ಅನುವಾದಿತ ಕೃತಿಗಳನ್ನು ಹೊರತಂದಿರುತ್ತಾರೆ. ಇವರ ನೀಹಾರಿಕ ಕವನ ಸಂಕಲನಕ್ಕೆ ಡಿ.ಎಸ್. ಕರ್ಕಿ ಪ್ರಶಸ್ತಿ ಲಭಿಸಿರುತ್ತದೆ. |

| | | | |
|---|---|---|---|
| ನಿತ್ಯಾನಂದ ಪಡ್ರೆ | ಬಿ.ಕಾಂ. | 1978 | ಪಿ.ಯು.ಸಿ. ಶಿಕ್ಷಣವನ್ನು ಭುವನೇಂದ್ರ ಕಾಲೇಜಿನಲ್ಲಿ ಮುಗಿಸಿ, ಪದವಿ ಶಿಕ್ಷಣಕ್ಕಾಗಿ ಮಂಗಳೂರಿಗೆ ತೆರಳಿದ ಇವರು ತಮ್ಮ ಪದವಿ ಶಿಕ್ಷಣದ ನಂತರ ಉದಯವಾಣಿ ಉಪಸಂಪಾದಕರಾಗಿ ಸೇರ್ಪಡೆಗೊಂಡು ಇತ್ತೀಚೆಗಷ್ಟೇ ನಿವೃತ್ತಿಗೊಂಡರು. ವರದಿಯ ಪರಿಷ್ಕರಣೆ ಮತ್ತು ನಿರೂಪಣೆಯ ಕುರಿತಂತೆ ಉದಯವಾಣಿ ಶೈಲಿಯಲ್ಲಿ ತರಬೇತಿಗೊಂಡು ಪತ್ರಿಕೆಗೂ ಮತ್ತು ತನ್ನ ಬರವಣಿಗೆಗೂ ಶಕ್ತಿ ತುಂಬಿದರು. |

**ಡಾರ್ಕರ್ಸ್ ಕಾಲೇಜಿನ ಕನ್ನಡ ಸಾಹಿತ್ಯ ಚಟುವಟಿಕೆಗಳಿಂದ ಪ್ರೇರಿತರಾಗಿ, ಸಾಹಿತ್ಯ ಚಟುವಟಿಕೆಗಳಲ್ಲಿ ತೊಡಗಿಸಿಕೊಂಡ ್ಯಾರ್ಥಿಗಳ ಮಾಹಿತಿ : ಅನುಬಂಧ ಸಂಖ್ಯೆ: 9**

| ಹೆಸರು | ಪದವಿ | ಪಡೆದ ವರ್ಷ | ಸಾಹಿತ್ಯಚಟುವಟಿಕೆಗಳಲ್ಲಿ ತೊಡಗಿಕೊಂಡ ಬಗೆ |
|---|---|---|---|
| 2 | 3 | 4 | 5 |
| ಜಿ.ಕೆ. ಐತಾಳ | ಬಿ.ಎಸ್ಸಿ. | 1971 | ಕಡಲತಡಿಯ ಕಥೆಗಳು ಎಂಬ ಸಣ್ಣ ಕಥಾ ಸಂಕಲನಗಳನ್ನು, ಸಮರ್ಪಣೆ, ಕುಜ ಎಂಬೆರೆಡು ಕಾದಂಬರಿಗಳನ್ನು ರಚಿಸಿರುವ ಇವರು ಉಡುಪಿ ಜಿಲ್ಲೆಯ ಮೊದಲ ಸಾಲಿನಲ್ಲಿ ಗುರುತಿಸಿಕೊಂಡ ಸಾಹಿತಿಗಳೆನಿಸಿದ್ದಾರೆ.<br>ಅ.ನ.ಕೃ. ಕಾದಂಬರಿ ಪ್ರಶಸ್ತಿ; ಅಮೇರಿಕಾದ ಸತ್ಕಾರ್ಯ ಅಂತರರಾಷ್ಟ್ರೀಯ ಪ್ರಶಸ್ತಿ, ಕನ್ನಡ ರಾಜ್ಯೋತ್ಸವ ಪ್ರಶಸ್ತಿ ಪುರಸ್ಕೃತರು. |
| ಮಿತ್ರಾ ವೆಂಕಟ್ರಾಜ | ಬಿ.ಎಸ್ಸಿ. | 1966 | ನಾಗಮ್ಮನ ಮನೆಯ ಸಣ್ಣ ಗೇಟು, ಪಾಚಿಕಟ್ಟಿದ ಪಾಗಾರ, ಕೊಂಡಿ ಕಳಚಿದಾಗ, ಕಥೆ ಹೇಳೆ ಪಾರಕ್ಕ, ಒಂದು ಒಸಗೆ ಒಯ್ಯುವುದಿತ್ತು- ಈ ಕಥೆಗೆ ರಾಷ್ಟ್ರೀಯ ಪ್ರಶಸ್ತಿ, ಸಾವಿತ್ರಮ್ಮ ದತ್ತಿನಿಧಿ ಪ್ರಶಸ್ತಿ |
| ರಮೇಶ ಬೆಳಗೋಡು | ಬಿ.ಕಾಂ. | 1977 | ಜರಾಸಂಧ (ಕವನ ಸಂಕಲನ) 'ಆಕೃತಿ ಮತ್ತು ಆಶಯ', ಅಂಬಿಗನ ಹಂಗಿಲ್ಲ, (ಕವನ ಸಂಕಲನ) ಕಡಂಗೋಡ್ಲು ಕಾವ್ಯ ಪ್ರಶಸ್ತಿ |
| ಡಾ. ಎನ್. ಭಾಸ್ಕರ ಆಚಾರ್ಯ | ಪಿ.ಯು.ಸಿ. | 1966 | ಜಿರಳೆಗಳ ದ್ವಂದ್ವ ವ್ಯವಸ್ಥೆ, ಅಭ್ಯಾಸ ಪ್ರಯೋಗ ಮತ್ತು ಪರಿಣಾಮ ಎಂಬ ಕಾದಂಬರಿ – ಗೊರೂರು ಪ್ರಶಸ್ತಿ |
| ಡಾ. ಗಾಯತ್ರಿ ನಾವಡ | ಬಿ.ಎ. | 1974 | ಮೂಕಜ್ಜಿ ಬದುಕು-ಸಾಹಿತ್ಯ, ಚಿತ್ತಾರ ಬರೆದ ಅದುಕು, ಕರಾವಳಿ ಜಾನಪದ ಸಾಹಿತ್ಯದಲ್ಲಿ ಸ್ತ್ರೀವಾದಿ ನೆಲೆಗಳು. – ಕರ್ನಾಟಕ ಜಾನಪದ ಮತ್ತು ಯಕ್ಷಗಾನ ಅಕಾಡೆಮಿ ಪ್ರಶಸ್ತಿ, ಗುಂಡ್ಮಿ ಜಾನಪದ ಪ್ರಶಸ್ತಿ, ಆರ್ಯಭಟ ಪ್ರಶಸ್ತಿ, ದಕ್ಷಿಣ ಕನ್ನಡ ಜಿಲ್ಲಾ ರಾಜ್ಯೋತ್ಸವ ಪ್ರಶಸ್ತಿ. |
| ಶ್ರೀಮತಿ ವೈದೇಹಿ | ಬಿ.ಕಾಂ | 1967 | ಮರಗಿಡಬಳ್ಳಿ, ಅಂತರಂಗದ ಪುಟಗಳು, ಗೋಲಿ, ಸಮಾಜ ಶಾಸ್ತ್ರೀಯ ಟಿಪ್ಪಣಿಗಳು, ಬಿಂದು ಬಿಂದಿಗೆ, ಪಾರಿಜಾತ (ಕವನ ಸಂಕಲನ)- ಧಾಂಧೂಂ ಸುಂಟರಗಾಳಿ, ಮೂಕನ ಮಕ್ಕಳು, ಗೊಂಬೆ, ಮ್ಯಾಕ್ಬೆತ್, ಸೂರ್ಯಬಂದ, ಡಾಕಾ ಡಂಗುರ-ನಾಟಕಗಳು, ಗುಲಾಬಿ ಟಾಕೀಸು-ಕಾದಂಬರಿ (ಚಲನಚಿತ್ರವಾಗಿ ಯಶಸ್ವಿಯಾಗಿದೆ) |
| ವಸಂತ ಬನ್ನಾಡಿ | ಬಿ.ಕಾಂ. | 1976 | ಮೀಸಿನ ಹೊಳಪನ್ನು ನೀರಿಗೆ ಬಿಟ್ಟು. ನಿಜದ ನೆಲೆ, ಕಡಲ ಧ್ಯಾನ-ಕವನಸಂಕಲನಗಳು, ಜನಶತ್ರು, ಚೆರ್‍ರಿತೋಟ, ಎಲ್ಲರೂ ನನ್ನ ಮಕ್ಕಳು- ಅನುವಾದಿತ ನಾಟಕಗಳು |

| | | | |
|---|---|---|---|
| ಮಾಧುರಿ ಆಚಾರ್ಯ | ಬಿ.ಎ. | 1965 | ಮಯೂರ, ತರಂಗ, ಸುಧಾಗಳಲ್ಲಿ ಸಣ್ಣಕಥೆ ಪ್ರಕಟವಾಗುತ್ತಾ ಬಂದಿದೆ. 'Time to awake up' -40 ಕ್ಕೂ ಹೆಚ್ಚು ಬಾರಿ ಪ್ರಯೋಗಗಳನ್ನು ಕಂಡಿದೆ. |
| ಶಶಿಧರ ಹಾಲಾಡಿ | ಬಿ.ಎ. | 1980 | ಹಿತ್ತಲಿನಿಂದ ಹಿಮಾಲಯಕ್ಕೆ – ಕುಂದಪ್ರಭ ಮಾಸಪತ್ರಿಕೆಗೆ ಅಂಕಣಕಾರರಾಗಿ (ನಿರಂತರ 10 ವರ್ಷ) ತೊಡಗಿಕೊಂಡಿದ್ದರು.<br>ನಾವಿಕ–ದಿನಪತ್ರಿಕೆಗೆ |
| ಸದಾನಂದ ತಲ್ಲೂರು | ಬಿ.ಕಾಂ. | 1976 | ನವಭಾರತ, ಸುಧಾ, ತರಂಗ ಪತ್ರಿಕೆಗಳಲ್ಲಿ ಸಣ್ಣ ಕಥೆ, ಕವನಗಳ ಪ್ರಕಟಣೆ, ಛಾಯಾಚಿತ್ರ ಕಾರ್ಯಾಗಾರವನ್ನು ನಿರ್ವಹಿಸಿದ್ದಲ್ಲದೆ ಛಾಯಾಚಿತ್ರದ ಕುರಿತು ಸಂಜೆಯ ಯುವವಾಣಿಯಲ್ಲಿ ಮಂಗಳೂರು ಆಕಾಶವಾಣಿಯಲ್ಲಿ ಕಾರ್ಯಕ್ರಮ. |
| ಕೋ. ಶಿವಾನಂದ ಕಾರಂತ | ಬಿ.ಎ. | 1968 | 25 ವರ್ಷದಿಂದ ಕುಂದಪ್ರಭಕ್ಕೆ ಅಂಕಣ. ಗೋವಾ ಪತ್ರಿಕೆ (ಶ್ರೀನಿವಾಸ ಪೈ–ಅಂಕಣಕಾರರು)ಸಂಜೆಕತ್ತಲಲ್ಲಿ ಬಕುಳ ವರ್ಷ, ಅರಿವಿನ ಆನಂದ, ನಾನು ನಲ್ಲ, ಅಪ್ರಮೇಯ ಆ ನಿಮಿಷ |
| ಉಮೇಶ ಮಧ್ಯಸ್ಥ | ಬಿ.ಎ. | 1973 | ಕಾಲೇಜು ವಿದ್ಯಾರ್ಥಿಯಾಗಿದ್ದಾಗ ವಾರ್ಷಿಕ ಸಂಚಿಕೆಯಲ್ಲಿ ಕಥೆ ಬರೆಯುತ್ತಿದ್ದರು. ಮುಂದೆ ದಿನಪತ್ರಿಕೆಗಳಲ್ಲಿ ತಮ್ಮ ಬರವಣಿಗೆಯ ಹವ್ಯಾಸವನ್ನು ಮುಂದುವರಿಸಿದರು. |
| ಉಮೇಶ | ಬಿ.ಎ. | 1971 | ಹನಿಹನಿ ತುಡಿತ–ಹನಿಗವನ, ಭಾವಯಾನ–ಕವನ ಸಂಕಲನ, ಒಡಲ ತುಡಿತಗಳು–ಸಂಪಾದನ ಕೃತಿ, ಸುಧಾ, ತರಂಗ, ಆಕಾಶವಾಣಿ, ಯುವವಾಣಿಯಲ್ಲಿ ವಿಮರ್ಶಾ ಚಿಂತನೆ. |
| ಯಶೋದಾ ಹಳಗೇರಿ | | 1980 | ನಿಟ್ಟೆ ಪ್ರಥಮದರ್ಜೆ ಕಾಲೇಜಿನಲ್ಲಿ ಕನ್ನಡ ವಿಭಾಗದ ಮುಖ್ಯಸ್ಥರಾಗಿ ಸೇವೆ ಸಲ್ಲಿಸುತ್ತಿದ್ದಾರೆ. |
| ಡಾ. ಕೃಷ್ಣರಾಜ ಕರಬ | ಬಿ.ಎ. | 1990 | ಶಿಶುನಾಳ ಷರೀಫರ ಕುರಿತು ಉನ್ನತ ವ್ಯಾಸಂಗ ನಡೆಸಿ, ಡಾಕ್ಟರೇಟ್ ಪದವಿ. ಬ್ಯಾರೀಸ್ ಪ್ರ.ದ. ಕಾಲೇಜು, ಕುಂದಾಪುರ ಇಲ್ಲಿ ಕನ್ನಡ ಉಪನ್ಯಾಸಕರಾಗಿ ಕರ್ತವ್ಯ ನಿರ್ವಹಿಸುತ್ತಿದ್ದಾರೆ. |
| ಡಾ. ಶ್ರೀನಿವಾಸ ಗಿಳಿಯಾರ್. | ಬಿ.ಎ. | 1993 | ಬೆಂಗಳೂರಿನ ಸಚಿವಾಲಯದ ಸಹಕಾರಿ ಕಛೇರಿಯಲ್ಲಿ ಪೂರ್ಣಕಾಲಿಕ ಉದ್ಯೋಗಿ. ಕನ್ನಡದ ನವೋದಯ ಕಾದಂಬರಿಗಳಲ್ಲಿ ಸಂಘರ್ಷದ ಸ್ವರೂಪ ಅವರ ಸಂಶೋಧನಾ ಪ್ರಬಂಧವಾಗಿರುತ್ತದೆ.<br>'ಜಾಗತೀಕರಣದ ವಿರೋಧಿ ಎಂಬ ಮಿಥ್ಯೆ' ಕರ್ನಾಟಕ ಸಾಹಿತ್ಯ ಅಕಾಡೆಮಿ ವತಿಯಿಂದ ಪ್ರಕಟ, 'ಸೃಜನಶೀಲ ಅಭಿವ್ಯಕ್ತಿಯಲ್ಲಿ ಅಸ್ಪಷ್ಟತೆಯ ನಿರ್ವಚನ' ಎಂಬ ಲೇಖನವು ಕೋಟಕಾನಹಳ್ಳಿ ರಾಮಯ್ಯ ಅವರು ಸಂಪಾದಿಸಿದ ತಲಪರಿಗೆ ಎಂಬ ಕೃತಿಯಲ್ಲಿ ಪ್ರಕಟವಾಗಿದೆ. ಈ ಕೃತಿ ಅಂಬೇಡ್ಕರ್ ಅಭಿವೃದ್ಧಿ ನಿಗಮದಿಂದ ಪ್ರಕಟಗೊಂಡಿದೆ. |
| ಫಕೀರ್ ಮಹಮ್ಮದ್ ಕಟ್ಪಾಡಿ – ಎಸ್.ಬಿ.ಐ. ನಲ್ಲಿ ಉದ್ಯೋಗಿ | ಬಿ.ಎ. | 1968 | ಗೋರಿ ಕಟ್ಟಿಕೊಂಡವರು, ನೋಂಬು, ಸರಕುಗಳು (ಕಾದಂಬರಿ)<br>ಕಚ್ಚಾದ –ಮಲೆಯಾಳ, ಮರಾಠಿಗೆ ಅನುವಾದ.<br>'ಕಥಾ' ರಾಷ್ಟ್ರೀಯ ಕಥಾ ಪ್ರಶಸ್ತಿ,<br>ಗಜ್ಜಾಲ– ಕಥಾ ಸಂಕಲನ–ರಾಜ್ಯ ಸಾಹಿತ್ಯ ಅಕಾಡೆಮಿ ಪ್ರಶಸ್ತಿ ಪುರಸ್ಕೃತರು. |

| | | | |
|---|---|---|---|
| ಸತೀಶ ಆಚಾರ್ಯ | ಬಿ.ಕಾಂ. | 1991 | ಮುಂಬೈ ಮಿಡ್‌ಡೇ ಪತ್ರಿಕೆಗೆ, ದೆಹಲಿಯ ಮೈಲ್ ಟುಡೆ ಪತಿಕೆಗೆ, ಮೈಸೂರು ಮಿತ್ರ ಪತ್ರಿಕೆಗೆ ಕಾಲೇಜು ದಿನಗಳಿಂದಲೇ ತರಂಗ, ಸುಧಾ ವಾರಪತ್ರಿಕೆಗೂ ವ್ಯಂಗ್ಯ ಚಿತ್ರಗಳನ್ನು ಬರೆಯುತ್ತಿದ್ದುದಲ್ಲದೇ–ರಾಜ್ಯದ ವ್ಯಂಗ್ಯ ಚಿತ್ರಕಾರರಲ್ಲಿ ಅತೀ ಮುಖ್ಯರಾಗಿ ಗುರುತಿಸಿಕೊಂಡಿದ್ದಾರೆ. |
| ರಾಘವೇಂದ್ರ ಹೇರ್ಳೆ | ಬಿ.ಎ. | 1992 | ಟಿ.ಎಂ.ಎ.ಪೈ ಕಾಲೇಜ್ ಆಫ್ ಎಜ್ಯುಕೇಶನ್ ನಲ್ಲಿ ಶಿಕ್ಷಕರಾಗಿದ್ದರು. 'ಮೌಲ್ಯ ಶಿಕ್ಷಣ' ಎಂಬ ಕೃತಿಯೊಂದನ್ನು ಹೊರತಂದಿರುತ್ತಾರೆ. |
| ಪ್ರಸನ್ನ ಕುಮಾರ ಐತಾಳ್ – | | 1998 | ಪ್ರಸ್ತುತ ಇವರು ಎಸ್.ಡಿ.ಎಂ. ಕಾಲೇಜು ಉಜಿರೆ ಇಲ್ಲಿ ಸಂಸ್ಕೃತ ಉಪನ್ಯಾಸಕರಾಗಿ ಸೇವೆ ಸಲ್ಲಿಸುತ್ತಿದ್ದಾರೆ. ಶ್ರೀ ಕ್ಷೇತ್ರ ಧ್ವಜಪುರ ಇವರ ಸಂಪಾದಿತ ಕೃತಿ.<br>ಮದ್ಯಪಾನವೋ_. ಮಧ್ಯಪಾನವೋ ಎಂಬ ನಾಟಕವೊಂದನ್ನು ರಚಿಸಿದ್ದಾರೆ. |
| ಯು.ಎಸ್. ಶೆಣೈ | ಬಿ.ಎಸ್ಸಿ. | 1978 | ಕುಂದಪ್ರಭ ಪತ್ರಿಕೆಯ ಸಂಸ್ಥಾಪಕ ಮತ್ತು ವ್ಯವಸ್ಥಾಪಕರೂ ಆಗಿ ಕಳೆದ 19 ವರ್ಷಗಳಿಂದ ಮುನ್ನಡೆಸಿಕೊಂಡು ಬರುತ್ತಿದ್ದಾರೆ. |
| ಚಂದ್ರ ಕೆ. ಹೆಮ್ಮಾಡಿ | ಬಿ.ಕಾಂ. | 2000 | ಪತ್ರಕರ್ತರು |
| ಪಂಜು ಗಂಗೊಳ್ಳಿ | ಬಿ.ಎಸ್ಸಿ. | 1984 | ಮೊದಲು ತರಂಗದಲ್ಲಿ ವೃತ್ತಿಪರ ವ್ಯಂಗ್ಯಚಿತ್ರಕಾರ.<br>ಮುಂದೆ ಮುಂಗಾರು ಪತ್ರಿಕೆಗೆ ಸ್ಥಾನಾಂತರ, ಪ್ರಸ್ತುತ ಮುಂಬೈಯಲ್ಲಿ ಖಾಸಗಿ ಕಂಪೆನಿಯೊಂದರಲ್ಲಿ ಉದ್ಯೋಗಿಯಾಗಿರುತ್ತಾ ವ್ಯಂಗ್ಯಚಿತ್ರದ ಮೂಲಕ ಮುಂಬೈ ಮಹಾನಗರ ಪಾಲಿಕೆ ವ್ಯಾಪ್ತಿಯ ವಿವಿಧ ಪತ್ರಿಕೆಗಳಲ್ಲಿ ಕಾಣಿಸಿಕೊಳ್ಳುತ್ತಿದ್ದಾರೆ. |
| ಮಂಜುನಾಥ ಚಾಂದ್ | ಬಿ.ಕಾಂ. | 1987 | 28 ವರ್ಷಗಳ ಕಾಲ 'ಮುಂಗಾರು' 'ಕನ್ನಡ ಪ್ರಭಗಳಲ್ಲಿ ಉದ್ಯೋಗಿ.<br>ವಿಜಯಕರ್ನಾಟದಲ್ಲಿ ಸುದ್ದಿಸಂಪಾದಕನಾಗಿ ಕಾರ್ಯನಿರ್ವಹಣೆ.<br>ಸಂಯುಕ್ತಕರ್ನಾಟಕದಲ್ಲೂ ಸೇವೆ. ನ್ಯೂಸ್ ಚೆನಲ್, ಉದಯ ಟಿ.ವಿ. ಇದರಲ್ಲೂ ಕಾರ್ಯನಿರ್ವಹಣೆ. ವಿಜಯ ನೆಕ್ಸ್ಟ್‌ನಲ್ಲಿ ಬರಹಗಾರರಾಗಿ ಗುರುತಿಸಿಕೊಂಡಿದ್ದಾರೆ.<br>ಕಥಾಸಂಕಲನ–ಕದ ತೆರೆದ ಆಕಾಶ, ಪ್ರಜಾವಾಣಿ ದೀಪಾವಳಿ ಕಥಾ ಸ್ಪರ್ಧೆಯಲ್ಲಿ ಬಹುಮಾನ ಪಡೆದಿದ್ದಾರೆ. |
| ಶೇಖರ ಅಜೆಕಾರು | ಬಿ.ಕಾಂ. | 1991 | ಬೆಳದಿಂಗಳ ಸಾಹಿತ್ಯ ಸಮ್ಮೇಳನ ಆಯೋಜಕ. ಪತ್ರಕರ್ತರಾಗಿದ್ದು, ಸೂರ್ಯಶಿಖಾರಿ ಎಂಬ ಕವನ ಸಂಕಲನವೊಂದನ್ನು ಪ್ರಕಟಿಸಿರುತ್ತಾರೆ. |
| ಸಂತೋಷ ಸಸಿಹಿತ್ಲು | ಪಿ.ಯು.ಸಿ. | 1994 | ವಿಜಯಕರ್ನಾಟಕ–ಬೆಂಗಳೂರು ಪತ್ರಿಕೆಗೆ ವ್ಯಂಗ್ಯಚಿತ್ರಕಾರರು. ಪೂರ್ಣಕಾಲಿಕ ನೆಲೆಯಲ್ಲಿ ತೊಡಗಿಸಿಕೊಂಡಿರುತ್ತಾರೆ. |
| ಕೇಶವ ಸಸಿಹಿತ್ಲು | ಬಿ.ಎ. | 1989 | ಕರಾವಳಿ ಬಿಲ್ಲವ ಪತ್ರಿಕೆಯ ಮುಖ್ಯ ಸಂಪಾದಕ. ಮುಂಬೈ ಸಂಜೆವಾಣಿ ಪತ್ರಿಕೆಗೆ ವರದಿಗಾರರು. ಟೈಮ್ಸ್ ಆಫ್ ಇಂಡಿಯಾದ ಕನ್ನಡ ಪತ್ರಿಕೆಗೂ ವರದಿಗಾರರಾಗಿದ್ದರು. |
| ರಾಮಕೃಷ್ಣ ಹೇರ್ಳೆ | ಬಿ.ಎಸ್ಸಿ. | 1983 | ಮುಂಗಾರು ಪತ್ರಿಕೆಗೆ ವೈಚಾರಿಕ ಲೇಖನಗಳಿಂದ ಬರೆಯುವುದಕ್ಕೆ ಪ್ರಾರಂಭಿಸಿದ ಇವರು, ಪಟ್ಪಾಂಗ, ಕರಾವಳಿ ಅಲೆ, ಸುಧಾ, ತರಂಗ ಪತ್ರಿಕೆಗಳಲ್ಲಿ ವ್ಯಂಗ್ಯಚಿತ್ರಗಳನ್ನು ಪ್ರಕಟಿಸುವ ಮೂಲಕ ಪ್ರಸಿದ್ಧಿಯಾಗಿದ್ದಾರೆ. |
| ಸುರೇಂದ್ರ ಶೆಣೈ ಯು. | ಬಿ.ಎ. | 1978 | 'ತೌಡ' (ಸ.ಕ) ನುಡಿಬೆಳಕು (ಲೇ.ಸಂ.) ಪಂಚಗಂಗಾವಳಿ (ಕ), ಒಂದಾದ ಹೂಗಳು (ಕಾ), ವೃತ್ತಿ ಮಾರ್ಗದರ್ಶನ (ಲೇ.ಸಂ.) |
| ಅಭಿಲಾಷಾ | ಬಿ.ಎಸ್ಸಿ. | 1987 | ಬ್ರಹ್ಮಾವರ ಎಸ್.ಎಂ. ಎಸ್. ಆಂಗ್ಲ ಮಾಧ್ಯಮಶಾಲೆಯ ಉಪಪ್ರಾಂಶುಪಾಲರಾಗಿ ಕರ್ತವ್ಯ ನಿರ್ವಹಿಸುತ್ತಾ, ಅಲ್ಲಿನ ವಿದ್ಯಾರ್ಥಿಗಳಿಗೆ ಪಠ್ಯೇತರ ಚಟುವಟಿಕೆಯಾಗಿ ಸಂಗೀತ ತರಗತಿಗಳನ್ನು ನಿರ್ವಹಿಸಿಕೊಂಡು ಬರುತ್ತಿದ್ದಾರೆ. |

| | | | |
|---|---|---|---|
| ಸುಜಯೀಂದ್ರ ಹಂದೆ | ಬಿ.ಎ. | 1997 | ಬಿಡಿ ಬರಹ (ವಿಮರ್ಶಾ ಲೇಖನಗಳು)<br>ಯಕ್ಷಗಾನ, ತಾಳಮದ್ದಲೆಯ ಹವ್ಯಾಸಿ ಕಲಾವಿದರಾಗಿರುತ್ತಾರೆ. |
| ರಾಘವೇಂದ್ರ ತುಂಗ | ಬಿ.ಎ. | 1996 | ಮಣಿಪಾಲದ ಡಾ. ಮಾಧವ ಪೈ ಮೆಮೋರಿಯಲ್ ಕಾಲೇಜಿನಲ್ಲಿ ಕನ್ನಡ ಉಪನ್ಯಾಸಕರಾಗಿ ಕರ್ತವ್ಯ ನಿರ್ವಹಿಸುತ್ತಾ ತನ್ನ ಹುಟ್ಟೂರಾದ ಪಡುಕೆರೆಯಲ್ಲಿ (ಕೋಟ) ಪಂಚವರ್ಣ ಯುವಕ ಮಂಡಲ ಎಂಬ ಸಾಹಿತ್ಯ ಸಂಘಟನೆಯನ್ನು ಹುಟ್ಟುಹಾಕಿ ಸಾಹಿತ್ಯ ಚಟುವಟಿಕೆಗಳನ್ನು ನಿರ್ವಹಿಸಿಕೊಂಡು ಬರುತ್ತಿದ್ದಾರೆ. |
| ಸುರೇಂದ್ರ ಶೆಟ್ಟಿ ತೆಕ್ಕಟ್ಟೆ | ಬಿ.ಎ. | 1989 | ಉಡುಪಿ ಜಿಲ್ಲೆಯ ವಿವಿಧ ಸರಕಾರಿ ಪದವಿಪೂರ್ವ ಕಾಲೇಜುಗಳಲ್ಲಿ ಕನ್ನಡ ಉಪನ್ಯಾಸಕರಾಗಿ ಕರ್ತವ್ಯ ನಿರ್ವಹಿಸುತ್ತಾ 'ಪ್ರತಿಜ್ಞಾ ಸಂಘರ್ಷ', 'ಋಷ್ಯಶೃಂಗ' ಎಂಬೆರೆಡು ನಾಟಕಗಳನ್ನು, ಮಾನಿನಿ ಎಂಬ ಕಥಾ ಸಂಕಲನವೊಂದನ್ನು ಪ್ರಕಟಿಸಿರುತ್ತಾರೆ. |
| ಸುರೇಶ ಆನಗಳ್ಳಿ | ಪಿ.ಯು.ಸಿ. | 1978 | ಕಾಲೇಜಿನ ನಾಟಕ ಸಂಘದ ಮೂಲಕ ನಾಟಕ ಕಲಾಪ್ರಕಾರದ ಬಗೆಗೆ ಹೆಚ್ಚಿನ ಅಭಿರುಚಿಯನ್ನು ಹೊಂದಿ, ನೀನಾಸಂ ಮತ್ತು ದೆಹಲಿಯ ಎನ್.ಎಸ್. ಡಿ.ಯಲ್ಲಿ ನಾಟಕದ ಕುರಿತಾಗಿ ವಿಶೇಷ ತರಬೇತಿಯನ್ನು ಪಡೆದರು. ಪ್ರಸ್ತುತ ಉಡುಪಿ ಜಿಲ್ಲೆಯ ಶ್ರೇಷ್ಠ ನಾಟಕ ನಿರ್ದೇಶಕರಲ್ಲಿ ಒಬ್ಬರೆನಿಸಿಕೊಂಡಿದ್ದಾರೆ. |
| ತಾರಾನಾಥ ಹೊಳ್ಳ, ಕಾರ್ಕಡ | ಬಿ.ಎಸ್ಸಿ. | 1973 | ಕೇಂದ್ರ ಸರಕಾರದ ಅಂಕೆ–ಸಂಖ್ಯೆ ಇಲಾಖೆಯಲ್ಲಿ ಕರ್ತವ್ಯ ನಿರ್ವಹಿಸುತ್ತಿರುವ ಇವರು ತನ್ನ ಹುಟ್ಟೂರಾದ ಕಾರ್ಕಡದಲ್ಲಿ 'ಗೆಳೆಯರ ಬಳಗ' ಎಂಬ ಸಾಹಿತ್ಯ ಸಂಘಟನೆಯನ್ನು 1988ರಲ್ಲಿ ಸ್ಥಾಪಿಸಿ, ಆ ಸಂಘಟನೆಯ ಮೂಲಕ ಕನ್ನಡ ಮತ್ತು ಸಾಂಸ್ಕೃತಿಕ ಚಟುವಟಿಕೆಗಳನ್ನು ಯಶಸ್ವಿಯಾಗಿ ನಿರ್ವಹಿಸಿಕೊಂಡು ಬರುತ್ತಿದ್ದಾರೆ. |

**ೀ ಶಾರದಾ ಕಾಲೇಜು ಬಸ್ರೂರು ಇಲ್ಲಿಯ ಕನ್ನಡ ಸಾಹಿತ್ಯಚಟುವಟಿಕೆಗಳಿಂದ ಪ್ರೇರಿತರಾಗಿ, ಸಾಹಿತ್ಯ ಚಟುವಟಿಕೆಗಳಲ್ಲಿ ಡಗಿಸಿಕೊಂಡ ವಿದ್ಯಾರ್ಥಿಗಳ ಮಾಹಿತಿ : ಅನುಬಂಧ ಸಂಖ್ಯೆ : 10**

| ಂ. | ವಿದ್ಯಾರ್ಥಿಯ ಹೆಸರು | ಪಡೆದುಕೊಂಡ ಪದವಿ | ಕಾರ್ಯನಿರ್ವಹಿಸುತ್ತಿರುವ ಸಂಸ್ಥೆ ಮತ್ತು ಚಟುವಟಿಕೆ |
|---|---|---|---|
| | ರೇಖಾ ಬನ್ನಾಡಿ | ಬಿ.ಎ. | ಕನ್ನಡ ವಿಭಾಗದ ಮುಖ್ಯಸ್ಥರು, ಭಂಡಾರ್‌ಕಾರ್ಸ್ ಕಾಲೇಜು, ಕುಂದಾಪುರ. |
| | ಡಾ. ಶ್ರೀಕಾಂತ ಸಿದ್ಧಾಪುರ | ಪಿ.ಯು.ಸಿ. ಮತ್ತು ಪ್ರಥಮ ಪದವಿ ವ್ಯಾಸಂಗ | ವಿಭಾಗ ಮುಖ್ಯಸ್ಥರು, ಪೂರ್ಣಪ್ರಜ್ಞ ಕಾಲೇಜು, ಉಡುಪಿ |
| | ಪ್ರೊ. ರಮೇಶ್ ಆಚಾರ್ | ಬಿ.ಎ. | ಕನ್ನಡ ವಿಭಾಗದ ಮುಖ್ಯಸ್ಥರು, ಸರಕಾರಿ ಪ್ರಥಮದರ್ಜೆ ಕಾಲೇಜು, ಬಾರಕೂರು. |
| | ಪ್ರೊ. ಬಾಲಕೃಷ್ಣ ಶೆಟ್ಟಿ | ಬಿ.ಎ. | ಪ್ರಾಂಶುಪಾಲರು, ಶ್ರೀ ಕಟೀಲು ದುರ್ಗಾಪರಮೇಶ್ವರಿ ದೇವಳ ಕಾಲೇಜು, ಕಟೀಲು |
| | ಡಾ. ಎಚ್. ಜಯಪ್ರಕಾಶ್ ಶೆಟ್ಟಿ | ಬಿ.ಎ. | ಸರಕಾರಿ ಪ್ರಾಥಮದರ್ಜೆ ಕಾಲೇಜು, ಉಡುಪಿ, ತೆಂಕನಿಡಿಯೂರು ಇಲ್ಲಿ ಅಸೋಸಿಯೇಟ್ ಪ್ರೊಫೆಸರ್ ಆಗಿ ಕಾರ್ಯನಿರತರು. |
| | ಡಾ. ಶುಭಾ ಮರವಂತೆ | ಬಿ.ಎ. | ಶಿವಮೊಗ್ಗದ ಸಹ್ಯಾದ್ರಿ ಕಾಲೇಜಿನಲ್ಲಿ ಕನ್ನಡ ಉಪನ್ಯಾಸಕಿಯಾಗಿ ಕರ್ತವ್ಯ ನಿರ್ವಹಿಸುತ್ತಿದ್ದಾರೆ. |
| | ಭಾರತಿ ಮರವಂತೆ | ಬಿ.ಎ. | ಹಾವೇರಿ ಜನಪದ ವಿಶ್ವವಿದ್ಯಾಲಯದಲ್ಲಿ ಕನ್ನಡ ಉಪನ್ಯಾಸಕಿಯಾಗಿ ಕರ್ತವ್ಯನಿರ್ವಹಿಸುತ್ತಿದ್ದಾರೆ. |

| | | |
|---|---|---|
| ಡಾ. ಸಂಪೂರ್ಣಾನಂದ ಬಳ್ಕೂರು | ಬಿ.ಎ. | ಸ್ಯೆಂಟ್ ಆಗ್ನೆಸ್ ಕಾಲೇಜು ಮಂಗಳೂರು ಇಲ್ಲಿ ಕನ್ನಡ ವಿಭಾಗದ ಮುಖ್ಯಸ್ಥರಾಗಿ ಸೇವೆ ಸಲ್ಲಿಸುತ್ತಿರುವುದು. |
| ಪ್ರಭಾಕರ ಮಿತ್ತಂತಾಯ | ಬಿ.ಎ. | ಸಹ ಅಧ್ಯಾಪಕರು ಕೋಟೇಶ್ವರ ಪದವಿಪೂರ್ವ ಕಾಲೇಜು |
| ಡಾ. ಕಿಶೋರ್ ಕುಮಾರ್ ಶೆಟ್ಟಿ | | ಹಕ್ಲಾಡಿ ಪ್ರೌಢಶಾಲೆ, ಮುಖ್ಯೋಪಾಧ್ಯಾಯರು |
| ಕಿರಣ್ ಕುಮಾರ್ ಹೆಗ್ಡೆ, ಗಾವಳಿ | | ಮುಖ್ಯೋಪಾಧ್ಯಾಯರು, ಕಾವಡಿ ಪ್ರೌಢಶಾಲೆ, ಈ ಮೂವರಿಗೂ 2015–16ನೇ ಸಾಲಿನ ಕರ್ನಾಟಕ ಸರಕಾರದಿಂದ ಶ್ರೇಷ್ಠ ಅಧ್ಯಾಪಕ ಪ್ರಶಸ್ತಿ ಲಭಿಸಿರುತ್ತದೆ. |
| ವಾಸುದೇವ ಉಡುಪ | ಬಿ.ಎ. | ಕೊಲ್ಲೂರು ಪದವಿ ಪ್ರೌಢಶಾಲೆ ಕನ್ನಡ ಅಧ್ಯಾಪಕರು. |
| ಪ್ರಭಾಕರ ಶೆಟ್ಟಿ | ಬಿ.ಎ. | ಮುಂಡ್ಕೂರು ಪದವಿಪೂರ್ವ ಕಾಲೇಜಿನಲ್ಲಿ ಕನ್ನಡ ಉಪನ್ಯಾಸಕರು. |
| ಜಯಶೀಲ ಶೆಟ್ಟಿ | ಬಿ.ಎ. | ಸಹಾಯಕ ಅಧ್ಯಾಪಕರು, ಕೋಡಿ ಪ್ರೌಢಶಾಲೆ. |
| ರಾಜೀವ ಶೆಟ್ಟಿ ಎಚ್. | ಬಿ.ಎ. | ಸರಕಾರಿ ಪದವಿ ಪೂರ್ವ ಕಾಲೇಜು ಬಿದ್ಕಲ್‌ಕಟ್ಟೆ. ಇಲ್ಲಿ ಕನ್ನಡ ಅಧ್ಯಾಪಕರು |
| ಕರುಣಾಕರ ಶೆಟ್ಟಿ, ಮೊಗೆಬೆಟ್ಟು | ಬಿ.ಎ. | ಸರಕಾರಿ ಪ.ಪೂ. ಕಾಲೇಜು ಬಿದ್ಕಲ್‌ಕಟ್ಟೆ ಇಲ್ಲಿ ಕನ್ನಡ ಅಧ್ಯಾಪಕರು. |
| ಸವಿತಾ ಭಟ್ | ಬಿ.ಎ. | ಉಪ್ಪಿನಕುದ್ರು ಹೈಸ್ಕೂಲು ಕನ್ನಡ ಅಧ್ಯಾಪಕರು. |
| ಗಣೇಶ್ ಕಿಣಿ | ಬಿ.ಎ. | ಸರಕಾರಿ ಪಪೂ. ಕಾಲೇಜು, ಹೆಬ್ರಿ ಇಲ್ಲಿ ಕನ್ನಡ ಶಿಕ್ಷಕರು. |
| ಡಾ. ಚಂದ್ರಾವತಿ ಶೆಟ್ಟಿ | ಬಿ.ಎ. | ವಿಭಾಗ ಮುಖ್ಯಸ್ಥರು ಶ್ರೀ ಶಾರದಾ ಕಾಲೇಜು. ಬಸ್ರೂರು. |
| ನಿತ್ಯಾನಂದ ಶೆಟ್ಟಿ | ಬಿ.ಎ. | ಮಿಲಾಗ್ರಿಸ್ ಕಾಲೇಜು, ಕಲ್ಯಾಣಪುರ ಇಲ್ಲಿ ಕನ್ನಡ ಉಪನ್ಯಾಸಕರು. |
| ಸುಖಾನಂದ ಶೆಟ್ಟಿ | ಬಿ.ಎ. | ಶ್ರೀ ಶಾರದಾ ಪ.ಪೂ. ಕಾಲೇಜು, ಬಸ್ರೂರು ಇಲ್ಲಿ ಕನ್ನಡ ಉಪನ್ಯಾಸಕರು. |
| ವಾಸುದೇವ ಭಟ್ಟ | ಬಿ.ಎ. | ನಿಟ್ಟೆ ಪ.ಪೂ. ಕಾಲೇಜು ಇಲ್ಲಿ ಕನ್ನಡ ಉಪನ್ಯಾಸಕರು. |
| ಸಂತೋಷ್ | ಬಿ.ಕಾಂ. ಪದವೀಧರರು | 'ಸುದ್ದಿಮನೆ' ಪತ್ರಿಕೆಯಲ್ಲಿ ಸಹಾಯಕ ಸಂಪಾದಕರು. |

ರ್ಣಪ್ರಜ್ಞ ಸಂಧ್ಯಾ ಕಾಲೇಜಿನ ಕನ್ನಡ ಸಾಹಿತ್ಯ ಚಟುವಟಿಕೆಗಳಿಂದ ಪ್ರೇರಿತರಾಗಿ, ಸಾಹಿತ್ಯ ಚಟುವಟಿಕೆಗಳಲ್ಲಿ
ೂಡಗಿಸಿಕೊಂಡ ವಿದ್ಯಾರ್ಥಿಗಳ ಮಾಹಿತಿ : ಅನುಬಂಧ ಸಂಖ್ಯೆ : 11

| ಹೆಸರು | ಪದವಿ | ಪಡೆದ ವರ್ಷ | ಸಾಹಿತ್ಯಚಟುವಟಿಕೆಗಳಲ್ಲಿ ತೊಡಗಿಕೊಂಡ ಬಗೆ |
|---|---|---|---|
| 2 | 3 | 4 | 5 |
| ಜಿ.ಎಸ್. ನಟೇಶ್ | ಬಿ.ಎ. | 1976–79 | 'ಕಣ್ಣೀರ ಬೆಳಕಿನಲ್ಲಿ ' ಭಾಗ–1 ಮತ್ತು 2. ನಾಟಕ ಕೃತಿಗಳು, ಸರ್ವಜ್ಞ ವಚನಾಮೃತ–ವಿಮರ್ಶಾ ಪ್ರಬಂಧ, ದಾಂಪತ್ಯ ಧೀಕ್ಷೆ–ವೈಚಾರಿಕ ಲೇಖನ ಈ ಮುಂತಾದ ಸಾಹಿತ್ಯ ಕೃತಿಗಳಿಂದ ಗುರುತಿಸಿಕೊಂಡವರು. ಶಿವಮೊಗ್ಗದ ಕಸ್ತೂರ್ಬಾ ಪ್ರಿ.ಯೂನಿವರ್ಸಿಟಿ ಕಾಲೇಜಿನಲ್ಲಿ ಹಿಂದೀ ಉಪನ್ಯಾಸಕರಾಗಿ ಕರ್ತವ್ಯ ನಿರ್ವಹಿಸುತ್ತಿದ್ದಾರೆ. |
| ಮುದ್ದು ಮೂಡುಬೆಳ್ಳೆ | ಬಿ.ಎ. | 1976–79 | ಆಕಾಶವಾಣಿಯಲ್ಲಿ ಕಾರ್ಯಕ್ರಮ ನಿರೂಪಕರಾಗಿ ವೃತ್ತಿ ಜೀವನಾನ್ನು ಆಯ್ಕೆ ಮಾಡಿಕೊಂಡು ಇತ್ತೀಚೆಗಷ್ಟೇ ನಿವೃತ್ತರಾದರು. 'ಓದುತ್ತೀರಾ ನನ್ನ ಕಥೆ', 'ಮೆಟ್ಟಿಲುಗಳು', .ಗೂಢ ಮತ್ತು ಇತರ ಕಥೆಗಳು. ಇವರ ಪ್ರಮುಖ ಸಣ್ಣಕಥಾಸಂಕಲನಗಳು. 'ಮುಲ್ಕಿ ಸೀಮೆಯ ಅವಳಿ ವೀರರು–ಕಾಂತಬಾರೆ ಬೂದಬಾರೆ' ಸಂಶೋಧನ ಕೃತಿ. |
| ಜಯರಾಮ ಕಾರಂತ | ಬಿ.ಎ. | 1979–82 | ಪ್ರಸ್ತುತ ಮಣಿಪಾಲ ಮಾಧ್ಯಮ ವಿಭಾಗದಲ್ಲಿ ಸಹ ಸಂಪಾದಕರಾಗಿ ಕರ್ತವ್ಯ ನಿರ್ವಹಿಸುತ್ತಿದ್ದಾರೆ. 'ದಳಗಳು', 'ವಲಸೆ ಬಂದ ಹಕ್ಕಿಗಳು', 'ನೆಲಗುಲಾಬಿಯ ಹುಟ್ಟು', ಇವರ ಪ್ರಮುಖ ಕವನಗಳು. ಮುದ್ದಣನಿಗೆ ನಮನ –ಇವರ ಸಂಪಾದಿತ ಕೃತಿ. |
| ಗಂಗಾಧರ ಕಿದಿಯೂರು | ಬಿ.ಎ. | 1979–82 | ಮಣಿಪಾಲ ಆಸ್ಪತ್ರೆಯ ಬಿಲ್ಲಿಂಗ್ ವಿಭಾಗದಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದು, ಮುಡಿಯೇರಿ ಹೂ ಎಂಬ ನಾಟಕವನ್ನು ರಚಿಸಿರುತ್ತಾರೆ. ತುಳು ಭಾಷೆಯಲ್ಲಿ ನಾಟಕಗಳನ್ನು ರಚಿಸಿರುವ ಇವರಿಗೆ 'ರತ್ನವರ್ಮ ಹೆಗ್ಗಡೆ ಪ್ರಶಸ್ತಿ'ಯೂ ಬಂದಿರುತ್ತದೆ. |
| ದಾಮೋದರ ಐತಾಳ | ಬಿ.ಎ. | 1967–70 | ನಿವೃತ್ತ ಶಿಕ್ಷಣಾಧಿಕಾರಿ ಹಾಗೂ ಪತ್ರಕರ್ತರು. 'ವ್ಯಾಕರಣ ಕೈಗನ್ನಡಿ' ಇವರ ವ್ಯಾಕರಣ ಕೃತಿ. ಅವಿಭಜಿತ ದ.ಕ. ಜಿಲ್ಲೆಯ ಧೀಮಂತ ಪತ್ರಕರ್ತರು ಇವರ ಸಂಪಾದಿತ ಕೃತಿ. ಬಳಕೆದಾರರ ವೇದಿಕೆಯಲ್ಲಿ ಸಕ್ರಿಯವಾಗಿ ತೊಡಗಿಕೊಂಡವರು. |
| ಜಿ.ಪಿ. ಪ್ರಭಾಕರ | ಬಿ.ಎ. | 1991–94 | ಪದವಿ ಶಿಕ್ಷಣವನ್ನು ಸಂಧ್ಯಾಕಾಲೇಜಿನಲ್ಲಿ ಮುಗಿಸಿದ ತದನಂತರ ಶಿಕ್ಷಕರ ತರಬೇತಿಯನ್ನು ಪಡೆದು, ಪೆರ್ಡೂರಿನ ಪ್ರೌಢಶಾಲೆಯಲ್ಲಿ ಸಂಸ್ಕೃತ ಅಧ್ಯಾಪಕರಾಗಿ ದುಡಿಯುತ್ತಿದ್ದಾರೆ. ಉಡುಪಿಯ ರಥಬೀದಿ ಗೆಳೆಯರು ಸಂಘಟನೆಯಲ್ಲಿ ಹಾಗೂ ಕಲಾರಂಗ ಮತ್ತು 'ಸುಹಾಸಂ' ಸಂಘಟನೆಯ ಸಾಹಿತ್ಯ ಚಟುವಟಿಕೆಗಳಲ್ಲಿ ಸಕ್ರಿಯವಾಗಿ ಪಾಲ್ಗೊಳ್ಳುವ ಸಹೃದಯಿಗಳೆನಿಸಿಕೊಂಡಿದ್ದಾರೆ. |
| ಶಾಂಭವಿ | ಬಿ.ಎ. | 1981–84 | ತಮ್ಮ ಪದವಿ ಶಿಕ್ಷಣದ ಅನಂತರ ಉಡುಪಿಯ ಚಿತ್ತರಂಜನ್ ವೃತ್ತ ಇಲ್ಲಿ ಸ್ವತಂತ್ರವಾಗಿ ಪುಸ್ತಕದ ಅಂಗಡಿಯನ್ನು ನಡೆಸಿಕೊಂಡು ಬರುತ್ತಿದ್ದು, ಜಿಲ್ಲೆಯ ಮತ್ತು ಹೊರಜಿಲ್ಲೆಯ ಖ್ಯಾತ ಬರಹಗಾರರ ಪುಸ್ತಕ ಲಭ್ಯವಿರುವ ಏಕೈಕ ಅಂಗಡಿಯಾಗಿರುತ್ತದೆ. |

| | | | |
|---|---|---|---|
| ನಟರಾಜ | ಬಿ.ಎ. | 1986–89 | ಪಟ್ಲ ಪ್ರೌಢಶಾಲೆಯಲ್ಲಿ ಸಹಶಿಕ್ಷಕರಾಗಿ ಉದ್ಯೋಗದಲ್ಲಿದ್ದು, ಭಾವಗೀತೆಗಳನ್ನು ಹಾಡುವ ವಿಶೇಷ ಕಂಠಸಿರಿಯನ್ನು ಹೊಂದಿರುವ ಕಲಾವಿದರಾಗಿದ್ದಾರೆ. |
| ವಿರೂಪಾಕ್ಷ ವಿ. ಜೆಡ್ಡಿಪಾಲ್ | ಬಿ.ಎ. | 1990–92 | ತಿರುಪತಿ ಕೇಂದ್ರೀಯ ವಿದ್ಯಾಲಯದಲ್ಲಿ ಪ್ರಾಧ್ಯಾಪಕರಾಗಿದ್ದಾರೆ. |
| ಶ್ರೀಧರ ಎನ್. ಭಟ್ಟ | ಬಿ.ಎ. | 1989–94 | ಶ್ರೀ ಧರ್ಮಸ್ಥಳ ಮಂಜುನಾಥೇಶ್ವರ ಕಾಲೇಜು, ಉಜಿರೆ ಇಲ್ಲಿ ಸಂಸ್ಕೃತ ಪ್ರಾಧ್ಯಾಪಕರಾಗಿ ಕರ್ತವ್ಯ ನಿರ್ವಹಿಸುತ್ತಿದ್ದಾರೆ. |
| ಉದ್ಯಾವರ ನಾಗೇಶ್ | ಬಿ.ಎ. | 1977–80 | ನಾಟಕ ಕ್ಷೇತ್ರದಲ್ಲಿ ವಿಶೇಷ ಆಸಕ್ತಿಯನ್ನು ಗಳಿಸಿಕೊಂಡಿದ್ದು, ಉಡುಪಿ ಪರಿಸರದ ಅನೇಕ ಪ್ರೌಢ ಮತ್ತು ಪದವಿಪೂರ್ವ ಶಿಕ್ಷಣ ಸಂಸ್ಥೆಗಳ ವಿದ್ಯಾರ್ಥಿಗಳಿಗೆ ನಾಟಕ, ನಿರ್ದೇಶನದಲ್ಲಿ ತೊಡಗಿಕೊಂಡು ವಿದ್ಯಾರ್ಥಿಗಳಲ್ಲಿ ನಾಟಕಾಭಿರುಚಿಯನ್ನು ಒಡಮೂಡಿಸುವುದಕ್ಕೆ ಮುಂದಾದವರು. ಉಡುಪಿಯಲ್ಲಿ ನಡೆಯುವ ರಾಜ್ಯ ಮಟ್ಟದ ನಾಟಕ ಸ್ಪರ್ಧೆಯಲ್ಲಿ ತೀರ್ಪುಗಾರರಾಗಿಯೂ ಕರ್ತವ್ಯ ನಿರ್ವಹಿಸಿದ್ದರು. |
| ಸರ್ವಜ್ಞ ಆಚಾರ್ಯ | ಪಿ.ಯು.ಸಿ. | 1974–75 | ಉಡುಪಿಯ ಧೀಮಂತ ಪತ್ರಕರ್ತ ಬನ್ನಂಜೆ ರಾಮಾಚಾರ್ಯ ಅವರ ಸುಪುತ್ರರಾಗಿದ್ದು, ತಮ್ಮ ತಂದೆಯವರ ಕೃತಿಗಳ ಪ್ರಕಾಶನ ಮತ್ತು ವಿಕ್ರಯದ ವ್ಯವಸ್ಥೆಯ ಉಸ್ತುವಾರಿ ನಿರ್ವಹಿಸಿಕೊಂಡು ಬರುತ್ತಿದ್ದಾರೆ. |
| ವಿನಯಭೂಷಣ ಆಚಾರ್ಯ | ಬಿ.ಎ. (ಪ್ರಥಮ ಪದವಿ ಮಾತ್ರ) | 1980–81 | ಬನ್ನಂಜೆ ಗೋವಿಂದಾಚಾರ್ಯರ ಸುಪುತ್ರರಾದ ಇವರು ತಮ್ಮ ತಂದೆಯವರ ಕೃತಿಗಳ ವ್ಯವಸ್ಥೆಯ ಉಸ್ತುವಾರಿಯ ಜವಾಬ್ದಾರಿಯನ್ನು ಹೊಂದಿರುತ್ತಾರೆ. |
| ಸತೀಶ್ ಮಲ್ಯ | ಬಿ.ಎ. | 1981–83 | ಉದಯವಾಣಿ, ತರಂಗ, ರೂಪತಾರಾ, ತುಂತುರು, ತುಷಾರ, ಎಂಬ ಮಾಧ್ಯಮ ಕ್ಷೇತ್ರದ ಮುದ್ರಣ ವಿಭಾಗದಲ್ಲಿ ಕರ್ತವ್ಯನಿರ್ವಹಿಸುತ್ತಿದ್ದರು. |
| ಸುರೇಶ್ ಮಲ್ಯ | ಬಿ.ಎ. | 1981–83 | ಉದಯವಾಣಿ ಬಳಗದ ಮೇಲ್ಕಂಡ ಕಾರ್ಯಚಟುವಟಿಕೆಯನ್ನೇ ನಿರ್ವಹಿಸಿಕೊಂಡು ಬರುತ್ತಿದ್ದಾರೆ. |
| ಮೊಹಮ್ಮದ್ ಆರೀಫ್ | ಬಿ.ಎ. | 1992–95 | ಕನ್ನಡ ಜನ ಅಂತರಂಗ ಪತ್ರಿಕೆಯ ಮಂಗಳೂರು ವಿಭಾಗದಲ್ಲಿ ವರದಿಗಾರರಾಗಿ ಕರ್ತವ್ಯನಿರ್ವಹಿಸುತ್ತಿದ್ದಾರೆ. |
| ಸುರೇಂದ್ರನಾಥ ಕೆ. | ಬಿ.ಎ. | 1996–99 | ವಿಜಯ ಕರ್ನಾಟಕ ಪತ್ರಿಕೆಯ ಮಂಗಳೂರು ವಿಭಾಗದ ಸಹ ಸಂಪಾದಕರಾಗಿ ದುಡಿಯುತ್ತಿದ್ದಾರೆ. |

ಜೆ ಕಾಲೇಜಿನ ಸೀಮಿತ ಅವಧಿಯ ಶೈಕ್ಷಣಿಕ ಚಟುವಟಿಕೆಗಳ ನಡುವೆ ಭಾಷಾ ವಿಭಾಗವು ಹಮ್ಮಿಕೊಳ್ಳುವ ಸಾಹಿತ್ಯ ಚಟುವಟಿಕೆಗಳಲ್ಲಿ ಕ್ತಿಯಿಂದ ಭಾಗವಹಿಸುವ ವಿದ್ಯಾರ್ಥಿಗಳ ಸಂಖ್ಯೆ ಗಣನೀಯವಾಗಿದ್ದು, ಈ ಚಟುವಟಿಕೆಗಳಿಂದ ಪ್ರೇರಿತರಾದ ಮೇಲ್ಕಂಡ ಪ್ರಾಕ್ತನ ್ಯಾರ್ಥಿಗಳು ವಿವಿಧ ಸಾಹಿತ್ಯಕ ಚಟುವಟಿಕೆಗಳಲ್ಲಿ ತೊಡಗಿಕೊಂಡಿದ್ದಾರೆಂಬುದು ಈ ಅಧ್ಯಯನದಲ್ಲಿ ಗುರುತಿಸಲಾಗಿದೆ.

~*~

